ಶ್ರೀ ಜಯಚಾಮರಾಜೇಂದ್ರ ವೇದರತ್ನಮಾಲಾ



# RIG-VEDA SAMHITA

# ಋಗ್ವೇದಸಂಹಿತಾ

ಭಾಗ ೧೧

ದ್ವಿತೀಯಾಷ್ಟಕದಲ್ಲಿ ನೇ ಅಧ್ಯಾಯವು

ಅನುವಾದಕ :

ಆಸ್ಥಾನ ಮಹಾವಿದ್ವಾನ್,

ಹೆಚ್. ಪಿ. ವೆಂಕಟರಾವ್.

ಶ್ರೀ ವಿನಾಯಕ ಪ್ರೆಸ್
ಮೈಸೂರು.



# ಋಗ್ವೇದಸಂಹಿತಾ

ಭಾಗ—೧೧

ದ್ವಿತೀಯಾಷ್ಟಕದಲ್ಲಿ ಎರಡನೇ ಅಧ್ಯಾಯ

ಪ್ರಥಮ ಮಂಡಲದ ಸೂಕ್ತಗಳು ೧೩೭-೧೫೭

ಶ್ರೀ ಜಯಚಾಮರಾಜೇಂದ್ರ ವೇದರತ್ನಮಾಲಾ

ಸಂಖ್ಯೆ—೧೧



# RIG-VEDA

ಸಾಯಣಭಾಷ್ಯಸಮೇತಾ

# ಋಗ್ವೇದಸಂಹಿತಾ

(ಕರ್ಣಾಟಕ ಭಾಷಾರ್ಥಾನುವಾದವಿವರಣೆಗಳೊಡನೆ)

ಭಾಗ—೧೧

ಎರಡನೆಯ ಅಷ್ಟಕದಲ್ಲಿ ಎರಡನೆಯ ಅಧ್ಯಾಯವು.

ಪ್ರಥಮ ಮಂಡಲದ ಸೂಕ್ತಗಳು ೧೩೭-೧೫೭

*Translated with Exhaustive Critical Notes*
*by*

ASTHANA MAHAVIDWAN
H. P. VENKATA RAO.
*Editor.*



*Printed at*
SREE VINAYAK PRINTING WORKS, MYSORE.
1950

Published by the gracious permission of

His Highness

Sri Jayachamarajendra Wadiyar Bahadur,

G.C.B., G.C.S.I., Maharaja of Mysore.



ಯದುವಂಶಪಯಃಪಾರಾವಾರಸುಧಾಕರರೂ ಸತ್ಸಂಪ್ರದಾಯಸ್ಥೈರೀಕರವಿದ್ಯಾವರ್ಧಕರೂ
ಮೈಸೂರು ದೇಶವನ್ನಾಳುವ ಧರ್ಮಪ್ರಭುಗಳೂ ಆದ ಶ್ರೀಮನ್ಮಹಾರಾಜಾ
ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್,
ಜಿ.ಸಿ.ಬಿ., ಜಿ.ಸಿ.ಎಸ್.ಐ. ರವರು.

ವೇದಪ್ರಕಟನಕಾರ್ಯಕ್ಕಾಗಿ ನಿಯಮಿತವಾಗಿರುವ

# ವೇದವಿಮರ್ಶನ ವಿದ್ವನ್ಮಂಡಲಿ

ಅಧ್ಯಕ್ಷರು :

ಶ್ರೀ ಜಗದ್ಗುರು ನಾಗಲಿಂಗಪರಿವ್ರಾಜಕಾಚಾರ್ಯ ಪೀಠಾಧ್ಯಕ್ಷರಾದ

**ಶಿಲ್ಪಿಸಿದ್ಧಾಂತಿ ಶಿವಯೋಗಿ ಶ್ರೀ ಸಿದ್ಧಲಿಂಗಸ್ವಾಮಿಗಳವರು.**

—o—

Translator & Editor :

**ಆಸ್ಥಾನ ಮಹಾವಿದ್ವಾನ್** H. P. **ವೆಂಕಟರಾವ್**

Associate :

**ಶ್ರೀ.** G. N. **ಚಕ್ರವರ್ತಿ** M. A.

Professor of Sanskrit, St. Philomina's College, Mysore.

---

**ಸಹಾಯಕ ವಿದ್ವನ್ಮಂಡಲಿ**

1. **ಬ್ರ॥ ಶ್ರೀ॥ ಜಿ. ವಿಷ್ಣುಮೂರ್ತಿಭಟ್ಟರು,** ವ್ಯಾಕರಣವಿದ್ವಾನ್, ಶ್ರೀಮನ್ಮಹಾರಾಜರವರ ಸಂಸ್ಕೃತಮಹಾಪಾಠಶಾಲಾ, ಮೈಸೂರು.
2. **ಆಸ್ಥಾನ ವಿದ್ವಾನ್ ಬ್ರ॥ ಶ್ರೀ॥** H. **ಗಂಗಾಧರಶಾಸ್ತ್ರಿಗಳು,** ಜ್ಯೌತಿಷ ವಿದ್ವಾನ್ ಮತ್ತು ಕರ್ಣಾಟಕ ಭಾಷಾಪಂಡಿತರು,
3. **ಬ್ರ॥ ಶ್ರೀ॥ ಶ್ರೀನಿವಾಸಶಾಸ್ತ್ರಿಗಳು,** ಋಗ್ವೇದ ಘನಪಾಠಿಗಳು.
4. **ಬ್ರ॥ ಶ್ರೀ॥ ಹಿಟ್ಟವಳ್ಳಿ ಬಿಳಿಗಿರಿರಂಗಾಜೋಯಿಸರು,** ಶ್ರೌತ ವಿದ್ವಾನ್.
5. **ಬ್ರ॥ ಶ್ರೀ॥ ಹಿಟ್ಟವಳ್ಳಿ ದೇವರಭಟ್ಟರು,** ಮೀಮಾಂಸಾದರ್ಶನ ಪಂಡಿತರು.
6. **ಬ್ರ॥ ಶ್ರೀ॥ ವೆಂಕಟರಮಣಾಚಾರ್,** M. A., B. T., ಸಾಹಿತ್ಯವಿದ್ವಾನ್.
7. **ಬ್ರ॥ ಶ್ರೀ॥** S. **ರಂಗನಾಥನ್,** ಸಾಹಿತ್ಯವಿದ್ವಾನ್, ಅರಮನೆ ಸರಸ್ವತೀ ಭಂಡಾರ.
8. **ಬ್ರ॥ ಶ್ರೀ॥ ಪುತ್ತೂರು ಅನಂತಕೃಷ್ಣಮಾಚಾರ್,** ಸಾಹಿತ್ಯ ವಿದ್ವಾನ್, Govt. Oriental Research Institute. Mysore.
9. **ಬ್ರ॥ ಶ್ರೀ॥** S. **ಸೀತಾರಾಮಶಾಸ್ತ್ರಿಗಳು,** ರಿಟೈರ್ಡ್ ಪಂಡಿತರು. Govt. Oriental Research Institute, Mysore.



ಶ್ರೀ ಜಗದ್ಗುರು ನಾಗಲಿಂಗಪರಿವ್ರಾಜಕಾಚಾರ್ಯ ಪೀಠಾಧ್ಯಕ್ಷರಾದ

**ಶಿಲ್ಪಸಿದ್ಧಾಂತಿ ಶಿವಯೋಗಿ ಶ್ರೀ ಸಿದ್ಧಲಿಂಗಸ್ವಾಮಿಗಳವರು**

ವೇದವಿಮರ್ಶನ ವಿದ್ವನ್ಮಂಡಲಿಯ ಅಧ್ಯಕ್ಷರು

# ಪೀಠಿಕೆ.

ಋಗ್ವೇದ ಸಂಹಿತೆಯ ಹನ್ನೊಂದನೆಯ ಭಾಗವಾದ ಈ ಸಂಪುಟದಲ್ಲಿ ಪ್ರಥಮಮಂಡಲದ ೧೩೭ ರಿಂದ ೧೬೭ ರವರೆಗೆ ಒಟ್ಟು ೨೧ ಸೂಕ್ತಗಳಿವೆ. ಇವುಗಳಲ್ಲಿ ಪರುಚ್ಛೇಪದೈವೋದಾಸಿಯಿಂದ ದೃಷ್ಟವಾದ ೧೩೭ ರಿಂದ ೧೩೯ ರವರೆಗಿರುವ ಮೊದಲನೆಯ ಮೂರು ಸೂಕ್ತಗಳಿಂದ ಮಿತ್ರಾವರುಣರು, ಪೂಷ ಮತ್ತು ವಿಶ್ವೇದೇವರೂ, ದೀರ್ಘತಮಾಔಚಥ್ಯನಿಂದ ದೃಷ್ಟವಾದ ಉಳಿದ ಸೂಕ್ತಗಳಿಂದ ಜಾತವೇದಸ್, ಅಗ್ನಿ, ಮಿತ್ರಾವರುಣರು, ಅದಿತಿ, ವಿಷ್ಣು, ಇಂದ್ರಾವಿಷ್ಣು, ಮತ್ತು ಅಶ್ವಿನೀದೇವತೆಗಳೂ ಸ್ತುತರಾಗಿದ್ದಾರೆ. ಕುತ್ಸಆಂಗಿರಸನ ಕೃತಿಗಳಂತೆಯೇ ಪರುಚ್ಛೇಪದೀರ್ಘತಮಸ್ಸುಗಳ ಕೃತಿಗಳೂ ಸಹ ಉದಾತ್ತವಾದ ಭಾವಗಳನ್ನೊಳಗೊಂಡಿರುವುವೂ ಸುಂದರವಾದ ಶೈಲಿಯಿಂದ ಕೂಡಿದವೂ ಆಗಿವೆ. ಇಬ್ಬರೂ ಸಹ ತಮ್ಮ ವೈಯುಕ್ತಿಕವಾದ ಪ್ರಭಾವಗಳಿಂದಲೂ, ರಚನಾಕೌಶಲ್ಯಗಳಿಂದಲೂ ಅತ್ಯಂತ ಪ್ರಸಿದ್ಧರಾಗಿದ್ದಾರೆ.

**ದಧ್ಯಙ್ ಹ ಮೇ ಜನುಷಂ ಪೂರ್ವೋ ಅಂಗಿರಾಃ ಪ್ರಿಯಮೇಧಃ ಕಣ್ವೋ ಅತ್ರಿರ್ಮನುರ್ವಿದುಸ್ತೇ ಮೇ ಪೂರ್ವೇ ಮನುರ್ವಿದುಃ ।**

(ಋ. ಸಂ. ೧-೧೩೯-೯)

ಪ್ರಾಚೀನರಾದ ದಧೀಚಿ, ಅಂಗಿರಸ್, ಪ್ರಿಯಮೇಧ, ಕಣ್ವ, ಅತ್ರಿ, ಮನು ಇತ್ಯಾದಿ ಋಷಿಗಳು ನನ್ನ ಪಿತೃಪಿತಾಮಹಾದಿಗಳನ್ನೂ ದಿವೋದಾಸಪುತ್ರನಾದ ನನ್ನನ್ನೂ ಚೆನ್ನಾಗಿ ಅರಿತಿದ್ದಾರೆ ಎಂದು ಪರುಚ್ಛೇಪನು ತನ್ನ ಮತ್ತು ತನ್ನ ಸಂತತಿಯ ಯಶಸ್ಸನ್ನು ಹೇಳಿಕೊಳ್ಳುತ್ತಾನೆ. ಇವನ ವೈಯಕ್ತಿಕವಾದ ಪ್ರಭಾವವು ಅಲೌಕಿಕವಾದುದೆಂದು ತೈತ್ತಿರೀಯಸಂಹಿತೆಯಲ್ಲಿ ಪ್ರಶಂಸಿಸಿವೆ. ಇವನು ಶ್ರೇಷ್ಠವಾದ ಮಂತ್ರಜ್ಞನು ಎಂದು ತೋರಿಸುವ ಒಂದು ಸನ್ನಿವೇಶವು ಈರೀತಿ ವರ್ಣಿತವಾಗಿದೆ,

**ನೃಮೇಧಶ್ಚ ಪರುಚ್ಛೇಪಶ್ಚ ಬ್ರಹ್ಮವಾದ್ಯಮವದೇತಾಮಸ್ಮಿನ್ದಾರಾವಾರ್ದ್ರೇಽಗ್ನಿಂ ಜನಯಾವ ಯತರೋ ನೌ ಬ್ರಹ್ಮೀಯಾನಿತಿ ನೃಮೇಧೋಽಭ್ಯವದತ್ಸ ಧೂಮಮಜನಯತ್ಪರುಚ್ಛೇಪೋಽಭ್ಯವದತ್ಸೋಽಗ್ನಿಮಜನಯದೃಷ ಇತ್ಯಬ್ರವೀತ್ಸಮಾವದ್ವಿದ್ವ ಕಥಾ ತ್ವಮಗ್ನಿಮಜೀಜನೋ ನಾಹಮಿತಿಸಾಮಿಧೇನೀನಾಮೇವಾಹಂ ವರ್ಣಂ ವೇದೇತ್ಯಬ್ರವೀತ್ ॥**

(ತೈ. ಸಂ. ೨-೫-೮-೩ ರಿಂದ ೪)

**ನೃಮೇಧ** ಮತ್ತು **ಪರುಚ್ಛೇಪ** ಎಂಬಿಬ್ಬರಲ್ಲಿ ಶಾಸ್ತ್ರದ ಮರ್ಮವನ್ನು ತಿಳಿದವರಾರು, ನಿಜವಾದ ತತ್ತ್ವಜ್ಞರಾರು ಎಂಬ ವಿಷಯದಲ್ಲಿ ಚರ್ಚೆ ಬಂದಾಗ ಹಸಿಯ ಕಟ್ಟಿಗೆಯಿಂದ ಅಗ್ನಿಯನ್ನು ಉತ್ಪನ್ನಮಾಡುವರೇ ಶಾಸ್ತ್ರಜ್ಞರೆಂದು ಪರಿಗಣಿಸಬೇಕೆಂದು ತೀರ್ಮಾನವಾಯಿತು. ಆಗ ನೃಮೇಧನು ಮಂತ್ರವನ್ನುಚ್ಚರಿಸಲು ಕೇವಲ ಹೊಗೆಯು ಕಾಣಿಸಿಕೊಂಡಿತು. ಪರುಚ್ಛೇಪನು ಉಚ್ಚರಿಸಿದಾಗ ಅಗ್ನಿಯು ಪ್ರಜ್ವಲಿತವಾಯಿತು. ಆಗ ನೃಮೇಧನು ನಮ್ಮಿಬ್ಬರ ಜ್ಞಾನವೂ ಒಂದೇ ವಿಧವಾಗಿರುವಾಗ ನನ್ನಿಂದಾಗದಿರುವ ಅಗ್ನಿಪ್ರಜ್ವಲನವು ನಿನ್ನಿಂದ ಹೇಗೆ ಸಾಧ್ಯವಾಯಿತು, ಎಂದಾಗ ನನಗೀ ಸಾಮಿಧೇನಿಯ ಮರ್ಮವು ಗೊತ್ತು. ಆದುದರಿಂದ ಈ ಕಾರ್ಯವು ಸಾಧ್ಯವಾಯಿತು ಎಂದು ಪರುಚ್ಛೇಪನು ಉತ್ತರವನ್ನು ಕೊಟ್ಟನು, ಎಂದು ತೈತ್ತಿರೀಯ ಸಂಹಿತೆಯಲ್ಲಿ ಪ್ರಶಂಸೆಯಿದೆ.

ಈ ರೀತಿ ಮಂತ್ರಮರ್ಮವನ್ನು ತಿಳಿದುದರಿಂದಲೇ ಅಲ್ಲದೆ ಮಂತ್ರರಚನೆಯಲ್ಲಿಯೂ ಪರುಚ್ಛೇಪನು ತನ್ನ ನಿರ್ಮಾಣಕೌಶಲ್ಯವನ್ನು ವ್ಯಕ್ತಪಡಿಸಿ ಪ್ರಸಿದ್ಧನಾಗಿದ್ದಾನೆ. ಉತ್ತಮವಾದ ಭಾವವನ್ನು ಪ್ರಕಾಶಪಡಿಸುವಾಗ ಆ ಭಾವದ ಅಭಿವೃದ್ಧಿಗೆ ಒಂದು ವಿಧವಾದ ಪ್ರಭಾವವನ್ನೂ ಶಕ್ತಿಯನ್ನೂ ಸೌಂದರ್ಯವನ್ನೂ ಕೊಡತಕ್ಕ ಅಭ್ಯಾಸ ವಾಕ್ಯಗಳ ರಚನೆಯಲ್ಲಿ ಪರುಚ್ಛೇಪನ ವೈಶಿಷ್ಟ್ಯವು ಅತಿಶಯವಾದುದು. ಈ ಶಕ್ತಿಯನ್ನು ಪ್ರಶಂಸಿಸುತ್ತಾ ನಿರುಕ್ತ ಕಾರರು ತತ್ಪರುಚ್ಛೇಪಸ್ಯ ಶೀಲಂ (ನಿ. ೧೦-೪೨) ಇದು ಪರುಚ್ಛೇಪರ ವ್ಯಕ್ತಿತ್ವ ಎಂದು ಹೇಳಿ,

**ಪ್ರ ತದ್ವೋಚೇಯಂ ಭವ್ಯಾಯೇಂದವೇ ಹವ್ಯೋ ನ ಯ ಇಷವಾನ್ಮನ್ಮ ರೇಜತಿ ರಕ್ಷೋಹಾ ಮನ್ಮ ರೇಜತಿ ॥**

(ಋ. ಸಂ. ೧-೧೨೯-೬)

ಎಂಬ ಋಕ್ಕಿನಲ್ಲಿರುವ ಅಭ್ಯಾಸವಾಕ್ಯವನ್ನುದಹರಿಸಿ ಪರುಚ್ಛೇಪರ ಶೈಲಿಯನ್ನು ಸ್ತುತಿಸಿದ್ದಾರೆ. ಐತರೇಯಬ್ರಾಹ್ಮಣ ದಲ್ಲಿಯೂ ಪರುಚ್ಛೇಪಋಷಿಯ ಶೈಲಿ, ವಿಷಯಗಳ ಸ್ವರೂಪ, ಮತ್ತು ಮಂತ್ರಗಳ ವಿನಿಯೋಗ ಇತ್ಯಾದಿ ವಿಷಯಗಳ ವರ್ಣನೆ ಇದೆ. (ಐ. ಬ್ರಾ. ೫-೧೦ ರಿಂದ ೧೩ ಖಂಡ) ಈ ವಿಷಯವನ್ನೆಲ್ಲಾ ನಾವು ಋ. ಸಂ. ಭಾಗ ೧೦ ರಲ್ಲಿ ೧೨೭ನೇ ಸೂಕ್ತದ ಪೀಠಿಕೆಯಲ್ಲಿ ವಿಸ್ತಾರವಾಗಿ ವಿವರಿಸಿದ್ದೇವೆ.

ದೀರ್ಘತಮಸ್ಸಿನ ಜನನ, ಹುಟ್ಟಿದಮೇಲೆ ಅವನ ಕಷ್ಟಪರಂಪರೆಗಳು, ಅತ್ಯಂತ ಆಪತ್ಕಾಲದಲ್ಲಿದ್ದರೂ ಸಹ ಆತನ ದೈವಭಕ್ತಿ, ಅವನ ಮಹತ್ತಾದ ಶ್ರದ್ಧಾಶಕ್ತಿಗಳಿಂದ ಅವನು ಅಶ್ವಿನ್ಯಾದಿ ದೇವತೆಗಳ ಅನುಗ್ರಹವನ್ನು ಪಡೆದುದು ಇತ್ಯಾದಿ ವಿಷಯಗಳನ್ನು ೧–೧೪೭-೩ ಮತ್ತು ೧–೧೫೨-೬ ನೇ ಋಕ್ಕಿನ ವಿಶೇಷವಿಷಯಗಳಲ್ಲಿ ವಿವರಿಸಿದೆ. ಇವನು ಸ್ತೋತೃಗಳಲ್ಲಿ ಶ್ರೇಷ್ಠತಮನಾಗಿಯೂ, ಕರ್ಮನಿಷ್ಠನಾಗಿಯೂ ಇದ್ದುದರಿಂದ ಇವನಿಗೆ **ಬ್ರಹ್ಮಪ್ರಿಯನೆಂಬ** ವಿಶೇಷಣವು ಪ್ರಸಿದ್ಧವಾಗಿದೆ. ಇದಲ್ಲದೆ,

**ದೀರ್ಘತಮಾ ಮಾಮತೇಯೋ ಜುಜುರ್ವಾನ್ ದಶಮೇ ಯುಗೇ ।**
**ಅಪಾಮರ್ಥಂ ಯತೀನಾಂ ಬ್ರಹ್ಮಾ ಭವತಿ ಸಾರಥಿಃ ॥**

(ಋ. ಸಂ. ೧–೧೫೮–೬)

ಎಂಬಲ್ಲಿ ತಾನು ಪಡೆದ ಉತ್ತಮವಾದ ಪದವಿಯ ಸ್ವರೂಪವನ್ನು ತಾನೇ ವರ್ಣಿಸುತ್ತಾನೆ. ಅಗ್ನ್ಯಾದಿದೇವತೆ ಗಳಿಂದ ಇವನು ಅನುಗ್ರಹವನ್ನು ಪಡೆದಮೇಲೆ ಅವರನ್ನು ಸ್ತುತಿಸಿದ ವಿಷಯವನ್ನು ಬೃಹದ್ದೇವತೆಯಲ್ಲಿ,

**ಸ ವೇದಿಷದ ಇತ್ಯಸ್ತೌಚ್ಚತುರ್ಭಿರ್ಜಾತವೇದಸಂ ।**
**ಸಮಿದ್ಧ ಆಪ್ರಿಯೋಽಂತ್ಯೈಂದ್ರೀ ತಮಿತ್ಯಗ್ನೇಃ ಪರಾಣಿ ಷಟ್ ।**

(ಬೃ. ದೇ. ೪–೧೬)

**ತುಷ್ಟಾವ ಚೈವ ಸೂಕ್ತಾಭ್ಯಾಂ ಅಬೋಧೀತ್ಯಶ್ವಿನಾವೃಷಿಃ ।**
**ಪ್ರೇತಿ ದ್ಯಾವಾಪೃಥಿವ್ಯೌ ತು ಪರಾಭ್ಯಾಮೇತದುತ್ತರಂ ॥**

(ಬೃ. ದೇ. ೪–೩೨)

ಇತ್ಯಾದಿವಾಕ್ಯಗಳಿಂದ ವಿವರಿಸಿದೆ. ಈ ಋಷಿಯ ಕೃತಿಗಳು ಮುಂದಿನ ಅಧ್ಯಾಯದಲ್ಲೂ ವಿಶೇಷವಾಗಿರುವುದ ರಿಂದಲೂ ಇವನ ತತ್ತ್ವಜ್ಞಾನದ ಪ್ರೌಢಿಮೆಯೂ ಪ್ರತಿಪಾದನಶಕ್ತಿಯೂ ಅಲ್ಲಿ ವಿಶೇಷವಾದ ರೀತಿಯಲ್ಲಿ ಅಭಿವ್ಯಕ್ತ ವಾಗುವುದರಿಂದಲೂ ಇವನ ಮಹತ್ತಾದ ಗುಣಗಳನ್ನು ಅಲ್ಲಿ ವಿವರಿಸಲಾಗುತ್ತದೆ.

ಪರುಚ್ಛೇಪದೃಷ್ಟವಾದ ಮಿತ್ರಾವರುಣಸೂಕ್ತದಲ್ಲಿ (೧-೧೩೬) ಆ ದೇವತೆಗಳ ವಿಶೇಷಗುಣಗಳ ವರ್ಣನೆಯೇನೂ ಇಲ್ಲ. ಸೋಮಪಾನಕ್ಕಾಗಿ ಕೇವಲ ಸ್ತುತಿಪೂರ್ವಕವಾದ ಆಹ್ವಾನವಿದೆ.

೧೩೮ ನೇ ಸೂಕ್ತದಲ್ಲಿ **ಪೂಷನ** ವಿಶೇಷಗುಣಗಳ ವರ್ಣನೆಯಿದೆ. ಅದರಲ್ಲಿ **ಆಘೃಣಿ** ಎಂಬ ವಿಶೇಷಣವು ಪೂಷನ ಸ್ವರೂಪವನ್ನು ನಿಷ್ಕರ್ಷಿಸುವುದರಲ್ಲಿ ವೈದಿಕಸಂಪ್ರದಾಯದವರಿಗೂ ಆಧುನಿಕರಾದ ಪಂಡಿತರಿಗೂ ವಿಪ್ರತಿಪತ್ತಿಗೆ ಕಾರಣವಾಗಿದೆ. ಯಾಸ್ಕಾದಿಗಳ ಮತಗಳನ್ನೂ, Bloomfield ಇತ್ಯಾದಿ ಪಂಡಿತರು ಅದನ್ನೇ ಅನುಸರಿಸುವುದನ್ನೂ, ಆದರೆ ಕೆಲವು ಪಂಡಿತರು ಅದಕ್ಕೆ ಭಿನ್ನವಾದ ಅಭಿಪ್ರಾಯಗಳನ್ನು ಕೊಡುವುದನ್ನೂ, ಸಹ ೧೩೮ ನೇ ಸೂಕ್ತದ ನಾಲ್ಕನೇ ಋಕ್ಕಿನ ವಿಶೇಷವಿಷಯಗಳಲ್ಲಿ ತಿಳಿಸಿದೆ. (ಪುಟ ೩೩-೩೪).

ಯಾಸ್ಕಾದಿಗಳು **ಪೂಷನು** ಆದಿತ್ಯದೇವತೆಯೆಂದು ಪ್ರತಿಪಾದಿಸಲು ಯಾವ ಯಾವ ವಿಶೇಷಗುಣಗಳನ್ನು ತೆಗೆದುಕೊಂಡು ಚರ್ಚಿಸುತ್ತಾರೆಯೋ ಆ ವಿಶೇಷಣಗಳೆಲ್ಲವೂ ಆದಿತ್ಯಪರವಾಗಿ ಮಾತ್ರ ಇರಬೇಕಾಗಿಲ್ಲ. ಎಲ್ಲಾ ದೇವತೆಗಳಿಗೂ ಅನ್ವಯಿಸಬಹುದೆಂದು ಕೆಲವರ ವಾದವಾಗಿದೆ. ಈರೀತಿ ವಿರೋಧಾಭಿಪ್ರಾಯಗಳನ್ನು ಸೂಚಿಸುವುದರಲ್ಲೂ ಸಹ ಈಚಿನ ಪಂಡಿತರು ಕೆಲವು ಆಧಾರಗಳನ್ನು ತೋರಿಸಿ ತಮ್ಮ ಪಕ್ಷವನ್ನು ಪ್ರತಿಪಾದಿಸುತ್ತಾರೆ. ಉದಾಹರಣೆಗೆ—

**ಯಾಸ್ತೇ ಪೂಷನ್ನಾವೋ ಅಂತಃ ಸಮುದ್ರೇ ಹಿರಣ್ಯಯೀರಂತರಿಕ್ಷೇ ಚರಂತಿ ।**
**ತಾಭಿರ್ಯಾಸಿ ದೂತ್ಯಾಂ ಸೂರ್ಯಸ್ಯ ಕಾಮೇನ ಕೃತ ಶ್ರವ ಇಚ್ಛಮಾನಃ ॥**
(ಋ. ಸಂ ೬-೫೮-೩)

ಎಂಬ ಋಕ್ಕಿನಲ್ಲಿ ಪೂಷನು **ಸೂರ್ಯನ** ದೂತನೆಂದು ಪರಿಗಣಿತನಾಗಿದ್ದಾನೆಂದೂ, ಹೀಗೆಯೇ ಇತರ ಉದಾಹರಣೆಗಳಿಂದ ಆದಿತ್ಯನಿಗೂ ಪೂಷನಿಗೂ ಬಹಳ ವ್ಯತ್ಯಸ್ತವಾದ ಅಂಶಗಳು ಕಾಣುತ್ತವೆಯೆಂದೂ ತೋರಿಸಿದ್ದಾರೆ. ಅಲ್ಲದೆ, ಋ. ಸಂ. ೮-೨೯ ನೇ ಸೂಕ್ತದಲ್ಲಿ **ವಿಶ್ವೇದೇವತೆಗಳ** ಸ್ವರೂಪವನ್ನು ವರ್ಣಿಸುವಾಗ ಪೂಷನಪರವಾಗಿ ಸೌರಗುಣದ ವರ್ಣನೆಯೇ ಇರುವುದಿಲ್ಲ, ಇತ್ಯಾದಿಯಾಗಿ ಚರ್ಚಿಸಿ ಸಾಂಪ್ರದಾಯಿಕವಾಗಿ ಪರಿಗಣಿತವಾದಂತೆ ಪೂಷನು ಆದಿತ್ಯದೇವತೆಯಲ್ಲವೆಂದು ಚರ್ಚಿಸಿ 'ಇವನು' ಪಶುಪಾಲಕ ದೇವತೆಯಾಗಿದ್ದು ತಾನೇ ಒಂದು ಪ್ರತ್ಯೇಕವಾದ ವೈಶಿಷ್ಟ್ಯವನ್ನು ಪಡೆದಿರುತ್ತಾನೆಂದು ತೋರಿಸಿದ್ದಾರೆ.

ಪೂಷದೇವತಾಸ್ತೋತ್ರದ ಮುಖ್ಯಭಾಗವು ಋಗ್ವೇದದ ಆರನೆಯ ಮಂಡಲದಲ್ಲಿ ೫೩ ರಿಂದ ೫೮ ನೆಯ ಸೂಕ್ತದ ವರೆಗೂ ಅಡಕವಾಗಿದೆ. ಭಾರದ್ವಾಜ ಸಂತತಿಯ ಋಷಿಗಳು ಪೂಷದೇವನನ್ನು ಮುಖ್ಯದೇವತೆಯನ್ನಾಗಿಟ್ಟುಕೊಂಡಿದ್ದರೆಂದು ತಿಳಿದುಬರುತ್ತದೆ. ಈ ಭಾಗವನ್ನು ಕೆಲವು ವಿದ್ವಾಂಸರು "ಪೂಷಸಂಹಿತಾ" ಎಂದು ಕರೆಯುತ್ತಾರೆ. ಇದಲ್ಲದೆ ಸಂಹಿತೆಯ ಇತರ ಭಾಗಗಳಲ್ಲೂ ಸಹ ಇಂದ್ರ, ಸೋಮ ಇತ್ಯಾದಿ ಇತರ ದೇವತೆಗಳ ಜೊತೆಯಲ್ಲಿಯೂ ಪೂಷನು ಸ್ತುತನಾಗಿದ್ದಾನೆ. ಋ. ಸಂ ೬-೫೫-೨, ೬-೫೩-೯, ೬-೫೬-೧, ೬-೫೫-೩ ಇತ್ಯಾದಿ ಋಕ್ಕುಗಳಲ್ಲಿ ಕಪರ್ದೀ, ಪಶುಸಾಧನೀ, ಅಷ್ಟ್ರಾ, ಕರಂಭಾದ್, ಅಜಾಶ್ವ ಇತ್ಯಾದಿ ವರ್ಣನೆಗಳೆಲ್ಲವೂ ನಮಗೆ ಪೂಷನ ನಿರ್ದಿಷ್ಟವಾದ ಒಂದು ಚಿತ್ರವನ್ನು ಕೊಡುತ್ತದೆ. ಇತರ ದೇವತೆಗಳೊಡನೆ ಸೇರಿರುವ ಸಾಧಾರಣವಾದ ಗುಣಗಳ ಜೊತೆಗೆ ಆರನೆಯ ಮಂಡಲದಲ್ಲಿ ಪೂಷನ ಒಂದು ವಿಶೇಷವಾದ ಅಂಶಕ್ಕೆ ಪ್ರಾಮುಖ್ಯವು ಇದ್ದಂತೆ ಕಾಣುತ್ತದೆ. ಇವನು ಪಶುಪಾಲಕದೇವತೆಯೆಂದೂ, ಈ ದೇವತೆಯ ಅನುಗ್ರಹದಿಂದಲೇ ಆರಾಧಕರ ಪಶುಸಂಪತ್ತು ಹೆಚ್ಚಬೇಕೆಂದೂ, ದಾರಿ ತಪ್ಪಿಸಿಕೊಂಡ ಗವಾದಿಗಳಿಗೆ ಇವನೇ ರಕ್ಷಕನೆಂದೂ ವಿಶದವಾಗಿ ಉಕ್ತವಾಗಿರುವುದು.

**ಪೂಷಾ ಗಾ ಅನ್ವೇತು ನಃ ಪೂಷಾ ರಕ್ಷತ್ವರ್ವತಃ । ಪೂಷಾ ವಾಜಂ ಸನೋತು ನಃ ॥**

(ಋ. ಸಂ. ೬-೫೪-೫)

**ಮಾಕಿರ್ನೇಶನ್ಮಾಕೀಂ ರಿಷನ್ಮಾಕೀಂ ಸಂ ಶಾರಿ ಕೇವಟೇ । ಅಥಾರಿಷ್ಟಾಭಿರಾ ಗಹಿ ॥**

(ಋ. ಸಂ. ೬-೫೪-೭)

ಇತ್ಯಾದಿಯಾಗಿ ನಾನಾವಿಧವಾಗಿ ಪ್ರಾರ್ಥಿಸಿ ತಮ್ಮ ಪಶುಸಂಪತ್ತನ್ನು ವೃದ್ಧಿಮಾಡಬೇಕೆಂದು ಪ್ರಾರ್ಥಿಸಿವೆ. ಈ ಭರದ್ವಾಜಸಂತತಿಯವರು ಒಂದೆಡೆ ನೆಲೆಯಾಗಿ ನಿಲ್ಲದೇ ಪದೇ ಪದೇ ಸಂಚಾರಗಳನ್ನಿಟ್ಟುಕೊಂಡಿದ್ದರೆಂದೂ ತಮ್ಮ ಸಂಚಾರಕಾಲದಲ್ಲಿ ಪೂಷನನ್ನೇ ಮಾರ್ಗದರ್ಶಕನನ್ನಾಗಿಯೂ ರಕ್ಷಕನನ್ನಾಗಿಯೂ ಭಾವಿಸಿದ್ದರೆಂದೂ ಆಧುನಿಕವಾದ ವಿಮರ್ಶಕಾರರು ಊಹಿಸುತ್ತಾರೆ.

ಮಿತ್ರಾವರುಣಪರವಾದ ೧೫೧ ನೆಯ ಸೂಕ್ತದಲ್ಲಿ ಕೆಲವು ವರ್ಣನೆಗಳು ತಾತ್ತ್ವಿಕದೃಷ್ಟಿಯಿಂದಲೂ ಆಧ್ಯಾತ್ಮಿಕವಾದ ದೃಷ್ಟಿಯಿಂದಲೂ ಗಹನವಾದ ವಿಚಾರಗಳಾಗಿವೆ. ಉದಾಹರಣೆಗೆ ೧೫೧-೨ ನೇ ಋಕ್ಕಿನಲ್ಲಿ **ಋತಾದನೃತಮಾದದಾಥೇ**—ಋತದಿಂದ ಅನೃತವನ್ನು ತರುತ್ತಾರೆ ಎಂಬ ವಾಕ್ಯಕ್ಕೆ ಪ್ರಾಕೃತವಾದ ದೃಷ್ಟಿಯಿಂದ ಅರ್ಥವನ್ನು ಹೇಳಲಾಗುವುದಿಲ್ಲ. ಅಲ್ಲಿ ಒಂದು ಅಪ್ರಾಕೃತವಾದುದೂ ಗಭೀರವಾದುದೂ ಆದ ಅರ್ಥವಿರಬೇಕು. ಸ್ಥೂಲವಾಗಿ ಹೇಳುವುದಾದರೆ ಋತಾತ್—ಆದಿತ್ಯನಿಂದ; ಅನೃತಂ—(ನಶ್ವರವಾದ) ಉದಕವನ್ನು; ಆದದಾಥೇ ಎಂದು ಹೇಳಬಹುದು ಆದರೆ **ಆದಿತ್ಯ**ನಿಗೆ ಋತನೆಂಬ ಹೆಸರು ಯಾವ ಗುಣವನ್ನು ವರ್ಣಿಸುತ್ತದೆಯೆಂದು ಹೇಳುವುದು ಸುಲಭವಲ್ಲ. **ಋತವೇ** ಆದಿತ್ಯನ ಶಾಶ್ವತವಾದ ಮಾರ್ಗವೂ, **ಋತವೇ** ಅವನ **ಯೋನಿಯೂ ಆಧಾರವೂ** ಆಗಿದೆ (ಋ. ಸಂ. ೩-೫೪-೬ ; ೭-೬೦-೫) ಎಂಬ ವರ್ಣನೆಯಲ್ಲೂ ಸಹ **ಋತದ** ಸ್ವರೂಪವೇನೆಂಬುದನ್ನು ವಿವರಿಸಲಾಗುವುದಿಲ್ಲ ಈ ರೀತಿಯಾದ ಅವಿನಾಭಾವಸಂಬಂಧವೂ, ಕೆಲವು ವೇಳೆ ತಾದಾತ್ಮ್ಯವೂ ಸಹ ಕೇವಲ ಭೌತಿಕವಾದ ಅರ್ಥಕ್ಕಿಂತಲೂ ಗಹನತರವಾಗಿರುತ್ತದೆ.

ಇದೇ ಸೂಕ್ತದ ೫ನೇ ಋಕ್ಕಿನಲ್ಲಿ **ಮಾ ವಾಂ ರಾತಿರುಪದಸತ್ಕದಾ ಚನಾಸ್ಮದ್ರಾತಿಃ ಕದಾ ಚನ।** ಎಂದು ಮಾನವನ ಆಹುತಿರೂಪದ ದಾನಕ್ಕೂ ದೇವತೆಗಳ ಅನ್ನಾದಿ ಸಂಪದ್ದಾನಕ್ಕೂ ಅನ್ಯೋನ್ಯಾಶ್ರಯರೂಪವಾದ ಸಂಬಂಧವಿದೆಯೆಂದು ತೋರಿಸಿವೆ. ಇವೆರಡೂ ಹಾಸುಹೊಕ್ಕುಗಳಂತೆ ವಿಶ್ವದ ವ್ಯವಹಾರಕ್ಕೆಲ್ಲಾ ಹೇತುಗಳಾಗಿವೆ. ದೇವತೆಗಳ **ರಾತಿಗೆ** ಯಜ್ಞವೇ ಮೂಲವು ಮತ್ತು ಯಜ್ಞಾಭಿವೃದ್ಧಿಗೆ ದೇವತೆಗಳ ಅನುಗ್ರಹವೇ ಆಧಾರವು, ಎಂದು ತಿಳಿಸಿ ದೇವಮಾನವಾದಿಗಳ ಪರಸ್ಪರವಾದ ಸಂಬಂಧವು ಅನುಸ್ಯೂತವಾಗಿ ಬೆಳೆದು ಲೋಕಕ್ಕೆ ಶ್ರೇಯಸ್ಸುಂಟಾಗಬೇಕಾದರೆ ವಿಧ್ಯುಕ್ತವಾದ ಕರ್ಮಾಚರಣೆಯನ್ನು ನೆರವೇರಿಸಬೇಕೆಂಬ ವಿಶ್ವನಿಯಮವನ್ನು ತಿಳಿಸಿವೆ.

ಇದೇ ಭಾವವನ್ನು ತಿಳಿಸುವಾಗ ದೀರ್ಘತಮಸ್ಸು ಯಜ್ಞವನ್ನು ನಾವೆಗೆ ಹೋಲಿಸಿ ಆಲಂಕಾರಿಕವಾದ ಶೈಲಿಯಲ್ಲಿ ತತ್ತ್ವಪ್ರತಿಪಾದನೆಯನ್ನು ಮಾಡಿರುವುದು ಕಾವ್ಯದೃಷ್ಟಿಯಿಂದ ಬಹಳ ಉತ್ತಮವಾದ ವಿಷಯವಾಗಿದೆ. (ಋ. ಸಂ.೧-೧೪೦-೧೨)ಐಹಿಕದ ಸಂಪತ್ಸಾಧನೆಗೂ ಆಮುಷ್ಮಿಕದ ಶ್ರೇಯಸ್ಸಾಧನೆಗೂ ಕರ್ಮರೂಪವಾದ ನಾವೆಯೇ ಮುಖ್ಯವಾದ ಸಾಧನವಾಗಿದೆಯೆಂದು ತಿಳಿಸಿ ಸಂಸಾರಸಂಪತ್ತನ್ನು ವೃದ್ಧಿಮಾಡುವ ಆವಶ್ಯಕತೆಯನ್ನೂ, ಅದೇ ಸಂಸಾರ ದುಃಖದಿಂದ ಪಾರಾಗುವ ಕ್ರಮವನ್ನೂ ಏಕತ್ರ ಹೇಳಿರುವುದು ವೈದಿಕವಾದ ಉಪದೇಶದ ಮಹತ್ತ್ವವನ್ನು ತಿಳಿಸುತ್ತದೆ **ಅಸ್ಮಾಕಂ** ವೀರಾನ್ ಮಹೋನಃ ಎಂಬ ಪ್ರಾರ್ಥನೆಯಲ್ಲಿ ಸಂಸಾರವನ್ನು ಬೆಳೆಸುವುದರಲ್ಲಿರುವ ಆಸಕ್ತಿಯೂ,

**ಉತ ನಃ ಜನಾಂಶ್ಚ ಪಾರಯಾತ್** ಎಂಬ ಶ್ರದ್ಧೆಯಲ್ಲಿ ಸಂಸಾರತ್ಯಾಗದ ಆವಶ್ಯಕತೆಯೂ, **ಚ, ಯಾ ಶರ್ಮ ನಾವಂ** ಎಂಬ ನಿರೀಕ್ಷೆಯಲ್ಲಿ ಬ್ರಹ್ಮಲೋಕದ ಸುಖದ ಭಾವನೆಯೂ ವಿವರಿಸಲ್ಪಟ್ಟು ಯಜ್ಞರೂಪದ ನಾವೆಯು ಪರಸ್ಪರವಿರೋಧವಾದ ಈ ಎರಡು ಸಾಧನೆಗಳಿಗೂ ಯಾವ ರೀತಿಯಲ್ಲಿ ಸಹಾಯವನ್ನು ಮಾಡಬಲ್ಲುದೆಂಬುದನ್ನು ತಿಳಿಸಿ ಯಜ್ಞಾದಿ ಕರ್ಮಾನುಷ್ಠಾನಗಳ ಆವಶ್ಯಕತೆಯನ್ನೂ ತಿಳಿಸುತ್ತದೆ. ಯಜ್ಞಕರ್ತರಾದ ಋತ್ವಿಗಾದಿಗಳನ್ನು ನಿತ್ಯಾರಿತ್ರಗಳಿಗೆ ಹೋಲಿಸಿ ಲೋಕದ ಶ್ರೇಯಸ್ಸಿಗೆ ಸಾಧನವಾದ ಅವರ ಗುರುತರವಾದ ಜವಾಬ್ದಾರಿಯನ್ನು ತಿಳಿಸಿದೆ.

ಆಪ್ರೀದೇವತಾಕವಾದ ೧೪೨ ನೇ ಸೂಕ್ತವು ಬಹಳ ಪ್ರೌಢವಾದ ಶೈಲಿಯಿಂದಲೂ ಗಭೀರವಾದ ಭಾವನೆಗಳಿಂದಲೂ ಕೂಡಿದೆ. ದೀರ್ಘತಮಸ್ಸಿನ ಅತ್ಯಂತ ಶ್ರೇಷ್ಠವಾದ ಕೃತಿಗಳಲ್ಲಿ ಇದೂ ಒಂದಾಗಿದೆ. ಆಪ್ರೀಸೂಕ್ತದ ಮಹತ್ತ್ವವನ್ನೂ, ದೇವತಾವಿಶೇಷಗಳ ಸ್ವರೂಪವನ್ನೂ, ಋಷಿಯ ಉದಾತ್ತವಾದ ಮನೋಭಾವವನ್ನೂ ಸೂಕ್ತದ ವಿವರಣೆಯಲ್ಲಿ ವಿಶದವಾಗಿ ತಿಳಿಸಿದೆ (ಪೇಜು ೨೨೨ ರಿಂದ ೨೮೬.)

೧೫೪, ೧೫೫, ೧೫೬ನೇ ಸೂಕ್ತಗಳಲ್ಲಿ ಸರ್ವವ್ಯಾಪಕನಾದ ವಿಷ್ಣುವಿನ ವರ್ಣನೆಯು ವಿಷ್ಣುವಿನ ಸ್ವರೂಪವನ್ನು ತಿಳಿಯುವುದರಲ್ಲಿ ವಿಪ್ರತಿಪತ್ತಿಗೆ ಅವಕಾಶವಾಗಿದೆ. **ಪಾರ್ಥಿವಾನಿ ವಿಮಮೇ ರಜಾಂಸಿ** ಋ. ಸಂ. (೧-೧೫೪-೧) **ಯಸ್ಯೋರುಷು ತ್ರಿಷು ವಿಕ್ರಮಣೇಷ್ವಧಿಕ್ಷಿಯಂತಿ ಭುವನಾನಿ ವಿಶ್ವಾ।** (ಋ. ಸಂ. ೧-೧೫೪-೨), ಇತ್ಯಾದಿ ವಾಕ್ಯಗಳು ನಿಷ್ಕೃಷ್ಟವಾದ ಅರ್ಥಗಳನ್ನು ಕೊಡುವುದಿಲ್ಲ. **ತ್ರಿಷು ವಿಕ್ರಮಣೇಷು** ಎಂಬುದಕ್ಕೆ ಉದಯ, ಉಚ್ಚಸ್ಥನಾಗಿರುವುದು, ಅಸ್ತ ಎಂಬ **ಸೂರ್ಯನ** ಮೂರು ಅವಸ್ಥೆಗಳೆಂದರ್ಥಮಾಡಿರುವ **ಔರ್ಣವಾಭಾದಿಗಳ** ಮತವನ್ನು ನಿರುಕ್ತಕಾರರು ಉದಾಹರಣೆಗಳೊಡನೆ ತಿಳಿಸಿದ್ದಾರೆ. (ಪೇಜು ೫೨೫-೬) ಈ ಮತವನ್ನು ಸಮರ್ಥಿಸುವುದಕ್ಕೆ ಕೆಲವು ಋಕ್ಸಂಹಿತಾ ವಾಕ್ಯಗಳನ್ನೇ ಆಧಾರವಾಗಿಯೂ ತೆಗೆದುಕೊಳ್ಳಬಹುದು. (ಋ. ಸಂ. ೧-೧೫೫-೬, ೧-೧೬೪-೪).

ಪೌರಾಣಿಕವಾದ ವರ್ಣನೆಗಳಲ್ಲೂ ಸಹ ಈ ಮತವನ್ನು ಅನುಮೋದಿಸತಕ್ಕ ಕೆಲವು ವಿಶೇಷಣಗಳಿವೆ. **ಸುದರ್ಶನ ಚಕ್ರವು** ಸೂರ್ಯಮಂಡಲವನ್ನೂ, **ಪದ್ಮವು** ಲೋಕಕ್ಕೆ ಚೈತನ್ಯದಾಯಿಯಾದ ದ್ಯುಲೋಕದ ತೇಜಶ್ಶಕ್ತಿಯನ್ನೂ, **ಪೀತಾಂಬರವು** ತೇಜಃಪುಂಜಗಳನ್ನೂ ಪ್ರತಿಬಿಂಬಿಸುತ್ತವೆಯೆಂದು ಹೇಳಬಹುದು. (cf. P. O. S. No. 75. P. 99). ಶತಪಥಬ್ರಾಹ್ಮಣದಲ್ಲಿಯೂ ಸಹ ವಿಷ್ಣುವಿನ ಶಿರಸ್ಸು ಕತ್ತರಿಸಲ್ಪಟ್ಟಾಗ ಸೂರ್ಯರೂಪಕ್ಕೆ ಪರಿವರ್ತಿತವಾಯಿತೆಂದು ಹೇಳುವ ವರ್ಣನೆಯು ಈ ಅಂಶವನ್ನು ವಿಶದಪಡಿಸುತ್ತದೆ.

ಈ ರೀತಿ ವಿಷ್ಣುವಿನ ವರ್ಣನೆಯನ್ನು ಕೇವಲ ಆದಿತ್ಯದೇವತೆಯ ಪರವಾಗಿಯೇ ಅರ್ಥಮಾಡಿದರೆ ಆಗ **ವಿಷ್ಣೋಃ ಪದೇ ಪರಮೇ ಮಧ್ವ ಉತ್ಸಃ** (ಋ. ಸಂ. ೧-೧೫೪-೫) ಎಂಬ ವಾಕ್ಯಕ್ಕೆ ಸರಿಯಾದ ತಾತ್ಪರ್ಯವನ್ನು ಕೊಡುವುದಿಲ್ಲ. ಈ ವಾಕ್ಯವು ಉಪನಿಷದಾದಿಗಳಲ್ಲಿ ಹೇಳಿರುವ **ಸತ್ಯಲೋಕವನ್ನು** ವರ್ಣಿಸುವುದಾಗಿದೆ. ಈ ಸತ್ಯಲೋಕಕ್ಕೆ ಆದಿತ್ಯನ ಶ್ರೇಷ್ಠವಾದ ಪಥವು ಕೇವಲ ಸಾಧನವಾಗಿ ಮಾತ್ರವಿರುತ್ತದೆಂದು ಉಪನಿಷತ್ತುಗಳ ಮತವಾಗಿದೆ. **ಸೂರ್ಯದ್ವಾರೇಣ ತೇ ವಿರಜಾಃ ಪ್ರಯಾಂತಿ ಯತ್ರಾಮೃತಃ ಸ ಪುರುಷೋ ಹ್ಯವ್ಯಯಾತ್ಮಾ।** (ಮು. ಉ. ೨-೧೧) ಇತ್ಯಾದಿ ವಾಕ್ಯಗಳಲ್ಲಿ ಈ ಪರಮಪದವನ್ನು ಸೂರ್ಯಲೋಕಕ್ಕಿಂತಲೂ ಮೀರಿದುದಾಗಿ ವರ್ಣಿಸಿದೆ. ಆದುದರಿಂದ ವಿಷ್ಣುರೂಪಿಯಾದ ಪರಮಪುರುಷನ ಸ್ಥಾನವಾಗಿರಬೇಕೆಂದು ಕೆಲವರ ಮತ. ಇವರ ಅಭಿಪ್ರಾಯದಂತೆ ವಿಷ್ಣುವಿಗೆ ಅತ್ಯಂತ ಉತ್ಕೃಷ್ಟವಾದ ಸ್ಥಾನವಿತ್ತೆಂಬುದರಲ್ಲಿ ಸಂದೇಹವಿಲ್ಲ. ಈ ದೇವತಾಪರವಾದ ಸೂಕ್ತಗಳ ಸಂಖ್ಯೆಯು ಅಲ್ಪವಾಗಿರುವುದರಿಂದ ಮಾತ್ರ ಇಂದ್ರಾದಿದೇವತೆಗಳಿಗಿಂತಲೂ ಕೆಳಗಿನ ಸ್ಥಾನವೆಂದು ಹೇಳಲಾಗುವುದಿಲ್ಲ. ಈ ದೇವತೆಯ ವರ್ಣನಾದಿಗಳಿಂದ ಪರಿಶೀಲಿಸಿದರೆ ಲೋಕಗಳೆಲ್ಲೆಲ್ಲಾ ಉತ್ತಮವಾದ ಸತ್ಯಲೋಕದ ದೇವತೆಯೆಂದೂ

ಮುಂದೆ ಪುರುಷೋತ್ತಮನಾದ ವಿಷ್ಣುವಿಗೆ ಪುರಾಣಾದಿಗಳಲ್ಲಿ ಯಾವ ಸ್ಥಾನವು ವರ್ಣಿತವಾಗಿದೆಯೋ ಅದೇ ಸ್ಥಾನವು ಋಗ್ವೇದದಲ್ಲಿಯೂ ವರ್ಣಿತವಾಗಿದೆಯೆಂದು ಕೆಲವರು ಪ್ರತಿಪಾದಿಸಿದ್ದಾರೆ.

Macdonell brings forth other traces of Hindu Vishnu's general character as the 'Preserver' in the Veda. Vishnu is beneficent (I-156-5), is innocuous and bountiful (VIII. 25. 12.) and a generous protector (I. 155. 4.) but only such features of an ordinary sun-god cannot adequately account for Vishnu's sudden rise to prominence in Hindu Mythology. Vishnu must have already been a great God among 'extra-Vedic' circles and his later eminence was merely a legitimately recognised come-back, [P. O. S. No. 75. P. 104-5] . ಎಂದು ವಿಷ್ಣುವಿನ ಆತಿಥ್ಯವನ್ನು ವರ್ಣಿಸಿರುವ ವಾಕ್ಯಗಳನ್ನುದಹರಿಸಿ ಕೇವಲ ಸೂರ್ಯದೇವತೆಗೆ ಈ ಗುಣಗಳು ಸಾಧ್ಯವಿಲ್ಲ. ಆದುದರಿಂದ ದೇವತೆಗಳಲ್ಲೆಲ್ಲಾ ಉತ್ತಮನಾದವನೂ, ಪುರಾಣಾದಿಗಳಲ್ಲಿ ನಾರಾಯಣನೆಂದು ವರ್ಣಿತನಾಗಿರುವವನೂ ಆದ ಪರಮಪುರುಷನ ವರ್ಣನವೇ ವಿಷ್ಣುವಿನ ಸ್ವರೂಪವನ್ನು ಈ ವಾಕ್ಯಗಳಿಂದ ಸ್ತುತಿಸುತ್ತವೆಯೆಂದು ಚರ್ಚಿಸಿದ್ದಾರೆ.

ದೀರ್ಘತಮಸ್ಸಿನ ಸೂಕ್ತಗಳಲ್ಲಿರುವ ವಿಷ್ಣುವಿನ ವರ್ಣನೆಯು ಈ ಎರಡು ಮತಗಳಿಗೂ ಅವಕಾಶವನ್ನು ಕೊಡುತ್ತದೆ. ಆದರೆ ಅಪ್ರಾಕೃತವಾದ ಮಹಿಮೆಯುಳ್ಳ ಈ ಋಷಿಯ ವಾಕ್ಯಗಳು ಬಹಳ ಗಂಭೀರವಾದ ಅರ್ಥವನ್ನು ಸೂಚಿಸುವುದರಿಂದ ಅವುಗಳ ನಿಷ್ಕೃಷ್ಟವಾದ ಅರ್ಥವನ್ನು ತಿಳಿಯಲು ಸುಲಭಸಾಧ್ಯವಲ್ಲ. ವಿಷ್ಣುವಿನ ಸ್ವರೂಪವನ್ನು **ಇದಮಿತ್ಥಂ** ಎಂದು ಇತ್ಯರ್ಥಮಾಡಲು ಸಾಧ್ಯವಿಲ್ಲದಿರುವಂತೆಯೇ **ಇಂದ್ರಾವಿಷ್ಣುಗಳ** ಸಂಬಂಧವನ್ನೂ ಸರಿಯಾಗಿ ತಿಳಿಯಲು ಶ್ರಮಸಾಧ್ಯವಾಗುತ್ತದೆ. ಶಾಸ್ತ್ರೀಯವಾದ ಆಧಾರಗಳೊಡನೆ ಈ ವಿಷಯಗಳನ್ನು ಮುಂದೆ ಚರ್ಚಿಸಲಾಗುತ್ತದೆ.

ಅತಿಪ್ರಾಚೀನವೂ, ಅತಿಗಹನವೂ, ಅತಿವಿಸ್ತಾರವೂ, ಸರ್ವಶಾಸ್ತ್ರಗಳಿಗೂ ಮೂಲಭೂತವೂ ಆದ ಇಂತಹ ಋಗ್ವೇದಸಂಹಿತೆಯನ್ನು ಸರಳವಾದ ಕನ್ನಡಭಾಷೆಯಲ್ಲಿ ವಿಮರ್ಶಾಸಹಿತವಾಗಿ ಪ್ರಕಾಶಪಡಿಸುವುದು ಸುಲಭವಾದ ಕೆಲಸವಲ್ಲ. ಆದರೂ ಇಂತಹ ಮಹತ್ಕಾರ್ಯದಿಂದ ಪಂಡಿತಪಾಮರಾದಿಯಾದ ಸಕಲಜನರೂ ಜ್ಞಾನಾಭಿವೃದ್ಧಿಯನ್ನು ಪಡೆದು ಈಶ್ವರಾನುಗ್ರಹಕ್ಕೆ ಪಾತ್ರರಾಗಲೆಂಬ ಘನವಾದ ಉದ್ದೇಶದಿಂದ, ಕರ್ಣಾಟಕ ಸಿಂಹಾಸನಾಧೀಶ್ವರರೂ, ವೇದವಿದ್ಯಾಭಿಮಾನಿಗಳೂ, ಸ್ವಯಂ ಪಂಡಿತರೂ, ಪ್ರಜಾನುರಾಗಿಗಳೂ, ದೈವಭಕ್ತಿತತ್ಪರರೂ ಆದ **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್ ಜಿ. ಸಿ. ಬಿ., ಜಿ. ಸಿ. ಎಸ್. ಐ.** ಮಹಾಪ್ರಭುವರ್ಯರು ಬಹುದ್ರವ್ಯಸಾಧ್ಯವಾದ ಈ ಗ್ರಂಥಪ್ರಕಟನೆಯನ್ನು ತಮ್ಮ ಉದಾರಾಶ್ರಯದಿಂದ ಪ್ರೋತ್ಸಾಹಮಾಡುತ್ತಿರುವುದು, ಕರ್ಣಾಟಕಜನಕೋಟಿಯ ಸುಕೃತವೆಂದೇ ಹೇಳಬೇಕು. ಇಂತಹ ಉದಾರಮತಿಗಳಾದ ನಮ್ಮ ಪ್ರಭುವರ್ಯರಿಗೂ, ಅವರ ಕುಟುಂಬಕ್ಕೂ (ವೇದಮಂತ್ರಗಳಲ್ಲಿ ಅತಿಮುಖ್ಯವೆಂದು ಪರಿಗಣಿಸಲ್ಪಟ್ಟಿರುವ ಗಾಯತ್ರೀ ಎಂಬ ಮಂತ್ರನಾಮಾಂಕಿತರಾದ) ರಾಜಕುಮಾರಿಗೂ, ಸಮಸ್ತ ಪ್ರಜಾಕೋಟಿಗೂ, ವೇದಪುರುಷನಾದ ಸರ್ವೇಶ್ವರನು ಐಹಿಕಫಲಗಳಾದ ಆಯುರಾರೋಗ್ಯೈಶ್ವರ್ಯಾದಿಸಕಲಸಂಪತ್ತನ್ನೂ ಪಾರಮಾರ್ಥಿಕವಾದ ಅಧ್ಯಾತ್ಮಜ್ಞಾನವನ್ನೂ **ಇತೋಽಪ್ಯತಿಶಯವಾಗಿ ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇನೆ.**

ಮೈಸೂರು
ವಿಕೃತಿನಾಮ ಸಂ|| ಆ|| ಆಷಾಢ ಶುದ್ಧ ಪಂಚಮಿ ಮಂಗಳವಾರ
20—6—1950

ಅನುವಾದಕ
**ಹೆಚ್. ಪಿ. ವೆಂಕಟರಾವ್,**
ಆಸ್ಥಾನ ಮಹಾವಿದ್ವಾನ್

|| ಶ್ರೀಃ ||

# ವಿಷಯಾನುಕ್ರಮಣಿಕೆ.



## ದ್ವಿತೀಯಾಷ್ಟಕ ದ್ವಿತೀಯಾಧ್ಯಾಯ

ಪುಟಸಂಖ್ಯೆ

ಪುಟಸಂಖ್ಯೆ



ವಿಷಯಾನುಕ್ರಮಣಿಕೆ ಸಮಾಪ್ತವು.



ಕೆ. ವೆಂಕಟಸುಬ್ಬಯ್ಯ, ಪ್ರಿಂಟರ್, ಶ್ರೀ ವಿನಾಯಕ್ ಪ್ರಿಂಟಿಂಗ್ ವರ್ಕ್ಸ್, ಮೈಸೂರು.



॥ ಶ್ರೀ ॥

॥ ಶ್ರೀ ಮಹಾಗಣಾಧಿಪತಯೇ ನಮಃ ॥

ವಾಗೀಶಾದ್ಯಾಃ ಸುಮನಸಃ ಸರ್ವಾರ್ಥಾನಾಮುಪಕ್ರಮೇ ।
ಯಂ ನತ್ವಾ ಕೃತಕೃತ್ಯಾಃ ಸ್ಯುಸ್ತಂ ನಮಾಮಿ ಗಜಾನನಂ ॥
ಯಸ್ಯ ನಿಶ್ವಸಿತಂ ವೇದಾ ಯೋ ವೇದೇಭ್ಯೋಽಖಿಲಂ ಜಗತ್ ।
ನಿರ್ಮಮೇ ತಮಹಂ ವಂದೇ ವಿದ್ಯಾತೀರ್ಥಮಹೇಶ್ವರಂ ॥
ವೇದಃ ಶಿವಃ ಶಿವೋ ವೇದೋ ವೇದಾಧ್ಯಾಯೀ ಸದಾಶಿವಃ ।
ತಸ್ಮಾತ್ಸರ್ವಪ್ರಯತ್ನೇನ ವೇದಮೇವ ಸದಾ ಜಪೇತ್ ॥

## ಸಾಯಣಭಾಷ್ಯಸಹಿತಾ

# ಋಗ್ವೇದ ಸಂಹಿತಾ

## ಭಾಗ—೧೧

## ॥ ದ್ವಿತಿಯಾಷ್ಟಕೇ ದ್ವಿತೀಯೋಽಧ್ಯಾಯಃ ॥

## ಎರಡನೆಯ ಅಷ್ಟಕದಲ್ಲಿ ಎರಡನೆಯ ಅಧ್ಯಾಯವು

## ಪ್ರಥಮಮಂಡಲದಲ್ಲಿ ನೂರಮೂವತ್ತೇಳನೆಯ ಸೂಕ್ತವು

। ಸಾಯಣಭಾಷ್ಯಂ ॥

ಅಥ ದ್ವಿತೀಯಾಷ್ಟಕೇ ದ್ವಿತೀಯೋಽಧ್ಯಾಯ ಆರಭ್ಯತೇ । ಸುಷುಮಾ ಯಾತಮಿತಿ ತೃಚಾತ್ಮಕಂ ಚತುರ್ಥಂ ಸೂಕ್ತಂ ಪಾರುಚ್ಛೇಪಮತಿಶಾಕ್ವರಂ ಷಷ್ಟ್ಯಕ್ಷರೋಪೇತತ್ವಾತ್ । ಪೂರ್ವತ್ರ ತುಶಬ್ದಪ್ರಯೋಗಾನ್ಮೈತ್ರಾವರುಣಂ । ಅತ್ರಾತ್ಯಷ್ಟಿಪರಿಭಾಷಾ ನಾಶ್ರೀಯತೇಽತಿಶಾಕ್ವರಮಿತಿ ವಿಶೇಷಿತತ್ವಾತ್ । ಅತ್ರಾನುಕ್ರಮಣಿಕಾ । ಸುಷುಮ ತೃಚಮತಿಶಾಕ್ವರಮಿತಿ ॥ ದಶರಾತ್ರಸ್ಯ ಷಷ್ಠೇಽಹನಿ ಪ್ರಾತಃಸವನೇ ಪ್ರಉಗ-

**ಶಸ್ತ್ರ ಇದಂ ಸೂಕ್ತಂ ಮಿತ್ರಾವರುಣದೇವತ್ಯಂ ತೃತೀಯತೃಚಂ । ಸೂತ್ರಿತಂ ಚ । ಸ್ತೀರ್ಣಂ ಬರ್ಹಿರಿತಿ ತೃಚೌ ಸುಷುಮಾ ಯಾತಮದ್ರಿಭಿಃ । ಆ. ೮-೧ । ಇತಿ ॥ ತಥಾಸ್ಮಿನ್ನೇವ ಮೈತ್ರಾವರುಣಸ್ಯ ಪ್ರಸ್ಥಿತಯಾಜ್ಯಾಯಾಃ ಪುರಸ್ತಾದಾದ್ಯಾ ಪ್ರಕ್ಷೇಪಣೀಯಾ । ಷಷ್ಠಸ್ಯ ಪ್ರಾತಃಸವನ ಇತಿ ಖಂಡೇ ಸೂತ್ರಿತಂ । ಸುಷುಮಾ ಯಾತಮದ್ರಿಭಿಃ । ಆ. ೮-೧ । ಇತಿ ॥**

ಅನುವಾದವು—ದ್ವಿತೀಯಾಷ್ಟಕದಲ್ಲಿ ಪ್ರಥಮಾಧ್ಯಾಯವು ಮುಗಿದಿರುವುದರಿಂದ ಈಗ ಎರಡನೆಯ ಅಧ್ಯಾಯವನ್ನು ಪ್ರಾರಂಭಿಸುವೆವು. **ಸುಷುಮಾ ಯಾತಂ** ಎಂಬ ಈ ಸೂಕ್ತವು ಪ್ರಥಮ ಮಂಡಲದ ಇಪ್ಪತ್ತನೆಯ ಅನುವಾಕದಲ್ಲಿ ನಾಲ್ಕನೆಯ ಸೂಕ್ತವು. ಇದರಲ್ಲಿ ಮೂರು ಋಕ್ಕುಗಳಿರುವವು. ಈ ಸೂಕ್ತಕ್ಕೆ ದಿವೋದಾಸನ ಪುತ್ರನಾದ ಪರುಚ್ಛೇಪನೆಂಬುವನು ಋಷಿಯು. ಒಂದೊಂದು ಋಕ್ಕಿನಲ್ಲಿ ಅರವತ್ತು ಅಕ್ಷರಗಳಿರುವುದರಿಂದ ಈ ಸೂಕ್ತದ ಋಕ್ಕುಗಳು ಅತಿಶಕ್ವರೀಛಂದಸ್ಸಿನವು. ಅನುಕ್ರಮಣಿಕೆಯಲ್ಲಿ ಈ ಸೂಕ್ತಕ್ಕೆ ದೇವತೆಯನ್ನು ಹೇಳುವಾಗ ತು ಎಂಬ ಶಬ್ದಪ್ರಯೋಗವಿರುವುದರಿಂದ ಈ ಸೂಕ್ತಕ್ಕೂ ಹಿಂದಿನ ಸೂಕ್ತದಂತೆ ಮಿತ್ರಾವರುಣರೇ ದೇವತೆಯೆಂದು ತಿಳಿಯಬೇಕು. ಅನುಕ್ರಮಣಿಕೆಯಲ್ಲಿ—**ಸುಷುಮಾ ತೃಚಮತಿಶಾಕ್ವರಂ** ಎಂದು ಹೇಳಿರುವುದರಿಂದ ಮೂರು ಋಕ್ಕುಗಳುಳ್ಳ ಈ ಸೂಕ್ತವು ಅತಿಶಕ್ವರೀಛಂದಸ್ಕವು ಎಂದು ತಿಳಿಯಬೇಕು. **ದಶರಾತ್ರವೆಂಬ** ಹತ್ತುದಿನಗಳು ಮಾಡತಕ್ಕ ಯಾಗವಿಶೇಷದಲ್ಲಿ ಆರನೆಯದಿನ ಪ್ರಾತಃಸವನದಲ್ಲಿ ಪ್ರಉಗಶಸ್ತ್ರಮಂತ್ರಗಳನ್ನು ಪಠಿಸುವಾಗ ಮಿತ್ರಾವರುಣದೇವತಾಕವಾದ ತೃತೀಯ ತೃಚದ (ತೃಚವೆಂದರೆ ಮೂರು ಋಕ್ಕುಗಳು) ಪಠನಕ್ಕಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನ ಶ್ರೌತಸೂತ್ರದ—**ಸ್ತೀರ್ಣಂ ಬರ್ಹಿರಿತಿ ತೃಚೌ ಸುಷುಮಾಯಾತಮದ್ರಿಭಿಃ** ಎಂಬ ಸೂತ್ರದಿಂದ ವಿವೃತವಾಗಿರುವುದು (ಆ. ೮. ೧) ಮತ್ತು ಈ ಯಾಗದಲ್ಲಿಯೇ ಮೈತ್ರಾವರುಣಸಂಬಂಧವಾದ ಪ್ರಸ್ಥಿತಯಾಜ್ಯಾಮಂತ್ರಗಳಿಗಾಗಿ ಈ ಸೂಕ್ತದ ಮೊದಲನೆಯ ಋಕ್ಕಿನ ವಿನಿಯೋಗವಿರುವುದೆಂದು ಆಶ್ವಲಾಯನ ಶ್ರೌತಸೂತ್ರದ **ಷಷ್ಠಸ್ಯ ಪ್ರಾತಸ್ಸವನೇ** ಎಂಬ ಖಂಡದ **ಸುಷುಮಾ ಯಾತಮದ್ರಿಭಿಃ** ಎಂಬ ಸೂತ್ರದಿಂದ ವಿಸ್ತೃತವಾಗಿರುವುದು (ಆ. ೮-೧).

॥ ಓಂ ॥

## ಸೂಕ್ತ—೧೩೭

॥ ಮಂಡಲ—೧ ॥ ಅನುವಾಕ—೨೦ ॥ ಸೂಕ್ತ—೧೩೭ ॥

॥ ಅಷ್ಟಕ— ೨ ॥ ಅಧ್ಯಾಯ— ೨ ॥ ವರ್ಗ— ೧ ॥

ಸೂಕ್ತದಲ್ಲಿರುವ ಋಕ್ಸಂಖ್ಯೆ-೩ ॥

॥ ಋಷಿಃ—ಪರುಚ್ಛೇಪೋ ದೈವೋದಾಸಿಃ ॥

॥ ದೇವತಾ—ಮಿತ್ರಾವರುಣೌ ॥

॥ ಛಂದಃ—ಅತಿಶಕ್ವರೀ ॥

ಸಂಹಿತಾಪಾಠಃ

ಸುಷುಮಾ ಯಾತಮದ್ರಿಭಿರ್ಗೋಶ್ರೀತಾ ಮತ್ಸರಾ ಇಮೇ ಸೋಮಾಸೋ ಮತ್ಸರಾ ಇಮೇ ।

ಆ ರಾಜಾನಾ ದಿವಿಸ್ಪೃಶಾಸ್ಮತ್ರಾ ಗಂತಮುಪ ನಃ ।

ಇಮೇ ವಾಂ ಮಿತ್ರಾವರುಣಾ ಗವಾಶಿರಃ ಸೋಮಾಃ ಶುಕ್ರಾ ಗವಾಶಿರಃ ॥ ೧ ॥

ಪದಪಾಠಃ

ಸುಸುಮ । ಆ । ಯಾತಂ । ಅದ್ರಿಽಭಿಃ । ಗೋಽಶ್ರೀತಾಃ । ಮತ್ಸರಾಃ । ಇಮೇ । ಸೋಮಾಸಃ । ಮತ್ಸರಾಃ । ಇಮೇ ।

ಆ । ರಾಜಾನಾ । ದಿವಿಽಸ್ಪೃಶಾ । ಅಸ್ಮಽತ್ರಾ । ಗಂತಂ । ಉಪ । ನಃ ।

ಇಮೇ । ವಾಂ । ಮಿತ್ರಾವರುಣಾ । ಗೋಽಆಶಿರಃ । ಸೋಮಾಃ । ಶುಕ್ರಾಃ । ಗೋಽಆಶಿರಃ ॥ ೧ ॥

ಸಾಯಣಭಾಷ್ಯಂ

ಹೇ ಮಿತ್ರಾವರುಣೌ ಆ ಯಾತಂ । ಅಸ್ಮದ್ಯಜ್ಞಂ ಪ್ರತ್ಯಾಗಚ್ಛತಂ । ಆಗಮನಾಯ ಕಿಮಸ್ತೀತಿ ಚೇತ್ ತತ್ರಾಹ । ಅದ್ರಿಭಿರಭಿಷವಸಾಧನೈರ್ಗ್ರಾವಭಿಃ ಸುಷುಮ । ಸೋಮಂ ಸುತವಂತೋ ವಯಂ ॥ ಸುನೋತೇರ್ಲಿಟಿ ರೂಪಂ ॥ ಅತೋ ಗೋಶ್ರೀತಾಃ । ವಿಕಾರೇ ಪ್ರಕೃತಿಶಬ್ದಃ । ಪಯೋಭಿರ್ಮಿಶ್ರಿತಾಃ । ತಸ್ಮಾನ್ಮೈತ್ರಾವರುಣಂ ಪಯಸಾ ಶ್ರೀಣಾತೀತಿ ಹಿ ಬ್ರಾಹ್ಮಣಂ । ಮತ್ಸರಾಸ್ತೃಪ್ತಿಹೇತವಃ ಸೋಮಾಃ । ಮತ್ಸರಃ ಸೋಮೋ ಮಂದತೇಸ್ತೃಪ್ತಿಕರ್ಮಣ ಇತಿ ಯಾಸ್ಕಃ । ನಿ. ೨-೫ । ಇಮೇ । ಪುರತೋ ಗೃಹೀತಾ ವರ್ತಂತೇ । ಅತ ಆ ಯಾತಂ । ಪುನಸ್ತ ಏವ ವಿಶೇಷ್ಯಂತೇ । ಇಮೇ ಸೋಮಾಸೋ ಮತ್ಸರಾ ಮದಹೇತವೋ ಮಾದನೇ ಮಾತ್ಸರ್ಯವಂತೋ ವೇತರಯಜ್ಞಗತಸೋಮೇಭ್ಯಃ ಸೋಮಾಃ । ಕೀದೃಶೌ ಯುವಾಂ । ರಾಜಾನಾ ರಾಜನಶೀಲೌ । ದಿವಿಸ್ಪೃಶಾ ದ್ಯುಲೋಕವಾಸಿನೌ ॥ ಹೃದ್ದ್ಯುಭ್ಯಾಂ ಜೇರುಪಸಂಖ್ಯಾನಂ । ಪಾ. ೬-೩-೯-೧ । ಇತ್ಯಲುಕ್ ॥ ಈದೃಶೌ ಯುವಾಮಸ್ಮತ್ರಾಸ್ಮಾಸು ಮಧ್ಯೇಽಸ್ಮತ್ಪಾಲಕೌ ವಾ ಯುವಾಂ ನೋಽಸ್ಮತ್ಸಂಬಂಧಿನಂ ಯಜ್ಞಮುಪ ಗಂತಂ । ಆಗಚ್ಛತಂ । ಕಿಂಚ ಹೇ ಮಿತ್ರಾವರುಣೈತನ್ನಾಮಾನೌ ದೇವೌ ವಾಂ ಯುವಯೋರರ್ಥಾಯೇಮೇ ಸೋಮಾ ಗವಾಶಿರಃ । ಪೂರ್ವವದ್ವಿಕಾರೇ ಪ್ರಕೃತಿಶಬ್ದಃ । ಗೋಭಿಃ ಕ್ಷೀರೈರಾಶಿರೋ ಮಿಶ್ರಿತಾಃ ಸಂಜಾತಾಃ । ಕಿಂಚ ಗವಾಶಿರೋ ಗೋಭಿರುದಕೇಭಿರ್ಮಿಶ್ರಿತಾಃ ಸಂಜಾತಾಃ । ಯದ್ವಾ । ಗೋಭಿಃ ಸ್ತುತಿಲಕ್ಷಣೈರ್ಮಂತ್ರೈರ್ಮಿಶ್ರಿತಾಃ । ಅತ ಏವ ಶುಕ್ರಾ ದೀಪ್ತಾಃ ಸಂಜಾತಾಃ । ಆಶಿರಮವ ನಯತಿ ಸಶುಕ್ರತ್ವಾಯ । ತೈ. ಸಂ. ೬-೧-೬-೫ । ಇತಿ ಶ್ರುತೇಃ ॥

ಪ್ರತಿಪದಾರ್ಥ

(ಎಲೈ ಮಿತ್ರಾವರುಣರೇ) । ಆ ಯಾತಂ—(ನಮ್ಮ ಯಜ್ಞಕ್ಕೆ) ದಯಮಾಡಿರಿ । ಅದ್ರಿಭಿಃ—(ಹಿಂಡುವ ಸಾಧನವಾದ) ಕಲ್ಲುಗಳಿಂದ । ಸುಷುಮ—(ನಾವು ಸೋಮರಸವನ್ನು) ಹಿಂಡಿದ್ದೇವೆ । (ಆದುದರಿಂದ)

**ಗೋಶ್ರೀತಾಃ**—ಗೋವುಗಳ ಹಾಲಿನಿಂದ ಮಿಶ್ರಿತವಾದುವೂ । **ಮತ್ಸರಾಃ**—ತೃಪ್ತಿದಾಯಕವಾದವೂ ಆದ ಸೋಮರಸಗಳು । **ಇಮೇ**—ಇಗೋ, ಇಲ್ಲಿ ಸಿದ್ಧವಾಗಿವೆ । **ಇಮೇ ಸೋಮಾಸಃ**—ಈ ಸೋಮರಸಗಳು । **ಮತ್ಸರಾಃ**—(ಇತರ ಯಜ್ಞಗಳ ಸೋಮರಸಗಳೊಂದಿಗೆ) ಸ್ಪರ್ಧಿಸಿ ಉತ್ಕೃಷ್ಟವಾಗಿವೆ । **ರಾಜಾನಾ**—ಪ್ರಕಾಶಮಾನರೂ । **ದಿವಿಸ್ಪೃಶಾ**—ದ್ಯುಲೋಕವಾಸಿಗಳೂ । **ಅಸ್ಮತ್ರಾ**—ನಮ್ಮ ಪಾಲಕರೂ ಆದ ನೀವುಗಳು । **ನಃ**—ನಮ್ಮ (ಯಜ್ಞಕ್ಕೆ) । **ಆ ಉಪ ಗಂತಂ**—ಸಮೀಪಿಸಿ ಬನ್ನಿರಿ । **ಮಿತ್ರಾವರುಣಾ**—ಎಲೈ ಮಿತ್ರಾವರುಣರೇ । **ವಾಂ**—ನಿಮಗಾಗಿ । **ಇಮೇ ಸೋಮಾಃ**—ಈ ಸೋಮರಸಗಳು । **ಗವಾಶಿರಃ**—ಕ್ಷೀರದಿಂದ ಮಿಶ್ರಿತವಾದವೂ (ಮತ್ತು) । **ಗವಾಶಿರಃ**—ತೀರ್ಥೋದಕಗಳಿಂದ ಮಿಶ್ರಿತವಾದವೂ । **ಶುಕ್ರಾಃ**—ಪ್ರಕಾಶಮಾನವಾದವೂ ಅಥವಾ ಶುದ್ಧವಾದವೂ ಆಗಿವೆ.

ಭಾವಾರ್ಥ

ಎಲೈ ಮಿತ್ರಾವರುಣರೇ, ನಮ್ಮ ಯಜ್ಞಕ್ಕೆ ದಯಮಾಡಿರಿ. ನಿಮಗಾಗಿ ನಾವು ಹಿಂಡುವ ಕಲ್ಲುಗಳಿಂದ ಸೋಮರಸವನ್ನು ಹಿಂಡಿ ಸಿದ್ಧಮಾಡಿದ್ದೇವೆ. ಗೋವುಗಳ ಹಾಲಿನಿಂದ ಮಿಶ್ರಿತವಾದವೂ ಹರ್ಷದಾಯಕವೂ ಆದ ಸೋಮರಸಗಳು ಇಗೋ ನಿಮಗಾಗಿ ಇಲ್ಲಿ ಸಿದ್ಧವಾಗಿವೆ. ಇವು ಇತರ ಯಜ್ಞಗಳ ಸೋಮರಸಗಳೊಂದಿಗೆ ಸ್ಪರ್ಧಿಸಿ ಉತ್ಕೃಷ್ಟವಾಗಿವೆ. ಪ್ರಕಾಶಮಾನರೂ, ದ್ಯುಲೋಕನಿವಾಸಿಗಳೂ, ನಮ್ಮ ಪಾಲಕರೂ ಆದ ನೀವು ನಮ್ಮ ಯಜ್ಞಕ್ಕೆ ಬನ್ನಿರಿ. ಮಿತ್ರಾವರುಣರೇ, ನಿಮಗಾಗಿ ಈ ಸೋಮರಸಗಳು ಕ್ಷೀರದಿಂದ ಮಿಶ್ರಿತವಾದವೂ ತೀರ್ಥೋದಕಗಳಿಂದ ಮಿಶ್ರಿತವಾದವೂ ಮತ್ತು ಶುದ್ಧವಾಗಿ ಪ್ರಕಾಶಮಾನವಾದವೂ ಆಗಿವೆ.

English Translation

Come, (Mitra and Varuna, to our sacrifice); where we express (the Soma juice) with stones : these juices mixed with milk are exhilarating ; these (juices) are exhilarating : come to us, royal divinities, dwellers in heaven, and our protectors ; these juices are mixed with milk for you, Mitra and Varuna ; they are pure, mixed with milk.

ವಿಶೇಷವಿಷಯಗಳು

**ಅದ್ರಿಭಿಃ—ಅಭಿಷವಸಾಧನೈರ್ಗ್ರಾವಭಿಃ**—ಸೋಮರಸವನ್ನು ಹಿಂಡಲು ಸಾಧನವಾದ ಕಲ್ಲುಗಳಿಂದ ಎಂದರ್ಥ. **ಅದ್ರಿ, ಗ್ರಾವ** ಎಂಬ ಎರಡು ಪದಗಳಿಗೂ ರೂಢಿಯಲ್ಲಿ **ಕಲ್ಲು** ಎಂಬ ಸಾಮಾನ್ಯವಾದ ಅರ್ಥವಿದ್ದರೂ ಸಹ ಸೋಮರಸವನ್ನು ಹಿಂಡಲು ಸಾಧನವಾದ **ಅದ್ರಿಗೂ** ಗ್ರಾವಕ್ಕೂ ಸ್ವರೂಪದಲ್ಲೇ ವ್ಯತ್ಯಾಸವಿದ್ದಿರಬೇಕೆಂದು ಅವುಗಳ ವರ್ಣನೆಗಳಿಂದಲೂ ವಿಶೇಷಣಗಳಿಂದಲೂ ಹೇಳಬಹುದು. ಸಾಧಾರಣವಾಗಿ **ಅದ್ರಿ**ಯೆಂಬ ಪದವು ಬಂದಾಗಲೆಲ್ಲಾ ಸಾಯಣರು ಆ ಪದಕ್ಕೆ **ಗ್ರಾವ** ಎಂದೂ, **ಗ್ರಾವ** ಶಬ್ದವು ಬಂದಾಗಲೆಲ್ಲಾ ಪಾಷಾಣವೆಂದೂ ಅರ್ಥ ಮಾಡಿದ್ದಾರೆ. ಆದರೆ ಅವುಗಳ ವ್ಯತ್ಯಾಸವನ್ನು ತೋರಿಸುವುದಕ್ಕೆ ಈ ಅರ್ಥವ್ಯತ್ಯಾಸವೇ ಆಧಾರವಲ್ಲ. ಅವುಗಳ ಸ್ವರೂಪವನ್ನು ಹೇಳುವ ವಿಶೇಷಣಗಳಿಂದಲೂ, ಉಪಮಾನಗಳಿಂದಲೂ, ಅವುಗಳು ಸೋಮರಸವನ್ನು ಹಿಂಡುವಾಗ ಮಾಡುವ ಶಬ್ದಸೂಚಕವಾದ ಪದಗಳಿಂದಲೂ ಈ ಎರಡು ಸಾಧನಗಳೂ ಬೇರೆಬೇರೆಯೆಂದು ತಿಳಿಯುತ್ತದೆ.

ಬಬ್ರುಹಾಣ (೫-೯೧-೧೨); ಪರ್ವತ (೧೦-೯೪-೧); ಅಶ್ರಮಣ, ಅಶ್ಲಥಿತ, ಅಮೃತ್ಯು, ಅನಾತುರ, ಅಜರ, ಅಮವಿಷ್ಣು(೧೦-೯೪-೧೧), ಧ್ರುವ, ಕ್ಷೇಮಕಾಮ (೧೦-೯೪-೧೨) ಇವೆಲ್ಲವೂ **ಅದ್ರಿಯ** ವೈಶಿಷ್ಟ್ಯವನ್ನು ತೋರಿಸುವ ವಿಶೇಷಣಗಳು. ಹೀಗೆಯೇ ಪೃಥು, ಪೃಥುಬುಧ್ನ, ಇತ್ಯಾದಿ ವಿಶೇಷಣಗಳು **ಗ್ರಾವದ** ವೈಶಿಷ್ಟ್ಯವನ್ನು ಮಾತ್ರ ತೋರಿಸತಕ್ಕವು. **ಗ್ರಾವವನ್ನು** ಸಾಧಾರಣವಾಗಿ ವೃಷಭಕ್ಕೂ **ಅದ್ರಿಯನ್ನು** ಅಶ್ವಕ್ಕೂ ಹೋಲಿಸಿದೆ.

**ಅದ್ರಿಶಬ್ದವು ಮೇಘ**ನಾಮಗಳಲ್ಲಿಯೂ **ವಜ್ರ**ನಾಮಗಳಲ್ಲಿಯೂ ಪಠಿತವಾಗಿರುವುದಾಗಿ ನಿರುಕ್ತದ ನಿರ್ವಚನಗಳೊಂದಿಗೆ ಹಿಂದೆಯೇ ಹೇಳಿದೆ. **ಶುಷ್ಮ ಇಯರ್ತಿ ಪ್ರಭೃತೋ ಮೇ ಅದ್ರಿಃ** (೧-೧೬೫-೪) ಇತ್ಯಾದಿ ಋಕ್ಕುಗಳಲ್ಲಿ ಶತ್ರುಭಕ್ಷಕವಾದ ವಜ್ರಾಯುಧವೆಂದೂ, **ಉತ ಪವ್ಯಾ ರಥಾನಾಮದ್ರಿಂ** (೫-೫೨-೯) ಇತ್ಯಾದಿ ಋಕ್ಕುಗಳಲ್ಲಿ **ಮೇಘ** ಅಥವಾ **ಗಿರಿ** ಎಂದೂ ಅರ್ಥವಾಗುತ್ತದೆ.

**ಗೋಶ್ರೀತಾಃ—ಪಯೋಭಿರ್ಮಿಶ್ರಿತಾಃ।** ಹಾಲಿನಿಂದ ಮಿಶ್ರಿತವಾದ ಸೋಮರಸ. **ತಸ್ಮಾನ್ಮೈತ್ರಾವರುಣಂ ಪಯಸಾ ಶ್ರೀಣಾತಿ ।** (ತೈ. ಸಂ. ೬-೪-೮-೧) ಇತ್ಯಾದಿವಾಕ್ಯಗಳು ಮಿತ್ರಾವರುಣರಿಗೆ ಅರ್ಪಿಸತಕ್ಕ ಸೋಮರಸಕ್ಕೆ ಪಯಸ್ಸನ್ನು ಮಿಶ್ರಮಾಡುವುದು ಶಾಸ್ತ್ರೀಯವಾದ ವಿಧಿಯೆಂದು ಹೇಳುತ್ತವೆ.

ಅಹೋರಾತ್ರಾಭಿಮಾನಿದೇವತೆಗಳಾದ ಮಿತ್ರಾವರುಣರಿಗೆ ಪಯೋಮಿಶ್ರಿತವಾದ ಸೋಮರಸದ ಅರ್ಪಣೆಯನ್ನು ವಿಧಿಸಿದ ಸಂದರ್ಭವೂ ಈ ತತ್ಸಂಬಂಧವಾದ ದೇವತೆಗಳ ವಿವರಣೆಯೂ ತೈತ್ತರೀಯಸಂಹಿತೆಯಲ್ಲಿ ಉಕ್ತವಾಗಿದೆ.

> **ಮಿತ್ರಂ ದೇವಾ ಅಬ್ರುವನ್ತ್ಸೋಮಗ್ಂ ರಾಜಾನಗ್ಂ ಹನಾಮೇತಿ ಸೋಽಬ್ರವೀನ್ನಾಹಗ್ಂ ಸರ್ವಸ್ಯ ವಾ ಅಹಂ ಮಿತ್ರಮಸ್ಮೀತಿ ತಮಬ್ರುವನ್ ಹನಾಮ್ಯೇವೇತಿ ಸೋಽಬ್ರವೀದ್ವರಂ ವೃಣೈ ಪಯಸೈವ ಮೇ ಸೋಮಗ್ಂ ಶ್ರೀಣನ್ನಿತಿ ತಸ್ಮಾನ್ಮೈತ್ರಾವರುಣಂ ಪಯಸಾ ಶ್ರೀಣಂತಿ ।**
> (ತೈ. ಸಂ. ೬-೪-೮)

ದೇವತೆಗಳು **ಮಿತ್ರನನ್ನು** ಕುರಿತು ನಾವು ಸೋಮನನ್ನು ಸಂಹಾರಮಾಡೋಣ ಎಂದು ಹೇಳಲು **ಮಿತ್ರನು** ತಾನು ಎಲ್ಲರಿಗೂ ಮಿತ್ರನೆಂದೂ, ಆದುದರಿಂದ ತಾನು ಮಾತ್ರ ಒಪ್ಪುವುದಿಲ್ಲವೆಂದೂ ಹೇಳಿದನು ಆದರೂ ದೇವತೆಗಳು ಅವನನ್ನು ಹನನಮಾಡಬೇಕೆಂದಾಗ **ಮಿತ್ರನು** ಸೋಮಕ್ಕೆ ಪಯಸ್ಸನ್ನು ಮಿಶ್ರಣಮಾಡಿ ಅರ್ಪಿಸಬೇಕೆಂದು ವರವನ್ನು ಕೇಳಿಕೊಂಡಾಗ ದೇವತೆಗಳು **ಮಿತ್ರಾವರುಣರನ್ನು** ಉದ್ದೇಶಿಸಿ ಅರ್ಪಿಸುವ ಸೋಮಕ್ಕೆ ಕ್ಷೀರವನ್ನು ಮಿಶ್ರಮಾಡಿದರು ಎಂಬ ಸಂದರ್ಭವನ್ನು ಹೇಳಿದೆ.

**ಗವಾಶಿರಃ—ಸೋಮರಸಕ್ಕೆ** ಸೇರಿಸತಕ್ಕ **ಆಶಿರದ್ರವ್ಯಗಳ** ವಿವರವನ್ನೂ ಪ್ರಯೋಜನವನ್ನೂ **ಋಗ್ವೇದ ಸಂಹಿತೆಯ** ೧ನೇ ಭಾಗದ ೬೭೬ ನೇ ಪೇಜಿನಲ್ಲಿಯೂ ೨ನೇ ಭಾಗದ ೧೭೨ರಿಂದ ೧೭೪ನೇ ಪೇಜುಗಳಲ್ಲಿಯೂ ವಿಸ್ತಾರವಾಗಿ ಹೇಳಿದೆ. ಈ ಋಕ್ಕಿನಲ್ಲಿ ಈ ಪದವು ದ್ವಿರುಕ್ತವಾಗಿದೆ. ಮೊದಲನೆಯ ಪದಕ್ಕೆ **ಗೋಭಿಃ ಕ್ಷೀರೈಃ** ಮಿಶ್ರಿತಾಃ ಎಂದೂ, ಎರಡನೆಯ ಪದಕ್ಕೆ **ಗೋಭಿಃ ಉದಕೈಃ** ಮಿಶ್ರಿತಾಃ, ಯದ್ವಾ, ಸ್ತುತಿಲಕ್ಷಣೈರ್ಮಂತ್ರೈಃ ಎಂದು ಸಾಯಣರು ಅರ್ಥಮಾಡಿದ್ದಾರೆ.

**ಮತ್ಸರಾಃ**—ಈ ಪದವೂ ದ್ವಿರುಕ್ತವಾಗಿದೆ. **ಮದಹೇತು**ವೆಂದು ಒಂದು ಸಲವೂ, **ಮಾತ್ಸರ್ಯವಂತಃ** ಎಂದು ಇನ್ನೊಂದು ಸಲವೂ ಅರ್ಥಮಾಡಿದ್ದಾರೆ. ನಿರುಕ್ತಕಾರರೂ ಸಹ ಈ ಪದಕ್ಕೆ ಈ ಎರಡು ಅರ್ಥಗಳನ್ನು ಹೇಳಿದ್ದಾರೆ. **ಮತ್ಸರಃ ಸೋಮೋ ಮಂದತೇಸ್ತೃಪ್ತಿಕರ್ಮಣಃ** (ನಿ. ೨-೫) ತೃಪ್ತಿಯನ್ನುಂಟುಮಾಡು ಎಂಬರ್ಥವನ್ನು ಕೊಡುವ **ಮಂದ್** ಧಾತುವಿನಿಂದ ನಿಷ್ಪನ್ನವಾಗಿ ಸೋಮರಸಕ್ಕೆ ಪರ್ಯಾಯವಾಗಿ ಉಪಯೋಗಿಸಲ್ಪಟ್ಟಿದೆಯೆಂದೂ, **ಮತ್ಸರ ಇತಿ ಲೋಭನಾಮ** । ಅತ್ಯಾಸೆಯನ್ನೂ ಅಸಮಾಧಾನಿಕೆಯನ್ನೂ ತೋರಿಸತಕ್ಕದ್ದಾದುದರಿಂದ **ಮತ್ಸರ**ವೆಂಬ ಹೆಸರು ಎಂದೂ ಈ ಪದಕ್ಕೆ ನಿರುಕ್ತಕಾರರ ನಿರ್ವಚನವಿದೆ. ಪ್ರಕೃತವಾದ ಋಕ್ಕಿನಲ್ಲಿ ಎರಡನೆಯ **ಮತ್ಸರ** ಶಬ್ದಕ್ಕೆ ಇತರ ಯಜ್ಞಗಳ ಸೋಮರಸಗಳೊಂದಿಗೆ ಸ್ಪರ್ಧಿಸಿ ಉತ್ಕೃಷ್ಟವಾಗಿವೆಯೆಂದರ್ಥ.

ವ್ಯಾಕರಣಪ್ರಕ್ರಿಯಾ

**ಸುಸುಮ**—ಷುಞ್ ಅಭಿಷವೇ. ಧಾತು. ಲಿಟ್ ಪ್ರಥಮಪುರುಷಬಹುವಚನದಲ್ಲಿ **ಪರಸ್ಮೈಪದಾನಾಂ** (ಪಾ. ಸೂ. ೩-೪-೮೨) ಎಂಬುದರಿಂದ ಮಸಿಗೆ ಮಾದೇಶ. **ಧಾತ್ವಾದೇಃಷಃಸಃ** ಪಾ. ಸೂ. (೬-೧-೬೪) ಎಂಬುದರಿಂದ ಧಾತ್ವಾದಿಗೆ ಸತ್ವ. **ಲಿಟಿ ಧಾತೋರನಭ್ಯಾಸಸ್ಯ** ಎಂಬುದರಿಂದ ಧಾತುವಿಗೆ ದ್ವಿತ್ವ. **ಅಸಂಯೋಗಾಲ್ಲಿಟ್ ಕಿತ್** (ಪಾ. ಸೂ. ೧-೨-೫) ಎಂಬುದರಿಂದ ಪ್ರತ್ಯಯಕ್ಕೆ ಕಿತ್ವಾತಿದೇಶವಿರುವುದರಿಂದ ಅದನ್ನು ನಿಮಿತ್ತೀಕರಿಸಿ ಗುಣ ಬರುವುದಿಲ್ಲ. ಸುಸುಮ ಎಂದು ರೂಪವಾಗುತ್ತದೆ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಯಾತಮ್**—ಯಾ ಪ್ರಾಪಣೇ. ಧಾತು. ಲೋಟ್ ಮಧ್ಯಮಪುರುಷದ್ವಿವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಗೋಶ್ರೀತಾಃ**—ಗೋಭಿಃ ಶ್ರೀತಾಃ ಗೋಶ್ರೀತಾಃ ಶ್ರೀಞ್ ಪಾಕೇ ಧಾತು. **ನಿಷ್ಠಾ** (ಪಾ. ಸೂ. ೩-೨-೧೦೨) ಎಂಬುದರಿಂದ ಕರ್ಮಣಿಯಲ್ಲಿ ಕ್ತ ಪ್ರತ್ಯಯ. **ತೃತೀಯಾ ಕರ್ಮಣಿ** (ಪಾ. ಸೂ. ೬-೨-೪೮) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಮತ್ಸರಾಃ**—ಮದ ತೃಪ್ತಿಯೋಗೇ ಧಾತು. **ಚಿತ್** ಎಂದು ಅನುವೃತ್ತವಾಗುವಾಗ **ಕೃಧೂಮದಿಭ್ಯಃ ಕಿತ್** (ಉ. ಸೂ. ೩-೩೫೩) ಎಂಬುದರಿಂದ ಸರ ಪ್ರತ್ಯಯ. **ತಿತುತ್ರತಥಸಿಸುಸರಕಸೇಷು ಚ** (ಪಾ. ಸೂ. ೭-೨-೯) ಎಂಬುದರಿಂದ ಪ್ರತ್ಯಯಕ್ಕೆ ಇಡಾಗಮ ಪ್ರತಿಷೇಧ ಬರುತ್ತದೆ. ಪ್ರತ್ಯಯಕ್ಕೆ ಚಿತ್ವಾತಿದೇಶವಿರುವುದರಿಂದ **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಸೋಮಾಸಃ**—ಸೋಮಶಬ್ದಕ್ಕೆ ಜಸ್ ಪರವಾದಾಗ **ಆಜ್ಜಸೇರಸುಕ್** (ಪಾ. ಸೂ. ೭-೧-೫೦) ಎಂಬುದರಿಂದ ಅದಕ್ಕೆ ಅಸುಕಾಗಮ.

ರಾಜಾನಾ—ರಾಜೃ ದೀಪ್ತೌ ಧಾತು. **ಕನಿನ್ಯು** (ಉ. ಸೂ. ೧-೧೫೪) ಎಂಬುದರಿಂದ ಕನಿನ್ ಪ್ರತ್ಯಯ. ಸಂಬೋಧನಾದ್ವಿವಚನ ಪರವಾದಾಗ **ಸುಪಾಂ ಸುಲುಕ್** (ಪಾ. ಸೂ. ೭-೧-೩೯) ಎಂಬುದರಿಂದ ಅದಕ್ಕೆ ಆಕಾರಾದೇಶ. ಆಮಂತ್ರಿತನಿಘಾತಸ್ವರ ಬರುತ್ತದೆ.

ದಿವಿಸ್ಪೃಶಾ– ದಿವಿ ಸ್ಪೃಶತಃ ಇತಿ ದಿವಿಸ್ಪೃಶೌ. **ಸ್ಪೃಶೋಽನುದಕೇ ಕ್ವಿನ್** (ಪಾ. ಸೂ. ೩-೨-೫೮) ಎಂಬುದರಿಂದ ಕ್ವಿನ್ ಪ್ರತ್ಯಯ. **ಹೃದ್ಯುಭ್ಯಾಂ ಙೇರುಪಸಂಖ್ಯಾನಮ್** (ಪಾ. ಸೂ. ೬-೩-೯-೧) ಎಂಬುದರಿಂದ ಸಪ್ತಮಿಗೆ ಅಲುಕ್ ಬರುತ್ತದೆ. ಹಿಂದಿನಂತೆ ಸಂಬೋಧನದಲ್ಲಿ ಆಕಾರಾದೇಶ **ಆಮಂತ್ರಿತಸ್ಯ ಚ** (ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಅಸ್ಮತ್ರಾ**—ಅಸ್ಮದ್ ಶಬ್ದ. ಸಪ್ತಮ್ಯಂತದ ಮೇಲೆ ಇದಕ್ಕೆ **ದೇವಮನುಷ್ಯಪುರುಷಪುರು**—(ಪಾ. ಸೂ. ೫-೪-೫೬) ಎಂಬಲ್ಲಿ ಬಹುಲಗ್ರಹಣವಿರುವುದರಿಂದ ತತ್ಸಾಮರ್ಥ್ಯದಿಂದ ತ್ರಾ ಪ್ರತ್ಯಯ ಸ್ವಾರ್ಥದಲ್ಲಿ ಬರುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಗಂತಮ್**—ಗಮ್ಲೃ ಗತೌ ಧಾತು. ಲೋಟ್ ಮಧ್ಯಮಪುರುಷದ್ವಿವಚನದಲ್ಲಿ ಲಙ್ವದ್ಭಾವವಿರುವುದರಿಂದ ತಮಾದೇಶ. **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಲುಕ್. ಆದುದರಿಂದ ಛಾದೇಶ ಬರುವುದಿಲ್ಲ. ಧಾತುವಿನ ಮಕಾರಕ್ಕೆ ವ್ಯತ್ಯಯದಿಂದ ಅನುಸ್ವಾರ ಪರಸವರ್ಣ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ಅಥವಾ ಪ್ರತ್ಯಯಕ್ಕೆ **ತಪ್ತನಪ್ತನಥನಾಶ್ಚ** (ಪಾ. ಸೂ. ೭-೧-೪೫) ಎಂಬುದರಿಂದ ತಬಾದೇಶ. ಅಪಿತ್ ಸಾರ್ವಧಾತುಕಕ್ಕೆ ಙಿತ್ವ ಹೇಳಿರುವುದರಿಂದ ಇದಕ್ಕೆ ಙಿತ್ವ ಇಲ್ಲದಿರುವುದರಿಂದ ಅನುನಾಸಿಕ ಲೋಪ ಬರುವುದಿಲ್ಲ.

**ಮಿತ್ರಾವರುಣಾ**—ಮಿತ್ರಶ್ಚ ವರುಣಶ್ಚ ಮಿತ್ರಾವರುಣೌ. **ದೇವತಾದ್ವಂದ್ವೇಚ** (ಪಾ. ಸೂ. ೬-೩-೨೬) ಎಂಬುದರಿಂದ ಪೂರ್ವಪದಕ್ಕೆ ಆನಙಾದೇಶ. ದ್ವಿವಚನಕ್ಕೆ **ಸುಪಾಂ ಸುಲುಕ್** (ಪಾ. ಸೂ. ೭-೧-೩೯) ಎಂಬುದರಿಂದ ಆಕಾರಾದೇಶ. **ಆಮಂತ್ರಿತಸ್ಯಚ** (ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.



। ಸಂಹಿತಾಪಾಠಃ ।

ಇಮ ಆ ಯಾತಮಿಂದವಃ ಸೋಮಾಸೋ ದಧ್ಯಾಶಿರಃ ಸುತಾಸೋ ದಧ್ಯಾ-
ಶಿರಃ ।
ಉತ ವಾಮುಷಸೋ ಬುಧಿ ಸಾಕಂ ಸೂರ್ಯಸ್ಯ ರಶ್ಮಿಭಿಃ ।
ಸುತೋ ಮಿತ್ರಾಯ ವರುಣಾಯ ಪೀತಯೇ ಚಾರುರ್ಋತಾಯ
ಪೀತಯೇ ॥ ೨ ॥

॥ ಪದಪಾಠಃ ॥

ಇಮೇ । ಆ । ಯಾತಂ । ಇಂದವಃ । ಸೋಮಾಸಃ । ದಧಿಽಆಶಿರಃ । ಸುತಾಸಃ । ದಧಿಽಆಶಿರಃ ।

ಉತ । ವಾಂ । ಉಷಸಃ । ಬುಧಿ । ಸಾಕಂ । ಸೂರ್ಯಸ್ಯ । ರಶ್ಮಿಽಭಿಃ ।

ಸುತಃ । ಮಿತ್ರಾಯ । ವರುಣಾಯ । ಪೀತಯೇ । ಚಾರುಃ । ಋತಾಯ । ಪೀತಯೇ ॥ ೨ ॥

ಸಾಯಣಭಾಷ್ಯಂ

ಹೇ ಮಿತ್ರಾವರುಣೌ ಆ ಯಾತಂ । ಆಗಚ್ಛತಂ । ಯತ್ರೋ ಯುಷ್ಮದರ್ಥಮಿಂದವಃ ಕ್ಲೇದನಸಮರ್ಥಾಃ ಸೋಮಾಸಃ ಸೋಮಾ ದಧ್ಯಾಶಿರೋ ದಧ್ಯಾಶ್ರಯಣವಂತಃ ಸಂತ ಇಮೇ ಪುರತೋ ಗ್ರಹೇಣ ಗೃಹೀತಾ ವರ್ತಂತೇ ಅತ ಆ ಯಾತಂ । ಕಿಂಚ ದಧ್ಯಾಶಿರೋ ಧೀಯಮಾನಾಶಿರಃ ಸೋಮಾಃ ಸುತಾಸೋ ಮಂತ್ರೇಣ ಗ್ರಾವಭಿರಭಿಷುತಾಃ ಸಂಪನ್ನಾಃ । ಅತ ಆ ಯಾತಮಿತಿ ಶೇಷಃ । ಆದಿತ್ಯಗ್ರಹೇ ದಧ್ಯವನಯನಸದ್ಭಾವಾತ್ತದಪೇಕ್ಷಯಾ ದಧ್ಯಾಶಿರ ಇತ್ಯುಕ್ತಂ । ಉತಾಪಿ ಚ ವಾಂ ಯುವಯೋಃ ಪ್ರೀತಯೇ ಪಾಲನಾಯೋಷಸೋ ಬುಧ್ಯುಷಸಃ ಸಂಬಂಧಿನಿ ಬೋಧೇ ಸತಿ ॥ ಸಂಪದಾದಿಲಕ್ಷಣೋ ಭಾವೇ ಕ್ವಿಪ್ । ಸಾವೇಕಾಚ ಇತಿ ವಿಭಕ್ತೇರುದಾತ್ತತ್ವಂ ॥ ಪ್ರಕಾಶೇ ಸಂಜಾತೇ ಸತಿ । ನ ಕೇವಲಮುಷಸ ಏವ ಬೋಧಃ ಅಪಿ ತು ಸೂರ್ಯಸ್ಯ ರಶ್ಮಿಭಿಃ ಸಾಕಂ ಸೂರ್ಯಕಿರಣೈಃ ಸಹ ಪ್ರಕಾಶೇ ಹವಿಷ್ಪ್ರದಾನಾಯ ಸಂಜಾತೇ ಸತಿ ಸುತಃ ಸೋಮೋಽಭಿಷುತಃ । ಇದಾನೀಂ ವಿಯುಜ್ಯೋಚ್ಯತೇ । ಮಿತ್ರಾಯ ಸರ್ವಹಿತಾಯೈತನ್ನಾಮಕಾಯಾಹರಭಿಮಾನಿದೇವಾಯ ತಥಾ ವರುಣಾಯಾವರಕಾಯ ರಾತ್ರ್ಯಭಿಮಾನಿದೇವಾಯ ಚ ತದರ್ಥಂ ಸೋಮಃ ಸುತ ಇತಿ ಶೇಷಃ । ಕಿಂಚ ಋತಾಯ ಯಜ್ಞಾಯ ತನ್ನಿರ್ವಾಹಕಾಯ ತದರ್ಥಂ ಪೀತಯೇ ಪಾನಾಯ । ಯಜ್ಞಸಿದ್ಧ್ಯರ್ಥಂ ಹಿ ದೇವಾನಾಂ ಸೋಮಪಾನಂ । ಯದ್ವಾ ॥ ಕರ್ತರಿ ಕ್ತಿಚ್ ॥ ಪೀತಯೇ ಪಾತ್ರ ಋತ್ವಿಗಾದಯೋ ಋತಾಯ ಯಜ್ಞಾಯ ತನ್ನಿರ್ವಾಹಕಾಯ । ಚಾರುಶ್ಚರಣೀಯೋ ಭಕ್ಷಣೀಯಃ ಸೋಮಃ ಸುತೋಽಭಿಷುತಃ ॥

ಪ್ರತಿಪದಾರ್ಥ

(ಎಲೈ ಮಿತ್ರಾವರುಣರೇ) ಇಂದವಃ—ಸ್ರವಿಸತಕ್ಕ । ಇಮೇ ಸೋಮಾಸಃ—ಈ ಸೋಮರಸಗಳು । ದಧ್ಯಾಶಿರಃ—ದಧಿಯೊಡನೆ ಮಿಶ್ರಿತಗಳಾಗಿ (ಸಿದ್ಧವಾಗಿವೆ ಮತ್ತು) । ದಧ್ಯಾಶಿರಃ—ದಧಿಯೊಡನೆ ಮಿಶ್ರಿತಗಳಾಗಿ । ಸುತಾಸಃ—(ಮಂತ್ರಪೂರ್ವಕವಾಗಿ)ಹಿಂಡಿ ಸಿದ್ಧವಾಗಿವೆ । (ಆದುದರಿಂದ) । ಆ ಯಾತಂ—ದಯಮಾಡಿ ಬನ್ನಿರಿ । ಉತ—ಮತ್ತು । ವಾಂ—ನಿಮ್ಮ (ಸಂತೃಪ್ತಿಗಾಗಿ) । ಉಷಸಃ ಬುಧಿ—ಉಷಸ್ಸಿನ ಗೋಚರವಾದೊಡನೇ (ಸಿದ್ಧವಾದುದಾಗಲೀ ಅಥವಾ) । ಸೂರ್ಯಸ್ಯ—ಸೂರ್ಯನ (ಉದಯವಾದೊಡನೇ) । ರಶ್ಮಿಭಿಃ ಸಾಕಂ—(ಅವನ) ಕಿರಣಗಳೊಡನೆ । ಸುತಃ—ಹಿಂಡಿದುದಾಗಲಿ (ಅದು) । ಚಾರುಃ—ರುಚಿಕರವಾಗಿ । ಮಿತ್ರಾಯ—ಮಿತ್ರನಿಗೂ । ವರುಣಾಯ—ವರುಣನಿಗೂ । ಪೀತಯೇ—ಪಾನಾರ್ಥವಾಗಿಯೂ (ಅಲ್ಲದೆ) । ಋತಾಯ— ಯಜ್ಞನಿರ್ವಹಣಾಂಗವಾಗಿ ಪರಿಪಾಲಕನಾದ । ಪೀತಯೇ—(ಆ ದೇವತೆಗಳ) ಪಾನಕ್ಕಾಗಿಯೂ (ಹಿಂಡಿ ಸಿದ್ಧವಾಗಿದೆ) ॥

### ಭಾವಾರ್ಥ

ಎಲೈ ಮಿತ್ರಾವರುಣರೇ, ಸ್ರವಿಸತಕ್ಕ ಈ ಸೋಮರಸಗಳು ಮಂತ್ರಪೂರ್ವಕವಾಗಿ ಹಿಂಡಲ್ಪಟ್ಟು ದಧಿಯೊಡನೆ ಮಿಶ್ರಿತಗಳಾಗಿ ನಿಮ್ಮ ಪಾನಕ್ಕೆ ಸಿದ್ಧವಾಗಿವೆ. ಆದುದರಿಂದ ದಯವಿಟ್ಟು ಬನ್ನಿರಿ. ನಿಮ್ಮ ಸಂತೃಪ್ತಿಗಾಗಿ ಉಷಃ ಕಾಲದಲ್ಲಿಯೇ ಸಿದ್ಧವಾದುದಾಗಲಿ ಅಥವಾ ಸೂರ್ಯೋದಯವಾದಮೇಲೆ ಸೂರ್ಯನ ಕಿರಣಗಳೊಡನೆ ಮಿಶ್ರಿತಗಳಾಗಿ ಸಿದ್ಧವಾದುದಾಗಲಿ ಆ ರಸವು ರುಚಿಕರವಾಗಿದ್ದು ಯಜ್ಞನಿರ್ವಹಣಾರ್ಥವಾಗಿಯೂ ಆ ಮಿತ್ರಾವರುಣರ ಪಾನಾರ್ಥವಾಗಿಯೂ ಹಿಂಡಿದುದಾಗಿದೆ.

## English Translation

Come, for these dripping Soma juices are mixed with curds; they are expressed and mixed with curds; whether they be prepared for you at the awaking of the dawn, or (be associated) with the rays of the sun: the juice is effused for Mitra and for Varuna, for their drinking the grateful (libation); for their drinking at the sacrifice.

### ವಿಶೇಷವಿಷಯಗಳು

**ಉಂದವಃ—ಉಂದನಶೀಲಾಃ, ಸರ್ವಂ ಜಗದಮೃತಮಯೇನ ಕ್ಲೇದಯಿತಾರಃ** । ಸಮಸ್ತ ಜಗತ್ತನ್ನು ಎಂದರೆ ದೇವಮನುಷ್ಯಾದಿಗಳನ್ನು ಅಮೃತರೂಪವಾದ ರಸದಿಂದ ತೃಪ್ತಿಗೊಳಿಸತಕ್ಕ ಸೋಮರಸಗಳೆಂದರ್ಥ.

**ದಧ್ಯಾಶಿರಃ—ದಧ್ಯಾಶ್ರಯಣವಂತಃ** । ದಧಿಮಿಶ್ರಿತವಾದ ಸೋಮರಸ. **ದಧ್ಯಾಶಿರದ** ವಿಷಯವನ್ನು ಸಹ ಋಗ್ವೇದ ಸಂಹಿತೆಯ ೧ನೇ ಭಾಗದ ೬೭೬ನೇ ಪೇಜಿನಲ್ಲಿಯೂ, ೨ನೇ ಭಾಗದ ೧೭೨ರಿಂದ ೧೭೪ನೇ ಪೇಜುಗಳಲ್ಲಿಯೂ ವಿಶದವಾಗಿ ಹೇಳಿದೆ.

**ಋತಾಯ**—ಋತಶಬ್ದಕ್ಕೆ ಇಲ್ಲಿ ಯಜ್ಞವೆಂದರ್ಥ. **ಋತಾಯ** ಎಂದರೆ **ಯಜ್ಞಾಯ** ಎಂದೂ, **ಪೀತಯೇ** ಎಂದರೆ **ತನ್ನಿರ್ವಾಹಕಾಯ ಪಾನಾಯ** । ಯಜ್ಞನಿರ್ವಾಹಕವಾದ ಸೋಮರಸದ ಪಾನಕ್ಕಾಗಿ ಸೋಮರಸವು ಹಿಂಡಲ್ಪಟ್ಟು ಸಿದ್ಧವಾಗಿದೆ, ಆದುದರಿಂದ ಬನ್ನಿರಿ ಎಂದೂ ಪ್ರಾರ್ಥಿಸಿದೆ. ಇದೇ ಪ್ರಾರ್ಥನೆಯು ಋ. ಸಂ ೨-೪೧-೪ನೇ ಋಕ್ಸಂಹಿತಾವಾಕ್ಯವನ್ನೊಳಗೊಂಡ ತೈತ್ತಿರೀಯ ಸಂಹಿತೆಯಲ್ಲಿಯೂ

> **ಅಯಂ ವಾಂ ಮಿತ್ರಾವರುಣಾ ಸುತಸ್ಸೋಮ ಋತಾವೃಧಾ । ಮಮೇದಿಹ ಶ್ರುತಂ ಗ್ಂ ಹವಂ ।**
> **ಉಪಯಾಮ ಗೃಹೀತೋಽಸಿ ಮಿತ್ರಾವರುಣಾಭ್ಯಾಂ ತ್ವೈಷ ತೇ ಯೋನಿರ್ಋತಾಯುಭ್ಯಾಂ ತ್ವಾ ।** (ತೈ. ಸಂ. ೧-೪-೫)

ಎಂಬ ವಾಕ್ಯದಲ್ಲಿದ್ದು ಅಲ್ಲಿಯೂ ಸಹ **ಋತಾಯುಭ್ಯಾಂ** ಎಂಬ ಪದಕ್ಕೆ **ಋತಂ ಸತ್ಯಂ ಯಜ್ಞಂ ವಾ ಆತ್ಮನ ಯಜಮಾನಾನಾಂ ವಾ ಇಚ್ಛತೀತಿ ಋತಾಯುಃ** । ತನಗಾಗಲಿ ಯಜಮಾನರಿಗಾಗಲಿ ಯಜ್ಞಾಂಗತ್ವವನ್ನು ಇಚ್ಛಿಸುವುದರಿಂದ **ಋತಾಯು**ವೆಂದು ಅರ್ಥವನ್ನು ವಿವರಿಸುವ ಭಾಷ್ಯವಿದೆ.

॥ ವ್ಯಾಕರಣಪ್ರಕ್ರಿಯಾ ।

**ಇಂದವಃ**—ಉಂದೀ ಕ್ಲೇದನೇ ಧಾತು. **ಉಂದೇರಿಚ್ಚಾದೇಃ** (ಉ. ಸೂ. ೧-೧೩) ಎಂಬುದರಿಂದ ಉನ್ ಪ್ರತ್ಯಯ. ಅದರೊಡನೆ ಧಾತುವಿನ ಆದಿಗೆ ಇತ್ವ. ಉನತ್ತಿ ಇತಿ ಇಂದುಃ **ಞ್ನಿತ್ಯಾದಿರ್ನಿತ್ಯಮ್** (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಪ್ರಥಮಾಬಹುವಚನಾಂತರೂಪ

**ದಧ್ಯಾಶಿರಃ**—ದಧಾತಿ ಪುಷ್ಣಾತಿ ಇತಿ ದಧಿ. ಡುಧಾಞ್ ಧಾರಣಪೋಷಣಯೋಃ ಧಾತು. **ಆದೃಗಮಹನಜನಃ ಕಿಕಿನೌ ಲಿಟ್ ಚ** (ಪಾ. ಸೂ. ೩-೨-೧೭೧) ಎಂಬುದರಿಂದ ಇದಕ್ಕೆ ಕಿನ್ ಪ್ರತ್ಯಯ. ಲಿಡ್ವದ್ಭಾವವಿರುವುದರಿಂದ ಧಾತುವಿಗೆ ದ್ವಿತ್ವ. ಕಿತ್ತಾದುದರಿಂದ **ಆತೋ ಲೋಪ ಇಟಿ ಚ** (ಪಾ. ಸೂ. ೬-೪-೬೪) ಎಂಬುದರಿಂದ ಆಕಾರಲೋಪ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಶ್ರೄ ಹಿಂಸಾಯಾಂ ಧಾತು. ಶೃಣಾತಿ ಹಿನಸ್ತಿ ಸೋಮೇ ಅವಸೀಯಮಾನಂ ಸತ್ ಸೋಮಸ್ಯ ಸ್ವಾಭಾವಿಕಂ ರಸಮ್ ಋಜೀಷತ್ವಪ್ರಯುಕ್ತಂ ನೀರಸಂ ದೋಷಂ ವಾ ಇತಿ ಆಶೀಃ ಈ ಧಾತುವಿಗೆ **ಕ್ವಿಪ್ ಚ** (ಪಾ. ಸೂ. ೩-೨-೭೬) ಎಂಬುದರಿಂದ ಕ್ವಿಪ್. **ೠತ ಇದ್ಧಾತೋಃ** (ಪಾ. ಸೂ. ೭-೧-೧೦೦) ಎಂಬುದರಿಂದ ಧಾತುವಿಗೆ ಇತ್ವ. **ಉರಣ್ರಪರಃ** ಎಂಬುದರಿಂದ ರಪರವಾಗಿ ಬರುತ್ತದೆ. ದಧ್ನೈವ ಆಶೀಃ ಯೇಷಾಂ ಸೋಮಾನಾಂ ತೇ ದಧ್ಯಾಶಿರಃ **ಬಹುವ್ರೀಹೌ ಪ್ರಕೃತ್ಯಾ-ಪೂರ್ವಪದಮ್** (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಸುತಾಸಃ**—ಷುಞ್ ಅಭಿಷವೇ. ಧಾತು. ಕರ್ಮಣಿಯಲ್ಲಿ **ನಿಷ್ಠಾ** (ಪಾ. ಸೂ. ೩-೨-೧೦೨) ಎಂಬುದರಿಂದ ಕ್ತ ಪ್ರತ್ಯಯ. ಧಾತ್ವಾದಿಗೆ ಸತ್ವ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಇದಕ್ಕೆ ಜಸ್ ಪರವಾದಾಗ **ಆಜ್ಜಸೇರಸುಕ್** (ಪಾ. ಸೂ. ೭-೧-೫೦) ಎಂಬುದರಿಂದ ಅದಕ್ಕೆ ಅಸುಕಾಗಮ.

**ಬುಧಿ**—ಬುಧ ಅವಗಮನೇ. ಧಾತು. ಸಂಪದಾದಿಯಲ್ಲಿ ಸೇರಿರುವುದರಿಂದ **ಸಂಪದಾದಿಭ್ಯಃ ಕ್ವಿಪ್** (ಪಾ. ಸೂ. ೩-೩-೧೦೮) ಎಂಬುದರಿಂದ ಭಾವಾರ್ಥದಲ್ಲಿ ಕ್ವಿಪ್. ಬುಧ್ ಶಬ್ದವಾಗುತ್ತದೆ. ಸಪ್ತಮೀಏಕವಚನಾಂತರೂಪ. ಏಕಾಚಾದುದರಿಂದ **ಸಾವೇಕಾಚಸ್ತೃತೀಯಾದಿಃ** (ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಸೂರ್ಯಸ್ಯ**—ಸೃ ಗತೌ ಧಾತು. **ರಾಜಸೂಯಸೂರ್ಯ**—(ಪಾ. ಸೂ. ೩-೧-೧೧೪) ಎಂಬುದರಿಂದ ಕ್ಯಬಂತವಾಗಿ ನಿಪಾತಿತವಾಗಿದೆ. ಷಷ್ಠೀಏಕವಚನಾಂತರೂಪ. ಪ್ರತ್ಯಯ ಪಿತ್ತಾದುದರಿಂದ ಅನುದಾತ್ತವಾಗುತ್ತದೆ.

**ಪೀತಯೇ**—ಪಾ ಪಾನೇ ಅಥವಾ ರಕ್ಷಣೇ ಧಾತು. ಇದಕ್ಕೆ **ಸ್ಥಾಗಾಪಾಪಚೋ ಭಾವೇ** (ಪಾ. ಸೂ. ೩-೩-೯೫) ಎಂಬುದರಿಂದ ಭಾವಾರ್ಥದಲ್ಲಿ ಕ್ತಿನ್ ಪ್ರತ್ಯಯ. ಕಿತ್ತಾದುದರಿಂದ ಇದು ಪರವಾದಾಗ **ಘುಮಾಸ್ಥಾ**—(ಪಾ. ಸೂ. ೬-೪-೬೬) ಎಂಬುದರಿಂದ ಧಾತುವಿಗೆ ಈತ್ವ. ಪ್ರತ್ಯಯ ನಿತ್ತಾದರೂ ವ್ಯತ್ಯಯದಿಂದ ಅಂತೋದಾತ್ತವಾಗುತ್ತದೆ. ಅಥವಾ ಉತ್ತರಸೂತ್ರದಲ್ಲಿ ಹೇಳಿದ ಉದಾತ್ತಕ್ಕೆ ಇಲ್ಲಿಯೂ ಅನುಕರ್ಷಣಮಾಡಿಕೊಳ್ಳುವುದರಿಂದ ಸಿದ್ಧವಾಗುತ್ತದೆ. ಅಥವಾ ಕರ್ತರಿಯಲ್ಲಿ **ಕ್ತಿಚ್‌ಕ್ತೌ ಚ ಸಂಜ್ಞಾಯಾಮ್** (ಪಾ. ಸೂ. ೩-೩-೧೭೪) ಎಂಬುದರಿಂದ ಕ್ತಿಚ್ ಪ್ರತ್ಯಯ. ಚಿತ್ತಾದುದರಿಂದ **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ಚತುರ್ಥೀಏಕವಚನಾಂತರೂಪ. ॥ ೨ ॥

ಸಂಹಿತಾಪಾಠಃ

ತಾಂ ವಾಂ ಧೇನುಂ ನ ವಾಸರೀಮಂಶುಂ ದುಹಂತ್ಯದ್ರಿಭಿಃ ಸೋಮಂ ದುಹಂತ್ಯದ್ರಿಭಿಃ ।

ಅಸ್ಮತ್ರಾ ಗಂತಮುಪ ನೋಽರ್ವಾಂಚಾ ಸೋಮಪೀತಯೇ ।

ಅಯಂ ವಾಂ ಮಿತ್ರಾವರುಣಾ ನೃಭಿಃ ಸುತಃ ಸೋಮ ಆ ಪೀತಯೇ ಸುತಃ ॥ ೩ ॥

ಪದಪಾಠಃ

ತಾಂ । ವಾಂ । ಧೇನುಂ । ನ । ವಾಸರೀಂ । ಅಂಶುಂ । ದುಹಂತಿ । ಅದ್ರಿಽಭಿಃ । ಸೋಮಂ । ದುಹಂತಿ । ಅದ್ರಿಽಭಿಃ ।

ಅಸ್ಮಽತ್ರಾ । ಗಂತಂ । ಉಪ । ನಃ । ಅರ್ವಾಂಚಾ । ಸೋಮಽಪೀತಯೇ ।

ಅಯಂ । ವಾಂ । ಮಿತ್ರಾವರುಣಾ । ನೃಽಭಿಃ । ಸುತಃ । ಸೋಮಃ । ಆ । ಪೀತಯೇ । ಸುತಃ ॥ ೩ ॥

॥ ಸಾಯಣಭಾಷ್ಯಂ ॥

ವಾಂ ಯುವಯೋಃ ಸಂಬಂಧಿನಮಂಶುಂ ವಲ್ಲೀರೂಪಂ ಸೋಮಂ ದುಹಂತಿ । ಸಂಪಾದಯಂತ್ಯೃತ್ವಿಜಃ । ಕಿಮಿವ । ತಾಂ ಪ್ರಸಿದ್ಧಾಮಗ್ನಿಹೋತ್ರಾದ್ಯರ್ಥಾಂ ವಾಸರೀಂ ಸರ್ವಾಂಗಾಚ್ಛಾದಿತಪಯಸ್ಕಾಂ । ಬಹುಕ್ಷೀರಾಮಿತ್ಯರ್ಥಃ । ಯದ್ವಾ । ಪಯಆದಿನಾಚ್ಛಾದಯಿತ್ರೀಂ ॥ ವಸ ಆಚ್ಛಾದನೇ । ಔಣಾದಿಕೋಽರಿಪ್ರತ್ಯಯಃ । ಕೃದಿಕಾರಾದಕ್ತಿನ ಇತಿ ಙೀಷ್ । ಯದ್ವಾ । ಕೇವಲ ಔಣಾದಿಕೋಽರಪ್ರತ್ಯಯಃ । ಸ್ವಾರ್ಥಿಕೋಽಣ್ ॥ ಧೇನುಂ ನ ಪ್ರೀಣಯಿತ್ರೀಂ ಗಾಮಿವ । ಕೇನ ಸಾಧನೇನೇತಿ ತದಾಹ । ಅದ್ರಿಭಿರಭಿಷವಸಾಧನೈರ್ಗ್ರಾವಭಿಃ । ಕಿಂಚಾದ್ರಿಭಿಸ್ತೈರೇವ ಸಾಧನೈಃ ಸೋಮಂ ಯುಷ್ಮದರ್ಥಮೇವ ದುಹಂತಿ । ವಲ್ಲಿರೂಪಂ ಸೋಮಂ ಯುಷ್ಮದರ್ಥಮೇವೋದಕೇನಾಪ್ಲಾವ್ಯ ರಸಂ ದುಹಂತಿ । ಕಿಂಚಾರ್ವಾಂಚಾಸ್ಮದಭಿಮುಖೌ ಸಂತೌ ಸೋಮಪೀತಯೇ ಸೋಮಪಾನಾಯಾಸ್ಮತ್ರಾಸ್ಮತ್ರಾತಾರೌ ಯುವಾಂ ನೋಽಸ್ಮದೀಯಂ ಯಜ್ಞಮುಪ ಗಂತಂ । ಉಪಾಗಚ್ಛತಂ । ಕಿಂಚ ವಾಂ ಯುಷ್ಮದರ್ಥಮಯಂ ಸೋಮೋ ನೃಭಿರ್ನೇತೃಭಿರ್ಯಜ್ಞನಿರ್ವಾಹಕೈರೃತ್ವಿಗ್ಭಿಃ ಸುತಃ । ಅಭಿಷುತಃ । ಕಿಂಚಾ ಪೀತಯೇ ಸಂಪೂರ್ಣಪಾನಾಯ ಸುತಃ । ಅತ ಆಗಚ್ಛತಮಿತ್ಯರ್ಥಃ ॥

ಪ್ರತಿಪದಾರ್ಥ

ವಾಸರೀಂ—ಹಾಲಿನಿಂದ ಪೂರ್ಣವಾಗಿ ತುಂಬಿದ | ಧೇನುಂ ನ—ಹಸುವನ್ನು ಕರೆಯುವಂತೆ | ವಾಂ—ನಿಮಗೆ ಸೇರಿದ (ನಿಮಗಾಗಿ) | ತಾಂ ಅಂಶುಂ—ಆ ಸೋಮರಸದ ಬಳ್ಳಿಯನ್ನು | ಅದ್ರಿಭಿಃ—ಹಿಂಡುವ ಕಲ್ಲುಗಳಿಂದ | ದುಹಂತಿ—(ಅಧ್ವರ್ಯುಗಳು) ಹಿಂಡಿ (ರಸವನ್ನು) ಕರೆಯುತ್ತಾರೆ (ಮತ್ತು) | ಅದ್ರಿಭಿಃ—ಅದೇ ಹಿಂಡುವ ಕಲ್ಲುಗಳಿಂದ | ಸೋಮಂ—ಸೋಮರಸವನ್ನು | ದುಹಂತಿ—(ನಿಮ್ಮ ಪಾನಾರ್ಥವಾಗಿ) ಹಿಂಡುತ್ತಾರೆ (ಆದುದರಿಂದ) | ಅರ್ವಾಂಚಾ—(ನಮ್ಮ) ಅಭಿಮುಖವಾಗಿದ್ದುಕೊಂಡು | ಸೋಮಪೀತಯೇ—ಸೋಮರಸದ ಪಾನಾರ್ಥವಾಗಿ | ಅಸ್ಮತ್ರಾ—ನಮ್ಮ ರಕ್ಷಕರಾಗಿರುವ ನೀವಿಬ್ಬರೂ ಸಹ | ನಃ—ನಮ್ಮ (ಯಜ್ಞಕ್ಕೆ) | ಉಪ ಗಂತಂ—ದಯಮಾಡಿ ಬನ್ನಿರಿ | ಮಿತ್ರಾವರುಣಾ—ಎಲೈ ಮಿತ್ರಾವರುಣರೇ | ವಾಂ—ನಿಮಗಾಗಿ | ಅಯಂ ಸೋಮಃ—ಈ ಸೋಮರಸವು | ನೃಭಿಃ—ಯಜ್ಞನಿರ್ವಾಹಕರಾದ ಋತ್ವಿಕ್ಕುಗಳಿಂದ | ಸುತಃ—ಹಿಂಡಲ್ಪಟ್ಟಿದೆ | ಆ ಪೀತಯೇ—ನಿಮ್ಮ ಸಂಪೂರ್ಣವಾದ ಪಾನಾರ್ಥವಾಗಿ | ಸುತಃ—ಹಿಂಡಿದೆ (ಆದುದರಿಂದ ದಯಮಾಡಿರಿ) ||

ಭಾವಾರ್ಥ

ಎಲೈ ಮಿತ್ರಾವರುಣರೇ, ಹಾಲಿನಿಂದ ತುಂಬಿದ ಹಸುವನ್ನು ಕರೆಯುವಂತೆ ರಸಭರಿತವಾದ ಆ ಸೋಮರಸದ ಬಳ್ಳಿಯನ್ನು ಹಿಂಡುವ ಕಲ್ಲುಗಳಿಂದ ಅಧ್ವರ್ಯುಗಳು ನಿಮಗಾಗಿ ಹಿಂಡಿ ರಸವನ್ನು ಕರೆಯುತ್ತಾರೆ. ಅದೇ ಜಜ್ಜುವ ಕಲ್ಲುಗಳಿಂದ ಸೋಮರಸವನ್ನು ಹಿಂಡುತ್ತಾರೆ. ಆದುದರಿಂದ ನಮ್ಮ ಅಭಿಮುಖವಾಗಿದ್ದುಕೊಂಡು ಸೋಮರಸವನ್ನು ಪಾನಮಾಡುವುದಕ್ಕಾಗಿ ನಮ್ಮ ರಕ್ಷಕರಾಗಿರುವ ನೀವಿಬ್ಬರೂ ಸಹ ನಮ್ಮ ಯಜ್ಞಕ್ಕೆ ದಯಮಾಡಿ ಬನ್ನಿರಿ. ಎಲೈ ಮಿತ್ರಾವರುಣರೇ, ಈ ಸೋಮರಸವು ನಿಮಗಾಗಿ ಋತ್ವಿಕ್ಕುಗಳಿಂದ ಹಿಂಡಲ್ಪಟ್ಟಿದೆ. ಅದನ್ನು ಪಾನಮಾಡುವುದಕ್ಕಾಗಿ ಬನ್ನಿರಿ.

English Translation

They milk for you two with stones, that succulent creeper, like a productive milch cow; they milk the Soma plant with stones; come to us as our protectors; be present with us to drink Soma juice: this Soma juice has been effused, Mitra and Varuna, for you both; effused for your drinking.

ವಿಶೇಷ ವಿಷಯಗಳು

ವಾಸರೀಂ—ಸರ್ವಾಂಗಾಚ್ಛಾದಿತಪಯಸ್ಕಾಂ | ಬಹುಕ್ಷೀರಾಮಿತ್ಯರ್ಥಃ | ದೇಹವಲ್ಲೆಲ್ಲಾ (ಕೆಚ್ಚಲಿನಲ್ಲಿ) ಹಾಲನ್ನು ತುಂಬಿಕೊಂಡಿರುವ ಎಂದರೆ ಪ್ರಭೂತವಾದ ಕ್ಷೀರವನ್ನುಳ್ಳ ಎಂದರ್ಥ. ಧೇನುವಿಗೆ ವಿಶೇಷಣವಾಗಿದೆ.

ಅಂಶುಂ—ವಲ್ಲೀರೂಪಂ ಸೋಮಂ | ಸೋಮರಸದ ಬಳ್ಳಿಯನ್ನು ಎಂದು ಅಂಶು ಶಬ್ದಕ್ಕೆ ರಸಪೂರಿತವಾದ ಸೋಮರಸದ ಬಳ್ಳಿಯೆಂದರ್ಥಮಾಡಿದ್ದಾರೆ. ನಿರುಕ್ತಕಾರರು ಈ ಶಬ್ದಕ್ಕೆ ನಿರ್ವಚನವನ್ನು ಹೇಳುತ್ತಾ ಅಂಶುಃ ಶಮಷ್ಟಮಾತ್ರೋ ಭವತಿ | ಅನನಾಯ ಶಂ ಭವತೀತಿ ವಾ | (ನಿ. ೨-೫) ಅದು ದೇಹದೊಳಕ್ಕೆ ಪ್ರವೇಶಿಸಿದೊಡನೆಯೇ ಹಿತಕರವಾಗಿರುತ್ತದೆ. ಅಥವಾ ಜೀವಕ್ಕೆ ತಂಪಾಗಿರುತ್ತದೆ. ಆದುದರಿಂದ ಅದಕ್ಕೆ ಅಂಶುವೆಂದು ಹೆಸರು ಎಂದು ಹೇಳಿ,

**ತೇ ಸೋಮಾದೋ ಹರೀ ಇಂದ್ರಸ್ಯ ನಿಂಸತೇಽಂಶುಂ ದುಹಂತೋ ಅಧ್ಯಾಸತೇ ಗವಿ ।**
(ಋ. ಸಂ. ೧೦-೯೪-೯)

ಎಂಬ ಋಕ್ಕನ್ನು ಉದಹರಿಸಿದ್ದಾರೆ. ಇಲ್ಲಿ **ಅಂಶು** ಶಬ್ದಕ್ಕೆ ಸೋಮರಸವೆಂದರ್ಥವಾಗುತ್ತದೆ. ಇದರಂತೆಯೇ,

**ಪಿಪೀಳೇ ಅಂಶುರ್ಮದ್ಯೋ ನ ಸಿಂಧುರಾ ತ್ವಾ ಶಮೀ ಶಶಮಾನಸ್ಯ ಶಕ್ತಿಃ ।**
(ಋ. ಸಂ. ೪-೨೨-೮)

**ಅಸಾವ್ಯಂಶುರ್ಮದಾಯಾಪ್ಸು ದಕ್ಷೋ ಗಿರಿಷ್ಠಾಃ । ಶ್ಯೇನೋ ನ ಯೋನಿಮಾಸದತ್ ॥**
(ಋ. ಸಂ. ೯-೬೨-೪)

ಇತ್ಯಾದಿ ಋಕ್ಕುಗಳಲ್ಲೆಲ್ಲಾ ಸೋಮರಸವೆಂದೇ ಅರ್ಥ. ಆದರೆ. **ಅಂಶು** ಶಬ್ದವು **ಸೋಮ** ಶಬ್ದಕ್ಕೆ ವಿಶೇಷಣವಾಗಿ ಬಂದಾಗ ಖಂಡಾತ್ಮಕವಾದ **ಸೋಮದ** ಬಳ್ಳಿಯೆಂದು ಹೇಳಬೇಕಾಗುತ್ತದೆ. ಉದಾಹರಣೆಗೆ—

**ಅತಶ್ಚಿದಿಂದ್ರಃ ಸದಸೋ ವರೀಯಾನ್ಯದೀಂ ಸೋಮಃ ಪೃಣತಿ ದುಗ್ಧೋ ಅಂಶುಃ ॥**
(ಋ. ಸಂ. ೩-೩೬-೬)

**ಅಂಶುಂ ದುಹಂತಿ ಹಸ್ತಿನೋ ಭರಿತ್ರೈರ್ಮಧ್ವಃ ಪುನಂತಿ ಧಾರಯಾ ಪವಿತ್ರೈಃ ।**
(ಋ. ಸಂ. ೩-೩೬-೭)

ಇತ್ಯಾದಿ ಋಕ್ಕುಗಳಲ್ಲಿ **ಅಂಶು** ಶಬ್ದವು **ಸೋಮ** ಶಬ್ದಕ್ಕೆ ವಿಶೇಷಣವಾಗಿರುವುದರಿಂದ **ಲತಾಖಂಡರೂಪಃ ಅಲ್ಪಃ ಸೋಮಃ । ಲತಾಖಂಡದ** ರೂಪದ್ದೂ ಅಲ್ಪವಾದುದೂ ಆದ ಸೋಮವೆಂದು ಸೋಮದ ನ್ಯೂನವಾದ ಪರಿಮಾಣವನ್ನು ಹೇಳುತ್ತದೆ. **ಅಲ್ಪತರೋಽಂಶುಭೂತಃ ಸೋಮಃ ವರೀಯಾಂಸಮಿಂದ್ರಂ ಪ್ರೀಣಯತಿ ।** ಇಂದ್ರನು ಮಹತ್ತಾದ ದೇಹವುಳ್ಳವನಾದರೂ ಅಲ್ಪವಾದ ಸೋಮವು ಅವನನ್ನು ತೃಪ್ತಿಗೊಳಿಸುತ್ತದೆ ಎಂದು ಅರ್ಥವಾಗುತ್ತದೆ. ಹೀಗೆ **ಅಂಶು** ಶಬ್ದಕ್ಕೆ **ಸೋಮರಸವೇ** ಪ್ರಧಾನವಾದ ಅರ್ಥವಾದರೂ, ಸೋಮಲತೆಯೆಂದೂ ಕೆಲವೆಡೆ ಅರ್ಥವಾಗುತ್ತದೆ

**ಅಸ್ಮತ್ರಾ**—ನಮ್ಮ ರಕ್ಷಕರಾದ ನೀವು ಎಂದು ಮಿತ್ರಾವರುಣರ ರಕ್ಷಣೆಯನ್ನು ಸ್ತುತಿಸಿದೆ. **ವಿಶ್ವಸ್ಯ ಭುವನಸ್ಯ ಗೋಪಾಃ** (೨-೨೭-೪, ೧-೬೨-೯) ಇತ್ಯಾದಿ ವಿಶೇಷಣಗಳು ಮಿತ್ರಾವರುಣರು ಅಹೋರಾತ್ರವೂ ಮಾಡುವ ಜಗದ್ರಕ್ಷಣೆಯನ್ನು ವರ್ಣಿಸುವಂತೆ ಈ ವಿಶೇಷಣವೂ ಆ ಅಂಶವನ್ನು ಹೇಳುತ್ತದೆ.

ವ್ಯಾಕರಣಪ್ರಕ್ರಿಯಾ

**ವಾಸರೀಮ್**—ವಸ ಆಚ್ಛಾದನೇ. ಧಾತು. ಇದಕ್ಕೆ ಔಣಾದಿಕ ಅರಿ ಪ್ರತ್ಯಯ. ವ್ಯತ್ಯಯದಿಂದ ಆದಿವೃದ್ಧಿ. ಇದಕ್ಕೆ ಸ್ತ್ರೀತ್ವವಿವಕ್ಷಾಮಾಡಿದಾಗ **ಕೃದಿಕಾರಾದಕ್ತಿನಃ** ಎಂಬುದರಿಂದ ಕ್ತಿನ್ ಭಿನ್ನ ಇಕಾರಾಂತ ಕೃದಂತವಾದುದರಿಂದ ಙೀಷ್. ಅಥವಾ ಔಣಾದಿಕ ಅರ ಪ್ರತ್ಯಯ. ಪ್ರಜ್ಞಾದಿಯಲ್ಲಿ ಸೇರಿರುವುದರಿಂದ **ಪ್ರಜ್ಞಾದಿಭ್ಯಶ್ಚ** (ಪಾ. ಸೂ. ೫-೪-೩೮) ಎಂಬುದರಿಂದ ಸ್ವಾರ್ಥದಲ್ಲಿ ಅಣ್ ಪ್ರತ್ಯಯ. **ತದ್ಧಿತೇಷ್ವಚಾಮಾದೇಃ** (ಪಾ. ಸೂ. ೭-೨-೧೧೭) ಎಂಬುದರಿಂದ ಆದಿವೃದ್ಧಿ ಆಗ ಸ್ತ್ರೀತ್ವದಲ್ಲಿ **ಟಿಡ್ಢಾಣಞ್** ಎಂಬುದರಿಂದ ಙೀಪ್. **ಯಸ್ಯೇತಿ ಚ** ಎಂಬುದರಿಂದ ಅಕಾರಲೋಪ. **ಅನುದಾತ್ತಸ್ಯ ಚ ಯತ್ರೋದಾತ್ತಲೋಪಃ** (ಪಾ. ಸೂ. ೬-೧-೧೬೧) ಎಂಬುದರಿಂದ ಙೀಪಿಗೆ ಉದಾತ್ತಸ್ವರ ಬರುತ್ತದೆ. ದ್ವಿತೀಯಾಏಕವಚನಾಂತರೂಪ.

**ದುಹಂತಿ**—ದುಹ ಪ್ರಪೂರಣೇ ಧಾತು. ಅದಾದಿ. ಲಟ್ ಪ್ರಥಮಪುರುಷಬಹುವಚನದಲ್ಲಿ ಝಿಗೆ ಅಂತಾದೇಶ. **ಅದಿಪ್ರಭೃತಿಭ್ಯಃ ಶಪಃ** ಎಂಬುದರಿಂದ ಶಪಿಗೆ ಲುಕ್. ಅತಿಜಂತದ ಪರದಲ್ಲಿರುವುದರಿಂದ ನಿಘಾತ ಸ್ವರ ಬರುತ್ತದೆ.

**ಅಸ್ಮತ್ರಾ**—ಅಸ್ಮಾನ್ ತ್ರಾಯತೇ ಇತಿ ಅಸ್ಮತ್ರಾ. ತ್ರೈಙ್ ಪಾಲನೇ. ಧಾತು. **ಕ್ವಿಪ್ ಚ** ಎಂಬುದರಿಂದ ಕ್ವಿಪ್ ಪ್ರತ್ಯಯ. **ಸುಪಾಂಸುಲುಕ್** (ಪಾ. ಸೂ. ೭-೧-೩೯) ಎಂಬುದರಿಂದ ವಿಭಕ್ತಿಗೆ ಆಕಾರಾದೇಶ. ಸಮಾಸದಲ್ಲಿ **ಗತಿಕಾರಕೋಪಪದಾತ್ಕೃತ್** (ಪಾ. ಸೂ. ೬-೧-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಅರ್ವಾಞ್ಚಾ**—**ಸುಪಾಂ ಸುಲುಕ್** (ಪಾ. ಸೂ. ೭-೧-೩೯) ಎಂಬುದರಿಂದ ದ್ವಿವಚನ ಔ ವಿಭಕ್ತಿಗೆ ಆಕಾರಾದೇಶ.

**ಸೋಮಪೀತಯೇ**—ಸೋಮಸ್ಯ ಪೀತಿಃ ಸೋಮಪೀತಿಃ ತಸ್ಮೈ ಸೋಮಪೀತಯೇ. ಪೀತಿ ಎಂಬುದು ಹಿಂದಿನ ಮಂತ್ರದಲ್ಲಿ ವ್ಯಾಖ್ಯಾತವಾಗಿದೆ. **ತಾದೌ ಚ ನಿತಿ** (ಪಾ. ಸೂ. ೬-೨-೫೦) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ. ಚತುರ್ಥೀ ಏಕವಚನಾಂತರೂಪ.

**ನೃಭಿಃ**—ನೃ ನಯೇ ಧಾತು. ಕ್ವಿಪ್ ಪ್ರತ್ಯಯ. ತೃತೀಯಾಬಹುವಚನಾಂತರೂಪ.

**ಸುತಃ**—ಷುಞ್ ಅಭಿಷವೇ ಧಾತು. ಕರ್ಮಣಿಯಲ್ಲಿ ನಿಷ್ಠಾ ಎಂಬುದರಿಂದ ಕ್ತ ಪ್ರತ್ಯಯ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ.

———— :o: ————

# ನೂರ ಮೂವತ್ತೆಂಟನೆಯ ಸೂಕ್ತವು

**ಪ್ರಪ್ರ ಪೂಷ್ಣ ಇತಿ ಚತುರ್ಋಚಂ ಪಂಚಮಂ ಸೂಕ್ತಂ ಪಾರುಚ್ಛೇಪಮಾತ್ಯಷ್ಟಂ ಪೂಷದೇವತಾಕಂ । ಪ್ರಪ್ರ ಚತುಷ್ಕಂ ಪೌಷ್ಣಮಿತ್ಯನುಕ್ರಾಂತಂ ॥ ವಿನಿಯೋಗೋ ಲೈಂಗಿಕಃ ॥**

ಅನುವಾದವು—**ಪ್ರಪ್ರ ಪೂಷ್ಣಃ** ಎಂಬ ಈ ಸೂಕ್ತವು ಇಪ್ಪತ್ತನೆಯ ಅನುವಾಕದಲ್ಲಿ ಐದನೆಯ ಸೂಕ್ತವು ಇದರಲ್ಲಿ ನಾಲ್ಕು ಋಕ್ಕುಗಳಿರುವವು. ಈ ಸೂಕ್ತಕ್ಕೆ ದಿವೋದಾಸನ ಪುತ್ರನಾದ ಪರುಚ್ಛೇಪನೆಂಬುವನು ಋಷಿಯು. ಪೂಷಣನು ದೇವತೆಯು. ಅತ್ಯಷ್ಟಿ ಎಂಬುದು ಛಂದಸ್ಸು. ಅನುಕ್ರಮಣಿಕೆಯಲ್ಲಿ **ಪ್ರಪ್ರ ಚತುಷ್ಕಂ ಪೌಷ್ಣಂ** ಎಂದು ಹೇಳಿರುವದು. ಸೂಕ್ತದ ವಿನಿಯೋಗವು ಲೈಂಗಿಕವು.

———— :o: ————

॥ ಓಂ ॥

## ಸೂಕ್ತ—೧೩೮

॥ ಮಂಡಲ—೧ ॥ ಅನುವಾಕ—೨೦ ॥ ಸೂಕ್ತ— ೧೩೮ ॥

॥ ಅಷ್ಟಕ—೨ ॥ ಅಧ್ಯಾಯ— ೨ ॥ ವರ್ಗ—೨ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ— ೪ ॥

॥ ಋಷಿಃ—ಪರುಚ್ಛೇಪೋ ದೈವೋದಾಸಿಃ ॥

॥ ದೇವತಾ— ಪೂಷಾ ॥

॥ ಛಂದಃ— ಅತ್ಯಷ್ಟಿಃ ॥

ಸಂಹಿತಾಪಾಠಃ

ಪ್ರಪ್ರ ಪೂಷ್ಣಸ್ತುವಿಜಾತಸ್ಯ ಶಸ್ಯತೇ ಮಹಿತ್ವಮಸ್ಯ ತವಸೋ ನ ತಂದತೇ
ಸ್ತೋತ್ರಮಸ್ಯ ನ ತಂದತೇ ।
ಅರ್ಚಾಮಿ ಸುಮ್ನಯನ್ನಹಮಂತ್ಯೂತಿಂ ಮಯೋಭುವಂ ।
ವಿಶ್ವಸ್ಯ ಯೋ ಮನ ಆಯುಯುವೇ ಮಖೋ ದೇವ ಆಯುಯುವೇ
ಮಖಃ ॥ ೧ ॥

। ಪದಪಾಠಃ ।

ಪ್ರऽಪ್ರ । ಪೂಷ್ಣಃ । ತುವಿऽಜಾತಸ್ಯ । ಶಸ್ಯತೇ । ಮಹಿऽತ್ವಂ । ಅಸ್ಯ । ತವಸಃ । ನ । ತಂದತೇ । ಸ್ತೋತ್ರಂ । ಅಸ್ಯ । ನ । ತಂದತೇ ।
ಅರ್ಚಾಮಿ । ಸುಮ್ನऽಯನ್ । ಅಹಂ । ಅಂತಿऽಊತಿಂ । ಮಯಃऽಭುವಂ ।
ವಿಶ್ವಸ್ಯ । ಯಃ । ಮನಃ । ಆऽಯುಯುವೇ । ಮಖಃ । ದೇವಃ । ಆऽಯುಯುವೇ । ಮಖಃ ॥ ೧ ॥

ಸಾಯಣಭಾಷ್ಯಂ

ತುವಿಜಾತಸ್ಯ ಬಹುಯಜಮಾನಾರ್ಥಮುತ್ಪನ್ನಸ್ಯಾಸ್ಯ ಪೂಷ್ಣಃ ಪೋಷಕಸ್ಯೈತನ್ನಾಮಕಸ್ಯ ದೇವಸ್ಯ ತವಸೋ ಮಹಿತ್ವಂ ಬಲಸ್ಯ ಮಹತ್ತ್ವಂ ಪ್ರಪ್ರ ಶಸ್ಯತೇ । ಪ್ರಸ್ತೂಯತೇ ಸರ್ವೈಃ ॥ ವೀಪ್ಸಾ ಪಾದಪೂರಣೇ । ನ ತಂದತೇ । ನ ಹಿನಸ್ತಿ ಕಶ್ಚಿತ್ತದಪಿ । ಕಿಂಚಾಸ್ಯ ಪೂಷ್ಣಃ ಸ್ತೋತ್ರಂ ನ ತಂದತೇ ।

ನ ಹಿನಸ್ತಿ। ನ ವಿರಮತಿ । ಸರ್ವೋಽಪಿ ಜನ ಏನಂ ಸ್ತೌತೀತ್ಯರ್ಥಃ। ಜಗತ್ಪೋಷಕತ್ವಾದಿತಿ ಭಾವಃ ।ಅತಃ ಕಾರಣಾದಹಂ ಅಹಮಪಿ ಯಜಮಾನಃ ಸುಮ್ನಯನ್ ಸುಖಮಿಚ್ಛನ್ನರ್ಚಾಮಿ। ಸ್ತೌಮಿ । ಕೀದೃಶಂತಂ । ಅಂತ್ಯೂತಿಮಾಸನ್ನರಕ್ಷಣಂ ॥ ಕಾದಿಲೋಪೋ ಬಹುಲಮಿತಿ ಕಲೋಪಃ ॥ ಸ್ತುತ್ಯನಂತರಮೇವ ವರಪ್ರದಮಿತ್ಯರ್ಥಃ । ಮಯೋಭುವಂ ಸುಖಸ್ಯೋತ್ಪಾದಕಂ ಭಾವಯಿತಾರಂ ವಾ । ಯಃ ಪೂಷಾ ಮಖೋ ಯಜ್ಞವಾನ್ ॥ ಮತ್ವರ್ಥೋ ಲುಪ್ಯತೇ ॥ ವಿಶ್ವಸ್ಯ ಸರ್ವಸ್ಯ ಸ್ತೋತುರ್ಋತ್ವಿಜೋ ಮನ ಆಯುಯುವೇ ಸಮಂತಾನ್ಮಿಶ್ರಯತಿ। ಶೀಘ್ರವರಪ್ರದಾನಾದಿತಿ ಭಾವಃ। ಕಿಂಚ ದೇವೋ ದೀಪ್ಯಮಾನ ಏಷ ಮಖೋ ಮಖಂ ಯಜ್ಞಮಾಯುಯುವೇ । ಸಂಪೂರ್ತಿಪರ್ಯಂತಂ ಮಿಶ್ರಯತಿ । ಯದ್ವಾ । ವಿಶ್ವಸ್ಯ ಮನೋಮಿಶ್ರಣೇ ಯಜಮಾನೇ ಕಿಮಾಯಾತಮಿತಿ ಚೇತ್ ಉಚ್ಯತೇ । ಮಖೋ ಯಜ್ಞನಿರ್ವಾಹಕೋಽಯಂ ಪೂಷಾ ದೇವೋ ಯಜಮಾನಸ್ಯ ಮನ ಆಯುಯುವೇ । ಸಮಂತಾನ್ಮಿಶ್ರಯತಿ । ಸಾಮರ್ಥ್ಯಾದ್ಯಜಮಾನಸ್ಯ ಮನ ಇತಿ ಲಭ್ಯತೇ ॥ ಯೌತೇಶ್ಛಂದಸೋ ಲಿಟ್ ॥

ಪ್ರತಿಪದಾರ್ಥ

**ತುವಿಜಾತಸ್ಯ**—ಅನೇಕ ಯಜಮಾನರಿಗಾಗಿ ಉತ್ಪನ್ನನಾದ ಅಥವಾ ಅನೇಕ ಯಜಮಾನರಿಗೆ ಪೂಜ್ಯನಾದ । **ಅಸ್ಯ ಪೂಷ್ಣಃ**—ಈ ಪೂಷದೇವನ । **ತವಸಃ**—ಶಕ್ತಿಯ ! **ಮಹಿತ್ವಂ**—ಮಾಹಾತ್ಮ್ಯೆಯು । **ಪ್ರಪ್ರ ಶಸ್ಯತೇ**—ಅತ್ಯತಿಶಯವಾಗಿ ಸ್ತುತಿಸಲ್ಪಡುತ್ತದೆ। **ನ ತಂದತೇ**—(ಶ್ರದ್ಧಾರಹಿತನಾಗಿ) ಯಾರೂ ನಿಲ್ಲಿಸುವುದಿಲ್ಲ । **ಅಸ್ಯ**—ಈ ಪೂಷನ ! **ಸ್ತೋತ್ರಂ**—(ಮಾಹಾತ್ಮ್ಯದ) ಕೀರ್ತನವು । **ನ ತಂದತೇ**—ಎಲ್ಲೂ ನಿಲ್ಲುವುದೇ ಇಲ್ಲ (ಸಕಲರೂ ಸ್ತುತಿಸುತ್ತಾರೆ) । ಆದುದರಿಂದ । **ಅಹಂ**—ನಾನೂ (ಕೂಡ) । **ಸುಮ್ನಯುಃ**—ಸುಖವನ್ನು ಅಪೇಕ್ಷಿಸುತ್ತಾ । **ಅಂತ್ಯೂತಿಂ**—ಬಹಳ ಹತ್ತಿರದ ರಕ್ಷಕನೂ । **ಮಯೋಭುವಂ**—ಸುಖಕಾರಿಯೂ ಆದ ಪೂಷನನ್ನು । **ಅರ್ಚಾಮಿ**—ಪೂಜಿಸಿ ಸ್ತೋತ್ರಮಾಡುತ್ತೇನೆ । **ಯಃ**—ಯಾವ ಅದೇ ಪೂಷದೇವನು । **ಮಖಃ**—ಯಜ್ಞವಂತನಾಗಿ । **ವಿಶ್ವಸ್ಯ**—ಸಕಲ ಋತ್ವಿಕ್ಕುಗಳ । **ಮನಃ**—ಮನಸ್ಸನ್ನು । **ಆಯುಯುವೇ**—(ತನ್ನ ವರಪ್ರದಾನದಿಂದ) ಚೆನ್ನಾಗಿ ಸೇರಿಸುತ್ತಾನೆಯೋ । **ಅಥವಾ** [**ದೇವಃ**—ಪ್ರಕಾಶಮಾನನಾದ ಪೂಷನು । **ಮಖಃ**—ಯಜ್ಞವನ್ನು। **ಆ ಯುಯುವೇ**—(ಪೂರ್ಣವಾಗುವವರೆಗೆ) ಒಂದೇ ಸಮನಾಗಿ ಸೇರಿಸುತ್ತಾನೆಯೋ] । ಅಥವಾ [**ಮಖಃ**—ಯಜ್ಞನಿರ್ವಾಹಕನಾದವನೂ । **ದೇವಃ**—ದೇವತಾತ್ಮನಾದವನೂ ಆದ ಪೂಷನು । **ಮನಃ**—ಯಜಮಾನನ ಮನಸ್ಸನ್ನು । **ಆ ಯುಯುವೇ**—ಒಂದಾಗಿ ಸೇರಿಸಿದನೋ (ಅಂತಹ ಪೂಷನನ್ನು ಸ್ತುತಿಸುತ್ತೇನೆ)]

ಭಾವಾರ್ಥ

ಅನೇಕ ಯಜಮಾನರಿಗಾಗಿ ಉತ್ಪನ್ನನಾದ ಈ ಪೂಷದೇವನ ಶಕ್ತಿಯ ಮಾಹಾತ್ಮ್ಯವು ಅತ್ಯತಿಶಯವಾಗಿ ಸ್ತುತಿಸಲ್ಪಡುತ್ತದೆ. ಈ ಸ್ತೋತ್ರವನ್ನು ಶ್ರದ್ಧಾರಹಿತನಾಗಿ ಯಾರೂ ನಿಲ್ಲಿಸುವುದಿಲ್ಲ. ಸಕಲರೂ ಸ್ತುತಿಸಿಯೇ ತೀರುತ್ತಾರೆ. ಆದುದರಿಂದ, ಸುಖವನ್ನು ಅಪೇಕ್ಷಿಸುವ ನಾನೂ ಕೂಡ ಬಹಳ ಹತ್ತಿರದ ರಕ್ಷಕನೂ ಸುಖಕಾರಿಯೂ ಆದ ಪೂಷನನ್ನು ಪೂಜಿಸಿ ಸ್ತೋತ್ರಮಾಡುತ್ತೇನೆ. ಪೂಷನು ಯಜ್ಞವಂತನಾಗಿ ಸಕಲ ಋತ್ವಿಕ್ಕುಗಳ ಮನಸ್ಸನ್ನೂ ತನ್ನ ವರಪ್ರದಾನದಿಂದ ಚೆನ್ನಾಗಿ ಒಂದುಗೂಡಿಸುತ್ತಾನೆ. ಪ್ರಕಾಶಮಾನನಾದ ಪೂಷನು ಯಜ್ಞಪೂರ್ಣವಾಗುವವರೆಗೆ ತಾನೂ ಸಹ ಒಂದುಗೂಡಿಸುತ್ತಾನೆ

## English Translation

The greatness of the strength of the many-worshipped Pushan is universally lauded; no one detracts (from his praise); his praise displeases no one. Desirous of happiness, I adore him, whose protection is ever nigh; who is the source of felicity; who, when devoutly worshipped, blends with the thoughts of all (his worshippers): who, (though) a deity, is united with the sacrifice.

॥ ವಿಶೇಷವಿಷಯಗಳು ॥

**ಪೂಷ್ಣಃ**—**ಪೂಷಾ ಯದ್ರಶ್ಮಿಪೋಷಂ ಪುಷ್ಯತಿ ತತ್ ಪೂಷಾ ಭವತಿ ।** (ನಿ. ೧೨-೧೬). ರಶ್ಮಿಗಳಿಂದ ಪೋಷಿಸುವವನಾದ್ದರಿಂದ **ಪೂಷಾ** ಎಂಬ ಹೆಸರು, ಎಂದು ನಿರುಕ್ತದ ನಿರ್ವಚನವಿದೆ. ಶತಪಥಬ್ರಾಹ್ಮಣದಲ್ಲಿಯೂ ಸಹ,

**ಇಯಂ ವೈ ಪೂಷಾ ಪೂಷೇಯಂ ಹೀದಂ ಸರ್ವಂ ಪುಷ್ಯತಿ ಯದಿದಂ ಕಿಂಚ ।**
(ಶ. ಬ್ರಾ. ೧೪-೪-೨-೨೫)

ಈ ದೇವತೆಯು ಎಲ್ಲವನ್ನೂ ಪೋಷಿಸುವವನಾದ್ದರಿಂದ **ಪೂಷ**ನೆಂದು ಕರೆಯಲ್ಪಡುವನು ಎಂದು ಹೇಳಿದೆ. ಈ ವಿಧವಾದ ಅರ್ಥವು **ಪೂಷನು** ದ್ವಾದಶಾದಿತ್ಯರಲ್ಲಿ ಒಬ್ಬನೆಂಬ ವಿಷಯವನ್ನು ಸಮರ್ಥಿಸುವುದು.

**ಪುಷ್ಯನ್ ಕ್ಷಿತಿಂ ಪೋಷಯತಿ ಪ್ರಣುದನ್ ರಶ್ಮಿಭಿಸ್ತಮಃ ।**
**ತೇನೈನಮಸ್ತೌತ್ಪೂಷೇತಿ ಭರದ್ವಾಜಸ್ತು ಪಂಚಭಿಃ ॥**
(ಬೃ. ದೇ. ೨-೬೩)

ಕತ್ತಲನ್ನು ನಾಶಮಾಡುತ್ತಾ **ಪೃಥ್ವಿಯು** ವೃದ್ಧಿಯನ್ನು ಹೊಂದುವಂತೆ ಅದನ್ನು ಪೋಷಿಸುವುದರಿಂದ **ಪೂಷಾ** ಎಂಬ ಹೆಸರು. ಈ ದೇವನನ್ನು ಭರದ್ವಾಜ ಋಷಿಯು ಆರನೇ ಮಂಡಲದ ೫೩, ೫೪, ೫೫, ೫೬ ಮತ್ತು ೫೮ ಈ ೫ ಸೂಕ್ತಗಳಲ್ಲಿ ಸ್ತುತಿಸಿದ್ದಾನೆ ಎಂದು ಬೃಹದ್ದೇವತಾವಾಕ್ಯವಿದೆ.

**ತುವಿಜಾತಸ್ಯ**—**ತುವಿ** ಶಬ್ದವು ಬಹುನಾಮಗಳಲ್ಲಿ ಪಠಿತವಾಗಿದೆ. (ನಿ. ೩-೧೭). ಸಾಯಣರು ಈ ಪದಕ್ಕೆ **ಬಹುಯಜಮಾನಾರ್ಥಮುತ್ಪನ್ನಸ್ಯ** ಅನೇಕ ಯಜ್ಞಕರ್ತರಾದ ಯಜಮಾನರಿಗಾಗಿ ಉತ್ಪನ್ನನಾದ (ಪೂಷನ) ಎಂದರ್ಥಮಾಡಿದ್ದಾರೆ. **ತುವಿಜಾತ** ಎಂಬ ವಿಶೇಷಣವು ಇಂದ್ರ, ಅಗ್ನಿ, ವರುಣ ಮುಂತಾದ ಇತರ ದೇವತೆಗಳಿಗೂ ವಿಶೇಷಣವಾಗಿದೆ. ಅನೇಕ ಸಂದರ್ಭಗಳಲ್ಲಿ ಅರ್ಥವ್ಯತ್ಯಾಸವೂ ಇರುತ್ತದೆ. ಈ ಸಮಸ್ತಪದಕ್ಕೆ ಎರಡು ಮೂರು ವಿಧವಾದ ವಿಗ್ರಹವಾಕ್ಯವು ಸಾಧ್ಯವಾಗುವುದರಿಂದ ಆಯಾ ಸಂದರ್ಭಕ್ಕನುಗುಣವಾದ ಅರ್ಥವನು ಹೇಳಬೇಕಾಗುತ್ತದೆ. ಉದಾಹರಣೆಗೆ--

**ಅಹನ್ನಹಿಂ ಪರಿಶಯಾನಮರ್ಣ ಓಜಾಯಮಾನಂ ತುವಿಜಾತ ತವ್ಯಾನ್ ।**
(ಋ. ಸಂ. ೩-೩೨-೧೧)

ಎಂಬ ಋಕ್ಕಿನಲ್ಲಿ ಇಂದ್ರನಿಗೆ ವಿಶೇಷಣವಾಗಿದೆ. ಬಹೂನಿ ಜಾತಾನಿ ಪೃಥಿವ್ಯಾದೀನಿ ಯಸ್ಮಾತ್ ಸೋಽಯಂ ತುವಿಜಾತಃ । ಯಾವ ಇಂದ್ರನಿಂದ ಪೃಥಿವ್ಯಾದಿ ಅನೇಕ ಭೂತಗಳು ಉತ್ಪನ್ನವಾದವೋ ಅಂತಹ ಇಂದ್ರನೆಂದು ಅರ್ಥಮಾಡಿದ್ದಾರೆ

ನಮಃ ಪುರಾ ತೇ ವರುಣೋತ ನೂನಮುತಾಪರಂ ತುವಿಜಾತ ಬ್ರವಾಮ ।
(ಋ ಸಂ. ೨-೨೮-೮)

ಪ್ರ ಮಿತ್ರಯೋರ್ವರುಣಯೋಃ ಸ್ತೋಮೋ ನ ಏತು ಶೂಷ್ಯಃ । ನಮಸ್ವಾನ್ತುವಿಜಾತಯೋಃ ।
(ಋ. ಸಂ. ೭-೬೬-೧)

ಇತ್ಯಾದಿ ಋಕ್ಕುಗಳಲ್ಲಿ ಮಿತ್ರಾವರುಣರಿಗೆ ವಿಶೇಷಣವಾಗಿ ಬಹುಭಾವಮಾಪನ್ನಯೋಃ ಅನೇಕ ವಿಧವಾದ ರೂಪವನ್ನು ಹೊಂದಿ ಆವಿರ್ಭೂತರಾದ ಎಂದೂ

ವಿ ಷಾಹ್ಯಗ್ನೇ ಗೃಣತೇ ಮನೀಷಾಂ ಖಂ ವೇಪಸಾ ತುವಿಜಾತ ಸ್ತವಾನಃ ।
(ಋ. ಸಂ. ೪-೧೧-೨)

ಎಂಬಲ್ಲಿ ಅಗ್ನಿಯ ಸ್ವರೂಪವನ್ನು ವರ್ಣಿಸಿ ಸಂಬೋಧಿಸುತ್ತಾ ಬಹುಜನ್ಮನ್ ಅಗ್ನೇ । ವಿದ್ಯುದಾದಿ ಬೇರೆಬೇರೆ ರೂಪದಲ್ಲಿ ಉತ್ಪನ್ನವಾಗುವ ಅಗ್ನಿಯೇ ಎಂದೂ, ಹೀಗೆಯೇ ಅನೇಕ ಕಡೆಗಳಲ್ಲಿ ಇಂದ್ರಾದಿ ದೇವತೆಗಳ ಸ್ವರೂಪವನ್ನೂ ವರ್ಣಿಸುತ್ತದೆ. ಬೃಹದ್ದೇವತಾಕಾರರು ತುವಿಜಾತ ಎಂಬ ಪದದಿಂದ ಒಂದು ಪ್ರತ್ಯೇಕವಾದ ದೇವತೆಯನ್ನೇ ನಿರ್ದೇಶಮಾಡಿದ್ದಾರೆ. ಇವರು,

ಶೃಣೋತು ಮಿತ್ರೋ ಅರ್ಯಮಾ ಭಗೋ ನ ಸ್ತುವಿಜಾತೋ ವರುಣೋ ದಕ್ಷೋ ಅಂಶಃ ।
(ಋ. ಸಂ. ೨-೨೭-೧)

ಎಂಬ ಋಕ್ಕನ್ನು ಲಕ್ಷ್ಯದಲ್ಲಿಟ್ಟುಕೊಂಡು ತುವಿಜಾತನೆಂಬ ದೇವತೆಯನ್ನು ಮಿತ್ರಾದಿ ಗುಂಪುಗಳಲ್ಲಿ ಸೇರಿಸಿದ್ದಾರೆ. ಸಾಯಣರು ಈ ಪದಕ್ಕೆ ಬಹುಷು ಪ್ರದೇಶೇಷು ಅನುಗ್ರಹಾರ್ಥಂ ಪ್ರಾದುರ್ಭೂತಃ । ವರುಣವಿಶೇಷಣಮೇತತ್ । ಅನೇಕ ಪ್ರದೇಶಗಳಲ್ಲಿ ಅನುಗ್ರಹಾರ್ಥವಾಗಿ ಪ್ರಾದುರ್ಭೂತನಾದವನು ಎಂದು ಅರ್ಥಮಾಡಿ ವರುಣನಿಗೆ ವಿಶೇಷಣವೆಂದು ಹೇಳಿದ್ದಾರೆ. ಆದರೆ ಬೃಹದ್ದೇವತಾಕಾರರು ಬಹುಜಾತಶ್ಚ ಧಾತಾ ಬಹುಜಾತನಾದ ಧಾತೃ ಎಂಬ ನಿರುಕ್ತಕಾರರ ಅರ್ಥವನ್ನನುಸರಿಸಿ (ನಿ. ೧೨-೩೬)

ಮಿತ್ರಾವರುಣದಕ್ಷಾಂಶತುವಿಜಾತಭಗಾರ್ಯಮ್ಣಾಂ ।
ಅದಿತ್ಯಾನಾಮಿಮಾಃ ಸೂಕ್ತಮಿದಂ ವಾರುಣಮುಚ್ಯತೇ ॥
(ಬೃ. ದೇ. ೪-೮೨, ೮೩)

ಎಂಬ ವಾಕ್ಯದಿಂದ ಸಪ್ತಸಂಖ್ಯಾಕರಾದ ಆದಿತ್ಯರಲ್ಲಿ ಒಬ್ಬನಾದ ಧಾತೃವೆಂದು ಸೂಚಿಸಿದ್ದಾರೆ.

ತುವಿಜಾತ ಎಂಬಂತೆ ತುವಿಷ್ಮಾನ್, ತುವಿರಾಧಃ, ತುವಿಮನ್ಯು, ತುವಿದ್ಯುಮ್ನ, ತುವಿನೃಮ್ಣ ಎಂಬ ಶಬ್ದಗಳ ಪ್ರಯೋಗಗಳೂ ಇವೆ.

ಅಹಂ ಹ್ಯುಗ್ರಸ್ತವಿಷಸ್ತುವಿಷ್ಮಾನ್ವಿಶ್ವಸ್ಯ ಶತ್ರೋರನಮಂ ವಧಸ್ನೈಃ ।
(ಋ. ಸಂ. ೧-೧೬೫-೬)

ಎಂಬಲ್ಲಿ **ತುವಿಷ್ಮಾನ್** ಎಂದರೆ ಅತ್ಯಂತ ಬಲಶಾಲಿಯೆಂದರ್ಥವಾಗುತ್ತದೆ ಹೀಗೆಯೇ **ತುವಿದ್ಯುಮ್ನ**ವೆಂದರೆ (ಋ ಸಂ. ೧-೮೮-೩) ಪ್ರಭೂತವಾದ ಧನವೆಂದೂ, **ತುವಿನೃಮ್ಣ** (ಋ ಸಂ. ೧-೪೩-೬) ವೆಂದರೆ ಪ್ರಭೂತವಾದ ಶಕ್ತಿಯೊಡಗೂಡಿದವನೆಂದೂ, **ತುವಿಷ್ವಣಃ** (ಋ. ಸಂ. ೧-೧೬೬-೧) ಎಂದರೆ ಅಧಿಕವಾದ ಧ್ವನಿಯುಕ್ತ ನಾದುದೆಂದೂ ಅರ್ಥವಾಗುತ್ತದೆ. ಪ್ರಕೃತವಾದ ಋಕ್ಕಿನಲ್ಲಿ ಮೇಲೆ ಹೇಳಿದಂತೆ ಯಜ್ಞಕರ್ತರಿಗೆ ಅನುಗ್ರಹ ಮಾಡುವುದಕ್ಕಾಗಿ ಅನೇಕ ವಿಧವಾದ ಆವಿರ್ಭಾವವುಳ್ಳ ಎಂದು **ಪೂಷನ** ಗುಣವನ್ನು ಹೇಳುತ್ತದೆ.

**ಅಂತ್ಯೂತಿಂ— ಆಸನ್ನರಕ್ಷಣಂ** – ಬಹಳ ಹತ್ತಿರದ ರಕ್ಷಕನೆಂದು ಅರ್ಥ. **ಪಶುಪಾಃ** (ಋ. ಸಂ. ೬-೫೮-೨) **ಪುಷ್ಟಿಂಭರ** ಇತ್ಯಾದಿ ವಿಶೇಷಣಗಳಂತೆಯೇ **ಅಂತ್ಯೂತಿ**ಯೆಂಬ ವಿಶೇಷಣವೂ ಪೂಷನ ಪಾಲನ ಕ್ರಮವನ್ನೂ ತಿಳಿಸುತ್ತದೆ.

**ಮಖಃ ವಿಶ್ವಸ್ಯ ಮನಃ ಆಯುಯುವೇ** - ಎಂಬ ವಾಕ್ಯಕ್ಕೆ ಎರಡು ವಿಧವಾದ ಅನ್ವಯವೂ ಅದಕ್ಕನು ಗುಣವಾದ ಅರ್ಥವೂ ಸಾಧ್ಯವೆಂದು ಪ್ರತಿಪದಾರ್ಥವನ್ನು ಹೇಳುವಾಗ ತಿಳಿಸಿದೆ

**ಆಯುಯುವೇ— ಸಮಂತಾತ್ ಸಂಪೂರ್ತಿಪರ್ಯಂತಂ ಮಿಶ್ರಯತಿ ।** ಕಾರ್ಯವು ನಿರ್ವಿಘ್ನವಾಗಿ ಪೂರ್ಣ ವಾಗಿ ಆಗುವವರೆಗೆ ಒಟ್ಟಿಗೆ ಸೇರಿಸುತ್ತಾನೆ, ಎಂದು ಯಜ್ಞಪರವಾಗಿಯೂ, **ಯಜಮಾನಸ್ಯ ಮನಃ ಸಮಂತಾತ್ ಆಯುಯುವೇ ।** ಯಜಮಾನನ ಮನಸ್ಸು ಬೇರೆಕಡೆ ತಿರುಗದೇ ಯಜ್ಞದಲ್ಲಿಯೇ ನೆಟ್ಟಮನಸ್ಸುಳ್ಳದ್ದಾಗಿರುವಂತೆ ಮಾಡುತ್ತಾನೆ ಎಂದು **ಮನಶ್ಶಬ್ದ** ಪರವಾಗಿಯೂ ಎರಡರ್ಥವು ಸಾಧ್ಯವಾಗುತ್ತದೆ.

**ಸುಮ್ನಯುನ್– ಸುಮ್ನ** ಶಬ್ದವು **ಸುಖ**ನಾಮಗಳಲ್ಲಿ ಪಠಿತವಾಗಿದೆ. (೩-೧೩). **ಸುಖಮಿಚ್ಛನ್**— ಸುಖವನ್ನು ಅಪೇಕ್ಷಿಸುವವರಾಗಿ ಎಂದರ್ಥ

**ಮನ ಆಯುಯುವೇ ಮಖೋ ದೇವ ಆಯುಯುವೇ ಮಖಃ**—ಇಲ್ಲಿ ದ್ವಿರುಕ್ತಿಯಿದೆ. ಇದೊಂದು ವಿಧವಾದ ಶೈಲಿ. ಈ ದ್ವಿರುಕ್ತಿಯಲ್ಲಿ ಭಾವದ ತೀವ್ರತೆಯು ಕಾಣುತ್ತದೆ, ಎಂದು ನಿರುಕ್ತಕಾರರು ಇಂತಹ ಶೈಲಿಯ ಉತ್ಕೃಷ್ಟತೆಯನ್ನು ಸಮರ್ಥಿಸಿರುತ್ತಾರೆ.

**ಅಭ್ಯಾಸೇ ಭೂಯಾಂಸಮರ್ಥಂ ಮನ್ಯಂತೇ ಯಥಾಹೋ ದರ್ಶನೀಯಾಹೋ ದರ್ಶನೀಯೇತಿ ।**
(ನಿ. ೧೦-೪೨)

ಪುನರುಕ್ತಿಯಿಂದ ಭಾವದ ಬೆಳೆವಣಿಗೆಗೆ ಒಂದು ವಿಧವಾದ ಪ್ರಭಾವವೂ ಶಕ್ತಿಯೂ ತೋರುತ್ತದೆ. ಅವಳು ಸುಂದರ ಳಾಗಿದ್ದಾಳೆ, ಅತ್ಯಂತ ಸುಂದರಳಾಗಿದ್ದಾಳೆ ಎನ್ನುವ ಉದಾಹರಣೆಯಲ್ಲಿ ಅವಳ ಸೌಂದರ್ಯವನ್ನು ವರ್ಣಿಸುವುದರಲ್ಲಿ ಒಂದು ಅತಿಶಯವಾದ ಆದರವು ಕಾಣುತ್ತದೆ. ಇದರಂತೆಯೇ ಉತ್ತಮವಾದ ಭಾವವನ್ನು ಪ್ರಕಾಶಪಡಿಸುವಾಗ ಅದರಲ್ಲಿ ಅತಿಶಯವಾದ ಆದರವನ್ನು ತೋರಿಸಿ ವಾಕ್ಯಗಳನ್ನು ಪಠಿಸುವ ಸನ್ನಿವೇಶಗಳು ಅನೇಕ ಇವೆ. ಅವುಗಳಲ್ಲಿ **ಪರುಚ್ಛೇಪಋಷಿಯ** ಶೈಲಿಯನ್ನು **ತತ್ಪರುಚ್ಛೇಪಸ್ಯ ಶೀಲಂ** (ನಿ. ೧೦-೪೨) ಇದು ಪರುಚ್ಛೇಪರ ವೈಶಿಷ್ಟ್ಯ ವೆಂದು ನಿರುಕ್ತಕಾರರು ಪ್ರಶಂಸಿಸಿದ್ದಾರೆ ಮತ್ತು

**ಪ್ರ ತದ್ವೋಚೇಯಂ ಭವ್ಯಾಯೇಂದವೇ ಹವ್ಯೋ ನ ಯ ಇಷವಾನ್ಮನ್ಮ ರೇಜತಿ ರಕ್ಷೋಹಾ ಮನ್ಮ ರೇಜತಿ ।** (ಋ ಸಂ. ೧-೧೨೯-೬)

ಎಂಬ ಋಕ್ಕಿನಲ್ಲಿರುವ ಅಭ್ಯಾಸವನ್ನು ಅನುಸರಿಸಿ ತೋರಿಸಿದ್ದಾರೆ. ಅದರಂತೆಯೇ ಇಲ್ಲಿಯೂ ಸಹ **ಆಯುಯುಷೇ ಮಖೋ ದೇವ ಆಯುಯುಷೇ ಮಖಃ** । ಎಂಬ ಅಭ್ಯಾಸದ ಶೈಲಿಯಲ್ಲಿ ಒಂದು ವಿಧವಾದ ಕಾವ್ಯಸೌಂದರ್ಯವಿದೆ.

ವ್ಯಾಕರಣಪ್ರಕ್ರಿಯಾ

**ಪ್ರಪ್ರ**— ಪಾದಪೂರಣದಲ್ಲಿ ವೀಪ್ಸಾ ಬಂದುದರಿಂದ **ನಿತ್ಯವೀಪ್ಸಯೋಃ** (ಪಾ. ಸೂ. ೮-೧-೪) ಎಂಬುದರಿಂದ ದ್ವಿತ್ವ. **ಅನುದಾತ್ತಂ ಚ** (ಪಾ. ಸೂ. ೮-೧-೩) ಎಂಬುದರಿಂದ ಆಮ್ರೇಡಿತಸಂಜ್ಞೆಯುಳ್ಳ ಪರರೂಪಕ್ಕೆ ಅನುದಾತ್ತಸ್ವರ ಬರುತ್ತದೆ.

**ಪೂಷ್ಣಃ**— ಪೂಷ ವೃದ್ಧೌ ಧಾತು. **ಶ್ವನ್ನುಕ್ಷನ್**—(ಉ. ಸೂ. ೧-೧೫೭) ಎಂಬುದರಿಂದ ಕನಿ ಪ್ರತ್ಯಯಾಂತವಾಗಿ ನಿಪಾತಿತವಾಗಿದೆ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ. ಷಷ್ಠೀಏಕವಚನಾಂತರೂಪ

**ತುವಿಜಾತಸ್ಯ**—ಬಹೂನಾಮುಪಕಾರಕತಯಾ ತತ್ಸಂಬಂಧಿತ್ವೇನ ಜಾತ ಇತಿ ತುವಿಜಾತಃ. ಷಷ್ಠೀ ತತ್ಪುರುಷಸಮಾಸ. **ಸಮಾಸಸ್ಯ** (ಪಾ. ಸೂ. ೬-೧-೨೨೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ಷಷ್ಠೀ ಏಕವಚನಾಂತರೂಪ.

**ಶಸ್ಯತೇ**—ಶಂಸು ಸ್ತುತೌ. ಧಾತು. ಕರ್ಮಣಿಯಲ್ಲಿ ಲಟ್‌ಪ್ರಥಮಪುರುಷಏಕವಚನದಲ್ಲಿ ತಪ್ರತ್ಯಯ. **ಟಿತಆತ್ಮನೇಪದಾನಾಂ**—ಎಂಬುದರಿಂದ ಟಿಗೆ ಏತ್ವ. **ಸಾರ್ವಧಾತುಕೇ ಯಕ್** (ಪಾ. ಸೂ. ೩-೧-೬೭) ಎಂಬುದರಿಂದ ಯಕ್. ಇದು ಕಿತ್ತಾದುದರಿಂದ **ಅನಿದಿತಾಂ ಹಲಉ**—ಎಂಬುದರಿಂದ ಉಪಧಾನಕಾರ ಲೋಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಮಹಿತ್ವಮ್**—ಮಹ ಪೂಜಾಯಾಂ ಧಾತು. **ಇನ್** (ಉ. ಸೂ. ೪-೫೫೭) ಎಂಬುದರಿಂದ ಔಣಾದಿಕ ಇನ್ ಪ್ರತ್ಯಯ. ಮಹೇರ್ಭಾವಃ ಮಹಿತ್ವಮ್. **ತಸ್ಯಭಾವಸ್ತ್ವತಲೌ** ಎಂಬುದರಿಂದ ತ್ವಪ್ರತ್ಯಯ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ.

**ತಂದತೇ**—ತದಿ ಹಿಂಸಾಯಾಂ ಧಾತು. ಲಟ್ ಪ್ರಥಮಪುರುಷಏಕವಚನಾಂತರೂಪ. ಅತಿಙಂತದಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಅರ್ಚಾಮಿ**—ಅರ್ಚ ಪೂಜಾಯಾಂ ಧಾತು. ಲಟ್ ಉತ್ತಮಪುರುಷಏಕವಚನಾಂತರೂಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಶಪ್, ಮಿಪ್ ಪಿತ್ತಾದುದರಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಸುಮ್ನಯನ್**—ಸುಮ್ನ ಎಂದರೆ ಸುಖ. **ಸುಪ ಆತ್ಮನಃ ಕ್ಯಚ್** (ಪಾ. ಸೂ. ೩-೧-೮) ಎಂಬುದರಿಂದ ಇಚ್ಛಾರ್ಥದಲ್ಲಿ ಕ್ಯಚ್ ಪ್ರತ್ಯಯ. **ನಛಂದಸ್ಯಪುತ್ರಸ್ಯ** (ಪಾ. ಸೂ. ೭-೪-೩೫) ಎಂಬುದರಿಂದ ಈತ್ವಾದಿಗಳು ಬರುವುದಿಲ್ಲ. **ಸನಾದ್ಯಂತಾ ಧಾತವಃ** ಎಂಬುದರಿಂದ ಸುಮ್ನಯ ಎಂಬ ಕ್ಯಜಂತವು ಧಾತುಸಂಜ್ಞೆಯನ್ನು ಹೊಂದುತ್ತದೆ. ಕ್ಯಜಂತದ ಮೇಲೆ ಲಡರ್ಥದಲ್ಲಿ ಶತೃ ಪ್ರತ್ಯಯ. ಕ್ಯಚ್ ಸ್ವರ ಉಳಿಯುತ್ತದೆ. ಪ್ರಥಮಾಏಕವಚನಾಂತರೂಪ.

**ಅಂತ್ಯೂತಿಮ್**—ಅಂತಿಕಾ ಆಸನ್ನಾ ಊತಿಃ ಯಸ್ಯ ಸಃ ಅಂತ್ಯೂತಿಃ ತಮ್. **ಕಾದಿಲೋಪೋ-ಬಹುಲಮ್** ಎಂಬುದರಿಂದ ಅಂತಿಕಶಬ್ದದ ಕಕಾರಕ್ಕೆ ಲೋಪ. ಯಣಾದೇಶ. **ಬಹುವ್ರೀಹೌ ಪ್ರಕೃತ್ಯಾ-ಪೂರ್ವಪದಮ್** (ಪಾ. ಸೂ. ೬-೨-೧) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಮಯೋಭುವಮ್**—ಭೂ ಸತ್ತಾಯಾಂ ಧಾತು. ಪ್ರೇರಣಾವ್ಯಾಪಾರ ತೋರುವುದರಿಂದ ಅಂತರ್ಭಾವಿತಣ್ಯರ್ಥಕವಾದ ಧಾತು. ಇದಕ್ಕೆ ಮಯಃ ಎಂಬುದು ಉಪಪದವಾಗಿರುವಾಗ ಕ್ವಿಪ್ ಪ್ರತ್ಯಯ. (ಮೀಞ್ ಹಿಂಸಾಯಾಂ ಧಾತು. ಹಿನಸ್ತಿ ದುಃಖಮಿತಿ ಸುಖಂ ಮಯಃ) ಮಯಃ ಭಾವಯತಿ ಇತಿ ಮಯೋಭೂಃ **ಗತಿಕಾರಕೋಪಪದಾತ್ಕೃತ್** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

**ಯುಯುವೇ**—ಯು ಮಿಶ್ರಣಾಮಿಶ್ರಣಯೋಃ ಧಾತು. **ವ್ಯತ್ಯಯೋ ಬಹುಲಮ್** (ಪಾ. ಸೂ. ೩-೧-೮೫) ಎಂಬುದರಿಂದ ಆತ್ಮನೇಪದಿಯಾಗುತ್ತದೆ. **ಛಂದಸಿಲುಙ್‌ಲಙ್‌ಲಿಟಃ** (ಪಾ. ಸೂ. ೩-೪-೬) ಎಂಬುದರಿಂದ ವರ್ತಮಾನಾರ್ಥದಲ್ಲಿ ಲಿಟ್. ಪ್ರಥಮಪುರುಷಏಕವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಮಖಃ**—ಮಖಃ ಅಸ್ಯ ಅಸ್ತಿ ಇತಿ ಮಖಃ ಛಾಂದಸವಾಗಿ ಮತುಪಿಗೆ ಲುಕ್. ಅಥವಾ ಮತ್ವರ್ಥದಲ್ಲಿ **ಅರ್ಶಆದಿಭ್ಯೋಽಚ್** (ಪಾ. ಸೂ. ೫-೨-೧೨೭) ಎಂಬುದರಿಂದ ಅಚ್ ಪ್ರತ್ಯಯ. **ಯಸ್ಯೇತಿ ಚ** ಎಂಬುದರಿಂದ ಅಕಾರಲೋಪ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ॥ ೧ ॥



ಸಂಹಿತಾಪಾಠಃ

ಪ್ರ ಹಿ ತ್ವಾ ಪೂಷನ್ನಜಿರಂ ನ ಯಾಮನಿ ಸ್ತೋಮೇಭಿಃ ಕೃಣ್ವ ಋಣವೋ
ಯಥಾ ಮೃಧ ಉಷ್ಟ್ರೋ ನ ಪೀಪರೋ ಮೃಧಃ ।
ಹುವೇ ಯತ್ತ್ವಾ ಮಯೋಭುವಂ ದೇವಂ ಸಖ್ಯಾಯ ಮರ್ತ್ಯಃ ।
ಅಸ್ಮಾಕಮಾಂಗೂಷಾನ್ದ್ಯುಮ್ನಿನಸ್ಕೃಧಿ ವಾಜೇಷು ದ್ಯುಮ್ನಿನಸ್ಕೃಧಿ ॥ ೨ ॥

ಪದಪಾಠಃ

ಪ್ರ । ಹಿ । ತ್ವಾ । ಪೂಷನ್ । ಅಜಿರಂ । ನ । ಯಾಮನಿ । ಸ್ತೋಮೇಭಿಃ । ಕೃಣ್ವೇ । ಋಣವಃ । ಯಥಾ । ಮೃಧಃ । ಉಷ್ಟ್ರಃ । ನ । ಪೀಪರಃ । ಮೃಧಃ ।

ಹುವೇ । ಯತ್ । ತ್ವಾ । ಮಯಃऽಭುವಂ । ದೇವಂ । ಸಖ್ಯಾಯ । ಮರ್ತ್ಯಃ ।

ಅಸ್ಮಾಕಂ । ಆಂಗೂಷಾನ್ । ದ್ಯುಮ್ನಿನಃ । ಕೃಧಿ । ವಾಜೇಷು । ದ್ಯುಮ್ನಿನಃ । ಕೃಧಿ ॥ ೨ ॥

॥ ಸಾಯಣಭಾಷ್ಯಂ ॥

ಹೇ ಪೂಷನ್ ಅಜಿರಂ ಯಜ್ಞದೇಶಂ ಪ್ರತಿ ಗಮನವಂತಂ ತ್ವಾ ತ್ವಾಂ ಯಾಮನಿ ಗಮನೇ ನಿಮಿತ್ತಭೂತೇ ಸತಿ ಸ್ತೋಮೇಭಿಃ ಸ್ತೋತ್ರೈಃ ಪ್ರ ಕೃಣ್ವೇ । ಪ್ರಕೃಷ್ಟಂ ಕರೋಮಿ । ತತ್ರ ದೃಷ್ಟಾಂತಃ । ಯಾಮನಿ ಶೀಘ್ರಗಮನೇಽಜಿರಂ ನ ಶೀಘ್ರಗಾಮಿನಮಶ್ವಮಿವ । ಸ ಯಥಾ ಪ್ರಸ್ತೂಯತೇ ತದ್ವತ್ । ಕಿಂಚ ಯಥಾ ಮೃಧಃ ಸಂಗ್ರಾಮಾನುದ್ದಿಶ್ಯ ಋಣವಃ ಗಚ್ಛೇಃ ತಥಾ ಪ್ರ ಕೃಣ್ವೇ । ಯದ್ವಾ । ಯಥಾ ಋಣವಃ ಅಸ್ಮದ್ಯಜ್ಞಂ ಪ್ರತಿ ಗಚ್ಛೇಃ ॥ ಋಣ ಗತೌ ತನಾದಿಕಃ । ಲೇಟ್ಯಡಾಗಮಃ ॥ ತಥಾ ತ್ವಾಂ ಕೃಣ್ವೇ । ಕಿಂಚ ಮೃಧೋ ಹಿಂಸಕಾನ್ಯೋದ್ಧೄನ್ ಸಂಗ್ರಾಮೇ ಪೀಪರಃ । ಪಾರಂ ನಯಸಿ ॥ ಪಾರಯತೇರ್ಲುಙಿ ಚಙಿ ರೂಪಂ ॥ ತತ್ರ ದೃಷ್ಟಾಂತಃ । ಉಷ್ಟ್ರೋ ನ । ಉಷ್ಟ್ರೋ ಯಥಾ ಭಾರಂ ವೋಢಾ ಪಾರಯತಿ ತದ್ವನ್ಮೃಧಃ ಸಂಗ್ರಾಮಾತ್ಪೀಪರಃ । ಪಾರಂ ನಯಸಿ । ಅತಃ ಕಾರಣಾತ್ ತ್ವಾ ತ್ವಾಂ ಮಯೋಭುವಂ ಸುಖಸ್ಯ ಭಾವಯಿತಾರಂ ದೇವಂ ದೇವನಶೀಲಂ ಪೂಷಣಂ ಮರ್ತ್ಯೋ ಮರಣಧರ್ಮಾ ಮನುಷ್ಯೋಽಹಂ ಹುವೇ । ಆಹ್ವಯಾಮಿ । ಕಿಮರ್ಥಂ । ಸಖ್ಯಾಯ ಸಮಾನಖ್ಯಾನಾಯ ಪ್ರಿಯಕರಣಾಯ । ಏವಮಾಹೂತಃ ಸನ್ನಸ್ಮಾಕಮಾಂಗೂಷಾನಾಘೋಷಾನ್ ಸ್ತೋಮಾನ್ । ಆಂಗೂಷಃ ಸ್ತೋಮ ಆಘೋಷ ಇತಿ ಯಾಸ್ಕಃ । ದ್ಯುಮ್ನಿನಸ್ಕೃಧಿ । ದ್ಯೋತನವತಃ ಕುರು । ಯದ್ವಾ । ಸ್ತೋಮಾನ್ ಯಶೋವತೋಽನ್ನವತೋ ವಾ ಕೃಧಿ । ಅಸ್ಮತ್ಸ್ತುತ್ಯಾ ಪ್ರೀತಸ್ತ್ವಮೇವಂ ಕುರ್ವಿತ್ಯರ್ಥಃ । ಕಿಂಚ ವಾಜೇಷು ಸಂಗ್ರಾಮೇಷು ದ್ಯುಮ್ನಿನೋಽನ್ನವತಃ ಕೃಧಿ । ಅಸ್ಮದ್ವೈರಿಣೋ ಜಿತ್ವಾ ತೇಷಾಮನ್ನಂ ಮಯಿ ಕುರ್ವಿತ್ಯರ್ಥಃ ॥

ಪ್ರತಿಪದಾರ್ಥ

ಪೂಷನ್—ಎಲೈ ಪೂಷದೇವನೇ । ಯಥಾ—ಯಾವ ಪ್ರಕಾರವಾಗಿ । ಮೃಧಃ—ಯುದ್ಧಾಭಿಮುಖನಾಗಿ । ಋಣವಃ—ಹೋಗುತ್ತೀಯೋ । ಅಥವಾ ಯಜ್ಞಾಭಿಮುಖನಾಗಿ ಬರುತ್ತೀಯೋ । (ಆ ರೀತಿಯಲ್ಲಿ) । ಅಜಿರಂ—ಶೀಘ್ರವಾಗಿ ಸಂಚರಿಸುವ । ತ್ವಾ—ನಿನ್ನನ್ನು । ಯಾಮನಿ—(ನಿನ್ನ) ಆಗಮನದ ನಿಮಿತ್ತವಾಗಿ । [ಯಾಮನಿ ಅಜಿರಂ ನ—ಯುದ್ಧಾಭಿಮುಖವಾಗಿ ವೇಗದಿಂದ ಹೋಗುವ ಕುದುರೆಯನ್ನು ಶ್ಲಾಘಿಸುವಂತೆ] । ಸ್ತೋಮೇಭಿಃ—ಸ್ತೋತ್ರಗಳಿಂದ । ಪ್ರ ಕೃಣ್ವೇ—(ನಿನಗೆ ಉತ್ತೇಜಕವಾಗಿ) ಸ್ತುತಿಸುತ್ತೇನೆ । ಉಷ್ಟ್ರೋ ನ—ಒಂಟೆಯು ಭಾರವಾದ ವಸ್ತುವನ್ನು ದಾರಿಯ ಮೂಲಕ ಸಾಗಿಸಿ ಕೊನೆಯನ್ನು ಮುಟ್ಟಿಸುವಂತೆ । ಮೃಧಃ—ಯುದ್ಧದಿಂದ । ಪೀಪರಃ—(ಶತ್ರುಗಳನ್ನು ನಾಶಮಾಡಿ) ನಮ್ಮನ್ನು ಪಾರುಗಾಣಿಸುತ್ತೀಯೆ । ಯತ್—ಆದ್ದರಿಂದ । ಮಯೋಭುವಂ—ಸುಖವನ್ನುಂಟುಮಾಡುವವನೂ । ದೇವಂ—ದೇವಾತ್ಮನೂ ಆದ । ತ್ವಾ—ನಿನ್ನನ್ನು । ಮರ್ತ್ಯಃ—ಮನುಷ್ಯನಾದ ನಾನು । ಸಖ್ಯಾಯ—ಪ್ರೀತಿಯನ್ನುಂಟುಮಾಡುವುದಕ್ಕಾಗಿ । ಹುವೇ—ಕರೆಯುತ್ತೇನೆ । ಅಸ್ಮಾಕಂ—ನಮ್ಮ । ಆಂಗೂಷಾನ್—ಘೋಷಣೆಯೊಂದಿಗೆ ಮಾಡುವ ಸ್ತೋತ್ರಗಳನ್ನು । ದ್ಯುಮ್ನಿನ-

ಸ್ಕೃಧಿ—ಪ್ರಕಾಶಿಸುವಂತೆ ಅಥವಾ ಅನ್ನದಿಂದ ಕೂಡಿರುವನ್ನಾಗಿ ಮಾಡು । **ವಾಜೇಷು**—ಸಂಗ್ರಾಮಗಳಲ್ಲಿ । **ದ್ಯುಮ್ನಿನಃ**—(ನಮ್ಮ ವೈರಿಗಳ) ಅನ್ನವನ್ನು (ನಾವು) ಹೊಂದುವಂತೆ । **ಕೃಧಿ**—ಮಾಡು.

ಭಾವಾರ್ಥ

ಎಲೈ ಪೂಷದೇವನೇ, ಯುದ್ಧಾಭಿಮುಖವಾಗಿ ವೇಗದಿಂದ ಹೋಗುವ ಕುದುರೆಯನ್ನು ಶ್ಲಾಘಿಸುವಂತೆ ಯಜ್ಞಾಭಿಮುಖವಾಗಿ ಬರುವ ನಿನ್ನನ್ನು ನಿನ್ನ ಆಗಮನದ ನಿಮಿತ್ತವಾಗಿ ಸ್ತೋತ್ರಗಳಿಂದ ಘೋಷಿಸಿ ಶ್ಲಾಘಿಸುತ್ತೇನೆ. ಒಂಟೆಯು ಭಾರವಾದ ವಸ್ತುವನ್ನು ಸಾಗಿಸಿ ದಾರಿಯ ಕೊನೆಯನ್ನು ಮುಟ್ಟಿಸುವಂತೆ ನೀನೂ ಸಹ ನಮ್ಮ ಶತ್ರುಗಳನ್ನು ನಾಶಮಾಡಿ ನಮ್ಮನ್ನು ಯುದ್ಧದಿಂದ ಪಾರುಗಾಣಿಸುತ್ತೀಯೆ. ಆದ್ದರಿಂದ ಸುಖವನ್ನುಂಟುಮಾಡುವವನೂ ದೇವತಾತ್ಮನೂ ಆದ ನಿನ್ನನ್ನು ಮಾನವನಾದ ನಾನು ಪ್ರಿಯವನ್ನುಂಟುಮಾಡುವುದಕ್ಕಾಗಿ ಕರೆಯುತ್ತೇನೆ. ನಮ್ಮ ಸ್ತೋತ್ರಗಳನ್ನು ಸ್ವೀಕರಿಸಿ ನಮ್ಮನ್ನು ಅನ್ನಯುಕ್ತರನ್ನಾಗಿ ಮಾಡು. ಸಂಗ್ರಾಮಗಳಲ್ಲಿ ನಮ್ಮ ವೈರಿಗಳ ಅನ್ನವನ್ನು ನಾವು ಹೊಂದುವಂತೆ ಮಾಡು.

English Translation

I exalt you, Pushan, with praises, that you may hasten (to the sacrifice), like a rapid (courser) to the battle: that you may bear us across the combat, like a camel; therefore do I a mortal, invoke you, the divine bestower of happiness, for your friendship; and do thou render our invocations productive (of benefit); render them productive (of success) in battles.

॥ ವಿಶೇಷವಿಷಯಗಳು ॥

**ಋಣವಃ**—ಗತ್ಯರ್ಥಕವಾದ **ಋಣು** ಧಾತುವಿನಿಂದ ನಿಷ್ಪನ್ನವಾಗಿರುವ ಋಣ್ವತಿ, ಋಣೋತಿ ಎಂಬ ಪದಗಳು **ಗತಿಕರ್ಮ**ನಾಮಗಳಲ್ಲಿ ಪಠಿತವಾಗಿವೆ. (ನಿ. ೨-೯). ಒಂದು ನಿರ್ದಿಷ್ಟವಾದ ಪ್ರದೇಶಕ್ಕೆ ಹೋಗು, ಹೋಗಿಸೇರು ಅಥವಾ ಆ ಸ್ಥಿತಿಯನ್ನು ಹೊಂದು ಎಂದರ್ಥವಾಗುತ್ತದೆ.

**ಉಷೋ ಯದದ್ಯ ಭಾನುನಾ ವಿ ದ್ವಾರಾವೃಣವೋ ದಿವಃ ।**

(ಋ. ಸಂ. ೧-೪೮-೧೫)

**ಕಯಾ ನೋ ಅಗ್ನೇ ವಿ ವಸಃ ಸುವೃಕ್ತಿಂ ಕಾಮು ಸ್ವಧಾಮೃಣವಃ ಶಸ್ಯಮಾನಃ ।**

(ಋ. ಸಂ. ೭-೮-೩)

ಎಂಬ ಋಕ್ಕುಗಳಲ್ಲಿ **ಋಣವಃ** ಎಂಬ ಪದಕ್ಕೆ **ಪ್ರಾಪ್ನುಯಾಃ** ಎಂದರ್ಥವಾಗುವಂತೆ ಇಲ್ಲಿಯೂ ಯಥಾ **ಮೃಧಃ ಋಣವಃ, ಗಚ್ಛೇಃ ಯದ್ವಾ ಯಜ್ಞಂ ಪ್ರತಿ ಗಚ್ಛೇಃ** ಯಜ್ಞಸ್ಥಾನವನ್ನು ಬಂದು ಸೇರುವಂತೆ ಆಗು ಎಂದರ್ಥ.

**ಅಜಿರಂ**—ಅಜಿರ ಶಬ್ದವು ಕ್ಷಿಪ್ರನಾಮಗಳಲ್ಲಿ ಪಠಿತವಾಗಿದೆ. (ನಿ ೨-೯). ಶೀಘ್ರವಾಗಿ ನಡೆಯುವವನು ಎಂದರ್ಥ. ಅಗ್ನಿಯು ಕ್ಷಿಪ್ರವಾಗಿ ಹರಡುವುದರಿಂದ ಆ ವೇಗದಲ್ಲಿ ಅವನ ತೇಜಸ್ಸು ವೃದ್ಧಿಯಾಗುತ್ತದೆ. ಅಗ ಗಿರಾ ವಾಜಿರಶೋಚಿಷಂ (ಋ. ಸಂ. ೮-೧೯-೧೩) ಎಂಬ ವಾಕ್ಯದಲ್ಲಿ ಅಜಿರಶೋಚಿಷ್ಮನೆಂದು ಎಂದರೆ ಶೀಘ್ರಗಾಮಿ

ಯಜಮಾನನಿಂದ ಪ್ರಕಾಶಮಾನನಾದ ಅಗ್ನಿಯನ್ನು ಎಂದು ವರ್ಣಿಸಿದೆ. ಇದರಂತೆ ವೇಗಗಾಮಿಯಾದ ಶತ್ರುವಿಗೂ, ವೇಗಗಾಮಿಯಾದ ಕುದುರೆಗೂ, ಯಜ್ಞಾಭಿಮುಖರಾಗಿ ವೇಗವಾಗಿ ಹೋಗತಕ್ಕ ದೇವತೆಗೂ ವಿಶೇಷಣವಾಗಿ ಉಪಯೋಗಿಸಲ್ಪಟ್ಟಿದೆ. ಪ್ರಕೃತವಾದ ಋಕ್ಕಿನಲ್ಲಿ ಯಜ್ಞಾಭಿಮುಖವಾಗಿ ಶೀಘ್ರವಾಗಿ ಆಗಮಿಸುವ **ಪೂಷನನ್ನು** ಎಂದು **ಪೂಷನಿಗೆ** ವಿಶೇಷಣವಾಗಿದೆ. ಇವನ ಗಮನಕ್ಕೆ ಉಪಮಾನವನ್ನು ಹೇಳುತ್ತಾ **ಅಜಿರಂ ನ-ಶೀಘ್ರಗಾಮಿನಮಶ್ವಮಿವ**- ಶೀಘ್ರಗಾಮಿಯಾದ ಕುದುರೆಯಂತೆ ಎಂದು ಅಶ್ವಕ್ಕೂ ವಿಶೇಷಣವನ್ನಾಗಿ ಮಾಡಿ ಸಾಯಣರು ಅರ್ಥಮಾಡಿದ್ದಾರೆ.

**ಮೃಧಃ**—ಮೃಧ ಶಬ್ದವು ಸಂಗ್ರಾಮನಾಮಗಳಲ್ಲಿ ಪಠಿತವಾಗಿದೆ. (ನಿ. ೩-೯). ಯುದ್ಧವೆಂದರ್ಥ. ಆದರೆ ಕೆಲವೆಡೆಗಳಲ್ಲಿ ಸಂಗ್ರಾಮಕ್ಕೆ ಕಾರಣನಾದ ಶತ್ರುವೆಂದೂ ಅರ್ಥವಾಗುತ್ತದೆ. ನಿರುಕ್ತಕಾರರು,

**ವಿ ನ ಇಂದ್ರ ಮೃಧೋ ಜಹಿ ನೀಚಾ ಯಚ್ಛ ಪೃತನ್ಯತಃ ।**
(ಋ. ಸಂ. ೧೦-೧೫೨-೪)

ಎಂಬ ಋಕ್ಕನ್ನು ವಿವರಿಸಿ ಅಲ್ಲಿ **ಸಂಗ್ರಾಮಕಾರಿಣಃ ಶತ್ರೂನ್** ಎಂಬರ್ಥವಿದೆಯೆಂದು ತೋರಿಸಿದ್ದಾರೆ. (ನಿ. ೭-೨). ಪ್ರಕೃತವಾದ ಋಕ್ಕಿನಲ್ಲಿ ಎರಡು ಅರ್ಥಗಳಲ್ಲೂ ಈ ಪದದ ಪ್ರಯೋಗವಿದೆ. ಮೊದಲನೆಯ **ಮೃಧಃ** ಎಂಬ ಪದಕ್ಕೆ **ಸಂಗ್ರಾಮಾನುದ್ದಿಶ್ಯ**—ಯುದ್ಧಾಭಿಮುಖವಾಗಿ ಎಂತಲೂ, ಎರಡನೆಯ ಪದಕ್ಕೆ **ಸಂಗ್ರಾಮೇ ಹಿಂಸಕಾನ್ ಯೋದ್ಧೄನ್** ಎಂದೂ ಸಾಯಣರು ಅರ್ಥಮಾಡಿದ್ದಾರೆ.

**ಪೀಪರಃ**—**ಪಾರಂ ನಯಸಿ**—ಪಾರುಗಾಣಿಸುತ್ತೀಯೆ. ನಿರುಕ್ತಕಾರರು **ಪೀಪರತ್** ಎಂಬ ಪದವನ್ನು **ಯಾಚ್ಞಾ**ಕರ್ಮನಾಮಗಳಲ್ಲಿ ಸೇರಿಸಿದ್ದಾರೆ. (ನಿ. ೩-೧೯) ಋಕ್ಸಂಹಿತೆಯಲ್ಲಿ **ಪೀಪರಃ ಪೀಪರತ್** ಎಂಬ ಪದಗಳು ದಡವನ್ನು ಮುಟ್ಟಿಸು, ಸುಖವಾಗಿ ಕೊನೆಗಾಣಿಸು ಎಂಬರ್ಥದಲ್ಲಿಯೇ ಪ್ರಯೋಗಿಸಲ್ಪಟ್ಟಿವೆ.

**ಅಂಹಸೋ ಯತ್ರ ಪೀಪರದ್ಯಥಾ ನೋ ನಾವೇವ ಯಾಂತಮುಭಯೇ ಹವಂತೇ ।**
(ಋ. ಸಂ. ೩-೩೨-೧೪)

**ಅಶ್ವೋ ನ ಸ್ವೇ ದಮ ಆ ಹೇಮ್ಯಾವಾನ್ತಮಂಹಸಃ ಪೀಪರೋ ದಾಶ್ವಾಂಸಂ ।**
(ಋ. ಸಂ. ೪-೨-೮)

ಎಂಬ ಋಕ್ಕುಗಳಲ್ಲಿ **ಅಂಹಸಃ ಪೀಪರಃ ಪಾಪರೂಪಾದ್ದಾರಿದ್ರ್ಯಾತ್ ಪಾರಂ ನಯಃ ।** ಪಾಪರೂಪವಾದ ದಾರಿದ್ರ್ಯದಿಂದ ದಾಟಿಸು ಎಂದರ್ಥ. ಅದರಂತೆಯೇ ಈ ಋಕ್ಕಿನಲ್ಲಿಯೂ ಸವ ಶತ್ರುಗಳ ಹಿಡಿತದಿಂದ ದಾಟಿಸಿ ರಕ್ಷಿಸುತ್ತೀಯೆ ಎಂದರ್ಥ.

**ಅಂಗೂಷಾನ್**—**ಅಂಗೂಷಃ ಸ್ತೋಮ ಆಘೋಷಃ ।** (ನಿ. ೫-೧೧). ಗಟ್ಟಿಯಾಗಿ ಪಠಿಸಬೇಕಾದ ಸ್ತೋತ್ರಕ್ಕೆ ಅಂಗೂಷವೆಂದು ಹೆಸರು ಎಂದು ನಿರುಕ್ತಕಾರರು ಈ ಪದದ ನಿರ್ವಚನವನ್ನು ಹೇಳಿದ್ದಾರೆ. ಋ. ಸಂ. ೧-೧೩೫-೧ ನೇ ಋಕ್ಕನ್ನು ವಿವರಿಸುವಾಗ ಸ್ಕಂದಸ್ವಾಮಿಗಳು **ಸೋಮ** ಮತ್ತು **ಸ್ತೋಮ** ಎಂಬ ಎರಡು ಅರ್ಥಗಳನ್ನು ಹೇಳಬಹುದೆಂದಿದ್ದಾರೆ. ಆದರೆ ಈ ಶಬ್ದವು ಋಕ್ಸಂಹಿತೆಯಲ್ಲಿ ಹತ್ತಾರು ಕಡೆಗಳಲ್ಲಿ ಪ್ರಯೋಗಿಸಲ್ಪಟ್ಟು ಎಲ್ಲಾ ಕಡೆಗಳಲ್ಲಿಯೂ **ಸ್ತೋತ್ರವೆಂಬ** ಅರ್ಥವನ್ನೇ ಕೊಡುತ್ತದೆ.

ವ್ಯಾಕರಣಪ್ರಕ್ರಿಯಾ

**ಅಜಿರಮ್**—ಅಜ ಗತಿಕ್ಷೇಪಣಯೋಃ ಧಾತು. **ಅಜಿರಶಿಶಿರ** (ಉ. ಸೂ ೧-೫೩) ಎಂಬುದರಿಂದ ಕಿರಚ್ ಪ್ರತ್ಯಯಾಂತವಾಗಿ ನಿಪಾತಿತವಾಗಿದೆ. ಆದುದರಿಂದಲೇ ವೀಭಾವ ಬರುವುದಿಲ್ಲ. **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಯಾಮನಿ**—ಯಾ ಪ್ರಾಪಣೇ. ಧಾತು. **ಆತೋಮನಿನ್** (ಪಾ. ಸೂ. ೩-೨-೭೪) ಎಂಬುದರಿಂದ ಮನಿನ್ ಪ್ರತ್ಯಯ. **ಞ್ನಿತ್ಯಾದಿರ್ನಿತ್ಯಮ್** (ಪಾ. ಸೂ. ೬--೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಸಪ್ತಮೀಏಕವಚನದಲ್ಲಿ **ವಿಭಾಷಾಙಿಶ್ಯೋಃ** ಎಂಬುದರಿಂದ ವಿಕಲ್ಪಿತವಾದುದರಿಂದ ಅಲ್ಲೋಪ ಬರುವುದಿಲ್ಲ.

**ಸ್ತೋಮೇಭಿಃ**—ಅತೋಭಿಸ ಐಸ್ ಎಂಬಲ್ಲಿ **ಬಹುಲಂ ಛಂದಸಿ** ಎಂಬುದರಿಂದ ಭಿಸಿಗೆ ಐಸ್ ಭಾವ ಬರುವುದಿಲ್ಲ. **ಬಹುವಚನೇಝಲ್ಯೇತ್** ಎಂಬುದರಿಂದ ಏತ್ವ.

**ಕೃಣ್ವೇ**—ಕೃವಿ ಹಿಂಸಾಕರಣಯೋಶ್ಚ ಧಾತು. ಪ್ರತ್ಯಯದಿಂದ ಆತ್ಮನೇಪದಿಯಾಗುತ್ತದೆ. ಲಟ್ ಉತ್ತಮಪುರುಷಏಕವಚನದಲ್ಲಿ ಇಟ್ ಪ್ರತ್ಯಯ. **ಟಿತಆತ್ಮನೇ**—ಎಂಬುದರಿಂದ ಏತ್ವ. **ಧಿನ್ವಿಕೃಣ್ವ್ಯೋರಚ** (ಪಾ. ಸೂ. ೩-೧-೮೦) ಎಂಬುದರಿಂದ ಅಕಾರಾಂತಾದೇಶ. ಉಪ್ರತ್ಯಯ. **ಅತೋಲೋಪಃ** ಎಂಬುದರಿಂದ ಅಕಾರಲೋಪ. ಇದಿತ್ತಾದುದರಿಂದ ನುಮಾಗಮ. ಯಣಾದೇಶ. **ಹಿಚ** (ಪಾ. ಸೂ. ೮-೧-೩೪) ಎಂಬುದರಿಂದ ನಿಘಾತಪ್ರತಿಷೇಧ ಬರುವುದರಿಂದ ಪ್ರತ್ಯಯಸ್ವರ ಉಳಿಯುತ್ತದೆ.

**ಋಣವಃ**—ಋಣ ಗತೌ ಧಾತು. ತನಾದಿ. ಲೇಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್ ಪ್ರತ್ಯಯ. **ಇತಶ್ಚಲೋಪಃ ಪರಸ್ಮೈಪದೇಷು** (ಪಾ ಸೂ. ೩-೪-೯೭) ಎಂಬುದರಿಂದ ಅದರ ಇಕಾರಕ್ಕೆ ಲೋಪ. **ಲೇಟೋಽಡಾಟೌ** (ಪಾ. ಸೂ. ೩-೪-೯೪) ಎಂಬುದರಿಂದ ಅಡಾಗಮ **ತನಾದಿಕೃಞ್ಭ್ಯ ಉಃ** (ಪಾ. ಸೂ. ೩-೧-೭೯) ಎಂಬುದರಿಂದ ಉ ವಿಕರಣ. **ಸಾರ್ವಧಾತುಕಾರ್ಧಧಾತುಕಯೋಃ** ಎಂಬುದರಿಂದ ಅದಕ್ಕೆ ಗುಣ, ಅವಾದೇಶ. ತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯ ಪಿತ್ತಾದುದರಿಂದ ವಿಕರಣಸ್ವರ ಉಳಿಯುತ್ತದೆ.

**ಪೀಪರಃ**—ಪೄ ಪಾಲನಪೂರಣಯೋಃ ಧಾತು. **ಹೇತುಮತಿ ಚ** (ಪಾ.ಸೂ.೩-೧-೨೬) ಎಂಬುದರಿಂದ ಣಿಚ್. **ಅಚೋಞ್ಣಿತಿ** ಎಂಬುದರಿಂದ ಣಿಚ್ ನಿಮಿತ್ತವಾಗಿ ವೃದ್ಧಿ. ರಪರವಾಗಿ ಬರುತ್ತದೆ. ಪಾರಿ ಎಂಬ ಣ್ಯಂತದ ಮೇಲೆ ಲುಙ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್. **ಇತಶ್ಚ** ಎಂಬುದರಿಂದ ಇಕಾರಲೋಪ **ಣಿಶ್ರಿದ್ರುಸ್ರು**—(ಪಾ. ಸೂ. ೩-೧-೪೮) ಎಂಬುದರಿಂದ ಚ್ಲಿಗೆ ಚಙ್. **ಣೇರನಿಟಿ** (ಪಾ. ಸೂ. ೬-೪-೫೧) ಎಂಬುದರಿಂದ ಣಿಚಿಗೆ ಲೋಪ. **ಣೌಚಙ್ಯುಪಧಾಯಾಃ ಹ್ರಸ್ವಃ** (೭-೪-೧) ಎಂಬುದರಿಂದ ಧಾತುವಿನ ಉಪಧೆಗೆ ಹ್ರಸ್ವ. **ಚಙಿ** ಎಂಬುದರಿಂದ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಆದಿಹಲ್ಶೇಷ. **ಸನ್ವಲ್ಲಘುನಿ**—ಎಂಬುದರಿಂದ ಸನ್ವದ್ಭಾವವಿರುವುದರಿಂದ **ಸನ್ಯತಃ** (ಪಾ. ಸೂ. ೭-೪-೭೯) ಎಂಬುದರಿಂದ ಅಭ್ಯಾಸಕ್ಕೆ ಇತ್ವ ಬಂದಾಗ **ದೀರ್ಘೋಲಘೋಃ** (ಪಾ. ಸೂ. ೭-೪-೯೪) ಎಂಬುದರಿಂದ ಅದಕ್ಕೆ ದೀರ್ಘ. ಪ್ರತ್ಯಯಸಕಾರಕ್ಕೆ ರುತ್ವ ವಿಸರ್ಗ. **ಬಹುಲಂ ಛಂದಸ್ಯಮಾಙ್ಯೋಗೇಪಿ** ಎಂಬುದರಿಂದ ಅಡಾಗಮ ಬರುವುದಿಲ್ಲ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಹುವೇ**—ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ. ಧಾತು. ಲಟ್ ಉತ್ತಮಪುರುಷೈಕವಚನದಲ್ಲಿ ಇಟಿಗೆ ಏತ್ವ. **ಬಹುಲಂ ಛಂದಸಿ** ಎಂಬುದರಿಂದ ಧಾತುವಿಗೆ ಸಂಪ್ರಸಾರಣ. ಪೂರ್ವರೂಪ. ಉವಙಾದೇಶ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ದೇವಮ್**—ದಿವುಧಾತುವು ಕ್ರೀಡಾದ್ಯರ್ಥದಲ್ಲಿ ಪ್ರಯುಕ್ತವಾಗಿದೆ. **ನಂದಿಗ್ರಹಪಚಾದಿಭ್ಯೋ**– (ಪಾ. ಸೂ. ೩-೧-೧೩೪) ಎಂಬುದರಿಂದ ಅಚ್ ಪ್ರತ್ಯಯ. **ಪುಗಂತಲಘೂಪಧಸ್ಯ ಚ** ಎಂಬುದರಿಂದ ಲಘೂಪಧಗುಣ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಸಖ್ಯಾಯ** ಸಖ್ಯುರ್ಭಾವಃ ಸಖ್ಯಮ್. **ಸಖ್ಯುರ್ಯಃ** (ಪಾ. ಸೂ. ೫-೧-೧೨೬) ಎಂಬುದರಿಂದ ಯ ಪ್ರತ್ಯಯ. **ಯಸ್ಯೇತಿ ಚ** ಎಂಬುದರಿಂದ ಇಕಾರಲೋಪ. ಪ್ರತ್ಯಯಸ್ವರ ಬರುತ್ತದೆ. ಚತುರ್ಥೀಏಕವಚನಾಂತರೂಪ.

**ಆಂಗೂಷಾನ್—ಆಂಗೂಷಃ ಸ್ತೋಮ ಆಘೋಷಃ** (ನಿರು ೫-೧೧) ಎಂದು ಯಾಸ್ಕರು ಹೇಳಿರುತ್ತಾರೆ. ಆಙ್ ಉಪಸರ್ಗಪೂರ್ವಕವಾದ ಘು ಧಾತುವಿಗೆ (ಘುಷಿರ್ ವಿಶಬ್ದನೇ ಘುಙ್ ಬಂದು) **ಪೃಷೋದರಾದೀನಿ ಯಥೋಪದಿಷ್ಟಮ್** ಎಂಬುದರಿಂದ ಅಭಿಮತರೂಪಸಿದ್ಧಿಯಾಗುತ್ತದೆ. **ಥಾಥಘಞ್**—(ಪಾ. ಸೂ ೬-೨-೧೪೪) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ದ್ವಿತೀಯಾಬಹುವಚನಾಂತರೂಪ.

**ಕೃಧಿ**—ಡುಕೃಞ್ ಕರಣೇ. ಧಾತು. ಲೋಟ್ ಮಧ್ಯಮಪುರುಷೈಕವಚನದಲ್ಲಿ ಸಿಪಿಗೆ ಹಿ ಆದೇಶ. **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಲುಕ್. **ಶ್ರುಶೃಣು ಪೃ**—(ಪಾ. ಸೂ ೬-೪-೧೦೨) ಎಂಬುದರಿಂದ ಹಿಗೆ ಧಿ ಆದೇಶ. ಪ್ರತ್ಯಯಕ್ಕೆ ಙಿತ್ತ್ವವಿರುವುದರಿಂದ ಗುಣ ಬರುವುದಿಲ್ಲ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೨ ॥

:O:

ಸಂಹಿತಾಪಾಠಃ

ಯಸ್ಯ ತೇ ಪೂಷನ್ತ್ಸಖ್ಯೇ ವಿಪನ್ಯವಃ ಕ್ರತ್ವಾ ಚಿತ್ಸಂತೋಽವಸಾ ಬುಭುಜ್ರಿರ ಇತಿ ಕ್ರತ್ವಾ ಬುಭುಜ್ರಿರೇ ।
ತಾಮನು ತ್ವಾ ನವೀಯಸೀಂ ನಿಯುತಂ ರಾಯ ಈಮಹೇ ।
ಅಹೇಳಮಾನ ಉರುಶಂಸ ಸರೀ ಭವ ವಾಜೇವಾಜೇ ಸರೀ ಭವ ॥ ೩ ॥

ಪದಪಾಠಃ

ಯಸ್ಯ । ತೇ । ಪೂಷನ್ । ಸಖ್ಯೇ । ವಿಪನ್ಯವಃ । ಕ್ರತ್ವಾ । ಚಿತ್ । ಸಂತಃ । ಅವಸಾ । ಬುಭುಜ್ರಿರೇ ।

ಇತಿ । ಕ್ರತ್ವಾ । ಬುಭುಜ್ರಿರೇ ।

ತಾಂ । ಅನು । ತ್ವಾ । ನವೀಯಸೀಂ । ನಿಽಯುತಂ । ರಾಯಃ । ಈಮಹೇ ।

ಅಹೇಳಮಾನಃ । ಉರುಽಶಂಸ । ಸರೀ । ಭವ । ವಾಜೇಽವಾಜೇ । ಸರೀ । ಭವ ॥ ೩ ॥

ಸಾಯಣಭಾಷ್ಯಂ

ಹೇ ಪೂಷನ್ ದೇವ ಯಸ್ಯ ತೇ ರಕ್ಷಕಸ್ಯೇನ ಪ್ರಸಿದ್ಧಸ್ಯ ತವ ಸಖ್ಯೇ ಸಖಿತ್ವೇ ಹಿತಕರಣೇ ಸತಿ ಕ್ರತ್ವಾ ಚಿತ್ ಕ್ರತುನಾ ಪ್ರಕೃಷ್ಟೇನ ಕರ್ಮಣೈವ ॥ ಜಸಾದಿಷು ಚ್ಛಂದಸಿ ವಾವಚನಮಿತಿ ನಾಭಾವಾಭಾವಃ ॥ ಸಂತೋ ಭವಂತಂ ಪ್ರೀಣಯಿತಾರಃ ಸಂತೋ ವಿಪನ್ಯವೋ ವಿಶೇಷೇಣ ಸ್ತೋತ್ರಶೀಲಾಃ । ಯದ್ವಾ । ಮೇಧಾವಿನಾಮೈತತ್ । ಮೇಧಾವಿನಃ । ಯಜಮಾನಾ ಅವಸಾ ತ್ವತ್ಕೃತೇನ ರಕ್ಷಣೇನ ರಕ್ಷಿತಾಃ ಸಂತೋ ಬುಭುಜ್ರಿರೇ । ಭುಂಜತೇ ಭೋಗಾನ್ । ಇತಿ ಏವಮೇವ ಸರ್ವದಾ ಕ್ರತ್ವಾ ಕರ್ಮಣಾ ಬುಭುಜ್ರಿರೇ । ಭುಂಜತೇ ಸರ್ವೇ ಪಾಲ್ಯಂತ ಇತಿ ವಾ ॥ ಭುಜೇಶ್ಛಂದಸಿ ಲಿಟಿ ಬಹುಲಂ ಛಂದಸೀತಿ ರುಟ್ ॥ ತಾಂ ತಾದೃಶೀಂ ನವೀಯಸೀಂ ನವತರಾಂ ಸ್ತುತ್ಯಾಂ ವಾ ರಕ್ಷಾಮನ್ವನುಸೃತ್ಯ ರಕ್ಷಾಯಾ ಅನಂತರಂ ತ್ವಾಂ ನಿಯುತಂ ರಾಯ ಏತತ್ಸಂಖ್ಯಾಕಾನ್ಧನಾನೀಮಹೇ । ಯಾಚಾಮಹೇ । ಕಿಂಚ ಹೇ ಉರುಶಂಸ ಬಹುಧಾ ಸ್ತುತ್ಯ ತ್ವಮಹೇಳಮಾನೋಽಕ್ರುಧ್ಯನ್ನಸ್ಮಾಸು ಸುಮನಾಃ ಸನ್ ಸರೀ ಭವ । ಅಸ್ಮಾಭಿರ್ಗಂತವ್ಯೋ ಭವ । ಸರ್ತೇರೌಣಾದಿಕ ಇನಿಪ್ರತ್ಯಯಃ । ಆದ್ಯುದಾತ್ತತ್ವಂ । ಕಿಂಚ ತ್ವಂ ವಾಜೇ ವಾಜೇ ಸರ್ವೇಷ್ವಪಿ ಸಂಗ್ರಾಮೇಷು ಸರೀ ಭವ । ಗಮನಶೀಲೋ ಭವ । ಪುರತೋ ಗಂತಾ ಭವೇತ್ಯರ್ಥಃ ॥

ಪ್ರತಿಪದಾರ್ಥ

ಪೂಷನ್—ಎಲೈ ಪೂಷದೇವನೇ । ಯಸ್ಯ ತೇ—(ರಕ್ಷಕನಾದ) ಯಾವ ನಿನ್ನ । ಸಖ್ಯೇ—ಹಿತಕಾರಿಯಾದ ಸ್ನೇಹವಿರಲಾಗಿ । ಕ್ರತ್ವಾ ಚಿತ್—ಶ್ರೇಷ್ಠವಾದ ಯಜ್ಞಕರ್ಮಗಳಿಂದಲೇ । ಸಂತಃ—(ನಿನ್ನನ್ನು) ಪೂಜಿಸುವವರಾಗಿಯೂ । ವಿಪನ್ಯವಃ— ಭಕ್ತಿಯಿಂದ ಸ್ತೋತ್ರಮಾಡುವವರಾಗಿಯೂ ಇರುವ ಮೇಧಾವಿಗಳಾದ ಯಜಮಾನರು । ಅವಸಾ—(ನಿನ್ನ) ರಕ್ಷಣೆಯಿಂದ । ಬುಭುಜ್ರಿರೇ—ಭೋಗಗಳನ್ನು ಅನುಭವಿಸುತ್ತಾರೆ । ಇತಿ—ಹೀಗೆಯೇ ಯಾವಾಗಲೂ । ಕ್ರತ್ವಾ—ಶ್ರದ್ಧಾಪೂರ್ವಕವಾದ ಕರ್ಮದಿಂದ । ಬುಭುಜ್ರಿರೇ—ಎಲ್ಲರೂ ಭೋಗಗಳನ್ನು ಅನುಭವಿಸುತ್ತಾರೆ ಅಥವಾ ಪಾಲಿಸಲ್ಪಡುತ್ತಾರೆ । ತಾಂ - ಅಂತಹ । ನವೀಯಸೀಂ—ನೂತನವಾದ ಸ್ತುತಿಯ ಫಲರೂಪದ ರಕ್ಷಣೆಯನ್ನು । ಅನು— ಅನುಸರಿಸಿ [ತದನಂತರ] । ನಿಯುತಂ— ಅಸಂಖ್ಯಾಕವಾದ । ರಾಯಃ—ಧನಗಳನ್ನು । ಈಮಹೇ—ಪ್ರಾರ್ಥಿಸುತ್ತೇವೆ । ಉರುಶಂಸ—ನಾನಾವಿಧವಾದ ಸ್ತೋತ್ರಕ್ಕೆ ಅರ್ಹನಾದ ಪೂಷನೇ । ಅಹೇಳಮಾನಃ— (ನಮ್ಮ ವಿಷಯದಲ್ಲಿ) ಕೋಪಗೊಳ್ಳದೇ ಸುಮನಸ್ಕನಾಗಿದ್ದುಕೊಂಡು ।

ಸರೀ ಭವ—(ನಮಗೆ) ಸುಗಮ್ಯನಾಗಿರು (ಭೀತಿಯಿಲ್ಲದೆ ನಾವು ನಿನ್ನನ್ನು ಸಮೀಪಿಸುವಂತಾಗಲಿ)। ವಾಜೇ ವಾಜೇ—ಸಕಲವಾದ ಸಂಗ್ರಾಮಗಳಲ್ಲಿಯೂ। ಸರೀ ಭವ—ನಮ್ಮ ಮುಂದಾಳಾಗಿಯೂ ನೇತೃವಾಗಿಯೂ ಇರು।

। ಭಾವಾರ್ಥ ।

ಎಲೈ ಪೂಷದೇವನೇ, ರಕ್ಷಕನಾದ ನಿನ್ನ ಹಿತಕಾರಿಯಾದ ಸ್ನೇಹವಿರಲಾಗಿ ಶ್ರೇಷ್ಠವಾದ ಯಜ್ಞಕರ್ಮಗಳಿಂದಲೇ ನಿನ್ನನ್ನು ಪೂಜಿಸುವವರಾಗಿಯೂ ಭಕ್ತಿಯಿಂದ ಸ್ತೋತ್ರಮಾಡುವವರಾಗಿಯೂ ಇರುವ ಮೇಧಾವಿಗಳಾದ ಯಜಮಾನರು ನಿನ್ನ ರಕ್ಷಣೆಯಿಂದ ಸಕಲ ಭೋಗಗಳನ್ನೂ ಅನುಭವಿಸುತ್ತಾರೆ. ನೂತನವಾದ ಸ್ತುತಿಗೆ ಫಲರೂಪವಾದ ಈ ರಕ್ಷಣೆಯನ್ನು ಪಡೆದನಂತರ ಅಸಂಖ್ಯಾಕವಾದ ಧನಗಳನ್ನು ನಾವು ಪ್ರಾರ್ಥಿಸುತ್ತೇವೆ. ನಾನಾವಿಧವಾದ ಸ್ತೋತ್ರಗಳಿಗೆ ಅರ್ಹನಾದ ಎಲೈ ಪೂಷನೇ, ನಮ್ಮ ವಿಷಯದಲ್ಲಿ ಕೋಪಗೊಳ್ಳದೆ ಸುಮನಸ್ಕನಾಗಿದ್ದುಕೊಂಡು ನಾವು ಭೀತಿಯಿಲ್ಲದೆ ನಿನ್ನನ್ನು ಸಮೀಪಿಸುವಂತಾಗಲಿ. ಸಕಲ ಸಂಗ್ರಾಮಗಳಲ್ಲಿಯೂ ನಮ್ಮ ಮುಂದಾಳಾಗಿಯೂ ನಮ್ಮ ನೇತೃವಾಗಿಯೂ ಇರು.

English Translation

Through your praise, and assiduous in your worship they enjoy (abundance), through your protection ; by (assiduous) worship they enjoy (abundance) ; as consequent upon your recent favour, we solicit infinite riches. Free from anger, and entitled to ample praise, be ever accesseble to us : be our leader in every encounter.

ವಿಶೇಷವಿಷಯಗಳು

ವಿಪನ್ಯವಃ—ವಿಪ್ರಃ, ವಿಗ್ರಃ, ಇತ್ಯಾದಿ ಮೇಧಾವಿನಾಮಗಳಲ್ಲಿ ಈ ಶಬ್ದವು ಪಠಿತವಾಗಿದೆ. (ನಿ. ೩-೧೫) ಮೇಧಾವಿಗಳೂ ಭಕ್ತಿಯುತರೂ ಆದ ಸ್ತೋತೃಗಳು ಎಂಬ ಅರ್ಥದಲ್ಲಿಯೇ ಋಕ್ಸಂಹಿತೆಯಲ್ಲಿ ಈ ಪದದ ಪ್ರಯೋಗವಿದೆ. ತದ್ವಿಪ್ರಾಸೋ ವಿಪನ್ಯವಃ (ಋ. ಸಂ. ೧-೨೨-೨೧), ಅವಸಾ ವಿಪನ್ಯವಃ (ಋ. ಸಂ. ೧-೧೦೨-೪), ವಿಪನ್ಯವೋದೀಧ್ಯತೋ ಮನೀಷಾ (ಋ. ಸಂ. ೨-೨೦-೧) ಇತ್ಯಾದಿ ಋಕ್ಕುಗಳಲ್ಲಿ ಅರ್ಥವಾಗುವಂತೆ ವಿಶೇಷೇಣ ಸ್ತೋತಾರಃ। ಅತಿಶಯವಾಗಿ ಸ್ತೋತ್ರಮಾಡತಕ್ಕವರು ಎಂದರ್ಥ.

ನಿಯುತಂ—ಅಸಂಖ್ಯಾಕವಾದ ಸಂಖ್ಯೆ. ಈ ಪದಕ್ಕೆ ಒಂದೊಂದು ಕಡೆ ಒಂದೊಂದು ಸಂಖ್ಯೆಯು ಹೇಳಲ್ಪಟ್ಟಿದೆ. ತಕ್ಷದ್ವಜ್ರಂ ನಿಯುತಂ (ಋ.ಸಂ. ೧-೧೩೭-೩) ಎಂಬಲ್ಲಿ ನಿಯುತ ಶಬ್ದಕ್ಕೆ ನಿತರಾಂ ಯುಕ್ತಂ। ದೃಢವಾಗಿ ಅಂಟಿಕೊಂಡಿರುವುದು ಎಂದೂ ಅರ್ಥವಾಗುತ್ತದೆ. ಈ ಋಕ್ಕಿನಲ್ಲಿ ಸಂಖ್ಯಾವಾಚಕ.

ಅಹೇಳಮಾನಃ—ರೇಳತೇ, ಹೇಳತೇ ಇತ್ಯಾದಿ ಕ್ರೋಧನಾಮಗಳಲ್ಲಿ (ನಿ. ೩-೯) ಪಠಿತವಾಗಿರುವುದರಿಂದ ಹೇಳಮಾನಃ ಎಂದರೆ ಕೋಪಗೊಂಡು ಎಂದೂ, ಅಹೇಳಮಾನಃ ಎಂದರೆ ಕೋಪಗೊಳ್ಳದೆ ಎಂದೂ, ಅರ್ಥವಾಗುತ್ತದೆ.

ಅಹೇಳಮಾನೋ ವರುಣೇಹ ಬೋಧ್ಯುರುಶಂಸ ಮಾ ನ ಆಯುಃ ಪ್ರ ಮೋಷೀಃ।
(ಋ. ಸಂ. ೧-೨೪-೧೧)

**ಅಹೇಳಮಾನ ಉಪ ಯಾಹಿ ಯಜ್ಞಂ ತುಭ್ಯಂ ಪವಂತ ಇಂದವಃ ಸುತಾಸಃ ।**
(ಋ. ಸಂ. ೬-೪೧-೧)

ಇತ್ಯಾದಿ ಋಕ್ಕುಗಳಲ್ಲಿಯೂ ಹೀಗೆಯೇ ೧೦-೩೨-೮ ಇತ್ಯಾದಿ ಕಡೆಗಳಲ್ಲಿಯೂ ಈ ವಿಧವಾದ ಪ್ರಾರ್ಥನೆಯಿದೆ. ಅಗ್ನಿ, ವರುಣ ಮುಂತಾದ ದೇವತೆಗಳು ಪಾಪಕರ್ತರಿಗೆ ಶಿಕ್ಷೆಮಾಡುವುದು ಕಠಿಣವೆಂಬ ನಂಬಿಕೆಯಿದ್ದುದರಿಂದಲೂ, ಅಂತಹವರಿಗೆ ಆ ದೇವತೆಗಳ ಅನುಗ್ರಹವು ಸಿಕ್ಕುವುದೇ ಇಲ್ಲವೆಂದು ತಿಳಿದಿದ್ದುದರಿಂದಲೂ ಸಹ ಯಜ್ಞಕರ್ತರೆಲ್ಲರೂ ಅಧಿಕವಾದ ಪಾಪಭೀತಿಯಿಂದ ಕೂಡಿ ಆ ದೇವತೆಗಳನ್ನು ಕೋಪಗೊಳ್ಳದೆ ಇರುವಂತೆಯೂ ತಮ್ಮನ್ನು ಅನಾದರಿಸದೆ ತಮ್ಮಮೇಲೆ ಅನುಗ್ರಹವನ್ನು ಬೀರಿ ಒಳ್ಳೆಯದನ್ನು ಮಾಡಬೇಕೆಂತಲೂ ಪ್ರಾರ್ಥಿಸುತ್ತಾರೆ.

**ಸರೀ ಭವ**—ಗತ್ಯರ್ಥಕವಾದ **ಸೃ** ಎಂಬ ಧಾತುವಿನಿಂದ ನಿಷ್ಪನ್ನವಾಗಿ **ಸರೀ** ಎಂಬ ಪದವು ಇಲ್ಲಿ ಎರಡು ಅರ್ಥದಲ್ಲಿ ಉಪಯೋಗಿಸಲ್ಪಟ್ಟಿದೆ. ಮೊದಲನೆಯದಾಗಿ **ಸರೀಭವ** ಎಂದರೆ **ಅಸ್ಮಾಭಿರ್ಗಂತವ್ಯೋಭವ**—ನಾವು ಭೀತಿಯಿಲ್ಲದೆ ನಿನ್ನನ್ನು ಸಮೀಪಿಸುವಂತಾಗಲಿ ಎಂದೂ ಎರಡನೆಯದಾಗಿ **ಗಮನಶೀಲೋಭವ, ಪುರತೋ ಗತ್ವಾ ಭವ** ನಮ್ಮ ಮುಂದಾಳಾಗಿ ಹೋಗು ಎಂದೂ ಅರ್ಥವಾಗುತ್ತದೆ.

ಇದರಂತೆಯೇ **ಸರೀಮಣಿ, ಸರೀಸೃಪ** ಇತ್ಯಾದಿ ಪದಗಳೂ ನಿಷ್ಪನ್ನವಾಗುತ್ತವೆ. **ಸರೀಸೃಪ** ಎಂದರೆ ಈಗಿನ ರೂಢಿಯಲ್ಲಿ ವೇಗವಾಗಿ ಸಂಚರಿಸತಕ್ಕ **ಸರ್ಪ**ನೆಂದರ್ಥ. ಆದರೆ **ಸರೀಸೃಪ** ಎಂಬ ಪದವನ್ನು,

**ಯಸ್ತೇ ಹಂತಿ ಪತಯಂತಂ ನಿಷತ್ಸ್ನುಂ ಯಃ ಸರೀಸೃಪಂ ।**
(ಋ. ಸಂ. ೧೦-೧೬೨-೩)

ಎಂಬ ಋಕ್ಕಿನಲ್ಲಿ ಚಲಿಸತಕ್ಕ **ಗರ್ಭ** ವೆಂಬರ್ಥದಲ್ಲಿ ಉಪಯೋಗಿಸಿದೆ. ಇಲ್ಲಿ **ಸರೀಭವ** ಎಂದರೆ ನಮ್ಮ ಮುಂದಾಳಾಗಿ ನಮ್ಮ ನೇತೃವಾಗಿರು ಎಂದರ್ಥ.

ವ್ಯಾಕರಣಪ್ರಕ್ರಿಯಾ

**ವಿಷನ್ಯವಃ**— ವಿ ಉಪಸರ್ಗ. ಷನಸ್ತುತೌ. ಉಣಾದಿಯಲ್ಲಿ ಬಹುಲವಚನವಿರುವುದರಿಂದ ಇದಕ್ಕೆ ಔಣಾದಿಕ ಯು ಪ್ರತ್ಯಯ. ಪ್ರತ್ಯಯಸ್ವರ ಬರುತ್ತದೆ. ಪ್ರಥಮಾಬಹುವಚನಾಂತರೂಪ.

**ಕ್ರತ್ವಾ**—ಕ್ರತು ಶಬ್ದ. ಇದಕ್ಕೆ ತೃತೀಯಾ ಏಕವಚನ ಪರವಾದಾಗ **ಜಸಾದಿಷು ಛಂದಸಿ ವಾವಚನಮ್** ಎಂಬ ವಚನದಿಂದ ನಾಭಾವ ಬರುವುದಿಲ್ಲ.

**ಅವಸಾ**—ಅವ ರಕ್ಷಣೇ ಧಾತು. ಔಣಾದಿಕ ಅಸುನ್ ಪ್ರತ್ಯಯ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ತೃತೀಯಾ ಏಕವಚನಾಂತರೂಪ.

**ಬುಭುಜ್ರಿರೆ**—ಭುಜಪಾಲನಾಭ್ಯವಹಾರಯೋಃ ಧಾತು. **ಛಂದಸಿಲುಙ್‌ಲಙ್‌ಲಿಟಃ** (ಪಾ. ಸೂ. ೩-೪-೬) ಎಂಬುದರಿಂದ ವರ್ತಮಾನಾರ್ಥದಲ್ಲಿ ಲಿಟ್. ಲಿಣ್ನಿಮಿತ್ತವಾಗಿ ಧಾತುವಿಗೆ ದ್ವಿತ್ವ. **ಲಿಟಸ್ತಝಯೋ-ರೇಶಿರೇಚ್** ಎಂಬುದರಿಂದ ಝಕ್ಕೆ ಇರೇಚಾದೇಶ. **ಬಹುಲಂ ಛಂದಸಿ** ಎಂಬುದರಿಂದ ಪ್ರತ್ಯಯಕ್ಕೆ ರುಟಾಗಮ. ಚಿಜಂತಸಿಥಾತಸ್ವರ ಬರುತ್ತದೆ.

**ನವೀಯಸೀಮ್**—ಅತಿಶಯೇನ ನವಾ ನವೀಯಸೀ ತಾಮ್. ಅತಿಶಯಾರ್ಥದಲ್ಲಿ ಈಯಸುನ್ ಪ್ರತ್ಯಯ. **ಯಸ್ಯೇತಿ ಚ** ಎಂಬುದರಿಂದ ಅಕಾರಲೋಪ. **ಉಗಿತಶ್ಚ** ಎಂಬುದರಿಂದ ಸ್ತ್ರೀತ್ವದಲ್ಲಿ ಙೀಪ್. ಈಯಸುನ್. ಜೆ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ದ್ವಿತೀಯಾಏಕವಚನಾಂತರೂಪ.

**ರಾಯಃ**—ದ್ವಿತೀಯಾಬಹುವಚನಾಂತರೂಪ. **ಊಡಿದಂಪದಾದಿ** (ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಈಮಹೇ**—ಈಙ್ ಗತೌ ಧಾತು. **ಈಮಹೇ ಯಾಮಿ** (ನಿರು. ೩-೧೯-೧) ಎಂದು ಯಾಚನಾರ್ಥದಲ್ಲಿ ಪಠಿತವಾಗಿದೆ. ಲಟ್ ಉತ್ತಮಪುರುಷಬಹುವಚನದಲ್ಲಿ ಮಹಿಙ್ ಪ್ರತ್ಯಯ. ಟಿಗೆ ಏತ್ವ. **ಬಹುಲಂ ಛಂದಸಿ** (ಪಾ. ಸೂ. ೨-೪-೭೩) ಎಂಬುದರಿಂದ ವಿಕರಣಕ್ಕೆ ಲುಕ್. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಅಹೇಳಮಾನಃ**—ಹೇಡೃ ಅನಾದರೇ. ಧಾತು. ಭ್ವಾದಿ. ಲಡರ್ಥದಲ್ಲಿ ಶಾನಚ್ ಪ್ರತ್ಯಯ. ಶಪ್ ವಿಕರಣ. **ಆನೇಮುಕ್** (ಪಾ. ಸೂ. ೭-೨-೮೨) ಎಂಬುದರಿಂದ ಅಂಗಕ್ಕೆ ಮುಕಾಗಮ. ನ ಹೇಳಮಾನಃ **ತತ್ಪುರುಷೇ ತುಲ್ಯಾರ್ಥಂ** (ಪಾ. ಸೂ. ೬-೨-೨) ಎಂಬುದರಿಂದ ನಞ್ ಪೂರ್ವಪದಪ್ರಕೃತಿಸ್ವರ ಬರುತ್ತದೆ

**ಸರೀ**—ಸೃ ಗತೌ ಧಾತು. ಇದಕ್ಕೆ ಔಣಾದಿಕವಾದ ಇನಿ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿಗೆ ಗುಣ. **ಉರಣ್ರಪರಃ** ಎಂಬುದರಿಂದ ರಪರವಾಗಿ ಬರುತ್ತದೆ. ಸರಿನ್ ಶಬ್ದವಾಗುತ್ತದೆ. ಆದ್ಯುದಾತ್ತಸ್ವರವೂ ಉಣಾದಿಯಿಂದಲೇ ಸಿದ್ಧವಾಗುತ್ತದೆ. ಪ್ರಥಮಾಏಕವಚನಾಂತರೂಪ.

**ವಾಜೇವಾಜೇ—ನಿತ್ಯವೀಪ್ಸಯೋಃ** (ಪಾ. ಸೂ. ೮-೧-೪) ಎಂಬುದರಿಂದ ದ್ವಿರ್ವಚನ. ಪರಕ್ಕೆ ಆಮ್ರೇಡಿತಸಂಜ್ಞೆ ಬರುತ್ತದೆ. **ಅನುದಾತ್ತಂ ಚ** (ಪಾ. ಸೂ. ೮-೧-೩) ಎಂಬುದರಿಂದ ಅದು ಸರ್ವಾನುದಾತ್ತವಾಗುತ್ತದೆ. ॥ ೩ ॥

———— :೦: ————

ಸಂಹಿತಾಪಾಠಃ

ಅಸ್ಮಾ ಊ ಷು ಣ ಉಪ ಸಾತಯೇ ಭುವೋಽಹೇಳಮಾನೋ ರರಿವಾँ
ಅಜಾಶ್ವ ಶ್ರವಸ್ಯತಾಮಜಾಶ್ವ ।
ಓ ಷು ತ್ವಾ ವವೃತೀಮಹಿ ಸ್ತೋಮೇಭಿರ್ದಸ್ಮ ಸಾಧುಭಿಃ ।
ನಹಿ ತ್ವಾ ಪೂಷನ್ನತಿಮನ್ಯ ಆಘೃಣೇ ನ ತೇ ಸಖ್ಯಮಪಹ್ನುವೇ ॥ ೪ ॥

ಪದಪಾಠಃ

ಅಸ್ಯಾಃ । ಊಂ ಇತಿ । ಸು । ನಃ । ಉಪ । ಸಾತಯೇ । ಭುವಃ । ಅಹೇಳಮಾನಃ । ರರಿऽವಾನ್ । ಅಜऽ-
ಅಶ್ವ । ಶ್ರವಸ್ಯತಾಂ । ಅಜऽಅಶ್ವ ।

ಓ ಇತಿ । ಸು । ತ್ವಾ । ವವೃತೀಮಹಿ । ಸ್ತೋಮೇಭಿಃ । ದಸ್ಮ । ಸಾಧುऽಭಿಃ ।

ನಹಿ । ತ್ವಾ । ಪೂಷನ್ । ಅತಿऽಮನ್ಯೇ । ಆಘೃಣೇ । ನ । ತೇ । ಸಖ್ಯಂ । ಅಪऽಹ್ನುವೇ ॥ ೪ ॥

ಸಾಯಣಭಾಷ್ಯಂ

ಹೇ ಅಜಾಶ್ವ ಪೂಷನ್ । ಅಜಾಶ್ವೇತಿ ಪೂಷಣಮಾಹೇತಿ ಯಾಸ್ಕಃ । ನಿ. ೪-೨೫ । ನೋಽಸ್ಮಾಕಮಸ್ಯಾ ಅಸ್ಯೈ ॥ ಚತುರ್ಥ್ಯರ್ಥೇ ಷಷ್ಠೀ ॥ ಸಾತಯೇ ಲಾಭಾಯಾಹೇಳಮಾನೋಽಕ್ರುಧ್ಯನ್ನನಾದರಮಕುರ್ವನ್ ರರಿವಾನ್ ದಾತಾ ಚ ಸನ್ ಸು ಸುಷ್ಠೂಪ ಭುವಃ । ಸಮೀಪಸ್ಥೋ ಭವ ॥ ರಾತೇಶ್ಛಾಂದಸಸ್ಯ ಲಿಟಃ ಕ್ವಸುಃ । ಪದಸಂಜ್ಞಾಯಾ ಅಭಾವೇಽಪಿ ಪಪಿವಾಂಸಂ ತಸ್ಥಿವಾಂಸಮಿತ್ಯಾದೌ ಛಾಂದಸೋಽವಗ್ರಹೋ ದೃಶ್ಯತೇ । ಊ ಇತಿ ಪಾದಪೂರಣಃ ॥ ಕಿಂಚ ಶ್ರವಸ್ಯತಾಮನ್ನಮಿಚ್ಛತಾಮಸ್ಮಾಕಂ ಹೇ ಅಜಾಶ್ವ ಅಜಾ ಏವಾಶ್ವಸ್ಥಾನೀಯಾ ಯಸ್ಯ ತಾದೃಶ ತ್ವಂ । ಪೂಷನಾಮೇದಂ । ರರಿವಾಂಶ್ಚ ಸನ್ನುಪ ಭುವಃ । ಅಜಾಃ ಪೂಷ್ಣ ಇತಿ ಯಾಸ್ಕಃ । ಓ ಇತಿ ನಿಪಾತದ್ವಯಸಮುದಾಯಾತ್ಮಕ ಏಕೋ ನಿಪಾತಃ । ಹೇ ದಸ್ಮ ಶತ್ರೂಣಾಮುಪಕ್ಷಪಯಿತಃ ಪೂಷನ್ ತ್ವಾ ತ್ವಾಮೋ ಷು ವವೃತೀಮಹಿ। ಸರ್ವತ ಏವ ಸುತರಾಂ ವರ್ತಯೇಮಹಿ ॥ ವೃತೇರಂತರ್ಭಾವಿತಣ್ಯರ್ಥಾಲ್ಲಿಙಃ ಬಹುಲಂ ಛಂದಸೀತಿ ಶಪಃ ಶ್ಲುಃ ॥ ಯಜ್ಞಾಂತರಗಮನಾನ್ನಿವರ್ತಯಾಮ ಇತ್ಯರ್ಥಃ । ಕೇನ ಸಾಧನೇನೇತಿ ತದುಚ್ಯತೇ । ಸಾಧುಭಿಃ ಸ್ತೋಮೇಭಿಸ್ತ್ವಾಂ ಪ್ರೀಣಯಿತುಂ ಸಮರ್ಥೈಃ ಸ್ತೋತ್ರೈಃ । ಕಿಂಚ ಹೇ ಪೂಷನ್ ಆಘೃಣೇ ಸರ್ವತೋ ವೃಷ್ಟೇಃ ಕ್ಷಾರಯಿತಃ । ಯದ್ವಾ । ಆಘೃಣೇ ಹವಿಷಾಮಾಹರ್ತಃ ಸ್ವೀಕರ್ತಃ ತ್ವಾಂ ನಹ್ಯತಿಮನ್ಯೇ । ಅವಮತಿಂ ನೈವ ಕರೋಮಿ । ನ ಕೇವಲಮನತಿಕ್ರಮಮಾತ್ರಂ ಕಿಂತು ತೇ ಸಖ್ಯಂ ತವ ಸಖಿತ್ವಂ ಹಿತಕರ್ತೃತ್ವಂ ನಹ್ಯಪಹ್ನುವೇ । ನೈವಾಪನಯಾಮಿ । ನ ತ್ಯಜಾಮಿ । ಸರ್ವತಃ ಪ್ರಖ್ಯಾಪಯಾಮೀತ್ಯರ್ಥಃ ॥

ಪ್ರತಿಪದಾರ್ಥ

ಅಜಾಶ್ವ—ಎಲೈ ಪೂಷದೇವನೇ । ನಃ—ನಮ್ಮ । ಅಸ್ಯಾಃ ಸಾತಯೇ—ಈ (ಸ್ತೋತ್ರವನ್ನು ಅಥವಾ ಹವಿಸ್ಸನ್ನು) ಸ್ವೀಕರಿಸುವುದಕ್ಕಾಗಿ । ಅಹೇಳಮಾನಃ—ಕೋಪಗೊಳ್ಳದೆ (ಅನಾದರವಿಲ್ಲದವನಾಗಿ) ಯೂ । ರರಿವಾನ್—ಉದಾರವಾಗಿ ದಾನಮಾಡುವವನಾಗಿಯೂ । ಸು—ಸಮೀಚೀನವಾಗಿ । ಉಪ ಭುವಃ—ನಮ್ಮ ಸಮೀಪದಲ್ಲಿರು । ಅಜಾಶ್ವ—ಎಲೈ ಪೂಷದೇವನೇ । ಶ್ರವಸ್ಯತಾಂ—ಅನ್ನವನ್ನು ಅಪೇಕ್ಷಿಸುವ ನಮ್ಮ । ಸು—ಹತ್ತಿರದಲ್ಲಿಯೇ ಇರು । ದಸ್ಮ—ಶತ್ರುನಾಶಕನಾದ ಪೂಷನೇ । ತ್ವಾ—ನಿನ್ನನ್ನು । ಸಾಧುಭಿಃ—(ನಿನ್ನನ್ನು ತೃಪ್ತಿಗೊಳಿಸಲು) ಸಮರ್ಥಗಳಾದ । ಸ್ತೋಮೇಭಿಃ—ಸ್ತೋತ್ರಗಳಿಂದ । ಓ ಷು—ಸುತ್ತಲೂ (ಆಶ್ರಯಿಸಿ ತಡೆದು) ।

**ವವೃತೀಮಹಿ**—(ನಿನ್ನ) ಅವಲಂಬನೆಯನ್ನು ಹೊಂದುತ್ತೇವೆ । (ಮತ್ತು) **ಆಘೃಣೇ**—ಸುತ್ತಲೂ ವೃಷ್ಟಿಯನ್ನು ಸುರಿಸುವವನೂ ಅಥವಾ ಹವಿಸ್ಸನ್ನು ಸ್ವೀಕರಿಸುವವನೂ ಆದ । **ಪೂಷನ್**—ಎಲೈ ಪೂಷನೇ । **ನಹಿ ಅತಿಮನ್ಯೇ**—ನಾನು ಖಂಡಿತವಾಗಿಯೂ ನಿನ್ನನ್ನು ಅನಾದರಿಸುವುದಿಲ್ಲ । **ತೇ**—ನಿನ್ನ । **ಸಖ್ಯಂ**—ಸ್ನೇಹವನ್ನು । **ನ ಅಪಹ್ನುವೇ**—ಅಲಕ್ಷಿಸಿ ತ್ಯಾಗಮಾಡುವುದಿಲ್ಲ (ಕಳೆದುಕೊಳ್ಳುವುದಿಲ್ಲ).

### ಭಾವಾರ್ಥ

(ಆಡಿನ ರೂಪದಲ್ಲಿರುವ ಕುದುರೆಗಳುಳ್ಳ) ಎಲೈ ಪೂಷದೇವನೇ, ನಮ್ಮ ಪೂಜೆಯನ್ನು ಸ್ವೀಕರಿಸುವುದಕ್ಕಾಗಿ ನಮ್ಮಲ್ಲಿ ಅನಾದರವಿಲ್ಲದವನಾಗಿಯೂ ಉದಾರವಾಗಿ ದಾನಮಾಡುವವನಾಗಿಯೂ ನಮ್ಮ ಅತ್ಯಂತ ಸಮೀಪದಲ್ಲಿಯೇ ಇರು. ಅನ್ನವನ್ನು ಅಪೇಕ್ಷಿಸುವ ನಮ್ಮ ಹತ್ತಿರವೇ ಇರು. ಶತ್ರುನಾಶಕನಾದ ಎಲೈ ಪೂಷನೇ ನಿನ್ನನ್ನು ತೃಪ್ತಿಗೊಳಿಸಲು ಸಮರ್ಥಗಳಾದ ಸ್ತೋತ್ರಗಳಿಂದ ನಾವು ಸುತ್ತಲೂ ನಿನ್ನ ಅವಲಂಬನವನ್ನು ಹೊಂದುತ್ತೇವೆ. ವೃಷ್ಟಿಕಾರಕನಾದ ಪೂಷನೇ, ನಾನು ಖಂಡಿತವಾಗಿಯೂ ನಿನ್ನನ್ನು ಅನಾದರಿಸುವುದಿಲ್ಲ. ಮತ್ತು ನಿನ್ನ ಸ್ನೇಹವನ್ನು ಅಲಕ್ಷಿಸಿ ಅದನ್ನು ಖಂಡಿತ ಕಳೆದುಕೊಳ್ಳುವುದಿಲ್ಲ.

## English Translation

Free from anger, and liberal of gifts, be near to us, Ajaswa, for the acceptance of this our (offering); be near to those, Ajaswa, who solicit food: we have recourse to you, destroyer of enemies, with pious hymns. I never cease, Pushan, accepter of offerings, to think of you; I never disregard your friendship.

### ವಿಶೇಷ ವಿಷಯಗಳು

**ಅಜಾಶ್ವ**—**ಹರೀ ಇಂದ್ರಸ್ಯ । ರೋಹಿತೋಽಗ್ನೇಃ । ಅಜಾಃ ಪೂಷ್ಣಃ** (ನಿ. ೨-೨೮) ಎಂಬುದಾಗಿ ನಿರುಕ್ತಕಾರರು ಇಂದ್ರಾದಿಗಳ ವಾಹನಗಳನ್ನು ಕ್ರಮವಾಗಿ ಹೇಳಿದ್ದಾರೆ. **ಅಜವೇ ಪೂಷನ** ವಾಹನವು.

ನಿರುಕ್ತಕಾರರು ಈ ಋಕ್ಕನ್ನು ವಿವರಿಸುತ್ತಾ **ಅಸ್ಯೈ ನಃ ಸಾತಯೇ ಉಪಭವ, ಅಹೇಳಮಾನೋಽಕ್ರುಧ್ಯನ್ರರಿವಾನ್ರಾತಿರಭ್ಯಸ್ತೋಽಜಾಶ್ವೇತಿ ಪೂಷಣಮಾಹಾಜಾಶ್ವಾಜಾ ಅಜನಾಃ ।** ಆಡಿನ ರೂಪದಲ್ಲಿರುವ ಕುದುರೆಗಳುಳ್ಳ ಪೂಷದೇವನೇ, ಕೋಪಗೊಳ್ಳದೆ ನಿನ್ನ ಉದಾರವಾದ ದಾನವನ್ನು ಅನುಗ್ರಹಿಸುತ್ತಾ ನಮ್ಮ ಹತ್ತಿರದಲ್ಲೇ ಇರು ಎಂದು ಪ್ರಾರ್ಥಿಸಿದೆಯೆಂದೂ ಸೂಕ್ತದ್ರಷ್ಟೃವಾದ ಋಷಿಯು **ಪೂಷನನ್ನು ಅಜಾಶ್ವನೆಂದು** ಸಂಬೋಧಿಸಿದ್ದಾನೆಂದೂ ತಿಳಿಸಿದ್ದಾರೆ. **ರರಿವಾನ್** ಎಂಬ ಶಬ್ದದ ನಿರ್ವಚನವನ್ನು ತೋರಿಸುತ್ತಾ **ರಾತಿರಭ್ಯಸ್ತಃ ।** ದಾನಾರ್ಥಕವಾದ ರಾ ಧಾತುವು ಅಭ್ಯಸ್ತವಾಗಿ ಎಂದರೆ ದ್ವಿಗುಣಿತವಾಗಿ **ರರಿವಾನ್** ಎಂದಾಗಿದೆ. ಉದಾರವಾಗಿ ದಾನಮಾಡುವವನು ಎಂದರ್ಥವೆಂಬುದನ್ನೂ ತೋರಿಸಿದ್ದಾರೆ. (ನಿ. ೪-೨೫).

**ದಸ್ಮ-ಶತ್ರೂಣಾಮುಪಕ್ಷಪಯಿತಃ ।** ಶತ್ರುಗಳನ್ನು ನಾಶಮಾಡತಕ್ಕವನು ಎಂದು ಪೂಷನನ್ನು ಸಂಬೋಧಿಸಿದೆ. **ದಸ್ಮ** ಶಬ್ದಕ್ಕೆ ಎರಡುವಿಧವಾದ ಅರ್ಥವಾಗುತ್ತದೆ. **ಶತ್ರುನಾಶಕನೆಂದು** ಒಂದು ಅರ್ಥವೂ, **ಸುಂದರ**

ರೂಪವುಳ್ಳವನೆಂದು ಇನ್ನೊಂದರ್ಥವೂ ಆಗುತ್ತದೆ. **ದಸಿ ದರ್ಶನದಂಶನಯೋಃ** ಎಂಬ ಧಾತುವಿನಿಂದ ನಿಷ್ಪನ್ನವಾದರೆ **ದರ್ಶನೀಯಃ** ರಮ್ಯನಾದ ಎಂದೂ, **ದಸು-ಉಪಕ್ಷಯೇ** ಎಂಬ ಧಾತುವಿನಿಂದ ನಿಷ್ಪನ್ನವಾದರೆ (ಶತ್ರು) ನಾಶಕ ಎಂದೂ ಅರ್ಥವಾಗುತ್ತದೆ. ಇಂದ್ರಾದಿದೇವತೆಗಳಲ್ಲಿ ಈ ಎರಡು ವಿಧವಾದ ಶಕ್ತಿಗಳೂ ಇರುವುದರಿಂದ **ದಸ್ಮ** ಶಬ್ದಕ್ಕೆ ಎರಡರ್ಥಗಳಲ್ಲಿ ಯಾವುದನ್ನು ಬೇಕಾದರೂ ಹೇಳಬಹುದೆಂಬುದನ್ನು ತೋರಿಸಿದ್ದಾರೆ. ಉದಾಹರಣೆಗೆ-

**ಜುಜೋಷದಿಂದ್ರೋ ದಸ್ಮವರ್ಚಾ ನಾಸತ್ಯೇವ ಸುಗ್ಮ್ಯೋ ರಥೇಷ್ಠಾಃ ।**
(ಋ. ಸಂ. ೧-೧೭೩-೪)

**ತ್ವಂ ಭಗೋ ನ ಆ ಹಿ ರತ್ನಮಿಷೇ ಪರಿಜ್ಮೇವ ಕ್ಷಯಸಿ ದಸ್ಮವರ್ಚಾಃ ।**
(ಋ. ಸಂ. ೬-೧೩-೨)

**ಪೂಷಾ ಸುಬಂಧುರ್ದಿವ ಆ ಪೃಥಿವ್ಯಾ ಇಳಸ್ಪತಿರ್ಮಘವಾ ದಸ್ಮವರ್ಚಾಃ ।**
(ಋ. ಸಂ. ೬-೫೮-೪)

ಇತ್ಯಾದಿ ಋಕ್ಕುಗಳಲ್ಲಿ ಮೊದಲನೆಯದಾಗಿ. **ಶತ್ರೂಪಕ್ಷಯಣಬಲಃ** ಶತ್ರುಗಳನ್ನು ನಾಶಮಾಡತಕ್ಕ ಶಕ್ತಿಯುಳ್ಳವನು ಎಂದೂ, ಎರಡನೆಯದಾಗಿ **ವರ್ಚ ಇತಿ ರೂಪನಾಮ। ದಸ್ಮಂ ದರ್ಶನೀಯಂ ವರ್ಚಃ ಯಸ್ಯ ತಾದೃಶಃ** । ಮನೋಹರವಾದ ರೂಪವುಳ್ಳವನು ಎಂದೂ ಅರ್ಥವಾಗುತ್ತದೆಯೆಂದು ತೋರಿಸಿದ್ದಾರೆ. **ದಸ್ಮ** ಎಂಬ ವಿಶೇಷಣವು ಋಕ್ಸಂಹಿತೆಯಲ್ಲಿ ಅನೇಕಕಡೆಗಳಲ್ಲಿ ಇಂದ್ರಾದಿದೇವತೆಗಳಿಗೆ ವಿಶೇಷಣವಾಗಿರುವಂತೆ ಪ್ರಕೃತವಾದ ಋಕ್ಕಿನಲ್ಲಿ **ಪೂಷ**ನಿಗೆ ವಿಶೇಷಣವಾಗಿ ಅವನ ಶತ್ರುನಾಶಕಶಕ್ತಿಯನ್ನೂ, ಅವನ ರಮಣೀಯವಾದ ರೂಪವನ್ನೂ ವರ್ಣಿಸುತ್ತದೆ.

**ಆಘೃಣೇ—ಸರ್ವತೋ ವೃಷ್ಟೇಃ ಕ್ಷಾರಯಿತಃ ಯದ್ವಾ ಹವಿಷಾಮಾಹರ್ತಃ ಸ್ವೀಕರ್ತಃ ।** ಸುತ್ತಲೂ ವೃಷ್ಟಿಯನ್ನು ಸುರಿಸುವವನೂ ಅಥವಾ ಹವಿಸ್ಸನ್ನು ಸ್ವೀಕರಿಸುವವನೂ ಆದ ಎಂದು **ಪೂಷ**ನನ್ನು ಸಂಬೋಧಿಸಿದೆಯೆಂದು ಸಾಯಣರು ವಿವರಿಸಿದ್ದಾರೆ. **ಪೂಷನಿಗೆ** ಈ ವಿಶೇಷಣವಿರುವುದು. ವಿಮರ್ಶಕರ ಚರ್ಚೆಗೆ ಕಾರಣವಾಗಿದೆ. **ಪೂಷನ** ಗುಣಗಳು ನಾನಾಬಗೆಯಾಗಿದ್ದು ಅವೆಲ್ಲಾ ಅವನ ಬೇರೆಬೇರೆ ಸ್ವರೂಪಗಳನ್ನು ತೋರಿಸುವುದರಿಂದ ಅವನ ಮೂಲಸ್ವರೂಪವು ಹೀಗೆಯೇ ಎಂದು ನಿರ್ದಿಷ್ಟವಾಗಿ ಹೇಳಲು ಕಷ್ಟವಾಗುತ್ತದೆ. ಈಚಿನ ವಿಮರ್ಶಕರಿಗೆ ಇದೊಂದು ಜಟಿಲವಾದ ಪ್ರಶ್ನೆಯಾಗಿದೆ. ಯಾಸ್ಕರು ಪೂಷನನ್ನು ದ್ವಾದಶಾದಿತ್ಯರಲ್ಲಿ ಒಬ್ಬನೆಂದು ಪರಿಗಣಿಸುತ್ತಾರೆ. **ಬ್ಲೂಂಫೀಲ್ಡ್** ಎಂಬ ವಿದ್ವಾಂಸನೂ ಯಾಸ್ಕರ ಮತವನ್ನೇ ಅನುಸರಿಸುತ್ತಾ ಋ. ಸಂ. ೬-೪೮-೧೬, ೬-೫೩-೩, ೬-೫೫-೧ ಇತ್ಯಾದಿ ಋಕ್ಕುಗಳಲ್ಲಿರುವ **ಆಘೃಣಿ** ಎಂಬ ವಿಶೇಷಣದ ಆಧಾರದಮೇಲೆ ಪೂಷನು ಜ್ಯೋತಿಯನ್ನು ಬೆಳಗುವ ಆದಿತ್ಯದೇವತೆ ಎಂದು ಪ್ರತಿಪಾದಿಸಿದ್ದಾನೆ. ಈ ಅಭಿಪ್ರಾಯವನ್ನು ವಿರೋಧಿಸುವವರೂ ಕೆಲವರಿದ್ದಾರೆ. **ಆಘೃಣಿ** ಎಂಬ ಪದವು ಕೇವಲ ತೇಜಸ್ಸಿಗೆ ಸಂಬಂಧಪಟ್ಟಿದೆಂದೂ, ತೇಜೋಮಯನಾದ ಯಾವ ದೇವತೆಗೆ ಬೇಕಾದರೂ ಈ ವಿಶೇಷಣವು ಉಪಯೋಗಿಸಲ್ಪಡಬಹುದೆಂದೂ, ಆದಿತ್ಯನೇ ಆಗಬೇಕೆಂಬ ನಿಯಮವಿಲ್ಲವೆಂದೂ, ಉದಾಹರಣೆಗಾಗಿ (ಋ. ಸಂ. ೮-೬೦-೨೦) ಅಗ್ನಿಗೂ ಈ ವಿಶೇಷಣವಿದೆಯೆಂದೂ ಆದ್ದರಿಂದ ಈ ಒಂದು ವಿಶೇಷಣದಿಂದ ಪೂಷನನ್ನು **ಆದಿತ್ಯದೇವತೆ** ಎಂದು ನಿಷ್ಕರ್ಷಿಸಲು ಸಾಧ್ಯವಿಲ್ಲವೆಂದೂ ಚರ್ಚಿಸುತ್ತಾರೆ. ಯಾಸ್ಕ, ಬೃಹದ್ದೇವತಾಕರ್ತೃ ಇತ್ಯಾದಿ ವೈದಿಕಸಂಪ್ರದಾಯದವರು **ಆಘೃಣಿ** ಎಂಬುದು

ಪೂಷನ ವೈಶಿಷ್ಟ್ಯವನ್ನು ಮಾತ್ರ ತೋರಿಸತಕ್ಕ ವಿಶೇಷಣವೆಂದು ವಿಶದವಾಗಿ ತೋರಿಸಿದ್ದಾರೆ. ಯಾಸ್ಕರು ನಿರುಕ್ತದಲ್ಲಿ ಈ ಪದದ ನಿರ್ವಚನವನ್ನು ಹೇಳುವಾಗ ಆಘೃಣಿರಾಗತಹೃಣಿಃ ಎಂದು ವಿವರಿಸಿ,

**ಏಹಿ ವಾಂ ವಿಮುಚೋ ನಪಾದಾಘೃಣೇ ಸಂ ಸಚಾವಹೈ । ರಥೀರ್ಋತಸ್ಯ ನೋ ಭವ ॥**
(ಋ. ಸಂ. ೬-೫೫-೧)

ಎಂಬ ಋಕ್ಕಿನಲ್ಲಿ ಬರತಕ್ಕ ಪದವನ್ನು ಉದಹರಿಸಿದ್ದಾರೆ. ಆದರೆ **ಆಗತಹೃಣಿಃ** ಎಂದು ಹೇಳುವಾಗ **ಹೃಣಿ**ಯೆಂಬ ಶಬ್ದಕ್ಕೆ ನಿಸ್ಪೃಷ್ಟವಾದ ಅರ್ಥವನ್ನು ಹೇಳಿಲ್ಲ. **ಹೃಣಿ**ಶಬ್ದವು **ದೀಪ್ತಿ**ವಚನಗಳಲ್ಲಿಯೂ (ನಿ. ೨-೨೫) ಹಾಗೆಯೇ **ಕ್ರೋಧ**ನಾಮಗಳಲ್ಲಿಯೂ(ನಿ. ೩-೯) ಪಠಿತವಾಗಿದೆ. ಆದುದರಿಂದ **ದುರ್ಗಾಚಾರ್ಯ**ರು ಈ ಪದಕ್ಕೆ ವ್ಯಾಖ್ಯಾನಮಾಡುವಾಗ **ಆಘೃಣಿಶಬ್ದೋ ದೀಪ್ತಿವಾಚಕಃ । ದೀಪ್ತಿಕರ್ಮಸು ಚ ಪಠಿತ ಏವಾಯಂ ಹೃಣಿಃ ಇತಿ । ಹೃಣಿ**ಶಬ್ದವು ದೀಪ್ತಿವಾಚಕಗಳಲ್ಲಿ ಪಠಿತವಾಗಿರುವುದರಿಂದ ಪ್ರಕಾಶಮಾನವಾದ ಎಂದು ಒಂದು ಅರ್ಥವೂ, **ಕ್ರೋಧೋಽಪಿ ಹೃಣಿರಿತ್ಯುಚ್ಯತೇ ।** ಹೃಣಿಶಬ್ದಕ್ಕೆ ಕ್ರೋಧವೆಂಬ ಅರ್ಥವೂ ಇರುವುದರಿಂದ ಯಾವ ಪೂಷನ ಆಗ್ರಹವು ನಮ್ಮ ಮೇಲೆ ಪ್ರಯೋಗಿಸಲ್ಪಟ್ಟಿರುವುದೋ ಅವನನ್ನು ಸೇವಿಸೋಣ ಎಂದು ಇನ್ನೊಂದರ್ಥವೂ ಸಾಧ್ಯವೆಂದು ತೋರಿಸಿದ್ದಾರೆ. ಒಟ್ಟಿನಲ್ಲಿ ಇದು ಪೂಷನ ವೈಶಿಷ್ಟ್ಯವನ್ನು ತೋರಿಸತಕ್ಕ ವಿಶೇಷಣವೆಂದಾಯಿತು. ಬೃಹದ್ದೇವತಾಕಾರರು,

**ತೃಚೋ ವಿಶ್ವೇಷಾಂ ದೇವಾನಾಂ ಪೂಷ್ಣ ಆಘೃಣಯೇ ತೃಚಃ ।**
**ಆಸಕ್ತೋ ಹಿ ಘೃಣಿಸ್ತಸ್ಯ ದಧ್ನಃ ಪೂರ್ಣೋ ದೃತೀ ರಥೇ ॥**
**ಆಘೃಣಿಸ್ತತ್ಸ್ಮೃತಃ ಪೂಷಾ ಕೀರಿಭೀ ರಿಭ್ಯತೇ ತತಃ ।**

(ಬೃ. ದೇ. ೩-೯೫-೯೬)

ಎಂಬ ವಾಕ್ಯಗಳಲ್ಲಿ **ದಧಿಯಿಂದ** (ಮಾದಕದ್ರವ್ಯ) ತುಂಬಿದ ಚರ್ಮಚೀಲವು ಅವನ ರಥಕ್ಕೆ ಕಟ್ಟಿರುವುದರಿಂದ ಅವನಿಗೆ **ಆಘೃಣಿ**ಯೆಂಬ ಹೆಸರು ಎಂದು ತೋರಿಸಿ, ಆದುದರಿಂದಲೇ ಕೀರ್ತನಕಾರರಾದ ಕವಿಗಳು ಪೂಷನನ್ನು ಆಘೃಣಿಯೆಂದು ಸ್ತುತಿಸಿದರು ಎಂದು ಹೇಳಿದ್ದಾರೆ. ಸಾಯಣರು ಪ್ರಕೃತವಾದ ಋಕ್ಕಿನಲ್ಲಿ ಮಾತ್ರ ಮೇಲೆ ಹೇಳಿದ ಅರ್ಥವನ್ನು ಎಂದರೆ **ವೃಷ್ಟೇಃ ಕ್ಷಾರಯಿತಃ** ಅಥವಾ ಹವಿಷಾಮಾಹರ್ತಃ ಎಂದು ಹೇಳಿರುವರೇ ಹೊರತು, ಈ ಪದವು ಬರುವ ೩-೬೨-೭ ; ೬-೪೮-೧೬ ; ೬-೫೫-೩ ; ೭-೪೦-೬ ; ೮-೪-೧೪ ; ೯-೬೭-೧೨ ; ೧೦-೧೭-೫ ಇತ್ಯಾದಿ ಎಲ್ಲಾ ಋಕ್ಕುಗಳಲ್ಲಿಯೂ ಆಗತ **ದೀಪ್ತೇ ಪೂಷನ್** ಎಂದೇ ಅರ್ಥಮಾಡಿರುವರು. ಈ ವಿಶೇಷಣವು ೮-೬೦-೨೦ ನೇ ಋಕ್ಕಿನಲ್ಲಿ ಒಂದು ಕಡೆ ಮಾತ್ರ ಅಗ್ನಿಗೆ ವಿಶೇಷಣವಾಗಿದೆ. ಉಳಿದೆಡೆಗಳಲ್ಲೆಲ್ಲಾ **ಪೂಷನಿಗೇ** ವಿಶೇಷಣವಾಗಿ ಅವನ ವೈಶಿಷ್ಟ್ಯವನ್ನು ತಿಳಿಸುತ್ತದೆ.

॥ ವ್ಯಾಕರಣಪ್ರಕ್ರಿಯಾ ।

**ಊಷು—ಸುಞಃ** (ಪಾ. ಸೂ. ೮-೩-೧೦೭) ಎಂಬುದರಿಂದ ಪೂರ್ವಪದದಲ್ಲಿ ನಿಮಿತ್ತವಿರುವುದರಿಂದ ಷತ್ವ.

**ಸಾತಯೇ** ಉದಾತ್ತ ಎಂದು ಅನುವೃತ್ತವಾಗುವಾಗ **ಊತಿಯೂತಿ ಜೂತಿ ಸಾತಿ ಹೇತಿಕೀರ್ತಯಶ್ಚ** (ಪಾ. ಸೂ. ೩-೩-೯೭) ಎಂಬುದರಿಂದ ಕ್ತಿನ್ ಉದಾತ್ತವಾಗುತ್ತದೆ ಚತುರ್ಥ್ಯೇಕವಚನಾಂತರೂಪ.

ಭುವಃ—ಭೂಸತ್ತಾಯಾಂ ಧಾತು. ಲೇಟ್ ಮಧ್ಯಮಪುರುಷೈಕವಚನದಲ್ಲಿ ಸಿಪ್. **ಇತಶ್ಚ ಲೋಪಃ** (ಪಾ. ಸೂ. ೩-೪-೯೭) ಎಂಬುದರಿಂದ ಇಕಾರಲೋಪ. **ಲೇಟೋಽಡಾಟೌ** ಎಂಬುದರಿಂದ ಅದಕ್ಕೆ ಅಡಾಗಮ

ಬಹುಲಂ ಛಂದಸಿ ಎಂಬುದರಿಂದ ಶಪಿಗೆ ಲುಕ್. **ಅಚಿಶ್ನುಧಾತು**—ಎಂಬುದರಿಂದ ಉವಙಾದೇಶ ತಿಙಂತ ನಿಘಾತಸ್ವರ ಬರುತ್ತದೆ.

**ಅಸ್ಯಾಃ**—ಚತುರ್ಥ್ಯರ್ಥದಲ್ಲಿ ಷಷ್ಠೀ ಬಂದಿದೆ. **ಊಡಿದಂಪದಾದಿ**—(ಪಾ ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ರರಿವಾನ್**—ರಾ ಆದಾನೇ. ಧಾತು. ಛಾಂದಸವಾಗಿ ಬಂದ ಲಿಟಿಗೆ **ಕ್ವಸುಶ್ಚ** (ಪಾ. ಸೂ. ೩-೨-೧೦೭) ಎಂಬುದರಿಂದ ಕ್ವಸು ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿಗೆ ದ್ವಿತ್ವ. **ಹ್ರಸ್ವಃ** ಸೂತ್ರದಿಂದ ಅಭ್ಯಾಸಕ್ಕೆ ಹ್ರಸ್ವ. **ಆರ್ಧಧಾತುಕಸ್ಯೇಡ್ವಲಾದೇಃ** ಸೂತ್ರದಿಂದ ಪ್ರತ್ಯಯಕ್ಕೆ ಇಡಾಗಮ. **ಆತೋಲೋಪಇಟಿ ಚ** (ಪಾ. ಸೂ. ೬-೪-೬೪) ಎಂಬುದರಿಂದ ಧಾತುವಿನ ಆಕಾರಕ್ಕೆ ಲೋಪ. **ರರಿವಸ್** ಶಬ್ದವಾಗುತ್ತದೆ. ಪ್ರಥಮಾ ಏಕವಚನದಲ್ಲಿ **ಅತ್ವಸಂತಸ್ಯ**– ಎಂಬುದರಿಂದ ಉಪಧಾದೀರ್ಘ. ನುಮಾಗಮ. ಸಂಯೋಗಾಂತಲೋಪದಿಂದ ಸಕಾರಲೋಪ. ವಸುವಿನ ಸ್ವರ ಉಳಿಯುತ್ತದೆ. ರರಿವಾನ್+ಅಜಾಶ್ವ ಎಂದಿರುವಾಗ **ದೀರ್ಘಾದಟಿ ಸಮಾನಪಾದೇ** (ಪಾ. ಸೂ. ೮-೩-೯) ಎಂಬುದರಿಂದ ನಕಾರಕ್ಕೆ ರುತ್ವ. **ಆತೋಟಿ ನಿತ್ಯಮ್** (ಪಾ. ಸೂ. ೮-೩-೩) ಎಂಬುದರಿಂದ ಪೂರ್ವದ ಆಕಾರಕ್ಕೆ ಅನುನಾಸಿಕತ್ವ. ರರಿವಾನ್ ಎಂಬಲ್ಲಿ ಪದಸಂಜ್ಞಾ ಇಲ್ಲದಿದ್ದರೂ ಪಪಿವಾಂಸಂ ಮುಂತಾದ ಸ್ಥಳದಲ್ಲಿ ಬಂದಂತೆ ಛಾಂದಸವಾಗಿ ಅವಗ್ರಹ ಬಂದಿದೆ.

**ಶ್ರವಸ್ಯತಾಮ್**—ಶ್ರವಃ ಆತ್ಮನಃ ಇಚ್ಛತಿ ಶ್ರವಸ್ಯತಿ. **ಸುಪ ಆತ್ಮನಃ ಕ್ಯಚ್** (ಪಾ. ಸೂ. ೩-೧-೮) ಎಂಬುದರಿಂದ ಇಚ್ಛಾರ್ಥದಲ್ಲಿ ಕ್ಯಚ್. **ಸನಾದ್ಯಂತಾ ಧಾತವಃ** ಎಂಬುದರಿಂದ ಕ್ಯಜಂತಕ್ಕೆ ಧಾತು ಸಂಜ್ಞಾ ಬರುತ್ತದೆ. ಇದರ ಮೇಲೆ ಲಡರ್ಥದಲ್ಲಿ ಶತೃಪ್ರತ್ಯಯ. ಶಪ್ ವಿಕರಣ. ಪರರೂಪ. ಷಷ್ಠೀಬಹುವಚನಾಂತರೂಪ. ನುಮ್‌ರಹಿತ ಶತೃ ಪ್ರತ್ಯಯದ ಪರದಲ್ಲಿ ಅಜಾದಿವಿಭಕ್ತಿ ಬಂದುದರಿಂದ **ಶತುರನುಮೋನದ್ಯಜಾದೀ** (ಪಾ. ಸೂ. ೬-೧-೧೭೩) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ವವೃತೀಮಹಿ**—ವೃತು ವರ್ತನೇ. ಧಾತು. ಪ್ರಯೋಜಕವ್ಯಾಪಾರತೋರುವುದರಿಂದ ಅಂತರ್ಭಾವಿತಣ್ಯರ್ಥಕವಾದ ಧಾತು. ಲಿಙ್ ಉತ್ತಮಪುರುಷ ಬಹುವಚನದಲ್ಲಿ ಮಹಿಙ್‌ಪ್ರತ್ಯಯ. **ಲಿಙಃ ಸೀಯುಟ್** (ಪಾ. ಸೂ. ೩-೪-೧೦೨) ಎಂಬುದರಿಂದ ಅದಕ್ಕೆ ಸೀಯುಟಾಗಮ. **ಲಿಙಸ್ಸಲೋಪೋನಂತ್ಯಸ್ಯ** (ಪಾ. ಸೂ, ೨-೭೯) ಎಂಬುದರಿಂದ ಸಕಾರಲೋಪ. **ಲೋಪೋವ್ಯೋರ್ವಲಿ** ಸೂತ್ರದಿಂದ ಯಕಾರಲೋಪ. **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಶ್ಲು ಆದೇಶ. **ಶ್ಲೌ** ಎಂಬುದರಿಂದ ಧಾತುವಿಗೆ ದ್ವಿತ್ವ. **ಉರತ್** (ಪಾ. ಸೂ. ೭-೪-೬೬) ಎಂಬುದರಿಂದ ಅಭ್ಯಾಸಋಕಾರಕ್ಕೆ ಅತ್ವ. ರಪರವಾಗಿ ಬಂದಾಗ **ಹಲಾದಿಃ ಶೇಷಃ** ಎಂಬುದರಿಂದ ಆದಿಹಲ್‌ಶೇಷ. ಪ್ರತ್ಯಯಕ್ಕೆ ಙಿತ್ವವಿರುವುದರಿಂದ ಲಘೂಪಧಗುಣ ಬರುವುದಿಲ್ಲ. ತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ದಸ್ರಾ**—**ಇಷಿಯುಧೀಂಧಿ**—(ಉ. ಸೂ. ೧-೧೪೨) ಎಂಬುದರಿಂದ ರಕ್ ಪ್ರತ್ಯಯ. ಸಂಬುದ್ಧ್ಯಂತ ರೂಪ. **ಆಮಂತ್ರಿತಸ್ಯ ಚ** (ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಅತಿಮನ್ಯೇ**—ಮನು ಅವಬೋಧನೇ ಧಾತು. ದಿವಾದಿ. ಲಟ್‌ಉತ್ತಮಪುರುಷಏಕವಚನಾಂತರೂಪ. **ಹಿ ಚ** (ಪಾ. ಸೂ. ೮-೧-೩೪) ಎಂಬುದರಿಂದ ನಿಘಾತಪ್ರತಿಷೇಧ ಬರುತ್ತದೆ. ಶ್ಯನ್ ನಿತ್ತಾದುದರಿಂದ ಆದ್ಯುದಾತ್ತಸ್ವರ

ಬರುತ್ತದೆ. ಉದಾತ್ತವುಳ್ಳ ತಿಙಂತಪರವಾದುದರಿಂದ ತಿಙಿಚೋದಾತ್ತವತಿ (ಪಾ. ಸೂ. ೮-೧-೭೧) ಎಂಬುದರಿಂದ ಗತಿಗೆ (ಅತಿ) ನಿಘಾತಸ್ವರ ಬರುತ್ತದೆ.

ಆಘೃಣೇ—ಘೃ ಕ್ಷರಣದೀಪ್ತ್ಯೋಃ ಧಾತು ಇದಕ್ಕೆ ಘೃಣಿಪೃಶ್ನಿ ಪಾರ್ಷ್ಣಿ—(ಉ. ಸೂ. ೪-೫೨) ಎಂಬುದರಿಂದ ನಿಪ್ರತ್ಯಯವು ನಿಪಾತಿತವಾಗಿ **ಋವರ್ಣಾಚ್ಚೇತಿವಕ್ತವ್ಯಮ್** ಎಂಬ ವಚನದಿಂದ ಣತ್ವ. ಪ್ರಾದಿ ಸಮಾಸ. ಸಂಬುದ್ಧ್ಯಂತರೂಪ. ಆಮಂತ್ರಿತನಿಘಾತಸ್ವರ ಬರುತ್ತದೆ.

ಅಪಹ್ನುವೇ—ಹ್ನುಙ್ ಅಪನಯನೇ. ಧಾತು ಅದಾದಿ. ಲಟ್ ಉತ್ತಮಪುರುಷ ಏಕವಚನಾಂತರೂಪ. ಪ್ರತ್ಯಯಕ್ಕೆ ಙಿತ್ವಾತಿದೇಶವಿರುವುದರಿಂದ ಗುಣ ಬರುವುದಿಲ್ಲ. ॥ ೪ ॥

ಇಲ್ಲಿಗೆ ೧೩೮ ನೇ ಸೂಕ್ತವು ಮುಗಿದುದು.



# ನೂರ ಮೂವತ್ತೊಂಭತ್ತನೆಯ ಸೂಕ್ತವು

**ಅಸ್ತು ಶ್ರೌಷಡಿತ್ಯೇಕಾದಶರ್ಚಂ ಷಷ್ಠಂ ಸೂಕ್ತಂ । ಅತ್ರಾನುಕ್ರಮಣಿಕಾ । ಅಸ್ತು ಶ್ರೌಷಳೇಕಾದಶ ವೈಶ್ವದೇವೋ ಮೈತ್ರಾವರುಣ್ಯಾಶ್ವಿನ್ಯಸ್ತಿಸ್ರ ಐಂದ್ರ್ಯಾಗ್ನೇಯೋ ಮಾರುತ್ಯೈಂದ್ರಾಗ್ನೀ ಬಾರ್ಹಸ್ಪತ್ಯಾ ವೈಶ್ವದೇವ್ಯಂತ್ಯಾ ತ್ರಿಷ್ಟುಪ್ಪಂಚಮೀ ಬೃಹತೀ ವೈಶ್ವದೇವಮೇತದೇವಮನ್ಯಾಸಾಮಪಿ ಸೂಕ್ತಪ್ರಯೋಗೇ ವೈಶ್ವದೇವತ್ವಂ ಸೂಕ್ತಭೇದಪ್ರಯೋಗೇ ಯಲ್ಲಿಂಗಂ ಸಾ ದೇವತೇತಿ । ಪರುಚ್ಛೇಪ ಋಷಿಃ । ಅಂತ್ಯಾ ತ್ರಿಷ್ಟುಪ್ ಪಂಚಮೀ ಬೃಹತೀ । ಅನ್ಯಾ ಅತ್ಯಷ್ಟಯೋ ವಿಶೇಷಾಭಾವಾತ್ । ಕೃತ್ಸ್ನಂ ಸೂಕ್ತಂ ವೈಶ್ವದೇವಂ । ತತ್ರಾದ್ಯಾಯಾ ವಿಶ್ವೇ ದೇವಾ ದೇವತಾ । ದ್ವಿತೀಯಾಯಾ ಮಿತ್ರಾವರುಣೌ । ಅಥ ತಿಸ್ರೋಽಶ್ವಿದೇವತಾಕಾಃ । ಐಂದ್ರೀ ಷಷ್ಠೀ । ಸಪ್ತಮ್ಯಾಗ್ನೇಯೀ । ಅಷ್ಟಮೀ ಮಾರುತೀ । ನವಮ್ಯೈಂದ್ರಾಗ್ನೀ । ದಶಮೀ ಬಾರ್ಹಸ್ಪತ್ಯಾ । ಏಕಾದಶೀ ವೈಶ್ವದೇವೀ ॥ ಸೂಕ್ತವಿನಿಯೋಗೋ ಲೈಂಗಿಕಃ ॥ ದಶರಾತ್ರಸ್ಯ ಷಷ್ಠೇಽಹನಿ ಪ್ರಉಗಶಸ್ತ್ರ ಆದ್ಯಾ ವೈಶ್ವದೇವತೃಚೇ ಪ್ರಥಮಾ । ಷಷ್ಠಸ್ಯೇತಿ ಖಂಡೇ ಸೂತ್ರಿತಂ । ಅಸ್ತು ಶ್ರೌಷಳ್ಪುರೋ ಅಗ್ನಿಂ ಧಿಯಾ ದಧ ಇತಿ ಖಂಡೇ ಸೂತ್ರಿತಂ । ಅಸ್ತು ಶ್ರೌಷಳೋ ಷೂ ಣೋ ಅಗ್ನೇ । ಆ. ೮-೧ । ಇತಿ ॥**

ಅನುವಾದವು—**ಅಸ್ತು ಶ್ರೌಷಟ್** ಎಂಬ ಈ ಸೂಕ್ತವು ಇಪ್ಪತ್ತನೆಯ ಅನುವಾಕದಲ್ಲಿ ಆರನೆಯ ಸೂಕ್ತವು ಇದರಲ್ಲಿ ಹನ್ನೊಂದು ಋಕ್ಕುಗಳಿರುವುವು. ಅನುಕ್ರಮಣಿಕೆಯಲ್ಲಿ—**ಅಸ್ತು ಶ್ರೌಷಳೇಕಾದಶ ವೈಶ್ವದೇವೀ ಮೈತ್ರಾವರುಣ್ಯಾಶ್ವಿನ್ಯಸ್ತಿಸ್ರ ಐಂದ್ರ್ಯಾಗ್ನೇಯೋ ಮಾರುತ್ಯೈಂದ್ರಾಗ್ನೀ ಬಾರ್ಹಸ್ಪತ್ಯಾ ವೈಶ್ವದೇವ್ಯಂತ್ಯಾ ತ್ರಿಷ್ಟುಪ್ಪಂಚಮೀ ಬೃಹತೀ ವೈಶ್ವದೇವಮೇತದೇವಮನ್ಯಾಸಾಮಪಿ ಸೂಕ್ತಪ್ರಯೋಗೇ ವೈಶ್ವದೇವತ್ವಂ ಸೂಕ್ತಭೇದಪ್ರಯೋಗೇ ಯಲ್ಲಿಂಗಂ ಸಾ ದೇವತಾ** ಎಂದು ಹೇಳಿರುವುದು ಈ ಸೂಕ್ತಕ್ಕೆ ಪರುಚ್ಛೇಪನೇ ಋಷಿಯು. ಕೊನೆಯ ಋಕ್ಕು ತ್ರಿಷ್ಟುಪ್‌ಛಂದಸ್ಕವು. ಐದನೆಯದು ಬೃಹತೀ, ಉಳಿದ ಋಕ್ಕುಗಳು ಅತ್ಯಷ್ಟಿ, ಎಂಬ

ಛಂದಸ್ಸಿನವು. ಈ ಸೂಕ್ತಕ್ಕೆಲ್ಲ ಒಟ್ಟಾಗಿ ಹೇಳುವುದಾದರೆ ವಿಶ್ವೇದೇವತೆಗಳೇ ದೇವತೆಯು. ಪ್ರತ್ಯೇಕವಾಗಿ ಹೇಳುವುದಾದರೆ ಮೊದಲನೆಯ ಋಕ್ಕಿಗೆ ವಿಶ್ವೇದೇವಾಃ ಎಂಬುವರು ದೇವತೆಯು, ಎರಡನೆಯ ಋಕ್ಕಿಗೆ ಮಿತ್ರಾವರುಣರು ದೇವತೆಯು, ಅಲ್ಲಿಂದ ಮುಂದಿನ ಮೂರು ಋಕ್ಕುಗಳು ವಿಶ್ವೇದೇವತಾಕವು, ಆರನೆಯುದು ಇಂದ್ರದೇವತಾಕವು, ಏಳನೆಯದು ಅಗ್ನಿದೇವತಾಕವು, ಎಂಟನೆಯದು ಮರುದ್ದೇವತಾಕವು, ಒಂಭತ್ತನೆಯುದು ಇಂದ್ರಾಗ್ನಿದೇವತಾಕವು, ಪತ್ತನೆಯುದು ಬೃಹಸ್ಪತಿದೇವತಾಕವು, ಹನ್ನೊಂದನೆಯುದು ವಿಶ್ವೇದೇವಾದೇವತಾಕವು. ಸೂಕ್ತದ ವಿನಿಯೋಗವು ಲೈಂಗಿಕವು. ಒಟ್ಟು ಸೂಕ್ತವು ವಿಶ್ವೇದೇವತೆಗಳ ಪರವಾಗಿದ್ದರೂ ಪ್ರತ್ಯೇಕ ಋಕ್ಕುಗಳಿಗೆ ಆಯಾ ದೇವತಾಸಂಬಂಧವಾಗಿ ಪ್ರತ್ಯೇಕ ವಿನಿಯೋಗವನ್ನು ಹೇಳಬಹುದು. ದಶರಾತ್ರವೆಂಬ ಹತ್ತುದಿನಗಳವರೆಗೆ ಮಾಡುವ ಯಾಗವಿಶೇಷದಲ್ಲಿ ಆರನೆಯದಿವಸ ಪ್ರಉಗಶಸ್ತ್ರಮಂತ್ರಪಠನಮಾಡುವಾಗ ವಿಶ್ವೇದೇವತೆಗಳ ಪರವಾದ ತೃಚವನ್ನು ಪಠಿಸುವಾಗ ಈ ಸೂಕ್ತದ ಮೊದಲನೆಯ ಋಕ್ಕಿನ ವಿನಿಯೋಗವಿರುವುದೆಂದು ಆಶ್ವಲಾಯನ ಶ್ರೌತಸೂತ್ರದ **ಷಷ್ಠಸ್ಯ** ಎಂಬ ಖಂಡದಲ್ಲಿ **ಅಸ್ತು ಶ್ರೌಷಳೋ ಷೂ ಣೋ ಅಗ್ನೇ** ಎಂಬ ಸೂತ್ರದಿಂದ ವಿವೃತವಾಗಿರುವುದು.

——:o:——

॥ ಓಂ ॥

## ಸೂಕ್ತ—೧೩೯

॥ ಮಂಡಲ—೧ ॥ ಅನುವಾಕ—೨೦ ॥ ಸೂಕ್ತ—೧೩೯ ॥

॥ ಅಷ್ಟಕ— ೨ ॥ ಅಧ್ಯಾಯ— ೨ ॥ ವರ್ಗ— ೩, ೪ ॥

**ಸೂಕ್ತದಲ್ಲಿರುವ ಋಕ್ಸಂಖ್ಯೆ-೧೧**

॥ ಋಷಿಃ—ಪರುಚ್ಛೇಪೋ ದೈವೋದಾಸಿಃ ॥

॥ ದೇವತಾ—೧. ವಿಶ್ವೇದೇವಾಃ । ೨. ಮಿತ್ರಾವರುಣೌ । ೩-೫. ಅಶ್ವಿನೌ । ೬. ಇಂದ್ರಃ । ೭. ಅಗ್ನಿಃ । ೮. ಮರುತಃ । ೯. ಇಂದ್ರಾಗ್ನೀ । ೧೦. ಬೃಹಸ್ಪತಿಃ । ೧೧. ವಿಶ್ವೇದೇವಾಃ ॥

॥ ಛಂದಃ—೧-೪ ; ೬-೧೦ ಅತ್ಯಷ್ಟಿಃ । ೫. ಬೃಹತೀ । ೧೧. ತ್ರಿಷ್ಟುಪ್ ।

। ಸಂಹಿತಾಪಾಠಃ ।

ಅಸ್ತು ಶ್ರೌಷಟ್ ಪುರೋ ಅಗ್ನಿಂ ಧಿಯಾ ದಧ ಆ ನು ತಚ್ಛರ್ಧೋ ದಿವ್ಯಂ
ವೃಣೀಮಹ ಇಂದ್ರವಾಯೂ ವೃಣೀಮಹೇ ।
ಯದ್ಧ ಕ್ರಾಣಾ ವಿವಸ್ವತಿ ನಾಭಾ ಸಂದಾಯಿ ನವ್ಯಸೀ ।
ಅಧ ಪ್ರ ಸೂ ನ ಉಪ ಯಂತು ಧೀತಯೋ ದೇವಾಁ ಅಚ್ಛಾ ನ ಧೀತಯಃ ॥

। ಪದಪಾಠಃ ।

ಅಸ್ತು । ಶ್ರೌಷಟ್ । ಪುರಃ । ಅಗ್ನಿಂ । ಧಿಯಾ । ದಧೇ । ಆ । ನು । ತತ್ । ಶರ್ಧಃ । ದಿವ್ಯಂ । ವೃಣೀ-

ಮಹೇ । ಇಂದ್ರವಾಯೂ ಇತಿ । ವೃಣೀಮಹೇ ।

ಯತ್ । ಹ । ಕ್ರಾಣಾ । ವಿವಸ್ವತಿ । ನಾಭಾ । ಸಂಽದಾಯಿ । ನವ್ಯಸೀ ।

ಅಧ । ಪ್ರ । ಸು । ನಃ । ಉಪ । ಯಂತು । ಧೀತಯಃ । ದೇವಾನ್ । ಅಚ್ಛ । ನ । ಧೀತಯಃ ॥ ೧ ॥

ಸಾಯಣಭಾಷ್ಯಂ

ಅಹಂ ಪುರಃ ಪುರತ ಉತ್ತರವೇದ್ಯಾಮಗ್ನಿಮಾಹವನೀಯಾಖ್ಯಂ ಧಿಯಾ ಪ್ರಣಯನಾದಿಕರ್ಮಣಾ ದಧೇ । ಧಾರಿತವಾನಸ್ಮಿ । ತಚ್ಛರ್ಧಸ್ತಾದೃಶಂ ಬಲವಂತಂ ವಾಗ್ನಿಂ ಯದ್ವಾ ತಚ್ಛರ್ಧಸ್ತಾದೃಶಂ ಮರುತಾಂ ಸ್ವರೂಪಂ ಬಲಂ ದಿವ್ಯಂ ದಿವಿ ಭವಂ ನು ಕ್ಷಿಪ್ರಮಾ ವೃಣೀಮಹೇ । ಆಭಿಮುಖ್ಯೇನ ಸಂಭಜಾಮಹೇ । ಕಿಂಚೇಂದ್ರವಾಯೂ ವೃಣೀಮಹೇ । ಯದ್ಯಸ್ಮಾತ್ಕಾರಣಾದ್ವಿವಸ್ವತಿ ದೀಪ್ತಿಮತಿ ನಾಭಾ ನಾಭೌ ಭೂಮ್ಯಾ ನಾಭಿಸ್ಥಾನೇ ದೇವಯಜನೇ ವೇದಿರೂಪೇ । ಯದ್ವಾ । ನಾಭೌ ಸರ್ವಫಲಸ್ಯ ಸಂಬಂಧಕೇ ಯಜ್ಞೇ । ಯಜ್ಞಮಾಹುರ್ಭುವನಸ್ಯ ನಾಭಿಮಿತಿ ಶ್ರುತೇಃ । ಕ್ರಾಣಾ ಕುರ್ವಾಣಾ ಸ್ವಾರ್ಥಪ್ರಕಾಶನಂ ನವ್ಯಸೀ ನವತರಾ ಸ್ತುತಿರೂಪಾ ವಾಕ್ ಸಂದಾಯಿ ಸಂಬಧ್ಯತೇ ॥ ಛಾಂದಸಃ ಕರ್ಮಣಿ ಲುಙ್ ॥ ಅಸ್ಮಾಭಿಃ ಪ್ರಯುಜ್ಯತ ಇತ್ಯರ್ಥಃ । ಯಸ್ಮಾತ್ಸ್ತುತಿಃ ಪ್ರಯುಕ್ತೇ ತಸ್ಮಾದಸ್ತು ಶ್ರೌಷಟ್ । ಅಸ್ಯಾಃ ಸ್ತುತೇಃ ಶ್ರವಣಂ ಭವತು । ಶ್ರೋತಾ ಭವತು ವಾ ಮರುತಾಂ ಗಣೋಽಗ್ನಿರ್ವಾ । ಇಂದ್ರಾವಾಯುಪಕ್ಷೇ ಪ್ರತ್ಯೇಕಾಪೇಕ್ಷ-ಯೈಕವಚನಂ । ಅಥಾನಂತರಂ ನೋ ಧೀತಯೋಽಸ್ಮದೀಯಾನಿ ಕರ್ಮಾಣಿ ಸ್ತುತ್ಯಾದಿರೂಪಾಣಿ ಪ್ರ ಸೂಪಯಂತು । ಪ್ರಕರ್ಷೇಣ ಸುಷ್ಠು ಯುಷ್ಮಾನುಪಗಚ್ಛಂತು । ಕಿಂಚ ದೇವಾನ್ ಅಚ್ಛಾ ನಾಗ್ನ್ಯಾದಿದೇವಾನಾಭಿಮುಖ್ಯೇನ ಪ್ರಾಪ್ತುಮಿವ ಧೀತಯೋಽಸ್ಮದೀಯಾನಿ ಕರ್ಮಾಣ್ಯುಪ ಯಂತು । ತೇಷಾಂ ಸಮೀಪಂ ಪ್ರಾಪ್ನುವಂತು ॥

ಪ್ರತಿಪದಾರ್ಥ

(ಅಹಂ—ನಾನು) । ಪುರಃ—ಮುಂದುಗಡೆಯಿರುವ ಉತ್ತರವೇದಿಯಲ್ಲಿ । **ಅಗ್ನಿಂ**—ಆಹವನೀಯರೂಪವಾದ ಅಗ್ನಿಯನ್ನು । ದಧೇ—ಸ್ಥಾಪಿಸಿದ್ದೇನೆ । ದಿವ್ಯಂ—ದ್ಯುಲೋಕೋತ್ಪನ್ನವಾದ । ತಚ್ಛರ್ಧಃ—ಆ ಅಗ್ನಿಶಕ್ತಿಯನ್ನು (ಶಕ್ತಿಯುತನಾದ ಅಗ್ನಿಯನ್ನು) ಅಥವಾ ಮರುತ್ತುಗಳ ಸಂಘಾತರೂಪವಾದ ಶಕ್ತಿಯನ್ನು । **ನು**—ಕ್ಷಿಪ್ರವಾಗಿ (ನಾವು) । **ಆ ವೃಣೀಮಹೇ**—ಪೂಜೆಯಿಂದ ಆಶ್ರಯಿಸೋಣ । (ಅಲ್ಲದೇ) । **ಇಂದ್ರವಾಯೂ**—ಇಂದ್ರನನ್ನೂ ಮತ್ತು ವಾಯುವನ್ನೂ । **ವೃಣೀಮಹೇ**—ಸಂಭಜಿಸೋಣ । **ಯತ್ ಹ**—ಯಾವ ನಮ್ಮ ಭಕ್ತಿರೂಪವಾದ ಕಾರಣದಿಂದ । **ವಿವಸ್ವತಿ**—ಪ್ರಕಾಶಯುತವಾದ । **ನಾಭಾ**—ಪೃಥ್ವಿಯ ನಾಭಿರೂಪವಾದ ವೇದಿಯಲ್ಲಿ ಅಥವಾ ಭುವನದ ನಾಭಿರೂಪವಾದ ಯಜ್ಞದಲ್ಲಿ । **ನವ್ಯಸೀ**—(ನಮ್ಮ) ನೂತನವಾದ ಸ್ತುತಿಯು । **ಕ್ರಾಣಾ**—ತನ್ನ ಆತ್ಮಪ್ರಕಾಶವನ್ನು ಮಾಡಿಕೊಂಡು । **ಸಂದಾಯಿ**—(ದೇವತೆಗಳಿಗೆ ಅರ್ಪಿತವಾಗಿ) ಅವರನ್ನು

ಸೇರಿಕೊಳ್ಳುತ್ತವೆಯೋ। (ಅನ್ವರಿಂದಲೇ)। **ಅಸ್ತು ಶ್ರೌಷಟ್**--(ನಮ್ಮ ಸ್ತುತಿಯು) ದೇವತೆಗಳಿಗೆಲ್ಲಾ ಕೇಳಿಸುವಂತಾಗಲಿ। **ಅಥ**—ಅನಂತರ। **ನಃ**--ನಮ್ಮ। **ಧೀತಯಃ**—ಸ್ತುತಿರೂಪವಾದ ಕರ್ಮಗಳು। **ಪ್ರ ಸು ಉಪ ಯಂತು**—ಅತಿಶಯವಾದ ಕ್ರಮದಿಂದ ದೇವತೆಗಳನ್ನು ಸೇರಿಕೊಳ್ಳಲಿ। (**ನಃ**—ನಮ್ಮ)। **ಧೀತಯಃ**—ಯಾಗಾದಿ ಕರ್ಮಗಳೂ ಸಹ। **ದೇವಾನ್**—ಅಗ್ನ್ಯಾದಿದೇವತೆಗಳನ್ನು। **ಅಚ್ಛಾ ನ**—ಅಭಿಮುಖವಾಗಿ ಹೋಗಿ (ಅವರನ್ನು ಸೇರಿಕೊಳ್ಳಲಿ.)

**ಭಾವಾರ್ಥ**

ಆಹವನೀಯರೂಪನಾದ ಅಗ್ನಿಯನ್ನು ಮುಂಭಾಗದ ಉತ್ತರವೇದಿಯಲ್ಲಿ ಸ್ಥಾಪಿಸಿದ್ದೇನೆ. ನಾವು ಆ ಅಗ್ನಿಯದಿವ್ಯವಾದ ಶಕ್ತಿಯನ್ನು ಆಶ್ರಯಿಸೋಣ. ಹಾಗೆಯೇ ಇಂದ್ರನನ್ನೂ ವಾಯುವನ್ನೂ ಆಶ್ರಯಿಸೋಣ. ನಾವು ಅತ್ಯಂತ ಭಕ್ತಿಯುತರಾಗಿ ನಮ್ಮ ನೂತನವಾದ ಸ್ತುತಿಯನ್ನು ಪೃಥ್ವಿಯ ನಾಭಿರೂಪವಾದ ಈ ಯಜ್ಞದಲ್ಲಿ ಅರ್ಪಿಸಿರುವ ಕಾರಣದಿಂದ ನಮ್ಮ ಈ ಸ್ತುತಿಯು ದೇವತೆಗಳ ಕಿವಿಯನ್ನು ಮುಟ್ಟಲಿ. ನಮ್ಮ ಸ್ತುತಿರೂಪವಾದ ಕರ್ಮಗಳೂ, ಇತರ ಯಾಗಾದಿಕರ್ಮಗಳೂ ದೇವತೆಗಳನ್ನು ಅತಿಶಯವಾದ ಶ್ರದ್ಧೆಯಿಂದ ಹೋಗಿ ಸೇರಿಕೊಳ್ಳಲಿ.

## English Translation

May our prayers be heard. I place before ( me ) Agni with reverence ; we have recourse to his celestial might ; we have recourse to Indra and to Vayu : which doing, a new (hymn) has been addressed (by us) to the radiant navel (of the earth) ; and thereupon may our pious rites attain the the gods ; may our pious rites attain the presence of the gods.

**ವಿಶೇಷವಿಷಯಗಳು**

**ತತ್ ಶರ್ಧಃ—ತಾದೃಶಂ ಬಲವಂತಂ ವಾ ಅಗ್ನಿಂ, ಯದ್ವಾ ತಚ್ಛರ್ಧಃ ತಾದೃಶಂ ಮರುತಾಂ ಸ್ವರೂಪಂ ಬಲಂ।** ಶಕ್ತಿಯುತನಾದ ಅಗ್ನಿಯನ್ನು ಅಥವಾ ಮರುತ್ತುಗಳ ಸ್ವಾಭಾವಿಕವಾದುದೂ ಸಂಘಾತ್ಮಕವಾದುದೂ ಆದ ಶಕ್ತಿಯನ್ನು ಎಂದು ಎರಡು ವಿಧವಾದ ಅರ್ಥಗಳೂ ಸಾಧ್ಯವೆಂದು ಸಾಯಣರು ತೋರಿಸಿದ್ದಾರೆ.

ಶರ್ಧ ಶಬ್ದವು ಬಲನಾಮಗಳಲ್ಲಿ ಪಠಿತವಾಗಿದೆ. (ನಿ. ೨-೯) ಸಾಧಾರಣವಾಗಿ ಈ ಶಬ್ದವು ಮರುತ್ತುಗಳ ಪರವಾಗಿಯೇ ಉಪಯೋಗಿಸಲ್ಪಟ್ಟಿದೆ. ಮರುತ್ತುಗಳ ಸಂಘಾತಾತ್ಮಕವಾದ ಶಕ್ತಿಯೆಂದರ್ಥ.

**ಸಪ್ತ ಸಪ್ತ ಹಿ ಮಾರುತೋ ಗಣಸ್ತಸ್ಮಾನ್ಮಾರುತಃ ಸಪ್ತಕಪಾಲಃ।**
(ಶ. ಬ್ರಾ. ೨-೫-೧-೧೩)

**ಸಪ್ತ ಸಪ್ತ ಹಿ ಮಾರುತೋ ಗಣಃ ಸರ್ವಮೇವೈತೇನ ರಥಂ ಪ್ರೀಣಾತಿ।**
(ಶ. ಬ್ರಾ. ೫-೪-೩-೧೭)

ಇತ್ಯಾದಿ ವಾಕ್ಯಗಳಿಂದ ಮರುತ್ತುಗಳು ಯಾವಾಗಲೂ ಗುಂಪು ಕಟ್ಟಿಕೊಂಡೇ ಇರುವರೆಂದು ತಿಳಿಯುತ್ತದೆ. ಆ ವಿಧವಾದ ಗುಂಪಿನಲ್ಲಿ ಒಂದು ವಿಧವಾದ ಚೈತನ್ಯವೂ ಶಕ್ತಿಯೂ ಸಹಜವಾಗಿರುವುದು. **ಶರ್ಧಃ** ಎನ್ನುವ ಪದವು ಆ ಸಂಘಶಕ್ತಿಯನ್ನು ಹೇಳುವ ಪರ್ಯಾಯಪದವಾಗಿದೆ ಈ ಪದವು **ಸಕಾರಾಂತ** ನಪುಂಸಕಲಿಂಗದಲ್ಲೂ **ಅಕಾರಾಂತ**

ಪುಲ್ಲಿಂಗದಲ್ಲೂ ಉಪಯೋಗಿಸಲ್ಪಟ್ಟಿದೆ. ೫-೫೬-೯ ; ೨-೩೦-೧೧ ; ೭-೫೬-೮ ಇತ್ಯಾದಿ ಋಕ್ಕುಗಳಲ್ಲಿ ಅಕಾರಾಂತವಾಗಿದೆ. ೧-೩೭-೧ ಇತ್ಯಾದಿ ಋಕ್ಕುಗಳಲ್ಲಿ ಸಕಾರಾಂತವಾಗಿದೆ. ಈ ಪದವು ಸಾಧಾರಣವಾಗಿ ಮರುತ್ತುಗಳ ಪದವಾಗಿಯೇ ಉಪಯೋಗಿಸಲ್ಪಟ್ಟರೂ ಸಹ ಕೆಲವು ಸಲ ಇತರ ದೇವತೆಗಳ ಗುಂಪನ್ನೂ ಹೇಳುತ್ತದೆ.

**ಶೃಣೋತು ನೋ ದೈವ್ಯಂ ಶರ್ಧೋ ಅಗ್ನಿಃ ಶೃಣ್ವಂತು ವಿಶ್ವೇ ಮಹಿಷಾ ಅಮೂರಾಃ ।**

(ಋ. ಸಂ. ೭-೪೪-೫)

**ಸ ಆ ವಹ ದೇವತಾತಿಂ ಯವಿಷ್ಠ ಶರ್ಧೋ ಯದದ್ಯ ದಿವ್ಯಂ ಯಜಾಸಿ ।**

(ಋ. ಸಂ. ೩-೧೯-೪)

ಇಲ್ಲೆಲ್ಲಾ **ದೈವ್ಯಂ ಶರ್ಧಃ ದಿವ್ಯಂ ಶರ್ಧಃ** ಎಂದರೆ ದೇವತಾತ್ಮಕವಾದ ಸಂಘಶಕ್ತಿ ಎಂದರ್ಥವಾಗುತ್ತದೆ. ಹೀಗೆಯೇ ಬೇರೆ ಲೌಕಿಕವಾದ ಗುಂಪನ್ನು ನಿರ್ದೇಶಿಸುವಾಗಲೂ ಸಹ ಈ ಪದದ ಪ್ರಯೋಗವು ಇರುವುದು. ಉದಾಹರಣೆಗೆ

**ತಂ ವಃ ಶರ್ಧಂ ರಥಾನಾಂ ತ್ವೇಷಂ ಗಣಂ ಮಾರುತಂ ನವ್ಯಸೀನಾಂ ।**

(ಋ. ಸಂ. ೫-೫೩-೧೦)

ಎಂಬಲ್ಲಿ **ರಥಗಳ** ಸಾಮೂಹಿಕ ಶಕ್ತಿಯೆಂದೂ,

**ಅವಾಸಾಂ ಮಘವಜ್ಜಹಿ ಶರ್ಧೋ ಯಾತುಮತೀನಾಂ ।**

(ಋ. ಸಂ. ೧-೧೩೩-೩)

ಎಂಬಲ್ಲಿ **ಆಯುಧಗಳ** ಅಥವಾ **ಹಿಂಸಾಕಾರಕರ** ಶಕ್ತಿಯೆಂದೂ ಅರ್ಥವಾಗುತ್ತದೆ. ಪ್ರಕೃತವಾದ ಋಕ್ಕಿನಲ್ಲಿ **ಅಗ್ನಿ**ಶಕ್ತಿ ಅಥವಾ **ಮರುಚ್ಛಕ್ತಿ**ಯೆಂದರ್ಥ.

**ನಾಭಾ—ಭೂಮ್ಯಾ ನಾಭಿಸ್ಥಾನೇ ದೇವಯಜನೇ ವೇದಿರೂಪೇ** ಪೃಥ್ವಿಯ ನಾಭಿಸ್ಥಾನವಾದುದೂ ವೇದಿರೂಪವಾದುದೂ ಆದ ಯಜ್ಞಪ್ರದೇಶವೆಂದಾಗಲಿ ಅಥವಾ, **ನಾಭೌ ಸರ್ವಫಲಸ್ಯ ಸಂಬಂಧಕೇ ಯಜ್ಞೇ** ಸಕಲವಾದ ಫಲವನ್ನು ಕೊಡತಕ್ಕ ಯಜ್ಞವೆಂದಾಗಲೀ ಅರ್ಥವಾಗಬಹುದೆಂದು ಸಾಯಣರು ವಿವರಿಸಿದ್ದಾರೆ.

**ವಿಶ್ವಾಯುರಸಿ ಪೃಥಿವೀಂ ದೃಗ್ಂಹ ಧ್ರುವಕ್ಷಿದಸಿ**

(ತೈ. ಸಂ. ೧-೨-೧೨)

ಎಂಬುದಾಗಿ **ಉತ್ತರವೇದಿ**ಯನ್ನು ಸ್ತುತಿಸಿರುವುದರಿಂದ ಮೊದಲನೆಯ ಅರ್ಥವು ಹೊಂದಿಕೊಳ್ಳುತ್ತದೆ. ಅಥವಾ ಯಜ್ಞವೆಂದರ್ಥಮಾಡಿದರೆ, ಆ ಅರ್ಥಕ್ಕೂ ಸಹ

**ಇಯಂ ವೇದಿಃ ಪರೋ ಅಂತಃ ಪೃಥಿವ್ಯಾ ಅಯಂ ಯಜ್ಞೋ ಭುವನಸ್ಯ ನಾಭಿಃ ।**

(ಋ. ಸಂ. ೧-೧೬೪-೩೫)

**ಯಜ್ಞಮಾಹುರ್ಭುವನಸ್ಯ ನಾಭಿಂ ।**

(ತೈ. ಸಂ. ೭-೪-೧೮)

ಇತ್ಯಾದಿ ಸಂಹಿತಾವಾಕ್ಯಗಳಿಂದ ಸಮರ್ಥನವು ದೊರಕುತ್ತದೆ. ಈ ಎರಡರಲ್ಲಿ ಯಾವ ಅರ್ಥವನ್ನು ಬೇಕಾದರೂ ಹೇಳಬಹುದು.

**ವಿವಸ್ವತಿ—ದೀಪ್ತಿಮತಿ ।** ಪ್ರಕಾಶಮಾನವಾದ ಎಂದರ್ಥ. **ನಾಭಾ** ಎಂಬ ಪದಕ್ಕೆ ವಿಶೇಷಣವಾಗಿದೆ. **ವಿವಸ್ವತ್** ಎಂಬ ಪದವು ಋಕ್ಸಂಹಿತೆಯಲ್ಲಿ ಬೇರೆ ಬೇರೆ ಅರ್ಥಗಳಲ್ಲಿ ಉಪಯೋಗಿಸಲ್ಪಟ್ಟಿದೆ. ಪ್ರಕಾಶಮಾನವಾದ ಎಂದೂ, ಮಾನವನೆಂದೂ ಅರ್ಥವಾಗುವುದಲ್ಲದೇ ಅಂಕಿತನಾಮವಾಗಿ ಒಂದು ವ್ಯಕ್ತಿಯ ಹೆಸರೂ ಆಗುತ್ತದೆ.

**ಅಮೂರಃ ಕವಿರದಿತಿರ್ವಿವಸ್ವಾನ್ತ್ಸುಸಂಸನ್ಮಿತ್ರೋ ಅತಿಥಿಃ ಶಿವೋನಃ ।**
(ಋ. ಸಂ. ೭-೯-೩)

**ವಿವಸ್ವತಾ ಚಕ್ಷಸಾ ದ್ಯಾಮುಪಶ್ಚ ದೇವಾ ಅಗ್ನಿಂ ಧಾರಯನ್ದ್ರವಿಣೋದಾಂ ।**
(ಋ. ಸಂ. ೧-೯೬-೨)

ಇತ್ಯಾದಿ ಋಕ್ಕುಗಳಲ್ಲಿ ಪ್ರಕಾಶಮಾನವಾದ ಎಂಬರ್ಥವೂ,

**ಆ ದೂತೋ ಅಗ್ನಿಮಭರದ್ವಿವಸ್ವತೋ ವೈಶ್ವಾನರಂ  ಮಾತರಿಶ್ವಾ ಪರಾವತಃ ।**
(ಋ. ಸಂ. ೬-೮-೪)

ಎಂಬಲ್ಲಿ ಆದಿತ್ಯನೆಂದೂ,

**ಸ ಶೇವಧಿಂ ನಿ ದಧಿಷೇ ವಿವಸ್ವತಿ ವಿಶ್ವಸ್ಯೈಕ ಈಶಿಷೇ ಸಾಸ್ಯುಕ್ಥ್ಯಃ**
(ಋ. ಸಂ. ೨-೧೩-೬)

**ನಸ್ತ್ರೀಭಿರ್ಯೋ ವಿವಸ್ವತಃ ಶುಭ್ರೋ ನ ಮಾಮೃಜೇ ಯುವಾ । ಗಾಃ ಕೃಣ್ವಾನೋನ ನಿರ್ಣಿಜಂ॥**
(ಋ. ಸಂ. ೯-೧೪-೫)

ಇತ್ಯಾದಿ ಋಕ್ಕುಗಳಲ್ಲಿ ಯಜ್ಞಕರ್ತನಾದ ಮಾನವನೆಂದೂ ಅರ್ಥವಾಗುತ್ತದೆ.  ಮತ್ತು,

**ಯಮಸ್ಯ ಮಾತಾ ಪರ್ಯುಹ್ಯಮಾನಾ ಮಹೋ ಜಾಯಾ ವಿವಸ್ವತೋ ನನಾಶ ।**
**ಅಸಾಗೂಹನ್ನಮೃತಾಂ ಮರ್ತ್ಯೇಭ್ಯಃ ಕೃತ್ವೀ ಸವರ್ಣಾಮದದುರ್ವಿವಸ್ವತೇ ।**
(ಋ. ಸಂ. ೧೦-೧೭-೧, ೨)

ಎಂಬ ಋಕ್ಕುಗಳಲ್ಲಿ **ವಿವಸ್ವಾನ್** ಎಂಬುದು ಅಂಕಿತನಾಮವಾಗಿದೆ.  **ವಿವಸ್ವಂತ**ನ ಮತ್ತು **ಸರಣ್ಯು**ವಿನ ವಿವಾಹ ವಿಷಯವನ್ನೂ ಅವರ ಸಂತಾನದ ವಿಷಯವನ್ನೂ ಮುಂದೆ **ವಿವಸ್ವಂತ**ನ ವಿಚಾರವು ಬಂದಾಗ ಹೇಳಲಾಗುತ್ತೆ.  ಈ ನಾನಾರ್ಥಗಳಲ್ಲಿ ಪ್ರಕೃತವಾದ ಋಕ್ಕಿನಲ್ಲಿ **ವಿವಸ್ವತಿ** ಎಂದರೆ ಪ್ರಕಾಶಮಾನವಾದ ಎಂದರ್ಥ.

ವ್ಯಾಕರಣಪ್ರಕ್ರಿಯಾ

**ಅಸ್ತು**—ಅಸ ಭುವಿ ಧಾತು.  ಲೋಟ್ ಪ್ರಥಮಪುರುಷ ಏಕವಚನಾಂತರೂಪ.  ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ.  ಪ್ರತ್ಯಯವು ಪಿತ್ತಾದುದರಿಂದ ಧಾತುಸ್ವರ ಉಳಿಯುತ್ತದೆ

**ಧಿಯಾ**—ತೃತೀಯಾ ಏಕವಚನಾಂತರೂಪ.  **ಸಾವೇಕಾಚಸ್ತೃತೀಯಾದಿಃ** (ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರಬರುತ್ತದೆ.

**ದಧೇ**—ಡುಧಾಞ್ ಧಾರಣಪೋಷಣಯೋಃ ಧಾತು.  ಲಿಟ್ ಉತ್ತಮಪುರುಷ ಏಕವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ.

**ವೃಣೀಮಹೇ**—ವೃಞ್ ಸಂಭಕ್ತೌ ಧಾತು.  ಲಟ್ ಉತ್ತಮಪುರುಷ ಬಹುವಚನದಲ್ಲಿ ಮಹಿಙ್ ಪ್ರತ್ಯಯ.  ಟಿಗೆ ಏತ್ವ.  **ಕ್ರ್ಯಾದಿಭ್ಯಃಶ್ನಾ** (ಪಾ. ಸೂ. ೩-೧-೮೧) ಎಂಬುದರಿಂದ ಶ್ನಾವಿಕರಣ.  **ಈ ಹಲ್ಯಘೋಃ** (ಪಾ. ಸೂ. ೬-೪-೧೧೩) ಎಂಬುದರಿಂದ ವಿಕರಣಕ್ಕೆ ಈತ್ವ.  ಋವರ್ಣದ ಪರದಲ್ಲಿರುವುದರಿಂದ ಣತ್ವ.  ತಿಙಂತ ನಿಘಾತಸ್ವರ ಬರುತ್ತದೆ

ಇಂದ್ರವಾಯೂ— ಇಂದ್ರಶ್ಚ ವಾಯುಶ್ಚ ಇಂದ್ರವಾಯೂ. ಇಲ್ಲಿ **ದೇವತಾದ್ವಂದ್ವೇ ಚ** (ಪಾ. ಸೂ. ೬-೩-೨೬) ಎಂಬುದರಿಂದ ಪ್ರಾಪ್ತವಾದ ಆನಙಿಗೆ **ಉಭಯತ್ರ ವಾಯೋಃ ಪ್ರತಿಷೇಧೋ ವಕ್ತವ್ಯಃ** (ಪಾ. ಸೂ. ೬-೩-೨೬-೧) ಎಂಬುದರಿಂದ ಪ್ರತಿಷೇಧಬರುತ್ತದೆ. **ದೇವತಾದ್ವಂದ್ವೇ ಚ** (ಪಾ. ಸೂ. ೬-೨-೧೪೧) ಎಂಬುದರಿಂದ ಉಭಯಪದಪ್ರಕೃತಿಸ್ವರವು ಪ್ರಾಪ್ತವಾದರೆ **ನೋತ್ತರಪದೇಽನುದಾತ್ತಾದೌ**—(ಪಾ. ಸೂ. ೬-೨-೧೪೨) ಎಂಬುದರಿಂದ ನಿಷೇಧಬರುತ್ತದೆ. ಆಗ **ಸಮಾಸಸ್ಯ** (ಪಾ. ಸೂ. ೬-೧-೨೨೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಕ್ರಾಣಾ**—ಡುಕೃಞ್ ಕರಣೇ. ಧಾತು. ಲಟರ್ಥದಲ್ಲಿ ಶಾನಚ್ ಪ್ರತ್ಯಯ. **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ (ಉ) ಲುಕ್. **ಸಾರ್ವಧಾತುಕಮಪಿತ್** ಎಂಬುದರಿಂದ ಪ್ರತ್ಯಯಕ್ಕೆ ಙಿತ್ವಾತಿದೇಶವಿರುವುದರಿಂದ ಗುಣ ಬರುವುದಿಲ್ಲ. ಯಣಾದೇಶ. **ಚಿತಃ** (ಪಾ. ಸೂ. ೬-೧-೧೬೩) ಅಂತೋದಾತ್ತಸ್ವರ ಬರುತ್ತದೆ. ಸ್ತ್ರೀತ್ವದಲ್ಲಿ ಟಾಪ್. ಪ್ರಥಮಾ ಏಕವಚನಾಂತರೂಪ.

**ನಾಭಾ—ಸುಪಾಂ ಸುಲುಕ್**—(ಪಾ.ಸೂ. ೭-೧-೩೯) ಎಂಬುದರಿಂದ ಸಪ್ತಮೀ ವಿಭಕ್ತಿಗೆ ಆಕಾರಾದೇಶ.

**ಸಂದಾಯಿ**—ಸಮ್ ಉಪಸರ್ಗ. ಡುದಾಞ್ ದಾನೇ. ಧಾತು. **ಛಂದಸಿ ಲುಙ್ಲಙ್ಲಿಟಃ** (ಪಾ. ಸೂ. ೩-೪-೬) ಎಂಬುದರಿಂದ ವರ್ತಮಾನಾರ್ಥದಲ್ಲಿ ಕರ್ಮಣಿ ಲುಙ್. ಪ್ರಥಮಪುರುಷ ಏಕವಚನದಲ್ಲಿ ತಪ್ರತ್ಯಯ. **ಚಿಣ್ಭಾವಕರ್ಮಣೋಃ** (ಪಾ. ಸೂ. ೩-೧-೬೬) ಎಂಬುದರಿಂದ ಚ್ಲಿಗೆ ಚಿಣಾದೇಶ. **ಆತೋ ಯುಕ್ ಚಿಣ್ಕೃತೋಃ** (ಪಾ. ಸೂ. ೭-೩-೩೩) ಎಂಬುದರಿಂದ ಧಾತುವಿಗೆ ಯುಕಾಗಮ. **ಚಿಣೋ ಲುಕ್** (ಪಾ. ಸೂ. ೬-೪-೧೦೪) ಎಂಬುದರಿಂದ ಪರದ ತ ಶಬ್ದಕ್ಕೆ ಲುಕ್. **ಬಹುಲಂ ಛಂದಸ್ಯ**—(ಪಾ. ಸೂ. ೬-೪-೭೫) ಎಂಬುದರಿಂದ ಅಡಾಗಮ ಬರುವುದಿಲ್ಲ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ.

**ನವ್ಯಸೀ**—ಅತಿಶಯಾರ್ಥದಲ್ಲಿ ಈಯಸುನ್ ಪ್ರತ್ಯಯ. ಛಾಂದಸವಾಗಿ ಅದರ ಈಕಾರಕ್ಕೆ ಲೋಪ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಉಗಿತ್ತಾದುದರಿಂದ ಸ್ತ್ರೀತ್ವದಲ್ಲಿ ಙೀಪ್.

**ಅಧ**—ಅಥ ಎಂದಿರುವಾಗ ಛಾಂದಸವಾಗಿ ವರ್ಣವಿಕಾರ ಬಂದಿದೆ.

**ಯಂತು**—ಇಣ್ ಗತೌ ಧಾತು. ಲೋಟ್ ಪ್ರಥಮಪುರುಷ ಬಹುವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ದೇವಾನ್+ಅಚ್ಛಾ—ದೀರ್ಘಾದಟಿ ಸಮಾನಪಾದೇ** (ಪಾ. ಸೂ. ೮-೩-೯) ಎಂಬುದರಿಂದ ನಕಾರಕ್ಕೆ ರುತ್ವ. **ಆತೋಽಟಿ ನಿತ್ಯಮ್** (ಪಾ. ಸೂ. ೮-೩-೩) ಎಂಬುದರಿಂದ ಪೂರ್ವಕ್ಕೆ ಅನುನಾಸಿಕತ್ವ. ಅಚ್ಛ ಎಂಬಲ್ಲಿ **ನಿಪಾತಸ್ಯ ಚ** (ಪಾ. ಸೂ. ೬-೩-೧೩) ಎಂಬುದರಿಂದ ದೀರ್ಘ. ॥ ೧ ॥



ಸಂಹಿತಾಪಾಠಃ

ಯದ್ಧ ತ್ಯನ್ಮಿತ್ರಾವರುಣಾವೃತಾದಧ್ಯಾದದಾಥೇ ಅನೃತಂ ಸ್ವೇನ ಮನ್ಯುನಾ
ದಕ್ಷಸ್ಯ ಸ್ವೇನ ಮನ್ಯುನಾ ।
ಯುವೋರಿತ್ಥಾಧಿ ಸದ್ಮಸ್ವಪಶ್ಯಾಮ ಹಿರಣ್ಯಯಂ ।
ಧೀಭಿಶ್ಚನ ಮನಸಾ ಸ್ವೇಭಿರಕ್ಷಭಿಃ ಸೋಮಸ್ಯ ಸ್ವೇಭಿರಕ್ಷಭಿಃ ॥ ೨ ॥

। ಪದಪಾಠಃ ।

ಯತ್ । ಹ । ತ್ಯತ್ । ಮಿತ್ರಾವರುಣಾ । ಋತಾತ್ । ಅಧಿ । ಆದದಾಥೇ ಇತ್ಯಾಽದದಾಥೇ । ಅನೃತಂ ।
ಸ್ವೇನ । ಮನ್ಯುನಾ । ದಕ್ಷಸ್ಯ । ಸ್ವೇನ । ಮನ್ಯುನಾ ।
ಯುವೋಃ । ಇತ್ಥಾ । ಅಧಿ । ಸದ್ಮಽಸು । ಅಪಶ್ಯಾಮ । ಹಿರಣ್ಯಯಂ ।
ಧೀಭಿಃ । ಚನ । ಮನಸಾ । ಸ್ವೇಭಿಃ । ಅಕ್ಷಽಭಿಃ । ಸೋಮಸ್ಯ । ಸ್ವೇಭಿಃ । ಅಕ್ಷಽಭಿಃ ॥ ೨ ॥

। ಸಾಯಣಭಾಷ್ಯಂ ।

ಹೇ ಮಿತ್ರಾವರುಣೌ ಋತಾದಾದಿತ್ಯಾತ್ ತ್ಯತ್ ತದುದಕಂ ಯದ್ಯಸ್ಮಾತ್ಕಾರಣಾದಧ್ಯಧಿಕಮಾದದಾಥೇ ಸರ್ವತೋ ದದಥಃ । ಕೀದೃಶಮುದಕಂ । ಅನೃತಂ ನಶ್ವರಂ ಶೋಷಣಸ್ವಭಾವಂ । ಕೇನ ಸಾಧನೇನ । ಸ್ವೇನ ಮನ್ಯುನಾ ಸ್ವಕೀಯೇನ ತೇಜಸಾ । ಅಹೋರಾತ್ರಾಭಿಮಾನಿದೇವೌ ಮಿತ್ರಾವರುಣೌ ಖಲು ವೃಷ್ಟಿಂ ಮೋಚಯತಃ । ಅಹೋರಾತ್ರೇ ವೈ ಇತ್ಯಾದಿಶ್ರುತಿಃ ಪೂರ್ವಮೇವೋದಾಹೃತಾ । ಮನ್ಯುರ್ವಿಶೇಷ್ಯತೇ । ದಕ್ಷಸ್ಯ ಸಮರ್ಥಸ್ಯ ಸ್ವೇನ ಮನ್ಯುನಾತ್ಮಭೂತೇನ ಮನನೀಯೇನ ಸಾಮರ್ಥ್ಯೇನ । ಕಿಂಚ ಹೇ ಮಿತ್ರಾವರುಣೌ ಯುವೋಃ ॥ ಅಂತ್ಯಲೋಪಶ್ಛಾಂದಸಃ ॥ ಯುವಯೋಃ ಸಂಬಂಧಿ ಹಿರಣ್ಯಯಂ ಹಿರಣ್ಮಯಂ ರೂಪಂ ॥ ಋತ್ವ್ಯವಾಸ್ತ್ವ್ಯವಾಸ್ತ್ವೇತ್ಯಾದೌ ಮಯಟೋ ಮಶಬ್ದಲೋಪೋ ನಿಪಾತ್ಯತೇ ॥ ಇತ್ಥೇತ್ಥಂ ವಕ್ಷ್ಯಮಾಣಪ್ರಕಾರೇಣ ಸದ್ಮಸು ಯಜ್ಞಸದನೇಷ್ವಧ್ಯಪಶ್ಯಾಮ । ಪಶ್ಯೇಮ । ಕೇನ ಸಾಧನೇನೇತಿ ತದುಚ್ಯತೇ । ಧೀಭಿಸ್ತ್ವದುದ್ದೇಶ್ಯೈಃ ಕರ್ಮಭಿರ್ಯಜ್ಞಾದಿರೂಪೈಃ ಮನಸಾ ಚನ ತ್ವದಾಸಕ್ತೇನ ಚೇತಸಾ ಚ ಸ್ವೇಭಿರಕ್ಷಭಿರಾತ್ಮೀಯೈರನನ್ಯೈಶ್ಚಕ್ಷುರಾದೀಂದ್ರಿಯೈಃ । ಕಿಂಚ ಸೋಮಸ್ಯ ಸೋಮಂ ಸ್ವೇಭಿರಕ್ಷಭಿರಸ್ಮದೀಯೈರಿಂದ್ರಿಯೈಃ ॥ ನಾಸಾದ್ಯಪೇಕ್ಷಯಾ ಬಹುವಚನಂ ॥

ಪ್ರತಿಪದಾರ್ಥ

**ಮಿತ್ರಾವರುಣೌ**—ಎಲೈ ಮಿತ್ರಾವರುಣರೇ, । **ಸ್ವೇನ ಮನ್ಯುನಾ**—ನಿಮ್ಮ ಆತ್ಮೀಯವಾದ ಪ್ರಭಾವದಿಂದ । (ಎಂದರೆ) । **ದಕ್ಷಸ್ಯ**—ಸಮರ್ಥವಾದ । **ಸ್ವೇನ**—ನಿಮ್ಮ ಆತ್ಮೀಯವಾದ । **ಮನ್ಯುನಾ**—ಮನಸ್ಸೀಯವಾದ ಮಹಿಮೆಯಿಂದ । **ಋತಾತ್**—ಆದಿತ್ಯನಿಂದ । **ಅನೃತಂ**—ಶೋಷಿಸಿಹೋಗುವುದರಿಂದ ನಶ್ವರವಾದುದೂ । **ತ್ಯತ್**—ಪ್ರಸಿದ್ಧವಾದುದೂ ಆದ ಉದಕವನ್ನು । **ಯತ್ ಹ**—ಯಾವ ಕಾರಣದಿಂದ । **ಅಧಿ**—ಅಧಿಕವಾಗಿ । **ಆದದಾಥೇ**—ತಂದುಕೊಡುತ್ತೀರೋ (ಆದ್ದರಿಂದ) । **ಯುವೋಃ**—ನಿಮ್ಮಿಬ್ಬರ । **ಹಿರಣ್ಯಯಂ**—ಸುವರ್ಣಮಯವಾದ ರೂಪವನ್ನು । **ಇತ್ಥಾ**—ಈ ರೀತಿಯಾಗಿ । **ಸದ್ಮಸು**—ಯಜ್ಞಶಾಲೆಗಳಲ್ಲಿ । **ಧೀಭಿಃ**—ನಿಮ್ಮನ್ನು ಪ್ರೀತಿಸಿದ ಕರ್ಮಗಳಿಂದಲೂ, । **ಮನಸಾ ಚನ**—(ನಿಮ್ಮಲ್ಲೇ) ಆಸಕ್ತವಾದ ಮನಸ್ಸಿನಿಂದಲೂ, । **ಸ್ವೇಭಿರಕ್ಷಭಿಃ**—(ಇತರ ಕಡೆಗಳಲ್ಲಿ ಗಮನವಿಲ್ಲದ) ನಮ್ಮ ಚಕ್ಷುರಾದೀಂದ್ರಿಯಗಳಿಂದಲೂ ಸಹ । **ಅಧ್ಯಪಶ್ಯಾಮ**—ನೆಟ್ಟದೃಷ್ಟಿಯಿಂದ ನೋಡುತ್ತೇವೆ । **ಸ್ವೇಭಿಃ ಅಕ್ಷಭಿಃ**—ನಮ್ಮ ಚಕ್ಷುರಾದೀಂದ್ರಿಯಗಳಿಂದ । **ಸೋಮಸ್ಯ**—(ನಿಮಗೆ ಅರ್ಪಿತವಾಗಬೇಕಾದ) ಸೋಮವನ್ನೂ (ನೋಡುತ್ತೇವೆ.)

ಭಾವಾರ್ಥ

ಎಲೈ ಮಿತ್ರಾವರುಣರೇ, ನೀವು ನಿಮ್ಮ ಆತ್ಮೀಯವಾದುದೂ, ಸಮರ್ಥವಾದುದೂ ಆದ ಪ್ರಭಾವದಿಂದ ಆದಿತ್ಯಲೋಕದಲ್ಲಿರುವುದೂ ಪೃಥ್ವಿಯಮೇಲೆ ಸುರಿದಾಗ ಶೋಷಿಸಿಹೋಗಿ ನಶ್ವರವಾದುದೂ ಆದ ಉದಕವನ್ನು ಪ್ರಭೂತವಾಗಿ ನಮಗೆ ತಂದುಕೊಡುವ ಕಾರಣದಿಂದ ನಿಮ್ಮನ್ನು ನಮ್ಮ ಯಾಗಾದಿಕರ್ಮಗಳ ಮೂಲಕವೂ, ಅನನ್ಯಾಸಕ್ತವಾದ ಮನಸ್ಸಿನಿಂದಲೂ, ಬೇರೆ ಗಮನವಿಲ್ಲದ ಚಕ್ಷುರಾದೀಂದ್ರಿಯಗಳಿಂದಲೂ ವೀಕ್ಷಿಸುತ್ತೇವೆ. ಮತ್ತು ನಿಮಗೆ ಅರ್ಪಿತವಾಗಬೇಕಾದ ಸೋಮವನ್ನೂ ಗಮನಿಸುತ್ತೇವೆ.

English Translation

Mitra and Varuna, bestow (upon us) abundantly that unenduring water which you obtain from the sun, through your own energy; through the inherent energy of the vigorous: may we thus behold your golden (forms) in our halls of sacrifice, ( brought thither ) by our sacred rites, and by our thoughts and senses (intent upon you) ; by our senses (intent upon offering) the Soma libation.

ವಿಶೇಷವಿಷಯಗಳು

**ಋತಾದನೃತಮಾದದಾಥೇ—ಋತಾತ್-ಆದಿತ್ಯಾತ್ ; ಅನೃತಂ-ಶೋಷಣಸ್ವಭಾವಂ** (ಉದಕಂ) ಎಂದು **ಋತ** ಶಬ್ದಕ್ಕೆ ಆದಿತ್ಯನೆಂದೂ, **ಅನೃತ** ಶಬ್ದಕ್ಕೆ ಉದಕನೆಂದೂ ಸಾಯಣರು ಅರ್ಥಮಾಡಿದ್ದಾರೆ. **ಅನೃತ**ವೆಂಬ ವಿಶೇಷಣವು ನೀರಿನ ಅಶಾಶ್ವತವಾದ ಸ್ಥಿತಿಯನ್ನು ತೋರಿಸುತ್ತದೆಯೆಂದು ವಿವರಿಸಿದ್ದಾರೆ. **ಋತ**ಶಬ್ದವು ವಿಶ್ವದ ಭೌತಿಕ ಮತ್ತು ನೈತಿಕನಿಯಮವನ್ನು ಸೂಚಿಸತಕ್ಕ ಒಂದು ತತ್ವವನ್ನು ಪ್ರತಿಬಿಂಬಿಸುವುದೆಂದು ಹಿಂದೆ (೧ನೇ ಭಾಗದ ಪೀಠಿಕೆಯಲ್ಲಿ) ಸೂಕ್ಷ್ಮವಾಗಿ ತಿಳಿಸಿದೆ. ಈ ಎರಡು ನಿಯಮಗಳೂ **ಮಿತ್ರಾವರುಣರ** ಅಧ್ಯಕ್ಷತೆ

ಯಲ್ಲಿಯೇ ನಡೆಯುವುವು ಎಂಬುದನ್ನು ಮುಂದೆ **ಮಿತ್ರಾವರುಣರನ್ನೇ** ಉದ್ದೇಶಿಸಿರುವ ಸೂಕ್ತದಲ್ಲಿ ವಿವರಿಸಲಾಗುತ್ತವೆ ಪ್ರಕೃತದಲ್ಲಿ ಮಿತ್ರಾವರುಣರು **ಋತದಿಂದ ಅನೃತವನ್ನು** ಹೇಗೆ ಹೊಂದಿದರು, ಲೋಕಕ್ಕೆ ಹೇಗೆ ಒದಗಿಸಿದರು ಎಂಬುದನ್ನು ತಿಳಿಯಬೇಕು.

ಇಲ್ಲಿ **ಋತ**ಶಬ್ದಕ್ಕೆ ಶಾಶ್ವತವಾದ ಸ್ಥಿತಿಯುಳ್ಳದ್ದೆಂದೂ, **ಅನೃತ**ಶಬ್ದಕ್ಕೆ ಉದಕವು ಶೋಷಿಸಿಹೋಗುವುದರಿಂದ ಅಶಾಶ್ವತವಾದ ಸ್ಥಿತಿಯುಳ್ಳದ್ದೆಂದೂ ಹೇಳಬಹುದು. ಉಪನಿಷದಾದಿಗಳಲ್ಲಿ ಹೇಳುವಂತೆ ಶಾಶ್ವತವಾದುದೇ ಸತ್ಯವೆಂದೂ ಅಶಾಶ್ವತವಾದುದೇ ಅಸತ್ಯವೆಂದೂ ಸಹ ಅರ್ಥವಾಗಬಹುದು. **ಋತ**ಶಬ್ದಕ್ಕೆ ಈ ಋಕ್ಕಿನಲ್ಲಿ ಶಾಶ್ವತವಾದ ಸ್ಥಿತಿಯುಳ್ಳ ಆದಿತ್ಯಮಂಡಲವೆಂದರ್ಥವಾಗುತ್ತದೆ. **ಸೂರ್ಯಾದಿಗ್ರಹ**ಗಳೆಲ್ಲವೂ ನಿಯತವಾಗಿ ಸಂಚರಿಸತಕ್ಕ ತೇಜೋಮಂಡಲವನ್ನು **ಋತ**ವೆಂದು ಕರೆಯುವುದು ಋಕ್ಸಂಹಿತೆಯಲ್ಲಿ ವಾಡಿಕೆಯಾಗಿದೆ.

**ದ್ವಾದಶಾರಂ ನಹಿ ತಜ್ಜರಾಯ ವರ್ವರ್ತಿ ಚಕ್ರಂ ಪರಿ ದ್ಯಾಮೃತಸ್ಯ ।**
**ಆ ಪುತ್ರಾ ಅಗ್ನೇ ಮಿಥುನಾಸೋ ಅತ್ರ ಸಪ್ತ ಶತಾನಿ ವಿಂಶತಿಶ್ಚ ತಸ್ಥುಃ ।**
(ಋ. ಸಂ. ೧-೧೬೪-೧೧)

ಹನ್ನೆರಡು ಅರಗಳುಳ್ಳ **ಋತದ ಚಕ್ರವು** ಅಂತರಿಕ್ಷದ ಸುತ್ತಲೂ ಪರಿಭ್ರಮಿಸುತ್ತದೆ. **ಈ ಚಕ್ರದ** ಏಳನೂರ ಇಪ್ಪತ್ತು **ಪುತ್ರರೂ** ದ್ವಂದ್ವವಾಗಿ ತಮ್ಮ ಸ್ಥಾನವನ್ನು ಆಕ್ರಮಿಸುತ್ತಾರೆ ಎಂಬ ವರ್ಣನೆಯಿಂದ ಹನ್ನೆರಡು ತಿಂಗಳೂ ೩೬೦ ಅಹೋರಾತ್ರಗಳೂ ಸೂಚಿತವಾಗಿವೆ. ಈ ಋತದ ಪಥವನ್ನೇ ಉಷಸ್ಸೂ ಸಹ ನಿಯಮದಿಂದ ಹೇಗೆ ಎಡಬಿಡದೇ ಅನುಸರಿಸುತ್ತಾಳೆ ಎಂಬ ವರ್ಣನೆಯನ್ನು ಹಿಂದೆ ಉದಾಹರಣೆಗಳೊಡನೆ ತಿಳಿಸಿದೆ. ಪ್ರಕೃತದಲ್ಲಿ **ಆದಿತ್ಯನಿಗೂ** ಈ **ಋತದ** ಚಕ್ರಕ್ಕೂ ಇರುವ ಸಂಬಂಧವನ್ನು ತಿಳಿದರೆ ಈ ಋಕ್ಕಿನಲ್ಲಿ **ಋತಕ್ಕೆ** ಆದಿತ್ಯನೆಂದು ಅರ್ಥಮಾಡುವುದರ ಔಚಿತ್ಯವು ಗೊತ್ತಾಗುತ್ತದೆ.

**ಅದರ್ಶಿ ಗಾತುರುರವೇ ವರೀಯಸೀ ಪಂಥಾ ಋತಸ್ಯ ಸಮಯಂಸ್ತ ರಶ್ಮಿಭಿಶ್ಚಕ್ಷುರ್ಭಗಸ್ಯ ರಶ್ಮಿಭಿಃ ।** (ಋ ಸಂ. ೧-೧೩೬-೨)

ವಿಸ್ತೃತವಾದ ಸ್ವರೂಪವುಳ್ಳ ಸೂರ್ಯನಿಗೆ ಇನ್ನೂ ಅಧಿಕವಾಗಿ ವಿಸ್ತೃತವಾಗಿರುವ **ಋತದ** ಮಾರ್ಗವು ಅವನ ಕಿರಣಗಳ ಸಹಾಯದಿಂದ ನಿರ್ದಿಷ್ಟವಾಯಿತು ಎಂಬ ವರ್ಣನೆಯಲ್ಲಿ ಅಂತರಿಕ್ಷದಲ್ಲಿ ವಿಶಾಲವಾದ ಋತದ ಮಾರ್ಗವು ಸೂಚಿತವಾಗಿದೆ. ಇದೇ **ಋತದ** ಪಥವನ್ನು;

**ಅಗ್ನಿರ್ಗಾಂಧರ್ವೀಂ ಪಥ್ಯಾಮೃತಸ್ಯಾಗ್ನೇರ್ಗವ್ಯೂತಿರ್ಘೃತ ಆ ನಿಷತ್ತಾ ।**
(ಋ. ಸಂ. ೧೦-೮೦-೬)

ಎಂಬ ಋಕ್ಕಿನಲ್ಲಿ ಅತ್ಯುನ್ನತವಾದುದೂ ವಿಸ್ತೃತವಾದುದೂ ಆದ **ಗಂಧರ್ವ**ಮಾರ್ಗವೆಂದೂ ವರ್ಣಿಸಿದೆ. ಮತ್ತು

**ಉದು ತ್ಯಚ್ಚಕ್ಷುರ್ಮಹಿ ಮಿತ್ರಯೋರಾ ಏತಿ ಪ್ರಿಯಂ ವರುಣಯೋರದಬ್ಧಂ ।**
**ಋತಸ್ಯ ಶುಚಿ ದರ್ಶತಮನೀಕಂ ರುಕ್ಮೋ ನ ದಿವ ಉದಿತಾ ವ್ಯದ್ಯೌತ್ ।**
(ಋ. ಸಂ. ೬-೫೧-೧)

**ಋತಸ್ಯ ಪದೇ ಅಧಿ ದೀದ್ಯಾನಂ ಗುಹಾ ರಘುಷ್ಯದ್ರಘುಯದ್ವಿವೇದ ।**
(ಋ. ಸಂ. ೪-೫-೯)

ಎಂಬ ಋಕ್ಕುಗಳಲ್ಲಿ ಸೂರ್ಯನು ಋತದ ಮುಖಭಾಗದಲ್ಲಿ (ಆಕಾಶದಲ್ಲಿ) ಮೇಲಕ್ಕೆ ಉದಯಿಸುತ್ತಾ ಅತ್ಯಂತ ರಮಣೀಯನಾಗಿ ಪ್ರಕಾಶಿಸುತ್ತಾನೆ ಎಂಬುದಾಗಿಯೂ,

ಪರಿಕ್ಷಿತಾ ಪಿತರಾ ಪೂರ್ವಜಾವರೀ ಋತಸ್ಯ ಯೋನಾ ಕ್ಷಯತಃ ಸಮೋಕಸಾ ।
ದ್ಯಾವಾಪೃಥಿವೀ ವರುಣಾಯ ಸವ್ರತೇ ಘೃತವತ್ ಪಯೋ ಮಹಿಷಾಯ ಪಿನ್ವತಃ ।
(ಋ. ಸಂ. ೧೦-೬೫-೮)

ಎಂಬ ಋಕ್ಕಿನಲ್ಲಿ **ಸೂರ್ಯನು ಋತದ** ಗರ್ಭರೂಪವಾದ ಮಧ್ಯಭಾಗದಲ್ಲಿ ದ್ಯಾವಾಪೃಥಿವಿಗಳನ್ನು ವೀಕ್ಷಿಸುತ್ತಾ ಚಲಿಸುತ್ತಿರುವನೆಂದೂ ವರ್ಣಿತವಾಗಿದೆ. ಹೀಗೆಯೇ, ೧-೧೬೪-೪೭, ೧೦-೧೨೩-೨ ಇತ್ಯಾದಿ ಋಕ್ಕುಗಳಲ್ಲಿಯೂ ಸೂರ್ಯನು **ಋತದ** ಉನ್ನತವಾದ ಪ್ರದೇಶದಲ್ಲಿ ಪ್ರಕಾಶಿಸುತ್ತಿರುವುದರ ವರ್ಣನೆಯಿದೆ. ಆದುದರಿಂದ ಈ ಋಕ್ಕಿನಲ್ಲಿ **ಋತಾತ್** ಎಂದರೆ **ಋತದ** ಮಂಡಲದಲ್ಲಿರುವ ಆದಿತ್ಯನಿಂದ ಎಂದರ್ಥವಾಗುತ್ತದೆ.

ಆದರೆ, **ಅನೃತ**ವೆಂಬ ಪದವು ಉದಕಕ್ಕೆ ವಿಶೇಷಣವಾಗಿರುವುದು ಕೊಂಚ ವಿಚಾರಾರ್ಹವಾದ ವಿಷಯ. **ಋತ** ಶಬ್ದವು ನಿರುಕ್ತದಲ್ಲಿ **ಉದಕ** ನಾಮಗಳಲ್ಲಿ ಪಠಿತವಾಗಿದೆ. (ನಿ. ೨-೨೪) ಋಕ್ಸಂಹಿತೆಯಲ್ಲಿಯೂ ಸುಮಾರು ೭೦ **ಋಕ್ಕುಗಳಲ್ಲಿ ಋತ** ಶಬ್ದಕ್ಕೆ ಉದಕವೆಂದೇ ಅರ್ಥವಾಗುತ್ತದೆ. ಆದುದರಿಂದ ಇಲ್ಲಿ **ಅನೃತ** ಶಬ್ದಕ್ಕೆ ಉದಕವೆಂಬ ಅರ್ಥವು ಹೇಗೆ ಎಂದರೆ, **ಋತ** ಶಬ್ದಕ್ಕೆ ಸತ್ಯವೆಂಬ ಅರ್ಥವನ್ನು ಮಾಡಿದರೆ ಆಗ **ಉದಕವೇ** ವಿಶ್ವದ ಮೂಲತತ್ತ್ವ ಎಂಬ ಕೆಲವು ತಾತ್ತ್ವಿಕರ ಮತದಂತೆ ಸತ್ಯಾತ್ಮಕವಾಗಿರುವ ಉದಕವೆಂದು ಅರ್ಥವಾಗುತ್ತದೆ. ನಿರುಕ್ತದಲ್ಲಿಯೂ **ಋತಂ । ಯೋನಿಃ । ಋತಸ್ಯ ಯೋನಿಃ । ಸತ್ಯಂ । ನೀರಂ ।** ಎಂಬ ಪದಗಳನ್ನು ಉದಕ ನಾಮಗಳಲ್ಲಿ ಒಟ್ಟಿಗೆ ಸೇರಿಸಿದೆ. ಆದರೆ ಅದೇ ಉದಕವು ಪ್ರವಾಹಾದಿರೂಪಗಳಲ್ಲಿರುವಾಗ ಇಂಗಿಹೋಗುವ ಸ್ವಭಾವವುಳ್ಳವಾದುದರಿಂದ ಅಶಾಶ್ವತವಾಗಿ ಅದರಿಂದಲೇ ಕ್ಷಣಿಕವಾದ ಸತ್ಯಸ್ವರೂಪವುಳ್ಳವಾಗಿವೆ. ಆದುದರಿಂದ ಸಾಯಣರು **ಅನೃತಂ ನಶ್ವರಂ ಶೋಷಣಸ್ವಭಾವಂ** ಎಂದು ವಿವರಿಸಿದ್ದಾರೆ. ಮಿತ್ರಾವರುಣರು **ಋತರೂಪ**ನಾದ ಆದಿತ್ಯನಿಂದ **ಅನೃತರೂಪ**ವಾದ ಉದಕವನ್ನು ಹೊಂದಿ ಲೋಕಕ್ಕೆ ಸುರಿಸಿದರು ಎಂದರ್ಥ.

**ಮನ್ಯುನಾ—ಮನ್ಯುಶಬ್ದವು** ಋಕ್ಸಂಹಿತೆಯಲ್ಲಿ ಎರಡು ಮೂರು ಅರ್ಥಗಳಲ್ಲಿ ಉಪಯೋಗಿಸಲ್ಪಟ್ಟಿದೆ. ನಿರುಕ್ತದಲ್ಲಿ **ಮನ್ಯುರ್ಮನ್ಯತೇರ್ದೀಪ್ತಿಕರ್ಮಣಃ ಕ್ರೋಧಕರ್ಮಣೋ ವಧಕರ್ಮಣೋ ವಾ** (ನಿ. ೧೦-೩೦) ಎಂದು **ಮನ್ಯು** ಶಬ್ದದ ನಿರ್ವಚನವಿದೆ. ಪ್ರಕಾಶಿಸು, ಅಥವಾ ಕೋಪಗೊಳ್ಳು ಎಂಬರ್ಥವನ್ನು ಕೊಡುವ **ಮನ್** ಧಾತುವಿನಿಂದ ನಿಷ್ಪನ್ನವಾಗಿದೆಯೆಂದರ್ಥ. ಇಲ್ಲಿ **ಸ್ವೇನ ಮನ್ಯುನಾ** ಎನ್ನುವುದಕ್ಕೆ ತಮ್ಮ ಪ್ರಕಾಶದಿಂದ ತಮ್ಮ ಆತ್ಮ ಪ್ರಭಾವದಿಂದ ಎಂದರ್ಥವಾಗುತ್ತದೆ.

ವರ್ಧಯತಮೋಷಧೀಃ ಪಿನ್ವತಂ ಗಾ ಅವ ವೃಷ್ಟಿಂ ಸೃಜತಂ ಜೀರದಾನೂ ।
(ಋ. ಸಂ. ೫-೬೨-೩)

ಚಿತ್ರೇಭಿರಭ್ರೈರುಪ ತಿಷ್ಠಥೋ ರವಂ ದ್ಯಾಂ ವರ್ಷಯಥೋ ಅಸುರಸ್ಯ ಮಾಯಯಾ ।
(ಋ. ಸಂ. ೫-೬೩-೩)

ಇತ್ಯಾದಿ ಋಕ್ಕುಗಳಲ್ಲಿ ವರ್ಣಿಸಿರುವಂತೆ **ಮಿತ್ರಾವರುಣರು** ಅಂತರಿಕ್ಷದಿಂದ ಉದಕವನ್ನು ಸುರಿಸಿದರು ; ವೃಷ್ಟಿವರ್ಷಣವು ಅವರ ಪ್ರಭಾವದಿಂದಲೇ ಸಾಧ್ಯ ಎಂಬುದನ್ನು ಹೇಳಿದೆ.

**ದಕ್ಷಸ್ಯ—ಸಮರ್ಥಸ್ಯ** । ಶಕ್ತನಾದ ತನ್ನ ಪ್ರಭಾವದಿಂದ ಎಂದರ್ಥ. **ದಕ್ಷ**ಶಬ್ದವು ಬಲನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩-೯) ಈ ರೀತಿ ಅರ್ಥವನ್ನು ಹೇಳಿದೆ. ಅಥವಾ,

ದಕ್ಷಸ್ಯ ವಾದಿತೇಃ ಜನ್ಮನಿ ವ್ರತೇ ರಾಜಾನಾ ಮಿತ್ರಾವರುಣಾ ವಿವಾಸಸಿ ।
(ಋ. ಸಂ. ೧೦-೬೪-೫)

ಎಂಬ ಋಕ್ಕಿನಲ್ಲಿ ಹೇಳಿರುವಂತೆ **ದಕ್ಷನ** ಪ್ರಭಾವವು **ಮಿತ್ರಾವರುಣ**ರಲ್ಲಿಯೂ ಇರುವುದು ನ್ಯಾಯವಾಗಿರುವುದರಿಂದ **ದಕ್ಷಸಂಬಂಧವಾದ** ಮನ್ಯುವಿನಿಂದ ಎಂದು ಬೇಕಾದರೂ ಅರ್ಥಮಾಡಬಹುದು.

**ಹಿರಣ್ಯಯಂ**—ಹಿರಣ್ಯರೂಪ ಎಂದರೆ ಹೊಂಬಣ್ಣದರೂಪವುಳ್ಳವರೆಂದರ್ಥ.

॥ ವ್ಯಾಕರಣಪ್ರಕ್ರಿಯಾ ॥

**ಆದದಾಥೇ**—ಡುದಾಞ್ ದಾನೇ. ಧಾತು. ಲಿಟ್ ಮಧ್ಯಮಪುರುಷದ್ವಿವಚನದಲ್ಲಿ ಆಥಾಮ್ ಪ್ರತ್ಯಯ ಟಿಗೆ ಏತ್ವ. ಲಿಣ್ಣಿಮಿತ್ತವಾಗಿ ಧಾತುವಿಗೆ ದ್ವಿತ್ವ. ಯತ್ ಎಂದು ಹಿಂದೆ ಸಂಬಂಧವಿರುವುದರಿಂದ **ನಿಪಾತೈರ್ಯದ್ಯದಿ**—(ಪಾ. ಸೂ. ೮-೧-೩೦) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುವುದರಿಂದ ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

**ಇತ್ಥಾ**—ಪ್ರಕಾರಾರ್ಥತೋರುವಾಗ **ಇದಮಸ್ಥಮುಃ** (ಪಾ. ಸೂ. ೫-೩-೨೪) ಎಂಬುದರಿಂದ ಥಮು ಪ್ರತ್ಯಯ. ವ್ಯತ್ಯಯದಿಂದ **ಸುಪಾಂ ಸುಲುಕ್**-(ಪಾ. ಸೂ. ೭-೧-೩೯) ಎಂಬುದರಿಂದ ವಿಭಕ್ತಿಗೆ ಡಾದೇಶ. ಡಿತ್ತಾದುದರಿಂದ ಟಿಲೋಪ. **ಅನುದಾತ್ತಸ್ಯ ಚ ಯತ್ರೋದಾತ್ತಲೋಪಃ** ( ಪಾ. ಸೂ. ೬-೧-೧೬೧ ) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಸದ್ಮಸು**—ಷದ್ಲೃ ವಿಶರಣಗತ್ಯವಸಾದನೇಷು ಧಾತು **ಅನ್ಯೇಭ್ಯೋಽಪಿ ದೃಶ್ಯತೇ** (ಪಾ. ಸೂ. ೩-೨-೭೫) ಎಂಬುದರಿಂದ ಮನಿನ್ ಪ್ರತ್ಯಯ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಅಪಶ್ಯಾಮ**—ದೃಶಿರ್ ಪ್ರೇಕ್ಷಣೇ. ಧಾತು. ಛಾಂದಸವಾಗಿ ಲಙ್ ಉತ್ತಮಪುರುಷ ಬಹುವಚನಾಂತ ರೂಪ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾದ ಪದವಾಗುತ್ತದೆ.

**ಯುವೋಃ**—ಯುವಯೋಃ ಎಂದು ರೂಪವಾದಾಗ ಛಾಂದಸವಾಗಿ ಯಕಾರಕ್ಕೆ ಲೋಪ ಬರುತ್ತದೆ.

**ಹಿರಣ್ಯಯಂ**—ವಿಕಾರಾರ್ಥದಲ್ಲಿ ಮಯಟ್ ಪ್ರತ್ಯಯಬಂದಾಗ **ಋತ್ವ್ಯವಾಸ್ತ್ವ್ಯವಾಸ್ತ್ವ**—(ಪಾ. ಸೂ. ೬-೪-೧೭೫) ಎಂಬುದರಿಂದ ಮಯಟಿನ ಮಕಾರಕ್ಕೆ ಲೋಪವು ನಿಪಾತಿತವಾಗಿದೆ.

**ಧೀಭಿಃ—ಸಾವೇಕಾಚಸ್ತೃತೀಯಾದಿಃ** (ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

ಸ್ತೇಭಿಃ—ಬಹುಲಂ ಛಂದಸಿ ಎಂಬುದರಿಂದ ಭಿಸಿಗೆ ಐಸ್ ಭಾವ ಬರುವುದಿಲ್ಲ. ಬಹುವಚನೇಝಲ್ಯೇತ್ ಎಂಬುದರಿಂದ ಏತ್ವ.

ಅಕ್ಷಭಿಃ—ಛಂದಸ್ಯಪಿ ದೃಶ್ಯತೇ (ಪಾ. ಸೂ. ೭-೧-೭೬) ಎಂಬುದರಿಂದ ಅನಙಾದೇಶ. ಅದು ಉದಾತ್ತವಾಗುತ್ತದೆ. ನಲೋಪಃ ಪ್ರಾತಿಪದಿಕಾಂತಸ್ಯ ಎಂಬುದರಿಂದ ನಲೋಪ. ಅಕಾರ ಉದಾತ್ತವಾದುದರಿಂದ ಮಧ್ಯೋದಾತ್ತವಾದ ಪದವಾಗುತ್ತದೆ ॥ ೨ ॥

---

ಸಂಹಿತಾಪಾಠಃ

ಯುವಾಂ ಸ್ತೋಮೇಭಿರ್ದೇವಯಂತೋ ಅಶ್ವಿನಾಶ್ರಾವಯಂತ ಇವ

ಶ್ಲೋಕಮಾಯವೋ ಯುವಾಂ ಹವ್ಯಾಭ್ಯಾ೩ಯವಃ ।

ಯುವೋರ್ವಿಶ್ವಾ ಅಧಿ ಶ್ರಿಯಃ ಪೃಕ್ಷಶ್ಚ ವಿಶ್ವವೇದಸಾ ।

ಪ್ರುಷಾಯಂತೇ ವಾಂ ಪವಯೋ ಹಿರಣ್ಯಯೇ ರಥೇ ದಸ್ರಾ ಹಿರಣ್ಯಯೇ ॥ ೩ ॥

ಪದಪಾಠಃ

ಯುವಾಂ । ಸ್ತೋಮೇಭಿಃ । ದೇವಽಯಂತಃ । ಅಶ್ವಿನಾ । ಆಶ್ರಾವಯಂತಃಽಇವ । ಶ್ಲೋಕಂ । ಆಯವಃ ।

ಯುವಾಂ । ಹವ್ಯಾ । ಅಭಿ । ಆಯವಃ ।

ಯುವೋಃ । ವಿಶ್ವಾಃ । ಅಧಿ । ಶ್ರಿಯಃ । ಪೃಕ್ಷಃ । ಚ । ವಿಶ್ವಽವೇದಸಾ ।

ಪ್ರುಷಾಯಂತೇ । ವಾಂ । ಪವಯಃ । ಹಿರಣ್ಯಯೇ । ರಥೇ । ದಸ್ರಾ । ಹಿರಣ್ಯಯೇ ॥ ೩ ॥

ಸಾಯಣಭಾಷ್ಯಂ

ಪೃಷ್ಠ್ಯಸ್ಯ ಷಷ್ಠೇಽಹನಿ ಪ್ರಉಗಶಸ್ತ್ರೇ ಯುವಾಂ ಸ್ತೋಮೇಭಿರಿತ್ಯಾಶ್ವಿನಸ್ತೃಚಃ । ಷಷ್ಠಸ್ಯೇತಿ ಖಂಡೇ ಸೂತ್ರಿತಂ । ಯುವಾಂ ಸ್ತೋಮೇಭಿರ್ದೇವಯಂತೋ ಅಶ್ವಿನಾವರ್ಷಪ ಇಂದ್ರ । ಆ. ೮-೧ । ಇತಿ ॥

ಹೇ ಅಶ್ವಿನಾಶ್ವಿನೌ ದೇವೌ ಯುವಾಂ ಸ್ತೋಮೇಭಿಃ ಸ್ತೋತ್ರೈರ್ದೇವಯಂತೋ ಯುವಾಮಾತ್ಮನ ಇಚ್ಛಂತ ಆಯವಃ । ಮನುಷ್ಯನಾಮೈತತ್ । ಯಜಮಾನಾಃ ಶ್ಲೋಕಂ ಯುಷ್ಮದೀಯಸ್ತುತಿ-

ರೂಪಾಂ ವಾಚಮಾಶ್ರಾವಯಂತ ಇವ ಸರ್ವತಃ ಶ್ರವಣವಿಷಯಾಂ ಕುರ್ವಂತ ಇವ ಸ್ತುವಂತಿ । ಶ್ಲೋಕ ಇತಿ ವಾಙ್ನಾಮ । ಶ್ಲೋಕೋ ಧಾರೇತಿ ತನ್ನಾಮಸೂಕ್ತತ್ವಾತ್ । ಕೀದೃಶಾಸ್ತೇ । ಯುವಾಂ ಹವ್ಯಾ ಹವಿಷಾಜ್ಯಾದಿನಾಭ್ಯಾಯವ ಅಭಿಮುಖ್ಯೇನ ಪ್ರಾಪಯಂತೋ ವಾ । ಕಿಂಚ ಹೇ ವಿಶ್ವವೇದಸಾ ಸರ್ವಧನೌ ಯುವೋರ್ಯುವಯೋಃ ಸಂಬಂಧಿನ್ಯೋ ವಿಶ್ವಾಃ ಶ್ರಿಯಃ ಸೇವನೀಯಾಃ ಸರ್ವಾ ಲಕ್ಷ್ಮೀರ್ಧನಕನಕಾದಿರೂಪಾ ಅಧ್ಯಧಿಕಂ ಭಜಂತ ಇತಿ ಶೇಷಃ । ಕಿಂಚ ಪೃಕ್ಷಶ್ಚಾನ್ನಮಪಿ ಯುಷ್ಮತ್ಪ್ರಸಾದಾದಧ್ಯಧಿಕಂ ಲಭಂತೇ । ಕಿಂಚ ಹೇ ದಸ್ರಾ ಶತ್ರೂಣಾಮುಪಕ್ಷಪಯಿತಾರೌ ವಾಂ ಹಿರಣ್ಯಯೇ ರಥೇ ಹಿರಣ್ಮಯೇ ಮಧುಪೂರ್ಣೇ ರಥೇ ಪವಯಸ್ತನ್ನೇಮಯಃ ಪ್ರುಷಾಯಂತೇ । ಕ್ಷರಂತಿ ಸ್ರವಂತಿ ॥ ಪ್ರುಷ ಪ್ಲುಷ ಸ್ನೇಹನಸೇಚನಪೂರಣೇಷು । ಛಂದಸಿ ಶಾಯಜಪೀತ್ಯಹಾವಪಿ ಶ್ನಃ ಶಾಯಜಾದೇಶಃ ॥ ಮಧುಪೂರ್ಣಪಾತ್ರೋಪೇತತ್ವಾತ್ ಶೀಘ್ರಗಮನೇನ ಚಕ್ರೇಷು ಮಧೂನಿ ಸ್ರವಂತೀತಿ ಭಾವಃ । ಪವೀ ರಥನೇಮಿರ್ಭವತಿ ಯದ್ವಿಪುನಾತಿ ಭೂಮಿಮಿತಿ ನಿರುಕ್ತಂ । ೫-೫ । ಅಶ್ವಿನೋ ರಥಸ್ಯ ಮಧುಪೂರ್ಣತ್ವಂ ತ್ರಯಃ ಪವಯೋ ಮಧುವಾಹನೇ ರಥೇ । ಋ. ೧-೩೪-೨ । ಇತ್ಯಾದಿಷು ಪ್ರಸಿದ್ಧಂ । ಕಿಂಚ ತಾದೃಶೇ ಹಿರಣ್ಯಯೇ ಹೃದಯರಮಣೇ ರಥೇ ಮಧುರಂ ಹವಿರ್ವಹನಮಿತಿ ಶೇಷಃ ॥

ಪ್ರತಿಪದಾರ್ಥ

**ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ, । **ಯುವಾಂ**—ನಿಮ್ಮನ್ನು । **ಸ್ತೋಮೇಭಿಃ**—ಸ್ತೋತ್ರಗಳಿಂದ । **ದೇವಯಂತಃ**—ಪಡೆಯಲು ಅಪೇಕ್ಷಿಸುವವರೂ, । **ಯುವಾಂ**—ನಿಮ್ಮನ್ನು । **ಹವ್ಯಾ**—ಹವಿಸ್ಸಿನ ರೂಪದ ಆಜ್ಯಾದಿಗಳಿಂದ । **ಅಭ್ಯಾಯವಃ**—ಸಮೀಪಿಸುವವರೂ ಆದ । **ಆಯವಃ**—ಮಾನವರಾದ ಯಜಮಾನರು । **ಶ್ಲೋಕಂ**—(ನಿಮ್ಮನ್ನು ಸ್ತುತಿಸುವ) ಸ್ತೋತ್ರವಾಕ್ಯಗಳನ್ನೂ । **ಆಶ್ರಾವಯಂತ ಇವ**—ನಿಮ್ಮ ಕಿವಿಗೆ ಕೇಳಿಸುವಂತೆ (ಪಠಿಸುತ್ತಾರೆ) । (ಅನಂತರ) **ವಿಶ್ವವೇದಸಾ**—ಸಕಲ ಧನಕ್ಕೂ ಸ್ವಾಮಿಗಳಾದ ಎಲೈ ಅಶ್ವಿನೀದೇವತೆಗಳೇ । **ಯುವೋಃ**—ನಿಮಗೆ ಸೇರಿದ । **ವಿಶ್ವಾ ಶ್ರಿಯಃ**—ಸಕಲ ಸಂಪತ್ತುಗಳನ್ನೂ । **ಪೃಕ್ಷಶ್ಚ**—ಅನ್ನವನ್ನೂ (ಕೂಡ) । **ಅಧಿ**—ಅತ್ಯಧಿಕವಾಗಿ (ಸೇವಿಸುತ್ತಾರೆ) । **ದಸ್ರಾ**—ಶತ್ರುನಾಶಕರಾದ ಅಶ್ವಿನೀದೇವತೆಗಳೇ। **ವಾಂ**—ನಿಮ್ಮ। **ಹಿರಣ್ಯಯೇ ರಥೇ**—ಮಧುಪೂರ್ಣವಾದ ಸುವರ್ಣರಥದಲ್ಲಿ। **ಪವಯಃ**—ರಥದಚಕ್ರಗಳು। **ಪ್ರುಷಾಯಂತೇ**—ಮಧುವನ್ನು ಸ್ರವಿಸುವಂತೆ ಮಾಡುತ್ತವೆ। **ಹಿರಣ್ಯಯೇ**—ಚಿತ್ತಾಕರ್ಷಕವಾದ ಆ ಸುವರ್ಣಮಯವಾದ ರಥದಲ್ಲಿ (ಹವಿಸ್ಸನ್ನು ತೆಗೆದುಕೊಂಡು ಹೋಗಿರಿ.)

ಭಾವಾರ್ಥ

ಎಲೈ ಅಶ್ವಿನೀದೇವತೆಗಳೇ, ಸ್ತೋತ್ರಗಳಿಂದ ನಿಮ್ಮನ್ನು ಪಡೆಯಲು ಇಚ್ಛಿಸುವ ಯಜಮಾನರು ನಿಮಗೆ ಹವಿಸ್ಸುಗಳನ್ನು ಅರ್ಪಿಸಿ ನಿಮ್ಮನ್ನು ಸಮೀಪಿಸಿ ನಿಮ್ಮನ್ನು ಸ್ತುತಿಸುವ ಸ್ತೋತ್ರವಾಕ್ಯಗಳನ್ನು ನಿಮ್ಮ ಕಿವಿಗೆ ಬೀಳುವಂತೆ ಪಠಿಸುತ್ತಾರೆ. ಸಕಲ ಧನಕ್ಕೂ ಸ್ವಾಮಿಗಳಾದ ಅಶ್ವಿನೀದೇವತೆಗಳೇ, ನಿಮ್ಮನ್ನು ಸ್ತುತಿಸಿದ ನಿಮ್ಮ ಭಕ್ತರು ನಿಮಗೆ ಸೇರಿದ ಸಕಲ ಸಂಪತ್ತನ್ನೂ ಅನ್ನವನ್ನೂ ಅನುಭವಿಸುತ್ತಾರೆ. ಮಧುವನ್ನು ಸ್ರವಿಸುವಂತೆ ಮಾಡುವ ನೇಮಿಗಳೊಡನೆ ಕೂಡಿದುದೂ ಮಧುಪೂರ್ಣವಾದುದೂ, ಚಿತ್ತಾಕರ್ಷಕವಾದುದೂ ಆದ ನಿಮ್ಮ ಸುವರ್ಣಮಯವಾದ ರಥದಲ್ಲಿ ಬಂದು ನಮ್ಮಿಂದ ಅರ್ಪಿತವಾದ ಹವಿಸ್ಸನ್ನು ಹೊತ್ತುಕೊಂಡು ಹೋಗಿರಿ.

## English Translation

Aswins, men who desire to glorify you with (their) hymns, cause, as it were, their praises to be heard, propitiating you with oblations; for, from you, who are possessed of all opulence, (they obtain) every kind of wealth and abundant food. Dasras, the fellies (of the wheels) of your honey-laden car drop honey, (carried) in your golden (car).

### ವಿಶೇಷವಿಷಯಗಳು

**ಸ್ತೋಮೇಭಿಃ**—ಏಕಂ ಸಾಮ ತೃಚೇ ಕ್ರಿಯತೇ, ತಸ್ಯ ಚ ತೃಚಸ್ಯ ಆವೃತ್ತ್ಯಾ ಋಚಾಂ ಸಂಖ್ಯಾ ವರ್ಧನೀಯಾ ಭವತಿ ಯಾ ಸ್ತೋಮಶಬ್ದೇನೋಚ್ಯತ ಇತಿ । ಎಂಬ ವಾಕ್ಯದಿಂದ **ಸ್ತೋಮದ** ಲಕ್ಷಣವನ್ನು ತಿಳಿಸಿ, ಸ್ತೋಮಗಳಲ್ಲಿ **ತ್ರಿವೃತ್, ಪಂಚದಶಃ ಸಪ್ತದಶಃ, ಏಕವಿಂಶಃ, ಚತುರ್ವಿಂಶಃ, ತ್ರಿಣವಃ, ತ್ರಯಸ್ತ್ರಿಂಶಃ, ಚತುಶ್ಚತ್ವಾರಿಂಶಃ, ಅಷ್ಟಚತ್ವಾರಿಂಶಃ,** ಎಂದು ಒಂಭತ್ತು ವಿಧಗಳನ್ನೂ ಅವುಗಳ ವಿಷ್ಟುತಿಗಳೊಡನೆ ಋಗ್ವೇದ ಸಂಹಿತೆಯ ೨ನೇ ಭಾಗದ ೧೩೪ ರಿಂದ ೧೫೦ ನೇ ಪೇಜುಗಳಲ್ಲಿ ಬಹಳ ವಿಶದವಾಗಿ ತಿಳಿಸಿದೆಯಾದ್ದರಿಂದ ಇಲ್ಲಿ ಆ ಸ್ತೋಮಗಳ ಪಠನದಿಂದ ಲಭಿಸತಕ್ಕ ಪ್ರಯೋಜನಗಳನ್ನು ಮಾತ್ರ ತಿಳಿಸಲಾಗುತ್ತದೆ.

**ಸ್ತೋಮಗಳಲ್ಲಿ** ಮೇಲೆ ಹೇಳಿರುವ ಒಂಭತ್ತು ವಿಭಾಗಗಳನ್ನು **ತ್ರಯೋದಶ, ಚತುರ್ದಶ, ಷೋಡಶ** ಇತ್ಯಾದಿ ಆವಾಪಕ್ರಮದಿಂದ ಹೆಚ್ಚುಮಾಡಿಕೊಳ್ಳಬಹುದು. ಉದಾಹರಣೆಗೆ—

**ವಸವಸ್ತ್ರಯೋದಶಾಕ್ಷರೇಣ ತ್ರಯೋದಶಗ್ಂ ಸ್ತೋಮಮುದಜಯನ್ರುದ್ರಾಶ್ಚತುರ್ದಶಾಕ್ಷರೇಣ ಚತುರ್ದಶಗ್ಂ ಸ್ತೋಮಮುದಜಯನ್ನಾದಿತ್ಯಾಃ ಪಂಚದಶಾಕ್ಷರೇಣ ಪಂಚದಶಗ್ಂ ಸ್ತೋಮಮುದಜಯನ್ನದಿತಿಷ್ಷೋಡಶಾಕ್ಷರೇಣ ಷೋಡಶಗ್ಂ ಸ್ತೋಮಮುದಜಯತ್ಪ್ರಜಾಪತಿಸ್ಸಪ್ತದಶಾಕ್ಷರೇಣ ಸಪ್ತದಶಗ್ಂ ಸ್ತೋಮಮುದಜಯತ್ ।**

(ತೈ. ಸಂ. ೧-೭-೧೧-೪೪)

ಎಂಬ ತೈತ್ತಿರೀಯಸಂಹಿತಾವಾಕ್ಯಗಳಿಂದ **ವಸುರುದ್ರಾದಿತ್ಯರೂ, ಅದಿತಿಯೂ ಪ್ರಜಾಪತಿಯೂ** ಕ್ರಮವಾಗಿ **ತ್ರಯೋದಶ, ಚತುರ್ದಶ, ಪಂಚದಶ, ಷೋಡಶ, ಸಪ್ತದಶ** ಸ್ತೋಮಗಳನ್ನು ಗಳಿಸಿಕೊಂಡ ಕ್ರಮವನ್ನು ಹೇಳಿದೆ. ಸ್ತೋಮಗಳ ಪ್ರಭಾವವು ಅತ್ಯಧಿಕವಾದುದು, ಇವುಗಳ ಪಠನದಿಂದ ಸಕಲವಾದ ಇಷ್ಟಾರ್ಥಗಳನ್ನೂ ಗಳಿಸಬಹುದು ಎಂಬ ವಿಷಯವೂ ತೈತ್ತಿರೀಯಸಂಹಿತೆಯಲ್ಲಿಯೇ ಪಠಿಸಲ್ಪಟ್ಟಿದೆ

**ಪ್ರಾತಸ್ಸವನೇ ವೈ ಗಾಯತ್ರೇಣ ಛಂದಸಾ ತ್ರಿವೃತೇ ಸ್ತೋಮಾಯ ಜ್ಯೋತಿರ್ದಧದೇತಿ ತ್ರಿವೃತಾ ಬ್ರಹ್ಮವರ್ಚಸೇನ ಪಂಚದಶಾಯ ಜ್ಯೋತಿರ್ದಧದೇತಿ ಪಂಚದಶೇನೌಜಸಾ ವೀರ್ಯೇಣ ಸಪ್ತದಶಾಯ ಜ್ಯೋತಿರ್ದಧದೇತಿ ಸಪ್ತದಶೇನ ಪ್ರಾಜಾಪತ್ಯೇನ ಪ್ರಜನನೇನೈಕವಿಂಶಾಯ ಜ್ಯೋತಿರ್ದಧದೇತಿ ಸ್ತೋಮ ಏವ ತತ್ ಸ್ತೋಮಾಯ ಜ್ಯೋತಿರ್ದಧದೇತ್ಯಥೋ ಸ್ತೋಮ ಏವ ಸ್ತೋಮಮಭಿ ಪ್ರಣಯತಿ ಯಾವಂತೋ ವೈ ಸ್ತೋಮಾಸ್ತಾವಂತಃ ಕಾಮಾಸ್ತಾವಂತೋ**

ಲೋಕಾಸ್ತಾವಂತಿ ಜ್ಯೋತೀಗ್‌ಷ್ಯೇತಾವತ ಏವ ಸ್ತೋಮಾನೇತಾವತಃ ಕಾಮಾನೇತಾವತೋ ಲೋಕಾನೇತಾವಂತಿ ಜ್ಯೋತೀಗ್‌ಷ್ಯವರುಂಧೇ ।

(ತೈ. ಸಂ. ೭-೧-೨-೭)

ಈ ವಾಕ್ಯಗಳಲ್ಲಿ ಅಗ್ನಿಷ್ಟೋಮದಲ್ಲಿ ಪಠಿಸಬೇಕಾದ ನಾಲ್ಕು ವಿಧವಾದ ಸ್ತೋಮಗಳ ಪ್ರಭಾವಗಳನ್ನು ತಿಳಿಸಿದೆ. ಯಜ್ಞಕರ್ತನು ಪ್ರಾತಃಸವನಕಾಲದಲ್ಲಿ ಗಾಯತ್ರೀಚ್ಛಂದಸ್ಸಿನಿಂದ ತ್ರಿವೃತ್‌ಸ್ತೋಮವನ್ನು ಮಹತ್ತ್ವದಸ್ಥಾನದಲ್ಲಿರಿಸುತ್ತಾನೆ. ಹೀಗೆಯೇ ಜ್ಯೋತೀರೂಪವಾದ ತ್ರಿವೃತದಿಂದ ಪಂಚದಶಸ್ತೋಮವನ್ನೂ, ವೀರ್ಯಯುತವಾದ ಪಂಚದಶದಿಂದ ಸಪ್ತದಶಸ್ತೋಮವನ್ನೂ, ಪ್ರಜಾಪತಿಯೊಡನೆ ಸಂಬಂಧವನ್ನು ಹೊಂದಿ ಪ್ರಜನನಕ್ಕೆ ಸಾಧಕವಾದ ಸಪ್ತದಶಸ್ತೋಮದಿಂದ ಏಕವಿಂಶಸ್ತೋಮವನ್ನೂ ತೇಜೋಯುತವಾಗುವಂತೆ ಮಾಡುತ್ತಾನೆ. ಹೀಗೆಯೇ ಒಂದು ಬಗೆಯ ಸ್ತೋಮವು ಇನ್ನೊಂದು ವಿಧವಾದ ಸ್ತೋಮಕ್ಕೆ ಪ್ರಭಾವವನ್ನೂ ತೇಜಸ್ಸನ್ನೂ ಉಂಟುಮಾಡುತ್ತದೆ. ಸ್ತೋಮದಲ್ಲಿ ಎಷ್ಟು ಬಗೆಗಳಿವೆಯೋ ಅಷ್ಟು ಲೋಕಗಳೂ, ಅಷ್ಟು ಬಗೆಯ ತೇಜಸ್ಸುಗಳೂ, ಅಷ್ಟು ವಿಧವಾದ ಇಷ್ಟಾರ್ಥಗಳೂ ಇವೆ. ಮತ್ತು ಸ್ತೋಮಪಠನದಿಂದ ಯಜಮಾನನು ಅಷ್ಟು ವಿಧವಾದ ಲೋಕಗಳನ್ನೂ, ತೇಜಸ್ಸುಗಳನ್ನೂ ಮತ್ತು ಇಷ್ಟಾರ್ಥಗಳನ್ನೂ ಪಡೆಯುವನು ಎಂದು ಸ್ತೋಮದ ಪ್ರಭಾವವನ್ನು ತಿಳಿಸಿ ಅನಂತರ ಸ್ತೋಮಪಠನವಿಲ್ಲದಿರುವುದರಿಂದ ಆಗುವ ನಷ್ಟವನ್ನೂ ತಿಳಿಸಿದೆ.

ಬ್ರಹ್ಮವಾದಿನೋ ವದಂತಿ ಸತ್ತ್ವೈ ಯಜೇತ ಯೋಽಗ್ನಿಷ್ಟೋಮೇನ ಯಜಮಾನೋಽಥ ಸರ್ವಸ್ತೋಮೇನ ಯಜೇತೇತಿ ಯಸ್ಯ ತ್ರಿವೃತಮಂತರ್ಯಂತಿ ಪ್ರಾಣಾಗ್‌ಸ್ತಸ್ಯಾಂತರ್ಯಂತಿ ಪ್ರಾಣೇಷು ಮೇಽಪ್ಯಸದಿತಿ ಖಲು ವೈ ಯಜ್ಞೇನ ಯಜಮಾನೋ ಯಜತೇ ಯಸ್ಯ ಪಂಚದಶಮಂತರ್ಯಂತಿ ವೀರ್ಯಂ ತಸ್ಯಾಂತರ್ಯಂತಿ ವೀರ್ಯೇ ಮೇಽಪ್ಯಸದಿತಿ ಖಲು ವೈ ಯಜ್ಞೇನ ಯಜಮಾನೋ ಯಜತೇ ಯಸ್ಯ ಸಪ್ತದಶಮಂತರ್ಯಂತಿ ಪ್ರಜಾಂ ತಸ್ಯಾಂತರ್ಯಂತಿ ಪ್ರಜಾಯಾಂ ಮೇಽಪ್ಯಸದಿತಿ ಖಲು ವೈ ಯಜ್ಞೇನ ಯಜಮಾನೋ ಯಜತೇ ಯಸ್ಯೈಕವಿಗ್‌ಂಶಮಂತರ್ಯಂತಿ ಪ್ರತಿಷ್ಠಾಂ ತಸ್ಯಾಂತರ್ಯಂತಿ ಪ್ರತಿಷ್ಠಾಯಾಂ ಮೇಽಪ್ಯಸದಿತಿ ಖಲು ವೈ ಯಜ್ಞೇನ ಯಜಮಾನೋ ಯಜತೇ ಯಸ್ಯ ತ್ರಿಣವಮಂತರ್ಯಂತ್ಯೃತೂಗ್‌ಂಶ್ಚ ತಸ್ಯ ನಕ್ಷತ್ರಿಯಾಂ ಚ ವಿರಾಜಮಂತರ್ಯಂತ್ಯೃತುಷು ಮೇಽಪ್ಯಸನ್ನಕ್ಷತ್ರಿಯಾಯಾಂ ಚ ವಿರಾಜೀತಿ ಖಲು ವೈ ಯಜ್ಞೇನ ಯಜಮಾನೋ ಯಜತೇ ಯಸ್ಯ ತ್ರಯಸ್ತ್ರಿಗ್‌ಂಶಮಂತರ್ಯಂತಿ ದೇವತಾಸ್ತಸ್ಯಾಂತರ್ಯಂತಿ ದೇವತಾಸು ಮೇಽಪ್ಯಸದಿತಿ ಖಲು ವೈ ಯಜ್ಞೇನ ಯಜಮಾನೋ ಯಜತೇ ಯೋ ವೈ ಸ್ತೋಮಾನಾಮವಮಂ ಪರಮತಾಂ ಗಚ್ಛಂತಂ ವೇದ ಪರಮತಾಮೇವ ಗಚ್ಛತಿ ತ್ರಿವೃದ್ವೈ ಸ್ತೋಮಾನಾಮವಮಸ್ತ್ರಿವೃತ್ಪರಮೋ ಯ ಏವಂ ವೇದ ಪರಮತಾಮೇವ ಗಚ್ಛತಿ ।

(ತೈ. ಸಂ. ೭-೧-೩)

ಅಗ್ನಿಷ್ಟೋಮದಿಂದ ಯಜ್ಞಮಾಡತಕ್ಕವರು ಸರ್ವಸ್ತೋಮದಿಂದಲೂ ಮಾಡಬೇಕೆಂದು ಶಾಸ್ತ್ರಜ್ಞರು ವಿಧಿಸಿದ್ದಾರೆ. ಈ ವಿಧಿಯಲ್ಲಿ ತ್ರಿವೃತ್‌ಸ್ತೋಮವನ್ನು ಬಿಟ್ಟರೆ ಅವನ ಮುಖ್ಯಪ್ರಾಣವೇ ಮಾಯವಾಗುವುದರಿಂದ, ಯಜಮಾನನು ಈ ಯಜ್ಞವು ನನ್ನ ಮುಖ್ಯಪ್ರಾಣದಲ್ಲಿ ಅಂತರ್ಗತವಾಗಲಿ ಎಂಬ ಉದ್ದಿಶ್ಯದಿಂದ ಯಾಗಮಾಡುತ್ತಾನೆ. ಹೀಗೆಯೇ ಪಂಚದಶಸ್ತೋಮವನ್ನು ಬಿಟ್ಟರೆ ಶಕ್ತ್ಯಭಾವವಾಗುವುದರಿಂದಲೂ, ಸಪ್ತದಶಸ್ತೋಮವನ್ನು

ಬಿಟ್ಟರೆ ಸಂತತಿಯಿಲ್ಲದೇ ಹೋಗುವುದರಿಂದಲೂ, ಏಕವಿಂಶಸ್ತೋಮವನ್ನು ಬಿಟ್ಟರೆ ತನ್ನ ಜೀವನಾಧಾರವೇ ಕಳಚಿ ಹೋಗುವುದರಿಂದಲೂ, ತ್ರಿಣವಸ್ತೋಮವನ್ನು ಬಿಟ್ಟರೆ ತನ್ನ ಪ್ರಯೋಜನಕ್ಕಾಗಿ ಇರತಕ್ಕ ಋತುಗಳೂ ನಕ್ಷತ್ರಗಳ ಶಕ್ತಿಗಳೂ ತನ್ನ ಭಾಗಕ್ಕೆ ಸಹಾಯಕವಾಗದಿರುವುದರಿಂದಲೂ, ತ್ರಯಸ್ತ್ರಿಂಶಸ್ತೋಮವನ್ನು ಬಿಟ್ಟರೆ ಮುಖ್ಯವಾದ ದೇವತಾಸಾನ್ನಿಧ್ಯವೇ ಇಲ್ಲದಿರುವುದರಿಂದಲೂ ಸಹ, ಯಜಮಾನನು ಶಕ್ತಿಸಂಪಾದನೆಗಾಗಿ ಪಂಚದಶಸ್ತೋಮದಿಂದಲೂ, ಸಂತತಿಲಾಭಕ್ಕಾಗಿ ಸಪ್ತದಶಸ್ತೋಮದಿಂದಲೂ, ಜೀವನಾಧಾರಕ್ಕಾಗಿ ಏಕವಿಂಶಸ್ತೋಮದಿಂದಲೂ, ಋತುಗಳ ಮತ್ತು ನಕ್ಷತ್ರಗಳ ಪ್ರಭಾವಗಳ ಪ್ರಯೋಜನವನ್ನು ಪಡೆಯುವುದಕ್ಕಾಗಿ ತ್ರಿಣವಸ್ತೋಮದಿಂದಲೂ, ತನ್ನ ಮುಖ್ಯದೇವತಾಸಾನ್ನಿಧ್ಯದ ಲಾಭಕ್ಕಾಗಿ ತ್ರಯಸ್ತ್ರಿಂಶಸ್ತೋಮದ ಪಠನದಿಂದಲೂ ಯಾಗವನ್ನು ನೆರವೇರಿಸುತ್ತಾನೆ. ಯಾವ ಯಜಮಾನನು ಸ್ತೋಮಗಳಲ್ಲೆಲ್ಲಾ ಪ್ರಥಮಸ್ಥಾನವನ್ನು ಪಡೆದಿರುವ ತ್ರಿವೃತ್‌ಸ್ತೋಮದ ಮಹಿಮೆಯನ್ನು ತಿಳಿಯುತ್ತಾನೆಯೋ ಆ ಯಜಮಾನನು ಯಜ್ಞಕರ್ತರಲ್ಲಿ ಮೊದಲನೆಯ ಸ್ಥಾನವನ್ನು ಪಡೆಯುತ್ತಾನೆ.

ಹೀಗೆಯೇ **ಪೃಷ್ಠ್ಯಷಡಹ** ಯಾಗದಲ್ಲಿ ಆರುದಿನಗಳಲ್ಲಿಯೂ ಕ್ರಮವಾಗಿ ಪಠಿಸಬೇಕಾದ ತ್ರಿವೃದಾದಿ ಸ್ತೋಮಗಳ ಮಹಿಮೆಯನ್ನು ವರ್ಣಿಸುತ್ತಾ,

**ತ್ರಿವೃದಗ್ನಿಷ್ಟೋಮೋ ಭವತಿ ತೇಜ ಏವಾವ ರುಂಧತೇ ಪಂಚದಶೋ ಭವತೀಂದ್ರಿಯಮೇವಾವ ರುಂಧತೇ ಸಪ್ತದಶೋ ಭವತ್ಯನ್ನಾದ್ಯಸ್ಯಾವರುದ್ಧ್ಯಾ ಅಥೋ ಪ್ರೈವ ತೇನ ಜಾಯಂತ ಏಕವಿಗ್ಂಶೋ ಭವತಿ ಪ್ರತಿಷ್ಠಿತ್ಯಾ ಅಥೋ ರುಚಮೇವಾತ್ಮನ್ದಧತೇ ತ್ರಿಣವೋ ಭವತಿ ವಿಜಿತ್ಯೈ ತ್ರಯಸ್ತ್ರಿಗ್ಂಶೋ ಭವತಿ ಪ್ರತಿಷ್ಠಿತ್ಯೈ ।** ತ್ರಿವೃತ್‌ಸ್ತೋಮದೊಡನೆ ಕೂಡಿದ ಅಗ್ನಿಷ್ಟೋಮದಿಂದ ತೇಜಸ್ಸನ್ನೂ ಪಂಚದಶಸ್ತೋಮದಿಂದ ವೀರ್ಯವನ್ನೂ, ಸಪ್ತದಶದಿಂದ ಅನ್ನವನ್ನೂ ಏಕವಿಂಶದಿಂದ ಪ್ರತಿಷ್ಠೆಯನ್ನೂ, ತ್ರಿಣವದಿಂದ ಜಯವನ್ನೂ ತ್ರಯಸ್ತ್ರಿಂಶದಿಂದ ಮಹತ್ತ್ವವನ್ನೂ ಪಡೆಯುತ್ತಾನೆ ಎಂದೂ ಸಹ ಸ್ತೋಮಪಠನದ ಪ್ರಯೋಜನಗಳನ್ನು ತಿಳಿಸಿದೆ. ಕಠೋಪನಿಷತ್ತಿನಲ್ಲಿಯೂ ಸಹ,

**ಸ್ತೋಮಮಹದುರುಗಾಯಂ ಪ್ರತಿಷ್ಠಾಂ ದೃಷ್ಟ್ವಾ ಧೀರೋ ನಚಿಕೇತೋಽತ್ಯಸ್ರಾಕ್ಷೀಃ ।**

(ಕ. ಉ. ೨-೧೧)

ಎಂಬ ವಾಕ್ಯದಿಂದ **ಸ್ತೋಮದ** ಮಹತ್ತ್ವವನ್ನೂ, ಅದರಿಂದ ಲಭಿಸತಕ್ಕ ಆಧ್ಯಾತ್ಮಿಕವಾದ ಶಾಂತಿಯನ್ನೂ ತೋರಿಸಿದೆ. ಛಾಂದೋಗ್ಯೋಪನಿಷತ್ತಿನಲ್ಲಿ,

**ಯೇನ ಚ್ಛಂದಸಾ ಸ್ತೋಷ್ಯನ್ ಸ್ಯಾತ್ತಚ್ಛಂದ ಉಪಧಾವೇದ್ಯೇನ ಸ್ತೋಮೇನ ಸ್ತೋಷ್ಯಮಾಣಃ ಸ್ಯಾತ್ತಂ ಸ್ತೋಮಮುಪಧಾವೇತ್ ।**

(ಛಾ. ಉ ೧-೩-೧೦)

ಎಂಬ ವಾಕ್ಯದಿಂದ **ಉದ್ಗೀಥದ** ಮಹತ್ತ್ವವನ್ನು ವರ್ಣಿಸುತ್ತಾ ಯಾವ **ಸ್ತೋಮದಿಂದ** ಆಯಾ ಸನ್ನಿವೇಶಕ್ಕನುಗುಣವಾಗಿ ಸ್ತೋತ್ರವು ಪೂರ್ಣವಾಗುತ್ತದೆಯೋ ಆ ಸ್ತೋಮವನ್ನಾಶ್ರಯಿಸಿ ಧ್ಯಾನಮಾಡಬೇಕೆಂದು ವಿಧಿಸಿದೆ.

ಇದೇ ರೀತಿ ಪ್ರಕೃತವಾದ ಋಕ್ಕಿನಲ್ಲಿಯೂ ಸಹ **ಸ್ತೋಮೇಭಿಃ** ಎನ್ನುವುದರಿಂದ ಇಂತಹ ಗಾನಾತ್ಮಕ ಸಾಮವೂ, ಅತಿಶಯವಾದ ಪ್ರಯೋಜನವನ್ನು ಕೊಡತಕ್ಕುದೂ ಆದ ಸ್ತೋತ್ರವೆಂದರ್ಥ.

**ದೇವಯಂತಃ—ಯುವಾಂ ಆತ್ಮನ ಇಚ್ಛಂತಃ ।** ದೇವತೆಗಳಾದ ನಿಮ್ಮನ್ನು ನಮ್ಮವರನ್ನಾಗಿ ಮಾಡಿಕೊಳ್ಳಬೇಕೆಂಬ ಇಚ್ಛೆಯಿಂದ ಎಂದರೆ ನಿಮ್ಮ ಪೂರ್ಣವಾದ ಅಭಿಮಾನವನ್ನು ಪಡೆಯಬೇಕೆಂಬ ಇಚ್ಛೆಯಿಂದ.

**ಆಯವಃ**—ಆಯುಶಬ್ದಕ್ಕೆ **ಮಾನವರೆಂದೂ, ಆಯುಸ್ಸೆಂದೂ,** ಆಯುಸ್ಸನ್ನು ಪ್ರತಿಬಿಂಬಿಸತಕ್ಕ ಒಂದು **ದೇವತಾವಿಶೇಷ**ವೆಂದೂ, ಒಂದು ವ್ಯಕ್ತಿಯ ಹೆಸರನ್ನು ಸೂಚಿಸುವ **ಅಂಕಿತನಾಮ**ವೆಂದೂ ಬೇರೆ ಬೇರೆ ಅರ್ಥಗಳಾಗಬಹುದೆಂದು ಹಿಂದೆಯೇ ತಿಳಿಸಿದೆ. ಈ ಋಕ್ಕಿನಲ್ಲಿ **ಮಾನವರಾದ** ನಾವು ಎಂದರ್ಥ.

**ಪೃಕ್ಷಃ—ಪೃಕ್ಷ** ಶಬ್ದಕ್ಕೆ ಸಂಗ್ರಾಮವೆಂದೂ (ನಿ. ೩-೯) ವೇಗಗಾಮಿಯಾದ ಕುದುರೆಯೆಂದೂ, **ಅನ್ನ**ವೆಂದೂ ಅರ್ಥವಾಗುತ್ತದೆ. ಇಲ್ಲಿ ಪ್ರಭೂತವಾದ **ಅನ್ನ**ವೆಂದರ್ಥ.

**ದಸ್ರಾ—ಶತ್ರೂಣಾಮುಪಕ್ಷಪಯಿತಾರೌ** ಅಥವಾ **ದರ್ಶನೀಯೌ** ಶತ್ರುಗಳನ್ನು ನಾಶಮಾಡತಕ್ಕ ಶಕ್ತಿಯುಳ್ಳವರು ಅಥವಾ **ಸುಂದರವಾದ ರೂಪ**ವುಳ್ಳವರು ಎಂದರ್ಥವಾಗುತ್ತದೆ, ಎಂಬ ವಿಷಯವನ್ನೂ **ದಸ್ರಾ** ಎಂಬ ಹೆಸರಿನ ವೈಶಿಷ್ಟ್ಯವನ್ನೂ ಹಿಂದೆ ತಿಳಿಸಿದೆ.

**ಪವಯಃ—ಪವಿ** ಶಬ್ದವು **ವಾಕ್** ನಾಮಗಳಲ್ಲಿಯೂ (ನಿ. ೨-೨೩); ವಜ್ರನಾಮಗಳಲ್ಲಿಯೂ (ನಿ. ೩-೧೧) ಪಠಿತವಾಗಿರುವುದಲ್ಲದೆ—**ಪವೀ ರಥನೇಮಿರ್ಭವತಿ ಯದ್ವಿಪುನಾತಿ ಭೂಮಿಂ ।** (ನಿ. ೫-೫-) ಭೂಮಿಯನ್ನು ಉಜ್ಜುವುದರಿಂದ ರಥಚಕ್ರಕ್ಕೆ **ಪವಿ**ಯೆಂದು ಹೆಸರೆಂದು ನಿರುಕ್ತಕಾರರು ಅರ್ಥಮಾಡಿ—

**ಉತ ಪವ್ಯಾ ರಥಾನಾಮದ್ರಿಂ ಭಿಂದಂತ್ಯೋಜಸಾ ।**
(ಋ. ಸಂ. ೫-೫೨-೯)

ಎಂಬ ಋಕ್ಕನ್ನು ಉದಹರಿಸಿ ಅಲ್ಲಿ **ಪವಿ** ಶಬ್ದಕ್ಕೆ **ರಥನೇಮಿ** ಯೆಂಬರ್ಥವನ್ನು ತೋರಿಸಿದ್ದಾರೆ. ಪ್ರಕೃತವಾದ ಋಕ್ಕಿನಲ್ಲಿಯೂ **ಅಶ್ವಿನೀ**ದೇವತೆಗಳ ರಥಚಕ್ರವೆಂದರ್ಥ **ಪವಿ** ಶಬ್ದಕ್ಕೆ **ಶಲ್ಯ**ವೆಂಬರ್ಥವನ್ನೂ ತೋರಿಸುತ್ತಾ—

**ಪಾವೀರವೀ ತನ್ಯತುರೇಕಪಾದಜೋ ದಿವೋ ಧರ್ತಾ ಸಿಂಧುರಾಪಃ ಸಮುದ್ರಿಯಃ ।**
(ಋ. ಸಂ. ೧೦-೬೫-೧೩)

ಎಂಬ **ಋಕ್ಕ**ನ್ನುದಹರಿಸಿ (ನಿ. ೧೩-೩೦) **ಪವಿಃ ಶಲ್ಯೋ ಭವತಿ ಯದ್ವಿಪುನಾತಿ ಕಾಯಂ ತದ್ವತ್ಪವೀರಮಾಯುಧಂ ತದ್ವಾನಿಂದ್ರಃ ಪವೀರವಾನ್ ।** ದೇಹವನ್ನು ಭೇದಿಸುವುದರಿಂದ ಶಲ್ಯಕ್ಕೆ ಪವಿ ಎಂದು ಹೆಸರು. ಇದನ್ನು ಹೊಂದಿರುವುದರಿಂದ **ಇಂದ್ರ**ನಿಗೆ **ಪವೀರವಾನ್** ಎಂದು ವಿಶೇಷಣವಿದೆಯೆಂದು ವಿವರಿಸಿ,

**ಯೋ ಜನಾನ್ ಮಹಿಷಾँ ಇವಾತಿತಸ್ಥೌ ಪವೀರವಾನ್ । ಉತಾಪವೀರವಾನ್ ಯುಧಾ ॥**
(ಋ ಸಂ. ೧೦-೬೦-೩)

ಎಂಬ ಋಕ್ಕನ್ನುದಹರಿಸಿದ್ದಾರೆ.

ವ್ಯಾಕರಣಪ್ರಕ್ರಿಯಾ

**ಸ್ತೋಮೇಭಿಃ ಬಹುಲಂ ಛಂದಸಿ** ಎಂಬುದರಿಂದ ಭಿಸಿಗೆ-ಐಸ್‌ಭಾವ ಬರುವುದಿಲ್ಲ. ಏತ್ವ

**ದೇವಯಂತಃ** – ದೇವಾನ್ ಆತ್ಮನಃ ಇಚ್ಛಂತಃ. **ಸುಪ ಆತ್ಮನಃ ಕ್ಯಚ್** (ಪಾ. ಸೂ. ೩-೧-೮) ಎಂಬುದರಿಂದ ಇಚ್ಛಾರ್ಥದಲ್ಲಿ ಕ್ಯಚ್ **ಪ್ರತ್ಯಯ. ನ ಛಂದಸ್ಯಪುತ್ರಸ್ಯ** (ಪಾ. ಸೂ. ೭-೪-೩೫) ಎಂಬುದರಿಂದ ಈತ್ವಾದಿ

ಗಳು ಬರುವುದಿಲ್ಲ. ಕೃಜಂತದಮೇಲೆ ಲಡರ್ಥದಲ್ಲಿ ಶತೃಪ್ರತ್ಯಯ. ಶಪ್ ವಿಕರಣ. ಅದುಪದೇಶದ ಪರದಲ್ಲಿರುವುದ ರಿಂದ ಲಸಾರ್ವಧಾತುಕವು ಅನುದಾತ್ತವಾಗುತ್ತದೆ. ಕೃಚ್ ಚಿತ್ತಾದುದರಿಂದ **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ಪ್ರಥಮಾ ಬಹುವಚನಾಂತರೂಪ.

**ಅಶ್ವಿನಾ** - ಸಂಬೋಧನಾ ದ್ವಿವಚನದಲ್ಲಿ **ಸುಪಾಂ ಸುಲುಕ್** - ಎಂಬುದರಿಂದ ಅದಕ್ಕೆ ಆಕಾರಾದೇಶ ಆಮಂತ್ರಿತನಿಘಾತಸ್ವರ ಬರುತ್ತದೆ.

**ಅಶ್ರಾವಯಂತಃ**—ಶ್ರು ಶ್ರವಣೇ. ಧಾತು. ಪ್ರಯೋಜಕ ವ್ಯಾಪಾರತೋರುವುದರಿಂದ **ಹೇತುಮತಿ ಚ** ( ಪಾ. ಸೂ. ೩-೧-೨೬ ) ಎಂಬುದರಿಂದ ಣಿಚ್. **ಅಚೋಞ್ಣಿತಿ** ಎಂಬುದರಿಂದ ಧಾತುವಿಗೆ ವೃದ್ಧಿ. ಆವಾದೇಶ. ಣಿಜಂತದಮೇಲೆ ಶತೃ ಪ್ರತ್ಯಯ. ಶಪ್ ವಿಕರಣ. ಅದನ್ನು ನಿಮಿತ್ತೀಕರಿಸಿ ಣಿಚಿಗೆ ಗುಣ. ಅಯಾದೇಶ ಪ್ರಥಮಾ ಬಹುವಚನಾಂತರೂಪ ಲಸಾರ್ವಧಾತುಕ ಅನುದಾತ್ತವಾಗುವುದರಿಂದ ಣಿಚ್‌ಸ್ವರ ಉಳಿಯುತ್ತದೆ. ಪದಕಾಲ ದಲ್ಲಿ ಛಾಂದಸವಾಗಿ ಧಾತುವಿನ ಉಪಧೆಗೆ ಹ್ರಸ್ವ.

**ಹವ್ಯಾ**—ಹವ್ಯಾನಿ ಎಂದು ರೂಪವಾದಾಗ **ಶೇಶ್ಛಂದಸಿ ಬಹುಲಮ್** (ಪಾ. ಸೂ. ೬-೧-೭೦) ಎಂಬು ದರಿಂದ ಶಿಗೆ ಲೋಪ- ಅಥವಾ ತೃತೀಯಾಏಕವಚನಕ್ಕೆ **ಸುಪಾಂ ಸುಲುಕ್** ಎಂಬುದರಿಂದ ಅದಕ್ಕೆ ಡಾದೇಶ.

**ವಿಶ್ವವೇದಸಾ—ಸುಪಾಂ ಸುಲುಕ್** (ಪಾ. ಸೂ. ೭-೧-೩೯) ಎಂಬುದರಿಂದ ದ್ವಿವಚನಕ್ಕೆ ಆಕಾರಾದೇಶ. ಆಮಂತ್ರಿತನಿಘಾತಸ್ವರ ಬರುತ್ತದೆ.

**ಹಿರಣ್ಯಯೇ**—ವಿಕಾರಾರ್ಥದಲ್ಲಿ ಬಂದ ಮಯಟಿನ **ಋತ್ವ್ಯವಾಸ್ತ್ವ್ಯ**—ಎಂಬುದರಿಂದ ಮಕಾರಕ್ಕೆ ಲೋಪವು ನಿಪಾತಿತವಾಗಿದೆ. ಸಪ್ತಮೀಏಕವಚನಾಂತರೂಪ.

**ಪ್ರುಷಾಯಂತೇ**—ಪ್ರುಷ ಪ್ಲುಷ ಸ್ನೇಹನಸೇಚನಪೂರಣೇಷು. ಧಾತು. ಲಟ್ ಪ್ರಥಮಪುರುಷಬಹು ವಚನದಲ್ಲಿ ಝ ಪ್ರತ್ಯಯ. **ಝೋಂತಃ** ಎಂಬುದರಿಂದ ಅಂತಾದೇಶ. **ಕ್ರ್ಯಾದಿಭ್ಯಃ ಶ್ನಾ** ಎಂಬುದರಿಂದ ಶ್ನಾ ವಿಕರಣ. ಇದಕ್ಕೆ ಹಿ ಪರದಲ್ಲಿ ಇಲ್ಲದಿದ್ದರೂ **ಛಂದಸಿಶಾಯಜಪಿ** (ಪಾ. ಸೂ. ೩-೧-೮೪) ಎಂಬುದರಿಂದ ಶಾಯಜಾದೇಶ. ಪರರೂಪ. ಪ್ರತ್ಯಯದ ಟಿಗೆ ಏತ್ವ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಶಾಯಜ್ ಚಿತ್ತಾದುದರಿಂದ **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ॥ ೩ ॥

——— :o: ———

ಸಂಹಿತಾಪಾಠಃ

ಅಚೇತಿ ದಸ್ರಾ ವ್ಯು೧ ನಾಕಮೃಣ್ವಥೋ ಯುಂಜತೇ ವಾಂ ರಥಯುಜೋ

ದಿವಿಷ್ಟಿಷ್ವಧ್ವಸ್ಮಾನೋ ದಿವಿಷ್ಟಿಷು ।

ಅಧಿ ವಾಂ ಸ್ಥಾಮ ವಂಧುರೇ ರಥೇ ದಸ್ರಾ ಹಿರಣ್ಯಯೇ ।

ಪಥೇವ ಯಂತಾವನುಶಾಸತಾ ರಜೋಽಂಜಸಾ ಶಾಸತಾ ರಜಃ ॥ ೪ ॥

ಪದಪಾಠಃ

ಅಚೇತಿ । ದಸ್ರಾ । ವಿ । ಊಂ ಇತಿ । ನಾಕಂ । ಋಣ್ವಥಃ । ಯುಂಜತೇ । ವಾಂ । ರಥಽಯುಜಃ । ದಿವಿ-

ಷ್ಟಿಷು । ಅಧ್ವಸ್ಮಾನಃ । ದಿವಿಷ್ಟಿಷು ।

ಅಧಿ । ವಾಂ । ಸ್ಥಾಮ । ವಂಧುರೇ । ರಥೇ । ದಸ್ರಾ । ಹಿರಣ್ಯಯೇ ।

ಪಥಾಽಇವ । ಯಂತೌ । ಅನುಽಶಾಸತಾ । ರಜಃ । ಅಂಜಸಾ । ಶಾಸತಾ । ರಜಃ ॥ ೪ ॥

ಸಾಯಣಭಾಷ್ಯಂ

ಹೇ ದಸ್ರಾ ದಸ್ರಾವಶ್ವಿನೌ ಅಚೇತಿ।ವಕ್ಷ್ಯಮಾಣಂ ಯುಷ್ಮಚ್ಚೇಷ್ಟಿತಂ ಜ್ಞಾಯತೇ ಸರ್ವೈಃ।ಕಿಂತದಿತಿ ತದುಚ್ಯತೇ । ನಾಕಂ ಸ್ವರ್ಗಂ ವ್ಯೃಣ್ವಥಃ । ವಿಶೇಷೇಣ ಗಚ್ಛಥಃ ॥ ಋಣು ಗತೌ ತಾನಾದಿಕಃ । ಲೇಟ್ಯ-ಡಾಗಮಃ ॥ ಯಜ್ಞಸಂಪೂರ್ತ್ಯನಂತರಮಿತಿ ಯಾವತ್ । ಉಶಬ್ದೋಽವಧಾರಣೇ । ಯದ್ವಾ । ನಾಕಂ । ಅಕಂ ದುಃಖಂ । ತದ್ರಹಿತಂ ಯಜ್ಞಮೃಣ್ವಥಃ। ವಿಶೇಷೇಣ ಗಚ್ಛತ ಏವ । ತದರ್ಥಂ ವಾಂ ರಥಯುಜೋ ಯುಷ್ಮತ್ಸಂಬಂಧಿನೋ ರಥಸ್ಯ ಯೋಜಯಿತಾರಃ ಸಾರಥಯೋ ದಿವಿಷ್ಟಿಷು ಸ್ವರ್ಗಸ್ಯೈಷಣೇಷು ದ್ಯೋತ-ನಾತ್ಮಕಸ್ಯ ಯಜ್ಞಸ್ಯೈಷಣೇಷು ಗಮನೇಷು ವಾ ನಿಮಿತ್ತಭೂತೇಷು ಯುಂಜತೇ । ಅಶ್ವಾನ್ಯೋಜಯಂತಿ ರಥೇ । ಯುಕ್ತೇ ರಥೇ ವಾ ಯುಷ್ಮಾನ್ । ತ ಏವ ವಿಶೇಷ್ಯಂತೇ । ದಿವಿಷ್ಟಿಷು ದಿವೋ ಗಮನೇಷು ನಿರಾಲಂಬಾಕಾಶಗಮನೇಷ್ವಧ್ವಸ್ಮಾನೋ ರಥಸ್ಯ ತದಾಶ್ರಿತಸ್ಯ ಚ ಧ್ವಂಸಮಕುರ್ವಾಣಾಃ । ಕಿಂಚ ಹೇ ದಸ್ರಾಶ್ವಿನೌ ವಾಂ ಯುವಯೋರ್ವಂಧುರೇ ಬಂಧುರತ್ರಯಯುಕ್ತೇ । ಯುಗಬಂಧನಾಧಾರಃ ಕಾಷ್ಠ-ವಿಶೇಷೋ ಬಂಧುರಂ । ತಾದೃಶತ್ರಯಯುಕ್ತತ್ವಂ ರಥೋ ಯೋ ವಾಂ ತ್ರಿವಂಧುರಃ । ಋ ೮-೨೨-೫ । ಇತ್ಯಾದಿಷು ಪ್ರಸಿದ್ಧಂ । ಹಿರಣ್ಯಯೇ ಹಿರಣ್ಮಯೇ ರಥೇಽಧಿ ತಾದೃಶಸ್ಯ ರಥಸ್ಯೋಪರಿ ಸ್ಥಾಮ । ಅಸ್ಥಾಪಯಾಮ ॥ ಛಾಂದಸೇ ಲಙಿ ಬಹುಲಂ ಛಂದಸೀತ್ಯಡಭಾವಃ । ಆದ್ಯುದಾತ್ತಶ್ಛಾಂದಸಃ ॥ ಕೀದೃಶೌ । ಪಥೇವ ಸುಪಥೇನ ಮಾರ್ಗೇಣ ನಿರಾಲಂಬ ಆಕಾಶೇ ರಜೋ ರಂಜನಾತ್ಮಕಂ ಸ್ವರ್ಗಂ ಪ್ರತಿ ಯಂತೌ ಗಚ್ಛಂತೌ । ಲೋಕಾ ರಜಾಂಸ್ಯುಚ್ಯಂತ ಇತ್ಯುಕ್ತತ್ವಾತ್ । ಅನುಶಾಸತಾನನುಕೂಲಾಞ್ಛತ್ರೂನ-ನುಶಾಸತೌ ವಿಧೇಯೀಕುರ್ವಂತೌ ॥ ಶಾಸೇಃ ಶತರಿ ಜಕ್ಷಿತ್ಯಾದಯ ಇತ್ಯಭ್ಯಸ್ತತ್ವಾದಭ್ಯಸ್ತಾನಾಮಾದಿ-ರಿತ್ಯಾದ್ಯುದಾತ್ತತ್ವಂ ॥ ಕಿಂಚಾಂಜಸಾ ಮುಖ್ಯತ್ವೇನ ಪ್ರಕೃಷ್ಟಂ ರಜ ಉದಕಂ ವೃಷ್ಟಿಲಕ್ಷಣಂ ಶಾಸತಾ ಶಾಸತೌ ಬಲಾದ್ವಿಧೇಯೀಕುರ್ವಂತೌ ॥

### ಪ್ರತಿಪದಾರ್ಥ

**ದಸ್ರಾ**—ಎಲೈ ಅಶ್ವಿನೀದೇವತೆಗಳೇ | **ಅಚೇತಿ**—(ನಿಮ್ಮ ಉದ್ದಿಶ್ಯವು) ತಿಳಿಯಲ್ಪಟ್ಟಿದೆ (ಅದೇನೆಂದರೆ) | **ನಾಕಂ**—ಸ್ವರ್ಗಾಭಿಮುಖವಾಗಿ | ಊಂ—ನಿಶ್ಚಯವಾಗಿಯೂ | **ವಿ ಋಣ್ವಥಃ**—ಹೋಗುತ್ತಿದ್ದೀರಿ | **ದಿವಿಷ್ಟಿಷು**—(ಆಲಂಬನವಿಲ್ಲದ) ಆಕಾಶಮಾರ್ಗದಲ್ಲಿ | **ಅಧ್ವಸ್ಮಾನಃ**—(ನಿಮ್ಮ ರಥವನ್ನು) ತೊಂದರೆಗೆ ಸಿಲುಕಿಸದ | **ವಾಂ**—ನಿಮ್ಮ | **ರಥಯುಜಃ**—ಸಾರಥಿಗಳು | **ದಿವಿಷ್ಟಿಷು**—ಸ್ವರ್ಗಗಮನಕ್ಕಾಗಲಿ ಅಥವಾ ಯಜ್ಞಗಮನಕ್ಕಾಗಲಿ | **ಯುಂಜತೇ**— (ಕುದುರೆಗಳನ್ನು ರಥಕ್ಕೆ) ಕಟ್ಟುತ್ತಾರೆ | **ದಸ್ರಾ**— ಎಲೈ ಅಶ್ವಿನೀದೇವತೆಗಳೇ | **ಪಥೇವ**—ಶ್ರೇಷ್ಠವಾದ ಮಾರ್ಗದಲ್ಲಿಯೇ | **ಅನುಶಾಸತಾ**—ಶತ್ರುಗಳನ್ನು ಶಿಕ್ಷಿಸುತ್ತಾ | **ರಜಃ**—ಸ್ವರ್ಗಕ್ಕೆ | **ಯಂತಾ**—ಹೋಗುವವರಾಗಿಯೂ | **ರಜಃ**—ವೃಷ್ಟ್ಯುದಕವನ್ನು | **ಅಂಜಸಾ**—ಪ್ರಕೃಷ್ಟವಾಗಿ | **ಶಾಸತಾ**—ಬೀಳಿಸುವವರಾಗಿಯೂ ಆದ | **ವಾಂ**—ನಿಮ್ಮನ್ನು | **ವಂಧುರೇ**—ತ್ರಿವಂಧುರದಿಂದ ಕೂಡಿದುದೂ | **ಹಿರಣ್ಯಯೇ**—ಸುವರ್ಣಮಯವಾದುದೂ ಆದ | **ರಥೇ**—ರಥದಲ್ಲಿ | **ಅಧಿ ಸ್ಥಾಮ**—ಕುಳ್ಳಿರಿಸುತ್ತೇವೆ

### ॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ನಿಮ್ಮ ಉದ್ದಿಶ್ಯವನ್ನು ನಾವು ತಿಳಿದಿದ್ದೇವೆ. ಅದೇನೆಂದರೆ ನೀವು ಸ್ವರ್ಗಾಭಿಮುಖವಾಗಿ ಹೋಗಲು ಇಷ್ಟವುಳ್ಳವರಾಗಿದ್ದೀರಿ. ಆಲಂಬನವಿಲ್ಲದ ಆಕಾಶಮಾರ್ಗದಲ್ಲಿ ತೊಂದರೆಗೆ ಸಿಲುಕಿಸದ ನಿಮ್ಮ ಸಾರಥಿಗಳು ನೀವು ಸ್ವರ್ಗವನ್ನು ಹೋಗಿ ಸೇರಲು ನಿಮ್ಮ ರಥಕ್ಕೆ ಕುದುರೆಗಳನ್ನು ಕಟ್ಟುತ್ತಾರೆ. ಎಲೈ ಅಶ್ವಿನೀದೇವತೆಗಳೇ, ಶ್ರೇಷ್ಠವಾದ ಮಾರ್ಗದಲ್ಲಿ ನೀವು ಹೋಗುತ್ತಾ ಶತ್ರುಗಳನ್ನು ಶಿಕ್ಷಿಸುವವರಾಗಿಯೂ, ಮಳೆಯನ್ನು ಸುರಿಸುವವರಾಗಿಯೂ ಇರುವ ನಿಮ್ಮನ್ನು ನಿಮ್ಮ ಸುವರ್ಣಮಯವಾದ ರಥದಲ್ಲಿ ಕುಳ್ಳಿರಿಸುತ್ತೇವೆ.

## English Translation

Dasras, your purpose is known : you would repair to heaven : your charioteers harness (your steeds) for your heavenward journey ; the horses that injure not (the car) on your journey to heaven· We have placed you, Dasras, in your golden three-shafted chariot, going by an (easy) road to heaven, humiliators (of enemies), and principal regulators of the rain·

### ವಿಶೇಷವಿಷಯಗಳು

**ನಾಕಂ—ಸ್ವರ್ಗಂ**-ಸ್ವರ್ಗಲೋಕವನ್ನು, **ಋಣ್ವಥಃ**-ಹೋಗಿ ಸೇರುತ್ತೀರಿ ಅಥವಾ **ನಾಕಂ**-ಯಜ್ಞವನ್ನು ಕುರಿತು ಬಂದು ಸೇರುತ್ತೀರಿ ಎಂದು **ನಾಕ**ಶಬ್ದಕ್ಕೆ ಎರಡು ವಿಧವಾದ ಅರ್ಥವನ್ನು ಹೇಳಿದ್ದಾರೆ. **ನಾಕ** ಶಬ್ದಕ್ಕೆ ಶಬ್ದವ್ಯುತ್ಪತ್ತಿಯಿಂದ **ಯಜ್ಞ**ವೆಂದರ್ಥವೆಂದು ಹೇಳುವುದು ಸಾಂಪ್ರದಾಯಿಕವಾದ ಅರ್ಥವೆಂದು ಕಂಡು ಬರುವುದಿಲ್ಲ. **ಸ್ವರ್ಗ**ವೆಂಬುದೇ ಹೆಚ್ಚು ರೂಢಿಯಲ್ಲಿರುವ ಅರ್ಥ. **ಆದಿತ್ಯ** ಪರ್ಯಾಯವಾಗಿಯೂ ಈ ಪದವು ಉಪಯೋಗಿಸಲ್ಪಟ್ಟಿದೆ. ನಿರುಕ್ತಕಾರರು ಈ ಪದವನ್ನು ೬ **ಸಾಧಾರಣ** ನಾಮಗಳಲ್ಲಿ ಸೇರಿಸಿರುವುಗಳ ಅರ್ಥವನ್ನು ಸಾಧಾರಣವೆಂದು ವಿವರಿಸುತ್ತಾ ಸಾಧಾರಣಾನ್ಯುತ್ತರಾಣಿ **ಷಟ್ ದಿವಶ್ಚಾದಿತ್ಯಸ್ಯ ಚ** | **ದ್ಯುಲೋಕಕನ್ಯಾ**

ಆದಿತ್ಯನಿಗೂ ಸಾಧಾರಣವಾದ ಪರ್ಯಾಯಪದಗಳೆಂದೂ ತಿಳಿಸಿದ್ದಾರೆ. (ನಿ ೨-೧೩) ಅನಂತರ ಈ ಶಬ್ದದ ನಿರ್ವಚನವನ್ನು ಮಾಡುತ್ತಾ **ನಾಕ ಆದಿತ್ಯೋ ಭವತಿ-ನೇತಾ ರಸಾನಾಂ। ನೇತಾ ಭಾಸಾಂ ಜ್ಯೋತಿಷಾಂ ಪ್ರಣಯಃ।** (ನಿ. ೨-೧೪) ರಸದ ವಾಹಕನೂ ಮತ್ತು ತೇಜೋವಾಹಕನೂ ಆದ ಆದಿತ್ಯನಿಗೆ **ನಾಕ**ವೆಂದು ಹೆಸರು ಎಂದು ಆದಿತ್ಯನ ಪರ್ಯಾಯವಾಗಿರುವುದನ್ನು ತಿಳಿಸಿ, **ಅಥ ದ್ಯೌಃ ಕಮಿತಿ ಸುಖನಾಮ, ತತ್ಪ್ರತಿಷಿದ್ಧಂ ಪ್ರತಿಷಿದ್ಧ್ಯೇತ। ಕಂ** ಎಂಬುದು ಸುಖದ ಪರ್ಯಾಯನಾಮ; ಸುಖವಿಲ್ಲದಿರುವುದು **ಅಕಂ** ಅದರ ಅಭಾವ ಎಂದರೆ ಸುಖಾಭಾವವಿಲ್ಲದಿರುವುದು ; ದುಃಖರಹಿತವಾದುದು ಎಂದರ್ಥ ಎಂದು ವಿವರಿಸಿ,

**ನ ವಾ ಅಮುಂ ಲೋಕಂ ಜಗ್ಮುಷೇ ಕಿಂಚ ನಾಕಂ।**

(ಕಾಠಕ ಸಂ. ೨೧-೨)

ಎಂಬ ವಾಕ್ಯವನ್ನುದಹರಿಸಿ **ನ ವಾ ಅಮುಂ ಲೋಕಂ ಗತವತೇ ಕಿಂಚ ನಾಸುಖಂ, ಪುಣ್ಯಕೃತೋ ಹ್ಯೇವ ತತ್ರ ಗಚ್ಛಂತಿ।** ಈ ಲೋಕಕ್ಕೆ ಹೋದವರಿಗೆ ದುಃಖವೇ ಇಲ್ಲ. ಸುಕೃತಿಗಳಿಗೆ ಮಾತ್ರ ಈ ಲೋಕಕ್ಕೆ ಪ್ರವೇಶವುಂಟು ಎಂದು ನಾಕಶಬ್ದದ ಅರ್ಥವನ್ನು ತಿಳಿಸುತ್ತಾರೆ. ಋಕ್ಸಂಹಿತೆಯಲ್ಲಿ ಈ ಪದವು **ಆದಿತ್ಯನ** ಪರ್ಯಾಯವಾಗಿ ಕೆಲವು ಕಡೆಯೂ **ಸ್ವರ್ಗದ** ಪರ್ಯಾಯವಾಗಿ ಕೆಲವು ಕಡೆಯೂ ಉಪಯೋಗಿಸಲ್ಪಟ್ಟಿದೆ.

**ತಿಸ್ರಃ ಪೃಥಿವೀರುಪರಿ ಪ್ರವಾ ದಿವೋ ನಾಕಂ ರಕ್ಷೇಥೇ ದ್ಯುಭಿರಕ್ತುಭಿರ್ಹಿತಂ।**

(ಋ. ಸಂ. ೧-೩೪-೮)

**ಯೇ ನಾಕಸ್ಯಾಧಿ ರೋಚನೇ ದಿವಿ ದೇವಾಸ ಆಸತೇ।**

(ಋ. ಸಂ. ೧-೧೯-೬)

ಇತ್ಯಾದಿ ಋಕ್ಕುಗಳಲ್ಲಿ **ಸೂರ್ಯನ** ಪರ್ಯಾಯವಾಗಿಯೂ,

**ತೇಽವರ್ಧಂತ ಸ್ವತವಸೋ ಮಹಿತ್ವನಾ ನಾಕಂ ತಸ್ಥುರುರು ಚಕ್ರಿರೇ ಸದಃ।**

(ಋ. ಸಂ. ೧-೮೫-೭)

**ತೇ ಹ ನಾಕಂ ಮಹಿಮಾನಃ ಸಚಂತ ಯತ್ರ ಪೂರ್ವೇಸಾಧ್ಯಾಃ ಸಂತಿ ದೇವಾಃ।**

(ಋ. ಸಂ. ೧-೧೬೪-೫೦)

ಇತ್ಯಾದಿ ಋಕ್ಕುಗಳಲ್ಲಿ **ಸ್ವರ್ಗ**ಪರ್ಯಾಯವಾಗಿಯೂ ಇದೆ.

**ವೃಷ್ಯೈವ ಕಪಿಲೋ ಭೂತ್ವಾ ಯನ್ನಾಕಮಧಿರೋಹತಿ।**

(ಬೃ. ದೇ. ೨-೬೬)

ಎಂಬ ಬೃಹದ್ದೇವತಾವಾಕ್ಯದಲ್ಲಿ **ಅಂತರಿಕ್ಷ**ವೆಂಬುದು ಸ್ಪಷ್ಟವಾಗಿದೆ.

**ಇತೋಽಸಾವಾದಿತ್ಯೋ ದ್ವಾವಿಂಶೇನ ಪರಮಾದಿತ್ಯಾಜ್ಜಯತಿ ತನ್ನಾಕಂ ತದ್ವಿಶೋಕಂ।**

(ಛಾ. ಉ. ೨-೧೦-೫)

ಎಂಬ ಛಾಂದೋಗ್ಯೋಪನಿಷತ್ತಿನ ವಾಕ್ಯದಲ್ಲಿ ಶೋಕರಹಿತವಾದ **ಸ್ವರ್ಗ**ಲೋಕವು ಆದಿತ್ಯನ ಲೋಕಕ್ಕಿಂತ ಪರವಾದುದೆಂದು ಹೇಳಿದೆ.

ಶತಪಥಬ್ರಾಹ್ಮಣದಲ್ಲೂ ತೈತ್ತಿರೀಯ ಉಪನಿಷತ್ತಿನಲ್ಲೂ ಬ್ರಹ್ಮವಿತ್ತಾದ ಮುದ್ಗಲಪುತ್ರನಿಗೆ **ನಾಕ** ಎಂಬ ಹೆಸರು ಪ್ರಸಿದ್ಧವಾಗಿದೆ. ದುಃಖರಹಿತನೆಂದರ್ಥ.

ರಜಃ—ರಜಶ್ಶಬ್ದವು ದ್ವಿರುಕ್ತವಾಗಿದೆ. ಮೊದಲನೆಯದಕ್ಕೆ ರಂಜನಾತ್ಮಕವಾದ ಸ್ವರ್ಗವೆಂದೂ ಎರಡನೆಯದಕ್ಕೆ ಉದಕವೆಂದೂ ಸಾಯಣರು ಅರ್ಥಮಾಡಿದ್ದಾರೆ. ಈ ಎರಡು ಅರ್ಥಗಳಿಗೂ ನಿರುಕ್ತದ ಸಮರ್ಥನೆಯಿದೆ- ರಜಃ । ರಜೋ ರಜತೇರ್ಜ್ಯೋತೀ ರಜ ಉಚ್ಯತೇ । ಉದಕಂ ರಜ ಉಚ್ಯತೇ ಲೋಕಾ ರಜಾಂಸ್ಯುಚ್ಯಂತೇ । (ನಿ. ೪-೧೯) ಬೆಳಗು ಎಂಬರ್ಥವನ್ನು ಕೊಡುವ ರಂಜ್ ಧಾತುವಿನಿಂದ ನಿಷ್ಪನ್ನವಾಗಿ ರಜಸ್ ಶಬ್ದಕ್ಕೆ ಜ್ಯೋತಿಯೆಂದೂ, ಉದಕವೆಂದೂ, ಲೋಕಗಳೆಂದೂ ಅರ್ಥವಾಗುತ್ತದೆ. ಅಲ್ಲದೆ, ಅಸೃಗಹನೀ ರಜಸೀ ಉಚ್ಯೇತೇ । ರಕ್ತ, ಅಹಸ್ಸು ಇವುಗಳಿಗೂ ಇದು ಪರ್ಯಾಯನಾಮವಾಗಿದೆಯೆಂದು ನಿರುಕ್ತ ವಚನವಿದೆ. ನಿರುಕ್ತಕಾರರು,

ರಜಾಂಸಿ ಚಿತ್ರಾ ವಿ ಚರಂತಿ ತನ್ಯವೋ ದಿವಃ ಸದ್ಮನ್ರಾಜಾ ಪಯಸಾ ನ ಉಕ್ಷತಂ ।
(ಋ. ಸಂ. ೫-೬೩-೫)

ಎಂಬ ಋಕ್ಕನ್ನುದಹರಿಸಿ ರಜಾಂಸಿ ಎಂಬ ಪದಕ್ಕೆ ಲೋಕಗಳನ್ನು ಎಂದರ್ಥವಾಗುತ್ತದೆಂದು ತೋರಿಸಿದ್ದಾರೆ. ನಿರುಕ್ತದ ೧೦ನೇ ಅಧ್ಯಾಯದ ೪೪ನೆಯ ಖಂಡದಲ್ಲಿ,

ಅಬ್ಜಾಮುಕ್ಥೈರಹಿಂ ಗೃಣೀಷೇ ಬುಧ್ನೇ ನದೀನಾಂ ರಜಃಸು ಷೀದನ್ ।
(ಋ. ಸಂ. ೭-೩೪-೧೬)

ಎಂಬ ಋಕ್ಕನ್ನುದಹರಿಸಿ ಅಲ್ಲಿ ರಜಃಸು ಎಂಬ ಪದಕ್ಕೆ ಉದಕೇಷು ಉದಕಗಳಲ್ಲಿ ಎಂಬರ್ಥವಾಗುತ್ತದೆಂದೂ, ೧೨ ಅಧ್ಯಾಯದ ೭ನೆಯ ಖಂಡದಲ್ಲಿ,

ಏತಾ ಉ ತ್ಯಾ ಉಷಸಃ ಕೇತುಮಕ್ರತ ಪೂರ್ವೇ ಅರ್ಧೇ ರಜಸೋ ಭಾನುಮಂಜತೇ ।
(ಋ. ಸಂ. ೧-೯೨-೧)

ಎಂಬ ಋಕ್ಕನ್ನುದಹರಿಸಿ ಇಲ್ಲಿ ರಜಸಃ ಎನ್ನುವುದಕ್ಕೆ ಅಂತರಿಕ್ಷವೆಂದೂ ಅರ್ಥಮಾಡಿದ್ದಾರೆ.

ತ್ರೀಣಿ ಭಾಂತಿ ರಜಾಂಸ್ಯಸ್ಯ ಯತ್ಪದಾನಿ ತು ತೇಜಸಾ ।
(ಬೃ. ದೇ. ೨-೬೪)

ಎಂದು ಬೃಹದ್ದೇವತಾಕಾರರು ತ್ರಿವಿಕ್ರಮನಾದ ವಿಷ್ಣುವು ಮೂರು ಲೋಕಗಳನ್ನು ತನ್ನ ಪಾದಗಳಿಂದ ಪ್ರಕಾಶಿಸುವಂತೆ ಮಾಡಿದನು ಎಂದು ರಜಾಂಸಿ ಎಂಬ ಶಬ್ದದ ಅರ್ಥವನ್ನು ಹೇಳಿದ್ದಾರೆ. ಪ್ರಕೃತವಾದ ಋಕ್ಕಿನಲ್ಲಿ ಮೊದಲನೆಯ ರಜಃ ಶಬ್ದಕ್ಕೆ ರಂಜನಾತ್ಮಕವಾದ ಅಂತರಿಕ್ಷವೆಂದೂ ಎರಡನೆಯದಕ್ಕೆ ವೃಷ್ಟಿರೂಪವಾದ ಉದಕವೆಂದೂ ಅರ್ಥವಾಗುತ್ತದೆ.

ಹಿರಣ್ಯಯೇ ರಥೇ—ಹಿರಣ್ಯಯೇ ಹಿರಣ್ಮಯೇ ಮಧುಪೂರ್ಣೇ ರಥೇ । ಮಧುವಿನಿಂದ ತುಂಬಿದ ರಥದಲ್ಲಿ ಎಂದು ಅಶ್ವಿನೀದೇವತೆಗಳ ರಥದ ವರ್ಣನೆಯಿದೆ. ಸಾಯಣರು,

ತ್ರಯಃ ಪವಯೋ ಮಧುವಾಹನೇ ರಥೇ ಸೋಮಸ್ಯ ವೇನಾಮನು ವಿಶ್ವ ಇದ್ವಿದುಃ ।
(ಋ. ಸಂ. ೧-೩೪-೨)

ಎಂಬ ಋಕ್ಕನ್ನುದಹರಿಸಿ ಅಶ್ವಿನೀದೇವತೆಗಳ ರಥವು ಮಧು ಪೂರ್ಣವಾಗಿರುವ ವರ್ಣನೆಯನ್ನು ತಿಳಿಸಿದ್ದಾರೆ.

**ವಂಧುರೇ— ವಂಧುರತ್ರಯಯುಕ್ತೇ ।** ಮೂರುಮೂಕಿಗಳುಳ್ಳ ರಥ. **ರಥೋ ಯೋ ವಾಂ ತ್ರಿವಂಧುರಃ ।** (ಋ. ಸಂ. ೮-೨೨-೫) ಇತ್ಯಾದಿ ಋಕ್ಕುಗಳಲ್ಲಿ ಅಶ್ವಿನೀದೇವತೆಗಳ **ವಂಧುರತ್ರಯ**ವುಳ್ಳ ರಥದ ವರ್ಣನೆಯಿರುವಂತೆ ಇಲ್ಲಿಯೂ **ವಂಧುರತ್ರ**ಯವುಳ್ಳ ರಥವೆಂದು ಹೇಳಿದೆ.

**ಅಂಜಸಾ—ಮುಖ್ಯತ್ವೇನ, ಪ್ರಕೃಷ್ಟಂ ।** ಉತ್ಕೃಷ್ಟವಾಗಿ ಎಂದು ಅರ್ಥಮಾಡಿದ್ದಾರೆ. ಸಾಧಾರಣ ವಾಗಿ **ಅಂಜಸ್** ಶಬ್ದಕ್ಕೆ ನೇರವಾಗಿ ಎಂದರೆ ಸಾಕ್ಷಾತ್ತಾಗಿ ಎಂದರ್ಥವಾಗುತ್ತದೆ. ಇಲ್ಲಿ ಅಶ್ವಿನೀದೇವತೆಗಳೇ ಸಾಕ್ಷಾತ್ತಾಗಿ ವೃಷ್ಟಿಗೆ ಕಾರಣರಾದರು ಎಂದರ್ಥ. **ಶತಪಥಬ್ರಾಹ್ಮಣ** ಮತ್ತು **ತೈತ್ತಿರೀಯ ಸಂಹಿತೆಗಳಲ್ಲಿ ಅಂಜಸಾಯನ** ಎಂಬ ಪಾರಿಭಾಷಿಕ ಶಬ್ದಪ್ರಯೋಗವಿದೆ. ಅಲ್ಲಿ ನೇರವಾದ ಕುಟಿಲವಲ್ಲದ ಮಾರ್ಗವೆಂದರ್ಥ ವಾಗುತ್ತದೆ.

ವ್ಯಾಕರಣಪ್ರಕ್ರಿಯಾ

**ದಸ್ರಾ—ಸುಪಾಂ ಸುಲುಕ್—** ಎಂಬುದರಿಂದ ವಿಭಕ್ತಿಗೆ ಆಕಾರಾದೇಶ. ಆಮಂತ್ರಿತನಿಘಾತಸ್ವರ ಬರುತ್ತದೆ.

**ಅಚೇತಿ—**ಚಿತೀ ಸಂಜ್ಞಾನೇ ಧಾತು. ಕರ್ಮಣಿ ಲುಙ್ ಪ್ರಥಮಪುರುಷ ಏಕವಚನದಲ್ಲಿ ತಪ್ರತ್ಯಯ. **ಚಿಣ್ ಭಾವಕರ್ಮಣೋಃ** (ಪಾ. ಸೂ. ೩-೧-೬೬) ಎಂಬುದರಿಂದ ಚ್ಲಿಗೆ ಚಿಣ್. ಅದನ್ನು ನಿಮಿತ್ತೀಕರಿಸಿ ಧಾತುವಿನ ಲಘೂಪಧೆಗೆ ಗುಣ. **ಚಿಣೋಲುಕ್** ಎಂಬುದರಿಂದ ಪ್ರತ್ಯಯಕ್ಕೆ ಲುಕ್. ಅಂಗಕ್ಕೆ ಅಡಾಗಮ ಪಾದಾದಿಯಲ್ಲಿರು ವುದರಿಂದ ನಿಘಾತಸ್ವರ ಬರುವುದಿಲ್ಲ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ

**ಋಣ್ವಥಃ—**ಋಣು ಗತೌ ಧಾತು. ತನಾದಿ. ಲೇಟ್ ಮಧ್ಯಮಪುರುಷದ್ವಿವಚನದಲ್ಲಿ ಥಸ್ ಪ್ರತ್ಯಯ. **ಲೇಟೋಡಾಟೌ** (ಪಾ ಸೂ. ೩-೪-೯೪) ಎಂಬುದರಿಂದ ಅದಕ್ಕೆ ಆಡಾಗಮ. **ತನಾದಿಕೃಞ್ಭ್ಯಉಃ** (ಪಾ. ಸು. ೩-೧-೭೯) ಎಂಬುದರಿಂದ ಉ ವಿಕರಣ. ಇದಕ್ಕೆ ಯಣಾದೇಶ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ನಾಕಮ್**—ನ ಅಕಃ ನಾಕಃ **ನಲೋಪೋ ನಞಃ** ಎಂಬುದರಿಂದ ನಲೋಪಪ್ರಾಪ್ತವಾದರೆ **ನಭ್ರಾಣ್-ನಪಾತ್**—(ಪಾ. ಸೂ. ೬-೩-೭೫) ಎಂಬುದರಿಂದ ಪ್ರಕೃತಿಭಾವವು ನಿಪಾತಿತವಾಗಿದೆ. **ತತ್ಪುರುಷೇತು**—(ಪಾ. ಸೂ. ೬-೨-೨) ಎಂಬುದರಿಂದ ಅವ್ಯಯ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಯುಞ್ಜತೇ**—ಯುಜಿರ್ ಯೋಗೇ. ಧಾತು. ಪ್ರಯೋಜಕವ್ಯಾಪಾರ ತೋರುವುದರಿಂದ ಅಂತರ್ಭಾವಿತ ಣ್ಯರ್ಥಕವಾದ ಧಾತು. ಲಟ್ ಪ್ರಥಮಪುರುಷಬಹುವಚನಾಂತರೂಪ. ತಿಙಂತದ ಪರದಲ್ಲಿರುವುದರಿಂದ **ಅತಿಙಃ** ಎಂದು ನಿಷೇಧವಾಡಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯದ ಆದ್ಯುದಾತ್ತ ಸ್ವರ ಬರುತ್ತದೆ.

**ರಥಯುಜಃ**—ರಥೇ ಯೋಜಯಂತಿ ಇತಿ ರಥಯುಜಃ. ಹಿಂದಿನಂತೆ ಅಂತರ್ಭಾವಿತಣ್ಯರ್ಥಕವಾದ ಯುಜಿರ್ ಧಾತುವಿಗೆ ಕ್ವಿಪ್ ಪ್ರತ್ಯಯ ಪ್ರಥಮಾ ಬಹುವಚನಾಂತರೂಪ. **ಗತಿಕಾರಕೋಪಪದಾತ್ ಕೃತ್** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ದಿವಿಷ್ಟಿಷು**—ಇಷ್ಟಯಃ ಏಷಣಾನಿ. ದಿವಃ ಸ್ವರ್ಗಸ್ಯ ಏಷಣಾನಿ ಯೇಷು ಯಾಗೇಷು ತೇ ದಿವಿಷ್ಟಯಃ **ಸರ್ವೇ ವಿಧಯಶ್ಛಂದಸಿ ವಿಕಲ್ಪ್ಯಂತೇ** ಎಂಬ ವಚನದಿಂದ **ದಿವಉತ್** (ಪಾ. ಸೂ. ೬-೧-೧೩೧) ಎಂಬುದರಿಂದ

ಉತ್ವ ಬರುವುದಿಲ್ಲ. **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್** ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಸ್ಥಾಮ**—ಷ್ಠಾ ಗತಿನಿವೃತ್ತೌ. ಧಾತು. ವರ್ತಮಾನಾರ್ಥದಲ್ಲಿ **ಛಂದಸಿಲುಙ್ಲಙ್ಲಿಟಃ** (ಪಾ. ಸೂ. ೩-೪-೬) ಎಂಬುದರಿಂದ ಲಙ್. ಉತ್ತಮಪುರುಷ ಬಹುವಚನದಲ್ಲಿ ಮಸ್ ಪ್ರತ್ಯಯ. **ನಿತ್ಯಂಙಿತಃ** (ಪಾ. ಸೂ. ೩-೪-೯೯) ಎಂಬುದರಿಂದ ಸಕಾರ ಲೋಪ. **ಬಹುಲಂ ಛಂದಸಿ** ಎಂಬುದರಿಂದ ಶಪಿಗೆ ಲುಕ್. ಆದುದರಿಂದ ತಿಷ್ಠಾದೇಶ ಬರುವುದಿಲ್ಲ. **ಬಹುಲಂ ಛಂದಸ್ಯಮಾಙ್ಯೋಗೇಽಪಿ** ಎಂಬುದರಿಂದ ಅಡಾಗಮ ಬರುವುದಿಲ್ಲ. ನಿಘಾತಸ್ವರಕ್ಕೆ ಬದಲಾಗಿ ಛಾಂದಸವಾಗಿ ಆದ್ಯುದಾತ್ತಸ್ವರ ಬರುತ್ತದೆ.

**ಯಂತೌ**—ಇಣ್ ಗತೌ ಧಾತು. ಅದಾದಿ. ಲಡರ್ಥದಲ್ಲಿ ಶತೃಪ್ರತ್ಯಯ. **ಅದಿಪ್ರಭೃತಿಭ್ಯಃಶಪಃ** ಎಂಬುದರಿಂದ ಶಪಿಗೆ ಲುಕ್. **ಇಣೋ ಯಣ್** (ಪಾ. ಸೂ. ೬-೪-೮೧) ಎಂಬುದರಿಂದ ಯಣಾದೇಶ. ದ್ವಿವಚನ ಪರವಾದಾಗ ಉಗಿತ್ತಾದುದರಿಂದ ನುಮಾಗಮ. ಅನುಸ್ವಾರ ಪರಸವರ್ಣ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ

**ಅನುಶಾಸತಾ**—ಶಾಸು ಅನುಶಿಷ್ಟೌ ಧಾತು. ಅದಾದಿ. ಲಡರ್ಥದಲ್ಲಿ ಶತೃಪ್ರತ್ಯಯ. ಜಕ್ಷಿತ್ಯಾದಿಯಲ್ಲಿ ಸೇರಿರುವುದರಿಂದ **ಜಕ್ಷಿತ್ಯಾದಯಃ ಷಟ್** (ಪಾ.ಸೂ. ೬-೧-೬) ಎಂಬುದರಿಂದ ಅಭ್ಯಸ್ತಸಂಜ್ಞಾ ಬರುತ್ತದೆ. ಆದುದರಿಂದ **ಅಭ್ಯಸ್ತಾನಾಮಾದಿಃ** (ಪಾ. ಸೂ. ೬-೧-೧೮೯) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಪ್ರಾದಿಸಮಾಸವಾದಾಗ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. ತೃತೀಯಾಏಕವಚನಾಂತರೂಪ.

**ಅಂಜಸಾ**—ಅಂಜೂ ವ್ಯಕ್ತಿಮ್ರಕ್ಷಣಕಾಂತಿಗತಿಷು. ಧಾತು. ಇದಕ್ಕೆ ಔಣಾದಿಕ ಅಸುನ್‌ಪ್ರತ್ಯಯ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ‖ ೪ ‖

———— :C: ————

ಸಂಹಿತಾಪಾಠಃ

ಶಚೀಭಿರ್ನಃ ಶಚೀವಸೂ ದಿವಾ ನಕ್ತಂ ದಶಸ್ಯತಂ ।

ಮಾ ವಾಂ ರಾತಿರುಪ ದಸತ್ಕದಾ ಚನಾಸ್ಮದ್ರಾತಿಃ ಕದಾ ಚನ ‖ ೫ ‖

ಪದಪಾಠಃ

ಶಚೀಭಿಃ । ನಃ । ಶಚೀವಸೂ ಇತಿ ಶಚೀಽವಸೂ । ದಿವಾ । ನಕ್ತಂ । ದಶಸ್ಯತಂ ।

ಮಾ । ವಾಂ । ರಾತಿಃ । ಉಪ । ದಸತ್ । ಕದಾ । ಚನ । ಅಸ್ಮತ್ । ರಾತಿಃ । ಕದಾ । ಚನ ‖ ೫ ‖

ಸಾಯಣಭಾಷ್ಯಂ

ಹೇ ಶಚೀವಸೂ । ಶಚೀತಿ ಕರ್ಮನಾಮ । ಅಸ್ಮದನುಷ್ಠಿತಜ್ಯೋತಿಷ್ಟೋಮಾದಿಕರ್ಮಧನೌ ಯುವಾಂ ಶಚೀಭಿರಸ್ಮದೀಯೈಃ ಕರ್ಮಭಿರ್ಯಾಗಾದಿಭಿರ್ನಿಮಿತ್ತಭೂತೈರ್ದಿವಾ ನಕ್ತಮಹನಿ ರಾತ್ರೌ ಚ, ದಶಸ್ಯತಂ । ಅಭಿಮತಂ ದದೇಥಾಂ ॥ ದಾಶೃ ದಾನ ಇತ್ಯಸ್ಯೇದಂ ಛಾಂದಸಂ ರೂಪಂ । ಯದ್ವಾ । ದಶಸ್ಯತಿರ್ದಾನಾರ್ಥಃ ಕಂಡ್ವಾದಿಷು ದ್ರಷ್ಟವ್ಯಃ ॥ ವಾಂ ಯುವಯೋಃ ರಾತಿರ್ದಾನಂ ಕದಾ ಚನ ಸರ್ವದಾ ಯಾಗಕಾಲೇಽಯಾಗಕಾಲೇಽಪಿ ಮೋಪ ದಸತ್ । ಮೋಪಕ್ಷೀಣಂ ಭೂತ್ ॥ ದಸು ಉಪಕ್ಷಯೇ । ಲುಙಿ ಪುಷಾದಿದ್ಯುತಾದೀತಿ ಚ್ಲೇರಙ್ ॥ ನ ಕೇವಲಂ ಯುಷ್ಮದೀಯಂ ಅಪಿ ತ್ವಸ್ಮಾಕಮಪಿ ರಾತಿ-ರ್ದಾನಂ ಹವಿರಾದಿಪ್ರದಾನಂ ಸರ್ವವಿಷಯದಾನಂ ವಾರ್ಥಿಭ್ಯಃ ಕದಾ ಚನ ಸರ್ವಾವಸ್ಥಾಯಾಮಪಿ ಮೋಪ ದಸತ್ । ಉಪಕ್ಷೀಣಂ ಮಾ ಭೂತ್ । ಸರ್ವದಾ ವರ್ತತಾಂ । ಅಹಮಪಿ ಸರ್ವದಾ ಯುಷ್ಮಾ-ನುದ್ದಿಶ್ಯ ದದ್ಯಾಂ ಯುವಾಮಪಿ ಮದಭಿಮತಂ ಸರ್ವದಾ ದತ್ತಮಿತ್ಯರ್ಥಃ ॥

ಪ್ರತಿಪದಾರ್ಥ

**ಶಚೀವಸೂ**—(ನಮ್ಮಿಂದ ಅನುಷ್ಠಿಸಲ್ಪಟ್ಟ) ಕರ್ಮಗಳೇ ಧನವಾಗಿ ಉಳ್ಳ ಎಲೈ ಅಶ್ವಿನೀದೇವತೆಗಳೇ । **ನಃ**—ನಮ್ಮ । **ಶಚೀಭಿಃ**—ಕರ್ಮಗಳ ನಿಮಿತ್ತವಾಗಿ ಅನುಗ್ರಹಿಸಲ್ಪಡಬೇಕಾದ (ಧನಗಳನ್ನು) । **ದಿವಾ ನಕ್ತಂ**—ಹಗಲು ರಾತ್ರಿಯೆಲ್ಲಾ (ಅನುಸ್ಯೂತವಾಗಿ) । **ದಶಸ್ಯತಂ**—ಕೊಡಿರಿ । **ವಾಂ**—ನಿಮ್ಮ (ನಿಮ್ಮಿಂದ ಕೊಡಲ್ಪಡಬೇಕಾದ) **ರಾತಿಃ**—ದಾನವು । **ಕದಾ ಚನ**—ಯಾವಾಗಲೂ । **ಮಾ ಉಪ ದಸತ್**—ಕ್ಷಯಿಸದೇ ಇರಲಿ । **ಅಸ್ಮತ್**—ನಮ್ಮಿಂದ ಅರ್ಪಿತಗಳಾಗಬೇಕಾದ । **ರಾತಿಃ**—ಹವಿರಾದಿ ದಾನಗಳೂ ಸಹ । **ಕದಾ ಚನ**—ಯಾವಾಗಲೂ (ನಿಲ್ಲುವುದಿಲ್ಲ)

ಭಾವಾರ್ಥ

ನಾವು ಆಚರಿಸಿದ ಕರ್ಮಗಳೇ ಧನಗಳಾಗಿ ಉಳ್ಳ ಎಲೈ ಅಶ್ವಿನೀದೇವತೆಗಳೇ, ನಮ್ಮ ಕರ್ಮಗಳ ನಿಮಿತ್ತವಾಗಿ ನೀವು ಕೊಡಬೇಕಾದ ಧನಗಳನ್ನು ಅನುಸ್ಯೂತವಾಗಿ ಕೊಡಿರಿ. ನೀವು ನಿಮ್ಮ ದಾನವನ್ನು ಯಾವಾಗಲೂ ನಿಲ್ಲಿಸಬೇಡಿ. ನಾವೂ ಸಹ ನಿಮಗೆ ಅರ್ಪಿಸಬೇಕಾದ ಹವಿರಾದಿದಾನಗಳನ್ನು ಖಂಡಿತವಾಗಿಯೂ ನಿಲ್ಲಿಸುವುದಿಲ್ಲ.

English Translation

Enriched by holy rites, grant us, by day and night, (all good things) on account of our pious acts; never may your donation, never may our (donations) be witheld.

ವಿಶೇಷ ವಿಷಯಗಳು

**ಶಚೀವಸೂ— ಶಚೀತಿ ಕರ್ಮನಾಮ । ಅಸ್ಮದನುಷ್ಠಿತಜ್ಯೋತಿಷ್ಟೋಮಾದಿ ಕರ್ಮಧನೌ ।** ಯಜ್ಞಕರ್ತರಾದ ನಾವು ಅನುಷ್ಠಾನಮಾಡಿದ ಜ್ಯೋತಿಷ್ಟೋಮಾದಿ ಕರ್ಮಗಳೇ ಧನವಾಗಿ ಉಳ್ಳ ಎಂದು ಅಶ್ವಿನೀ ದೇವತೆಗಳನ್ನು ಸಂಬೋಧಿಸಿದೆ. ಯಜ್ಞಗಳಲ್ಲಿ ಅರ್ಪಿಸಿದ ಹವಿರಾದಿಗಳೇ ದೇವತೆಗಳ ಸಂಪತ್ತು ಮತ್ತು ಅದಕ್ಕೆ ಪ್ರತಿಯಾಗಿ ಅವರು ಯಜ್ಞಕರ್ತರಿಗೆ ಧನಾದಿಗಳನ್ನು ಕೊಡುವರು. ಇದು ಪರಸ್ಪರಾಶ್ರಯವಾದ್ದರಿಂದ **ವಾಂ ರಾತಿಃ**

**ಮಾ ಉಪದಸತ್** ; ಅಸ್ಮಾನ್ಪ್ರತಿ ಕದಾಚನ (ಮಾ ಉಪದಸತ್) ಪರಸ್ಪರವಾಗಿ ಪೋಷಕರಾದ ನಮ್ಮ ಮತ್ತು ನಿಮ್ಮ ದಾನಗಳು ಅನುಸ್ಯೂತವಾಗಿ ನೆರವೇರಲಿ ಎಂದು ಪ್ರಾರ್ಥಿಸಿದೆ. ಪೃಥ್ವಿಯಲ್ಲಿ ಮಾನವರು ವಿಧ್ಯುಕ್ತವಾದ ಕರ್ಮಜ್ಞಾನರಹಿತರಾಗಿ ಯಜ್ಞಾದಿಗಳು ನಿಂತುಹೋಗಲು ದೇವತೆಗಳಿಗೆ ಆ ವಿಷಯವಾಗಿ ಚಿಂತೆಯುಂಟಾಗಿ ಪರಿತಪಿಸುತ್ತಿದ್ದುದನ್ನು ಶತಪಥ ಬ್ರಾಹ್ಮಣದಲ್ಲಿ ವರ್ಣಿಸಿದೆ.

**ತತೋಽಶ್ರದ್ಧಾ ಮನುಷ್ಯಾನ್ವಿವೇದ .... ....ತತ ಇತೋ ದೇವಾಃ ಹವಿರ್ನ ಜಗಮಿತಃ ಪ್ರದಾನಾದ್ಧಿ ದೇವಾ ಉಪಜೀವಂತಿ।** (ಶ. ಬ್ರಾ. ೧-೨-೫-೨೪) ಹವಿರಾದಿ ಪ್ರದಾನಗಳಿಂದಲೇ ದೇವತೆಗಳು ಜೀವಿಸುವುದರಿಂದಲೂ, ಕರ್ಮರಾಹಿತ್ಯದಿಂದ ಪ್ರದಾನಾದಿಗಳು ನಿಂತುಹೋದದ್ದರಿಂದ ದೇವತೆಗಳು ಪರಸ್ಪರವಾಗಿ ಆಲೋಚಿಸಿದರೆಂದೂ, ಮುಂದೆ ಕರ್ಮವು ಸಾಂಗವಾಗಿ ನೆರವೇರುವ ಕ್ರಮವನ್ನು ಬೃಹಸ್ಪತಿ ಅಂಗಿರಸನಿಗೆ ಉಪದೇಶಿಸಿದನೆಂದೂ ಕಥೆಯಿದೆ ಅದೇ ರೀತಿಯಾಗಿ ಕರ್ಮಾನುಷ್ಠಾನದಿಂದಲೇ ದೇವತೆಗಳಿಗೆ ಅನ್ನಸಂಪತ್ತು ಸಾಧ್ಯವೆಂಬುದೂ, ಕರ್ಮಗಳೂ, ತದಂಗವಾದ ಸ್ತುತಿಗಳೂ ದೇವತೆಗಳ ಅನ್ನವೆಂಬುದೂ ಅನೇಕ ವಾಕ್ಯಗಳಿಂದ ವಿದಿತವಾಗುತ್ತದೆ.

**ಯಜ್ಞೋ ವೋ ಅನ್ನಂ** (ಶ. ಬ್ರಾ. ೨-೪-೨-೧)

**ಅರ್ಕೋ ವೈ ದೇವಾನಾಮನ್ನಂ ಅನ್ನಂ ಯಜ್ಞೋ....**
(ಶ. ಬ್ರಾ. ೧೨-೮-೧-೨)

ಇತ್ಯಾದಿ ವಾಕ್ಯಗಳಿಂದ ದೇವತೆಗಳಿಗೆ ಶಚೀವಸುವೆಂಬ ವಿಶೇಷಣವನ್ನು ಉಪಯೋಗಿಸುವುದರಿಂದ ಪ್ರಕೃತವಾದ ಋಕ್ಕಿನಲ್ಲಿ **ಶಚೀವಸು**ಗಳಾದ ಅಶ್ವಿನೀದೇವತೆಗಳಿಗೆ ಯಜ್ಞಕರ್ತನು ಶಚಿಗಳನ್ನು ನೆರವೇರಿಸಿ ಹವಿರಾದಿಗಳನ್ನು ಅರ್ಪಿಸುವುದಾಗಿಯೂ ತತ್ಪ್ರತಿಫಲವಾದ ಅವರ ದಾನವನ್ನೂ ಅದೇ ರೀತಿ ಅವಿಚ್ಛಿನ್ನವಾಗಿ ಮುಂದುವರಿಸಬೇಕೆಂದೂ ಪ್ರಾರ್ಥಿಸಿದೆ. ಈ ವಿಧವಾದ ಪರಾಸ್ಪರಾಶ್ರಯವಿರುವುದನ್ನು

**ಯತ್ತಿಷ್ಠನ್ಪ್ರತಿಗೃಣಾತ್ಯಮುಷ್ಯಾ ಏವ ತದಧ್ವರ್ಯುರ್ನೈತಿ ತಿಷ್ಠತೀವ ಹ್ಯಸಾವಥೋ ಅಮೂಮೇವ ತೇನ ಯಜಮಾನೋ ದುಹೇ ಯದಾಸೀನಶ್ಶಗ್ಂಸತಿ ತಸ್ಮಾದಿತಃ ಪ್ರದಾನಂ ದೇವಾ ಉಪಜೀವಂತಿ ಯತ್ತಿಷ್ಠನ್ಪ್ರತಿಗೃಣಾತಿ ತಸ್ಮಾದಮುತಃ ಪ್ರದಾನಂ ಮನುಷ್ಯಾ ಉಪಜೀವಂತಿ ।**
(ತೈ. ಸಂ. ೩-೨-೯-೭)

ಪೃಥ್ವಿಯಿಂದ ಅರ್ಪಿತವಾದ ಸ್ತೋತ್ರ, ಹವಿಸ್ಸು ಇವುಗಳಿಂದ ದೇವತೆಗಳು ಜೀವಿಸುವರು. ಇದಕ್ಕೆ ಪ್ರತಿಯಾಗಿ ದೇವತೆಗಳು ಅನುಗ್ರಹಿಸಿದ ಧನಸಂಪತ್ತುಗಳಿಂದ ಮನುಷ್ಯರು ಜೀವಿಸುತ್ತಾರೆ ಎಂದು ತೈತ್ತಿರೀಯ ಸಂಹಿತಾವಾಕ್ಯಗಳಲ್ಲಿ ವಿವರಿಸಿದೆ. ಆದುದರಿಂದ ಉಭಯ ಪೋಷಕಗಳಾದ ಎರಡು ಕ್ರಿಯೆಗಳು ನಿಲ್ಲಬಾರದೆಂಬ ಆಕಾಂಕ್ಷೆಯಿದೆ.

**ನಕ್ತಂ— ನಕ್ತೇತಿ ರಾತ್ರಿನಾಮಾನಕ್ತಿ ಭೂತಾನ್ಯವಶ್ಯಾಯೇನಾಪಿ ವಾ ನಕ್ತಾವ್ಯಕ್ತವರ್ಣಾ।** ಸಮಸ್ತ ಭೂತಗಳನ್ನೂ ಮಂಜಿನಿಂದ ಆವೃತವಾಗುವಂತೆ ಮಾಡುವುದರಿಂದ ನಕ್ತ ಎಂಬ ಹೆಸರೆಂದೂ ಅಥವಾ ವ್ಯಕ್ತವಾಗು, ಪ್ರಕಾಶಿಸು ಎಂಬರ್ಥವನ್ನು ಕೊಡುವ **ಅಂಜ್** ಧಾತುವಿನಿಂದ ನಿಷ್ಪನ್ನವಾದ **ಅಕ್ತ** ಶಬ್ದದ ನಿಷೇಧರೂಪದಲ್ಲಿ **ಅನ್-ಅಕ್ತ** ; ನಕ್ತ ಎಂದರೆ ಅವ್ಯಕ್ತವಾದ ವರ್ಣವುಳ್ಳದ್ದರಿಂದ ಈ ಹೆಸರೆಂದೂ ಎರಡು ವಿಧವಾದ ಅರ್ಥವನ್ನು ನಿರುಕ್ತಕಾರರು ಹೇಳಿದ್ದಾರೆ. (ನಿ. ೮-೧೦). ಬೃಹದ್ದೇವತಾಕಾರರೂ ಸಹ—

**ತಮು ಉಚ್ಛೃತ್ಯುಷಾ ನಕ್ತಾನಕ್ತೀಮಾಂ ಹಿಮಬಿಂದುಭಿಃ ।**
**ಅಪಿ ವಾಽವ್ಯಕ್ತವರ್ಣೇತಿ ನಞ್ಪೂರ್ವಾಂಜೇರಿದಂ ಭವೇತ್ ॥**
(ಬೃ. ದೇ. ೩-೯)

ಹಿಮಬಿಂದುಗಳಿಂದ ಜಗತ್ತನ್ನು ಬಳಿಯುವುದರಿಂದಾಗಲಿ ಅಥವಾ ಅವ್ಯಕ್ತವಾದ ವರ್ಣವಿರುವುದರಿಂದಾಗಲಿ **ರಾತ್ರಿಗೆ ನಕ್ತವೆಂಬ** ಪರ್ಯಾಯನಾಮವಿದೆಯೆಂದು ಹೇಳಿದ್ದಾರೆ.

**ಮಾ ಉಪ ದಸತ್**—ಕ್ಷಯಿಸು ಎಂಬರ್ಥವನ್ನು ಕೊಡುವ **ದಸ್** ಧಾತುವಿನ ನಿಷೇಧಾರ್ಥಕ. ನಾಶವಾಗ ಬೇಡ ಎಂದರೆ ಅವಿಚ್ಛಿನ್ನವಾಗಿ ನಡೆಯಲಿ ಎಂದರ್ಥ.

ವ್ಯಾಕರಣಪ್ರಕ್ರಿಯಾ

**ಶಚೀಭಿಃ**—ಶಾರ್ಙರವಾದಿಯಲ್ಲಿ ಪಠಿತವಾದುದರಿಂದ ಙೀನಂತವಾಗುತ್ತದೆ. **ಞ್ನಿತ್ಯಾದಿರ್ನಿತ್ಯಮ್** (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ ತೃತೀಯಾಬಹುವಚನಾಂತರೂಪ.

**ಶಚೀವಸೂ—ಆಮಂತ್ರಿತಸ್ಯ ಚ** (ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ. ಸಂಬೋಧನಾದ್ವಿವಚನಾಂತರೂಪ.

**ದಶಸ್ಯತಮ್**—ದಾಶೃ ದಾನೇ ಧಾತು. ಪೃಷೋದರಾದಿಯಲ್ಲಿ ಸೇರಿಸುವುದರಿಂದಲಾಗಲೀ, ಛಾಂದಸ ವಾಗಿಯಾಗಲೀ ಅಭಿಮತರೂಪಸಿದ್ಧಿಯಾಗುತ್ತದೆ. ಅಥವಾ ದಶಸ್ ಧಾತುವು ದಾನಾರ್ಥದಲ್ಲಿ ಪ್ರಯುಕ್ತವಾಗಿದೆ. ಕಂಡ್ವಾದಿ. **ಕಂಡ್ವಾದಿಭ್ಯೋ ಯಕ್** (ಪಾ. ಸೂ. ೩-೧-೨೭) ಎಂಬುದರಿಂದ ಸ್ವಾರ್ಥದಲ್ಲಿ ಯಕ್. ಲೋಟ್. ಮಧ್ಯಮಪುರುಷ ದ್ವಿವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ರಾತಿಃ**—ರಾ ದಾನೇ ಧಾತು. **ಕ್ತಿಚ್‌ಕ್ತೌ ಚ ಸಂಜ್ಞಾಯಾಮ್** (ಪಾ. ಸೂ ೩ ೩-೧೭೪) ಎಂಬುದರಿಂದ ಕ್ತಿಚ್‌ಪ್ರತ್ಯಯ. ಅಂತೋದಾತ್ತಸ್ವರ ಬರುತ್ತದೆ.

**ದಸತ್**—ದಸು ಉಪಕ್ಷಯೇ ಧಾತು. ಪುಷಾದಿಯಲ್ಲಿ ಸೇರಿದೆ. ಲುಙ್ ಪ್ರಥಮಪುರುಷಏಕವಚನದಲ್ಲಿ ತಿಪ್ ಪ್ರತ್ಯಯ. **ಇತಶ್ಚ** ಎಂಬುದರಿಂದ ಇಕಾರ ಲೋಪ **ಪುಷಾದಿದ್ಯುತಾದಿ**—(ಪಾ. ಸೂ. ೩-೧-೫೫) ಎಂಬುದರಿಂದ ಚ್ಲಿಗೆ ಅಙಾದೇಶ. ಮಾಙ್ ಸಂಬಂಧವಿರುವುದರಿಂದ **ನ ಮಾಙ್ಯೋಗೇ**—(ಪಾ. ಸೂ. ೬-೪-೭೪) ಎಂಬುದರಿಂದ ಅಡಾಗಮ ಪ್ರತಿಷೇಧ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೫ ॥

ಸಂಹಿತಾಪಾಠಃ

ವೃಷನ್ನಿಂದ್ರ ವೃಷಪಾಣಾಸ ಇಂದವ ಇಮೇ ಸುತಾ ಅದ್ರಿಷುತಾಸ ಉದ್ಭಿ-
ದಸ್ತುಭ್ಯಂ ಸುತಾಸ ಉದ್ಭಿದಃ ।

ತೇ ತ್ವಾ ಮಂದಂತು ದಾವನೇ ಮಹೇ ಚಿತ್ರಾಯ ರಾಧಸೇ ।

ಗೀರ್ಭಿರ್ಗಿರ್ವಾಹಃ ಸ್ತವಮಾನ ಆ ಗಹಿ ಸುಮೃಳೀಕೋ ನ ಆ ಗಹಿ ॥ ೬ ॥

ಪದಪಾಠಃ

ವೃಷನ್ । ಇಂದ್ರ । ವೃಷಽಪಾನಾಸಃ । ಇಂದವಃ । ಇಮೇ । ಸುತಾಃ । ಅದ್ರಿಽಸುತಾಸಃ । ಉತ್ಽಭಿದಃ ।

ತುಭ್ಯಂ । ಸುತಾಸಃ । ಉತ್ಽಭಿದಃ ।

ತೇ । ತ್ವಾ । ಮಂದಂತು । ದಾವನೇ । ಮಹೇ । ಚಿತ್ರಾಯ । ರಾಧಸೇ ।

ಗೀಃಽಭಿಃ । ಗಿರ್ವಾಹಃ । ಸ್ತವಮಾನಃ । ಆ । ಗಹಿ । ಸುಽಮೃಳೀಕಃ । ನಃ । ಆ । ಗಹಿ ॥ ೬ ॥

ಸಾಯಣಭಾಷ್ಯಂ

ಪೃಷ್ಠ್ಯಸ್ಯ ಷಷ್ಠೇಽಹನಿ ಪ್ರಉಗಶಸ್ತ್ರಸ್ಯೈಂದ್ರೇ ತೃಚೇ ತೃತೀಯಾ ವೃಷನ್ನಿಂದ್ರೇತ್ಯೇಷಾ । ವೃಷನ್ನಿಂದ್ರ ವೃಷಪಾಣಾಸ ಇಂದವಃ ಸುಷುಮಾ ಯಾತಮದ್ರಿಭಿಃ । ಆ. ೮-೧ ಇತಿ ॥ ತತ್ರೈವ ಸವನೇ ಪ್ರಸ್ಥಿತಯಾಜ್ಯಾನಾಂ ಪುರಸ್ತಾದನ್ಯಾ ಋಚಃ ಪ್ರಕ್ಷಿಪ್ಯೋಭಯೀಭಿರ್ಯಷ್ಟವ್ಯಂ । ತತ್ರ ಹೋತುಃ ಪ್ರಸ್ಥಿತಯಾಜ್ಯಾಯಾಃ ಪುರಸ್ತಾದೇಷಾ ಪ್ರಕ್ಷೇಪಣೀಯಾ । ಸೂತ್ರಿತಂ ಚ । ಷಷ್ಠಸ್ಯ ಪ್ರಾತಃಸವನೇ ಪ್ರಸ್ಥಿತಯಾಜ್ಯಾನಾಂ ಪುರಸ್ತಾದನ್ಯಾಃ ಕೃತ್ವೋಭಾಭ್ಯಾಮನವಾನಂತೋ ಯಜಂತಿ । ಆ. ೮-೧ । ಇತಿ ॥

ಹೇ ಇಂದ್ರ ವೃಷನ್ ವರ್ಷಿತಃ ಕಾಮಾನಾಂ ಇಮೇ ಪುರತೋ ದೃಶ್ಯಮಾನಾ ಇಂದವಃ ಸೋಮಾಃ ಸುತಾಃ । ತ್ವದರ್ಥಮಭಿಷುತಾಃ । ಕೀದೃಶಾಸ್ತೇ । ವೃಷಪಾನಾಸೋಽಭಿಮತವರ್ಷಕೇಣ ತ್ವಯಾ ಪಾತವ್ಯಾಃ ಅದ್ರಿಸುತಾಸೋಽದ್ರಿಭಿರ್ಗ್ರಾವಭಿಃ ಪಾಷಾಣೈರಭಿಷವಸಾಧನೈಃ ಸುತಾಃ ಉದ್ಭಿದ ಉದ್ಭೇದಕಾ ವರ್ಷಸ್ಯ । ತ ಏವ ಪುನರ್ವಿಶೇಷ್ಯಂತೇ । ಉದ್ಭಿದೋ ಬಲಸ್ಯೋದ್ಭೇದಕಾ ಉದ್ಭಿನ್ನಾ ವಾ ಪರ್ವತಾದೌ ತಾದೃಶಾಃ ಸೋಮಾಸ್ತುಭ್ಯಂ ಸುತಾಸಸ್ತ್ವದರ್ಥಮೇವಾಭಿಷುತಾಃ । ಕಿಂಚ ತೇ ತಾದೃಶಾಃ ಸೋಮಾಸ್ತ್ವಾ ತ್ವಾಂ ಮಂದಂತು । ತರ್ಪಯಂತು । ಕುತ್ರೇತಿ ತದುಚ್ಯತೇ । ದಾವನೇ ದಾನವತಿ ಯಾಗೇ । ಅಭಿಮತದಾನಾಯ ವಾ । ತಥಾ ಮಹೇ ಮಹತೇ ಚಿತ್ರಾಯ ಚಾಯನೀಯಾಯ ವಿಚಿತ್ರಾಯ ನಾನಾವಿಧಾಯ ವಾ ರಾಧಸೇ ಧನಾಯ । ಕಿಂಚ ಹೇ ಗಿರ್ವಾಹೋ ಗಿರಾಂ ಸ್ತುತೀನಾಮಸ್ಮದೀಯಾನಾಂ ವೋಢಃ ॥ ವಹಿಹಾಧಾಞ್ಭ್ಯಃ ಇತ್ಯಸುನ್ ॥ ಗೀರ್ಭಿರಸ್ಮತ್ಸ್ತುತಿಭಿಃ ಸ್ತವಮಾನಃ ಸನ್ನಾ ಗಹಿ । ಆಗಚ್ಛ । ನೋಽಸ್ಮಾನ್ ಸುಮೃಳೀಕಃ ಸುಷ್ಠು ಮೃಡಯಿತಾ ಸನ್ನಾ ಗಹಿ । ಆಗಚ್ಛ ॥

ಪ್ರತಿಪದಾರ್ಥ

**ವೃಷನ್**--ಇಷ್ಟಾರ್ಥಗಳನ್ನು ಸುರಿಸತಕ್ಕ । **ಇಂದ್ರ** ಎಲೈ ಇಂದ್ರನೇ, । **ಇಂದವಃ**—ಸ್ರವಿಸತಕ್ಕವೂ, । **ವೃಷಪಾಣಾಸಃ**—ಇಷ್ಟಾರ್ಥಗಳನ್ನು ಕೊಡುವ ನಿನ್ನಿಂದ ಕುಡಿಯಲ್ಪಡಬೇಕಾದವೂ, । **ಉದ್ಭಿದಃ**—ಮಳೆಯನ್ನು ಸುರಿಸತಕ್ಕವೂ । **ಅದ್ರಿಷುತಾಸಃ**—ಕಲ್ಲುಗಳಿಂದ ಜಜ್ಜಿ ಹಿಂಡಲ್ಪಡತಕ್ಕವೂ ಆದ । **ಇಮೇ**—ಈ ಸೋಮರಸಗಳು । **ಸುತಾಃ**—ಹಿಂಡಲ್ಪಟ್ಟಿವೆ. । **ಉದ್ಭಿದಃ**—ಪರ್ವತಾದಿಗಳಲ್ಲಿ ಉತ್ಪನ್ನವಾದ ಈ ಸೋಮಲತೆಗಳು । **ತುಭ್ಯಂ**—ನಿನಗಾಗಿ । **ಸುತಾಸಃ**—ಹಿಂಡಿ ಸಿದ್ಧವಾಗಿವೆ. । **ತೇ**—ಈ ರಸಗಳು । **ದಾವನೇ**—ದಾನಯುಕ್ತವಾದ ಯಾಗಕಾಲದಲ್ಲಿ, । **ಮಹೇ**—ಮಹತ್ತಾದುದೂ, । **ಚಿತ್ರಾಯ**—ನಾನಾವಿಧವಾದುದೂ ಆದ । **ರಾಧಸೇ**-- ಧನಕ್ಕಾಗಿ । **ತ್ವಾ**—ನಿನ್ನನ್ನು । **ಮಂದಂತು**--ತೃಪ್ತಿಗೊಳಿಸಲಿ. । **ಗಿರ್ವಾಹಃ**—ಸ್ತುತಿವಾಹಕನಾದ ಇಂದ್ರನೇ, । **ಗೀರ್ಭಿಃ**—ನಮ್ಮ ಸ್ತೋತ್ರವಾಕ್ಯಗಳಿಂದ । **ಸ್ತವಮಾನಃ**—ಸ್ತುತಿಸಲ್ಪಟ್ಟವನಾಗಿ । **ಆ ಗಹಿ**—ದಯಮಾಡು । **ನಃ**—ನಮ್ಮನ್ನು । **ಸುಮೃಳೀಕಃ**—ಸುಖಪಡಿಸುವವನಾಗಿ । **ಆ ಗಹಿ**—ಇಲ್ಲಿಗೆ ಬಾ.

ಭಾವಾರ್ಥ

ಇಷ್ಟಾರ್ಥಗಳನ್ನು ಸುರಿಸತಕ್ಕ ಎಲೈ ಇಂದ್ರನೇ, ಸ್ರವಿಸತಕ್ಕವೂ, ಇಷ್ಟಾರ್ಥದಾತನಾದ ನಿನ್ನಿಂದ ಪಾನಮಾಡಲ್ಪಡಬೇಕಾದವೂ, ವೃಷ್ಟಿಯನ್ನು ಸುರಿಸಲು ಸಹಾಯಮಾಡತಕ್ಕವೂ, ಕಲ್ಲುಗಳಿಂದ ಜಜ್ಜಿ ಹಿಂಡಲ್ಪಡತಕ್ಕವೂ ಆದ ಈ ಸೋಮರಸಗಳು ಹಿಂಡಲ್ಪಟ್ಟಿವೆ. ಪರ್ವತಗಳಲ್ಲಿ ಉತ್ಪನ್ನವಾದ ಈ ಸೋಮಲತೆಗಳು ನಿನಗಾಗಿ ಹಿಂಡಿ ಸಿದ್ಧಮಾಡಲ್ಪಟ್ಟಿವೆ. ಈ ರಸಗಳು ದಾನಯುಕ್ತವಾದ ಯಾಗಕಾಲಗಳಲ್ಲಿ ಮಹತ್ತಾದುದೂ, ನಾನಾವಿಧವಾದುದೂ ಆದ ಧನಲಾಭಕ್ಕಾಗಿ ನಿನ್ನನ್ನು ತೃಪ್ತಿಗೊಳಿಸಲಿ. ಸ್ತುತಿವಾಹಕನಾದ ಇಂದ್ರನೇ, ನಮ್ಮ ಸ್ತೋತ್ರವಾಕ್ಯಗಳಿಂದ ಸ್ತುತಿಸಲ್ಪಟ್ಟವನಾಗಿ ದಯಮಾಡು. ನಮ್ಮನ್ನು ಸುಖಪಡಿಸುವವನಾಗಿ ಇಲ್ಲಿ ಬಾ

English Translation

Indra, showerer (of blessings) these effused juices, (expressed) by stones and which have sprung (from mountain plants), are for your drinking; these libations have burst forth for you: may they satisfy you as an offering presented (in the hope of receiving) great and wonderful riches. Accepter of laudations, come to us, glorified by our hymns; come to us well pleased.

॥ ವಿಶೇಷವಿಷಯಗಳು ॥

ಪೃಷ್ಠ್ಯವೆಂಬ ಯಾಗವಿಶೇಷದ ಆರನೆಯ ದಿನದಲ್ಲಿ ಪ್ರಉಗಶಸ್ತ್ರಮಂತ್ರಪಠನಮಾಡುವಾಗ ಇಂದ್ರನ ಸಂಬಂಧವಾದ ತೃಚವನ್ನು (ಮೂರು ಋಕ್ಕುಗಳನ್ನು) ಪಠಿಸುವಾಗ **ವೃಷನ್ನಿಂದ್ರ** ಎಂಬ ಈ ಋಕ್ಕನ್ನು ಮೂರನೆಯ ಋಕ್ಕನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ವೃಷನ್ನಿಂದ್ರ ವೃಷಪಾಣಾಸ ಇಂದವಃ ಸುಷುಮಾ ಯಾತಮದ್ರಿಭಿಃ** ಎಂಬ ಸೂಕ್ತದಲ್ಲಿ ಹೇಳಿರುವುದು (ಆ. ೮-೧) ಮತ್ತು ಅದೇ ಯಾಗದ ಪ್ರಾತಃಸವನಕಾಲದಲ್ಲಿ ಪ್ರಸ್ಥಿತಯಾಜ್ಯಾಮಂತ್ರವನ್ನು ಪಠಿಸುವ ಮೊದಲೇ ಈ ಋಕ್ಕನ್ನು ಇತರ ಋಕ್ಕುಗಳೊಂದಿಗೆ ಸೇರಿಸಿ ಹೋತೃವು

ಹೋಮಮಾಡಬೇಕು ಎಂದು ಆಶ್ವಲಾಯನಶ್ರೌತಸೂತ್ರದ **ಷಷ್ಠಸ್ಯ ಪ್ರಾತಃಸವನೇ ಪ್ರಸ್ಥಿತಯಾಜ್ಯಾನಾಂಪುರ-ಸ್ತಾದನ್ಯಾಃ ಕೃತ್ಸ್ನೋಭಾಭ್ಯಾಮನವಾನಂತೋ ಯಜಂತಿ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ.೮-೧)

**ವೃಷನ್, ವೃಷಪಾಣಾಸಃ—ವೃಷನ್ ಶಬ್ದಕ್ಕೆ ಕಾಮಾನಾಂ ವರ್ಷಿತಃ ।** ಇಷ್ಟಾರ್ಥಗಳನ್ನು ಸುರಿಸಿ ಕೊಡುವ ಎಂದೂ, **ವೃಷಪಾಣಾಸಃ** ಎಂದರೆ **ಅಭಿಮತವರ್ಷಕೇಣ ತ್ವಯಾ ಪಾತವ್ಯಾಃ** ಎಂದೂ ಅರ್ಥಮಾಡಿದ್ದಾರೆ. ಎಂದರೆ ಸೋಮರಸದ ಪಾನವು ಅನುಗ್ರಾಹಕವಾದ ಬುದ್ಧಿಯನ್ನು ಕೊಡತಕ್ಕ ಸಾಧನವೆಂದಭಿಪ್ರಾಯವು.

**ಇತಿ ವಾ ಇತಿ ಮೇ ಮನೋ ಗಾಮಶ್ವಂ ಸನುಯಾಮಿತಿ । ಕುವಿತ್ಸೋಮಸ್ಯಾಪಾಮಿತಿ ।**
(ಋ. ಸಂ. ೧೦-೧೧೯-೧)

ಸ್ತೋತೃಗಳಿಗೆ ಗೋವುಗಳನ್ನೂ ಅಶ್ವಗಳನ್ನೂ ಕೊಡುವುದಕ್ಕೆ ಉತ್ತೇಜಕವಾದ ಸೋಮರಸವನ್ನು ನಾನು ಪಾನಮಾಡಿದ್ದೇನೆ ಎಂದು ಇಂದ್ರನು ಹೇಳಿಕೊಳ್ಳುತ್ತಾನೆ. ಇದರಂತೆಯೇ,

ಕದಾ ಚನ ಸ್ತರೀರಸಿ ನೇಂದ್ರ ಸಶ್ಚಸಿ ದಾಶುಷೇ । ಉಪೋಪೇನ್ನು ಮಘವನ್ ಭೂಯ ಇನ್ನು ತೇ ದಾನನ್ದೇವಸ್ಯ ಪೃಚ್ಯತೇ । ಉಪಯಾಮಗೃಹೀತೋಽಸ್ಯಾದಿತ್ಯೇಭ್ಯಸ್ತ್ವಾ । ಕದಾ ಚನ ಪ್ರಯುಚ್ಛಸ್ಯುಭೇ ನಿಪಾಸಿ ಜನ್ಮನೀ। ತುರೀಯಾದಿತ್ಯ ಸವನಂತ ಇಂದ್ರಿಯಮಾತಸ್ಥಾವಮೃತನ್ದಿವಿ।
(ತೈ ಸಂ. ೧-೪-೨೨)

ಇತ್ಯಾದಿ ಸಂಹಿತಾವಾಕ್ಯಗಳಲ್ಲಿಯೂ ಸಹ ಹವಿಸ್ಸನ್ನು ಅರ್ಪಿಸತಕ್ಕ ಯಜಮಾನರಿಗೆ ಅನುಗ್ರಹವನ್ನುಂಟುಮಾಡಲು ಸೋಮರಸದ ಪಾನವು ಸಾಧನವೆಂದು ಹೇಳಿರುವಂತೆ ಇಲ್ಲಿಯೂ ಸಹ ಆ ವಿಷಯವನ್ನು ಹೇಳಿದೆ.

**ಉದ್ಭಿದಃ—ಬಲಸ್ಯ ಉದ್ಭೇದಕಾಃ, ಉದ್ಭಿನ್ನಾ ವಾ ಪರ್ವತಾದೌ ತಾದೃಶಾಃ ಸೋಮಾಃ ।** ಶಕ್ತಿಯ ಆವಿರ್ಭಾವಕ್ಕೆ ಸಾಧಕಗಳಾದ ಅಥವಾ ಪರ್ವತಾದಿಪ್ರದೇಶಗಳಲ್ಲಿ ಬೆಳೆದ ಎಂಬ ಎರಡು ಅರ್ಥಗಳು ಸಾಧ್ಯವೆಂದು ಭಾಷ್ಯಕಾರರು ಹೇಳುತ್ತಾರೆ.

**ಪ್ರ ವಾತಾ ಇವ ದೋಧತ ಉನ್ಮಾ ಪೀತಾ ಅಯಂಸತ । ಕುವಿತ್ಸೋಮಸ್ಯಾಪಾಮಿತಿ ॥**
(ಋ. ಸಂ. ೧೦-೧೧೯-೨)

**ನ ಹಿ ಮೇ ರೋದಸೀ ಉಭೇ ಅನ್ಯಂ ಪಕ್ಷಂ ಚನ ಪ್ರತಿ । ಕುವಿತ್ಸೋಮಸ್ಯಾಪಾಮಿತಿ ।**
(ಋ ಸಂ. ೧೦-೧೧೯-೭)

ಇತ್ಯಾದಿ ಋಕ್ಕುಗಳಲ್ಲಿ ಸೋಮರಸಪಾನದಿಂದ ನನ್ನ ಶಕ್ತಿಯು ವೃದ್ಧಿಯಾಗಿ ನನ್ನ ಸಮಾನವಾದ ಶಕ್ತಿಯುಳ್ಳವರು ದ್ಯಾವಾಪೃಥಿವಿಗಳೆರಡರಲ್ಲೂ ಇಲ್ಲ ಎಂಬ ಇಂದ್ರನ ವಾಕ್ಯಗಳೇ ಇರುವುದರಿಂದ ಮೊದಲನೆಯ ಅರ್ಥವು ಸಾಧುವಾಗುತ್ತದೆ. ಎರಡನೆಯದಾಗಿ **ಸೋಮಲತೆಯು** ಪರ್ವತಾದಿಗಳಲ್ಲಿ ಬೆಳೆಯುದರಿಂದ **ಉದ್ಭಿದಃ** ಎಂಬ ವಿಶೇಷಣವಿದೆಯೆಂದು ಸಾಯಣರು ತಿಳಿಸಿದ್ದಾರೆ. ಸೋಮಲತೆಯ ಬೆಳೆ, ಸ್ವರೂಪ, ವರ್ಣ, ರುಚಿ, ಇತ್ಯಾದಿಗಳ ವಿಷಯವನ್ನು ಋಗ್ವೇದ ಸಂಹಿತೆಯ ೨ನೇ ಭಾಗದಲ್ಲಿ ವಿಶದವಾಗಿ ತಿಳಿಸಿದೆ. ಈಚೆಗೆ ಕೆಲವು ವಿಮರ್ಶಕರು **ಸೋಮಲತೆಯ** ವಿಷಯವಾಗಿ **ಚರ್ಚಿಸಿ** ತಮ್ಮ ಅಭಿಪ್ರಾಯಗಳನ್ನು ತಿಳಿಸಿ Journal of Royal Asiatic Society, Indian Antiquary ಇತ್ಯಾದಿ ಪತ್ರಿಕೆಗಳಲ್ಲಿ ಬರೆದಿರುವ ಲೇಖನಗಳ ಸಾರಾಂಶವನ್ನು ಈ ಭಾಗದ ಪೂರ್ವಪೀಠಿಕೆಯಲ್ಲಿ ಸೂಕ್ಷ್ಮವಾಗಿ ಕೊಡಲಾಗಿದೆ. ಈ ಅಭಿಪ್ರಾಯಗಳಲ್ಲಿ ಸಾಧುವೆಷ್ಟು ಅಸಾಧುವೆಷ್ಟು ಎಂಬುದನ್ನು ವಾಚಕರೇ ವಿಮರ್ಶಿಸಬೇಕು.

**ದಾವನೇ— ದಾನವತಿ ಯಾಗೇ ।** ಇಷ್ಟಾರ್ಥಗಳನ್ನು ಕೊಡತಕ್ಕ ಯಾಗದಲ್ಲಿ ಎಂದು ಯಾಗಕ್ಕೆ ವಿಶೇಷಣವಾಗಿದೆ. ಇಂದ್ರಾದಿ ದೇವತೆಗಳಿಗೂ ಈ ಪದವು ವಿಶೇಷಣವಾಗಿ ಉಪಯೋಗಿಸಲ್ಪಟ್ಟು ಅವರ ದಾನದ ಸ್ವಭಾವವನ್ನು ತಿಳಿಸುತ್ತದೆ.

ವ್ಯಾಕರಣಪ್ರಕ್ರಿಯಾ

**ವೃಷನ್**—ವೃಷು ಸೇಚನೇ ಧಾತು. **ಕನಿನ್ಯುವೃಷಿ**—(ಉ. ಸೂ. ೧-೧೫೪) ಎಂಬುದರಿಂದ ಕನಿನ್ ಪ್ರತ್ಯಯ. **ನಙಿಸಂಬುದ್ಧ್ಯೋಃ** ಎಂಬುದರಿಂದ ನಲೋಪ ಬರುವುದಿಲ್ಲ ಪಾದಾದಿಯಲ್ಲಿರುವುದರಿಂದ ಆಮಂತ್ರಿತ ನಿಘಾತಸ್ವರ ಬರುವುದಿಲ್ಲ. **ಆಮಂತ್ರಿತಸ್ಯ** (ಪಾ. ಸೂ. ೬-೧-೧೯೮) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ವೃಷಪಾನಾಸಃ**—ವೃಷ್ಣಃ ಪಾನಾಃ. ಪಾ ಪಾನೇ ಧಾತು. ಕರ್ಮಣಿಯಲ್ಲಿ ಲ್ಯುಟ್ ಪ್ರತ್ಯಯ. **ಯುವೋರನಾಕೌ** (ಪಾ. ಸೂ. ೭-೧-೧) ಎಂಬುದರಿಂದ ಅನಾದೇಶ. ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. ಜಸ್ ಪರವಾದಾಗ **ಆಜ್ಜಸೇರಸುಕ್** (ಪಾ.। ಸೂ. ೭-೧-೫೦) ಎಂಬುದರಿಂದ ಅದಕ್ಕೆ ಅಸುಕಾಗಮ.

**ಅದ್ರಿಸುತಾಸಃ**—ಅದ್ರಿಭಿಃ ಸುತಾಃ ಅದ್ರಿಸುತಾಃ ಷುಞ್ ಅಭಿಷವೇ ಧಾತು. ಕರ್ಮಣಿಯಲ್ಲಿ ಕ್ತಪ್ರತ್ಯಯ. **ತೃತೀಯಕರ್ಮಣಿ** (ಪಾ. ಸೂ. ೬-೨-೪೮) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ. ಹಿಂದಿನಂತೆ ಜಸಿಗೆ ಅಸುಕಾಗಮ.

**ಉದ್ಭಿದಃ**—ಭಿದಿರ್ ವಿದಾರಣೇ ಧಾತು. **ಕ್ವಿಪ್ ಚ** ಎಂಬುದರಿಂದ ಕ್ವಿಪ್ ಪ್ರತ್ಯಯ. ಪ್ರಾದಿಸಮಾಸವಾದಾಗ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. ಪ್ರಥಮಾಬಹುವಚನಾಂತರೂಪ.

**ಮಂದಂತು**—ಮದಿ ಹರ್ಷಗ್ಲೇಪನಯೋಃ ಧಾತು. ಇದಿತ್ತಾದುದರಿಂದ ನುಮಾಗಮ. ಲೋಟ್ ಪ್ರಥಮಪುರುಷ. ಬಹುವಚನರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ದಾವನೇ**—ಡುದಾಞ್ ದಾನೇ ಧಾತು. **ಆತೋ ಮನಿನ್**—(ಪಾ. ಸೂ. ೩-೨-೭೪) ಎಂಬುದರಿಂದ ವನಿಪ್ ಪ್ರತ್ಯಯ. ಚತುರ್ಥೀಏಕವಚನಾಂತರೂಪ. ಛಾಂದಸವಾಗಿ ಅಲ್ಲೋಪ ಬರುವುದಿಲ್ಲ.

**ಮಹೇ**—ಮಹತೇ ಎಂದು ರೂಪವಾದಾಗ ಛಾಂದಸವಾಗಿ ತಕಾರಲೋಪ ಬರುತ್ತದೆ. ಏಕಾಚಾದುದರಿಂದ ವಿಭಕ್ತಿಗೆ **ಸಾವೇಕಾಚಸ್ತೃತೀಯಾದಿಃ** ಎಂಬುದರಿಂದ ಉದಾತ್ತಸ್ವರ ಬರುತ್ತದೆ.

**ಗಿರ್ವಾಹಃ**—ಗಿರಾಂ ವಾಹಾಃ ಗಿರ್ವಾಹಾಃ ವಹ ಪ್ರಾಪಣೇ ಧಾತು. **ವಹಿಹಾಧಾಞ್‌ಭ್ಯಃ—**(ಉ.ಸೂ. ೪-೬೬೦) ಎಂಬುದರಿಂದ ಅಸುನ್‌ಪ್ರತ್ಯಯ. ಣಿತ್ ಎಂದು ಹಿಂದಿನ ಸೂತ್ರದಿಂದ ಅನುವೃತ್ತವಾಗುವುದರಿಂದ **ಅತಉಪಧಾಯಾಃ** (ಪಾ. ಸೂ. ೭-೨-೧೧೬) ಎಂಬುದರಿಂದ ಧಾತುವಿನ ಉಪಧೆಗೆ ವೃದ್ಧಿ. ಗಿರ್ವಾಹಸ್ ಶಬ್ದವಾಗುತ್ತದೆ. ಸಂಬುದ್ಧ್ಯಂತರೂಪ. **ಆಮಂತ್ರಿತಸ್ಯ ಚ** ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಸ್ತವಮಾನಃ**—ಷ್ಟುಞ್ ಸ್ತುತೌ ಧಾತು. **ಧಾತ್ವಾದೇಃ ಷಃ ಸಃ** ಎಂಬುದರಿಂದ ಆದಿಗೆ ಸತ್ವ. ಕರ್ಮಣಿಯಲ್ಲಿ ಲಡರ್ಥದಲ್ಲಿ ಶಾನಚ್ ಪ್ರತ್ಯಯ. ವ್ಯತ್ಯಯದಿಂದ ಶಪ್. ಅದನ್ನು ನಿಮಿತ್ತೀಕರಿಸಿ ಧಾತುವಿನ ಇಕಿಗೆ ಗುಣ. ಅವಾದೇಶ. **ಆನೇಮುಕ್** (ಪಾ. ಸೂ. ೭-೨-೮೨) ಎಂಬುದರಿಂದ ಅದಂತಾಂಗಕ್ಕೆ ಮುಕಾಗಮ. ಅದುಪದೇಶದ

ಪರದಲ್ಲಿ ಲಸಾರ್ವಧಾತುಕ ಬಂದುದರಿಂದ **ತಾಸ್ಯನುದಾತ್ತೇತ್** (ಪಾ. ಸೂ. ೬-೧-೧೮೬) ಎಂಬುದರಿಂದ ಅದು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

ಗಹಿ—ಗಮ್ಲೃ ಗತೌ ಧಾತು. ಲೋಟ್ ಮಧ್ಯಮಪುರುಷಏಕವಚನದಲ್ಲಿ ಸಿಪಿಗೆ ಹಿ ಆದೇಶ. **ಬಹುಲಂ ಛಂದಸಿ** ಎಂಬುದರಿಂದ ಶಪಿಗೆ ಲುಕ್. ಪ್ರತ್ಯಯಕ್ಕೆ ಙಿತ್ವಾದಿದೇಶವಿರುವುದರಿಂದ **ಅನುದಾತ್ತೋಪದೇಶ**—(ಪಾ. ಸೂ. ೬-೪-೩೭) ಎಂಬುದರಿಂದ ಧಾತುವಿನ ಅನುನಾಸಿಕಕ್ಕೆ ಲೋಪ.

**ಸುಮೃಡೀಕಃ**—ಸುಷ್ಠು ಮೃಳೀಕಂ ಸುಖಂ ಯಸ್ಯ ಸಃ ಸುಮೃಳೀಕಃ। **ನಞ್ಸುಭ್ಯಾಮ್** (ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ. ॥ ೬ ॥



ಸಂಹಿತಾಪಾಠಃ

ಓ ಷೂ ಣೋ ಅಗ್ನೇ ಶೃಣುಹಿ ತ್ವಮೀಳಿತೋ ದೇವೇಭ್ಯೋ ಬ್ರವಸಿ
ಯಜ್ಞಿಯೇಭ್ಯೋ ರಾಜಭ್ಯೋ ಯಜ್ಞಿಯೇಭ್ಯಃ ।
ಯದ್ಧ ತ್ಯಾಮಂಗಿರೋಭ್ಯೋ ಧೇನುಂ ದೇವಾ ಅದತ್ತನ ।
ವಿ ತಾಂ ದುಹ್ರೇ ಅರ್ಯಮಾ ಕರ್ತರೀ ಸಚಾಁ ಏಷ ತಾಂ ವೇದ ಮೇ
ಸಚಾ ॥ ೭ ॥

ಪದಪಾಠಃ

ಓ ಇತಿ । ಸು । ನಃ । ಅಗ್ನೇ । ಶೃಣುಹಿ । ತ್ವಂ । ಈಳಿತಃ । ದೇವೇಭ್ಯಃ । ಬ್ರವಸಿ । ಯಜ್ಞಿಯೇಭ್ಯಃ ।
ರಾಜಽಭ್ಯಃ । ಯಜ್ಞಿಯೇಭ್ಯಃ ।
ಯತ್ । ಹ । ತ್ಯಾಂ । ಅಂಗಿರಃಽಭ್ಯಃ । ಧೇನುಂ । ದೇವಾಃ । ಅದತ್ತನ ।
ವಿ । ತಾಂ । ದುಹ್ರೇ । ಅರ್ಯಮಾ । ಕರ್ತರಿ । ಸಚಾ । ಏಷಃ । ತಾಂ । ವೇದ । ಮೇ । ಸಚಾ ॥ ೭ ॥

॥ ಸಾಯಣಭಾಷ್ಯಂ ॥

ದಶರಾತ್ರಸ್ಯ ಷಷ್ಠೇಽಹನಿ ಪ್ರಾತಃಸವನೇ ನೇಷ್ಟುಃ ಪ್ರಸ್ಥಿತಯಾಜ್ಯಾಯಾಃ ಪುರಸ್ತಾದೋ ಷೂ ಣೋ ಅಗ್ನ ಇತ್ಯೇಷಾವಪನೀಯೈಕೀಕೃತ್ಯೋಭಾಭ್ಯಾಂ ಯೋಗಃ । ಷಷ್ಠಸ್ಯೇತಿ ಖಂಡೇ ಸೂತ್ರಿತಂ।

ಓ ಷೂ ಣೋ ಅಗ್ನೇ ಶೃಣುಹಿ ತ್ವಮೀಳಿತೋಽಗ್ನಿಂ ಹೋತಾರಂ । ಆ. ೮-೧ । ಇತಿ ॥ ತಸ್ಮಿನ್ನೇವ ಸವನೇ ಪ್ರಉಗಶಸ್ತ್ರೇ ದ್ವಿತೀಯಾ । ಸೂತ್ರಿತಂ ಚ । ಅಸ್ತು ಶ್ರೌಷಳೋ ಷೂ ಣೋ ಅಗ್ನೇ । ಆ. ೮-೧ । ಇತಿ ॥

ಹೇ ಅಗ್ನೇ ತ್ವಂ ನೋಽಸ್ಮದೀಯಮಾವಾಹನಂ ಸ್ತುತಿಂ ವೇಳಿತೋಽಸ್ಮಾಭಿಃ ಸ್ತುತಃ ಸನ್ನೋ ಷು ಶೃಣುಹಿ । ಓ ಇತಿ ನಿಪಾತದ್ವಯಸಮುದಾಯಾತ್ಮಕ ಏಕೋ ನಿಪಾತಃ । ಆಭಿಮುಖ್ಯೇನೈವ ಸುಷ್ಠು ಶೃಣು ॥ ಉತಶ್ಚ ಪ್ರತ್ಯಯಾದಿತಿ ಚ್ಛಂದಸಿ ವಾವಚನಮಿತಿ ಹೇರ್ಲುಗಭಾವಃ ॥ ಶ್ರುತ್ವಾ ಚ ದೇವೇಭ್ಯೋ ದೇವನಶೀಲೇಭ್ಯೋ ಯಜ್ಞಿಯೇಭ್ಯೋ ಯಜ್ಞಾರ್ಹೇಭ್ಯೋ ಹವಿರ್ಭಾಗೇಭ್ಯಃ ಸ್ತುತಿಭಾಗ್ಭ್ಯ ಇತ್ಯರ್ಥಃ ॥ ಯಜ್ಞರ್ತ್ವಿಗ್ಭ್ಯಾಮಿತಿ ಘಃ ॥ ತೇಭ್ಯೋ ಯಜ್ಞಿಯೇಭ್ಯೋ ಯಜ್ಞಾರ್ಹೇಭ್ಯೋ ಯಜಮಾನೇಭ್ಯಃ ಸಂಬಂಧಿ ಕರ್ಮ ಬ್ರವಸಿ। ಬ್ರೂಹಿ ॥ ಬ್ರುವೀತೇರ್ಲೇಟ್ಯಡಾಗಮಃ॥ ಕೀದೃಶೇಭ್ಯಃ। ರಾಜಭ್ಯೋ ರಾಜಮಾನೇಭ್ಯಃ । ಇದಾನೀಂ ದೇವಾಃ ಪ್ರತ್ಯಕ್ಷೇಣೋಚ್ಯಂತೇ । ಅತ್ರೇತಿಹಾಸಮಾಹುಃ । ಅಂಗಿರಸೋ ನಾಮ ಮಹರ್ಷಯಃ ಪೂರ್ವಂ ಯಜ್ಞಾರ್ಥಂ ದೇವಾನ್ ಸ್ತುತ್ವಾ ಪ್ರೀಣಯಿತ್ವಾ ಗಾ ಅಯಾಚಂತ । ತೇ ಪ್ರೀತಾಃ ಕಾಮದುಘಾಂ ಪ್ರಾದುಃ । ಲಬ್ಧ್ವಾಂ ಚ ತಾಂ ಧೇನುಂ ಕ್ಷೀರಂ ದೋಗ್ಧುಮಶಕ್ನುವಾನಾ ಅರ್ಯಮಣಂ ದೇವಂ ಪ್ರಾರ್ಥಯನ್ । ಸ ಚ ಪ್ರಾರ್ಥಿತೋಽಗ್ನಿಹೋತ್ರಾದ್ಯರ್ಥಂ ಕ್ಷೀರಂ ದುದೋಹೇತಿ । ತದಿದಮತ್ರೋಚ್ಯತೇ । ಯದ್ಯಾಂ ತ್ಯಾಂ ತಾಂ ಪ್ರಸಿದ್ಧಾಂ ಧೇನುಂ ಕ್ಷೀರಾದಿನಾ ಪ್ರೀಣಯಿತ್ರೀಂ ಗಾಂ ಹ ದೇವಾ ಅಂಗಿರೋಭ್ಯಸ್ತದರ್ಥಮದತ್ತನ ದತ್ತವಂತಃ ॥ ತಪ್ತನಪ್ತನಥನಾಶ್ಚೇತಿ ತನಾದೇಶಃ ॥ ತಾಂ ಧೇನುಮರ್ಯಮಾ ಸರ್ವಸ್ಯ ನಿಯಮಿತಾ ದೇವಃ ಕರ್ತರಿ ಸರ್ವಸ್ಯೋತ್ಪಾದಕೇ ತ್ವಯ್ಯಗ್ನೌ ಸಚೇತರದೇವೇಭ್ಯಃ ಸಾಕಂ ವಿ ದುಹ್ರೇ । ವಿವಿಧಂ ದುಗ್ಧವಾನ್ ॥ ದುಹೇರ್ಲಿಟಿ ಬಹುಲಂ ಛಂದಸೀತಿ ರುಟ್ । ಛಂದಸಿ ವೇತಿ ವಚನಾದ್ದ್ವಿರ್ವಚನಾಭಾವಃ । ಲಟ್ಯೇವ ವಾ ಲೋಪಸ್ತ ಇತಿ ತಲೋಪಃ ॥ ಏಷಃ ಏಷ ಏವಾರ್ಯಮಾ ತಾಂ ಧೇನುಂ ನೋ ಸಚಾ ಮತ್ಸಮವಾಯೇನ ವೇದ । ಜಾನಾತಿ । ಅರ್ಯಮಾಹಮಪಿ ಜಾನಾಮೀತ್ಯರ್ಥಃ । ಈದೃಶೀ ಧೇನುಸ್ತ್ವದರ್ಥಮೇವ ದುಹ್ಯತ ಇತ್ಯಗ್ನೇಃ ಸ್ತುತಿಃ ॥

ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ । ತ್ವಂ—ನೀನು । ನಃ—ನಮ್ಮ ಸ್ತುತಿರೂಪವಾದ ಆವಾಹನೆಯನ್ನು । ಈಳಿತಃ—ನಮ್ಮಿಂದ ಸ್ತುತನಾಗಿ । ಓ ಷು ಶೃಣುಹಿ—ನಮ್ಮ ಅಭಿಮುಖವಾಗಿದ್ದುಕೊಂಡು ಕೇಳು । (ಅನಂತರ) ರಾಜಭ್ಯಃ—ಪ್ರಕಾಶಮಾನರೂ । ಯಜ್ಞಿಯೇಭ್ಯಃ—ಯಜ್ಞಸಂಬಂಧಿಯಾದ ಸ್ತೋತ್ರ ಅಥವಾ ಹವಿಸ್ಸಿಗೆ ಯೋಗ್ಯರಾದವರೂ ಆದ । ದೇವೇಭ್ಯಃ—ದೇವತೆಗಳಿಗೆ । ಯಜ್ಞಿಯೇಭ್ಯಃ—ಯಜಮಾನರಿಂದ ಆಚರಿಸಲ್ಪಟ್ಟ ಕರ್ಮವನ್ನು । ಬ್ರವಸಿ—ಹೇಳು । ಯತ್ ತ್ಯಾಂ—ಪ್ರಸಿದ್ಧವಾದ ಯಾವ । ಧೇನುಂ—ಧೇನುವನ್ನು । ದೇವಾಃ—ದೇವತೆಗಳು । ಅಂಗಿರೋಭ್ಯಃ—ಅಂಗಿರಸ್ಸುಗಳಿಗೆ । ಅದತ್ತನ—ಕೊಟ್ಟರೋ । ತಾಂ—ಆ ಧೇನುವನ್ನು । ಅರ್ಯಮಾ—ಸಕಲವನ್ನೂ ನಿಯಮಿಸತಕ್ಕ ಅರ್ಯಮನು । ಕರ್ತರಿ—ಉತ್ಪಾದಕನಾದ ನಿನ್ನಲ್ಲಿ । ಸಚಾ—ಇತರ ದೇವತೆಗಳೊಂದಿಗೆ । ವಿದುಹ್ರೇ—ಕರೆದನು । (ಮತ್ತು) ಏಷಃ—ಇದೇ ಅರ್ಯಮನು । ತಾಂ—ಆ ಧೇನುವನ್ನು । ನೋ ಸಚಾ—ನನ್ನೊಂದಿಗೆ । ವೇದ—ತಿಳಿಯುತ್ತಾನೆ.

ಭಾವಾರ್ಥ

ಎಲೈ ಅಗ್ನಿಯೇ, ನಮ್ಮಿಂದ ನೀನು ಸ್ತುತನಾಗಿ, ನಮ್ಮ ಈ ಸ್ತುತಿರೂಪವಾದ ಆವಾಹನೆಯನ್ನು ನಮ್ಮ ಅಭಿಮುಖವಾಗಿದ್ದುಕೊಂಡು ಕೇಳು. ಅನಂತರ, ಪ್ರಕಾಶಮಾನರೂ, ಯಜ್ಞಸಂಬಂಧಿಯಾದ ಸ್ತೋತ್ರಕ್ಕೂ

ಹವಿಸ್ಸಿಗೂ ಅರ್ಹರೂ ಆದ ದೇವತೆಗಳಿಗೆ ಯಜಮಾನರಾದ ನಮ್ಮಿಂದ ಆಚರಿಸಲ್ಪಟ್ಟ ಕರ್ಮವನ್ನು ತಿಳಿಸು. ಈ ಕರ್ಮದ ಪ್ರತಿಫಲವಾಗಿ ದೇವತೆಗಳಿಂದ ಅನುಗೃಹಿತವಾದುದೂ ಪ್ರಸಿದ್ಧವಾದುದೂ ಆದ ಧೇನುವನ್ನು ಆ ದೇವತೆಗಳ ಜೊತೆಯಲ್ಲಿ ಅರ್ಯಮನು ನಿನ್ನಲ್ಲಿ ಕರೆದನು. ಅದೇ ಅರ್ಯಮನು ಆ ಧೇನುವನ್ನು ಈಗಲೂ ಯಾಗಕ್ಕೆ ಸಿದ್ಧವಾಗಿರುವುದಾಗಿ ನನ್ನೊಂದಿಗೆ ಇದ್ದುಕೊಂಡು ತಿಳಿಯುತ್ತಾನೆ.

## English Translation

Agni, listen attentively when you are praised by us, and repeat (those praises) to the gods who are entitled to worship; to the royal (deities) entitled to worship: on which account the gods gave to the Angirasas the milch cow which Aryman milked for (you), the maker (of all), together with the gods; that cow (the nature of which you have said), he along wtih me, comprehends.

### ವಿಶೇಷವಿಷಯಗಳು

ದಶರಾತ್ರವೆಂಬ ಹತ್ತುದಿನಪರ್ಯಂತ ಮಾಡುವ ಯಾಗವಿಶೇಷದ ಆರನೆಯ ದಿವಸದಲ್ಲಿ ಪ್ರಾತಃಸವನಕಾಲದಲ್ಲಿ ನೇಷ್ಟೃವೆಂಬ ಋತ್ವಿಜನು ಪ್ರಸ್ಥಿತಯಾಜ್ಯಾ ಮಂತ್ರವನ್ನು ಪಠಿಸುವುದಕ್ಕೆ ಮುಂಚೆ **ಓ ಷೂ ಣೋ ಅಗ್ನೇ** ಎಂಬ ಈ ಋಕ್ಕನ್ನೂ **ಅಗ್ನಿಂ ಹೋತಾರಂ** ಎಂಬ ಈ ಋಕ್ಕನ್ನೂ ಒಟ್ಟಿಗೆ ಸೇರಿಸಿ ಯಾಗಕಾಲದಲ್ಲಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಷಷ್ಠಸ್ಯ** ಎಂಬ ಖಂಡದಲ್ಲಿ **ಓ ಷೂ ಣೋ ಅಗ್ನೇ ಶೃಣುಹಿ ತ್ವಮೀಳಿತೋಽಗ್ನಿಂ ಹೋತಾರಂ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೮-೧) ಮತ್ತು ಅದೇ ಪ್ರಾತಃಸವಕಾಲದಲ್ಲಿ ಪ್ರಉಗಶಸ್ತ್ರಮಂತ್ರಪಠನಮಾಡುವಾಗ ಈ ಋಕ್ಕನ್ನು ಎರಡನೆಯ ಮಂತ್ರವನ್ನಾಗಿ ಪಠಿಸಬೇಕೆಂದು **ಅಸ್ತು ಶ್ರೌಷಳೋ ಷೂ ಣೋ ಅಗ್ನೇ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೮-೧)

**ಯಜ್ಞಿಯೇಭ್ಯೋ ರಾಜಭ್ಯೋ ಯಜ್ಞಿಯೇಭ್ಯೋ ಬ್ರವಸಿ**—ಇಲ್ಲಿ ಮೊದಲನೆಯ **ಯಜ್ಞಿಯೇಭ್ಯಃ** ಎನ್ನುವ ಪದವು ದೇವತೆಗಳಿಗೆ **ಯಜ್ಞಾರ್ಹೇಭ್ಯೋ ಹವಿರ್ಭಾಗ್ಭ್ಯಃ ಸ್ತುತಿಭಾಗ್ಭ್ಯಶ್ಚ** ಯಜ್ಞಾರ್ಹರೂ, ಹವಿಸ್ಸುಗಳಿಗೆ ಅರ್ಹರೂ, ಸ್ತುತ್ಯಾರ್ಹರೂ ಆದ ದೇವತೆಗಳಿಗೆ ಎಂಬರ್ಥವನ್ನು ಕೊಡುತ್ತದೆ. ಎರಡನೆಯ **ಯಜ್ಞಿಯೇಭ್ಯಃ** ಎಂಬ ಪದವು ಯಜ್ಞಕರ್ತರಿಗೆ ವಿಶೇಷಣವಾಗಿ **ಯಜ್ಞಾರ್ಹೇಭ್ಯಃ ಯಜಮಾನೇಭ್ಯಃ ಸಂಬಂಧಿ ಕರ್ಮ** । ಯಜ್ಞಮಾಡಲು ಅರ್ಹರಾದ ಯಜಮಾನರಿಗೆ ಸಂಬಂಧವಾದ ಕರ್ಮವೆಂದರ್ಥವನ್ನು ಕೊಡುತ್ತದೆ. ಯಜ್ಞಮಾಡಲು ಯೋಗ್ಯರಾದ ಮಾನವರ ಸ್ತುತಿಗಳನ್ನೂ ಹವಿಸ್ಸುಗಳನ್ನೂ ಯಜ್ಞವನ್ನು ಸ್ವೀಕರಿಸಲು ಯೋಗ್ಯರಾದ ದೇವತೆಗಳಿಗೆ ತಿಳಿಸು ಅಥವಾ ವಹಿಸು ಎಂದರ್ಥ. ಈ ವಾಕ್ಯದಿಂದ ಅಗ್ನಿಯು ಯಜ್ಞದ ನೇತೃವಾಗಿ ಯಜಮಾನರಿಗೂ ದೇವತೆಗಳಿಗೂ ನಡುವೆ ಸಂಬಂಧವನ್ನು ಬೆಳೆಸತಕ್ಕ ದೂತನೆಂಬ ವಿಷಯವು ತಿಳಿಯುತ್ತದೆ.

**ತ್ವೇ ಅಗ್ನೇ ವಿಶ್ವೇ ಅಮೃತಾಸೋ ಅದ್ರುಹ ಆಸಾ ದೇವಾ ಹವಿರದಂತ್ಯಾಹುತಂ ।**
**ತ್ವಯಾ ಮರ್ತಾಸಃ ಸ್ವದಂತ ಆಸುತಿಂ ತ್ವಂ ಗರ್ಭೋ ವೀರುಧಾಂ ಜಜ್ಞಿಷೇ ಶುಚಿಃ ॥**

(ಋ. ಸಂ. ೨-೧-೧೪)

ಇತ್ಯಾದಿ ಋಕ್ಕುಗಳಲ್ಲಿ ವರ್ಣಿಸಿರುವಂತೆಯೂ,

**ಅಗ್ನಿರೇವ ದೇವಾನಾಂ ದೂತ [illegible] ।**

(ಶ. ಬ್ರಾ. ೧-೪-೧-೩೪)

**ಯಜ್ಞಸ್ಯ ಶಿರಃ ಪ್ರತಿ ದಧಾತ್ಯಗ್ನಿರ್ದೇವಾನಾಂ ದೂತ ಆಸೀತ್ ।**
(ತೈ. ಸಂ. ೨.೫-೧೧-೮)

ಇತ್ಯಾದಿ ವಾಕ್ಯಗಳಲ್ಲೂ ಹೇಳಿರುವಂತೆ ಅಗ್ನಿಯು ದೇವತೆಗಳಿಗೂ ಮತ್ತು ಯಜ್ಞಕರ್ತರಾದ ಮಾನವರಿಗೂ ಸಮಾನವಾದ ದೂತನಾದುದರಿಂದ **ಯಜ್ಞಕರ್ತರು** ಇವನನ್ನು ಕುರಿತು ತಮ್ಮ ಸ್ತುತಿಗಳನ್ನು ದೇವತೆಗಳ ಮುಂದೆ ಪ್ರಕಾಶಪಡಿಸಬೇಕೆಂದು ಪ್ರಾರ್ಥಿಸಿದ್ದಾರೆ.

**ಅಂಗಿರೋಭ್ಯಃ ಧೇನುಂ ದೇವಾ ಅದತ್ತನ—ಅತ್ರೇತಿಹಾಸಮಾಹುಃ ಅಂಗಿರಸೋ ನಾಮ ಮಹರ್ಷಯಃ ಪೂರ್ವಂ ಯಜ್ಞಾರ್ಥಂ ದೇವಾನ್ ಸ್ತುತ್ವಾ ಪ್ರೀಣಯಿತ್ವಾ ಗಾ ಅಯಾಚಂತ । ತೇ ಪ್ರೀತಾಃ ಕಾಮದುಘಾಂ ಪ್ರಾದುಃ । ಲಬ್ಧ್ವಾಂ ಚ ತಾ ಧೇನುಂ ಕ್ಷೀರಂ ದೋಗ್ಧುಮಶಕ್ನುವಾನಾ ಅರ್ಯಮಣಂ ದೇವಂ ಪ್ರಾರ್ಥಯನ್ । ಸ ಚ ಪ್ರಾರ್ಥಿತೋಽಗ್ನಿಹೋತ್ರಾದ್ಯರ್ಥಂ ಕ್ಷೀರಂ ದುದೋಹೇತಿ ।** ಹಿಂದೆ ಅಂಗಿರಸ್ಸೆಂಬ ಮಹರ್ಷಿಗಳು ಯಜ್ಞಾರ್ಥವಾಗಿ ಗೋವುಗಳನ್ನು ಪಡೆಯಬೇಕೆಂಬ ಇಷ್ಟದಿಂದ ದೇವತೆಗಳನ್ನು ಸ್ತುತಿಸಿ ಅವರನ್ನು ಸಂತೋಷಗೊಳಿಸಿದರು. ಆಗ ದೇವತೆಗಳು ಅವರಿಗೆ ಇಷ್ಟಾರ್ಥಗಳನ್ನೆಲ್ಲಾ ಒದಗಿಸಿಕೊಡತಕ್ಕ ಕಾಮಧೇನುವನ್ನು ಕೊಟ್ಟರು. ಆಗ ಅವರು ಆ ಕಾಮಧೇನುವಿನ ಕ್ಷೀರವನ್ನು ಕರೆಯಲಸಮರ್ಥರಾಗಿ ತಮಗೆ ಸಹಾಯಮಾಡಬೇಕೆಂದು ಅರ್ಯಮದೇವನನ್ನು ಪ್ರಾರ್ಥಿಸಿದರು. ಆಗ ಅರ್ಯಮನು ಅಂಗಿರಸ್ಸುಗಳು ನೆರವೇರಿಸಬೇಕಾದ ಅಗ್ನಿಹೋತ್ರಕ್ಕಾಗಿ ಕ್ಷೀರವನ್ನು ಕರೆದುಕೊಟ್ಟನು ಎಂಬ ಕಥೆಯನ್ನು ಇಲ್ಲಿ ಸೂಚಿಸಿದೆ. ಮತ್ತು ಎಲ್ಲಕ್ಕಿಂತಲೂ ಪೂರ್ವದಲ್ಲಿ ಅಂಗಿರಸ್ಸುಗಳು ಅಗ್ನಿಯನ್ನೂ ಅಗ್ನಿಹೋತ್ರಯಾಗದಲ್ಲಿ ದೀಪ್ತನಾಗುವಂತೆ ಮಾಡಿದರು ಎಂದು

**ಅಂಗಿರಸಶ್ಚ ತೇಽಗ್ರೇಽಗ್ನಿನಾಗ್ನಿಮಯಜಂತ ತೇ ಸ್ವರ್ಗಂ ಲೋಕಮಾಯನ್ ।**
(ಐ. ಬ್ರಾ. ೧-೧೬)

ಇತ್ಯಾದಿ ವಾಕ್ಯಗಳಲ್ಲಿ ಹೇಳಿದೆ.

**ಅಂಗಿರಸ್** ಎಂಬುದು ಒಂದು ಅಂಕಿತನಾಮವಾಗಿಯೂ, ಒಂದು ಋಷಿಸಂತತಿಯ ನಾಮಧೇಯವಾಗಿಯೂ, ಒಂದು ದೇವತೆಗಳ ಗುಂಪಿಗೆ ಸಂಬಂಧಿಸಿದ ಹೆಸರಾಗಿಯೂ ಮೂರು ಕಡೆಗಳಲ್ಲಿ ಈ ಪದಕ್ಕೆ ಅನ್ವಯವಿದೆಯೆಂದೂ, **ಅಂಗಿರೋಭಿಃ ಅಂಗಿರಸ್ತಮಃ** ಎಂಬ ವಿಶೇಷಣದಿಂದ **ಇಂದ್ರನಿಗೂ ಅಂಗಿರಸ್ಸುಗಳಿಗೂ** ನಿಕಟವಾದ ಸಂಬಂಧವಿದೆಯೆಂದೂ ಋಗ್ವೇದಸಂಹಿತೆಯ ೮ನೇ ಭಾಗದ ೧೮೮-೧೯೯ ನೇ ಪುಟಗಳಲ್ಲಿ ತಿಳಿಸಿದೆ. ಇಲ್ಲಿ ಅಗ್ನಿಗೂ ಅಂಗಿರಸ್ಸುಗಳಿಗೂ ಇರುವ ಸಂಬಂಧವನ್ನು ತಿಳಿಯಬೇಕಾಗಿದೆ.

ಈ ಋಕ್ಕಿನಲ್ಲಿ **ಅಂಗಿರೋಭ್ಯಃ** ಎಂದು ಬಹುವಚನವಿರುವುದರಿಂದ **ಅಂಗಿರಸ್** ಎಂಬ ಋಷಿಗಳ ಸಂತತಿಯನ್ನು ಹೇಳಿದೆಯೆಂದು ಗೊತ್ತಾಗುತ್ತದೆ ಈ ಸಂತತಿಗೆ ಅಗ್ನಿಯೇ ಮೂಲಪುರುಷನು. ಅವನಿಂದಲೇ ಅಂಗಿರಸ್ಸೆಂಬ ಋಷಿಯೂ ಉತ್ಪನ್ನನಾದನು. ಮತ್ತು ಆ ಸಂತತಿಯು ಬೆಳೆಯಿತು ಎಂಬ ಕಥೆಯು

**ತ್ವಮಗ್ನೇ ಪ್ರಥಮೋ ಅಂಗಿರಾ ಋಷಿರ್ದೇವೋ ದೇವಾನಾಮಭವಃ ಶಿವಃ ಸಖಾ ।**
(ಋ. ಸಂ. ೧-೩೧-೧)

ಎಂಬ ಋಕ್ಸಂಹಿತಾವಾಕ್ಯದಲ್ಲಿ ಹೇಳಿದೆ. ಇದೇ ಕಥೆಯು—

**ಯೇಽಂಗಿರಾ ಆಸಂಸ್ತೇಽಂಗಿರಸೋಽಭವನ್ ।**

(ಐ. ಬ್ರಾ. ೩-೩೪)

ಎಂದು ಐತರೇಯಬ್ರಾಹ್ಮಣದಲ್ಲಿಯೂ ಇದರಂತೆಯೇ ಇನ್ನೂ ಕೆಲವು ಕಡೆಗಳಲ್ಲಿಯೂ **ಅಂಗಿರಸ್ಸೆಂಬ** ಋಷಿಗಳು ಗುಹೆಯಲ್ಲಿ ಅಡಗಿದ್ದ ಅಗ್ನಿಯನ್ನು ಹುಡುಕಿ ಅವನನ್ನು ಸಂಪಾದಿಸಿಕೊಂಡರು ಎಂಬ ಕಥೆಯು ಹೇಳಲ್ಪಟ್ಟಿದೆ.

**ಸಮಿದ್ಭಿರ್ಹ್ಯೇತಮಂಗಿರಸ ಐಂಧತ ।**

(ಶ. ಬ್ರಾ. ೧-೪-೧-೨೫)

ಎಂದು ಶತಪಥಬ್ರಾಹ್ಮಣದಲ್ಲಿ ಅಂಗಿರಸ್ಸುಗಳು ಅಗ್ನಿಯನ್ನು ಪಡೆದುದನ್ನೂ ಅವರು ಅಗ್ನಿಯನ್ನೂ ಪೂಜಿಸಿದುದನ್ನೂ ವರ್ಣಿಸಿದೆ. ಪ್ರಕೃತವಾದ ಋಕ್ಕಿನಲ್ಲಿ **ಉದ್ರೂಶೋ ಧೇನುಸ್ತ್ವದರ್ಥಮೇವ ದುಹ್ಯತೇ ಇತ್ಯಗ್ನಿಸ್ತುತಿಃ ।** ಇಂತಹ ಧೇನವು ನಿನ್ನ ಪೂಜೆಗಾಗಿಯೇ ಕರೆಯಲ್ಪಡುತ್ತದೆ ಎಂದು **ಅಗ್ನಿಸ್ತುತಿಯಿದೆ. ಅಂಗಿರಸ್** ಎಂಬ ಪದದಿಂದ ಸೂಚಿತವಾಗುವ ವಿಶೇಷವಿಷಯಗಳನ್ನು ಋ. ಸಂ. ೧-೩೧-೧ನೇ ಋಕ್ಕಿನ ವಿವರಣೆಯಲ್ಲಿ ನೋಡಬಹುದು.

॥ ವ್ಯಾಕರಣಪ್ರಕ್ರಿಯಾ ॥

**ಶೃಣುಹಿ**—ಶ್ರು ಶ್ರವಣೇ ಧಾತು. ಲೋಟ್ ಮಧ್ಯಮಪುರುಷಏಕವಚನದಲ್ಲಿ ಸಿಪಿಗೆ ಹಿ ಆದೇಶ. **ಶ್ರುವಃ ಶೃಚ** (ಪಾ. ಸೂ. ೩-೧-೭೪) ಎಂಬುದರಿಂದ ಧಾತುವಿಗೆ ಶೃ ಆದೇಶ.. ಶ್ನು ವಿಕರಣ. **ಉತಶ್ಚಪ್ರತ್ಯಯಾದ-ಸಂಯೋಗಪೂರ್ವಾತ್** ( ಪಾ. ಸೂ. ೬-೪-೧೦೬ ) ಎಂಬುದರಿಂದ ಹಿ ಲೋಪಪ್ರಾಪ್ತವಾದರೆ **ಛಂದಸಿ ವಾ ವಚನಮ್** ಎಂಬುದರಿಂದ ವಿಕಲ್ಪದಿಂದ ಇಲ್ಲಿ ಬರುವುದಿಲ್ಲ. ತಿಙಂತನಿಘಾತಸ್ವರ ಬರುತ್ತದೆ.

**ಈಳಿತಃ**—ಈಡ ಸ್ತುತೌ ಧಾತು. ಕರ್ಮಣಿಯಲ್ಲಿ ನಿಷ್ಠಾ ಎಂಬುವುದರಿಂದ ಕ್ತಪ್ರತ್ಯಯ. **ಆರ್ಧಧಾತು-ಕಸ್ಯೇಡ್ವಲಾದೇಃ** ಎಂಬುದರಿಂದ ಅದಕ್ಕೆ ಇಡಾಗಮ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಬ್ರವಸಿ**—ಬ್ರೂಙ್ ವ್ಯಕ್ತಾಯಾಂ ವಾಚಿ. ಧಾತು. ಲೇಟ್‌ಮಧ್ಯಮಪುರುಷ ಏಕವಚನದಲ್ಲಿ ಸಿಪ್ ಪ್ರತ್ಯಯ. **ಲೇಟೋಽಡಾಟೌ** (ಪಾ. ಸೂ ೩-೪-೯೪) ಎಂಬುದರಿಂದ ಅಡಾಗಮ. **ಅದಿಪ್ರಭೃತಿಭ್ಯಃ ಶಪಃ** ಎಂಬುದರಿಂದ ಶಪಿಗೆ ಲುಕ್. ಪ್ರತ್ಯಯವನ್ನು ನಿಮಿತ್ತೀಕರಿಸಿ ಧಾತುವಿನ ಇಕಿಗೆ ಗುಣ, ಅವಾದೇಶ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಯಜ್ಞಿಯೇಭ್ಯಃ**—ಯಜ್ಞಾಯ ಅರ್ಹಾಃ ಯಜ್ಞಿಯಾಃ ತೇಭ್ಯಃ **ಯಜ್ಞರ್ತ್ವಿಗ್ಭ್ಯಾಮ್**—(ಪಾ. ಸೂ. ೫-೧-೭೧) ಎಂಬುದರಿಂದ ಅರ್ಹಾರ್ಥದಲ್ಲಿ ಘಪ್ರತ್ಯಯ. **ಆಯನೇಯೀನೀ** - (ಪಾ. ಸೂ. ೭-೧-೨) ಎಂಬುದರಿಂದ ಅದಕ್ಕೆ ಇಯಾದೇಶ. **ಯಸ್ಯೇತಿಚ** ಎಂಬುದರಿಂದ ಪ್ರಾತಿಪದಿಕದ ಅಕಾರಕ್ಕೆ ಲೋಪ. ಪ್ರತ್ಯಯದ ಆದ್ಯುದಾತ್ತಸ್ವರದಿಂದ ಇಕಾರ ಉದಾತ್ತವಾಗುತ್ತದೆ.

**ದೇವಾಃ**—ದಿವು ಧಾತುವು ಕಾಂತ್ಯರ್ಥದಲ್ಲಿ ಪ್ರಯುಕ್ತವಾಗಿದೆ. ಪಚಾದಿಯಲ್ಲಿ ಸೇರಿರುವುದರಿಂದ **ನಂದಿ-ಗ್ರಹಿಪಚಾದಿಭ್ಯಃ**—ಎಂಬುದರಿಂದ ಅಚ್ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿನ ಲಘೂಪಧೆಗೆ ಗುಣ. ಸಂಬೋಧನಾಬಹುವಚನಾಂತರೂಪ. ಆಮಂತ್ರಿತ ನಿಘಾತಸ್ವರ ಬರುತ್ತದೆ.

**ಅವತ್ತನ**—ಡುದಾಞ್ ದಾನೇ. ಧಾತು. ಲಙ್ ಪ್ರಥಮಪುರುಷ ಬಹುವಚನದಲ್ಲಿ **ತಪ್ತನಪ್ತನಥನಾಶ್ಚ** (ಪಾ. ಸೂ. ೭-೧-೪೫) ಎಂಬುದರಿಂದ ಅದಕ್ಕೆ ತನಾದೇಶ. ಯದ್ ಯೋಗವಿರುವುದರಿಂದ **ನಿಪಾತೈರ್ಯದ್ಯದಿ**—(ಪಾ. ಸೂ. ೮-೧-೩೦) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾದ ಪದವಾಗುತ್ತದೆ.

**ದುಹ್ರೇ**—ದುಹ ಪ್ರಪೂರಣೇ. ಧಾತು. ಲಿಟ್ ಪ್ರಥಮಪುರುಷ ಏಕವಚನದಲ್ಲಿ ತಪ್ರತ್ಯಯ. **ಲಿಟಸ್ತ-ಝಯೋ**—ಎಂಬುದರಿಂದ ಅದಕ್ಕೆ ಏಶಾದೇಶ. **ಬಹುಲಂ ಛಂದಸಿ** ಎಂಬುದರಿಂದ ಅದಕ್ಕೆ ರುಟಾಗಮ. **ಛಂದಸಿ ವಾ ವಚನಮ್** ಎಂಬುದರಿಂದ ಲಿಣ್ನಿಮಿತ್ತವಾಗಿ ಧಾತುವಿಗೆ ದ್ವಿತ್ವಾದಿಗಳು ಬರುವುದಿಲ್ಲ. ಅಥವಾ ಲಟಿನಲ್ಲಿಯೇ ತಪ್ರತ್ಯಯ ಬಂದಾಗ ಅದರ ತಕಾರಕ್ಕೆ **ಲೋಪಸ್ತ ಆತ್ಮನೇ ಪದೇಷು** (ಪಾ. ಸೂ. ೭-೧-೪೧) ಎಂಬುದರಿಂದ ಲೋಪ. **ಅದಿಪ್ರಭೃತಿಭ್ಯಃ ಶಪಃ** ಎಂಬುದರಿಂದ ಶಪಿಗೆ ಲುಕ್. ಅತಿಙಂತದ ಪರವಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ

**ಕರ್ತರಿ**—ಡುಕೃಞ್ ಕರಣೇ. ಧಾತು. ಕರ್ತರಿಯಲ್ಲಿ ತೃಚ್‌ಪ್ರತ್ಯಯ ಅದನ್ನು ನಿಮಿತ್ತೀಕರಿಸಿ ಧಾತುವಿನ ಇಕಿಗೆ ಗುಣ. ಸಪ್ತಮೀ ಏಕವಚನದಲ್ಲಿ **ಋತೋಙಿ ಸರ್ವನಾಮಸ್ಥಾನಯೋಃ** ಎಂಬುದರಿಂದ ಗುಣ ರಪರವಾಗಿ ಬರುತ್ತದೆ. ತೃಚ್ ಚಿತ್ತಾದುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಸಚಾ**—ಷಚ ಸಮವಾಯೇ ಧಾತು. **ಧಾತ್ವಾದೇಃ ಷಃ ಸಃ** ಎಂಬುದರಿಂದ ಆದಿಗೆ ಸತ್ವ. **ಕ್ವಿಪ್ ಚ** ಎಂಬುದರಿಂದ ಕ್ವಿಪ್ ಪ್ರತ್ಯಯ. **ಸುಪಾಂ ಸುಲುಕ್**—(ಪಾ ಸೂ. ೭-೧-೩೯) ಎಂಬುದರಿಂದ ಆಕಾರಾದೇಶ

**ವೇದ**—ವಿದ ಜ್ಞಾನೇ. ಧಾತು. ಲಟ್ ಪ್ರಥಮಪುರುಷ ಏಕವಚನದಲ್ಲಿ **ವಿದೋ ಲಟೋ ವಾ** (ಪಾ. ಸೂ. ೩-೪-೮೩) ಎಂಬುದರಿಂದ ಣಲಾದೇಶ. **ಪುಗಂತಲಘೂಪದಸ್ಯ ಚ** ಎಂಬುದರಿಂದ ಧಾತುವಿನ ಲಘೂಪಧೆಗೆ ಗುಣ. ತಿಙಂತನಿಘಾತಸ್ವರ ಬರುತ್ತದೆ ‖ ೭ ‖



ಸಂಹಿತಾಪಾಠಃ

ನೋ ಷು ವೋ ಅಸ್ಮದಭಿ ತಾನಿ ಪೌಂಸ್ಯಾ ಸನಾ ಭೂವನ್ದ್ಯುಮ್ನಾನಿ ನೋ-
ತ ಜಾರಿಷುರಸ್ಮತ್ಪುರೋತ ಜಾರಿಷುಃ ।
ಯದ್ವಶ್ಚಿತ್ರಂ ಯುಗೇಯುಗೇ ನವ್ಯಂ ಘೋಷಾದಮರ್ತ್ಯಂ ।
ಅಸ್ಮಾಸು ತನ್ಮರುತೋ ಯಚ್ಚ ದುಷ್ಟರಂ ದಿಧೃತಾ ಯಚ್ಚ ದುಷ್ಟರಂ ‖೮‖

ಪದಪಾಠಃ

ಮೋ ಇತಿ । ಸು । ವಃ । ಅಸ್ಮತ್ । ಅಭಿ । ತಾನಿ । ಪೌಂಸ್ಯಾ । ಸನಾ । ಭೂವನ್ । ದ್ಯುಮ್ನಾನಿ । ಮಾ । ಉತ । ಜಾರಿಷುಃ । ಅಸ್ಮತ್ । ಪುರಾ । ಉತ । ಜಾರಿಷುಃ ।

ಯತ್ । ವಃ । ಚಿತ್ರಂ । ಯುಗೇಽಯುಗೇ । ನವ್ಯಂ । ಘೋಷಾತ್ । ಅಮರ್ತ್ಯಂ ।

ಅಸ್ಮಾಸು । ತತ್ । ಮರುತಃ । ಯತ್ । ಚ । ದುಸ್ತರಂ । ದಿಧೃತ । ಯತ್ । ಚ । ದುಸ್ತರಂ ॥ ೮ ॥

। ಸಾಯಣಭಾಷ್ಯಂ ॥

ಮೋ ಷು ವೋ ಅಸ್ಮದಿತಿ ಪ್ರಸ್ಥಿತಯಾಜ್ಯಾ । ಸೂತ್ರಿತಂ ಚ । ಮೋ ಷು ವೋ ಅಸ್ಮದಭಿ ತಾನಿ ಪೌಂಸ್ಯಾ ಷೂ ಣೋ ಅಗ್ನೇ । ಆ. ೮-೧ । ಇತಿ ॥

ಹೇ ಮರುತಃ ವೋ ಯುಷ್ಮತ್ಸಂಬಂಧೀನಿ ತಾನಿ ಪ್ರಸಿದ್ಧಾನಿ ಪೌಂಸ್ಯಾ ಪೌಂಸ್ಯಾನಿ ಬಲಾನಿ ಸನಾ ಸದಾತನಾನಿ ನಿತ್ಯಾನಿ ದ್ಯುಮ್ನಾನಿ ಪ್ರಕಾಶಯುಕ್ತಾನಿ । ಯದ್ವಾ । ಸನಾ ಸಂಭಜನೀಯಾನಿ ದ್ಯುಮ್ನಾನಿ ಧನವಂತಿ ಯಶೋವಂತಿ ವಾ ॥ ಮತ್ವರ್ಥೀಯೋ ಲುಪ್ಯತೇ । ಮೋ ಇತಿ ನಿಪಾತದ್ವಯಸಮುದಾಯ ಉಶಬ್ದೋಽವಧಾರಣೇ ॥ ಅಸ್ಮದಸ್ಮಾನ್ ಮೋ ಷ್ವಭಿ ಭೂವನ್ । ಸುಷ್ಠು ಮೈವಾಭಿಭವನ್ । ಯದ್ವಾ । ಅಸ್ಮತ್ತೋಽಪಗತಾನಿ ಮಾ ಭೂವನ್ । ಉತಾಪಿ ಚ । ಯದ್ವಾ । ದ್ಯುಮ್ನಾನೀತ್ಯೇತದುತ್ತರತ್ರ ಸಂಬಧ್ಯತೇ। ದ್ಯುಮ್ನಾನಿ ಧನಾನಿ ಯಶಾಂಸಿ ವಾಸ್ಮದೀಯಾನಿ ಮಾ ಜಾರಿಷುಃ । ಕ್ಷೀಣಾನಿ ಮಾ ಭೂವನ್ । ಉತಾಪಿ ಚಾಸ್ಮತ್ಪುರಾ ಪುರಾಣಿ ಲಕ್ಷಣಯಾ ತತ್ರಸ್ಥಾಃ ಪ್ರಾಣಿನೋ ಮಾ ಜಾರಿಷುಃ । ಜೀರ್ಣಾ ನಷ್ಟಾ ಮಾ ಭೂವನ್ । ಕಿಂಚ ವೋ ಯುಷ್ಮತ್ಸಂಬಂಧಿ ಚಿತ್ರಂ ಚಾಯನೀಯಂ ನಾನಾವಿಧಂ ನವ್ಯಂ ನೂತನಂ ಸ್ತೋತವ್ಯಂ ವಾಮರ್ತ್ಯಮಮರಣಧರ್ಮಕಂ ಮರ್ತ್ಯೇಷು ದುರ್ಲಭಂ ವಾ ಯದಸ್ತಿ ಘೋಷಾತ್ ಘೋಷಾಃ ॥ ವ್ಯತ್ಯಯೇನ ಪಂಚಮೀ ॥ ಶಬ್ದೋಪೇತಾ ಗವಾದಯೋ ಘೋಷೋಪಲಕ್ಷಿತಾ ಗ್ರಾಮನಗರಾದಯೋ ವಾ ಯೇ ಸಂತಿ ತತ್ಸರ್ವಂ ಯುಗೇ ಯುಗೇ ಯುಗಶಬ್ದೋಪಲಕ್ಷಿತೇ ತತ್ತತ್ಕಾಲೇಽಸ್ಮಾಸು । ಅಸ್ಮಾಸ್ವೇವ ಭವತ್ವಿತಿ ಶೇಷಃ । ನಾನ್ಯಸ್ಯ । ಕಿಂಚ ಹೇ ಮರುತಃ ಯಚ್ಚ ದುಸ್ತರಂ ದುಃಖೇನ ತರಣೀಯಂ ಸಂಪಾದನೀಯಂ ಧನಂ ದಿಧೃತ ಧಾರಯತ ತದಸ್ಮಾಸು । ಕಿಂಚ ದುಸ್ತರಂ ಶತ್ರುಭಿರಹಿಂಸಿತಂ ತತ್ಸರ್ವಮಪಿ ವಿಶೇಷೇಣಾಸ್ಮಾಸು ಸ್ಥಾಪಯತ ॥

ಪ್ರತಿಪದಾರ್ಥ

(ಹೇ) ಮರುತಃ—ಎಲೈ ಮರುದ್ದೇವತೆಗಳೇ, । ವಃ—ನಿಮ್ಮ (ನಿಮ್ಮ ಸಂಬಂಧವಾದ) । ತಾನಿ - ಪ್ರಸಿದ್ಧವಾದ । ಪೌಂಸ್ಯಾ—ಬಲಗಳು (ಶಕ್ತಿ ಸಾಮರ್ಥ್ಯಗಳು) । ಸನಾ—ಯಾವಾಗಲೂ (ನಾಶವಿಲ್ಲದೆ) ಇರತಕ್ಕವು । (ಮತ್ತು) । ದ್ಯುಮ್ನಾನಿ—ಪ್ರಕಾಶಯುಕ್ತವಾದವು (ಉತ್ಕೃಷ್ಟವಾದವು) [ಅಥವಾ ಸನಾ—ಪಡೆಯಲು ಯೋಗ್ಯವಾದವೂ । ದ್ಯುಮ್ನಾನಿ—ಧನ ಅಥವಾ ಯಶಸ್ಸನ್ನುಂಟುಮಾಡುವವುಗಳಾಗಿಯೂ ಇರುವವು] । (ಆ ನಿಮ್ಮ ಶಕ್ತಿ ಸಾಮರ್ಥ್ಯಗಳು) ಅಸ್ಮತ್—ನಮ್ಮನ್ನು । ಮೋ ಷು ಅಭಿ ಭೂವನ್—ನಮಗೆ ತೊಂದರೆಯನ್ನು

ಮಾಡದಿರಲಿ ಅಥವಾ ನಮ್ಮನ್ನು ಬಿಟ್ಟು ಹೋಗದಿರಲಿ. । **ಉತ**—ಮತ್ತು । **(ದ್ಯುಮ್ನಾನಿ)**—ನಮ್ಮ ಧನಗಳು ಅಥವಾ ಯಶಸ್ಸುಗಳು । **ಮಾ ಜಾರಿಷುಃ**—ಕ್ಷೀಣವಾಗದಿರಲಿ । **ಉತ**—ಮತ್ತು । **ಅಸ್ಮತ್**—ನಮ್ಮ । **ಪುರಾ**—ಪಟ್ಟಣಗಳು (ಅಥವಾ ಅವುಗಳಲ್ಲಿರುವ ಜನರೂ ಮತ್ತು ಪ್ರಾಣಿಗಳು) । **(ಮಾ) ಜಾರಿಷುಃ**—ನಷ್ಟವಾಗದಿರಲಿ (ಮತ್ತು) । **ವಃ**—ನಿಮ್ಮ (ನಿಮ್ಮನ್ನು ಉದ್ದೇಶಿಸಿ ಮಾಡುವ) । **ಚಿತ್ರಂ**—ನಾನಾ ವಿಧವಾದ ಅಥವಾ ಆಶ್ಚರ್ಯಕರವಾದ । **ನವ್ಯಂ**—ಹೊಸದಾದ (ಅಥವಾ ಸ್ತುತಿಸಲ್ಪಡುವ) । **ಅಮರ್ತ್ಯಂ**—ಮನುಷ್ಯರಲ್ಲಿ ದುರ್ಲಭವಾದ ವಸ್ತುವು । **ಯತ್**—ಯಾವುದಿದೆಯೋ (ಅಥವಾ) । **ಘೋಷಾತ್**—ಶಬ್ದಮಾಡುವ ಪ್ರಾಣಿಗಳೂ ಜನಗಳೂ ಸಹ । **ತತ್**—ಅದೆಲ್ಲವೂ । **ಯುಗೇಯುಗೇ**—ಆಯಾ ಕಾಲಗಳಲ್ಲಿ । **ಅಸ್ಮಾಸು**—ನಮ್ಮಲ್ಲಿರುವಂತಾಗಲಿ । **(ಹೇ) ಮರುತಃ**—ಎಲೈ ಮರುದ್ದೇವತೆಗಳೇ । **ದುಸ್ತರಂ**—ಬಹು ಕಷ್ಟದಿಂದ ಸಂಪಾದಿಸಲ್ಪಡಬೇಕಾದ । **ಯತ್ ಚ**—ಯಾವ ಧನವುಂಟೋ ಅದನ್ನು । **ದಿಧೃತ**—ನಮ್ಮಲ್ಲಿ ಇರಿಸಿ (ಇರುವಂತೆ ಮಾಡಿ) **(ಮತ್ತು) ದುಸ್ತರಂ**—ಶತ್ರುಗಳ ತೊಂದರೆಗೊಳಗಾಗದ । **ಯಚ್ಚ**—ಯಾವ ವಸ್ತುಗಳುಂಟೋ (ಅವೆಲ್ಲವನ್ನೂ ನಮ್ಮಲ್ಲಿರುವಂತೆ ಮಾಡಿರಿ.)

### ಭಾವಾರ್ಥ

ಎಲೈ ಮರುದ್ದೇವತೆಗಳೇ, ನಿಮ್ಮ ಪ್ರಶಸ್ಯವಾದ ಶಕ್ತಿಸಾಮರ್ಥ್ಯಗಳು ನಮಗೆ ತೊಂದರೆಯನ್ನುಂಟುಮಾಡದಿರಲಿ. ನಮ್ಮ ಧನವು ಕ್ಷೀಣಿಸದಿರಲಿ. ನಮ್ಮ ಪಟ್ಟಣಗಳು (ಮತ್ತು ಅವರಲ್ಲಿರುವ ಜನರು ಮತ್ತು ಪ್ರಾಣಿಗಳು) ನಷ್ಟವಾಗದಿರಲಿ. ಅತ್ಯಾಶ್ಚರ್ಯಕರವಾದವೂ ಶ್ರೇಷ್ಠವಾದವೂ ನಾಶವಿಲ್ಲದವೂ ಆದ ಯಾವ ವಸ್ತುಗಳುಂಟೋ ಅವೆಲ್ಲವೂ ಶಬ್ದಾದಿಗಳನ್ನು ಮಾಡುವ ಪ್ರಾಣಿಗಳಿಗೂ ಜನರಾದ ನಮಗೂ ಸದಾ ಇರುವಂತಾಗಲಿ. ಬಹು ಕಷ್ಟದಿಂದ ಸಂಪಾದಿಸಲ್ಪಡಬೇಕಾದ ಮತ್ತು ಶತ್ರುಗಳಿಂದ ಅಪಹರಿಸಲ್ಪಡದಿರುವ ಧನಾದಿವಸ್ತುಗಳೂ ನಮ್ಮಲ್ಲಿರುವಂತಾಗಲಿ.

### English Translation

Never, Maruts, may your glorious energies be exerted against us ; may our (riches) never diminish : never may our towns decay : and may whatever is wonderful, admirable, immortal, or (whatever is recognized to be living), from its sound, that has been yours from age to age, (devolve) upon us ; whatever is most difficult (of attainment) bestow upon us ; whatever is most difficult (to be attained).

### ವಿಶೇಷವಿಷಯಗಳು

ಹಿಂದೆ ಹೇಳಿದ ದಶರಾತ್ರವೆಂಬ ಯಾಗದಲ್ಲಿ **ಮೋ ಷು ವೋ ಅಸ್ಮತ್** ಎಂಬ ಈ ಋಕ್ಕನ್ನೇ ಪ್ರಸ್ಥಿತಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಮೋ ಷು ವೋ ಅಸ್ಮದಭಿ ತಾನಿ ಪೌಂಸ್ಯಾ ಷೂ ಣೋ ಅಗ್ನೇ ಎಂಬ ಸೂತ್ರದಿಂದ ವಿವೃತವಾಗಿರುವುದು.** (ಆ. ೮-೧)

**ವಃ ತಾನಿ ಪೌಂಸ್ಯಾ—ಯುಷ್ಮತ್ಸಂಬಂಧೀನಿ ಬಲಾನಿ ।** ನಿಮ್ಮ ಪ್ರಸಿದ್ಧವಾದ ಶಕ್ತಿಗಳು ಎಂದು ಮರುತ್ತುಗಳ ಸಂಘಾತಾತ್ಮಕವಾದ ಶಕ್ತಿಯನ್ನು ಪ್ರಶಂಸಿಸಿದೆ.

ಸನಾ ದ್ಯುಮ್ನಾನಿ—ಈ ಎರಡು ಪದಗಳೂ ವಿಶೇಷಣಗಳು ಸನಾ ಎನ್ನುವುದಕ್ಕೆ ಮೊದಲು ಸದಾತನಾನಿ, ನಿತ್ಯಾನಿ ಶಾಶ್ವತವಾದುದು ಎಂತಲೂ, **ದ್ಯುಮ್ನಾನಿ** ಎಂಬ ಪದಕ್ಕೆ **ಪ್ರಕಾಶಯುಕ್ತಾನಿ** ಪ್ರಕಾಶಮಾನವಾದ ಎಂದೂ ಅರ್ಥಮಾಡಿದ್ದಾರೆ. ಅಥವಾ **ಸನಾ-ಸಂಭಜನೀಯಾನಿ** ಪೂಜ್ಯವು **ದುಮ್ನಾನಿ** ಧನ ಅಥವಾ ಯಶಸ್ಸನ್ನು ಉಳ್ಳವು ಎಂದು ಎರಡನೆಯ ಅರ್ಥವನ್ನು ಹೇಳಿದ್ದಾರೆ. ಮರುತ್ತುಗಳ ಪೌಂಸ್ಯಗಳು ಅನಾದಿಕಾಲದಿಂದಲೂ ಪ್ರಸಿದ್ಧವಾದವೂ ಪ್ರಕಾಶಮಾನವೂ ಆದುದರಿಂದ ಮೊದಲನೆಯ ಅರ್ಥವು ಉಚಿತವಾಗಿದೆ.

**ಪ್ರವೇಪಯಂತಿ ಪರ್ವತಾನ್ವಿ ವಿಂಚಂತಿ ವನಸ್ಪತೀನ್ ।**

(ಋ. ಸಂ. ೧-೩೯-೫)

**ವನಾ ಚಿದುಗ್ರಾ ಜಿಹತೇ ನಿ ವೋ ಭಿಯಾ ಪೃಥಿವೀ ಚಿದ್ರೇಜತೇ ಪರ್ವತಶ್ಚಿತ್ ।**

(ಋ ಸಂ. ೫-೬೦-೨)

ಇತ್ಯಾದಿ ಋಕ್ಕುಗಳಲ್ಲಿ ವರ್ಣಿಸುವಂತೆ ಮರುತ್ತುಗಳ ಪ್ರಭಾವಕ್ಕೆ ಪರ್ವತಾದಿಗಳೆಲ್ಲವೂ ಕಂಪಿಸುತ್ತವೆ. ಪೃಥಿವ್ಯಂತರಿಕ್ಷಗಳೂ ನಡುಗುತ್ತವೆಯಾದ್ದರಿಂದ ಇವರ ಶಕ್ತಿಯನ್ನು ತಿಳಿಯುವವರೇ ಇಲ್ಲ. ಆದುದರಿಂದಲೇ ಎರಡನೆಯ ಅರ್ಥವೂ ಸಹಜವಾಗಿದೆ. ಅಂತರಿಕ್ಷದಲ್ಲಿ ಸಂಚರಿಸತಕ್ಕವರು ಯಾರೇ ಆಗಲಿ ಅವರು ಮರುತ್ತುಗಳಿಗೆ ತಿಳಿಸದೇ ಸಂಚರಿಸುವಂತೆಯೇ ಇಲ್ಲ. ಮರುತ್ತುಗಳನ್ನು ಅಲಕ್ಷಿಸಿದರೆ ಆಗ ಅವರಿಗೆ ತಡೆಯು ಸಿದ್ಧ.

**ತಾಸು ವದಮುಸ್ತಿ ಸ್ವಸ್ತಿ ರಾಯೋ ಮರುತೋ ದಧಾತನೇತಿ ಮರುತೋ ಹ ವೈ ದೇವವಿಶೋಽಂತರಿಕ್ಷಭಾಜನಾಸ್ತೇಭ್ಯೋ ಹ ಯೋ ನಿವೇದ್ಯ ಸ್ವರ್ಗಂ ಲೋಕಮೇತೀಶ್ವರಾ ಹೈನಂ ನಿ ವಾ ರೋದ್ಧೋರ್ವಿ ವಾ ಮಥಿತೋಃ ಸ ಯದಾಹ ಸ್ವಸ್ತಿ ರಾಯೋ ಮರುತೋ ದಧಾತನೇತಿ ತಂ ಮರುದ್ಭ್ಯೋ ದೇವವಿಡ್ಭ್ಯೋ ಯಜಮಾನಂ ನಿವೇದಯತಿ ನ ಹ ವಾ ಏನಂ ಮರುತೋ ದೇವವಿಶಃ ಸ್ವರ್ಗಂ ಲೋಕಂ ಯಂತಂ ನಿರುಂಧತೇ ನ ವಿಮಥ್ನತೇ । ಸ್ವಸ್ತಿ ಹೈನಮತ್ಯರ್ಜಂತಿ ಸ್ವರ್ಗಂ ಲೋಕಮಭಿ ಯ ಏವಂ ವೇದ ।**

(ಐ. ಬ್ರಾ. ೧-೧೦)

ಮರುತ್ತುಗಳು ದೇವತೆಗಳ ಪ್ರಜೆಗಳಾಗಿ ಅಂತರಿಕ್ಷವನ್ನೆಲ್ಲಾ ವ್ಯಾಪಿಸಿದ್ದಾರೆ. ಅವರಿಗೆ ತಿಳಿಸದೇ ಸ್ವರ್ಗಕ್ಕೆ ಹೋಗತಕ್ಕವರನ್ನು ಅವರು ಖಂಡಿತವಾಗಿಯೂ ತಡೆಯುತ್ತಾರೆ ಅಥವಾ ನಾಶಮಾಡುತ್ತಾರೆ. **ಸ್ವಸ್ತಿ ರಾಯೋ ಮರುತಃ** ಎಂಬ ವಾಕ್ಯವನ್ನು ಪಠಿಸುತ್ತಾ ಅವರನ್ನು ಪೂಜಿಸಿದರೆ ಆಗ ಅವರು ತಡೆಯುವುದಿಲ್ಲ. ಈ ರಹಸ್ಯವನ್ನು ತಿಳಿದವನಿಗೆ ಶ್ರೇಯಸ್ಸು ಖಂಡಿತ ಎಂಬ ಐತರೇಯಬ್ರಾಹ್ಮಣಾದಿ ವಾಕ್ಯಗಳಿಂದ ಮರುತ್ತುಗಳ ಶಕ್ತಿಯೂ ಅನುಗ್ರಾಹಕವಾದ ಅಥವಾ ನಿಗ್ರಹಾತ್ಮಕವಾದ ಪ್ರಭಾವವೂ ವರ್ಣಿತವಾಗಿದೆ. ಅದೇ ಅಂಶವನ್ನು ಇಲ್ಲಿಯೂ ವಿವರಿಸುತ್ತಾ **ಅಸ್ಮತ್ ಪುರಾ ಮಾ ಜಾರಿಷುಃ ।** ನಮ್ಮ ಧನಾದಿ ಸಂಪತ್ತುಗಳೂ ಪುತ್ರಾದ್ಯೈಶ್ವರ್ಯಗಳೂ ಕ್ಷಯಿಸದಂತೆ ದಯಮಾಡಿ ಎಂದು ಪ್ರಾರ್ಥಿಸಿದೆ.

**ಘೋಷಾತ್**—ಶಬ್ದೋಪೇತಾ ಗವಾದಯೋ ಘೋಷೋಪಲಕ್ಷಿತಾ ಗ್ರಾಮನಗರಾದಯೋ ವಾ ಯೇ ಸಂತಿ ಎಂದು ಶಬ್ದಗಳಿಂದ ಕೂಡಿದ ಗೋವುಗಳಾಗಲಿ, ಗ್ರಾಮನಗರಗಳಾಗಲಿ ಇಲ್ಲಿ ಉಪಲಕ್ಷಿತವಾಗಿವೆ. ಇವು ನಮಗೆ ಶಾಶ್ವತವಾಗಿರುವಂತೆ ಮಾಡಿ ಎಂದು ಬೇಡಿದೆ. ಘೋಷ ಶಬ್ದವು **ವಾಙ್** ನಾಮಗಳಲ್ಲಿ ಪಠಿತವಾಗಿದೆ. (ನಿ. ೧-೧೧). ಈ ಶಬ್ದಕ್ಕೆ ಸಾಧಾರಣವಾಗಿ ಶಬ್ದವೆಂಬ ಅರ್ಥವಾದರೂ ಸಹ, ಆ ಶಬ್ದದಲ್ಲೂ ಒಂದು ವಿಶಿಷ್ಟವಾದ

ಶಕ್ತಿಯನ್ನು ತೋರಿಸುವ ಅರ್ಥದಲ್ಲಿ ಈ ಶಬ್ದದ ಪ್ರಯೋಗವಿದೆ. ಸಂಹಿತೆಗಳಲ್ಲೂ ಬ್ರಾಹ್ಮಣಾದಿಗಳಲ್ಲೂ **ಘೋಷ** ಶಬ್ದಕ್ಕೆ ಅಲೌಕಿಕವಾದ ಶಕ್ತಿಯನ್ನೊಳಗೊಂಡ ಶಬ್ದವೆಂದೇ ಅರ್ಥವಾಗುತ್ತದೆ. **ವಿ ರೋದಸೀ ಅತಪದ್ಘೋಷ ಏಷಾಂ** (ಋ. ಸಂ. ೩-೩೧-೧೦), **ಅಯಾಮಿ ಘೋಷ ಇಂದ್ರ** (ಋ. ಸಂ. ೭-೨೩-೨) ಇತ್ಯಾದಿ ಸಂಹಿತಾ ವಾಕ್ಯಗಳಲ್ಲೂ,

**ತಾ ವಾ ಏತಾಃ ಸರ್ವಾ ಋಚಃ ಸರ್ವೇ ವೇದಾಃ ಸರ್ವೇ ಘೋಷಾ ಏಕೈವ ವ್ಯಾಹೃತಿಃ ।**
(ಐ. ಆ. ೧-೨-೨)

**ಮಯಿ ಸ್ತೋಭೋ, ಮಯಿ ಸ್ತೋಮೋ ಮಯಿ ಶ್ಲೋಕೋ ಮಯಿ ಘೋಷೋ ಮಯಿ ಯಶಃ ।**
(ಐ. ಆ. ೫-೧-೫)

**ಯೋನೇದಮನ್ನಂ ಪಚ್ಯತೇ ಯದಿದಮದ್ಯತೇ ತಸ್ಯೈಷ ಘೋಷೋ ಭವತಿ ।**
(ಶ. ಬ್ರಾ. ೧೪-೮-೧೦-೧)

**ಸರ್ವೇ ಸ್ವರಾ ಘೋಷವಂತೋ ಬಲವಂತೋ ವಕ್ತವ್ಯಾ ।**
(ಛಾ. ಉ. ೨-೨೨-೫)

ಇತ್ಯಾದಿ ಕಡೆಗಳಲ್ಲೂ ಅಲೌಕಿಕವಾದ ಶಕ್ತಿಯುತವಾದ ಶಬ್ದವೆಂಬ ಅರ್ಥದಲ್ಲಿ ಉಪಯೋಗಿಸಲ್ಪಟ್ಟಿದೆ. ಪ್ರಕೃತವಾದ ಋಕ್ಕಿನಲ್ಲಿ ಅಂತಹ ವಿಶೇಷವಾದ ಅರ್ಥವಿಲ್ಲದಿದ್ದರೂ ಸಹ ಅತಿಶಯವಾದ ಹರ್ಷಕ್ಕೆ ಸಾಧನವಾದ ಗವಾದಿಗಳ ಧ್ವನಿ ಅಥವಾ ಗ್ರಾಮವಾಸಿಗಳ ಧ್ವನಿಯೆಂದರ್ಥ. ಇಂತಹ ಸಂತೋಷಜನಕವಾದ ಧ್ವನಿಗಳಿಂದ ಕೂಡಿದ ಗವಾದಿ ಸಂಪತ್ತನ್ನು ನಮಗೆ ಶಾಶ್ವತವಾಗಿ ಕೊಡಿ ಎಂದು ಪ್ರಾರ್ಥಿಸಿದೆ.

**ದುಸ್ತರಂ**—ಈ ಪದವು ದ್ವಿರುಕ್ತವಾಗಿದೆ. ಮೊದಲನೆಯ ಪದಕ್ಕೆ ಧನಾರ್ಜನೆಯ ಶ್ರಮವೆಂದೂ, ಎರಡನೆಯದಕ್ಕೆ ಧನದ ರಕ್ಷಣೆಯ ಶ್ರಮವೆಂದೂ ಅರ್ಥ. **ದುಸ್ತರಂ—ದುಃಖೇನ ತರಣೀಯಂ ಸಂಪಾದನೀಯಂ ।** ಅತ್ಯಂತ ಶ್ರಮದಿಂದ ಸಂಪಾದಿಸಲು ಯೋಗ್ಯವಾದ ಎಂದೂ, **ದುಸ್ತರಂ—ಶತ್ರುಭಿರಹಿಂಸಿತಂ ।** ಶತ್ರುಗಳ ತೊಂದರೆಗೆ ಸಿಕ್ಕದ ಎಂದೂ ಅರ್ಥ.

**ಯುಗೇ ಯುಗೇ—ಯುಗಶಬ್ದಃ ಕಾಲವಚನಃ ।** ಆಯಾಕಾಲಗಳಲ್ಲಿ ಎಂದರ್ಥ. ನಮ್ಮ ಯಜ್ಞಯಾಗಾದಿ ಕಾಲಗಳಲ್ಲಿ ಎಂದಾಗಲಿ ಅಥವಾ ನಮ್ಮ ಮತ್ತು ನಮ್ಮ ಪುತ್ರಪೌತ್ರಾದಿಗಳ ಜೀವಿತಕಾಲಗಳಲ್ಲಿ ಎಂದಾಗಲಿ ಅರ್ಥವಾಗುತ್ತದೆ.

॥ ವ್ಯಾಕರಣಪ್ರಕ್ರಿಯಾ ॥

**ಮೋ ಷು**—ಮಾ ಉ ಎಂಬುದಾಗಿ ಎರಡು ನಿಪಾತಗಳಿವೆ. **ಸುಞಃ** (ಪಾ. ಸೂ. ೮-೩-೧೦೭) ಎಂಬುದರಿಂದ ಸುಞಿನ ಸಕಾರಕ್ಕೆ ಷತ್ವ.

**ಅಸ್ಮತ್**— ಪಂಚಮೀ ಬಹುವಚನಾಂತರೂಪ. ಪ್ರಥಮವ್ಯಾಖ್ಯಾನದಲ್ಲಿ **ಸುಪಾಂ ಸುಲುಕ್**—ಎಂಬುದರಿಂದ ವಿಭಕ್ತಿಗೆ ಲುಕ್.

**ಪೌಂಸ್ಯಾ**—ಪೌಂಸ್ಯಾನಿ ಎಂದು ರೂಪವಾದಾಗ **ಶೇಶ್ಛಂದಸಿ ಬಹುಲಮ್** (ಪಾ. ಸೂ. ೬-೧-೭೦) ಎಂಬುದರಿಂದ ಶಿಗೆ ಲೋಪ. ಸನಾ ಎಂಬಲ್ಲಿಯೂ ಹೀಗೆಯೇ ಶಿಲೋಪ.

**ಭೂವನ್**—ಭೂ ಸತ್ತಾಯಾಂ ಲುಙ್ ಪ್ರಥಮಪುರುಷ ಬಹುವಚನಾಂತರೂಪ. **ನಮಾಙ್‌ಯೋಗೇ** (ಪಾ. ಸೂ. ೬-೪-೭೪) ಎಂಬುದರಿಂದ ಅಡಾಗಮ ಬರುವುದಿಲ್ಲ. ತಿಙಂತನಿಘಾತಸ್ವರ ಬರುತ್ತದೆ.

**ಜಾರಿಷುಃ** — ಜ್ಯೂಷ್ ವಯೋಹಾನೌ ಧಾತು. ಲುಙ್ ಪ್ರಥಮಪುರುಷ ಬಹುವಚನದಲ್ಲಿ ಝಿ ಪ್ರತ್ಯಯ. ಚ್ಲಿಗೆ ಸಿಚಾದೇಶ. ಅದಕ್ಕೆ ಇಡಾಗಮ. **ಸಿಜಭ್ಯಸ್ತವಿದಿಭ್ಯಶ್ಚ** (ಪಾ. ಸೂ. ೪-೩-೧೦೯) ಎಂಬುದ ರಿಂದ ಝಿಗೆ ಜುಸಾದೇಶ. **ಸಿಚಿವೃದ್ಧಿಃ ಪರಸ್ಮೈಪದೇಷು** (ಪಾ. ಸೂ. ೭-೨-೧) ಎಂಬುದರಿಂದ ಧಾತುವಿನ ಇಕಿಗೆ ವೃದ್ಧಿ. ರಪರವಾಗಿ ಬರುತ್ತದೆ. ಇಲ್ಲಿಯೂ ಮಾಙ್ ಸಂಬಂಧವಿರುವುದರಿಂದ **ನಮಾಙ್ ಯೋಗೇ** ಎಂಬುದರಿಂದ ಅಡಾಗಮ ಬರುವುದಿಲ್ಲ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಯುಗೇಯುಗೇ**—**ನಿತ್ಯವೀಪ್ಸಯೋಃ** (ಪಾ. ಸೂ. ೮-೧-೩) ಎಂಬುದರಿಂದ ದ್ವಿರ್ವಚನ ಬಂದಾಗ ಪರಕ್ಕೆ ಆಮ್ರೇಡಿತಸಂಜ್ಞೆ ಇರುವಾಗ **ಅನುದಾತ್ತಂಚ** (ಪಾ. ಸೂ. ೮-೧-೨) ಎಂಬುದರಿಂದ ಸರ್ವಾನುದಾತ್ತ ವಾಗುತ್ತದೆ.

**ನವ್ಯಮ್**—**ಯತೋಽನಾವಃ** ಎಂಬುದರಿಂದ ಯತ್ ಪ್ರತ್ಯಯಾಂತವಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಘೋಷಾತ್**—ಘೋಷಾಃ ಎಂದು ಆಗಬೇಕು. **ಸುಪಾಂ ಸುಪೋ ಭವಂತಿ** ಎಂಬ ವಚನದಿಂದ ಪಂಚಮೀ ಬಂದಿದೆ.

**ಅಮರ್ತ್ಯಮ್**—ನ ಮರ್ತ್ಯಃ ಅಮರ್ತ್ಯಃ ತಮ್. **ತತ್ಪುರುಷೇ ತುಲ್ಯಾರ್ಥ**—(ಪಾ. ಸೂ. ೬-೨-೨) ಎಂಬುದರಿಂದ ನಞ್ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ದುಸ್ತರಮ್**—ತೄ ಪ್ಲವನತರಣಯೋಃ ಧಾತು. ಇದಕ್ಕೆ ದುಸ್ ಉಪಪದವಾಗಿರುವಾಗ **ಈಷದ್ದುಃ-ಸುಃ ಕೃ**—(ಪಾ. ಸೂ. ೩-೩-೧೨೬) ಎಂಬುದರಿಂದ ಖಲ್ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿನ ಇಕಿಗೆ ಗುಣ. ರಪರವಾಗಿ ಬರುತ್ತದೆ. ಪ್ರತ್ಯಯ ಲಿತ್ತಾದುದರಿಂದ **ಲಿತಿ** (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ. ಪ್ರಾದಿಸಮಾಸದಲ್ಲಿ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ದಿಧೃತ**—ಧೃ ಙ್ ಧಾರಣೇ ಧಾತು ಲೋಟ್ ಮಧ್ಯಮಪುರುಷ ಬಹುವಚನದಲ್ಲಿ ಲಙ್ಭಾವವಿರುವುದ ರಿಂದ ತಾದೇಶ. ಬಹುಲಂ ಛಂದಸಿ ಎಂಬುದರಿಂದ ಶಪಿಗೆ ಶ್ಲು ಆದೇಶ. ಶ್ಲೌ ಎಂಬುದರಿಂದ ಧಾತುವಿಗೆ ದ್ವಿತ್ವ. ಬಹುಲಂ ಛಂದಸಿ ಎಂಬುದರಿಂದ ಅಭ್ಯಾಸಕ್ಕೆ ಇತ್ವ. ರಪರವಾಗಿ ಬಂದಾಗ ಆದಿಹಲ್‌ಶೇಷ. ಪ್ರತ್ಯಯಕ್ಕೆ ಙಿತ್ವಾ ತಿದೇಶ ವಿರುವುದರಿಂದ ಧಾತುವಿನ ಋಕಾರಕ್ಕೆ ಗುಣ ಬರುವುದಿಲ್ಲ. ಯತ್ ಸಂಬಂಧವಿರುವುದರಿಂದ ನಿಪಾತೈರ್ಯ ದ್ಯದಿ—ಎಂಬುದರಿಂದ ನಿಘಾತಪ್ರತಿಷೇಧ ಬರುವುದರಿಂದ ಪ್ರತ್ಯಯಕ್ಕೆ ಅಂತೋದಾತ್ತಸ್ವರ ಬರುತ್ತದೆ. ॥ ೮ ॥

———:C:———

ಸಂಹಿತಾಪಾಠಃ

ದಧ್ಯಙ್ ಹ ಮೇ ಜನುಷಂ ಪೂರ್ವೋ ಅಂಗಿರಾಃ ಪ್ರಿಯಮೇಧಃ ಕಣ್ವೋ-
ಅತ್ರಿರ್ಮನುರ್ವಿದುಸ್ತೇ ಮೇ ಪೂರ್ವೇ ಮನುರ್ವಿದುಃ ।
ತೇಷಾಂ ದೇವೇಷ್ವಾಯತಿರಸ್ಮಾಕಂ ತೇಷು ನಾಭಯಃ ।
ತೇಷಾಂ ಪದೇನ ಮಹ್ಯಾ ನಮೇ ಗಿರೇಂದ್ರಾಗ್ನೀ ಆ ನಮೇ ಗಿರಾ ॥ ೯ ॥

। ಪದಪಾಠಃ ।

ದಧ್ಯಙ್ । ಹ । ಮೇ । ಜನುಷಂ । ಪೂರ್ವಃ । ಅಂಗಿರಾಃ । ಪ್ರಿಯಽಮೇಧಃ । ಕಣ್ವಃ । ಅತ್ರಿಃ ।
ಮನುಃ । ವಿದುಃ । ತೇ । ಮೇ । ಪೂರ್ವೇ । ಮನುಃ । ವಿದುಃ ।
ತೇಷಾಂ । ದೇವೇಷು । ಆಽಯತಿಃ । ಅಸ್ಮಾಕಂ । ತೇಷು । ನಾಭಯಃ ।
ತೇಷಾಂ । ಪದೇನ । ಮಹಿ । ಆ । ನಮೇ । ಗಿರಾ । ಇಂದ್ರಾಗ್ನೀ ಇತಿ । ಆ । ನಮೇ । ಗಿರಾ ॥ ೯ ॥

ಸಾಯಣಭಾಷ್ಯಂ

ಪೃಷ್ಠ್ಯಸ್ಯ ಷಷ್ಠೇಽಹನ್ಯಚ್ಛಾವಾಕಸ್ಯ ಪ್ರಸ್ಥಿತಯಾಜ್ಯಾಯಾಃ ಪುರಸ್ತಾತ್ ದಧ್ಯಙ್ ಹ ಮ ಇತ್ಯೇಷಾ । ಸೂತ್ರಿತಂ ಚ । ದಧ್ಯಙ್ ಹ ಮೇ ಜನುಷಂ ಪೂರ್ವೋ ಅಂಗಿರಾ ಇತ್ಯೇವಮೇವ ಮಾಧ್ಯಂದಿನೇ । ಆ. ೮-೧ । ಇತಿ ।

ದಧ್ಯಙ್ಙಥರ್ವಗೋತ್ರೋತ್ಪನ್ನ ಏತನ್ನಾಮಕೋ ಮಹರ್ಷಿಃ ಸ ಚ ಪೂರ್ವಃ ಪೂರಕಃ ಸರ್ವಸ್ಯ ಪುರಾತನೋ ವಾ ಅಂಗಿರಾ ಅಂಗಾರಃ । ತದ್ವತ್ತೇಜಸ್ವೀತ್ಯರ್ಥಃ । ಯದ್ವಾ । ಅಂಗಾರಾ ಏವಾಂಗಿರಸೋಽಭವನ್ ಯೇಽಂಗಾರಾ ಆಸಂಸ್ತೇಽಂಗಿರಸೋಽಭವನ್ನಿತಿ ಶ್ರುತೇಃ । ಅಂಗಿರಾ ಅಂಗಾರಾ ಅಂಕನಾ ಅಂಚನಾ ಇತಿ ನಿರುಕ್ತಂ । ಏತನ್ನಾಮಾ ಮಹರ್ಷಿಶ್ಚ ಪ್ರಿಯಮೇಧೋ ಮೇಧಾಪ್ರಿಯಃ । ಪ್ರಿಯಮೇಧಃ ಪ್ರಿಯಾ ಅಸ್ಯ ಮೇಧಾಃ । ನಿ ೩ ೧೭ । ಇತಿ ಯಾಸ್ಕಃ । ಸ ಚ ಕಣ್ವೋ ಮೇಧಾವೀ ಸ ಚಾತ್ರಿರ್ದುಃಖತ್ರಯರಹಿತಃ । ಅತ್ರಿರ್ನ ತ್ರಯ ಇತಿ ನಿರುಕ್ತಂ । ೩-೧೭ । ಮನುರ್ಮನನವಾನೇತನ್ನಾಮಾ ಮಹರ್ಷಿಃ । ಏತೇ ಸರ್ವೇ ಮಹಾತ್ಮಾನೋ ಮಹರ್ಷಯೋ ಮೇ ಜನುಷಂ ದಿವೋದಾಸಪುತ್ರಸ್ಯ ಪರುಚ್ಛೇಪಸ್ಯ ಜನ್ಮ ವಿದುಃ । ಜಾನಂತಿ ॥ ವೇತ್ತೇರ್ವಿದೋ ಲಟೋ ವೇತಿ ಝೇರುಸಾದೇಶಃ ॥ ಕಿಂಚ ತೇ ಪೂರ್ವೋಕ್ತಾಃ ಪೂರ್ವೇ ಪೂರ್ವಕಾಲೀನಾ ಮೇಽಸ್ಮತ್ಪಿತ್ರಾದೀಞ್ಜಾನಂತ ಇತ್ಯರ್ಥಃ । ಮನುರ್ಮನನ್ವೋ ಜ್ಞಾನವಂತೋ

ಯತಸ್ತೇ ಪೂರ್ವೇ ಮಾನವಶ್ಚ ಅತೋ ವಿದುರಿತಿ ಭಾವಃ॥ ಸುಪಾಂ ಸುಲುಗಿತಿ ಜಸೋ ಲುಕ್॥ ತೇಷಾಂ ಜ್ಞಾನ ಉಪಪತ್ತಿಮಾಹ. ತೇಷಾಂ ದಧ್ಯಙ್ಙಾದೀನಾಂ ದೇವೇಷ್ವಿತರೇಷು ದೇವನಶೀಲೇಷು ಮಹರ್ಷಿಷು ಮಧ್ಯ ಆಯತಿರ್ದೀರ್ಘಕಾಲಸಂಬಂಧೋಽಸ್ತಿ । ಅತೋ ವಿದುರಿತ್ಯರ್ಥಃ । ತತಶ್ಚ ಕಿಮಿತ್ಯಾಹ । ಅಸ್ಮಾಕಂ ನಾಭಯೋ ಜೀವೇನ ಸಹ ಬಂಧವಂತಃ ಪ್ರಾಣಾಃ ಫಲೇನ ಸಂಬದ್ಧಾ ಯಾಗಾ ವಾ ತೇಷು । ತೇಷ್ವೇವ ವರ್ತಂತೇ । ಅಸೌ ವಿಶಿಷ್ಟಜನ್ಮಾತೋ ಯಜ್ಞಯೋಗ್ಯ ಇತಿ ತೈರ್ವಕ್ತವ್ಯತ್ವೇನ ತದಧೀನತ್ವಂ । ತೇಷಾಂ ದಧ್ಯಙ್ಙಾದೀನಾಂ ಪದೇನಾಸ್ಪದೇನ ಮಹತ್ತ್ವೇನ ನಿಮಿತ್ತೇನ ಗಿರಾ ಸ್ತುತಿರೂಪಯಾ ವಾಚಾ ಮಹಿ ಮಹದತ್ಯಧಿಕಂ ನಮೇ । ನಮತಿ ಸರ್ವೋ ಜನಃ । ಕಿಂಚ ತೇಷಾಮನುಗ್ರಹಾದ್ಯಜ್ಞಯೋಗ್ಯಃ ಸನ್ನಿಂದ್ರಾಗ್ನೀ ಗಿರಾ ಸ್ತುತಿರೂಪಯಾ ವಾಚಾ ಯುಕ್ತಃ ಸನ್ನಾ ನಮೇ । ಆಭಿಮುಖ್ಯೇನ ನಮಾಮಿ ಸ್ತೌಮಿ । ನಮಾಮಿ ಚೇತ್ಯರ್ಥಃ ॥ ನಮೇರ್ವ್ಯತ್ಯಯೇನಾತ್ಮನೇಪದಂ ॥ ಯದ್ವಾ॥ ಕರ್ಮಕರ್ತರಿ ನ ದುಹಸ್ನುನಮಾಮಿತಿ ಯಕಃ ಪ್ರತಿಷೇಧಃ ॥ ಸ್ವಯಮೇವ ನತೋಽಸ್ಮಿ ॥

ಪ್ರತಿಪದಾರ್ಥ

**ದಧ್ಯಙ್ ಹ**—ದಧೀಚಿ ಋಷಿಯೂ । **ಪೂರ್ವಃ**—ಅತ್ಯಂತ ಪ್ರಾಚೀನನಾದ । **ಅಂಗಿರಾಃ**—ಅಂಗಿರಾ ಋಷಿಯೂ । **ಪ್ರಿಯಮೇಧಃ**— ಪ್ರಿಯಮೇಧನೂ । **ಕಣ್ವಃ**— ಕಣ್ವನೂ । **ಅತ್ರಿಃ**—ಅತ್ರಿಯೂ । **ಮನುಃ**—ಮನುವೂ (ಈ ಎಲ್ಲಾ ಋಷಿಗಳೂ) । **ಮೇ ಜನುಷಂ**—(ದಿವೋದಾಸ ಪುತ್ರನೂ, ಪರುಚ್ಛೇಪನೆಂಬ ಹೆಸರುಳ್ಳವನೂ ಆದ) ನನ್ನ ಉತ್ಪತ್ತಿಯನ್ನು । **ವಿದುಃ**—ತಿಳಿದಿದ್ದಾರೆ । **ಪೂರ್ವೇ**—ಅತ್ಯಂತ ಪ್ರಾಚೀನರಾದ । **ತೇ**—ಈ ಋಷಿಗಳೆಲ್ಲಾ । **ಮನುಃ**—ಜ್ಞಾನಿಗಳಾದುದರಿಂದ । **ಮೇ**—ನನ್ನ (ಪಿತೃಪಿತಾಮಹಾದಿಗಳನ್ನು) । **ವಿದುಃ**—ತಿಳಿದಿದ್ದಾರೆ । **ತೇಷಾಂ**—ಆ ಋಷಿಗಳಿಗೆ । **ದೇವೇಷು**—ಪ್ರಕಾಶಮಾನರಾದ ಇತರ ಋಷಿಗಳೊಂದಿಗೆ । **ಆಯತಿಃ**—ದೀರ್ಘವಾದ ಸಂಬಂಧವಿದೆ । **ಅಸ್ಮಾಕಂ**—ನಮ್ಮ । **ನಾಭಯಃ**—ಮುಖ್ಯಪ್ರಾಣಗಳು ಅಥವಾ ಜೀವರೂಪವಾದವೂ, ಫಲದಾಯಕವಾದವೂ ಆದ ಯಾಗಗಳು । **ತೇಷು**—ಅದರಲ್ಲೇ ಇದೆ. (ಅವರ ಸಹಾಯವನ್ನೇ ಅಪೇಕ್ಷಿಸಿದೆ)। **ತೇಷಾಂ**—ದಧೀಚ್ಯಾದಿಋಷಿಗಳ । **ಪದೇನ**— ಮಹತ್‌ಸ್ಥಾನಗಳ ನಿಮಿತ್ತವಾಗಿ । **ಗಿರಾ**— ಸ್ತುತಿರೂಪವಾದ ವಾಕ್ಕಿನಿಂದ । **ಮಹಿ**—ಅತ್ಯಧಿಕವಾಗಿ । **ನಮೇ**—ನಮಿಸುತ್ತೇನೆ (ಮತ್ತು ಅವರ ಅನುಗ್ರಹದಿಂದಲೇ ನಾನು ಯಾಗ ಯೋಗ್ಯನಾಗಿದ್ದು) **ಇಂದ್ರಾಗ್ನೀ**— ಇಂದ್ರಾಗ್ನಿಗಳನ್ನು । **ಗಿರಾ**—ಸ್ತುತಿರೂಪವಾದ ವಾಕ್ಕಿನೊಡನೆ । **ನಮೇ**—ನಮಿಸುತ್ತೇನೆ ॥

ಭಾವಾರ್ಥ

ಪ್ರಾಚೀನರಾದ ದಧೀಚಿ, ಅಂಗಿರಸ್, ಪ್ರಿಯಮೇಧ, ಕಣ್ವ, ಅತ್ರಿ, ಮನು ಇತ್ಯಾದಿ ಋಷಿಗಳು ನನ್ನ ಪಿತೃಪಿತಾಮಹಾದಿಗಳನ್ನೂ ದಿವೋದಾಸಪುತ್ರನಾದ ನನ್ನನ್ನೂ ಚೆನ್ನಾಗಿ ಅರಿತಿದ್ದಾರೆ. ಅವರು ಚಿರಜೀವಿಗಳಾದುದರಿಂದ ದೇವತೆಗಳೊಂದಿಗೂ, ದೇವಮಾನರಾದ ಇತರ ಋಷಿಗಳೊಂದಿಗೂ ದೀರ್ಘವಾದ ಸಂಬಂಧವನ್ನು ಹೊಂದಿದ್ದಾರೆ. ನಮ್ಮ ಮುಖ್ಯಪ್ರಾಣಗಳೂ, ಸ್ಥಿತಿಪ್ರಗತಿಗಳೂ ಅವರನ್ನೇ ಆಶ್ರಯಿಸಿವೆ ಅವರಿಗೆ ಮಹತ್ತ್ವಪೂರಿತವಾದ ಸ್ಥಾನಗಳ ಲಾಭಕ್ಕಾಗಿ ದೇವತೆಗಳನ್ನು ಸ್ತುತಿಸುತ್ತೇನೆ. ಮತ್ತು ಸ್ತುತಿಗಳಿಂದ ಇಂದ್ರಾಗ್ನಿಗಳನ್ನೂ ಪೂಜಿಸುತ್ತೇನೆ.

## English Translation

The ancient Dadhyanch, Angiras, Priyamedha, Kanwa, Atri, Manu, have known my birth: they who were of old and Manu have known (my

progenitors); for of them is long life amongst the gods, and in them is our existence: for the sake of their high station, I adore (the gods) with praise; I worship Indra and Agni with praise.

**ವಿಶೇಷವಿಷಯಗಳು**

ಪೃಷ್ಠ್ಯಯಾಗದ ಆರನೆಯ ದಿನದಲ್ಲಿ ಮಾಧ್ಯಂದಿನಸವನದಲ್ಲಿ ಅಚ್ಛಾವಾಕನೆಂಬ ಋತ್ವಿಜನು ಪ್ರಸ್ಥಿತ ಯಾಜ್ಯಾಮಂತ್ರಕ್ಕೆ ಪೂರ್ವಭಾವಿಯಾಗಿ **ದಧ್ಯಙ್ ಹ ಮೇ** ಎಂಬ ಈ ಋಕ್ಕನ್ನು ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ **ದಧ್ಯಙ್ ಹ ಮೇ ಜನುಷಂ ಪೂರ್ವೋ ಅಂಗಿರಾ ಇತ್ಯೇವಮೇವ ಮಾಧ್ಯಂದಿನೇ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೮-೧)

ಈ ಋಕ್ಕಿನಲ್ಲಿ ಪರುಚ್ಛೇಪಋಷಿಯು ತನ್ನ ಮತ್ತು ತನ್ನ ಪೂರ್ವಿಕರ ಪರಿಚಯವೂ ಸಂಬಂಧವೂ **ದಧೀಚ್ಯಾದಿ** ಪ್ರಾಚೀನರಾದ ಋಷಿಗಳೊಂದಿಗೆ ಯಾವ ವಿಧವಾಗಿದ್ದಿತು ಎಂಬ ಅಂಶವನ್ನು ಸೂಚಿಸಿ ಅವರಂತೆಯೇ ಉತ್ತಮವಾದ ಸ್ಥಾನವನ್ನು ಹೊಂದುವುದಕ್ಕಾಗಿ ಇಂದ್ರಾಗ್ನಿಗಳನ್ನು ಸ್ತುತಿಸುತ್ತೇನೆಂದು ಪ್ರಕಾಶಪಡಿಸಿದ್ದಾನೆ.

**ದಧ್ಯಙ್—ಅಥರ್ವಗೋತ್ರೋತ್ಪನ್ನಃ ಏತನ್ನಾಮಕೋ ಮಹರ್ಷಿಃ ।** ಇವನು ಅಥರ್ವಗೋತ್ರದಲ್ಲಿ ಹುಟ್ಟಿದ (ಅಥರ್ವಪುತ್ರನೆಂದೂ ಹೇಳಿದೆ) ಮಹರ್ಷಿ. ಇವನು ಮಧುವಿದ್ಯೆಯಲ್ಲಿ ಪ್ರಾವೀಣ್ಯತೆಯನ್ನು ಪಡೆದವನು. ಇಂದ್ರನ ಸಾಕ್ಷಾಚ್ಛಿಷ್ಯನು. ಮತ್ತು ಈ ವಿದ್ಯೆಯನ್ನು ಅಶ್ವಿನೀದೇವತೆಗಳಿಗೂ ಉಪದೇಶಿಸಿದನು ಈ ಸಂಬಂಧವಾದ ಕಥೆಯನ್ನು ಸಾಯಣರು ಋ. ಸಂ. ೧-೧೧೬-೧೨ ನೇ ಋಕ್ಕಿನ ಭಾಷ್ಯದಲ್ಲಿ ಹೇಳಿರುವುದನ್ನು ಹಿಂದೆಯೇ ಅದೇ ಋಕ್ಕಿನ ವಿಶೇಷವಿಷಯಗಳಲ್ಲಿ ತಿಳಿಸಿದೆ. ಇಲ್ಲಿ ಅದನ್ನು ಪುನರುಕ್ತಿಯನ್ನಾಗಿ ಮಾಡದೆ ಇದೇ ಕಥೆಯು ಶತಪಥ ಬ್ರಾಹ್ಮಣದಲ್ಲಿ ಉಕ್ತವಾಗಿರುವುದನ್ನೂ, ಉಪನಿಷದಾದಿಗಳಲ್ಲಿ ವಿವರಿಸಿರುವ **ಮಧುವಿದ್ಯಾಸ್ವರೂಪವನ್ನೂ**, ಈ ವಿದ್ಯಾಗ್ರಹಣದಿಂದ **ದಧೀಚಿಯ** ಹೆಸರು ಎಷ್ಟು ಪ್ರಸಿದ್ಧವಾಗಿದೆಯೆಂದೂ ಇಲ್ಲಿ ತಿಳಿಸಲಾಗುತ್ತೆ. ದಧೀಚಿಯು ಅಶ್ವಿನೀದೇವತೆಗಳಿಗೆ ಈ ವಿದ್ಯೆಯನ್ನುಪದೇಶಿಸಿದ ಸಂದರ್ಭವು ಶತಪಥಬ್ರಾಹ್ಮಣದಲ್ಲಿ ಈ ರೀತಿಯಿದೆ—

> **ದಧ್ಯಙ್ ಹ ವಾ ಆಥರ್ವಣಃ। ಏಕಂ ಶುಕ್ರಮೇತಂ ಯಜ್ಞಂ ವಿದಾಂಚಕಾರ। ಯಥಾ ಯಥೈತದ್ಯಜ್ಞಸ್ಯ ಶಿರಃ ಪ್ರತಿಧೀಯತೇ ಯಥೈಷ ಕೃತ್ಸ್ನೋ ಯಜ್ಞೋ ಭವತಿ। ಸ ಹೇಂದ್ರೇಣೋಕ್ತ ಆಸ। ಏತಂ ಚೇದನ್ಯಸ್ಮಾ ಅನುಬ್ರೂಯಾಸ್ತತ ಏವ ತೇ ಶಿರಶ್ಛಿಂದ್ಯಾಮಿತಿ।**

ಅಥರ್ವಪುತ್ರನಾದ ದಧೀಚಿಯು ಶುದ್ಧವಾದ ಈ ಯಜ್ಞತತ್ತ್ವವನ್ನು ತಿಳಿದನು। ಈ ಯಜ್ಞಶಿರವು ಪುನಃ ಸ್ಥಾಪಿತವಾದುದು ಹೇಗೆ, ಯಜ್ಞವು ಪೂರ್ಣವಾದುದು ಹೇಗೆ ಎಂದರೆ, ಇಂದ್ರನು ದಧೀಚಿಯನ್ನು ಕುರಿತು ಈ ತತ್ತ್ವವನ್ನು ನೀನು ಯಾರಿಗಾದರೂ ಹೇಳಿದರೆ ನಿನ್ನ ತಲೆಯನ್ನು ಕತ್ತರಿಸುವೆನು ಎಂದನು

> **ತದು ಹಾಶ್ವಿನೋರನುಶ್ರುತಮಾಸ। ದಧ್ಯಙ್ಙ ಹ ವಾ ಆಥರ್ವಣ ಏತಂ ಶುಕ್ರಮೇತಂ ಯಜ್ಞಂ ವೇದ ಯಥಾ ಯಥೈತದ್ಯಜ್ಞಸ್ಯ ಶಿರಃ ಪ್ರತಿಧೀಯತೇ ಯಥೈಷ ಕೃತ್ಸ್ನೋ ಯಜ್ಞೋ ಭವತಿ।**

ಆಗ ಅಶ್ವಿನೀದೇವತೆಗಳು ಇದನ್ನು ಕೇಳಿ, ದಧೀಚಿಯಿಂದ ಜ್ಞಾತವಾದ ಈ ಯಜ್ಞತತ್ತ್ವವನ್ನು ತಾವೂ ಪಡೆಯಬೇಕೆಂದು ಇಚ್ಛಿಸಿದರು.

ತೌ ಹೇತ್ಯೋಚತುಃ । ಉಪ ತ್ವಾಯಾವೇತಿ ಕಿಮನುವಕ್ಷ್ಯಮಾಣಾವಿತ್ಯೇತಂ ಶುಕ್ರಮೇತಂ ಯಜ್ಞಂ ಯಥಾ...... ಕೃತ್ಸ್ನೋ ಯಜ್ಞೋ ಭವತೀತಿ ।

ಆಗ ಅವರು ಅವನಲ್ಲಿ ಹೋಗಿ ತಾವು ಅವನ ಶಿಷ್ಯರಾಗಿ ತಾವೂ ಆ ತತ್ತ್ವವನ್ನು ತಿಳಿಯಬೇಕೆಂದು ತಮಗೂ ಉಪದೇಶಮಾಡಬೇಕೆಂದೂ ತಿಳಿಸಿದರು.

ಸ ಹೋವಾಚ । ಇಂದ್ರೇಣ ವಾ ಉಕ್ತೋಽಸ್ಮ್ಯೇತಂ ಚೇದನ್ಯಸ್ಮಾ ಅನುಬ್ರೂಯಾಸ್ತತ ಏವ ತೇ ಶಿರಶ್ಛಿಂದ್ಯಾಮಿತಿ ತಸ್ಮಾದ್ವೈ ಬಿಭೇಮಿ ಯದ್ವೈ ಮೇ ಸ ಶಿರೋ ನ ಛಿಂದ್ಯಾನ್ನ ವಾಮುಪನೇಷ್ಯ ಇತಿ ।

ಅವನು ಅದಕ್ಕೆ ಉತ್ತರವಾಗಿ ತನಗೆ ಇಂದ್ರನು ಕೊಟ್ಟಿರುವ ಆದೇಶವನ್ನು ತಿಳಿಸಿ ಅವರನ್ನು ಶಿಷ್ಯರನ್ನಾಗಿ ಪರಿಗ್ರಹಿಸಲು ಸಾಧ್ಯವಿಲ್ಲವೆಂದನು.

ತೌ ಹೋಚತುಃ । ಆವಾಂ ತ್ವಾ ತಸ್ಮಾತ್ತ್ರಾಯಸ್ಯಾವಹ ಇತಿ ಕಥಂ ಮಾ ತ್ರಾಸ್ಯೇಥೇ ಇತಿ ಯದಾ ನಾ ಉಪನೇಷ್ಯಸೇಽಥ ತೇಶಿರಶ್ಛಿತ್ತ್ವಾನ್ಯತ್ರಾಪನಿಧಾಸ್ಯಾವೋಽಥಾಶ್ವಸ್ಯ ಶಿರ ಆಹೃತ್ಯ ತತ್ತೇ ಪ್ರತಿಧಾಸ್ಯಾವಸ್ತೇನ ನಾವನುವಕ್ಷ್ಯಸಿ ಸ ಯದಾ ನಾವನುವಕ್ಷ್ಯಸ್ಯಥ ತೇ ತದಿಂದ್ರಃ ಶಿರಶ್ಛೇತ್ಸ್ಯತ್ಯಥ ತೇ ಸ್ವಂ ಶಿರ ಆಹೃತ್ಯ ತತ್ತೇ ಪ್ರತಿಧಾಸ್ಯಾವ ಇತಿ ತಥೇತಿ ।

ಅವರು ಅದಕ್ಕೆ ಪ್ರತ್ಯುತ್ತರವಾಗಿ ನಾವು ನಿನ್ನನ್ನು ರಕ್ಷಿಸುವೆವು ಎಂದರು. ಹೇಗೆಂದು ಅವನು ಕೇಳಲಾಗಿ ನಿನ್ನ ತಲೆಯನ್ನು ತೆಗೆದು ಬೇರೆ ಜಾಗದಲ್ಲಿ ಸುರಕ್ಷಿತವಾಗಿಟ್ಟು ಆ ಜಾಗದಲ್ಲಿ ಅಶ್ವಶಿರವನ್ನಿಡುವೆವು. ನಿನ್ನ ಉಪದೇಶವಾದ ಮೇಲೆ ಇಂದ್ರನು ಆ ಕೃತಕವಾದ ಶಿರಸ್ಸನ್ನು ಕತ್ತರಿಸಿದನಂತರ ಪುನಃ ನಿನ್ನ ಪ್ರಾಕೃತಿಕವಾದ ಶಿರಸ್ಸನ್ನು ತಂದಿಡುವೆವು ಎಂದು ಹೇಳಿದೊಡನೆ ಹಾಗೆಯೇ ಆಗಲೆಂದು ದಧೀಚಿಯು ಒಪ್ಪಿಕೊಂಡನು.

ತೌ ಹೋಪನಿನ್ಯೇ । ತೌ ಯದೋಪನಿನ್ಯೇಽಥಾಸ್ಯ ಶಿರಶ್ಛಿತ್ತ್ವಾನ್ಯತ್ರಾಪನಿದಧತುರಥಾಶ್ವಸ್ಯ ಶಿರ ಆಹೃತ್ಯ ತದ್ಧಾಸ್ಯ ಪ್ರತಿದಧತುಸ್ತೇನ ಹಾಭ್ಯಾಮನೂವಾಚ ಸ ಯದಾಭ್ಯಾಮನೂವಾಚಾಥಾಸ್ಯ ತದಿಂದ್ರಃ ಶಿರಶ್ಚಿಚ್ಛೇದಾಥಾಸ್ಯ ಸ್ವಂ ಶಿರ ಆಹೃತ್ಯ ತದ್ಧಾಸ್ಯ ಪ್ರತಿದಧತುಃ ।

ಕೂಡಲೇ ಅವರಿಬ್ಬರೂ ಶಿಷ್ಯವೃತ್ತಿಯನ್ನು ವಹಿಸಿ ಉಪದೇಶವನ್ನು ಗ್ರಹಿಸಿದನಂತರ ಇಂದ್ರನು ಬಂದು ಆ ಅಶ್ವಶಿರವನ್ನು ಕತ್ತರಿಸಿದನು. ಒಡನೆಯೇ ಅಶ್ವಿನೀದೇವತೆಗಳು ದಧೀಚಿಯ ಪ್ರಾಕೃತಿಕವಾದ ಶಿರವನ್ನು ಪುನಃ ಸ್ಥಾಪಿಸಿದರು.

ತಸ್ಮಾದೇತದೃಷಿಣಾಭ್ಯನೂಕ್ತಂ । ದಧ್ಯಙ್ ಹ ಯನ್ಮಧ್ವಾಥರ್ವಣೋ ವಾಮಶ್ವಸ್ಯ ಶೀರ್ಷ್ಣಾ ಪ್ರ ಯದೀಮುವಾಚೇತ್ಯಾಯತಂ ತದುವಾಚೇತಿ ಹ್ಯೈವೈತದುಕ್ತಂ ।

(ಶ. ಬ್ರಾ. ೧೪-೧-೧-೧೮ ರಿಂದ ೨೫)

ಆದುದರಿಂದಲೇ ಅಥರ್ವಪುತ್ರನಾದ ದಧೀಚಿಯು ಅಶ್ವಶಿರದ ದ್ವಾರಾ ಈ ಮಧುವಿದ್ಯೆಯನ್ನುಪದೇಶಿಸಿದನೆಂದು ಪ್ರಸಿದ್ಧವಾಗಿದೆ ಎಂಬುದಾಗಿ ಶತಪಥಬ್ರಾಹ್ಮಣದ ಕಥೆಯಿದೆ. ಇದೇ ಕಥೆಯು, ಬೃಹದ್ದೇವತೆಯಲ್ಲಿಯೂ ಇದೆ.

ಪ್ರಾದಾದ್ಬ್ರಹ್ಮಾಪಿ ಸುಪ್ರೀತಃ ಸುತಾಯ ತದಥರ್ವಣಃ ।
ಸ ಚಾಭವದೃಷಿಸ್ತೇನ ಬ್ರಹ್ಮಣಾ ದೀಪ್ತಿಮತ್ತರಃ ॥
ತಮೃಷಿಂ ನಿಷಿಷೇಧೇಂದ್ರೋ ಮೈವಂ ವೋಚಃ ಕ್ವಚಿನ್ಮಧು ।
ನಹಿ ಪ್ರೋಕ್ತೇ ಮಧುನ್ಯಸ್ಮಿನ್ ಜೀವಂತಂ ತ್ವೋತ್ಸೃಜಾಮ್ಯಹಂ ॥
ತಮೃಷಿಂ ತ್ವಶ್ವಿನೌ ದೇವೌ ವಿವಿಕ್ತೇ ಮಧ್ವಯಾಚತಾಂ ।
ಸ ಚ ತಾಭ್ಯಾಂ ತದಾಚಷ್ಟೇ ಯದುವಾಚ ಶಚೀಪತಿಃ ॥
ತಮಬ್ರೂತಾಂ ತು ನಾಸತ್ಯಾವಾಶ್ವ್ಯೇನ ಶಿರಸಾ ಭವಾನ್ ।
ಮಧ್ವಾಶು ಗ್ರಾಹಯತ್ವಾವಾಂ ಮೇಂದ್ರಶ್ಚ ತ್ವಾ ವಧೀತ್ತತಃ ॥
ಆಶ್ವ್ಯೇನ ಶಿರಸಾ ತೌ ತು ದಧ್ಯಙ್ಙಾಹ ಯದಶ್ವಿನೌ ।
ತದಸ್ಯೇಂದ್ರೋಽಹರತ್ಸ್ವಂ ತನ್ನ್ಯಧತ್ತಾಮಸ್ಯ ಯಚ್ಛಿರಃ ॥
ದಧೀಚಶ್ಚ ಶಿರಶ್ಚಾಶ್ವ್ಯಂ ಕೃತ್ತಂ ವಜ್ರೇಣ ವಜ್ರಿಣಾ ।
ಪಪಾತ ಸರಸೋ ಮಧ್ಯೇ ಪರ್ವತೇ ಶರ್ಯಣಾವತಿ ॥
ತದದ್ಭ್ಯಸ್ತು ಸಮುತ್ಥಾಯ ಭೂತೇಭ್ಯೋ ವಿವಿಧಾನ್ವರಾನ್ ।
ಪ್ರಾದಾಯ ಯುಗಪರ್ಯಂತಂ ತಾಸ್ವೇವಾಪ್ಸು ನಿಮಜ್ಜತಿ ।

(ಬೃ. ದೇ. ೩-೧೮ ರಿಂದ ೨೪)

ಎಂಬ ವಾಕ್ಯಗಳಲ್ಲಿ ಇದೇ ಕಥೆಯನ್ನು ಹೇಳಿದೆ. ಕಥೆಯ ವಿವರಣೆಯಲ್ಲಿ ಏನೂ ವ್ಯತ್ಯಾಸವಿಲ್ಲ. ಆದರೆ ಕೊನೆಯಲ್ಲಿ ಇಂದ್ರನ ವಜ್ರಾಯುಧದಿಂದ ಕತ್ತರಿಸಲ್ಪಟ್ಟ ಆ ಅಶ್ವಶಿರವು **ಶರ್ಯಣಾವತ್ತೆಂಬ** ಪರ್ವತದಲ್ಲಿರುವ ಸರೋವರದಲ್ಲಿ ಬಿದ್ದುದೂ, ಅದು ಪದೇ ಪದೇ ನೀರಿನಿಂದ ಮೇಲಕ್ಕೆದ್ದು ಸಕಲ ಪ್ರಾಣಿಗಳಿಗೂ ತಕ್ಕ ವರಗಳನ್ನು ಪ್ರಭೂತವಾಗಿ ಕೊಡುತ್ತಾ ಯುಗಪರ್ಯಂತವಾಗಿ ಅಲ್ಲೇ ಮುಳುಗಿರುವುದೆಂದು ಹೇಳಿರುವ ವಿಷಯವು ಮಾತ್ರ ಇಲ್ಲಿ ಹೆಚ್ಚಾಗಿದೆ.

ಇದೇ **ಮಧುವಿದ್ಯೆಯು ಯಜ್ಞಶಿರ**ವೆಂದೂ **ಯಜ್ಞತತ್ತ್ವ**ವೆಂದೂ ಶತಪಥಬ್ರಾಹ್ಮಣದಲ್ಲಿ ಹೇಳಿರುವಂತೆ ಬೃಹದಾರಣ್ಯಕದಲ್ಲಿಯೂ ಸಹ ಇದರ ಮಹಿಮೆಯನ್ನು ಸ್ತುತಿಸಿ ಇದೇ **ಅಧ್ಯಾತ್ಮಪುರುಷತತ್ತ್ವವು** ಎಂದು ಹೇಳಿದೆ ಅಲ್ಲಿ **ತದ್ವಾಂ ನರಾ ಸನಯೇ ದಂಸ ।** (ಋ. ಸಂ. ೧-೧೧೬-೧೨), **ಆಥರ್ವಣಾಯಾಶ್ವಿನಾ ದಧೀಚೇಽಶ್ವ್ಯಂ** (೧-೧೧೭-೨೨), ಎಂಬ ಋಕ್ಕುಗಳನ್ನೂ.

ರೂಪಂರೂಪಂ ಪ್ರತಿರೂಪೋ ಬಭೂವ ತದಸ್ಯ ರೂಪಂ ಪ್ರತಿಚಕ್ಷಣಾಯ ।
ಇಂದ್ರೋ ಮಾಯಾಭಿಃ ಪುರುರೂಪ ಈಯತೇ ಯುಕ್ತಾ ಹ್ಯಸ್ಯ ಹರಯಃ ಶತಾ ದಶ ।

(ಋ. ಸಂ. ೬-೪೭-೧೮)

ಎಂಬ ಋಕ್ಕನ್ನೂ ಉದಹರಿಸಿ ಇಯಂ ವೈ ತನ್ಮಧು ದಧ್ಯಙ್ಙಾಥರ್ವಣೋಽಶ್ವಿಭ್ಯಾಮುವಾಚ । ಅಥರ್ವಪುತ್ರನಾದ ದಧೀಚಿಯು ಅಶ್ವಿನೀದೇವತೆಗಳಿಗೆ ಉಪದೇಶಿಸಿದ ಮಧುವಿದ್ಯೆಯಿದೇ ಎಂದೂ ಇದೇ ಪರಮಪುರುಷಾರ್ಥತತ್ತ್ವವನ್ನುಪದೇಶಿಸುವುದೆಂದೂ ಹೇಳಿದೆ. (ಬೃ. ಉ. ೨-೫-೧೬ ರಿಂದ ೧೯)

ದಧೀಚಿಯು ಅಗ್ನ್ಯಂಶನೆಂಬ ವಿಷಯವು ತೈತ್ತಿರೀಯ ಸಂಹಿತೆಯಲ್ಲಿ ಉಕ್ತವಾಗಿದೆ. ಮೊದಲು,

ತ್ವಾಮಗ್ನೇ ಪುಷ್ಕರಾದಧೀತ್ಯಾಹ ಪುಷ್ಕರಪರ್ಣೇ ಹ್ಯೇನಮುಪಶ್ರಿತಮವಿಂದತ್ತಮು ತ್ವಾ ದಧ್ಯಙ್ ಋಷಿರಿತ್ಯಾಹ ದಧಙ್ ವಾ ಅಥರ್ವಣಸ್ತೇಜಸ್ವ್ಯಾಸೀತ್ತೇಜ ಏವಾಸ್ಮಿನ್ದಧಾತಿ ।
(ತೈ. ಸಂ. ೫-೧-೪-೪)

ಎಲೈ ಅಗ್ನಿಯೇ, ಅಥರ್ವಪುತ್ರನೂ, ಅತ್ಯಂತ ತೇಜಸ್ವಿಯೂ ಆದ ದಧೀಚಿಯು ಪುಷ್ಕರಪರ್ಣದಲ್ಲಿ ಆಶ್ರಯವನ್ನು ಪಡೆದಿದ್ದ ನಿನ್ನ ದರ್ಶನವನ್ನು ಪಡೆದನು ಎಂದು ಹೇಳಿ ಅನಂತರ,

ಇಂದ್ರೋ ದಧೀಚೋ ಅಸ್ಥಭಿರ್ವೃತ್ರಾಣ್ಯಪ್ರತಿಷ್ಕುತಃ । ಜಘಾನ ನವತೀರ್ನವ ॥
(ಋ. ಸಂ. ೧-೮೪-೧೩)

ಎಂಬ ಋಕ್ಕನ್ನುದಹರಿಸಿ,

ಪ್ರಜಾಪತಿರ್ವಾ ಅಥರ್ವಾಗ್ನಿರೇವ ದಧ್ಯಙ್ಙಾಥರ್ವಣಸ್ತಸ್ಯೇಷ್ಟಕಾ ಅಸ್ಥಾನ್ಯೇತಗ್ಂ ಹ ವಾವ ತದೃಷಿರಭ್ಯನೂವಾಚೇಂದ್ರೋ ದಧೀಚೋ ಅಸ್ಥಭಿರಿತಿ ಯದಿಷ್ಟಕಾಭಿರಗ್ನಿಂ ಚಿನೋತಿ ।
(ತೈ. ಸಂ. ೫-೬-೬-೩)

ಅಥರ್ವನೇ ಪ್ರಜಾಪತಿಯು, ಆಥರ್ವದಧೀಚಿಯೇ ಅಗ್ನಿಯು. ಅವನ ಮೂಳೆಗಳೇ ಇಟ್ಟಿಗೆಗಳು. ಆದುದರಿಂದ ಇಂದ್ರೋ ದಧೀಚೋ ಅಸ್ಥಭಿಃ ಎಂಬ ಮಂತ್ರವನ್ನು ಹೇಳುತ್ತಾ ಇಟ್ಟಿಗೆಗಳಿಂದ ಅಗ್ನಿಚಯನವನ್ನು ಮಾಡುತ್ತಾನೆ ಎಂದು ದಧೀಚಿಗೂ ಅಗ್ನಿಗೂ ತಾದಾತ್ಮ್ಯವನ್ನು ಹೇಳಿದೆ. ಇಂತಹ ದೈವಾಂಶಸಂಭೂತನೂ, ಮಹತ್ತಾದ ಮಹಿಮೆಯುಳ್ಳವನೂ ಆದ ದಧೀಚಿಯೊಡನೆ ತನಗಿರುವ ಸಂಬಂಧವನ್ನು ಸೂಕ್ತದ್ರಷ್ಟೃವಾದ ಪರುಚ್ಛೇಪ ಋಷಿಯು ಹೇಳಿಕೊಳ್ಳುತ್ತಾನೆ.

ಅಂಗಿರಾಃ—ಅಂಗಿರಸ್ಸೆಂಬ ಋಷಿ, ಅಥವಾ ಸಂತತಿ ಅಥವಾ ಅಗ್ನಿಯ ಪರ್ಯಾಯನಾಮ. ಇವುಗಳ ವಿವರಣೆಯನ್ನು ೧-೩೧-೧ ; ೧-೧೦೦-೪ ; ೧-೧೩೯-೭ ಈ ಋಕ್ಕುಗಳ ವಿಶೇಷ ವಿಷಯಗಳಲ್ಲಿ ಹೇಳಿದೆ.

ಪ್ರಿಯಮೇಧಃ—ಪ್ರಿಯಾ ಅಸ್ಯ ಮೇಧಾಃ (ನಿ. ೩-೧೩) ಯಜ್ಞಯಾಗಾದಿಗಳು ಯಾವನಿಗೆ ಪ್ರಿಯವೋ ಅವನೆಂದು ನಿರುಕ್ತಕಾರರ ನಿರ್ವಚನವಿದೆ. ಇದು ಯಜ್ಞಾಭಿಮಾನಿಯಾದ ಋಷಿಗೆ ವಿಶೇಷಣವಾಗಬಹುದು. ಅಥವಾ ವ್ಯಕ್ತಿಯ ಹೆಸರಾಗಬಹುದು. ಪ್ರಕೃತವಾದ ಋಕ್ಕಿನಲ್ಲಿ ಋಕ್ಸಂಹಿತೆಯಲ್ಲಿ ಕೆಲವು ಸೂಕ್ತಗಳ ದ್ರಷ್ಟೃವಾದ ಋಷಿಯೆಂದು ತಿಳಿಯುತ್ತದೆ. ಈ ಋಷಿಯ ವಿಷಯವನ್ನು ಋಗ್ವೇದ ಸಂಹಿತೆಯಲ್ಲಿ ೧-೪೫-೩ ನೇ ಋಕ್ಕಿನ ವಿಶೇಷ ವಿಷಯಗಳಲ್ಲಿ ಹೇಳಿದೆ.

ಕಣ್ವಃ—ಋಕ್ಸಂಹಿತೆಯಲ್ಲಿಯೂ ಇತರ ಸಂಹಿತಾಬ್ರಾಹ್ಮಣಾದಿಗಳಲ್ಲಿಯೂ ಕಣ್ವನ ಹೆಸರು ಬಹಳ ಪ್ರಸಿದ್ಧವಾಗಿದೆ. ಋಗ್ವೇದದ ೮ನೇ ಮಂಡಲದಲ್ಲಿ ಬಹುಭಾಗವು ಕಾಣ್ವ ಸಂತತಿಯ ಋಷಿಗಳಿಂದ ದೃಷ್ಟವಾದ ಸೂಕ್ತಗಳೆಂದೂ ಆ ಮಂಡಲವೇ ಕಾಣ್ವಮಂಡಲವೆಂಬ ಹೆಸರಿನಿಂದಲೂ ಪ್ರಸಿದ್ಧವಾಗಿದೆ. ಇವನು ಮರುತ್ತುಗಳಿಗೆ ಪ್ರಿಯತಮನಾದ ಭಕ್ತನೆಂದೂ ಅಧಿಕವಾದ ಮಹಿಮೆಯುಳ್ಳವನೆಂದೂ ಅನೇಕ ಕಡೆ ಹೇಳಿದೆ. ಉದಾಹರಣೆಗೆ ಶತಪಥಬ್ರಾಹ್ಮಣದ,

ಚಿತ್ರಾಮಾಹಂ ವೃಣೇ ಸುಮತಿ ವಿಶ್ವಜನ್ಯಾಂ ಯೊಮಸ್ಯ ಕಣ್ವೋ ಅದುಹತ್ಪ್ರಪೀನಾಂ ಸಹಸ್ರ ಧಾರಾಂಪಯಸಾ ಮಹೀಂ ಗಾಮಿತಿ ಕಣ್ವೋ ಹ್ಯೆನಾಂ ದದರ್ಶ ಸಾ ಹಾಸ್ಮೈ ಸಹಸ್ರಧಾರಾ ಸರ್ವಾನ್ಕಾಮಾನ್ದುದುಹೇ ।

(ಶ. ಬ್ರಾ. ೯-೨-೩-೩೮)

ಎಂಬ ವಾಕ್ಯಗಳಲ್ಲಿ ಸಹಸ್ರಧಾರೆಯುಳ್ಳ ಗೋವನ್ನು ಕಣ್ವನು ಕರೆದನು (ಅದು ಅವನಿಗೆ ಮಾತ್ರ ಸಾಧ್ಯವಾಯಿತು) ಮತ್ತು ಆದರಿಂದ ಸಕಲ ಇಷ್ಟಾರ್ಥಗಳನ್ನೂ ಪಡೆದನು ಎಂದು ಅವನ ಮಹಿಮೆಯನ್ನು ಸ್ತುತಿಸಿದೆ. ಇದೇ ವಿಷಯ ವನ್ನು ತೈತ್ತರೀಯಸಂಹಿತೆಯಲ್ಲಿಯೂ ಸಹ ಹೇಳಿದೆ. (ತೈ.ಸಂ. ೪-೬-೫) ಬೃಹದ್ದೇವತೆಯಲ್ಲಿ ಕಣ್ವನೂ ಪ್ರಗಾಥನೂ ಘೋರಪುತ್ರನೆಂದು ಹೇಳಿದೆ, ಮತ್ತು

ಕಣ್ವಶ್ಚೈವ ಪ್ರಗಾಥಶ್ಚ ಘೋರಪುತ್ರೌ ಬಭೂವತುಃ ।
ಗುರುಣಾ ತಾವನುಜ್ಞಾತಾವೂಷತುಃ ಸಹಿತೌ ವನೇ ॥
ವಸತೋಸ್ತು ತಯೋಸ್ತತ್ರ ಕಣ್ವಪತ್ನ್ಯಾಃ ಶಿರಃ ಸ್ವಪತ್ ।
ಕೃತ್ವಾ ಕನೀಯಾನ್ ಕಣ್ವಸ್ಯ ಉತ್ಸಂಗೇ ನಾನ್ವಬುಧ್ಯತ ॥
ಶಪ್ತುಕಾಮಸ್ತು ತಂ ಕಣ್ವಃ ಕ್ರುದ್ಧಃ ಪಾಪಾಭಿಶಂಕಯಾ ।
ಬೋಧಯಾಮಾಸ ಪಾದೇನ ದಿಧಕ್ಷನ್ನಿವ ತೇಜಸಾ ॥
ವಿದಿತ್ವಾ ತಸ್ಯ ತಂ ಭಾವಂ ಪ್ರಗಾಥಃ ಪ್ರಾಂಜಲಿಸ್ಥಿತಃ ।
ಮಾತೃತ್ವೇ ಚ ಪಿತೃತ್ವೇ ಚ ವರಯಾಮಾಸ ತಾವುಭೌ ॥
ಸ ಘೌರೋ ವಾಥ ಕಾಣ್ವೋ ವಾ ವಂಶಜೈರ್ಬಹುಭಿಃ ಸಹ ।
ದದರ್ಶಾನ್ಯೈಶ್ಚ ಸಹಿತ ಋಷಿರ್ಮಂಡಲಮಷ್ಟಮಂ ॥

(ಬೃ. ದೇ. ೬. ೩೫ ರಿಂದ ೩೯)

ಎಂಬ ವಾಕ್ಯಗಳಲ್ಲಿ ಕಾಣ್ವರು ಎಂಟನೆಯ ಮಂಡಲದ ಸೂಕ್ತದ್ರಷ್ಟೃವಾದ ವಿಷಯವನ್ನು ಹೇಳಿದೆ. ಪ್ರಗಾಥರೇ ಕಾಣ್ವವಂಶದವರೆಂದೂ, ಎಂಟನೆಯ ಮಂಡಲದ ಪ್ರಥಮಸೂಕ್ತದ ಕರ್ತರೂ ಆಗಿರುವುದರಿಂದ ಆಶ್ವಲಾಯನರು ಎಲ್ಲರನ್ನೂ ಒಟ್ಟಿಗೆ ಪ್ರಗಾಥರೆಂದು ಕರೆದಿದ್ದಾರೆ

ಅತ್ರಿಃ—ಅತ್ರಿಯೂ ಅತ್ರಿವಂಶದವರೂ ಋಕ್ಸಂಹಿತೆಯ ೫ನೇ ಮಂಡಲದ ದ್ರಷ್ಟೃಗಳೆಂದು ಪ್ರಸಿದ್ಧರಾಗಿದ್ದಾರೆ. ಅತ್ರಿಯು ಪ್ರಜಾಪತಿ ಪುತ್ರನೆಂದೂ, ಈ ಋಷಿಯ ಉತ್ಪತ್ತಿಯ ಕ್ರಮವೂ ಬೃಹದ್ದೇವತೆಯಲ್ಲಿ ಹೇಳಿದೆ.

ತ್ರಿಸಾಂವತ್ಸರಿಕಂ ಸತ್ರಂ ಪ್ರಜಾಕಾಮಃ ಪ್ರಜಾಪತಿಃ ।
ಆಹರತ್ಸಹಿತಃ ಸಾಧ್ಯೈರ್ವಿಶ್ವೈರ್ದೇವೈಃ ಸಹೇತಿ ಚ ॥
ತತ್ರ ವಾಗ್ದೀಕ್ಷಣೀಯಾಯಾಂ ಆಜಗಾಮ ಶರೀರಿಣೀ ।
ತಾಂ ದೃಷ್ಟ್ವಾ ಯುಗಪತ್ತತ್ರ ಕಸ್ಯಾಥ ವರುಣಸ್ಯ ಚ ॥
ಶುಕ್ರಂ ಚಸ್ಕಂದ ತದ್ವಾಯುರಗ್ನೌ ಪ್ರಾಸ್ಯದ್ಯದೃಚ್ಛಯಾ ।
ತತೋಽರ್ಚಿಭ್ಯೋ ಭೃಗುರ್ಜಜ್ಞೇ ಅಂಗಾರೇಷ್ವಂಗಿರಾ ಋಷಿಃ ॥

**ಪ್ರಜಾಪತಿಂ ಸುತೌ ದೃಷ್ಟ್ವಾ ದೃಷ್ಟ್ವಾ ವಾಗಭ್ಯಭಾಷತ ।**
**ಅಭ್ಯಾಮೃಷಿಸ್ತೃತೀಯೋಽಪಿ ಭವೇದತ್ರೈವ ಮೇ ಸುತಃ ॥**
**ಪ್ರಜಾಪತಿಸ್ತಥೇತ್ಯುಕ್ತಃ ಪ್ರತ್ಯಭಾಷತ ಭಾರತೀಂ ।**
**ಋಷಿರತ್ರಿಸ್ತತೋ ಜಜ್ಞೇ ಸೂರ್ಯಾನಲಸಮದ್ಯುತಿಃ ॥**

(ಬೃ. ದೇ. ೫-೯೭ ರಿಂದ ೧೦೧)

ಹಿಂದೆ **ಪ್ರಜಾಪತಿಯು** ತ್ರಿಸಾಂವತ್ಸರಿಕವಾದ ಸತ್ರಯಾಗವನ್ನು ನೆರವೇರಿಸುತ್ತಿದ್ದಾಗ ಅಲ್ಲಿ ಭಾಗವಹಿಸಲ **ವಾಗ್ದೇವತೆಯೂ** ಶರೀರವನ್ನು ಧರಿಸಿಕೊಂಡು ಅಲ್ಲಿಗೆ ಬಂದಳು. ಆಗ ಪ್ರಜಾಪತಿಗೆ ಮನೋವಿಕಾರವುಂಟಾದ ಫಲವಾಗಿ **ಭೃಗುವೂ, ಅಂಗಿರಸ್ಸೂ** ಹುಟ್ಟಿದರು. ಆಗ ವಾಗ್ದೇವತೆಯು ಇವರಿಬ್ಬರ ಜೊತೆಯಲ್ಲಿ ಇನ್ನೂ ಒಬ್ಬ ಪುತ್ರನು ಉತ್ಪನ್ನನಾಗಲಿ ಎಂದು ಪ್ರಜಾಪತಿಯನ್ನು ಪ್ರಾರ್ಥಿಸಿದಳು. ಆಗ **ಪ್ರಜಾಪತಿಯು** ಅದಕ್ಕೆ ಸಮ್ಮತಿಸಲಾಗಿ **ಸೂರ್ಯನಿಗೂ ಅಗ್ನಿಗೂ** ಸಮನಾದ ತೇಜಸ್ಸುಳ್ಳ **ಅತ್ರಿ** ಋಷಿಯು ಉತ್ಪನ್ನನಾದನು ಎಂಬ ಕಥೆಯಿದೆ. **ಅಭ್ಯವಾದಯತಾಮತ್ರಿಂ ಮಹರ್ಷಿಂ ದೀಪ್ತತೇಜಸಂ ।** (ಬೃ. ದೇ. ೫-೬೫) ಎಂಬ ವಾಕ್ಯದಲ್ಲಿಯೂ ಈ ಮಹರ್ಷಿಯ ತೇಜಸ್ಸನ್ನು ಪ್ರಶಂಸಿಸಿದೆ ಇದು **ಅತ್ರೈವ ತೃತೀಯಮೃಚ್ಛತೇತ್ಯೂಚುಃ । ತಸ್ಮಾದತ್ರಿಃ ।** (ನಿ. ೩-೧೭) ಎಂಬ ನಿರುಕ್ತವಾಕ್ಯವನ್ನನುಸರಿಸಿದೆ.

ತೈತ್ತಿರೀಯಸಂಹಿತೆಯಲ್ಲಿ ಅತ್ರಿಯ ಮಹಿಮೆಯನ್ನು ಸ್ತುತಿಸುವುದೂ, ಸಂಪತ್ಪ್ರದವಾದುದೂ ಆದ **ಚತೂರಾತ್ರ**ಯಾಗವನ್ನು **ಅತ್ರಿಯು** ನೆರವೇರಿಸಿದ ಕ್ರಮವು ಹೇಳಲ್ಪಟ್ಟಿದೆ.

**ಅತ್ರಿರದದಾದೌರ್ವಾಯ ಪ್ರಜಾಂ ಪುತ್ರಕಾಮಾಯ.......ಸ ಏತಂ ಚತೂರಾತ್ರಮಪಶ್ಯತ್ತಮಾಹರತ್ತೇನಾಯಜತ ತತೋ ವೈ ತಸ್ಯ ಚತ್ವಾರೋ ವೀರಾ ಆಜಾಯಂತ.......ಯ ಏವಂ ವೇದ ವಿದ್ವಾನ್.......ತಾನೇವ ಯಜಮಾನ ಋಧ್ನೋತಿ ।**

**(ತೈ. ಸಂ. ೭-೧-೮)**

ಎಂಬ ವಾಕ್ಯಗಳಲ್ಲಿ **ಅತ್ರಿಯು ಚತೂರಾತ್ರ** ಯಾಗದಿಂದ ಪಡೆದ ಸಂಪದ್ವಿಶೇಷಗಳನ್ನು ತಿಳಿಸಿ ಯಾವ ಯಜ್ಞಕರ್ತನಾಗಲಿ ಅತ್ರಿಯಿಂದ ಜ್ಞಾತವಾದ ಈ ರಹಸ್ಯವನ್ನು ತಿಳಿದು ಯಜ್ಞಮಾಡಿದರೆ ಅತ್ರಿಗೆ ಲಬ್ಧವಾದ ಜಯವೂ ಸಂಪತ್ತೂ ಅವನಿಗೂ ದೊರೆಯುವುದೆಂದು ಹೇಳಿದೆ.

**ಸೂರ್ಯಾನಲಸಮದ್ಯುತಿಃ ।** ಎಂಬ ವಿಶೇಷಣದಿಂದ ತೋರಿಸುವ **ಅತ್ರಿಯ** ಸ್ವಯಂಪ್ರಕಾಶಕತ್ವವೂ, ಪ್ರಕಾಶಕ್ಕೇ ಆಧಾರವಾದ **ಸೂರ್ಯಾದಿಗಳೂ** ಸಹ ಕತ್ತಲೆಯಿಂದಾವೃತವಾದಾಗ ಅವರನ್ನೂ ಪ್ರಕಾಶಗೊಳಿಸುವುದೂ ಸಹ ಋಕ್ಸಂಹಿತೆಯಲ್ಲಿಯೂ ಶತಪಥಾದಿಬ್ರಾಹ್ಮಣಗಳಲ್ಲಿಯೂ ವರ್ಣಿತವಾಗಿದೆ. ಉದಾಹರಣೆಗೆ—

**ಗೂಳ್ಹಂ ಸೂರ್ಯಂ ತಮಸಾಪವ್ರತೇನ ತುರೀಯೇಣ ಬ್ರಹ್ಮಣಾವಿಂದದತ್ರಿಃ ।**

(ಋ. ಸಂ ೫-೪೦-೬)

**ಅತ್ರಿಃ ಸೂರ್ಯಸ್ಯ ದಿವಿ ಚಕ್ಷುರಾಧಾತ್ಸ್ವರ್ಭಾನೋರಪ ಮಾಯಾ ಅಘುಕ್ಷತ್ ।**

(ಋ. ಸಂ. ೫-೪೦-೮)

ಇತ್ಯಾದಿ ಋಕ್ಕುಗಳಲ್ಲಿ **ಸ್ವರ್ಭಾನುವು** (ರಾಹುವು) ಸೂರ್ಯನನ್ನಾಕ್ರಮಿಸಿ ಕತ್ತಲನ್ನುಂಟುಮಾಡಿದಾಗ **ಅತ್ರಿ** ಋಷಿಯು ಕತ್ತಲನ್ನು ನಾಶನಾಡಿ ಸೂರ್ಯನು ಪ್ರಕಾಶಿಸುವಂತೆ ಮಾಡಿದನು ಎಂದು **ಅತ್ರಿಯ** ಶಕ್ತಿಯನ್ನು ಸ್ತುತಿಸಿದೆ. ಹೀಗೆಯೇ, **ಶತಪಥಬ್ರಾಹ್ಮಣದಲ್ಲಿಯೂ** ಸಹ,

> **ಅತ್ರಿರ್ವಾ ಋಷೀಣಾಂ ಹೋತಾಸಾಥೈತತ್ಸದೋಽಸುರತಮಸಮಭಿಪುಪ್ರುವೇ ತ ಋಷಯೋಽತ್ರಿಮಬ್ರುವನ್ನೇಹಿ ಪ್ರತ್ಯಙ್ಙಿದಂ ತಮೋಽಪಜಹೀತಿ ಸ ಏತತ್ತಮೋಽಪಾಹನ್ನಯಂ ವೈ ಜ್ಯೋತಿರ್ಯ ಇದಂ ತಮೋಽಪಾಬಧೀದಿತಿ ತಸ್ಮಾ ಏತಜ್ಜ್ಯೋತಿರ್ಹಿರಣ್ಯಂ ......ತಸ್ಮಾದಾತ್ರೇಯಾಯ ಹಿರಣ್ಯಂ ।**
>
> (ಶ. ಬ್ರಾ. ೪-೩-೪-೨೧)

ಅತ್ರಿಯು ಋಷಿಗಳ ಹೋತೃವಾಗಿದ್ದು ಯಾಗವು ನೆರವೇರುವುದರಲ್ಲಿದ್ದಾಗ ಅಸುರರ ತಮಸ್ಸು ಸದಸ್ಯನ್ನೆಲ್ಲಾ ವ್ಯಾಪಿಸಿತು. ಆಗ ಋಷಿಗಳು ಆ ತಮಸ್ಸನ್ನು ನಾಶಮಾಡಲು ಅತ್ರಿಯ ಸಹಾಯವನ್ನಪೇಕ್ಷಿಸಿದಾಗ ಅವನು ಅದನ್ನು ನಾಶಮಾಡಿದನು. ಆಗ ಋಷಿಗಳು ಇವನೇ ತೇಜಸ್ಸಿನ ರೂಪವೆಂದು ತಿಳಿದು ಯಜ್ಞಾಂಗದ ದಾನವಾಗಿ ಕೊಡಲು ತೇಜೋರೂಪವಾದ ಹಿರಣ್ಯವನ್ನು ತಂದರೆಂದು ಹೇಳಿದೆ.

ಈ ಅತ್ರಿಯ ಸ್ವರೂಪವು ಕೇವಲ ಭೌತಿಕವಾದ ತೇಜಸ್ಸು ಮಾತ್ರವಲ್ಲ. ಅದು ಆಧ್ಯಾತ್ಮಿಕವಾದ ತೇಜಸ್ಸೂ ಆಗಿದೆ ಎಂಬುದನ್ನೂ ಸಹ ಬೃಹದಾರಣ್ಯಕಾದಿಗಳಲ್ಲಿ—

> **ಅದ್ಯತೇಽತ್ತಿರ್ಹ ವೈ ನಾಮೈತದ್ಯದತ್ರಿರಿತಿ ಸರ್ವಸ್ಯಾತ್ತಾ ಭವತಿ ಸರ್ವಮಸ್ಯಾನ್ನಂ ಭವತಿ ಯ ಏವಂ ವೇದ ।**
>
> (ಬೃ. ಉ. ೨-೨-೪)

ಎಂಬ ವಾಕ್ಯಗಳಲ್ಲಿ ಹೇಳಿದೆ.

ವ್ಯಾಕರಣಪ್ರಕ್ರಿಯಾ

**ಜನುಷಮ್**—ಜನೀ ಪ್ರಾದುರ್ಭಾವೇ ಧಾತು. **ಜನೇರುಸಿಃ** (ಉ. ಸೂ. ೨-೧೭೨) ಎಂಬುದರಿಂದ ಇದಕ್ಕೆ ಔಣಾದಿಕ ಉಸಿ ಪ್ರತ್ಯಯ. ಜನುಸ್ ಶಬ್ದವಾಗುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ದ್ವಿತೀಯಾಏಕವಚನಾಂತರೂಪ

**ಅಂಗಿರಾಃ**—ಅಂಗಿರಾಃ ಅಂಗಾರಾಃ (ನಿರು. ೩-೧೭) ಎಂದು ಯಾಸ್ಕರು ಹೇಳಿರುತ್ತಾರೆ. ಐತರೇಯ ಬ್ರಾಹ್ಮಣದಲ್ಲಿಯೂ "ಯೇಽಂಗಿರಾ ಆಸನ್ ತೇ ಅಂಗಿರಸೋಽಭವನ್" (ಐ.ಬ್ರಾ.೩-೩೪) ಎಂದು ಹೇಳಿದೆ. ಆದುದರಿಂದ ಅಂಗಿರಸಮುನಿಗೆ ಕಾರಣವಾದುದರಿಂದ ಅಂಗಾರರೂಪವಾದ ಅಗ್ನಿಯಿಂದ ಅಂಗಿರಸ್ ರೂಪವಾಗಿದೆ.

**ಪ್ರಿಯಮೇಧಃ**—ಪ್ರಿಯಮೇಧಃ .ಪ್ರಿಯಾ ಅಸ್ಯ ಮೇಧಾಃ (ನಿರು ೩-೧೭) ಎಂದು ಯಾಸ್ಕರು ಹೇಳುತ್ತಾರೆ. ಪ್ರಿಯಃ ಮೇಧಃ ಯಸ್ಯ ಸಃ **ಬಹುವ್ರೀಹೌ ಪ್ರಕೃತ್ಯಾಪೂರ್ವಪದಮ್** (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಅತ್ರಿಃ** ನ ವಿದ್ಯಂತೇ ತ್ರೀಣಿ ಯಸ್ಯ ಸಃ ಅತ್ರಿಃ. **ಅತ್ರಿಃ ನ ತ್ರಯಃ** (ನಿರು. ೩-೧೭) ಎಂದು ಯಾಸ್ಕರು ಹೇಳಿರುತ್ತಾರೆ. **ಅದೇಸ್ತ್ರಿನಿಚ** (ಉ. ಸೂ. ೫-೭೪) ಎಂಬಲ್ಲಿ ಚಕಾರದಿಂದ ಅನುವೃತ್ತವಾದ ತ್ರಿ ಪ್ರತ್ಯಯವು ಅದ ಧಾತುವಿಗೆ ಬರುತ್ತದೆ. ವ್ಯತ್ಯಯದಿಂದ ಆದ್ಯುದಾತ್ತವಾಗುತ್ತದೆ.

**ವಿದುಃ**—ವಿದ ಜ್ಞಾನೇ. ಧಾತು. ಲಟ್ ಪ್ರಥಮಪುರುಷಬಹುವಚನದಲ್ಲಿ **ವಿದೋ ಲಟೋವಾ** (ಪಾ. ಸೂ. ೩-೪-೮೩) ಎಂಬುದರಿಂದ ಝಿಗೆ ಉಸಾದೇಶ. **ಅದಿಪ್ರಭೃತಿಭ್ಯಃ ಶಪಃ** ಎಂಬುದರಿಂದ ಶಪಿಗೆ ಲುಕ್. ಪ್ರತ್ಯಯಸಕಾರಕ್ಕೆ ರುತ್ವ ವಿಸರ್ಗ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಮನುಃ**—ಇದಕ್ಕೆ ಜಸ್ ಪರವಾದಾಗ **ಸುಪಾಂಸುಲುಕ್** (ಪಾ. ಸೂ ೭-೧-೩೯) ಎಂಬುದರಿಂದ ಅದಕ್ಕೆ ಲುಕ್ ಬರುತ್ತದೆ.

**ಮಹಿ**—ಮಹ ಪೂಜಾಯಾಂ ಧಾತು. ಇದಕ್ಕೆ ಔಣಾದಿಕ ಇನ್ ಪ್ರತ್ಯಯ. ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಂ** (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ನಮೋ**—ಣಮು ಪ್ರಹ್ವತ್ವೇ ಶಬ್ದೇ ಚ. ಧಾತು. **ವ್ಯತ್ಯಯೋ ಬಹುಲಂ** (ಪಾ ಸೂ. ೩-೧-೮೫) ಎಂಬುದರಿಂದ ಆತ್ಮನೇಪದಿಯಾಗುತ್ತದೆ. ಲಟ್ ಉತ್ತಮಪುರುಷಏಕವಚನದಲ್ಲಿ ಇಟ್ ಪ್ರತ್ಯಯ. **ಟಿತ ಆತ್ಮನೇಪದಾ** ಎಂಬುದರಿಂದ ಇದಕ್ಕೆ ಏತ್ವ. ಶಪ್ ಬಂದಾಗ ಪರರೂಪ. **ಣೋನಃ** ಎಂಬುದರಿಂದ ಧಾತ್ವಾದಿಗೆ ನತ್ವ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಗಿರಾ**—**ಸಾವೇಕಾಚಸ್ತೃತೀಯಾದಿಃ** (ಪಾ. ಸೂ. ೬-೧-೧೬೮) ಎಂಬುದರಿಂದ ತೃತೀಯಾವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಇಂದ್ರಾಗ್ನೀ**—ಇಂದ್ರಶ್ಚ ಅಗ್ನಿಶ್ಚ ಇಂದ್ರಾಗ್ನೀ. ಪ್ರಸಿದ್ಧಸಾಹಚರ್ಯವಿರುವಾಗಲೇ ಆನಙ್ವಿಧಾನ ಮಾಡಿರುವುದರಿಂದ ಇಲ್ಲಿ ಆನಙ್ ಬರುವುದಿಲ್ಲ. **ಸಮಾಸಸ್ಯ** (ಪಾ. ಸೂ. ೬-೧-೨೨೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ಅಗ್ನಿ ಶಬ್ದವು ಅನುದಾತ್ತಾದಿಯಾದುದರಿಂದ **ನೋತ್ತರಪದೇ ಅನುದಾ**—(ಪಾ. ಸೂ. ೬-೨-೧೪೨) ಎಂಬುದರಿಂದ ನಿಷೇಧವಿರುವುದರಿಂದ **ದೇವತಾದ್ವಂದ್ವೇ ಚ** (ಪಾ. ಸೂ. ೬-೧-೧೪೧) ಎಂಬುದರಿಂದ ಉಭಯಪದ ಪ್ರಕೃತಿಸ್ವರ ಬರುವುದಿಲ್ಲ. ದ್ವಿತೀಯಾದ್ವಿವಚನಾಂತ ರೂಪ. ॥ ೯ ॥

——— :o: ———

ಸಂಹಿತಾಪಾಠಃ

ಹೋತಾ ಯಕ್ಷದ್ವನಿನೋ ವಂತ ವಾರ್ಯಂ ಬೃಹಸ್ಪತಿರ್ಯಜತಿ ವೇನ
ಉಕ್ಷಭಿಃ ಪುರುವಾರೇಭಿರುಕ್ಷಭಿಃ ।
ಜಗೃಭ್ಮಾ ದೂರಆದಿಶಂ ಶ್ಲೋಕಮದ್ರೇರಧ ತ್ಮನಾ ।
ಅಧಾರಯದರರಿಂದಾನಿ ಸುಕ್ರತುಃ ಪುರೂ ಸದ್ಮಾನಿ ಸುಕ್ರತುಃ ॥ ೧೦ ॥

ಪದಪಾಠಃ

ಹೋತಾ । ಯಕ್ಷತ್ । ವನಿನಃ । ವಂತ । ವಾರ್ಯಂ । ಬೃಹಸ್ಪತಿಃ । ಯಜತಿ । ವೇನಃ । ಉಕ್ಷಽಭಿಃ ।
ಪುರುಽವಾರೇಭಿಃ । ಉಕ್ಷಽಭಿಃ ॥

ಜಗೃಭ್ಮ । ದೂರೇಽಆದಿಶಂ । ಶ್ಲೋಕಂ । ಅದ್ರೇಃ । ಅಧ । ತ್ಮನಾ ।
ಅಧಾರಯತ್ । ಅರರಿಂದಾನಿ । ಸುಽಕ್ರತುಃ । ಪುರು । ಸದ್ಮಾನಿ । ಸುಽಕ್ರತುಃ ॥ ೧೦ ॥

ಸಾಯಣಭಾಷ್ಯಂ

ಅಯಂ ಹೋತಾ ದೈವ್ಯೋಽಗ್ನಿರ್ಮಾನುಷೋ ವಾ ದೇವಾನಾಮಾಹ್ವಾತಾ ಯಕ್ಷತ್ । ಯಾಜ್ಯಾಂ ಪಠತು ॥ ಯಜೇರ್ಲೇಟ್ಯಡಾಗಮಃ । ಸಿಬ್ಬಹುಲಮಿತಿ ಸಿಪ್ ॥ ವನಿನೋ ವನನವಂತಃ ಹವಿಃ ಕಾಮಯ-ಮಾನಾ ವಾ ದೇವಾ ವಾರ್ಯಂ ವರಣೀಯಂ ಸೋಮಂ ವಂತ । ಸಂಭಜಂತಾಂ ॥ ವನತೇಶ್ಛಾಂದಸೇ ಲಙಿ ವ್ಯತ್ಯಯೇನಾತ್ಮನೇಪದಂ । ಬಹುಲಂ ಛಂದಸೀತಿ ಶಪೋ ಲುಕ್ । ಛಾಂದಸೋಽಂತ್ಯಲೋಪಃ ॥ ತದರ್ಥಂ ಬೃಹಸ್ಪತಿರ್ಬೃಹತೋ ಮಂತ್ರಸ್ಯ ಹವಿಷೋ ವಾ ಪಾಲಕೋಽಧ್ವರ್ಯುರ್ದೈವ್ಯೋ ಬೃಹಸ್ಪತಿರ್ವಾ ಸ್ವಯಮೇವ ಯಜತಿ । ಯಾಗಂ ಕರೋತಿ । ಕೀದೃಶಃ ಸಃ । ವೇನಃ ಕಾಮಯಮಾನಃ । ಕೇನ ಸಾಧನೇ-ನೇತಿ ತದುಚ್ಯತೇ । ಉಕ್ಷಭಿಃ ಸೇಚಕೈಃ ಸೋಮೈಃ ಪುರುವಾರೇಭಿರ್ಬಹುಭಿರ್ವರಣೀಯೈಃ ತಥೋಕ್ಷಭಿಃ ಸೇಚನಸಮರ್ಥೈರುದಕೈಃ ತನ್ನಿಮಿತ್ತಭೂತೈರ್ಹೂಯಮಾನೈರಾಹುತಿಭಿರಾದಿತ್ಯದ್ವಾರಾ ವೃಷ್ಟ್ಯುತ್ಪನ್ನೈಃ । ವಯಂ ಯಜಮಾನಾ ದೂರಆದಿಶಂ ದೂರದೇಶ ಆದಿಗಾದೇಶೋ ಯಸ್ಯ ತಾದೃಶಂ ॥ ಹಲದಂತಾತ್ಸ-ಪ್ತಮ್ಯಾಃ ಪಾ. ೬-೩-೯ । ಇತ್ಯಲುಕ್ ॥ ಅದ್ರೇಃ । ಜಾತಾವೇಕವಚನಂ । ಅಭಿಷವಸಾಧನಸ್ಯ ಗ್ರಾವ್ಣಃ ಶ್ಲೋಕಂ ವಾಚಂ ಧ್ವನಿಂ ಜಗೃಭ್ಮ । ಗೃಹ್ಣೀಮಃ ಶ್ರೋತ್ರಾಭ್ಯಾಂ । ಪೂಜಾರ್ಥಂ ಬಹುವಚನಂ । ಇದಾನೀಂ ಪರೋಕ್ಷಕೃತಃ। ಸುಕ್ರತುಃ । ಶೋಭನಕರ್ಮಾಯಂ ಯಜಮಾನೋಽಧಾಧ ಯಾಗಸಂಪೂರ್ತ್ಯ-ನಂತರಮರರಿಂದಾನಿ । ಉದಕನಾಮೈತತ್ । ಅರರಿಂದಾನಿ ಧ್ವಸ್ಮನ್ವದಿತಿ ತನ್ನಾಮಸು ಪಾಠಾತ್ । ವೃಷ್ಟಿ-ಲಕ್ಷಣಾನ್ಯುದಕಾನಿ ತ್ಮನಾತ್ಮನಾಧಾರಯತ್ । ಧಾರಯತಿ ॥ ರರಿರ್ದಾತಾ । ನಾಸ್ತ್ಯನ್ಯೋ ರರಿರಸ್ಯ ಪಿಪಾಸೋಪಶಮನಸ್ಯ ತಾದೃಶಂ ಪಿಪಾಸೋಪಶಮನಂ ದದತೀತ್ಯರರಿಂದಾನಿ । ಯದ್ವಾ । ಅರರಿರಿತ-ಶ್ಚೇತಶ್ಚ ಗಮನಂ । ಔಣಾದಿಕೋಽರಿಪ್ರತ್ಯಯಃ । ಆತೋಽನುಪಸರ್ಗೇ ಕಃ । ಪೃಷೋದರಾದಿತ್ವಾದಭಿ-ಮತಸ್ವರೂಪಸ್ವರಸಿದ್ಧಿಃ । ತದ್ದದತೀತ್ಯರರಿಂದಾನ್ಯುದಕಾನಿ । ಚೇಷ್ಟಾಪ್ರದಾನೀತ್ಯರ್ಥಃ । ಆಪೋಮಯಃ ಪ್ರಾಣಃ । ಛಾಂ. ಉ. ೬-೫-೪। ಇತಿ ಶ್ರುತೇಃ। ಯದ್ವಾ ।ರರಿರ್ದಾನಂ । ನ ವಿದ್ಯತೇ ತಾದೃಶಂ ದಾನಮಿತರ-ಭೂತೇಷು ಪರ । ತದ್ದದತೀತ್ಯರರಿಂದಾನಿ । ಅನ್ಯೈರದೇಯಂ ಲೋಕೋಪಕಾರಿ ಭೋಗಂ ದದತೀ-ತ್ಯರ್ಥಃ ॥ ತಾದೃಶಾನ್ಯುದಕಾನಿ ಯಾಗೇನೋತ್ಪಾದಿತವಾನಿತ್ಯರ್ಥಃ । ಕಿಂಚ ಸುಕ್ರತುಃ । ಶೋಭನ-ಕರ್ಮಾಯಂ ಪುರು ಪುರೂಣಿ ಬಹೂನಿ ಸದ್ಮಾನಿ ಸದನಾನಿ ಸುಖನಿವಾಸಯೋಗ್ಯಾನಿ ಗೃಹಾಣ್ಯಧಾರಯತ್

**ಯದ್ವಾ । ಬೃಹಸ್ಪತಿಃ ಸುಕ್ರತುಶ್ಚಾಯಮಧ್ವರ್ಯುರ್ಗರರಿಂದಾನ್ಯುಕ್ತಲಕ್ಷಣಾನ್ಯಭಿಷವಸಾಧನಾನ್ಯುದಕಾನ್ಯಧಾರಯತ್ । ಧಾರಿತವಾನ್ । ತಥಾ ಸುಕ್ರತುಃ ಶೋಭನಪ್ರಜ್ಞಃ ಪುರು ಸದ್ಮಾನಿ ಸದನಾನಿ ಹವಿರಾಸಾದನಾನ್ಯಧಾರಯತ್ ॥**

ಪ್ರತಿಪದಾರ್ಥ

**ಹೋತಾ**—ದೇವಹೋತೃವಾದ ಅಗ್ನಿಯು ಅಥವಾ ಮಾನವನಾದ ಹೋತೃವು । **ಯಕ್ಷತ್**—ಯಾಗ ಮಂತ್ರವನ್ನು ಪಠಿಸಲಿ । **ವನಿನಃ**—ಆಹುತಿಯನ್ನಪೇಕ್ಷಿಸುವವರು । **ವಾರ್ಯಂ**—ಅಪೇಕ್ಷಿತವಾದ (ಆಹುತಿಯನ್ನು)। **ವಂತ**—ಸೇವಿಸಲಿ ! **ಬೃಹಸ್ಪತಿಃ**—ದೇವಪುರೋಹಿತನಾದ ಬೃಹಸ್ಪತಿಯು ಅಥವಾ ಅಧ್ವರ್ಯುವು । **ವೇನಃ**—(ಯಜ್ಞಾಹುತಿಯನ್ನು) ಇಚ್ಛಿಸುವವನಾಗಿ । **ಉಕ್ಷಭಿಃ**—ಸೇಚಕಗಳಾದ ಸೋಮರಸಗಳಿಂದಲೂ (ಹಾಗೆಯೇ) । **ಪುರುವಾರೇಭಿಃ**—ಅನೇಕರಿಂದ ವರಿಸಲ್ಪಡುವ । **ಉಕ್ಷಭಿಃ**—ಸೇಚನ ಸಮರ್ಥಗಳಾದ ಉದಕಗಳಿಂದಲೂ । **ಯಜತಿ**—ಯಾಗವನ್ನು ಮಾಡುತ್ತಾನೆ । **( ವಯಂ**—ಯಜಮಾನರಾದ ನಾವು **)** । **ದೂರ ಆದಿಶಂ**—ದೂರದಿಂದಲೇ ಕೇಳತಕ್ಕ । **ಅದ್ರೇಃ**—ಸೋಮರಸವನ್ನು ಹಿಂಡುವ ಕಲ್ಲುಗಳ । **ಶ್ಲೋಕಂ**— ಧ್ವನಿಯನ್ನು । **ಜಗೃಭ್ಮ**—ಕೇಳುತ್ತೇವೆ ! **ಸುಕ್ರತುಃ**—ಶ್ರೇಷ್ಠವಾದ ಕರ್ಮಕರ್ತನಾದ ಯಜಮಾನನು । **ಅಧ**—ಯಜ್ಞಸಮಾಪ್ತಿಯಾದನಂತರ । **ಅರರಿಂದಾನಿ**—ವೃಷ್ಟಿರೂಪಗಳಾದ ಉದಕಗಳನ್ನು । **ತ್ಮನಾ**—ತನ್ನಲ್ಲಿ । **ಅಧಾರಯತ್**—ಹೊಂದಿದ್ದಾನೆ । **ಸುಕ್ರತುಃ**—ಶ್ರೇಷ್ಠವಾದ ಕರ್ಮಕರ್ತನಾದ ಅದೇ ಯಜಮಾನನು । **ಸದ್ಮಾನಿ**—ಸುಖಕರಗಳಾದ ಗೃಹಗಳನ್ನು ।**ಪುರು**—ಅಧಿಕವಾಗಿ (ಹೊಂದಿದ್ದಾನೆ) ॥

॥ ಭಾವಾರ್ಥ ॥

ಹೋತೃವು ಯಾಗಮಂತ್ರವನ್ನು ಪಠಿಸಲಿ; ಆಹುತಿಯನ್ನಪೇಕ್ಷಿಸುವವರು ತಮಗೆ ಅಪೇಕ್ಷಿತವಾದ ಆಹುತಿಯನ್ನು ಸೇವಿಸಲಿ. ಅಧ್ವರ್ಯುವು ಯಜ್ಞಾಹುತಿಯನ್ನು ಇಚ್ಛಿಸುವವನಾಗಿ ಸೇಚಕಗಳೂ, ಅನೇಕರಿಂದ ಇಚ್ಛಿಸಲ್ಪಡುವುವೂ ಆದ ಸೋಮರಸಗಳಿಂದಲೂ, ಪವಿತ್ರವಾದ ಉದಕಗಳಿಂದಲೂ, ಯಾಗವನ್ನು ಆಚರಿಸುತ್ತಾನೆ ಯಜಮಾನರಾದ ನಾವು ಅತಿದೂರದಿಂದಲೇ ನಮ್ಮ ಕಿವಿಗೆ ಬೀಳತಕ್ಕ ಸೋಮರಸವನ್ನು ಹಿಂಡುವ ಕಲ್ಲುಗಳ ಶಬ್ದವನ್ನು ಕೇಳುತ್ತಿದ್ದೇವೆ. ಶ್ರೇಷ್ಠವಾದ ಕರ್ಮಕರ್ತನಾದ ಯಜಮಾನನು ಯಜ್ಞಸಮಾಪ್ತಿಯಾದನಂತರ ವೃಷ್ಟಿರೂಪದ ಉದಕಗಳನ್ನೂ ಸುಖಕರಗಳಾದ ಗೃಹಗಳನ್ನೂ ಪಡೆದಿರುತ್ತಾನೆ.

## English Translation

Let the invoker (of the gods) offer sacrifice, and may they, desirous of the offering, ( partake of ) the acceptable (libation) : Brihaspati himself, desiring ( libation), celebrates worship with libations ; with copious and excellent libations. We catch from a distant quarter the sound of the stones, whereby the performer of picus acts has of himself secured the waters (of the clouds) : the performer of pious acts (has secured) many habitations.

ವಿಶೇಷವಿಷಯಗಳು

**ಹೋತಾ**—ದೈವ್ಯೋಽಗ್ನಿರ್ಮಾನುಷೋ ವಾ ದೇವಾನಾಮಾಹ್ವಾತಾ । ದೇವತೆಗಳಿಗೆ ಆಹ್ವಾನವನ್ನು ಕೊಡತಕ್ಕ ಮಾನವನಾದ ಹೋತೃವಾಗಲಿ ಅಥವಾ ಅಗ್ನಿಯಾಗಲಿ **ಯಕ್ಷತ್**—**ಯಾಜ್ಯಾಂ ಪಠತು** ಆಹ್ವಾನ ಸ್ತೋತ್ರವನ್ನು ಪಠಿಸಲಿ.

**ಯಕ್ಷದಗ್ನಿರ್ದೇವೋ ದೇವಾನಿತಿ ।**
(ಐ. ಬ್ರಾ. ೧೦-೭೪)

ಎಂದು ಪ್ರಸಿದ್ಧವಾಗಿರುವುದರಿಂದ ಅಗ್ನಿಯು ಪಠಿಸಲಿ ಅಥವಾ ಯಾಗ ಮಾಡಲಿ ಎಂಬ ಅರ್ಥವಾಗುತ್ತದೆ

**ಬೃಹಸ್ಪತಿಃ—ಬೃಹತೋ ಮಂತ್ರಸ್ಯ ಹವಿಷೋ ವಾ ಪಾಲಕಃ ಅಧ್ವರ್ಯುಃ ದೈವ್ಯೋ ಬೃಹಸ್ಪತಿ-ರ್ವಾ ।** ಬೃಹತ್ತಾದ ಮಂತ್ರದ ಅಥವಾ ಹವಿಸ್ಸಿನ ಪಾಲಕನಾದ ಅಧ್ವರ್ಯು ಅಥವಾ ಬೃಹಸ್ಪತಿಯೆಂದರ್ಥ.

**ಮಾರುತ್ಯೇಕಾ ತತ ಐಂದ್ರಾಗ್ನ್ಯನಂತರಾ ಬಾರ್ಹಸ್ಪತ್ಯಾ ಚೋತ್ತಮಾ ಸ್ತೌತಿ ದೇವಾನ್ ।**
(ಬೃ. ದೇ. ೪-೯)

ಎಂದು ಬೃಹದ್ದೇವತಾಕಾರರು ಈ ಋಕ್ಕನ್ನು ಬಾರ್ಹಸ್ಪತ್ಯ ಋಕ್ಕೆಂದು ಹೇಳಿದ್ದಾರೆ. **ಬೃಹಸ್ಪತಿಯೇ** ಈ ಋಕ್ಕಿನ ದೇವತೆಯಾದುದರಿಂದ ಇಲ್ಲಿ **ಬೃಹಸ್ಪತಿ** ಶಬ್ದಕ್ಕೆ **ದೇವತೆ** ಎಂದು ಅರ್ಥಮಾಡಬಹುದು ಸಾಯಣರು ಅಧ್ವರ್ಯುವೆಂದೂ ಅರ್ಥಮಾಡಿದ್ದಾರೆ. ಬೃಹಸ್ಪತಿಯೂ ದೇವಪುರೋಹಿತನಾದುದರಿಂದ ಅವನ ಪರವಾಗಿಯೂ ಈ ಅರ್ಥವಾಗಬಹುದು.

**ಉಕ್ಷಭಿಃ ಯಜತಿ**—ಸೇಚಕವಾದ ಸೋಮರಸದಿಂದ (ರಸದ ಅರ್ಪಣೆಯಿಂದ) ಯಜ್ಞಮಾಡುತ್ತಾನೆ. **ಉಕ್ಷಭಿಃ** ಎಂಬ ಪದವು ದ್ವಿರುಕ್ತವಾಗಿದೆ. ಮೊದಲನೆಯ ಪದಕ್ಕೆ **ಸೋಮರಸದಿಂದ** ಎಂದೂ ಎರಡನೆಯ ಪದಕ್ಕೆ **ಉದಕೈಃ** ಉದಕಗಳಿಂದ ಎಂದೂ ಅರ್ಥ.

**ಅದ್ರೇಃ ಶ್ಲೋಕಂ ಜಗೃಭ್ಮ**—ಸೋಮರಸವನ್ನು ಹಿಂಡುವ ಕಲ್ಲಿನ ಶಬ್ದವನ್ನು ಕೇಳುತ್ತೇವೆ. **ಬೃಹಸ್ಪ-ತಿಸುತಸ್ಯ** (ತೈ.ಸಂ. ೧-೪-೨೭) ಎಂದು ಹೇಳಿರುವಂತೆ ಬೃಹಸ್ಪತಿಯೂ ಸೋಮರಸವನ್ನು **ಅದ್ರಿಗಳಿಂದ** ಹಿಂಡುವುದರಿಂದ ಆಪ್ಯಾಯಮಾನವಾದ ಆ ಶಬ್ದವನ್ನು ಕೇಳುತ್ತೇವೆ ಎಂದರ್ಥ. **ಶ್ಲೋಕವೆಂದರೆ** ಇಲ್ಲಿ **ಅದ್ರಿಗಳಿಂದ** ಉತ್ಪನ್ನವಾದ ಶಬ್ದವೆಂದು ತಿಳಿಯಬೇಕು. ಹಿಂದೆ **ಅದ್ರಿ** ಮತ್ತು **ಗ್ರಾವ** ಈ ಎರಡು ಸಾಧನಗಳಿಗೂ ವ್ಯತ್ಯಾಸವನ್ನು ತೋರಿಸಿದೆ. ಬಹುಮಟ್ಟಿಗೆ **ಶ್ಲೋಕವೆಂಬ** ಪದವು **ಶಬ್ದ** ಎಂಬ ಅರ್ಥದಲ್ಲಿ ಅದ್ರಿಪದದೊಡನೆ ಉಪಯೋಗಿಸಲ್ಪಟ್ಟು **ಅದ್ರಿ ಶಬ್ದದ** ವೈಶಿಷ್ಟ್ಯವನ್ನು ತೋರಿಸುತ್ತದೆ.

**ಅರರಿಂದಾನಿ—ಅರರಿಂದ** ಶಬ್ದವು **ಉದಕನಾಮಗಳಲ್ಲಿ** ಪಠಿತವಾಗಿದೆ (ನಿಘಂಟು ೧-೧೨-೨೬) ಇದರ ವ್ಯುತ್ಪತ್ತಿಯನ್ನು ಎರಡುಮೂರು ವಿಧವಾಗಿ ಹೇಳಬಹುದು. **ನಾಸ್ತ್ಯನ್ಯೋ ರರಿಃ ಪಿಪಾಸೋಪಶಮನಸ್ಯ ತಾದೃಶಂ ಪಿಪಾಸೋಪಶಮನಂ ದದಾತೀತ್ಯರರಿಂದಾನಿ ।** ಬಾಯಾರಿಕೆಯನ್ನು ನಾಶಮಾಡಲು ಇದರಂತೆ ಇನ್ನಾವುದೂ ಇಲ್ಲ. ಇಂತಹ ಉಪಶಮನವನ್ನು ಕೊಡುವುದರಿಂದ **ಅರರಿಂದ** ಎಂದಾಗಲಿ, **ಅರರಿಃ ಇತಶ್ಚೇತಶ್ಚ ಗಮನಂ । ತದ್ದದತೀತ್ಯರರಿಂದಾನಿ ಉದಕಾನಿ ಚೇಷ್ಟಾಪ್ರದಾನಿ ಇತ್ಯರ್ಥಃ ।** ಸ್ಥಾನದಿಂದ ಸ್ಥಾನಕ್ಕೆ ಚಲಿಸುವ ಶಕ್ತಿಯನ್ನು ಕೊಡತಕ್ಕದ್ದಾದ್ದರಿಂದ ಉದಕಕ್ಕೆ ಅರರಿಂದವೆಂದು ಹೆಸರು ಎಂದೂ ಅರ್ಥವಾಗಬಹುದು. ಸಾಯಣರು **ಆಪೋಮಯಃ ಪ್ರಾಣಃ** (ಛಾ. ಉ. ೬-೫-೪) ಎಂಬ ಉಪನಿಷದ್ವಾಕ್ಯವನ್ನುದಹರಿಸಿ ಉದಕವು ಪ್ರಾಣಾತ್ಮಕವೇ ಆಗಿರುವುದರಿಂದ ಎರಡನೆಯ ಅರ್ಥವು ಸಾಧ್ಯವೆಂದು ಹೇಳಿದ್ದಾರೆ. ಇವೆರಡಲ್ಲದೆ, **ರರಿರ್ದಾನಂ । ನ ವಿದ್ಯತೇ ತಾದೃಶಂ ದಾನಮಿತರಭೂತೇಷು ತತ್ ಅರರಿ । ತದ್ದದತೀತ್ಯರರಿಂದಾನಿ ।** ಅನ್ಯೈರದೇಯಂ ಲೋಕೋಪ-

ಕಾರಿಭೋಗಂ ದದತೀತ್ಯರ್ಥಃ । ರರಿ ಶಬ್ದಕ್ಕೆ ದಾನವೆಂದರ್ಥ. ಇತರರಿಂದ ಒದಗಿಸಲಸಾಧ್ಯವಾದುದೂ ಲೋಕೋಪಕಾರಕವಾದುದೂ ಆದ ಭೋಗವನ್ನು ಕೊಡುವುದರಿಂದ ಅರರಿಂದಾನಿಯೆಂದು ಹೆಸರೆಂದು ಮುಂದಿನ ವ್ಯುತ್ಪತ್ತಿಯೂ ಸಾಧ್ಯವಾಗುತ್ತದೆ.

ಸುಕ್ರತುಃ—ಈ ಪದಕ್ಕೆ ಶ್ರೇಷ್ಠವಾದ ಕರ್ಮಕರ್ತನಾದ ಯಜಮಾನನೆಂದಾಗಲಿ ಅಥವಾ ಬೃಹಸ್ಪತಿಯೆಂದಾಗಲಿ ಅರ್ಥವಾಗುತ್ತದೆ. ಯಜಮಾನನೆಂದರ್ಥವಾದರೆ ಅರರಿಂದಾನಿ ಎಂಬ ಪದಕ್ಕೆ ಯಜ್ಞಸಾಧನವಾದ ಉದಕವೆಂದೂ, ಬೃಹಸ್ಪತಿಯೆಂದಾದರೆ ವೃಷ್ಟಿರೂಪದ ಉದಕವೆಂದೂ ತಿಳಿಯಬೇಕು.

ವ್ಯಾಕರಣಪ್ರಕ್ರಿಯಾ

ಹೋತಾ—ಹು ದಾನಾದನಯೋಃ ಧಾತು. ಕರ್ತರಿಯಲ್ಲಿ ತೃನ್ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿನ ಇಕಿಗೆ ಗುಣ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಪ್ರಥಮಾಏಕವಚನಾಂತರೂಪ.

ಯಕ್ಷತ್—ಯಜ ದೇವಪೂಜಾಸಂಗತಿಕರಣದಾನೇಷು. ಧಾತು. ಲೇಟ್ ಪ್ರಥಮಪುರುಷಏಕವಚನದಲ್ಲಿ ತಿಪ್ ಪ್ರತ್ಯಯ. ಇತಶ್ಚ ಲೋಪಃ ಪರ—(ಪಾ. ಸೂ. ೩-೪-೯೭) ಎಂಬುದರಿಂದ ಅಂತ್ಯ ಇಕಾರಕ್ಕೆ ಲೋಪ. ಲೇಟೋಡಾಟೌ (ಪಾ ಸೂ ೩-೪-೯೪) ಎಂಬುದರಿಂದ ಅದಕ್ಕೆ ಅಡಾಗಮ. ಸಿಬ್ಬಹುಲಂ ಲೇಟಿ (ಪಾ. ಸೂ. ೩-೧-೩೪) ಎಂಬುದರಿಂದ ಸಿಪ್ ಚೋಃ ಕುಃ ಸೂತ್ರದಿಂದ ಜಕಾರಕ್ಕೆ ಕುತ್ವ. ಖರಿಚ ಸೂತ್ರದಿಂದ ಚರ್ತ್ವ. ಪ್ರತ್ಯಯಸಕಾರಕ್ಕೆ ಅದನ್ನು ನಿಮಿತ್ತೀಕರಿಸಿ ಷತ್ವ. ಯಕ್ಷತ್ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

ವಂತ—ವನ ಸಂಭಕ್ತೌ ಧಾತು. ಛಂದಸಿ ಲುಙ್ಲಙ್ಲಿಟಃ (ಪಾ. ಸೂ. ೩-೪-೬) ಎಂಬುದರಿಂದ ಲೋಡರ್ಥದಲ್ಲಿ ಲಙ್. ಪ್ರಥಮ ಪುರುಷಬಹುವಚನದಲ್ಲಿ ಝೋಂತಃ ಎಂಬುದರಿಂದ ಅಂತಾದೇಶ. ವ್ಯತ್ಯಯೋ-ಬಹುಲಂ ಎಂಬುದರಿಂದ ಧಾತುವು ಪರಸ್ಮೈಪದಿಯಾದರೂ ಆತ್ಮನೇಪದಿಯಾಗುತ್ತದೆ. ಬಹುಲಂ ಛಂದಸಿ ಎಂಬುದರಿಂದ ವಿಕರಣಕ್ಕೆ (ಶಪ್) ಲುಕ್. ಛಾಂದಸವಾಗಿ ಧಾತುವಿನ ಅಂತ್ಯಕ್ಕೆ ಲೋಪ. ತಿಙಂತನಿಘಾತಸ್ವರ ಬರುತ್ತದೆ.

ವಾರ್ಯಮ್—ವೃಞ್ ವರಣೇ ಧಾತು. ಋಹಲೋರ್ಣ್ಯತ್ (ಪಾ. ಸೂ. ೩-೧-೧೨೪) ಎಂಬುದರಿಂದ ಣ್ಯತ್ ಪ್ರತ್ಯಯ ಣಿತ್ತಾದುದರಿಂದ ಅಚೋಞ್ಣಿತಿ ಎಂಬುದರಿಂದ ವೃದ್ಧಿ. ಈಡವಂದ—(ಪಾ. ಸೂ. ೬-೧-೨೧೪) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ

ಬೃಹಸ್ಪತಿಃ—ತದ್ಬೃಹತೋಃ ಕರಪತ್ಯೋಃಶ್ಚೋರದೇ—(ಪಾ. ಸೂ. ೬-೧-೧೫೭-೧) ಎಂಬುದರಿಂದ ಸುಟ್. ಉಭೇ ವನಸ್ಪತ್ಯಾದಿಷು (ಪಾ. ಸೂ. ೬-೨-೧೪೦) ಎಂಬುದರಿಂದ ಉಭಯಪದ ಪ್ರಕೃತಿಸ್ವರ ಬರುತ್ತದೆ.

ಯಜತಿ—ಯಜ ದೇವಪೂಜಾಸಂಗತಿಕರಣದಾನೇಷು. ಧಾತು. ಲಟ್ ಪ್ರಥಮಪುರುಷ ಏಕವಚನಾಂತ ರೂಪ. ತಿಙಂತನಿಘಾತಸ್ವರ ಬರುತ್ತದೆ.

ವೇನಃ—ವೇನಃ ಕಾಂತಿಕರ್ಮಾ ಎಂದು ನಿರುಕ್ತದಲ್ಲಿ ಹೇಳಿದೆ. ಕರ್ತರಿಯಲ್ಲಿ ಪಚಾದಿಯಲ್ಲಿ ಸೇರಿರುವುದರಿಂದ ಅಚ್ ಪ್ರತ್ಯಯ. ಚಿತ್ತಾದುದರಿಂದ ಅಂತೋದಾತ್ತವಾಗುತ್ತದೆ.

**ಉಕ್ಷಭಿಃ**— **ಶ್ವನ್ನುಕ್ಷನ್**—(ಉ. ಸೂ. ೧-೧-೫೭) ಎಂಬುದರಿಂದ ಕನಿ ಪ್ರತ್ಯಯಾಂತವಾಗಿ ನಿಪಾತಿತವಾಗಿದೆ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ. ತೃತೀಯಾಬಹುವಚನಾಂತರೂಪ.

**ಪುರುವಾರೇಭಿಃ**— ವೃಞ್ ವರಣೇ. ಧಾತು. ಘಞ್ ಪ್ರತ್ಯಯ. ಞಿತ್ತ್ವಾದುದರಿಂದ ಧಾತುವಿನ ಋಕಾರಕ್ಕೆ ವೃದ್ಧಿ. ಞ್ನಿತ್ಯಾದಿರ್ನಿತ್ಯಮ್ ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಸಮಾಸದಲ್ಲಿ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. ತೃತೀಯಾ ಬಹುವಚನದಲ್ಲಿ **ಬಹುಲಂ ಛಂದಸಿ** ಎಂಬುದರಿಂದ ಭಿಸಿಗೆ ಐಸ್ ಭಾವ ಬರುವುದಿಲ್ಲ. **ಬಹುವಚನೇ ಝಲ್ಯೇತ್** ಎಂಬುದರಿಂದ ಏತ್ವ.

**ಜಗೃಭ್ಮ**— ಗ್ರಹ ಉಪಾದಾನೇ. ಧಾತು. **ಛಂದಸಿ ಲುಙ್‌ಲಙ್‌ಲಿಟಃ** (ಪಾ. ಸೂ. ೩-೪-೬) ಎಂಬುದರಿಂದ ವರ್ತಮಾನಾರ್ಥದಲ್ಲಿ ಲಿಟ್. ಉತ್ತಮಪುರುಷ ಬಹುವಚನದಲ್ಲಿ ಮಸಿಗೆ ಮಾದೇಶ. **ಬಭೂಥಾತತಂಥ ಜಗೃಭ್ಮ**—(ಪಾ. ಸೂ. ೭-೨-೬೪) ಎಂಬುದರಿಂದ ಛಂದಸ್ಸಿನಲ್ಲಿ ಇಡಭಾವವು ನಿಪಾತಿತವಾಗಿದೆ. **ಹೃಗ್ರಹೋರ್ಭಶ್ಛಂದಸಿ** ಎಂಬ ವಚನದಿಂದ ಹಕಾರಕ್ಕೆ ಭತ್ವ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ದೂರೇಆದಿಶಮ್**— ದೂರೇ ಆದಿಕ್ ಯಸ್ಯ ಸಃ ತಮ್ ದೂರೇಆದಿಶಮ್. **ಹಲದಂತಾತ್ ಸಪ್ತಮ್ಯಾಃ** (ಪಾ. ಸೂ. ೬-೩-೯) ಎಂಬುದರಿಂದ ಸಮಾಸದಲ್ಲಿ ಸಪ್ತಮಿಗೆ ಅಲುಕ್. ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಅಧ**— ಅಥ ಎಂಬಲ್ಲಿ ಛಾಂದಸವಾಗಿ ವರ್ಣವಿಕಾರ ಬಂದಿದೆ.

**ತ್ಮನಾ**— ಆತ್ಮನಾ ಎಂದು ರೂಪವಾದಾಗ **ಮಂತ್ರೇಷ್ವಾಙ್ಯಾದೇರಾತ್ಮನಃ** ಎಂಬುದರಿಂದ ಆದಿಯ ಆಕಾರಕ್ಕೆ ಲೋಪ.

**ಅಧಾರಯತ್**— ಧೃಞ್ ಧಾರಣೇ ಧಾತು. ಪ್ರಯೋಜಕವ್ಯಾಪಾರ ತೋರುವುದರಿಂದ **ಹೇತುಮತಿ ಚ** ಸೂತ್ರದಿಂದ ಣಿಚ್. ಛಾಂದಸವಾಗಿ ಲಡರ್ಥದಲ್ಲಿ ಲಙ್. ಪ್ರಥಮಪುರುಷಏಕವಚನಾಂತರೂಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ.

**ಅರರಿಂದಾನಿ**— ರರಿಃ ದಾತಾ. ರಾ ದಾನೇ ಧಾತು. ಲಡರ್ಥದಲ್ಲಿ ಕಿ ಪ್ರತ್ಯಯ. ನಾಸ್ತ್ಯನ್ಯೋ ರರಿರಸ್ಯ ಪಿಪಾಸೋಪಶಮನಸ್ಯ ಅರರಿ. ತತ್ ದದತಿ ಇತಿ ಅರರಿಂದಾನಿ. ಅಥವಾ ಅರರಿಃ=ಇತಶ್ಚ ಇತಶ್ಚ ಗಮನಮ್ ಔಣಾದಿಕ ಅರಿ ಪ್ರತ್ಯಯ. ಅಥವಾ **ಆತೋನುಪಸರ್ಗೇಕಃ** ಎಂಬುದರಿಂದ ಕ ಪ್ರತ್ಯಯ. **ಪೃಷೋದರಾದೀನಿ ಯಥೋಪದಿಷ್ಟಮ್** ಎಂಬುದರಿಂದ ಅಭಿಮತರೂಪಸಿದ್ಧಿಯೂ ಸ್ವರವೂ ಬರುತ್ತದೆ. ತದ್ದದಾತೀತಿ ಅರರಿಂದಾನಿ=ಉದಕಾನಿ (ಜೀಷ್ಟಾದಾಯಕವಾದುದು). **ಆಪೋಮಯಃ ಪ್ರಾಣಃ** ಎಂದು ಶ್ರುತಿಯಲ್ಲಿ ಪ್ರತಿಪಾದಿತವಾಗಿದೆ. ಅಥವಾ ರರಿ ಎಂದರೆ ದಾನ. ನ ವಿದ್ಯತೇ ದಾನಮಿತರಭೂತೇಷು ತತ್ ಅರರಿ ತತ್ ದದಾತಿ ಇತಿ ಅರರಿಂದಾನಿ ಇತರರಿಂದ ಕೊಡಲಾರದ ಭೋಗವನ್ನು ಕೊಡುವುದು ಎಂದು ತಾತ್ಪರ್ಯ.

**ಸುಕ್ರತುಃ**— **ಕ್ರತ್ವಾದಯಶ್ಚ** (ಪಾ. ಸೂ. ೬-೨-೧೧೮) ಎಂಬುದರಿಂದ ಸುವಿನ ಪರವಾದ ಕ್ರತುಶಬ್ದಕ್ಕೆ ಆದ್ಯುದಾತ್ತಸ್ವರ ಬರುತ್ತದೆ. ॥ ೧೦ ॥

॥ ಸಂಹಿತಾಪಾಠಃ ॥

ಯೇ ದೇವಾಸೋ ದಿವ್ಯೇಕಾದಶ ಸ್ಥ ಪೃಥಿವ್ಯಾಮಧ್ಯೇಕಾದಶ ಸ್ಥ ।

ಅಪ್ಸುಕ್ಷಿತೋ ಮಹಿನೈಕಾದಶ ಸ್ಥ ತೇ ದೇವಾಸೋ ಯಜ್ಞಮಿಮಂ ಜುಷಧ್ವಂ ॥ ೧೧ ॥

। ಪದಪಾಠಃ ।

ಯೇ । ದೇವಾಸಃ । ದಿವಿ । ಏಕಾದಶ । ಸ್ಥ । ಪೃಥಿವ್ಯಾಂ । ಅಧಿ । ಏಕಾದಶ । ಸ್ಥ ।

ಅಪ್ಸುऽಕ್ಷಿತಃ । ಮಹಿನಾ । ಏಕಾದಶ । ಸ್ಥ । ತೇ । ದೇವಾಸಃ । ಯಜ್ಞಂ । ಇಮಂ । ಜುಷಧ್ವಂ ॥ ೧೧ ॥

ಸಾಯಣಭಾಷ್ಯಂ

ದಶರಾತ್ರೇ ಷಷ್ಠೇಽಹನಿ ಪ್ರಉಗಶಸ್ತ್ರೇ ವೈಶ್ವದೇವತೃಚಸ್ಯ ದ್ವಿತೀಯಾ ಯೇ ದೇವಾಸ ಇತ್ಯೇಷಾ। ಸೂತ್ರಿತಂ ಚ । ಯೇ ದೇವಾಸೋ ದಿವ್ಯೇಕಾದಶ ಸ್ಥೇಯಮದದಾದ್ರಭಸಂ । ಆ. ೮-೧ । ಇತಿ ॥

ಹೇ ದೇವಾಸೋ ದೇವಾ ದ್ಯೋತನಶೀಲಾ ಯೇ ಯೂಯಂ ದಿವಿ ದ್ಯುಲೋಕೇ ಏಕಾದಶ ಸ್ಥ ಏಕಂ ಚ ದಶ ಚೇತ್ಯೇತತ್ಸಂಖ್ಯಾಕಾ ಭವಥ ತಥಾ ಪೃಥಿವ್ಯಾಮಧ್ಯುಪರ್ಯೇಕಾದಶ ಸ್ಥ ಏತತ್ಸಂಖ್ಯಾಕಾ ಭವಥ ಕಿಂಚಾಪ್ಸುಕ್ಷಿತಃ । ತದ್ಧೇತುತ್ವಾತ್ತಾಚ್ಛಬ್ದ್ಯಂ । ಅಪ್ಸ್ವಂತರಿಕ್ಷೇ ಕ್ಷಿಯಂತಿ ನಿವಸಂತೀತ್ಯಪ್ಸು-ಕ್ಷಿತಃ ॥ ಕ್ಷಿಯತೇಃ ಕ್ವಿಪ್ । ತತ್ಪುರುಷೇ ಕೃತೀತ್ಯಲುಕ್ ॥ ಅಂತರಿಕ್ಷವಾಸಿನೋ ದೇವಾ ಏಕಾದಶ ಸ್ಥ ತತ್ಸಂಖ್ಯಾಕಾ ಭವಥ । ಯದ್ವಾ । ಅಂತರಿಕ್ಷಸ್ಯೇಯಂ ಸಂಜ್ಞಾ । ಆಪಃ ಪೃಥಿವೀತ್ಯಂತರಿಕ್ಷನಾಮಸು ಪಾಠಾತ್ । ಯದ್ಯಪಿ ತಿಸ್ರ ಏವ ದೇವತಾ ಇತ್ಯುಕ್ತತ್ವಾತ್ ಕ್ಷಿತ್ಯಾದ್ಯಭಿಮಾನಿನ್ಯೋ ದೇವತಾಸ್ತಿಸ್ರ ಏವ ತಥಾಪಿ ಮಹಿನಾ ಮಹತ್ತ್ವೇನ ಸ್ವಸ್ವವಿಭೂತ್ಯಾ ತ್ರಯಸ್ತ್ರಿಂಶತ್ಸಂಖ್ಯಾಕಾ ಭವಂತಿ । ತತ್ತತ್ಸ್ಥಾನಾ ಅನ್ಯಾ-ಸ್ತದ್ವಿಭೂತಯ ಇತ್ಯುಕ್ತತ್ವಾತ್ । ಮಹಿನಾ ದೇವಾಸ ಇತ್ಯೇತೇ ಸರ್ವತ್ರ ಸಂಬಧ್ಯೇತೇ । ತೇ ಯೂಯಂ ಹೇ ದೇವಾಸೋ ಮಿಲಿತ್ವೋಕ್ತಸಂಖ್ಯಾಕಾ ದೇವಾ ಇಮಮಸ್ಮದೀಯಂ ಯಜ್ಞಂ ಜುಷಧ್ವಂ । ಸಂಭ-ಜಧ್ವಂ । ತತ್ಸಂಬಂಧಿ ಹವಿರ್ವಾ ಸೇವಿತ್ವಾ ಪ್ರೀಣಯಧ್ವಂ ॥ ಏಕಂ ಚ ದಶ ಚೈಕಾದಶ । ಪ್ರಾಗೇಕಾದ-ಶಭ್ಯಃ । ಪಾ. ೫-೩-೪೯ । ಇತಿ ನಿಪಾತನಾದ್ದೀರ್ಘಃ । ಸಂಖ್ಯೇತಿ ಪೂರ್ವಪದಪ್ರಕೃತಿಸ್ವರತ್ವಂ ॥

ಪ್ರತಿಪದಾರ್ಥ

ದೇವಾಸಃ—ಎಲೈ ದೇವತೆಗಳಿರಾ । ಯೇ—ಯಾವ ನೀವು । ಮಹಿನಾ—ನಿಮ್ಮ ಮಾಹಾತ್ಮ್ಯದ ಬಲದಿಂದ। ದಿವಿ—ದ್ಯುಲೋಕದಲ್ಲಿ । ಏಕಾದಶ—ಹನ್ನೊಂದು ಸಂಖ್ಯೆಯುಳ್ಳವರಾಗಿ । ಸ್ಥ—ಇದ್ದೀರೋ । ಪೃಥಿವ್ಯಾಂ-ಅಧಿ—ಪೃಥ್ವಿಯ ಮೇಲೆ । ಏಕಾದಶ—ಹನ್ನೊಂದು ಸಂಖ್ಯೆಯುಳ್ಳವರಾಗಿ । ಸ್ಥ—ಇದ್ದೀರೋ । ಅಪ್ಸುಕ್ಷಿತಃ—ಅಂತರಿಕ್ಷವಾಸಿಗಳಾಗಿ । ಏಕಾದಶ—ಹನ್ನೊಂದು ಸಂಖ್ಯೆಯುಳ್ಳವರಾಗಿ । ಸ್ಥ—ಇದ್ದೀರೋ । ತೇ ದೇವಾಸಃ—ಅಂತಹ ನೀವು ಸಕಲರೂ ಸೇರಿಕೊಂಡು । ಇಮಂ ಯಜ್ಞಂ—(ನಮ್ಮ) ಈ ಯಜ್ಞವನ್ನು । ಜುಷಧ್ವಂ —ಸೇವಿಸಿರಿ.

ಭಾವಾರ್ಥ

ಎಲೈ ದೇವತೆಗಳೇ, ನೀವು ದ್ಯುಲೋಕದಲ್ಲಿ ಹನ್ನೊಂದು ಸಂಖ್ಯೆಯುಳ್ಳವರಾಗಿಯೂ, ಪೃಥ್ವಿಯ ಮೇಲೆ ಹನ್ನೊಂದು ಸಂಖ್ಯೆಯುಳ್ಳವರಾಗಿಯೂ, ಅಂತರಿಕ್ಷವಾಸಿಗಳಾಗಿ ಹನ್ನೊಂದು ಸಂಖ್ಯೆಯುಳ್ಳವರಾಗಿಯೂ ಇದ್ದೀರಿ. ಇವೆಲ್ಲವೂ ನಿಮ್ಮ ಮಾಹಾತ್ಮ್ಯವನ್ನು ತೋರಿಸುತ್ತವೆ ನೀವೆಲ್ಲರೂ ಸೇರಿಕೊಂಡು ಬಂದು ನಮ್ಮ ಈ ಯಜ್ಞವನ್ನು ಸೇವಿಸಿರಿ.

English Translation

Gods who are eleven in heaven; who are eleven on earth; and who are eleven dwelling with glory in mid-air; may ye be pleased with this our sacrifice.

ವಿಶೇಷ ವಿಷಯಗಳು

ದಶರಾತ್ರವೆಂಬ ಯಾಗದ ಆರನೆಯ ದಿನದಲ್ಲಿ ಪ್ರಉಗಶಸ್ತ್ರಮಂತ್ರಪಠನಕಾಲದಲ್ಲಿ ವಿಶ್ವೇದೇವತಾಕವಾದ ತೃಚವನ್ನು ಪಠನಮಾಡುವಾಗ **ಯೇ ದೇವಾಸೋ ದಿವ್ಯೇಕಾದಶಸ್ಥ** ಎಂಬ ಈ ಋಕ್ಕನ್ನು ತೃಚದ ಎರಡನೆಯ ಋಕ್ಕನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಯೇ ದೇವಾಸೋ ದಿವ್ಯೇಕಾದಶ ಸ್ಥೇಯಮುದದಾದ್ರಭಸಂ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೮. ೧)

**ತೇ ದೇವಾಸಃ ಯಜ್ಞಮಿಮಂ ಜುಷಧ್ವಂ**—ಸಕಲದೇವತೆಗಳೂ ಆದ ನೀವು ನಮ್ಮ ಈ ಯಜ್ಞವನ್ನು ಸೇವಿಸಿ ಎಂದು ಮೂರುಲೋಕಗಳ ದೇವತೆಗಳನ್ನೂ ಉದ್ದೇಶಿಸಿದೆ **ದಿವಿ ಏಕಾದಶ, ಪೃಥಿವ್ಯಾಂ ಏಕಾದಶ, ಅಪ್ಸುಕ್ಷಿತೋ ಏಕಾದಶ** ಎಂದು ಮೂರು ಲೋಕಗಳಿಂದಲೂ ಒಟ್ಟು ದೇವತೆಗಳ ಸಂಖ್ಯೆಯು ಮೂವತ್ತುಮೂರೆಂದ ಹೇಳಿದೆ. ಸಾಯಣರು **ಯದ್ಯಪಿ ತಿಸ್ರ ಏವ ದೇವತಾಃ** (ನಿ. ೭-೫) ಎಂಬ ನಿರುಕ್ತವಚನವನ್ನುದಹರಿಸಿ **ಕ್ಷಿತ್ಯಾದ್ಯಭಿಮಾನಿನ್ಯೋ ದೇವತಾಸ್ತಿಸ್ರ ಏವ ತಥಾಪಿ ಮಹಿತಾ ಮಹತ್ತ್ವೇನ ಸ್ವಸ್ವವಿಭೂತ್ಯಾ ತ್ರಯಸ್ತ್ರಿಂಶತ್ಸಂಖ್ಯಾತಾ ಭವಂತಿ। ತತ್ತತ್ಸ್ಥಾನಾ ಅಸ್ಮಾಸ್ತದ್ವಿಭೂತಯ ಇತ್ಯುಕ್ತತ್ವಾತ್।** ಪೃಥಿವೀ ಅಂತರಿಕ್ಷ ಮತ್ತು ದ್ಯುಲೋಕಾಭಿಮಾನಿ ದೇವತೆಗಳ ಸಂಖ್ಯೆಯು ಮೂರೇ ಆದರೂ ಸಹ ಅವರು ಅವರವರ ಮಹಿಮೆಯಿಂದ ೩೩ ಸಂಖ್ಯೆಯುಳ್ಳವರಾಗಿ ಕಾಣುತ್ತಾರೆ. ಆಯಾ ಲೋಕಗಳಲ್ಲಿರುವ ಉಳಿದ ದೇವತೆಗಳೆಲ್ಲಾ ಇವರ ವಿಭೂತಿಗಳು ಎಂದು ವಿವರಿಸಿದ್ದಾರೆ. ನಿರುಕ್ತಕಾರರೂ ಸಹ—

> ತಿಸ್ರ ಏವ ದೇವತಾ ಇತಿ ನೈರುಕ್ತಾಃ। **ಅಗ್ನಿಃ ಪೃಥಿವೀಸ್ಥಾನಃ। ವಾಯುರ್ವಾ ಇಂದ್ರೋ ವಾ ಅಂತರಿಕ್ಷಸ್ಥಾನಃ। ಸೂರ್ಯೋ ದ್ಯುಸ್ಥಾನಃ। ತಾಸಾಂ ಮಹಾಭಾಗ್ಯಾತ್ ಏಕೈಕಸ್ಯಾ ಅಪಿ ಬಹೂನಿ ನಾಮಧೇಯಾನಿ ಭವಂತಿ। ಅಪಿ ವಾ ಕರ್ಮಪೃಥಕ್ತ್ವಾತ್।** (ನಿ. ೭-೫)।

ನೈರುಕ್ತಕಾರರ ಮತವಂತೆ, **ಅಗ್ನಿ ವಾಯು** ಅಥವಾ ಇಂದ್ರ ಮತ್ತು ಸೂರ್ಯ ಈ ಮೂರು ದೇವತೆಗಳೂ ಸಹ ಪೃಥಿವೀ, ಅಂತರಿಕ್ಷ ಮತ್ತು ದ್ಯುಲೋಕ ಈ ಮೂರು ಲೋಕಗಳ ಅಧಿದೇವತೆಗಳು. ಈ ದೇವತೆಗಳಿಗೇ ಅವರವರ ಮಹತ್ವಕ್ಕನುಗುಣವಾಗಿಯಾಗಲಿ, ಕ್ರಿಯಾವೈವಿಧ್ಯಗಳ ದೆಸೆಯಿಂದಾಗಲಿ ಅನೇಕವಿಧವಾದ ನಾಮಧೇಯಗಳಿರುತ್ತವೆ ಎಂದು ಹೇಳಿ, ಅಥಾತೋಽನುಕ್ರಮಿಷ್ಯಾಮ ಅಗ್ನಿಃ ಪೃಥಿವೀಸ್ಥಾನಃ ತಂ ಪ್ರಥಮಂ ವ್ಯಾಖ್ಯಾಸ್ಯಾಮಃ।

ಎಂದು ನಿ. ೭-೧೪ ರಿಂದ ೯-೪೩ನೇ ಖಂಡದವರೆಗೆ ಪೃಥಿವೀಸ್ಥರಾದ ದೇವತೆಗಳ ಸ್ವರೂಪವನ್ನೂ, **ಅಥಾತೋ ಮಧ್ಯಸ್ಥಾನಾ ದೇವತಾಃ । ತಾಸಾಂ ವಾಯುಃ ಪ್ರಥಮಾಗಾಮೀ ಭವತಿ ।** ಎಂದು ೧೦-೧ ರಿಂದ ೧೧-೫೦ನೇ ಖಂಡದವರೆಗೆ ಮಧ್ಯಮಸ್ಥಾನವಾದ ಅಂತರಿಕ್ಷಸ್ಥದೇವತೆಗಳ ಸ್ವರೂಪವನ್ನೂ, **ಅಥಾತೋ ದ್ಯುಸ್ಥಾನಾ ದೇವತಾಃ** ಎಂದು ೧೨-೧ ರಿಂದ ಅಧ್ಯಾಯದ ಕೊನೆಯವರೆಗೆ ದ್ಯುಲೋಕಸ್ಥರಾದ ದೇವತೆಗಳ ಸ್ವರೂಪವನ್ನೂ ಹೇಳಿದೆ. ಹೀಗೆ ವಿಭಾಗಿಸಿರುವ ಈ ದೇವತೆಗಳ ಸಂಖ್ಯೆಯೆಷ್ಟು ಎಂಬ ವಿಷಯದಲ್ಲಿ ಮತಭೇದಗಳಿವೆಯಾದರೂ ಋಕ್ಸಂಹಿತೆಯ ಅನೇಕಕಡೆಗಳಲ್ಲಿ ಒಂದೇ ವಿಧವಾದ ಅಭಿಪ್ರಾಯವು ಕಾಣುತ್ತದೆ.

**ಆ ನಾಸತ್ಯಾ ತ್ರಿಭಿರೇಕಾದಶೈರಿಹ ದೇವೇಭಿರ್ಯಾತಂ ಮಧುಪೇಯಮಶ್ವಿನಾ ।**
**ಪ್ರಾಯುಸ್ತಾರಿಷ್ಟಂ ನೀ ರಪಾಂಸಿ ಮೃಕ್ಷತಂ ಸೇಧತಂ ದ್ವೇಷೋ ಭವತಂ ಸಚಾಭುವಾ ॥**
(ಋ. ಸಂ. ೧-೩೪-೧೧)

(೧೧+೩) ಮೂವತ್ತುಮೂರು ದೇವತೆಗಳೊಂದಿಗೂ ಮಧುಪಾನವನ್ನಪೇಕ್ಷಿಸಿ ಇಲ್ಲಿಗೆ ಬನ್ನಿರಿ ಎಂದು ಅಶ್ವಿನೀದೇವತೆಗಳನ್ನೂ,

**ಶ್ರುಷ್ಟೀವಾನೋ ಹಿ ದಾಶುಷೇ ದೇವಾ ಅಗ್ನೇ ವಿಚೇತಸಃ ।**
**ತಾನ್ರೋಹಿದಶ್ವ ಗಿರ್ವಣಸ್ತ್ರಯಸ್ತ್ರಿಂಶತಮಾ ವಹ ॥**
(ಋ. ಸಂ. ೧-೪೫-೨)

ಮೂವತ್ತುಮೂರು ದೇವತೆಗಳನ್ನು ಕರೆದುಕೊಂಡು ಬಾ ಎಂದು ಅಗ್ನಿಯನ್ನೂ ಪ್ರಕೃತವಾದ ಋಕ್ಕಿನಲ್ಲಿ ಪ್ರಾರ್ಥಿಸಿರುವಂತೆಯೇ ಪ್ರಾರ್ಥಿಸಿದೆ. ಇದರಂತೆಯೇ,

**ಐಭಿರಗ್ನೇ ಸರಥಂ ಯಾಹ್ಯರ್ವಾಙ್ ನಾನಾರಥಂ ವಾ ವಿಭವೋ ಹ್ಯಶ್ವಾಃ ।**
**ಪತ್ನೀವತಸ್ತ್ರಿಂಶತಂ ತ್ರೀಂಶ್ಚ ದೇವಾನನುಷ್ವಧಮಾ ವಹ ಮಾದಯಸ್ವ ।**
(ಋ. ಸಂ. ೩-೬-೯)

**ಇತಿ ಸ್ತುತಾಸೋ ಅಸಥಾ ರಿಶಾದಸೋ ಯೇ ಸ್ಥ ತ್ರಯಶ್ಚ ತ್ರಿಂಶಚ್ಚ ।**
**ಮನೋರ್ದೇವಾ ಯಜ್ಞಿಯಾಸಃ ।**
(ಋ. ಸಂ. ೮-೩೦-೨)

**ವಿಶ್ವೈರ್ದೇವೈಸ್ತ್ರಿಭಿರೇಕಾದಶೈರಿಹಾದ್ಭಿರ್ಮರುದ್ಭಿರ್ಭೃಗುಭಿಃ ಸಚಾಭುವಾ ।**
(ಋ. ಸಂ. ೮-೩೫-೩)

**ತವ ತ್ಯೇ ಸೋಮ ಪವಮಾನ ನಿಣ್ಯೇ ವಿಶ್ವೇ ದೇವಾಸ್ತ್ರಯ ಏಕಾದಶಾಸಃ ।**
**ದಶ ಸ್ವಧಾಭಿರಧಿ ಸಾನೋ ಅವ್ಯೇ ಮೃಜಂತಿ ತ್ವಾ ನದ್ಯಃ ಸಪ್ತ ಯಹ್ವೀಃ ।**
(ಋ. ಸಂ. ೯-೯೨-೪)

ಇತ್ಯಾದಿ ಋಕ್ಕುಗಳಲ್ಲಿಯೂ ಸಹ ದೇವತೆಗಳ ಸಂಖ್ಯೆಯು ಮೂವತ್ತುಮೂರೆಂಬುದು ಸ್ಪಷ್ಟವಾಗಿದೆ. ಶತಪಥ ಬ್ರಾಹ್ಮಣದಲ್ಲಿಯೂ ಸಹ

**ಅಷ್ಟೌ ವಸವಃ । ಏಕಾದಶ ರುದ್ರಾಃ । ದ್ವಾದಶಾದಿತ್ಯಾ ಇಮೇ ಏವ ದ್ಯಾವಾಪೃಥಿವೀ ತ್ರಯಸ್ತ್ರಿಂಶದ್ವೈ ದೇವಾಃ ಪ್ರಜಾಪತಿಶ್ಚತುಸ್ತ್ರಿಂಶಃ ।**
(ಶ. ಬ್ರಾ. ೪-೫-೭-೨)

ಎಂಟು ವಸುಗಳೂ ಹನ್ನೊಂದು ರುದ್ರರೂ, ಹನ್ನೆರಡು ಆದಿತ್ಯರೂ ಮತ್ತು ದ್ಯಾವಾಪೃಥಿವಿಗಳೂ ಸೇರಿ ಮೂವತ್ತು ಮೂರು ದೇವತೆಗಳು. ಪ್ರಜಾಪತಿಯು ಇವರಲ್ಲದೇ ಮೂವತ್ತನಾಲ್ಕನೆಯವನು, ಎಂದು ಒಂದು ಕಡೆ ಹೇಳಿದೆ. ಆದರೆ ಇನ್ನೊಂದು ಸ್ಥಳದಲ್ಲಿ ಅದೇ ಮೂವತ್ತುಮೂರು ಸಂಖ್ಯೆಯಿದ್ದರೂ ಸಹ ದ್ಯಾವಾಪೃಥಿವಿಗಳಿಗೆ ಬದಲಾಗಿ ಇಂದ್ರನನ್ನೂ ಪ್ರಜಾಪತಿಯನ್ನೂ ಸೇರಿಸಿದೆ.

**ತೇ ತ್ರಯಸ್ತ್ರಿಂಶದಿತ್ಯಷ್ಟೌ ವಸವ ಏಕಾದಶ ರುದ್ರಾ ದ್ವಾದಶಾದಿತ್ಯಾಸ್ತ ಏಕತ್ರಿಂಶದಿಂದ್ರಶ್ಚೈವ ಪ್ರಜಾಪತಿಶ್ಚ ತ್ರಯಸ್ತ್ರಿಂಶಾವಿತಿ ।**

(ಶ. ಬ್ರಾ. ೧೧-೬-೩-೫)

ಐತರೇಯ ಬ್ರಾಹ್ಮಣದಲ್ಲೂ ಸಹ,

**ತ್ರಯಸ್ತ್ರಿಂಶದ್ವೈ ದೇವಾಃ ಸೋಮಪಾಸ್ತ್ರಯಸ್ತ್ರಿಂಶದಸೋಮಪಾ ಅಷ್ಟೌ ವಸವ ಏಕಾದಶ ರುದ್ರಾ ದ್ವಾದಶಾದಿತ್ಯಾಃ ಪ್ರಜಾಪತಿಶ್ಚ ವಷಟ್ಕಾರಶ್ಚೈತೇ ದೇವಾಃ ಸೋಮಪಾಃ ।**

(ಐ. ಬ್ರಾ. ೨-೧೮)

ಸೋಮಪಾನವನ್ನು ಮಾಡತಕ್ಕವರು ಮೂವತ್ತುಮೂರು ದೇವತೆಗಳು. ಅವರು ಅಷ್ಟವಸುಗಳು, ಏಕಾದಶ ರುದ್ರರು, ಮತ್ತು ದ್ವಾದಶಾದಿತ್ಯರು, ಇವರೊಂದಿಗೆ ಪ್ರಜಾಪತಿ ಮತ್ತು ವಷಟ್ಕಾರ. ಹೀಗೆ ಸಂಹಿತೆಯಲ್ಲಿಯೂ ಬ್ರಾಹ್ಮಣಗಳಲ್ಲಿಯೂ ಈ ಸಂಖ್ಯೆಯ ವಿಷಯದಲ್ಲಿ ಒಂದೇ ಅಭಿಪ್ರಾಯವಿದೆ. ಆದರೆ,

**ತ್ರೀಣಿ ಶತಾ ತ್ರೀ ಸಹಸ್ರಾಣ್ಯಗ್ನಿಂ ತ್ರಿಂಶಚ್ಚ ದೇವಾ ನವ ಚಾಸಪರ್ಯನ್ ।**
**ಔಕ್ಷನ್ ಘೃತೈರಸ್ತೃಣನ್ಬರ್ಹಿರಸ್ಮಾ ಆದಿದ್ಧೋತಾರಂ ನ್ಯಸಾದಯಂತ ॥**

(ಋ. ಸಂ. ೩-೯-೯)

ಎಂಬ ಋಕ್ಕಿನಲ್ಲಿಯೂ ಇದರಂತೆಯೇ ಋ. ಸಂ. ೧೦-೫೨-೬ ನೇ ಋಕ್ಕಿನಲ್ಲಿಯೂ ಸಹ ಮೂರು ಸಾವಿರದ ಮುನ್ನೂರ ಮೂವತ್ತುಒಂಭತ್ತು ದೇವತೆಗಳು ಅಗ್ನಿಯನ್ನು ಪೂಜಿಸಿದರೆಂದು ಹೇಳಿದೆ. ವಾಜಸನೇಯಸಂಹಿತೆಯಲ್ಲಿಯೂ (೩೩-೭) ಇದೇ ಆನುಪೂರ್ವಿಯಿದೆ. ಇದೂ ಅಲ್ಲದೇ,

**ನಮೋ ಮಹದ್ಭ್ಯೋ ನಮೋ ಅರ್ಭಕೇಭ್ಯೋ ನಮೋ ಯುವಭ್ಯೋನಮ ಆಶಿನೇಭ್ಯಃ ।**
**ಯಜಾಮ ದೇವಾನ್ಯದಿ ಶಕ್ನವಾಮ ಮಾ ಜ್ಯಾಯಸಃ ಶಂಸಮಾ ವೃಕ್ಷಿ ದೇವಾಃ ।**

(ಋ. ಸಂ. ೧-೨೭-೧೩)

ಅತ್ಯಧಿಕವಾದ ಗುಣವುಳ್ಳವರೂ, ನ್ಯೂನವಾದ ಗುಣವುಳ್ಳವರೂ, ತರುಣರೂ ವೃದ್ಧರೂ ಆದ ಸಕಲ ವಿಧವಾದ ದೇವತೆಗಳಿಗೂ ನಮಸ್ಕಾರವೆಂದು ಹೇಳುವಾಗ ದೇವತೆಗಳಲ್ಲಿ ಸ್ವರೂಪವೈವಿಧ್ಯವಿದೆಯೆಂದು ತಿಳಿಯುತ್ತದೆ. ಈ ಋಕ್ಕನ್ನೇ ಐತರೇಯಬ್ರಾಹ್ಮಣದಲ್ಲೂ ಸಹ (೭-೧೬) ಶುನಶ್ಶೇಪೋಪಾಖ್ಯಾನದಲ್ಲಿ ವಿಶ್ವೇದೇವಪ್ರಾರ್ಥನಾಸಂದರ್ಭದಲ್ಲಿ ಪಠಿಸಿದೆ. ಆದರೆ

**ನಹಿ ವೋ ಅಸ್ತ್ಯರ್ಭಕೋ ದೇವಾಸೋ ನ ಕುಮಾರಕಃ । ವಿಶ್ವೇ ಸತೋಮಹಾಂತ ಇತ್ ।**

(ಋ. ಸಂ. ೮-೩೦-೧)

ಎಂಬಲ್ಲಿ ದೇವತೆಗಳ ಮಧ್ಯೆ ದೊಡ್ಡವರು ಚಿಕ್ಕವರು ಎಂಬ ಭೇದವೇ ಇಲ್ಲ. ಸಕಲದೇವತೆಗಳೂ ಮಹಾತ್ಮರೇ ಆಗಿದ್ದಾರೆ ಎಂಬ ಪ್ರಶಂಸೆಯಿದೆ. ಇಂತಹ ಮಾಹಾತ್ಮ್ಯವುಳ್ಳ ಸಕಲ ದೇವತೆಗಳನ್ನೂ ಉದ್ದೇಶಿಸಿ ಪ್ರಕೃತವಾದ ಋಕ್ಕಿನಲ್ಲಿ ಋಷಿಯು ಪ್ರಾರ್ಥಿಸಿದ್ದಾನೆ—

॥ ವ್ಯಾಕರಣಪ್ರಕ್ರಿಯಾ ॥

**ದೇವಾಸಃ**—ದೇವ ಶಬ್ದಕ್ಕೆ ಜಸ್ ಪರವಾದಾಗ **ಆಜ್ಜಸೇರಸುಕ್** (ಪಾ. ಸೂ. ೭-೧-೫೦) ಎಂಬುದರಿಂದ ಅದಕ್ಕೆ ಅಸುಕಾಗಮ. ಸಕಾರಕ್ಕೆ ರುತ್ವವಿಸರ್ಗ.

**ದಿವಿ**—ಸಪ್ತಮೀ ಏಕವಚನಾಂತರೂಪ. **ಊಡಿದಂ ಪದಾದಿ**—(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಏಕಾದಶ**—ಏಕಂ ಚ ದಶ ಚ ಏಕಾದಶ. **ಪ್ರಾಗೇಕಾದಶಭ್ಯಃ**—(ಪಾ. ಸೂ. ೫-೩-೪೯) ಎಂಬುದರಿಂದ ನಿಪಾತಮಾಡಿರುವುದರಿಂದ ಪೂರ್ವಪದಕ್ಕೆ ದೀರ್ಘ. **ಸಂಖ್ಯಾ**—(ಪಾ. ಸೂ. ೬-೨-೩೫) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಸ್ಥ**—ಅಸ ಭುವಿ ಧಾತು. ಲಟ್ ಮಧ್ಯಮಪುರುಷ ಬಹುವಚನದಲ್ಲಿ ಥ ಪ್ರತ್ಯಯ. **ಅದಿಪ್ರಭೃತಿಭ್ಯಃಶಪಃ** ಎಂಬುದರಿಂದ ಶಪಿಗೆ ಲುಕ್. ಪ್ರತ್ಯಯಕ್ಕೆ **ಸಾರ್ವಧಾತುಕಮಪಿತ್** ಸೂತ್ರದಿಂದ ಙಿತ್ವಾತಿದೇಶವಿರುವುದರಿಂದ **ಶ್ನಸೋರಲ್ಲೋಪಃ** (ಪಾ. ಸೂ. ೬-೪-೧೧೧) ಎಂಬುದರಿಂದ ಧಾತುವಿನ ಅಕಾರಕ್ಕೆ ಲೋಪ. ತಿಙಂತನಿಘಾತಸ್ವರ ಬರುತ್ತದೆ.

**ಪೃಥಿವ್ಯಾಮ್**—ಪೃಥಿವೀಶಬ್ದವು ಙೀಷಂತವಾದುದರಿಂದ ಅಂತೋದಾತ್ತ. ಸಪ್ತಮಿಯಲ್ಲಿ ಅದಕ್ಕೆ ಯಣಾದೇಶ ಬಂದುದರಿಂದ ಅದರ ಪರದಲ್ಲಿರುವ ವಿಭಕ್ತಿಗೆ **ಉದಾತ್ತಯಣೋಹಲ್ಪೂರ್ವಾತ್** (ಪಾ. ಸೂ. ೬-೧-೧೭೪) ಎಂಬುದರಿಂದ ಉದಾತ್ತಸ್ವರ ಬರುತ್ತದೆ.

**ಅಪ್ಸುಕ್ಷಿತಃ**—ಅಪ್ಸು ಕ್ಷಿಯಂತಿ ಇತಿ ಅಪ್ಸು ಕ್ಷಿತಃ ಕ್ಷಿ ನಿವಾಸಗತ್ಯೋಃ ಧಾತು. **ಕ್ವಿಪ್ ಚ** (ಪಾ. ಸೂ. ೩-೨-೭೬) ಎಂಬುದರಿಂದ ಕ್ವಿಪ್ ಪ್ರತ್ಯಯ. ಪಿತ್ತಾದುದರಿಂದ ಇದು ಪರವಾದಾಗ **ಹ್ರಸ್ವಸ್ಯ ಪಿತಿ ಕೃತಿ ತುಕ್** (ಪಾ. ಸೂ. ೬-೧-೭೧) ಎಂಬುದರಿಂದ ತುಕಾಗಮ. **ತತ್ಪುರುಷೇ ಕೃತಿ ಬಹುಲಮ್** (ಪಾ. ಸೂ. ೬-೩-೧೪) ಎಂಬುದರಿಂದ ಸಮಾಸದಲ್ಲಿ ಅಲುಕ್ ಬರುತ್ತದೆ. **ಗತಿಕಾರಕೋಪಪದಾತ್ ಕೃತ್** ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಮಹಿನಾ**—ಮಹ ಪೂಜಾಯಾಂ ಧಾತು. **ಸರ್ವಧಾತುಭ್ಯ ಇನ್** ಎಂಬುದರಿಂದ ಇನ್ ಪ್ರತ್ಯಯ. ಪ್ರತ್ಯಯದಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ. ಅಥವಾ ಪೃಥ್ವಾದಿಯಲ್ಲಿ ಮಹಚ್ಛಬ್ದವನ್ನು ಪಾಠಮಾಡಿರುವುದರಿಂದ ಭಾವಾರ್ಥದಲ್ಲಿ **ಪೃಥ್ವಾದಿಭ್ಯಇಮನಿಜ್ವಾ** (ಪಾ. ಸೂ. ೫-೧-೧೨೨) ಎಂಬುದರಿಂದ ಇಮನಿಚ್ ಪ್ರತ್ಯಯ. **ಟೇಃ** ಎಂಬುದರಿಂದ ಟಿ ಲೋಪ. ತೃತೀಯಾ ಏಕವಚನದಲ್ಲಿ ಅಲ್ಲೋಪ ಬರುತ್ತದೆ. **ಚಿತಃ** ಎಂಬುದರಿಂದ ಅದು ಉದಾತ್ತವಾದುದರಿಂದ ಉದಾತ್ತನಿವೃತ್ತಿಸ್ವರದಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಯಜ್ಞಮ್**—ಯಜ ದೇವಪೂಜಾಸಂಗತಿಕರಣದಾನೇಷು ಧಾತು. **ಯಜಯಾಚಯತ**—(ಪಾ. ಸೂ. ೩-೩-೯೦) ಎಂಬುದರಿಂದ ನಙ್ ಪ್ರತ್ಯಯ. ಶ್ಚುತ್ವ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಜುಷಧ್ವಮ್**—ಜುಷೀ ಪ್ರೀತಿಸೇವನಯೋಃ ಧಾತು. ಲೋಟ್ ಮಧ್ಯಮಪುರುಷ ಬಹುವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೧೧ ॥

ಇಲ್ಲಿಗೆ ೧೩೯ನೇ ಸೂಕ್ತವು ಮುಗಿದುದು.

# ನೂರನಲತ್ತನೆಯ ಸೂಕ್ತವು

**ಏಕವಿಂಶೇsನುವಾಕೇ ಸಪ್ತದಶ ಸೂಕ್ತಾನಿ । ತತ್ರ ವೇದಿಷದ ಇತಿ ಪ್ರಥಮಂ ಸೂಕ್ತಂ ತ್ರಯೋದಶರ್ಚಂ । ಉಚಥ್ಯಪುತ್ರಸ್ಯ ದೀರ್ಘತಮಸ ಆರ್ಷಂ । ಆಗ್ನೇಯಂ । ಅಂತ್ಯೇ ತ್ರಿಷ್ಟುಭೌ । ಶಿಷ್ಟಾಸ್ತ್ರಿಷ್ಟುಬಂತಪರಿಭಾಷಯಾ ಜಗತ್ಯಃ । ದಶಮೀ ತ್ರಿಷ್ಟುಬ್ಜಗತೀ ವಾ । ಅತ್ಯಷ್ಟಿಪರಿಭಾಷಾ ನಿವೃತ್ತಾ । ಅತ್ರಾನುಕ್ರಮಣಿಕಾ । ವೇದಿಷದೇ ಸಪ್ತೋನಾ ದೀರ್ಘತಮಾ ಔಚಥ್ಯ ಆಗ್ನೇಯಂ ತು ದ್ವಿತ್ರಿಷ್ಟುಬಂತಂ ತು ತ್ರಿಷ್ಟುಬ್ಜಶಮೀ ವೇತಿ ॥ ಪ್ರಾತರನುವಾಕಸ್ಯಾಗ್ನೇಯೇ ಕ್ರತೌ ಜಾಗತೇ ಛಂದಸೀದಮಾದೀನಿ ತೃತೀಯವರ್ಜಿತಾನಿ ಷಟ್ ಸೂಕ್ತಾನಿ ವಿನಿಯುಕ್ತಾನಿ । ತಥಾಶ್ವಿನಶಸ್ತ್ರೇ ಷಣ್ಣಾಂ ತೃತೀಯವರ್ಜಿತಾನಾಂ ಸೂಕ್ತಾನಾಂ ವಿನಿಯೋಗಃ । ಸೂತ್ರಿತಂ ಚ। ವೇದಿಷದ ಇತಿ ಷಣ್ಣಾಂ ತೃತೀಯಮುದ್ಧರೇತ್। ಆ. ೪-೧೩। ಇತಿ ॥**

ಅನುವಾದವು—ಪ್ರಥಮಮಂಡಲದ ಇಪ್ಪತ್ತೊಂದನೆಯ ಅನುವಾಕದಲ್ಲಿ ಹದಿನೇಳು ಸೂಕ್ತಗಳಿರುವುವು. ಅವುಗಳಲ್ಲಿ **ವೇದಿಷದೇ** ಎಂಬ ಈ ಸೂಕ್ತವು ಮೊದಲನೆಯದು. ಈ ಸೂಕ್ತದಲ್ಲಿ ಹದಿಮೂರು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಉಚಥ್ಯಪುತ್ರನಾದ ದೀರ್ಘತಮಸ್ ಎಂಬುವನು ಋಷಿಯು. ಅಗ್ನಿಯು ದೇವತೆಯು. ಕೊನೆಯ ಎರಡು ಋಕ್ಕುಗಳು ತ್ರಿಷ್ಟುಪ್‌ಛಂದಸ್ಸಿನವು. ಉಳಿದ ಋಕ್ಕುಗಳು ಜಗತೀಛಂದಸ್ಸಿನವು. ಹತ್ತನೆಯ ಋಕ್ಕು ತ್ರಿಷ್ಟುಪ್ ಅಥವಾ ಜಗತೀ ಎಂಬ ಋಕ್ಕುಗಳಲ್ಲಿ ಯಾವುದಾದರೂ ಆಗಬಹುದು ಹಿಂದಿನ ಸೂಕ್ತದ ಅಂತ್ಯಕ್ಕೆ ಅತ್ಯಷ್ಟಿ ಎಂಬ ಛಂದಸ್ಸು ಮುಗಿದಿರುವುದು ಅನುಕ್ರಮಣಿಕೆಯಲ್ಲಿ—**ವೇದಿಷದೇ ಸಪ್ತೋನಾ ದೀರ್ಘತಮಾ ಔಚಥ್ಯ ಆಗ್ನೇಯಂ ತು ದ್ವಿತ್ರಿಷ್ಟುಬಂತಂ ತು ತ್ರಿಷ್ಟುಬ್ಜಶಮೀ ವೇತಿ** ಎಂದು ಹೇಳಿರುವುದು. ಪ್ರಾತರನುವಾಕ ಮಂತ್ರಪಠನಕಾಲದಲ್ಲಿ ಆಗ್ನೇಯಕ್ರತುಸಂಬಂಧವಾದ ಜಗತೀಛಂದಸ್ಸಿನ ಋಕ್ಕುಗಳ ಪಠನಕ್ಕಾಗಿ ಈ ಸೂಕ್ತದಿಂದ (ಮೂರನೆಯ ಸೂಕ್ತವನ್ನು ಬಿಟ್ಟು) ಆರು ಸೂಕ್ತಗಳ ವಿನಿಯೋಗವಿರುವುದೆಂದೂ ಹಾಗೆಯೇ ಆಶ್ವಿನಶಸ್ತ್ರಮಂತ್ರಗಳಿಗಾಗಿ ಮೂರನೆಯ ಸೂಕ್ತವನ್ನು ಬಿಟ್ಟು ಉಳಿದ ಸೂಕ್ತಗಳ ವಿನಿಯೋಗವಿರುವುದೆಂದೂ ಆಶ್ವಲಾಯನಶ್ರೌತಸೂತ್ರದ **ವೇದಿಷದ ಇತಿ ಷಣ್ಣಾಂ ತೃತೀಯಮುದ್ಧರೇತ್** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೪-೧೩).



॥ ಓಂ ॥

## ಸೂಕ್ತ—೧೪೦

॥ ಮಂಡಲ—೧ ॥ ಅನುವಾಕ—೨೧ ॥ ಸೂಕ್ತ—೧೪೦ ॥

॥ ಅಷ್ಟಕ— ೨ ॥ ಅಧ್ಯಾಯ— ೨ ॥ ವರ್ಗ— ೫,೬,೭ ॥

ಸೂಕ್ತದಲ್ಲಿರುವ ಋಕ್ಸಂಖ್ಯೆ-೧೩॥

॥ ಋಷಿಃ—ದೀರ್ಘತಮಾ ಔಚಥ್ಯಃ ॥

॥ ದೇವತಾ—ಅಗ್ನಿಃ ॥

॥ ಛಂದಃ—೧-೯, ೧೧ ಜಗತೀ । ೧೦. ತ್ರಿಷ್ಟುಬ್ ಜಗತೀ ವಾ । ೧೨-೧೩ ತ್ರಿಷ್ಟುಪ್ ।

ಸಂಹಿತಾಪಾಠಃ

ವೇದಿಷದೇ ಪ್ರಿಯಧಾಮಾಯ ಸುದ್ಯುತೇ ಧಾಸಿಮಿವ ಪ್ರ ಭರಾ ಯೋನಿ-
ಮಗ್ನಯೇ ।
ವಸ್ತ್ರೇಣೇವ ವಾಸಯಾ ಮನ್ಮನಾ ಶುಚಿಂ ಜ್ಯೋತೀರಥಂ ಶುಕ್ರವರ್ಣಂ
ತಮೋಹನಂ ॥ ೧ ॥

ಪದಪಾಠಃ

ವೇದಿಽಸದೇ । ಪ್ರಿಯಽಧಾಮಾಯ । ಸುಽದ್ಯುತೇ । ಧಾಸಿಂಽಇವ । ಪ್ರ । ಭರ । ಯೋನಿಂ । ಅಗ್ನಯೇ ।
ವಸ್ತ್ರೇಣಽವ । ವಾಸಯ । ಮನ್ಮನಾ । ಶುಚಿಂ । ಜ್ಯೋತಿಃಽರಥಂ । ಶುಕ್ರಽವರ್ಣಂ । ತಮಃಽಹನಂ ॥ ೧ ॥

। ಸಾಯಣಭಾಷ್ಯಂ ॥

ಹೇ ಅಧ್ವರ್ಯೋ ವೇದಿಷದೇ ವೇದ್ಯಾಂ ಸೀದತೇ ನಿತ್ಯಂ ಪ್ರಿಯಧಾಮಾಯ ಪ್ರಿಯಧಾಮ್ನೇ ಪ್ರಿಯಸ್ಥಾನಾಯೋತ್ತರವೇದಿಲಕ್ಷಣಪ್ರಿಯಾಯ ಸುದ್ಯುತೇ ಶೋಭನದ್ಯೋತನಾಯಾಗ್ನಯೇಽಗ್ರನಯನಾದಿಗುಣವಿಶಿಷ್ಟಾಯ ಯೋನಿಂ ಸ್ಥಾನಂ ವೇದ್ಯಾಖ್ಯಂ ಧಾಸಿಮಿವ ಹವೀರೂಪಮನ್ನಮಿವ ಪ್ರ ಭರ । ಪ್ರಹರ । ಪ್ರಕರ್ಷೇಣ ಸಂಪಾದಯೇತ್ಯರ್ಥಃ । ತಚ್ಚ ಸ್ಥಾನಂ ವಸ್ತ್ರೇಣೇವ ತೇನ ಯಥಾ ಮಾರ್ದನಾಯಾಸ್ತೃಣಾತಿ ತದ್ವತ್ ಮನ್ಮನಾ ಮನನೀಯೇನ ಸಂಭಾರೇಣ ಬರ್ಹಿಷಾ ವಾ ವೇದಿಸ್ಥಾನಂ ವಾಸಯ । ಆಚ್ಛಾದಯ । ಕೀದೃಶಂ ತತ್ಸ್ಥಾನಮಿತಿ ತದುಚ್ಯತೇ । ಶುಚಿಮುತ್ಪವನಪ್ರೋಕ್ಷಣಾದಿನಾಮೇಧ್ಯಾಸುರಾದೀನಾಮುಪಗತತ್ವಾಚ್ಛುದ್ಧಂ ಜ್ಯೋತೀರಥಂ ಜ್ಯೋತಿಷ ಆಜ್ಯಾದೇರಗ್ನೇರ್ವಾ ರಥಸ್ಥಾನೀಯಮಾ-

ಧಾರಭೂತತ್ವಾತ್ ಶುಕ್ರವರ್ಣಂ ಅಗ್ನ್ಯುಪೇತತ್ವಾದ್ದೀಪ್ತವರ್ಣಂ ಅತ ಏವ ತಮೋಹನಂ ತಮಸೋಽಂಧಕಾರಸ್ಯ ಹಂತಾರಮಜ್ಞಾನಸ್ಯ ವಾ । ಅಗ್ನಿಸಾಧ್ಯಯಜ್ಞಾದಿದ್ವಾರಾ ಜ್ಞಾನವಿಚಾರಕತ್ವಾದಿತಿ ಭಾವಃ । ಯದ್ವಾ । ತಸ್ಯಾಂ ಯೋನೌ ಸ್ಥಾನೇ ವಸ್ತ್ರೇಣ ಯಥಾ ಗೋಪನೀಯಂ ವಸ್ತು ಗೋಪಯಂತಿ ತದ್ವತ್ತಮಗ್ನಿಂ ವಾಸಯ । ನಿವಾಸಯ । ಸ್ಥಾಪಯ । ಮನ್ಮನಾ ಮನನೀಯೇನ ಸ್ಪರ್ಶನೀಯೇನ ವಸ್ತ್ರಸದೃಶೇನ ಮೃದುಕಾಷ್ಠಾದಿನಾಚ್ಛಾದಯ ವಾ । ಕೀದೃಶಂ । ಜ್ಯೋತೀರಥಂ ದೀಪ್ತಿರಥೋಪೇತಂ । ಶೇಷಂ ಪೂರ್ವವತ್ ॥

ಪ್ರತಿಪದಾರ್ಥ

**ವೇದಿಷದೇ**—(ಅಧ್ವರ್ಯವೇ) ವೇದಿಕೆಯ ಮೇಲೆ ಕುಳಿತಿರುವವನೂ, । **ಪ್ರಿಯಧಾಮಾಯ**—(ಉತ್ತರ ವೇದಿರೂಪವಾದ) ಸ್ಥಾನದಲ್ಲಿ ಪ್ರೀತಿಯುಳ್ಳವನೂ । **ಸುದ್ಯುತೇ**—ಶ್ರೇಷ್ಠವಾಗಿ ಪ್ರಕಾಶಿಸುವವನೂ ಆದ । **ಅಗ್ನಯೇ**—ಅಗ್ನಿದೇವನಿಗೆ । **ಶುಚಿಂ**—ಶುದ್ಧವಾದುದೂ, । **ಜ್ಯೋತೀರಥಂ**—ತೇಜಸ್ಸಿಗೆ ರಥವಂತೆ ವಾಹಕವಾದುದೂ । **ಶುಕ್ರವರ್ಣಂ**—ಪ್ರಕಾಶಮಾನವಾದ ವರ್ಣವುಳ್ಳದ್ದೂ । **ತಮೋಹನಂ**—ತಮಸ್ಸನ್ನು (ಅಥವಾ ಅಜ್ಞಾನವನ್ನು) ನಾಶಮಾಡತಕ್ಕದ್ದೂ ಆದ । **ಯೋನಿಂ**—ವೇದಿರೂಪವಾದ ಸ್ಥಾನವನ್ನು । **ಧಾಸಿಮಿವ**—(ಹವಿಸ್ಸಿನ ರೂಪದ) ಅನ್ನದಂತೆ । **ಪ್ರ ಭರ**—ಅತಿಶಯವಾಗಿ ಸಂಪಾದಿಸು ।(ಮತ್ತು ಆ ಸ್ಥಾನವನ್ನು । **ವಸ್ತ್ರೇಣೇವ**—(ಮೃದುವಾಗಿರುವುದಕ್ಕಾಗಿ) ವಸ್ತ್ರದಿಂದ ಹೊದ್ದಿಸುವಂತೆ (ವಸ್ತ್ರವನ್ನು ಹರಡುವಂತೆ) । **ಮನ್ಮನಾ**—ಅನುಕೂಲಕರವಾದ ದರ್ಭಾಸನದಿಂದ । **ವಾಸಯ**—ಹೊದ್ದಿಸು (ಅಲಂಕರಿಸು) ಅಥವಾ (ವಸ್ತ್ರದಿಂದ ಗೋಪ್ಯವಾದ ವಸ್ತುವನ್ನು ಮುಚ್ಚುವಂತೆ ಕಾಷ್ಠಾದಿಗಳಿಂದ ಆ ಸ್ಥಾನವನ್ನು ಮುಚ್ಚು)

ಭಾವಾರ್ಥ

ಎಲೈ ಅಧ್ವರ್ಯುವೇ, ವೇದಿಕೆಯ ಮೇಲೆ ಕುಳಿತಿರುವವನೂ, ಉತ್ತರವೇದಿಕೆಯರೂಪವಾದ ತನ್ನ ಸ್ವಸ್ಥಾನವನ್ನು ಪ್ರೀತಿಸುವವನೂ ಆದ ಅಗ್ನಿದೇವನಿಗೆ ಶುದ್ಧವಾದುದೂ ತೇಜಸ್ಸಿಗೆ ರಥದಂತೆ ವಾಹಕವಾದುದೂ, ಪ್ರಕಾಶಮಾನವಾದ ವರ್ಣವುಳ್ಳದ್ದೂ, ತಮಸ್ಸನ್ನು ನಾಶಮಾಡತಕ್ಕದ್ದೂ ಆದ ವೇದಿಕಾಸ್ಥಾನವನ್ನು ಹವಿಸ್ಸಿನ ರೂಪದ ಅನ್ನವನ್ನು ಅರ್ಪಿಸುವಂತೆ ಅತಿಶಯವಾಗಿ ಸಂಪಾದಿಸಿ ಅರ್ಪಿಸು. ಮತ್ತು ಆ ಸ್ಥಾನವನ್ನು ಮೃದುವಾಗಿರುವುದಕ್ಕಾಗಿ ವಸ್ತ್ರದಿಂದ ಹೊದ್ದಿಸುವಂತೆ ಅನುಕೂಲಕರವಾದ ದರ್ಭಾಸನದಿಂದ ಹೊದ್ದಿಸಿ ಅಲಂಕರಿಸು.

English Translation

Prepare a (fit) place, as it were an offering for the radiant Agni, who is seated on the altar, and fond of his station : strew the sacred, light-bearing, bright and gloom-dispelling (spot), with agreeable (kusa grass), as with a garment

ವಿಶೇಷವಿಷಯಗಳು

ಅಗ್ನಯೇ ಯೋನಿಂ ಪ್ರ ಭರ; ಮನ್ಮನಾ ವಾಸಯ—ಅಗ್ನಿಗೆ ವೇದಿರೂಪವಾದ ಸ್ಥಾನವನ್ನು ಸಂಪಾದಿಸು ಮತ್ತು ಅದನ್ನು ದರ್ಭಾಸನದಿಂದ ಹೊದ್ದಿಸು ಅಥವಾ ಅಲಂಕರಿಸು ಎಂದು ಎರಡು ವಾಕ್ಯಗಳಿವೆ. ಅಗ್ನಯೇ ಎಂಬುದಕ್ಕೆ. ವೇದಿಷದೇ, ಪ್ರಿಯಧಾಮಾಯ ಸುದ್ಯುತೇ ಎಂಬ ವಿಶೇಷಣಗಳಿವೆ.

**ವೇದಿಷದೇ**—**ವೇದ್ಯಾಂ ಸೀದತೇ ನಿತ್ಯಂ ಇತಿ ವೇದಿಷತ್** ವೇದಿಯಲ್ಲಿ ಕುಳಿತಿರುವುದರಿಂದ **ವೇದಿಷತ್** ಎಂಬ ಹೆಸರು

**ಹೋತಾ ವೇದಿಷದಿತ್ಯೇಷ ವೈ ಹೋತಾ ವೇದಿಷತ್ ।**

(ಐ. ಬ್ರಾ. ೪-೨೦)

ಹೋತೃವಿನ ಸ್ಥಾನವು ಯಾವಾಗಲೂ ವೇದಿಯಾಗಿರುವುದರಿಂದಲೂ, **ಅಗ್ನಿಯು** ಯಜ್ಞಕ್ಕೆಲ್ಲಾ ಹೋತೃವಾಗಿರುವುದರಿಂದಲೂ ಈ ವಿಶೇಷಣವಿದೆ.

**ಹೋತಾ ವೇದಿಷದಿತ್ಯಗ್ನಿರ್ವೈ ಹೋತಾ ವೇದಿಷತ್ ।**

(ಶ. ಬ್ರಾ. ೬-೭-೩-೧೧)

ಇತ್ಯಾದಿ ವಾಕ್ಯಗಳಿಂದ ಹೋತೃವಾದ ಅಗ್ನಿಗೆ **ವೇದಿಷತ್** ಎಂಬ ವಿಶೇಷಣವು ಪ್ರಸಿದ್ಧವಾಗಿದೆ. **ಹೋತಾ ವೇದಿಷತ್ ।** ಎಂಬ **ಕಠೋಪನಿಷತ್ತಿನ** ವಾಕ್ಯಕ್ಕೆ (೫–೨) ಶಂಕರಾಚಾರ್ಯರು ಭಾಷ್ಯವನ್ನು ಬರೆಯುತ್ತಾ,

**ಹೋತಾ ಅಗ್ನಿಃ, ' ಅಗ್ನಿರ್ವೈ ಹೋತಾ ' ಇತಿ ಶ್ರುತೇಃ । ವೇದ್ಯಾಂ ಪೃಥಿವ್ಯಾಂ ಸೀದತೀತಿ ವೇದಿಷತ್ । ಇಯಂ ವೇದಿಃ ಪರೋಽಂತಃ ಪೃಥಿವ್ಯಾಃ । ಯಾ ಯಜ್ಞೇ ಪ್ರಸಿದ್ಧಾ ಇಯಂ ವೇದಿಃ ಪೃಥಿವ್ಯಾಃ ಪರೋಽಂತಃ ಪರಃ ಸ್ವಭಾವಃ ಇತಿ ವೇದ್ಯಾ ಪೃಥಿವೀಸ್ವಭಾವತ್ವಕೀರ್ತನಾತ್ ಪೃಥಿವೀ ವೇದಿಶಬ್ದವಾಚ್ಯಾ ಭವತೀತ್ಯರ್ಥಃ ।** ಎಂದು ಪೃಥಿವೀ ಮತ್ತು ವೇದಿಗಳಿಗೆ ತಾದಾತ್ಮ್ಯಬೋಧಕವಾದ ಅರ್ಥವನ್ನು ಮಾಡಿದ್ದಾರೆ. ಆದುದರಿಂದಲೇ **ವೇದಿಯು** ಅಗ್ನಿಗೆ ಪ್ರಿಯವಾದ **ಧಾಮವಾಗಿದೆಯೆಂದೂ** ವಿವರಿಸಿದೆ.

**ಧಾಸಿಂ**—ಧಾಸಿಃ ಇರಾ—ಇತ್ಯಾದ್ಯನ್ನನಾಮಗಳಲ್ಲಿ ಪಠಿತವಾಗಿದೆ. (ನಿಘಂಟು ೨-೭-೧೧). ಪಾನಾರ್ಥಕವಾದ **ಧೇಟ್** ಧಾತುವಿನಿಂದ ನಿಷ್ಪನ್ನವಾಗಿ ಹವಿಸ್ಸಿನ ರೂಪದ ಅನ್ನವೆಂದರ್ಥದಾಗುತ್ತದೆ. ಅಥವಾ **ಪ್ರಾಣಾಧಾರಕ**ವೆಂದರ್ಥವಾದರೂ ಆಗಬಹುದು.

**ಕೃಷ್ಣಾ ಸತೀ ರುಶತಾ ಧಾಸಿನೈಷಾ ಜಾಮರ್ಯೇಣ ಪಯಸಾ ಪೀಪಾಯ ।**

(ಋ. ಸಂ. ೪-೩-೯)

**ಕೇ ಧಾಸಿಮಗ್ನೇ ಅನೃತಸ್ಯ ಪಾಂತಿ ಕ ಆಸತೋ ವಚಸಃ ಸಂತಿ ಗೋಪಾಃ ।**

(ಋ. ಸಂ ೫-೧೨-೪)

ಎಂಬ ಋಕ್ಕುಗಳಲ್ಲಿ **ಧಾಸಿ** ಶಬ್ದಕ್ಕೆ **ಧಾರಕವಾದ** ಎಂದರ್ಥವಾಗುವಂತೆ ಇಲ್ಲೂ ಆಗಬಹುದು. ಇಲ್ಲಿ **ಯೋನಿ**ಯನ್ನು **ಧಾಸಿಗೆ ಹೋಲಿಸಿದೆ.**

**ಯೋನಿಯೆಂದರೆ**- **ವೇದ್ಯಾಖ್ಯವಾದ** ಸ್ಥಾನ. **ವೇದಿಷತ್ತಾದ** ಅಗ್ನಿಗೆ **ವೇದ್ಯಾಖ್ಯವೆಂಬ ಯೋನಿ**ಯನ್ನು ಸಂಪಾದಿಸು ಎಂದರ್ಥ.

**ಆ ಸ್ವೇ ಯೋನೌ ನಿಷೀದತು** (ಋ. ಸಂ. ೬-೧೬-೪೧) ಎಂಬ ಋಕ್ಕನ್ನುದಹರಿಸಿ, **ಏಷ ಹ ವಾ ಅಸ್ಯ ಸ್ವೋ ಯೋನಿರ್ಯದಗ್ನಿರಗ್ನೇಃ ।** (ಐ.ಬ್ರಾ. ೧-೧೬) ಎಂಬ ವಾಕ್ಯದಿಂದ **ಯೋನಿಯೆಂದರೆ** ಆಹವನೀಯಾಗ್ನಿಯ ಉತ್ಪತ್ತಿಸ್ಥಾನವೆಂದು ತಿಳಿಸುತ್ತದೆ.

**ತಮೋಽಹನಂ**—ತಮುಸಃ ಅಂಧಕಾರಸ್ಯ ಹಂತಾರಂ, ಅಜ್ಞಾನಸ್ಯ ವಾ। ಕತ್ತಲನ್ನು ಅಥವಾ ಅಜ್ಞಾನವನ್ನು ನಾಶನಾಡತಕ್ಕ ಎಂದು ಭೌತಿಕವಾದರೂ ಆಧ್ಯಾತ್ಮಿಕವಾದುದೂ ಆದ ಎರಡು ಅರ್ಥಗಳನ್ನೂ ಹೇಳಿದೆ. **ಅಗ್ನಿಸಾಧ್ಯಯಜ್ಞಾದಿದ್ವಾರಾ ಜ್ಞಾನವಿಚಾರಕತ್ವಾದಿತಿ ಭಾವಃ** ಯಜ್ಞಾದಿ ಕರ್ಮಾಚರಣೆಯು ಜ್ಞಾನಕ್ಕೆ ಸಾಧನವಾಗುವುದರಿಂದ **ಅಜ್ಞಾನನಿವೃತ್ತಿ**ಯೆಂದರ್ಥವು. ಅಜ್ಞಾನನಾಶಕವಾದ ಯೋನಿಯೆಂದು **ಯೋನಿಗೆ** ವಿಶೇಷಣವಾಗಿದೆ.

ವ್ಯಾಕರಣಪ್ರಕ್ರಿಯಾ

**ವೇದಿಷದೇ**—ವೇದ್ಯಾಂ ಸೀದತಿ ಇತಿ ವೇದಿಷತ್. ಷದ್ಲೃ ವಿಶರಣಗತ್ಯವಸಾದನೇಷು. ಧಾತು. **ಸತ್ಸೂದ್ವಿಷ**- (ಪಾ. ಸೂ. ೩-೨-೬೧) ಎಂಬುದರಿಂದ ಕ್ವಿಪ್ ಪ್ರತ್ಯಯ. **ಗತಿಕಾರಕೋಪಪದಾತ್ಕೃತ್** ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ಚತುರ್ಥೀಏಕವಚನಾಂತರೂಪ.

**ಪ್ರಿಯಧಾಮಾಯ**—ಪ್ರಿಯಂ ಧಾಮ ಸ್ಥಾನಂ ಯಸ್ಯ ಸಃ ತಸ್ಮೈ ಪ್ರಿಯಧಾಮಾಯ. **ಬಹುವ್ರೀಹೌ-ಪ್ರಕೃತ್ಯಾಪೂರ್ವಪದಮ್** (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಸುದ್ಯುತೇ**—ಶೋಭನಂ ದ್ಯುತ್ ಯಸ್ಯ. ಸಃ ತಸ್ಮೈ. **ನಞ್ಸುಭ್ಯಾಮ್** (ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ.

**ಭರ**—ಹೃಞ್ ಹರಣೇ ಧಾತು. ಲೋಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪಿಗೆ ಹಿ ಆದೇಶ. ಶಪ್ ವಿಕರಣ. **ಅತೋಹೇಃ** (ಪಾ. ಸೂ. ೬-೪-೧೦೫) ಎಂಬುದರಿಂದ ಹಿಗೆ ಲುಕ್. **ಹೃಗ್ರಹೋರ್ಭಶ್ಛಂದಸಿ** ಎಂಬ ವಚನದಿಂದ ಧಾತುವಿನ ಹಕಾರಕ್ಕೆ ಭಕಾರಾದೇಶ. ಅತಿಙಂತದ ಪರದಲ್ಲಿ ಬಂದುದರಿಂದ ನಿಘಾತಸ್ವರ ಬರುತ್ತದೆ.

**ಅಗ್ನಯೇ**—ಅಗಿ ಗತೌ ಧಾತು. **ಅಗೇರ್ನಲೋಪಶ್ಚ** ಎಂಬುದರಿಂದ ನುಮುನಿನ ಕಾರಕ್ಕೆ ಲೋಪ ನಿಪ್ರತ್ಯಯ. ಚತುರ್ಥೀ ಏಕವಚನಾಂತರೂಪ.

**ವಾಸಯ**—ವಸ ಆಚ್ಛಾದನೇ. ಧಾತು. ಣಿಜಂತದ ಮೇಲೆ ಲೋಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪಿಗೆ ಹಿ ಆದೇಶ. ಶಪ್ ವಿಕರಣ. ಣಿಚ್ ನಿಮಿತ್ತವಾಗಿ **ಅತ ಉಪಧಾಯಾಃ** (ಪಾ. ಸೂ. ೭-೨-೧೧೬) ಎಂಬುದರಿಂದ ಧಾತುವಿನ ಉಪಧೆಗೆ ವೃದ್ಧಿ. ಶಪ್ ನಿಮಿತ್ತವಾಗಿ ಣಿಚಿನ ಇಕಾರಕ್ಕೆ ಗುಣ ಅಯಾದೇಶ. **ಅತೋಹೇಃ** ಎಂಬುದರಿಂದ ಹಿಗೆ ಲುಕ್. ತಿಙಂತನಿಘಾತಸ್ವರ ಬರುತ್ತದೆ.

**ಮನ್ಮನಾ**—ಮನ ಜ್ಞಾನೇ ಧಾತು. **ಅನ್ಯೇಭ್ಯೋಽಪಿ ದೃಶ್ಯಂತೇ** (ಪಾ. ಸೂ. ೩-೨-೭೫) ಎಂಬುದರಿಂದ ಮನಿನ್ ಪ್ರತ್ಯಯ. **ಞ್ನಿತ್ಯಾದಿರ್ನಿತ್ಯಮ್** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ತೃತೀಯಾ ಏಕವಚನಾಂತರೂಪ.

**ಜ್ಯೋತೀರಥಮ್**—ಜ್ಯೋತಿಷಃ ರಥಃ ತಮ್ ಜ್ಯೋತೀರಥಮ್. ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ತಮೋಹನಮ್**—ಹನ ಹಿಂಸಾಗತ್ಯೋಃ ಧಾತು. ತಮಸಃ ಹಂತಾ. ತಮೋಹಾ, **ಬಹುಲಂ ಛಂದಸಿ** ಎಂಬುದರಿಂದ ಕ್ವಿಪ್ ಪ್ರತ್ಯಯ. ದ್ವಿತೀಯಾ ಏಕವಚನದಲ್ಲಿ ವ್ಯತ್ಯಯದಿಂದ ದೀರ್ಘ ಬರುವುದಿಲ್ಲ. ಅಥವಾ ಕರ್ತರಿಯಲ್ಲಿ ಬಹುಲಗ್ರಹಣದಿಂದ ಅಚ್ ಪ್ರತ್ಯಯ. ವ್ಯತ್ಯಯದಿಂದ ವಧಾದೇಶ ಬರುವುದಿಲ್ಲ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ॥ ೧ ॥



ಸಂಹಿತಾಪಾಠಃ

ಅಭಿ ದ್ವಿಜನ್ಮಾ ತ್ರಿವೃದನ್ನಮೃಜ್ಯತೇ ಸಂವತ್ಸರೇ ವಾವೃಧೇ ಜಗ್ಧಮೀಂ ಪುನಃ ।
ಅನ್ಯಸ್ಯಾಸಾ ಜಿಹ್ವಯಾ ಜೇನ್ಯೋ ವೃಷಾ ನ್ಯ೧ನ್ಯೇನ ವನಿನೋ ಮೃಷ್ಟ
ವಾರಣಃ ॥ ೨ ॥

ಪದಪಾಠಃ

ಅಭಿ । ದ್ವಿಽಜನ್ಮಾ । ತ್ರಿಽವೃತ್ । ಅನ್ನಂ । ಋಜ್ಯತೇ । ಸಂವತ್ಸರೇ । ವವೃಧೇ । ಜಗ್ಧಂ । ಈಮಿತಿ ।
ಪುನರಿತಿ ।
ಅನ್ಯಸ್ಯ । ಆಸಾ । ಜಿಹ್ವಯಾ । ಜೇನ್ಯಃ । ವೃಷಾ । ನಿ । ಅನ್ಯೇನ । ವನಿನಃ । ಮೃಷ್ಟ । ವಾರಣಃ ॥ ೨ ॥

ಸಾಯಣಭಾಷ್ಯಂ

ದ್ವಿಜನ್ಮಾ ದ್ವಾಭ್ಯಾಮರಣೀಭ್ಯಾಂ ಜಾಯಮಾನಃ । ಯದ್ವಾ । ಮಥನೇನಾಧಾನಸಂಸ್ಕಾರೇಣ ಚೋತ್ಪನ್ನತ್ವಾತ್ ದ್ವಿಜನ್ಮತ್ವಂ ॥ ಅನ್ಯೇಭ್ಯೋಽಪಿ ದೃಶ್ಯಂತ ಇತಿ ಮನಿನ್ ॥ ಅಯಮಗ್ನಿಸ್ತ್ರಿವೃದನ್ನಮಾಜ್ಯಪುರೋಡಾಶಸೋಮರೂಪೇಣ ತ್ರಿಪ್ರಕಾರಮನ್ನಮದನೀಯಮಭಿ ಋಜ್ಯತೇ । ಪ್ರಾಪ್ನೋತಿ । ಅಭಿತ ಆಭಿಮುಖ್ಯೇನ ನಯತಿ ಭಕ್ಷಯತಿ ॥ ಋಜ ಗತಿಸ್ಥಾನಾರ್ಜನೋಪಾರ್ಜನೇಷು । ವ್ಯತ್ಯಯೇನ ಶ್ಯನ್ ॥ ಯದ್ವಾ । ಭೃಜ್ಯತೇ ॥ ಭ್ರಸ್ಜೋ ಪಾಕೇ ॥ ಪಕ್ವಂ ಕರೋತಿ ವಾ । ಕಿಂಚ ಈ ಇದಂ ॥ ಈಮಿತ್ಯತ್ರ ಸಾಂಹಿತಿಕೋ ಮಲೋಪಶ್ಛಾಂದಸಃ ॥ ಜಗ್ಧಂ ಭಕ್ಷಿತಂ ಸಂವತ್ಸರೇ ಪೂರ್ಣೇ ಪುನರ್ವವೃಧೇ। ಅಗ್ನಿರ್ವರ್ಧಯತಿ। ಜೀರ್ಣಸ್ಯ ಪುನರ್ವೃದ್ಧ್ಯಭಾವಾದ್ಯಜಮಾನಂ ಹವಿರ್ವೃದ್ಧ್ಯಾ ಪ್ರತಿಸಂವತ್ಸರಂ ಯಾಗಸಮರ್ಥಂ ಕರೋತೀತ್ಯರ್ಥಃ । ಯದ್ವಾ । ಏಕವಾರಂ ಭಕ್ಷಿತಂ ಹವಿಃ ಪುನಃ ಸಂವತ್ಸರೇ ಪೂರ್ಣೇ ಸಂವತ್ಸರ ಉದರಸ್ಥಂ ವರ್ಧತೇ ವರ್ಧಯತಿ ವಾ ಭಕ್ಷಿತಾರಂ । ಕಿಂಚಾಯಮಗ್ನಿರ್ವೃಷಾ ವರ್ಷಕಃ ಸನ್ನನ್ಯಸ್ಯ ಹವಿಷ ಆಸಾಸ್ಯೇನ ಜಿಹ್ವಯಾ ಜೇನ್ಯಃ ಪ್ರಭೂತೋ ಭವತೀತಿ ಶೇಷಃ । ಯದ್ವಾ । ವರ್ಷಿತಾ ಸನ್ನೇಕೇನ ರೂಪೇಣಾನ್ಯಸ್ಯ ಯಜ್ಞೇ ಹೋತ್ರಾದೇರ್ಜಿಹ್ವಯಾ ತದುಪಲಕ್ಷಿತಯಾ ಸ್ರುಚಾ ಜೇನ್ಯಃ ಪ್ರವೃದ್ಧೋ ಭವತಿ । ತಥಾನ್ಯೇನ ದಾವಾಗ್ನಿರೂಪೇಣ ವಾರಣಃ ಸರ್ವೇಷಾಂ ವಾರಕಃ ಸನ್ ವನಿನೋ ವನಸಂಬಂಧಿನೋ ವೃಕ್ಷಾನ್ನಿ ಮೃಷ್ಟ । ನಿಮಾರ್ಷ್ಟಿ । ದಹತೀತ್ಯರ್ಥಃ । ಮೃಜೇಶ್ಛಾಂದಸೇ ಲಙಿ ವ್ಯತ್ಯಯೇನಾತ್ಮನೇಪದಂ ॥

ಪ್ರತಿಪದಾರ್ಥ

ದ್ವಿಜನ್ಮಾ—ಎರಡು ಅರಣಿಗಳಿಂದಲೂ ಉತ್ಪನ್ನವಾದ ಅಥವಾ ಮಥನದಿಂದ ಒಂದು ಸಲವೂ, ಆಧಾನ ಸಂಸ್ಕಾರದಿಂದ ಒಂದು ಸಲವೂ ಹೀಗೆ ಎರಡು ಸಲ ಉತ್ಪನ್ನನಾದ ಅಗ್ನಿಯು। ತ್ರಿವೃದನ್ನಂ—ಆಜ್ಯ, ಪುರೋ

ಡಾಶ ಮತ್ತು ಸೋಮ ಈ ರೀತಿ ಮೂರು ವಿಧವಾಗಿ ಭಕ್ಷ್ಯವಾಗಿರುವ ಅನ್ನವನ್ನು। **ಅಭಿ ಋಜ್ಯತೇ**—ಪೂರ್ಣವಾಗಿ ಭಕ್ಷಿಸುತ್ತಾನೆ. ಅಥವಾ ಪಕ್ವವಾಗುವಂತೆ ಮಾಡುತ್ತಾನೆ। **ಈಂ ಜಗ್ಧಂ**—ಭಕ್ಷಿಸಿದ ಈ ಅನ್ನವನ್ನು । **ಸಂವತ್ಸರೇ**—ವರ್ಷವು ಕಳೆಯಲು । **ಪುನಃ**—ತಿರುಗಿಯೂ । **ವವೃಧೇ**—(ಹೊಸ ಚೈತನ್ಯವನ್ನು ಕೊಟ್ಟು) ಬೆಳೆಸುತ್ತಾನೆ. ಅಥವಾ ವೃದ್ಧಿಯಾಗುವಂತೆ ಮಾಡುತ್ತಾನೆ. ಅಥವಾ ಯಜಮಾನನ ಹವಿಸ್ಸು ವೃದ್ಧಿಯಾಗುವಂತೆ ಮಾಡುತ್ತಾನೆ. (ಮತ್ತು) । **ವೃಷಾ**—ಇಷ್ಟಾರ್ಥವನ್ನು ಸುರಿಸುವವನಾಗಿ । **ಅನ್ಯಸ್ಯ**—ಹವಿಸ್ಸಿನ (ಹವಿಸ್ಸನ್ನು) । **ಆಸಾ**—ಆಸ್ವಾದನೆಮಾಡುವ । **ಜಿಹ್ವಯಾ**—ನಾಲಿಗೆಯಿಂದ । ಅಥವಾ **ಅನ್ಯಸ್ಯ**—ಹೋತೃವಿನ । **ಜಿಹ್ವಯಾ**—ಜಿಹ್ವಾರೂಪದ ಸೌಟನಿಂದ । **ಜೇನ್ಯಃ**—ಪ್ರವೃದ್ಧನಾಗುತ್ತಾನೆ. । **ಅನ್ಯೇನ**—ದಾವಾಗ್ನಿರೂಪದಿಂದ । **ವಾರಣಃ**—ಎಲ್ಲವನ್ನೂ ತಡೆಯುತ್ತಾ । **ವನಿನಃ**—ವನವೃಕ್ಷಗಳನ್ನೆಲ್ಲಾ । **ನಿ ಮೃಷ್ಟ**—ಸಂಪೂರ್ಣವಾಗಿ ದಹಿಸುತ್ತಾನೆ.

ಭಾವಾರ್ಥ

ಎರಡು ವಿಧವಾದ ಜನ್ಮವುಳ್ಳ ಅಗ್ನಿಯು ಆಜ್ಯ, ಪುರೋಡಾಶ ಮತ್ತು ಸೋಮರಸ ಈ ರೀತಿ ಮೂರು ವಿಧವಾಗಿ ಭಕ್ಷ್ಯವಾಗಿರುವ ಅನ್ನವನ್ನು ಪೂರ್ಣವಾಗಿ ಭಕ್ಷಿಸುತ್ತಾನೆ. ಭಕ್ಷಿಸಿದ ಈ ಅನ್ನವನ್ನು ವರ್ಷವೂ ಕಳೆಯಲು ಪುನಃ ವೃದ್ಧಿಯಾಗುವಂತೆ ಮಾಡುತ್ತಾನೆ. ಇಷ್ಟಾರ್ಥಪ್ರದನಾದ ಅಗ್ನಿಯು ಹವಿಸ್ಸನ್ನು ಆಸ್ವಾದಿಸುವ ನಾಲಿಗೆಯಿಂದ ಒಂದು ವಿಧವಾಗಿ ವೃದ್ಧಿಹೊಂದುತ್ತಾನೆ. ದಾವಾಗ್ನಿರೂಪವಾದ ಇನ್ನೊಂದು ಬಗೆಯಿಂದ ತನ್ನ ಎದುರಿಗಿರುವ ಸಕಲವನ್ನು ನಿರೋಧಿಸುತ್ತಾ ವನವೃಕ್ಷಗಳೆಲ್ಲವನ್ನೂ ದಹಿಸುತ್ತಾನೆ.

## English Translation

(Agni), the two-fold generated, devours the triple (sacrificial) food, and when the year expires renovates what has been eaten ; the showerer (of benefits) is ınvigorated (in one from), by eating with the tongue of another ; in a different form the restrainer (of all) consumes the forest trees.

ವಿಶೇಷವಿಷಯಗಳು

**ದ್ವಿಜನ್ಮಾ**—**ದ್ವಾಭ್ಯಾಂ ಅರಣೀಭ್ಯಾಂ ಜಾಯಮಾನಃ**। ಯದ್ವಾ । **ಮಥನೇನ ಆಧಾನಸಂಸ್ಕಾರೇಣ ಚ ಉತ್ಪನ್ನತ್ವಾತ್ ದ್ವಿಜನ್ಮತ್ವಂ** । ಎರಡು ಕಟ್ಟಿಗೆಗಳಿಂದ ಉತ್ಪನ್ನನಾಗುವುದರಿಂದಾಗಲಿ ಅಥವಾ ಮಥನದಿಂದ ಒಂದು ಸಲವೂ, ಆಧಾನಸಂಸ್ಕಾರದಿಂದ ಒಂದು ಸಲವೂ ಹೀಗೆ ಎರಡು ಸಲ ಉತ್ಪನ್ನನಾಗುವುದರಿಂದಾಲಿ **ದ್ವಿಜನ್ಮಾ** ಎಂದು ಅಗ್ನಿಯನ್ನು ಕರೆದಿದೆ. ಈ ವಿಶೇಷಣಕ್ಕೆ ಋ. ಸಂ. ೧-೬೦-೧ ಮತ್ತು ೧-೧೪೯-೪ನೇ ಋಕ್ಕಿನಲ್ಲೂ **ದ್ವಯೋರ್ದ್ಯಾವಾಪೃಥಿವ್ಯೋರ್ವಾ ಜಾಯಮಾನಂ, ಅರಣ್ಯೋರ್ವಾ ಜಾಯಮಾನಂ** ದ್ಯಾವಾಪೃಥಿವಿಗಳಿಂದ ಉತ್ಪನ್ನನಾಗುವುದರಿಂದಾಗಲಿ ಅಥವಾ ಅರಣ್ಯುತ್ಪನ್ನನಾಗುವುದರಿಂದಾಗಲಿ ಎಂಬ ಎರಡು ಪರ್ಯಾಯಾರ್ಥಗಳನ್ನು ಹೇಳಿದ್ದಾರೆ.

ಅಗ್ನಿಯ ಉತ್ಪತ್ತಿಯ ಕ್ರಮವನ್ನು ಒಂದೊಂದು ಕಡೆ ಒಂದೊಂದು ವಿಧವಾಗಿ ಹೇಳಿರುವುದನ್ನು ಋಕ್ಸಂಹಿತಾ ವಾಕ್ಯಗಳನ್ನುದಹರಿಸಿ ಹಿಂದೆಯೇ ತಿಳಿಸಿದೆ ೧-೯೫-೩ನೇ ಋಕ್ಕಿನ ವಿಶೇಷವಿಷಯಗಳಲ್ಲಿ **ತ್ರೀಣಿ**

ಜಾನಾ ಎಂಬ ವರ್ಣನೆಯನ್ನು ವಿವರಿಸಿದೆ. ಅಗ್ನಿಯು ಮೂರು ಲೋಕಗಳಲ್ಲಿಯೂ ರೂಪಾಂತರಗಳಲ್ಲಿರುವುದರಿಂದ ಅವನ ಉತ್ಪತ್ತಿಯ ಸ್ವರೂಪವು ಒಂದೇ ವಿಧವೆಂದು ಹೇಳಲಾಗುವುದಿಲ್ಲ. ಉದಾಹರಣೆಗೆ ಶತಪಥಬ್ರಾಹ್ಮಣದಲ್ಲಿ

**ಋತಸದಿತಿ ಸತ್ಯಸದಿತ್ಯೇತದ್ವ್ಯೋಮಸದಿತಿ ಸರ್ವೇಷು ಹ್ಯೇಷ ವ್ಯೋಮಸು ಸನ್ನೋಽಬ್ಜಾ ಗೋಜಾ ಇತ್ಯಬ್ಜಾಶ್ಚ ಹ್ಯೇಷ ಗೋಜಾಶ್ಚರ್ತಜಾ ಇತಿ ಸತ್ಯಜಾ ಇತ್ಯೇತದದ್ರಿಜಾ ಇತ್ಯ-ದ್ರಿಜಾ .... .... .... ।**

(ಶ. ಬ್ರಾ. ೬-೭-೩-೧೧)

ಎಂಬ ವಾಕ್ಯಗಳಲ್ಲಿ ಅಬ್ಜನೆಂದೂ, ಗೋಜನೆಂದೂ, ಋತಜನೆಂದೂ, ಅದ್ರಿಜನೆಂದೂ ಅಗ್ನಿಯನ್ನು ವರ್ಣಿಸಿದೆ. ಮತ್ತು

**ದಿವಸ್ಪರಿ ಪ್ರಥಮಂ ಜಜ್ಞೇಽಗ್ನಿರಿತಿ । ಪ್ರಾಣೋ ವೈ ದಿವಃ ಪ್ರಾಣಾದು ವಾ ಏಷ ಪ್ರಥಮನು ಜಾಯತಾಸ್ಮದ್ದ್ವಿತೀಯಂ ಪರಿ ಜಾತವೇದಾ ಇತಿ ಯದೇನಮದೋ ದ್ವಿತೀಯಂ ಪುರುಷ-ವಿಧೋಽಜನಯತ್ತೃತೀಯಮಪ್ಸ್ವಿತಿಯದೇನಮದಸ್ತೃತೀಯಮದ್ಭ್ಯೋಽಜನಯನ್ನೃಮಣಾ ಅಜಸ್ರಮಿತಿ ।**

(ಶ. ಬ್ರಾ. ೬-೭-೪-೩)

ಎಂಬ ವಾಕ್ಯಗಳಲ್ಲಿ ಅಗ್ನಿಯು ದ್ಯುಲೋಕದಿಂದ ಮೊದಲು ಹುಟ್ಟಿದುದನ್ನೂ ಯಜ್ಞಾದಿಕಾಲಗಳಲ್ಲಿ ಮಾನವರಿಂದ ಎರಡನೆಯ ಸಲ ಉತ್ಪನ್ನನಾದುದನ್ನೂ, ಉದಕದಿಂದ ಮೂರನೆಯ ಜನ್ಮವನ್ನೂ ಹೊಂದಿದುದನ್ನು ವಿವರಿಸಿದೆ. ಹೀಗೆ ಅಗ್ನಿಯ ಜನ್ಮವು ವಿಧವಿಧವಾಗಿರುವುದರಲ್ಲಿ ಇಲ್ಲಿ ದ್ವಿಜನ್ಮಾ ಎಂದು ಈ ಸನ್ನಿವೇಶಕ್ಕುಚಿತವಾಗಿ ವರ್ಣಿಸಿದೆ.

**ತ್ರಿವೃದನ್ನಂ**—ಆಜ್ಯ, **ಪುರೋಡಾಶ** ಮತ್ತು **ಸೋಮ** ಈ ಮೂರು ವಿಧವಾದ ಅನ್ನಗಳು. ಇವರ ವಿಷಯವನ್ನು ಪೀಠಿಕಾ ಪ್ರಕರಣವಾದ ಋಗ್ವೇದ ಸಂಹಿತೆಯ ಮೊದಲನೇ ಭಾಗದಲ್ಲಿ ತಿಳಿಸಿದೆ. ಹವಿರ್ಯಜ್ಞ, **ಪಾಕಯಜ್ಞ** ಮತ್ತು **ಸೋಮಯಾಗ**ಗಳಲ್ಲಿ ಅರ್ಪಿಸತಕ್ಕ ಅನ್ನಗಳು.

**ಸಂವತ್ಸರೇ ವಾವೃಧೇ ಜಗ್ಧಮೀ ಪುನಃ**—ಪ್ರಕೃತವಾದ ಯಾಗದಲ್ಲಿ ಭಕ್ಷಿಸಿದ ಅನ್ನವನ್ನು ಸಂವತ್ಸರವು ಕಳೆದನಂತರ ಪುನಃ ವೃದ್ಧಿಯಾಗುವಂತೆ ಮಾಡುತ್ತಾನೆ. ಯಜ್ಞವು ವೃಷ್ಟಿಸಾಧಕವಾಗಿ, ವೃಷ್ಟಿಯು ಯಜಮಾನನ ಸಂಪತ್ತನ್ನು ವೃದ್ಧಿಮಾಡುವುದರಿಂದ ವರ್ಷಾನಂತರ ಪುನಃ ಅಗ್ನಿಷ್ಟೋಮಾದಿ ಯಾಗಗಳು ಯಥಾಕ್ರಮವಾಗಿ ನೆರವೇರುವುವು.

**ಸಂವತ್ಸರೋಽಗ್ನಿರ್ವೈಶ್ವಾನರೋಽಗ್ನಿರಗ್ನಿಷ್ಟೋಮಃ ।**

(ಐ. ಬ್ರಾ. ೩-೪೧)

ಇತ್ಯಾದಿ ವಾಕ್ಯಗಳಲ್ಲಿ ಅಗ್ನಿ, ಅಗ್ನಿಷ್ಟೋಮ ಮತ್ತು ಸಂವತ್ಸರ ಇವುಗಳಿಗೆ ತಾದಾತ್ಮ್ಯವನ್ನು ಹೇಳಿದೆ. ವರ್ಷಪರ್ಯಂತವೂ ಮಾಡಿದ ಆಹುತಿಗಳು ಜೀರ್ಣವಾಗಿ ಪುನಃ ವರ್ಷಾರಂಭದಲ್ಲಿ ಅವು ವೃದ್ಧಿಯಾಗುತ್ತವೆ. ಈ ವಿಷಯವನ್ನು **ಅತಿರಾತ್ರ ಉಕ್ಥ್ಯ, ಅಗ್ನಿಷ್ಟೋಮ** ಇವುಗಳನ್ನು ವಿವರಿಸುವಾಗ ವಿಶದವಾಗಿ ಹೇಳಲಾಗುತ್ತದೆ.

**ಅನ್ಯಸ್ಯಾಸಾ ಜಿಹ್ವಯಾ ಜೇನ್ಯಃ**—ಇಲ್ಲಿ ಎರಡುವಿಧವಾದ ಅರ್ಥವನ್ನು ಹೇಳಿದೆ. **ಅನ್ಯಸ್ಯ ಆಸಾ ಜಿಹ್ವಯಾ** ಎನ್ನುವುದಕ್ಕೆ ಮೊದಲು ಹವಿಸ್ಸನ್ನು ಆಸ್ವಾದನೆಮಾಡುವ ನಾಲಿಗೆಯಿಂದ ಎಂದೂ, ಎರಡನೆಯದಾಗಿ, ಸ್ತೋತೃವಿನ ಜಿಹ್ವಾರೂಪವಾದ ಬಾಯಿಂದ ಎಂದೂ ಅರ್ಥವಾಗುತ್ತದೆ, ಎರಡೂ ಅಗ್ನಿಯ ವೃದ್ಧಿಕಾರಕಗಳು.

॥ ವ್ಯಾಕರಣಪ್ರಕ್ರಿಯಾ ॥

**ದ್ವಿಜನ್ಮಾ**—ದ್ವೇ ಜನ್ಮನೀ ಯಸ್ಯ ಸಃ ದ್ವಿಜನ್ಮಾ. ವೃತ್ಯಯದಿಂದ ಉತ್ತರಪದ ಆದ್ಯುದಾತ್ತಸ್ವರ ಬರುತ್ತದೆ. ಪ್ರಥಮಾ ಏಕವಚನಾಂತರೂಪ. ಜನೀ ಪ್ರಾದುರ್ಭಾವೇ ಧಾತು. **ಅನ್ಯೇಭ್ಯೋಽಪಿ ದೃಶ್ಯಂತೇ** (ಪಾ.ಸೂ. ೩-೨-೭೫) ಎಂಬುದರಿಂದ ಮನಿನ್ ಪ್ರತ್ಯಯ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ತ್ರಿವೃತ್**—ವೃತು ವರ್ತನೇ. ಧಾತು ಕ್ವಿಪ್ ಪ್ರತ್ಯಯ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಋಜ್ಯತೇ**—ಋಜ ಗತಿಸ್ಥಾನಾರ್ಜನೋಪಾರ್ಜನೇಷು ಧಾತು. ಲಟ್ ಪ್ರಥಮಪುರುಷ ಏಕವಚನದಲ್ಲಿ ತ ಪ್ರತ್ಯಯ. **ಟಿತಆತ್ಮನೇ**—ಎಂಬುದರಿಂದ ಟಿಗೆ ಏತ್ವ. **ವ್ಯತ್ಯಯೋ ಬಹುಲಮ್** ಎಂಬುದರಿಂದ ಶ್ಯನ್ ವಿಕರಣ ಬರುತ್ತದೆ. ಅದಕ್ಕೆ ಙಿತ್ವಾತಿದೇಶವಿರುವುದರಿಂದ ಗುಣ ಬರುವುದಿಲ್ಲ. ಅಥವಾ ಭೃಜ್ಯತೇ ಎಂದು ಛೇದ. ಆಗ ಋಜೋ ಪಾಕೇ ಧಾತು. ಪಕ್ವಂ ಕರೋತಿ ಇತ್ಯರ್ಥಃ ಹಿಂದಿನಂತೇ ಪ್ರಕ್ರಿಯಾ. ಅತಿಙಂತದ ಪದದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ವವೃಧೇ**—ವೃಧು ವೃದ್ಧೌ ಧಾತು. **ಛಂದಸಿ ಲುಙ್ ಲಙ್ ಲಿಟಃ**— ಎಂಬುದರಿಂದ ವರ್ತಮಾನಾರ್ಥದಲ್ಲಿ ಲಿಟ್. ಪ್ರಥಮಪುರುಷಏಕವಚನಕ್ಕೆ ಏಶಾದೇಶ. ಛಾಂದಸವಾಗಿ ಅಭ್ಯಾಸಕ್ಕೆ ಸಂಹಿತಾದಲ್ಲಿ ದೀರ್ಘ. ತಿಙಂತನಿಘಾತಸ್ವರ ಬರುತ್ತದೆ.

**ಜಗ್ಧಮ್**—ಅದ ಭಕ್ಷಣೇ ಧಾತು. **ನಿಷ್ಠಾ**—(ಪಾ. ಸೂ. ೩-೨-೧೦೨) ಎಂಬುದರಿಂದ ಕ್ತಪ್ರತ್ಯಯ. **ಅದೋ ಜಗ್ಧಿರ್ಲ್ಯಪ್ತಿಕಿತಿ**—(ಪಾ. ಸೂ. ೨-೪-೩೬) ಎಂಬುದರಿಂದ ಧಾತುವಿಗೆ ಜಗ್ಧಾದೇಶ. ಧತ್ವ. ಲೋಪ ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ದ್ವಿತೀಯಾಏಕವಚನಾಂತರೂಪ.

**ಈಮ್**—ಇದರ ಮಕಾರಕ್ಕೆ ಛಾಂದಸವಾಗಿ ಸಂಹಿತಾದಲ್ಲಿ ಲೋಪ ಬರುತ್ತದೆ.

**ಆಸಾ**—ಆಸ್ಯ ಶಬ್ದ. ತೃತೀಯಾವಿಭಕ್ತಿಪರವಾದಾಗ **ಪದ್ದನ್ನೋಮಾಸ್**—(ಪಾ. ಸೂ. ೬-೧-೬೩) ಎಂಬುದರಿಂದ ಇದಕ್ಕೆ ಆಸನ್ ಆದೇಶ. **ಸುಪಾಂಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ವಿಭಕ್ತಿಗೆ ಡಾದೇಶ. ಡಿತ್ತಾದುದರಿಂದ ಟಿಗೆ (ಅನ್) ಲೋಪ. ಅನುದಾತ್ತನಿಮಿತ್ತವಾಗಿ ಉದಾತ್ತಲೋಪ ಬಂದುದರಿಂದ **ಅನುದಾತ್ತಸ್ಯಚಯತ್ರೋದಾತ್ತಲೋಪಃ**—(ಪಾ. ಸೂ. ೬-೧-೧೬೧) ಎಂಬುದರಿಂದ ಅನುದಾತ್ತವಾದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಜೇನ್ಯಃ**—ಜಿ ಜಯೇ. ಧಾತು. **ಕೃತ್ಯಲ್ಯುಟೋ ಬಹುಲಮ್**—(ಪಾ. ಸೂ, ೩-೩-೧೧೩) ಎಂಬಲ್ಲಿ ಬಹುಲಗ್ರಹಣಸಾಮರ್ಥ್ಯದಿಂದ ಕರ್ತರಿಯಲ್ಲಿ **ಅಚೋಯತ್**– (ಪಾ. ಸೂ. ೩-೧-೯೭) ಎಂಬುದರಿಂದ ಯತ್ ಪ್ರತ್ಯಯ ಅದಕ್ಕೆ ನುಡಾಗಮ. **ಯತೋಽನಾವಃ**—(ಪಾ. ಸೂ. ೬-೧-೨೧೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ವೃಷಾ**—ವೃಷು ಸೇಚನೇ ಧಾತು. **ಕನಿನ್‌ಯುವೃಷಿ**—(ಉ. ಸೂ. ೧-೧೫೪) ಎಂಬುದರಿಂದ ಕನಿನ್ ಪ್ರತ್ಯಯ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಮೃಷ್ಟ**—ಮೃಜೂಷ್ ಶುದ್ಧೌ ಧಾತು. **ಛಂದಸಿ ಲುಙ್ ಲಙ್ ಲಿಟಃ**—ಎಂಬುದರಿಂದ ವರ್ತಮಾನಾರ್ಥದಲ್ಲಿ ಲಙ್. **ವ್ಯತ್ಯಯೋಬಹುಲಮ್**—(ಪಾ. ಸೂ. ೩-೧-೮೫) ಎಂಬುದರಿಂದ ಆತ್ಮನೇಪದಿಯಾಗುತ್ತದೆ. ಪ್ರಥಮ

ಕೃಪಾಪೂಃಕಾಚಿಪದಲ್ಲಿ ತಪ್ರತ್ಯಯ. ಅದಿಪ್ರಭೃತಿಭ್ಯಃ ಶಪಃ—ಎಂಬುದರಿಂದ ಶಪಿಗೆ ಲುಕ್. ವ್ರಶ್ಚಭ್ರಸ್ಜ—ಎಂಬುದರಿಂದ ಜಕಾರಕ್ಕೆ ಷತ್ವ. ಅದನ್ನು ನಿಮಿತ್ತೀಕರಿಸಿ ಪ್ರತ್ಯಯಕ್ಕೆ ಷ್ಟುತ್ವ. ಅತಿಙಂತದ ಪರದಲ್ಲಿರುವುದರಿಂದ ನಿಘಾತ ಸ್ವರ ಬರುತ್ತದೆ. ॥ ೨ ॥

———:o:———

ಸಂಹಿತಾಪಾಠಃ

ಕೃಷ್ಣಪ್ರುತೌ ವೇವಿಜೇ ಅಸ್ಯ ಸಕ್ಷಿತಾ ಉಭಾ ತರೇತೇ ಅಭಿ ಮಾತರಾ
ಶಿಶುಂ ।
ಪ್ರಾಚಾಜಿಹ್ವಂ ಧ್ವಸಯಂತಂ ತೃಷುಚ್ಯುತಮಾ ಸಾಚ್ಯಂ ಕುಪಯಂ
ವರ್ಧನಂ ಪಿತುಃ ॥ ೩ ॥

। ಪದಪಾಠಃ ।

ಕೃಷ್ಣಽಪ್ರುತೌ । ವೇವಿಜೇ ಇತಿ । ಅಸ್ಯ । ಸಽಕ್ಷಿತಾ । ಉಭಾ । ತರೇತೇ ಇತಿ । ಅಭಿ । ಮಾತರಾ । ಶಿಶುಂ ।
ಪ್ರಾಚಾಽಜಿಹ್ವಂ । ಧ್ವಸಯಂತಂ । ತೃಷುಽಚ್ಯುತಂ । ಆ । ಸಾಚ್ಯಂ । ಕುಪಯಂ । ವರ್ಧನಂ । ಪಿತುಃ ॥೩॥

॥ ಸಾಯಣಭಾಷ್ಯಂ ॥

ಅಸ್ಯಾಗ್ನೇರ್ಮಾತರಾ ಮಾತೃಸ್ಥಾನೀಯೇ ಉತ್ಪಾದಯಿತ್ರ್ಯಾವುಭೇ ಅರಣ್ಯಾಖ್ಯೇ ಮಾತರೌ ವೇವಿಜೇ । ಚಲತಃ । ಓವಿಜೀ ಭಯಚಲನಯೋಃ । ಅಸ್ಮಾದ್ಯಙ್‌ಲುಗಂತಾದ್ವ್ಯತ್ಯಯೇನಾತ್ಮನೇಪದಮೇಕವಚನಂ ಚ । ಲೋಪಸ್ತ ಆತ್ಮನೇಪದೇಷ್ವಿತಿ ತಲೋಪಃ । ಚಾದಿಲೋಪೇ ವಿಭಾಷೇತಿ ನಿಘಾತಾಭಾವಃ ॥ ಮಥನೋಪಕ್ರಮೇ ಕೃಷ್ಣಪ್ರುತಾವಗ್ನಿಸಂಪರ್ಕಾತ್ಕೃಷ್ಣವರ್ಣತಾಂ ಪ್ರಾಪ್ನುವತ್ಯೌ ಪ್ರಾಪಯಂತ್ಯೌ ವಾ ಭೂಮಿಂ ತಥಾ ಸಕ್ಷಿತೌ ಸಮಾನಕಾರ್ಯಮಗ್ನ್ಯುತ್ಪಾದನಂ ಗಚ್ಛಂತ್ಯೌ ಏವಂಭೂತೇ ಮಾತರೌ ಶಿಶುಂ ಶಿಶುವದುತ್ಪತ್ತಿಸಮಯೇಽತ್ಯಲ್ಪಮಗ್ನಿಮಭಿ ತರೇತೇ । ಅಭಿಮುಖ್ಯೇನ ಪ್ರಾಪ್ನುತಃ । ಕೀದೃಶಂ ಶಿಶುಂ । ಪ್ರಾಚಾಜಿಹ್ವಂ ಪ್ರಾಗ್ದೇಶಸ್ಥಿತಜಿಹ್ವಾಸ್ಥಾನೀಯಜ್ವಾಲಂ ಧ್ವಸಯಂತಂ ತಮೋ ನಾಶಯಂತಂ ತೃಷುಚ್ಯುತಮರಣೀಭ್ಯಾಂ ಕ್ಷಿಪ್ರಂ ನಿರ್ಗಚ್ಛಂತಮುಕ್ಲೇಶೇನ ಯೋನೇಃ ಸಕಾಶಾಚ್ಛೀಘ್ರಮುತ್ಪದ್ಯಮಾನಂ । ಆ ಈಷತ್ ಸಾಚ್ಯಂ ಸಮವೇತವ್ಯಂ ಮೃದುಕಾಷ್ಠಚೂರ್ಣಾದಿನಾ ಕುಪಯಂ ಗೋಪನೀಯಂ ಪಿತುಃ ಪಾಲಕಸ್ಯ ಯಜಮಾನಸ್ಯ ವರ್ಧನಂ ಪ್ರವರ್ಧನಂ ಪ್ರವರ್ಧಯಿತಾರಂ । ಉಕ್ತಪ್ರಕಾರೈರ್ಲೌಕಿಕಶಿಶುಸಾಧಾರಣೈರುಪೇತಂ ಶಿಶುಮಗ್ನಿಂ ಮಾತರಾವುತ್ಪಾದಯತ ಇತ್ಯರ್ಥಃ ॥

ಪ್ರತಿಪದಾರ್ಥ

**ಅಸ್ಯ**—ಈ ಅಗ್ನಿಯ | **ಮಾತರಾ**—ಜನನಿಯರಾದ (ಉತ್ಪತ್ತಿಗೆ ಕಾರಣರಾದ) | **ಉಭಾ**—ಎರಡು ಅರಣಿಗಳೂ | **ವೇವಿಜೇ**—ಚಲಿಸುತ್ತಾರೆ. | **ಕೃಷ್ಣಪ್ರುತೌ**—(ಅಗ್ನಿ ಸಂಪರ್ಕದಿಂದ) ಕಪ್ಪುಬಣ್ಣವನ್ನು ಹೊಂದುವವರೂ ಅಥವಾ ನೆಲವನ್ನು ಕಪ್ಪಗೆ ಮಾಡುವವರೂ | **ಸಕ್ಷಿತೌ**—(ಅಗ್ನ್ಯುತ್ಪಾದನಕ್ಕೆ) ಒಡಗೂಡಿರುವವರೂ ಆದ ಈ ಮಾತೃರೂಪರಾದ ಅರಣಿಗಳು | **ಪ್ರಾಚಾಜಿಹ್ವಂ**—ಪೂರ್ವದಿಗ್ಭಾಗದಲ್ಲಿ ನಾಲಿಗೆಯಂತಿರುವ ಜ್ವಾಲೆಯುಳ್ಳವನೂ | **ಧ್ವಸಯಂತಂ**—(ತಮಸ್ಸನ್ನು) ನಾಶಮಾಡುವವನೂ | **ತೃಷುಚ್ಯುತಂ**—(ಅರಣಿಗಳಿಂದ) ಒಡನೇ ಹೊರಕ್ಕೆ ಕಾಣಿಸಿಕೊಳ್ಳುವವನೂ, | **ಆ ಸಾಚ್ಯಂ**—(ಕಾಷ್ಠ ಚೂರ್ಣಗಳೊಂದಿಗೆ) ವೃದ್ಧಿಯಾಗುವವನೂ | **ಕುಪಯಂ**—ರಕ್ಷಣೀಯನೂ | **ಪಿತುಃ**—ತಂದೆಯಂತಿರುವ ಯಜಮಾನನ | **ವರ್ಧನಂ**—ಅಭಿವೃದ್ಧಿಗೆ ಕಾರಣನೂ ಆದ | **ಶಿಶುಂ**—ಶಿಶುರೂಪನಾದ ಅಗ್ನಿಯನ್ನು | **ಅಭಿ ತರೇತೇ**—ಪಡೆಯುತ್ತಾರೆ.

॥ ಭಾವಾರ್ಥ ॥

ಅಗ್ನಿಯ ಉತ್ಪತ್ತಿಗೆ ಕಾರಣರಾದ ಅರಣಿಗಳೆರಡೂ ಚಲಿಸುತ್ತವೆ. ಅಗ್ನಿಸಂಪರ್ಕದಿಂದ ಕಪ್ಪಗಾಗುವುವೂ, ಅಗ್ನ್ಯುತ್ಪಾದನಕ್ಕೆ ಒಂದಿಗಿರುವುವೂ, ಆದ ಅರಣಿಗಳು ಪೂರ್ವದಿಗ್ಭಾಗದಲ್ಲಿ ನಾಲಿಗೆಯಂತಿರುವ ಜ್ವಾಲೆಯುಳ್ಳವನೂ, ತಮಸ್ಸನ್ನು ನಾಶಮಾಡುವವನೂ, ಅರಣಿ ಮಥನವಾದೊಡನೇ ಹೊರಕ್ಕೆ ಕಾಣಿಸಿಕೊಳ್ಳುವವನೂ, ಕಾಷ್ಠಚೂರ್ಣಗಳೊಂದಿಗೆ ವೃದ್ಧಿಯಾಗುವವನೂ, ರಕ್ಷಣೀಯನೂ, ತಂದೆಯಂತಿರುವ ಯಜಮಾನನ ಅಭಿವೃದ್ಧಿಗೆ ಕಾರಣನೂ ಆದ ಶಿಶುರೂಪನಾದ ಅಗ್ನಿಯನ್ನು ಸೃಷ್ಟಿಸುತ್ತವೆ.

English Translation

Both his associated mothers, blackened ( by combustion ), are in movement and give birth to an infant, whose tongue (of flame glows) in the east : (who) dissipates darkness ; (who) rapidly issues forth ; (who) is readily developed ; (who) is (ever) to be cherished, and is the augmenter ( of the prosperity ) of his parent, ( the institutor of the rite ).

॥ ವಿಶೇಷವಿಷಯಗಳು ॥

**ಮಾತರಾ**—ಅಗ್ನ್ಯುತ್ಪತ್ತಿಗೆ ಕಾರಣವಾದ ಅರಣಿಗಳೆರಡೂ ಅಗ್ನಿಯ ಮಾತೃಗಳೆಂದು ಪ್ರಸಿದ್ಧವಾಗಿವೆ.

**ಅಸ್ತೀದಮಧಿಮಂಥನಮಸ್ತಿ ಪ್ರಜನನಂ ಕೃತಂ |**

(ಋ. ಸಂ. ೩-೨೯-೧)

**ಅರಣ್ಯೋರ್ನಿಹಿತೋ ಜಾತವೇದಾ ಗರ್ಭ ಇವ ಸುಧಿತೋ ಗರ್ಭಿಣೀಷು ||**

(ಋ. ಸಂ. ೩-೨೯-೨)

ಎಂಬ ಋಕ್ಕುಗಳಲ್ಲಿ ಗರ್ಭಿಣೀಸ್ತ್ರೀಯರ ಗರ್ಭದಲ್ಲಿ ಶಿಶುವು ಅಂತರ್ಹಿತವಾಗಿರುವಂತೆ ಅರಣಿಗಳ ನಡುವೆ ಅಗ್ನಿಯು ಅಂತರ್ಹಿತನಾಗಿ ಮಂಥನದ ಕಾಲದಲ್ಲಿ ಉತ್ಪನ್ನನಾಗುತ್ತಾನೆ. ಆದುದರಿಂದ ಅರಣಿಗಳು ಇವನ ಜನನಿಯರು. **ದ್ವಿಜನ್ಮಾ** ಎನ್ನುವಂತೆಯೇ **ದ್ವಿಮಾತಾ** ಎಂದು (ಋ ಸಂ ೧-೩೧-೨) ಅಗ್ನಿಗೆ ವಿಶೇಷಣವಿದೆ.

**ತೃಷುಚ್ಯುತಂ—ತೃಷ್ಟಿತಿ ಕ್ಷಿಪ್ರನಾಮ ತರತೇರ್ವಾ, ತ್ವರತೇರ್ವಾ |** (ನಿ. ೬-೧೨) ದಾಟಿಹೋಗು (ಮುಂದುವರಿ) ಎಂಬರ್ಥವನ್ನು ಕೊಡುವ ತೃ ಧಾತುವಿನಿಂದಾಗಲಿ ಅಥವಾ ಶೀಘ್ರವಾಗಿ ಚಲಿಸು ಎಂಬರ್ಥವನ್ನು

ಕೊಡುವ ತ್ವರ್ ಧಾತುವಿನಿಂದಾಗಿದೆ ತೃಷು ಎಂಬ ಪದವು ನಿಷ್ಪನ್ನವಾಗಿ ಅತ್ಯಂತ ವೇಗದಿಂದ ಎಂಬರ್ಥವನ್ನು ಕೊಡುತ್ತದೆ. ತೃಷುಚ್ಯುತಂ ಎಂದರೆ ಅರಣಿಮಂಥನವಾದೊಡನೆಯೇ ಶೀಘ್ರವಾಗಿ ಆವಿರ್ಭಾವವಾಗತಕ್ಕ ಎಂದರ್ಥ.

ಕೋಪಯಂ—ಈ ಪದಕ್ಕೆ Monier williams ಎಂಬ ಪಂಡಿತನು ತನ್ನ Sanskrit-English Dictionary ಎಂಬ ಕೋಶದಲ್ಲಿ ಇದೇ ಋಕ್ಕನ್ನು ಆಧಾರವಾಗಿ ತೋರಿಸಿ heaving, swelling with emotion ಉಕ್ಕೇರು, ಮೇಲ್ಮುಖವಾಗಿ ಉಬ್ಬುವುದು ಎಂಬರ್ಥವನ್ನು ಮೊದಲು ಹೇಳಿ ಅನಂತರ ಸಾಯಣರು ಹೇಳಿರುವ ಗೋಪನೀಯಂ ರಕ್ಷಣೀಯವಾದುದು ಎಂಬರ್ಥವನ್ನೂ ನಿರ್ದೇಶಿಸಿದ್ದಾನೆ.

ಪಿತುಃ ವರ್ಧನಂ—ಯಜ್ಞಕರ್ಮದಲ್ಲಿ ತನ್ನ ಉತ್ಪತ್ತಿಗೆ ಕಾರಣನಾದವನೂ, ಯಜ್ಞಕರ್ತನೂ ಆದ ಯಜಮಾನನ ಅಭಿವೃದ್ಧಿಗೆ ಕಾರಣನು ಎಂದರ್ಥ. ಅತ್ಯಂತ ಪ್ರಾಚೀನಕಾಲದಿಂದಲೂ ಅಗ್ನಿಯನ್ನು ಯಜ್ಞಭೂಮಿಯಲ್ಲಿ ಪ್ರಜ್ವಲಿಸುವಂತೆ ಮಾಡಿದ ದೇವಮಾನವಾದಿಗಳೆಲ್ಲರೂ ಅಭಿವೃದ್ಧಿಯನ್ನು ಪಡೆದರು ಮತ್ತು ಪಡೆಯುತ್ತಾರೆ ಎಂಬ ವರ್ಣನೆಯು

.... ಸ ಇತ್ಯಬ್ರವೀದ್ಯೋ ಮದ್ದೇವತ್ಯಮಗ್ನಿಮಾದಧಾತಾ ಇತಿ ತಂ ಪೂಷಾಧತ್ತ ತೇನ ಪೂಷಾ-
ರ್ಧ್ನೋತ್ತಸ್ಮಾತ್ಪೌಷ್ಣಾಃ ಪಶವ ಉಚ್ಯಂತೇ ತಂ ತ್ವಷ್ಟಾಧತ್ತ ತೇನ ತ್ವಷ್ಟಾರ್ಧ್ನೋತ್ತಸ್ಮಾ-
ತ್ತ್ವಾಷ್ಟ್ರಾಃ ಪಶವ ಉಚ್ಯಂತೇ ತಂ ಮನುರಾಧತ್ತ ತೇನ ಮನುರಾರ್ಧ್ನೋತ್ತಸ್ಮಾನ್ಮಾನವ್ಯಃ
ಪ್ರಜಾ ಉಚ್ಯಂತೇ ತಂ ಧಾತಾಧತ್ತ ತೇನ ಧಾತಾರ್ಧ್ನೋತ್ ।

(ತೈ. ಸಂ. ೧-೫-೧)

ನನ್ನ ದೇವತ್ವದಲ್ಲಿ ಯಾರು ಅಗ್ನಿಯನ್ನು ಸ್ಥಾಪಿಸುವರೋ ಅವರಿಗೆ ಸಕಲ ಅಭಿವೃದ್ಧಿಗಳೂ ಉಂಟಾಗುವುವು ಎಂದು ಅಗ್ನಿಯು ವರವನ್ನು ಕೊಟ್ಟನು. ಅನಂತರ ಪೂಷ, ತ್ವಷ್ಟೃ, ಮನು, ಧಾತೃ ಇವರೆಲ್ಲರೂ ಅಗ್ನಿಯನ್ನು ಸ್ಥಾಪಿಸಿದರು. ಅವರೆಲ್ಲರೂ ಅಭಿವೃದ್ಧಿಯನ್ನು ಹೊಂದಿದರು ಎಂಬುದಾಗಿ ತೈತ್ತರೀಯಸಂಹಿತಾ ವಾಕ್ಯಗಳಲ್ಲಿ ಹೇಳಿರುವಂತೆ ಪಿತುಃ ವರ್ಧನಂ ತನ್ನ ಉತ್ಪತ್ತಿಗೆ ಕಾರಣನಾದ ಯಜಮಾನನ ವೃದ್ಧಿಗೆ ಕಾರಣನಾದ ಅಗ್ನಿಯನ್ನು ಎಂದರ್ಥ. ಈ ಸ್ತುತಿಯು

ಸಮಿಧಾ ಯಸ್ತ ಆಹುತಿಂ ನಿಶಿತಿಂ ಮರ್ತ್ಯೋ ನಶತ್ ।
ವಯಾವಂತಂ ಸ ಪುಷ್ಯತಿ ಕ್ಷಯಮಗ್ನೇ ಶತಾಯುಷಂ ॥

(ಋ. ಸಂ. ೬-೨-೫)

ಇತ್ಯಾದಿ ಋಕ್ಕುಗಳಲ್ಲಿ ವಿವರಿಸಿರುವ ಅಂಶವನ್ನು ಹೇಳುತ್ತದೆ.

ವ್ಯಾಕರಣಪ್ರಕ್ರಿಯಾ

ಕೃಷ್ಣಪ್ರುತೌ—ಪ್ರುಙ ಗತೌ. ಧಾತು. ಕೃಷ್ಣಂ ಕೃಷ್ಣವರ್ಣತಾಂ ಪ್ರಾಪ್ನುವತ್ಯೌ ಕೃಷ್ಣಪ್ರುತೌ. ಕ್ವಿಪ್ ಪ್ರತ್ಯಯ. ಹ್ರಸ್ವಸ್ಯಪಿತಿ ಕೃತಿ ತುಕ್—(ಪಾ. ಸೂ. ೬-೧-೭೧) ಎಂಬುದರಿಂದ ಧಾತುವಿಗೆ ತುಕಾಗಮ. ಸಮಾಸದಲ್ಲಿ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. ದ್ವಿವಚನಾಂತರೂಪ.

**ವೇವಿಜೇ**—ಓವಿಜೀ ಭಯಚಲನಯೋಃ ಧಾತು. ಇದಕ್ಕೆ ಯಙ್ ಬಂದಾಗ **ಯಙೋಽಚಿಚ**—(ಪಾ. ಸೂ. ೨-೪-೭೪) ಎಂಬುದರಿಂದ ಲುಕ್. **ವ್ಯತ್ಯಯೋ ಬಹುಲಮ್**—ಎಂಬುದರಿಂದ ಆತ್ಮನೇಪದವೂ ಏಕವಚನ ಪ್ರತ್ಯಯವೂ ಬರುತ್ತದೆ. ಪ್ರಥಮಪುರುಷಏಕವಚನದಲ್ಲಿ ತಪ್ರತ್ಯಯ. ಟಿಗೆ ಏತ್ವ. ಧಾತುವಿಗೆ ಯಙ್‌ನಿಮಿತ್ತವಾಗಿ ದ್ವಿತ್ವಬಂದಾಗ **ಗುಣೋಯಙ್‌ಲುಕೋಃ**—(ಪಾ. ಸೂ. ೭-೪-೮೨) ಎಂಬುದರಿಂದ ಅಭ್ಯಾಸಕ್ಕೆ ಗುಣ. **ಲೋಪಸ್ತ ಆತ್ಮನೇಪದೇಷು**—(ಪಾ. ಸೂ. ೭-೧-೪೧) ಎಂಬುದರಿಂದ ಪ್ರತ್ಯಯದ ತಕಾರಕ್ಕೆ ಲೋಪ. ಇದಕ್ಕೆ ಙಿತ್ವಾತಿದೇಶ ವಿರುವುದರಿಂದ ಧಾತುವಿನ ಲಘೂಪಧೆಗೆ ಗುಣ ಬರುವುದಿಲ್ಲ. **ಚಾದಿಲೋಪೇ ವಿಭಾಷಾ**—(ಪಾ. ಸೂ. ೮-೧-೬೩) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುವುದರಿಂದ ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಸಕ್ಷಿತಾ**–ಸಮಾನಂ ಕ್ಷಯಂತೌ ಸಕ್ಷಿತೌ. ಕ್ಷಿ ನಿವಾಸಗತ್ಯೋಃ ಧಾತು. ಕ್ವಿಪ್ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಹ್ರಸ್ವಕ್ಕೆ ತುಕಾಗಮ. ಸಮಾನಕ್ಕೆ ಸಭಾವ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಉಭಾ, ಮಾತರಾ**—ಇವುಗಳಿಗೆ ದ್ವಿವಚನ ಔಕಾರವಿಭಕ್ತಿ ಪರವಾದಾಗ **ಸುಪಾಂ ಸುಲುಕ್**—ಎಂಬುದರಿಂದ ಅದಕ್ಕೆ ಆಕಾರಾದೇಶ ಬರುತ್ತದೆ.

**ತರೇತೇ**—ತೄ ಪ್ಲವನತರಣಯೋಃ ಧಾತು. ಲಟ್ ಪ್ರಥಮಪುರುಷದ್ವಿವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಪ್ರಾಚಾಜಿಹ್ವಮ್**—ಪ್ರಾಚೀ ಜಿಹ್ವಾ ಯಸ್ಯ ಸಃ ಪ್ರಾಚಾಜಿಹ್ವಃ ತಮ್ ಪ್ರಾಚಾಜಿಹ್ವಮ್. ಛಾಂದಸವಾಗಿ ಪೂರ್ವಪದಕ್ಕೆ ಆತ್ವ. **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್** ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಧ್ವಸಯಂತವಂ**—ಧ್ವಂಸು ಅವಸ್ರಂಸನೇ ಧಾತು. **ಹೇತುಮತಿ ಚ**—(ಪಾ. ಸೂ. ೩-೧-೨೬) ಎಂಬುದರಿಂದ ಣಿಚ್. **ಛಂದಸ್ಯುಭಯಥಾ**—(ಪಾ. ಸೂ. ೩-೪-೧೧೭) ಎಂಬುದರಿಂದ ಇದಕ್ಕೆ ಸಾರ್ವಧಾತುಕಸಂಜ್ಞೆ ಇರುವುದರಿಂದ ಙಿತ್ವ ಬರುತ್ತದೆ. ಆದುದರಿಂದ ಧಾತುವಿನ ಉಪಧಾನಕಾರಕ್ಕೆ ಲೋಪ. ಣಿಜಂತದ ಮೇಲೆ ಲಡರ್ಥದಲ್ಲಿ ಶತೃಪ್ರತ್ಯಯ. ಶಪ್‌ವಿಕರಣ. ಅದನ್ನು ನಿಮಿತ್ತೀಕರಿಸಿ ಣಿಚಿಗೆ ಗುಣ. ಅಯಾದೇಶ. ದ್ವಿತೀಯಾ ಏಕವಚನಾಂತ ರೂಪ. ಲಸಾರ್ವಧಾತುಕ ಅನುದಾತ್ತವಾಗುವುದರಿಂದ ಣಿಚ್‌ಸ್ವರ ಉಳಿಯುತ್ತದೆ.

**ತೃಷುಚ್ಯುತಮ್**—ತೃಷು ಚ್ಯೋತತಿ ಇತಿ ತೃಷುಚ್ಯುತ್. ಚ್ಯುತಿರ್ ಕ್ಷರಣೇ ಧಾತು. **ಕ್ವಿಪ್ ಚ**—ಎಂಬುದರಿಂದ ಕ್ವಿಪ್ ಪ್ರತ್ಯಯ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ದ್ವಿತೀಯಾ ಏಕವಚನಾಂತರೂಪ.

**ಸಾಚ್ಯಮ್**—ಷಚ ಸಮವಾಯೇ. ಧಾತು. **ಧಾತ್ವಾದೇಃಷಃಸಃ**—ಎಂಬುದರಿಂದ ಸತ್ವ. **ಋಹಲೋರ್ಣ್ಯತ್**—(ಪಾ. ಸೂ. ೩-೧-೧೨೪) ಎಂಬುದರಿಂದ ಣ್ಯತ್ ಪ್ರತ್ಯಯ. **ಅತಉಪಧಾಯಾಃ**—(ಪಾ. ಸೂ. ೭-೧-೧೧೬) ಎಂಬುದರಿಂದ ಧಾತುವಿನ ಉಪಧೆಗೆ ವೃದ್ಧಿ.

**ವರ್ಧನಮ್**—ವೃಧು ವೃದ್ಧೌ ಧಾತು. ಅಂತರ್ಭಾವಿತಣ್ಯರ್ಥಕಧಾತು. ಇದಕ್ಕೆ ಕರ್ತರಿಯಲ್ಲಿ ಲ್ಯುಟ್ ಪ್ರತ್ಯಯ. **ಯುವೋರನಾಕೌ**—(ಪಾ. ಸೂ. ೭-೨-೧) ಎಂಬುದರಿಂದ ಅನಾದೇಶ. ಅದನ್ನು ನಿಮಿತ್ತೀಕರಿಸಿ

ಧಾತುವಿನ ಲಘೂಪಧೆಗೆ ಗುಣ. ಕಾರವಾಗಿ ಬರುತ್ತದೆ. ಲಿತಿ (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ. ॥ ೩ ॥



। ಸಂಹಿತಾಪಾಠಃ ।

ಮುಮುಕ್ಷ್ವೋ೩ ಮನವೇ ಮಾನವಸ್ಯತೇ ರಘುದ್ರುವಃ ಕೃಷ್ಣಸೀತಾಸ ಊ
ಜುವಃ ।
ಅಸಮನಾ ಅಜಿರಾಸೋ ರಘುಷ್ಯದೋ ವಾತಜೂತಾ ಉಪ ಯುಜ್ಯಂತ
ಆಶವಃ ॥ ೪ ॥

ಪದಪಾಠಃ

ಮುಮುಕ್ಷ್ವಃ । ಮನವೇ । ಮಾನವಸ್ಯತೇ । ರಘುಽದ್ರುವಃ । ಕೃಷ್ಣಽಸೀತಾಸಃ । ಊಂ ಇತಿ । ಜುವಃ ।
ಅಸಮನಾಃ । ಅಜಿರಾಸಃ । ರಘುಽಸ್ಯದಃ । ವಾತಽಜೂತಾಃ । ಉಪ । ಯುಜ್ಯಂತೇ । ಆಶವಃ ॥ ೪ ॥

ಸಾಯಣಭಾಷ್ಯಂ

ಮನವೇ ಮನನವತೇ ಮಾನವಸ್ಯತೇ ಮಾನವಾನೃತ್ವಿಜಃ ಕರ್ಮಾರ್ಥಮಿಚ್ಛತೇ ಯಜಮಾನಾಯ ತದರ್ಥಮಧ್ವರ್ಯ್ವಾದಿಭಿರಗ್ನೇರ್ಜ್ವಾಲಾ ಉಪ ಯುಜ್ಯಂತೇ ಯಜ್ಞೇಷು । ಸೂಕ್ತಸ್ಯಾಗ್ನೇಯತ್ವಾದ್ಬಹುತ್ವಾಚ್ಚ ಜ್ವಾಲಾ ಇತಿ ಗಮ್ಯತೇ । ಕೀದೃಶ್ಯಸ್ತಾಃ । ಮುಮುಕ್ಷ್ವೋ ಮುಮುಕ್ಷವ ಆಹುತಿದ್ವಾರಾ ಯಜಮಾನಂ ಮೋಕ್ತುಮಿಚ್ಛಂತ್ಯೋ ಬ್ರಹ್ಮಲೋಕಂ ಪ್ರಾಪಯಂತ್ಯಃ ॥ ಜಸಾದಿಷು ಚ್ಛಂದಸಿ ವಾವಚನಮಿತಿ ಗುಣಾಭಾವಃ ॥ ಜ್ವಾಲಾನಾಮಾಹುತಿದ್ವಾರಾ ಬ್ರಹ್ಮಲೋಕಪ್ರಾಪ್ತಿಸಾಧನತ್ವಂ ಕಾಲೀ ಕರಾಲೀತ್ಯುಪಕ್ರಮ್ಯ ಶ್ರೂಯತೇ । ಏತೇಷು ಯಶ್ಚರತೇ ಭ್ರಾಜಮಾನೇಷು ಯಥಾಕಾಲಂ ಚಾಹುತಯೋ ಹ್ಯಾದದಾಯನ್ ತಂ ನಯಂತ್ಯೇತಾಃ ಸೂರ್ಯಸ್ಯ ರಶ್ಮಯೋ ಯತ್ರ ದೇವಾನಾಂ ಪತಿರೇಕೋಽಧಿವಾಸಃ । ಮುಂ. ಉ ೧-೨-೪, ೫। ಇತಿ । ರಘುದ್ರುವಃ ಕ್ಷಿಪ್ರಂ ಗಚ್ಛಂತ್ಯಃ ಕೃಷ್ಣಸೀತಾಸಃ ಕೃಷ್ಣಮಾರ್ಗಾಃ । ಉಕಾರಃ ಸಮುಚ್ಚಯಾರ್ಥಃ । ಜುವೋ ಜವನಶೀಲಾಃ ಶೀಘ್ರಕಾರಿಣ್ಯಃ ಸ್ವವ್ಯಾಪಾರೇಷು ಅಸಮನಾ ಅಸಮಾನಮನಸ್ಕಾಃ। ಕಾಶ್ಚನ ಪ್ರಾಙ್ಮುಖ್ಯೋ ಗಚ್ಛಂತಿ ಕಾಶ್ಚನ ಪ್ರತ್ಯಙ್ಮುಖ್ಯ ಇತಿ ವಿವಿಧಮನಸ್ಕಾಃ ॥ ವ್ಯತ್ಯಯೇನೈಕವಚನಂ ॥ ಯದ್ವಾ । ಅಸಮನಾ ಭಿನ್ನವರ್ಣಾಃ । ಭಿನ್ನವರ್ಣತ್ವಂ ಚ ತತ್ರೈವ ಶ್ರೂಯತೇ । ಕಾಲೀ ಕರಾಲೀ ಚ ಮನೋಜವಾ ಚ ಸುಲೋಹಿತಾ ಯಾ ಚ ಸುಧೂಮ್ರವರ್ಣಾ । ಸ್ಫುಲಿಂಗಿನೀ ವಿಶ್ವರುಚೀ ಚ ದೇವೀ ಲೇಲಾಯಮಾನಾ ಇತಿ ಸಪ್ತ ಜಿಹ್ವಾ ಇತಿ । ಅಜಿರಾಸೋ ಗಮನಶೀಲಾಃ ರಘುಸ್ಯದಃ ಶೀಘ್ರಂ

ಸ್ಯಂದಮಾನಾಃ ವಾತಜೂತಾ ವಾತಪ್ರೇರಿತಾಃ। ತೃತೀಯಾ ಕರ್ಮಣೀತಿ ಪೂರ್ವಪದಪ್ರಕೃತಿಸ್ವರತ್ವಂ ॥ ಆಶವೋ ವ್ಯಾಪನಶೀಲಾಃ ॥

ಪ್ರತಿಪದಾರ್ಥ

**ಮುಮುಕ್ಷ್ವಃ**—(ಆಹುತಿಯ ಮೂಲಕ ಯಜಮಾನನಿಗೆ) ಬ್ರಹ್ಮಲೋಕವನ್ನು ಸಂಪಾದಿಸಿಕೊಟ್ಟು ಮುಕ್ತನನ್ನಾಗಿಮಾಡುವುವೂ, । **ರಘುದ್ರುವಃ**—ಶೀಘ್ರಗಾಮಿಗಳೂ । **ಕೃಷ್ಣಸೀತಾಸಃ**—ಕತ್ತಲು ಮಾರ್ಗವುಳ್ಳವೂ । **ಜುವಃ**—(ತಮ್ಮ ದಹನ ವ್ಯಾಪಾರಗಳಲ್ಲಿ) ಶೀಘ್ರಕಾರಿಗಳೂ । **ಅಸಮನಾಃ**—ಬೇರೆ ಬೇರೆ ದಿಕ್ಕುಗಳಿಗೆ ಹರಡಿ ಉರಿಯುವುವೂ ಅಥವಾ ಬೇರೆ ಬೇರೆ ಬಣ್ಣವುಳ್ಳವೂ । **ಅಜಿರಾಸಃ**—ಅಲೆದಾಡುವ ಸ್ವಭಾವವುಳ್ಳವೂ। **ರಘುಸ್ಯದಃ**—ವೇಗವಾಗಿ ಹರಿದು (ಮನೋಹರವಾಗಿ) ಉರಿಯುವುವೂ । **ವಾತಜೂತಾಃ**—ವಾಯುವಿನಿಂದ ಬೀಸಲ್ಪಡುವುವೂ । **ಆಶವಃ**—(ಸುತ್ತಲೂ) ವ್ಯಾಪಿಸತಕ್ಕವೂ ಆದ (ಅಗ್ನಿಯ ಜ್ವಾಲೆಗಳು) । **ಮನವೇ**—ಶ್ರದ್ಧಾಯುತನೂ । **ಮಾನವಸ್ಯತೇ**—(ಕರ್ಮಾರ್ಥವಾಗಿ) ಋತ್ವಿಕ್ಕುಗಳನ್ನು ಅಪೇಕ್ಷಿಸಿ ಗೌರವಿಸುವವನೂ ಆದ ಯಜಮಾನನಿಗೋಸ್ಕರ । **ಉಪ ಯುಜ್ಯಂತೇ**—ಒಟ್ಟಿಗೆ ಪ್ರಜ್ವಲಿತವಾಗುತ್ತವೆ.

ಭಾವಾರ್ಥ

ಆಹುತಿಯ ಮೂಲಕ ಯಜಮಾನನಿಗೆ ಬ್ರಹ್ಮಲೋಕವನ್ನು ಸಂಪಾದಿಸಿಕೊಟ್ಟು ಮುಕ್ತನನ್ನಾಗಿಮಾಡುವುವೂ, ಶೀಘ್ರಗಾಮಿಗಳೂ, ಕತ್ತಲುಮಾರ್ಗವುಳ್ಳವೂ, ತಮ್ಮ ದಹನಕರ್ಮಗಳಲ್ಲಿ ಶೀಘ್ರಕಾರಿಗಳೂ, ಬೇರೆ ಬೇರೆ ದಿಕ್ಕುಗಳಿಗೆ ಹರಡಿ ಉರಿಯುವುವೂ, ಅಲೆದಾಡುವ ಸ್ವಭಾವವುಳ್ಳವೂ, ವೇಗವಾಗಿ ಹರಿದು ಮನೋಹರವಾಗಿ ಉರಿಯುವುವೂ, ವಾಯುವಿನಿಂದ ಬೀಸಲ್ಪಡುವುವೂ, ಸುತ್ತಲೂ ವ್ಯಾಪಿಸತಕ್ಕವೂ ಆದ ಅಗ್ನಿಯ ಜ್ವಾಲೆಗಳು ಶ್ರದ್ಧಾಯುತನೂ, ಕರ್ಮಾರ್ಥವಾಗಿ ಋತ್ವಿಕ್ಕುಗಳನ್ನು ಅಪೇಕ್ಷಿಸಿ ಗೌರವಿಸುವವನೂ ಆದ ಯಜಮಾನನಿಗೋಸ್ಕರ ಒಟ್ಟಿಗೆ ಪ್ರಜ್ವಲಿತವಾಗುತ್ತವೆ.

English Translation

The (flames of Agni), light-moving, dark-tracked, quick (consuming), capricious, restless, lambent, fanned by the wind, wide-spreading, and ensuring liberation (to the devout), are kindled for (the benefit of) the pious reverencer of (holy) priests.

॥ ವಿಶೇಷವಿಷಯಗಳು ॥

**ಮುಮುಕ್ಷ್ವಃ** ಆಹುತಿದ್ವಾರಾ ಯಜಮಾನಂ ಮೋಕ್ತುಮಿಚ್ಛಂತ್ಯಃ ಬ್ರಹ್ಮಲೋಕಂ ಪ್ರಾಪಯಂತ್ಯಃ। ಯಜಮಾನನಿಗೆ ಬ್ರಹ್ಮಲೋಕವನ್ನು ಸಂಪಾದಿಸಿಕೊಟ್ಟು ಅವನನ್ನು ಮುಕ್ತನನ್ನಾಗಿಮಾಡತಕ್ಕವು ಎಂದು ಜ್ವಾಲೆಗಳ ಸ್ತುತಿರೂಪವಾದ ವಿಶೇಷಣ. ಪಾರ್ಥಿವವಾದ ಯಜ್ಞವೇದಿಯಲ್ಲಿ ಅಗ್ನಿಯನ್ನು ಸ್ಥಾಪಿಸಿ ಆಹುತಿಯನ್ನರ್ಪಿಸಿದ ಯಜಮಾನನಿಗೆ ಆಮುಷ್ಮಿಕವಾದ ಫಲವನ್ನು ಒದಗಿಸಿಕೊಡುವುದಾಗಿ **ಅಗ್ನಿಯು** ವರವನ್ನು ಕೊಡುವ ವಿಷಯವು ಶತಪಥಬ್ರಾಹ್ಮಣದಲ್ಲಿ ಉಕ್ತವಾಗಿದೆ.

ಯತ್ರ ವೈ ಪ್ರಜಾಪತಿಃ ಪ್ರಜಾಃ ಸಸೃಜೇ। ಸ ಯತ್ರಾಗ್ನಿಂ ಸಸೃಜೇ ಸ ಇದಂ ಜಾತಃ ಸರ್ವಮೇವ ದಗ್ಧುಂ ದಧ್ರ ಇತ್ಯೇವಾಬಿಲಮೇವ ತಾ ಯಾಸ್ತರ್ಹಿ ಪ್ರಜಾ ಆಸುಸ್ತಾ ಹೈನಂ

ಸಂಪ್ರೇಷ್ಟ್ವಂ ದಧ್ರಿರೇ ಸೋಽತಿತಿಕ್ಷಮಾಣಃ ಪುರುಷಮೇವಾಭ್ಯೇಯಾಯ । ಸ ಹೋವಾಚ । ನ ವಾ ಅಹಮಿಮಂ ತಿತಿಕ್ಷೇ ಹಂತ ತ್ವಾ ಪ್ರವಿಶಾನಿ ತಂ ಮಾ ಜನಯಿತ್ವಾ ಬಿಭೃಹಿ ಸ ಯಥೈವ ಮಾಂ ತ್ವಮಸ್ಮಿಂಲ್ಲೋಕೇ ಜನಯಿತ್ವಾ ಭರಿಷ್ಯಸ್ಯೇವಮೇವಾಹಂ ತ್ವಾಮಮುಷ್ಮಿಂಲ್ಲೋಕೇ ಜನಯಿತ್ವಾ ಭರಿಷ್ಯಾಮೀತಿ ।

ಪ್ರಜಾಪತಿಯು ಅಗ್ನಿಯನ್ನು ಸೃಷ್ಟಿಸಿದಾಗ ಅವನು ಜಗತ್ತನ್ನೆಲ್ಲಾ ದಹಿಸಲು ಸುತ್ತಲೂ ಹರಡಿದನು ಆಗ ಪ್ರಜಾಪತಿಯಿಂದಲೇ ಸೃಷ್ಟರಾದ ಪ್ರಜೆಗಳು ಅಗ್ನಿಯನ್ನು ಧ್ವಂಸಮಾಡಲುಪಕ್ರಮಿಸಿದರು. ಅಗ್ನಿಯು ಅದನ್ನು ಸಹಿಸಲಾರದೆ ಮಾನವನಲ್ಲಿಗೆ ಬಂದು ನಾನು ನಿಮ್ಮಿಂದ ಉಂಟಾಗತಕ್ಕ ಪ್ರತೀಕಾರವನ್ನು ತಡೆಯಲಾರೆ. ನಿಮ್ಮಲ್ಲಿ ನಾನು ಪ್ರವೇಶಿಸುತ್ತೇನೆ. ನನ್ನನ್ನು ನೀವು ಯಜ್ಞಗೃಹಾದಿಗಳಲ್ಲಿ ಉತ್ಪನ್ನನಾಗುವಂತೆ ಮಾಡುತ್ತಾ ಧರಿಸಿರಿ. ಹಾಗೆ ಮಾಡಿದವರಿಗೆ ನಾನು ಪರಲೋಕದಲ್ಲಿ ಒಳ್ಳೆಯದಾಗುವಂತೆ ಮಾಡುತ್ತೇನೆ ಎಂದು ವರವನ್ನು ಕೊಡುತ್ತಾನೆ. ಐತರೇಯ ಬ್ರಾಹ್ಮಣದಲ್ಲಿಯೂ ಸಹ,

ಸ್ವೈಷಾ ಸ್ವರ್ಗ್ಯಾಹುತಿರ್ಯದಗ್ನ್ಯಾಹುತಿಃ ।
(ಐ. ಬ್ರಾ. ೧-೧೬)

ಎಂದು ಅಗ್ನ್ಯಾಹುತಿಯ ಫಲವನ್ನು ಸ್ತುತಿಸಿದೆ. ಇದರಂತೆಯೇ,

ಏತೇಷು ಯಶ್ಚರತೇ ಭ್ರಾಜಮಾನೇಷು ಯಥಾಕಾಲಂ ಚಾಹುತಯೋ ಹ್ಯಾದದಾಯನ್ ।
ತಂ ನಯಂತ್ಯೇತಾಃ ಸೂರ್ಯಸ್ಯ ರಶ್ಮಯೋ ಯತ್ರ ದೇವಾನಾಂ ಪತಿರೇಕೋಽಧಿವಾಸಃ ।
(ಮುಂಡಕೋಪನಿಷತ್ ೧-೨-೫)

ಪ್ರಕಾಶಮಾನವಾದ ಈ ಅಗ್ನಿಜ್ವಾಲೆಗಳಲ್ಲಿ ನಿರ್ದಿಷ್ಟವಾದ ಕಾಲಗಳಲ್ಲಿ ಆಹುತಿಗಳನ್ನು ಅರ್ಪಿಸತಕ್ಕ ಯಜಮಾನನಿಗೆ ಸೂರ್ಯರಶ್ಮಿಗಳಾಗಿ ಪರಿವರ್ತಿತಗಳಾಗುವ ಆಹುತಿಗಳು ದೇವಪತಿಯ ಸ್ಥಾನವು ಲಭಿಸುವಂತೆ ಮಾಡುವುವು ಎಂದು ಮುಂಡಕಾದ್ಯುಪನಿಷತ್ತುಗಳಲ್ಲಿಯೂ ಆಹುತ್ಯರ್ಪಣೆಯ ಫಲವನ್ನು ಸ್ತುತಿಸಿರುವಂತೆ ಇಲ್ಲಿಯೂ ಆಹುತಿಗಳನ್ನು ಸ್ವೀಕರಿಸುವ ಅಗ್ನಿಜ್ವಾಲೆಗಳನ್ನು ವರ್ಣಿಸಿದೆ.

ರಘುದ್ರುವಃ—ಕ್ಷಿಪ್ರಂ ಗಚ್ಛಂತ್ಯಃ । ಶೀಘ್ರವಾಗಿ ಸಂಚರಿಸತಕ್ಕವು.

ಅಸಮನಾಃ—ಅಸಮಾನಮನಸ್ಕಾಃ । ಕಾಶ್ಚನ ಪ್ರಾಙ್ಮುಖ್ಯೋ ಗಚ್ಛಂತಿ ಕಾಶ್ಚನ ಪ್ರತ್ಯಙ್ಮುಖ್ಯಃ ಇತಿ ವಿವಿಧಮನಸ್ಕಾಃ । ನಾನಾ ದಿಕ್ಕುಗಳಿಗೂ ಹರಡಿ ಉರಿಯುವ ಸ್ವಭಾವವುಳ್ಳವು ಎಂದರ್ಥ ಅಥವಾ, ಅಸಮನಾ ಭಿನ್ನವರ್ಣಾಃ । ಬೇರೆಬೇರೆ ವರ್ಣಗಳುಳ್ಳವು ಎಂದು ಅರ್ಥವಾಗಬಹುದು.

ಕಾಲೀ ಕರಾಲೀ ಚ ಮನೋಜವಾ ಚ ಸುಲೋಹಿತಾ ಯಾ ಚ ಸುಧೂಮ್ರವರ್ಣಾ ।
ಸ್ಫುಲಿಂಗಿನೀ ವಿಶ್ವರುಚೀ ಚ ದೇವೀ ಲೇಲಾಯಮಾನಾ ಇತಿ ಸಪ್ತ ಜಿಹ್ವಾಃ ।
(ಮುಂಡಕ. ೧-೨-೪)

ಕೃಷ್ಣವರ್ಣವುಳ್ಳದ್ದೂ, ಭಯಂಕರವಾದ ರೂಪವುಳ್ಳದ್ದೂ, ಮನೋವೇಗವುಳ್ಳದ್ದೂ, ಅತ್ಯಂತವಾದ ಕೆಂಪು ವರ್ಣವುಳ್ಳದ್ದೂ, ಕಂದುಬಣ್ಣದ್ದೂ, ಮಿರುಗುವ ಕಾಂತಿಯುಳ್ಳದ್ದೂ, ಸರ್ವತ್ರ ಕಂಗೊಳಿಸತಕ್ಕದ್ದೂ, ದಿವ್ಯಾತ್ಮಕ

ವಾದದ್ದೂ ಆದ ಜ್ವಾಲಾರೂಪಗಳಾದ ಜಿಹ್ವೆಗಳ ವರ್ಣನೆಯು ಇರುವುದರಿಂದ **ಅಸಮನಾಃ** ಎಂದರೆ ಭಿನ್ನವರ್ಣಗಳುಳ್ಳವು ಎಂದೂ ಅರ್ಥಮಾಡಬಹುದೆಂದು ಸಾಯಣರು ವಿವರಿಸಿದ್ದಾರೆ.

### ವ್ಯಾಕರಣಪ್ರಕ್ರಿಯಾ

**ಮುಮುಕ್ಷ್ವಃ**—ಮುಚ್ಲೃ ಮೋಕ್ಷಣೇ ಧಾತು. ಮೋಕ್ತುಂ ಇಚ್ಛಂತ್ಯಃ ಮುಮುಕ್ಷವಃ. **ಸನಾಶಂಸಭಿಕ್ಷ ಉಃ**—(ಪಾ. ಸೂ. ೩-೨-೧೬೮) ಎಂಬುದರಿಂದ ಸನ್ನಂತದ ಮೇಲೆ ಉ ಪ್ರತ್ಯಯ. ಮುಮುಕ್ಷುಃ ಎಂದು ರೂಪವಾಗುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಇದಕ್ಕೆ ಜಸ್ ಪರವಾದಾಗ **ಜಸಿಚ**—ಎಂಬುದರಿಂದ ಗುಣವು ಪ್ರಾಪ್ತವಾದರೆ **ಜಸಾದಿಷು ಛಂದಸಿ ವಾ ವಚನಮ್**—ಎಂಬ ವಚನದಿಂದ ವಿಕಲ್ಪಿತವಾದುದರಿಂದ ಬರುವುದಿಲ್ಲ. ಯಣಾದೇಶ. ಉದಾತ್ತಸ್ಥಾನದಲ್ಲಿ ಯಣಾದೇಶ ಬಂದು ಅದರ ಪರದಲ್ಲಿ ವಿಭಕ್ತಿ ಬಂದುದರಿಂದ **ಉದಾತ್ತಸ್ವರಯೋರ್ಯಣಃ**—(ಪಾ. ಸೂ. ೮-೨-೪) ಎಂಬುದರಿಂದ ಸ್ವರಿತಸ್ವರ ಬರುತ್ತದೆ.

**ಮಾನವಸ್ಯತೇ**—ಮಾನವಾನ್ ಆತ್ಮನಃ ಇಚ್ಛತಿ ಮಾನವಸ್ಯತಿ **ಸುಪ ಆತ್ಮನಃ ಕ್ಯಚ್**—(ಪಾ. ಸೂ. ೩-೧-೮) ಎಂಬುದರಿಂದ ಇಚ್ಛಾರ್ಥದಲ್ಲಿ ಕ್ಯಚ್ ಪ್ರತ್ಯಯ. **ಸರ್ವಪ್ರಾತಿಪದಿಕಾನಾಂ ಕ್ಯಚಿ ಲಾಲಸಾಯಾಂ ಸುಗಸುಕೌ**—(ಪಾ. ಸೂ. ೭-೧-೫೧-೧) ಎಂಬುದರಿಂದ ಕ್ಯಚ್ ಪರವಾದಾಗ ಸುಕಾಗಮ. **ಸನಾದ್ಯಂತಾ ಧಾತವಃ**—ಎಂಬುದರಿಂದ ಧಾತುಸಂಜ್ಞಾ ಕ್ಯಜಂತದ ಮೇಲೆ ಲಡರ್ಥದಲ್ಲಿ ಶತೃ ಪ್ರತ್ಯಯ. ಚತುರ್ಥೀಏಕವಚನಾಂತರೂಪ ನುಮ್‌ರಹಿತವಾದ ಶತೃವಿನ ಪರದಲ್ಲಿ ವಿಭಕ್ತಿಬಂದುದರಿಂದ **ಶತುರನುಮೋ ನದ್ಯಜಾದೀ**—(ಪಾ. ಸೂ. ೬-೧-೧೭೩) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ರಘುದ್ರುವಃ**—ಲಘು ದ್ರುವಂತಿ ಇತಿ ರಘುದ್ರುವಃ ದ್ರು ಗತೌ ಧಾತು. ಭ್ವಾದಿ. **ಕ್ವಿಪ್ ಚ**—(ಪಾ. ಸೂ. ೩-೨-೭೬) ಎಂಬುದರಿಂದ ಕ್ವಿಪ್ ಪ್ರತ್ಯಯ. ಪೂರ್ವಪದದಲ್ಲಿ **ವಾಲಮೂಲಲಘ್ವಲ**—(ಪಾ. ಮ. ೮-೩-೧೮) ಎಂಬುದರಿಂದ ಲತ್ವವಿಕಲ್ಪ. ಪ್ರಥಮಾಬಹುವಚನಾಂತರೂಪ. ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

**ಕೃಷ್ಣಸೀತಾಸಃ**—ಕೃಷ್ಣಾಃ ಸೀತಾಃ ಯೇಷಾಂ ತೇ. **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್** ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ. ಜಸ್ ಪರವಾದಾಗ **ಆಜ್ಜಸೇರಸುಕ್** (ಪಾ. ಸೂ. ೭-೧-೫೦) ಎಂಬುದರಿಂದ ಅದಕ್ಕೆ ಅಸುಕಾಗಮ.

**ಜುವಃ**—ಜು ಧಾತುವು ಸೂತ್ರಮಾತ್ರನಿರ್ದಿಷ್ಟವಾಗಿ ಗತ್ಯರ್ಥದಲ್ಲಿ ಪ್ರಯುಕ್ತವಾಗಿದೆ. ಇದಕ್ಕೆ ಕ್ವಿಪ್ ಪ್ರತ್ಯಯ. ಜಸ್ ಪರವಾದಾಗ ಉವಙಾದೇಶ.

**ಅಸಮನಾಃ**—ನ ವಿದ್ಯತೇ ಸಮಾನಂ ಮನಃ ಯೇಷಾಂ ತೇ. **ವ್ಯತ್ಯಯೋ ಬಹುಲಂ** ಎಂಬುದರಿಂದ ಬಹುವಚನಕ್ಕೆ ಏಕವಚನಪ್ರತ್ಯಯ. **ನಞ್‌ಸುಭ್ಯಾಮ್** (ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ.

**ಅಜಿರಾಸಃ**—ಅಜ ಗತಿಕ್ಷೇಪಣಯೋಃ ಧಾತು. **ಅಜಿರಶಿಶಿರ**—(ಉ. ಸೂ. ೧-೫೩) ಎಂಬುದರಿಂದ ಕಿರಚ್ ಪ್ರತ್ಯಯಾಂತವಾಗಿ ನಿಪಾತಿತವಾಗಿದೆ. **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ಜಸ್ ಪರವಾದಾಗ ಹಿಂದಿನಂತೆ ಅದಕ್ಕೆ ಅಸುಕಾಗಮ.

ರಘುಸ್ಯದಃ—ಲಘು ಸ್ಯಂದಂತೇ ಇತಿ ರಘುಸ್ಯದಃ. ಸ್ಯಂದೂ ಪ್ರಸ್ರವಣೇ ಧಾತು. **ಕ್ವಿಪ್ ಚ** ಎಂಬುದರಿಂದ ಕ್ವಿಪ್ ಪ್ರತ್ಯಯ. **ಅನಿದಿತಾಂ ಹಲ ಉಪಧಾ**—ಎಂಬುದರಿಂದ ಉಪಧಾನಕಾರಕ್ಕೆ ಲೋಪ. **ವಾಲಮೂಲ**—ಎಂಬ ವಚನದಿಂದ ಲತ್ವ ವಿಕಲ್ಪಿತವಾದುದರಿಂದ ಪೂರ್ವಪದದಲ್ಲಿ ರೇಫಶ್ರವಣವಾಗುತ್ತದೆ. **ಗತಿಕಾರಕೋಪಪದಾತ್ಕೃತ್** ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

**ವಾತಜೂತಾಃ**—ವಾತೈಃ ಜೂತಾಃ ವಾತಜೂತಾಃ ಕರ್ಮಣಿಯಲ್ಲಿ ಕ್ತ ಪ್ರತ್ಯಯ ಬಂದು ತೃತೀಯಾಂತದೊಡನೆ ಸಮಾಸವಾದುದರಿಂದ **ತೃತೀಯಾಕರ್ಮಣಿ** (ಪಾ. ಸೂ. ೬-೨-೪೮) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ. ॥ ೪ ॥



ಸಂಹಿತಾಪಾಠಃ

ಆದಸ್ಯ ತೇ ಧ್ವಸಯಂತೋ ವೃಥೇರತೇ ಕೃಷ್ಣಮಭ್ವಂ ಮಹಿ ವರ್ಪಃ
ಕರಿಕ್ರತಃ ।
ಯತ್ಸೀಂ ಮಹೀಮವನಿಂ ಪ್ರಾಭಿ ಮರ್ಮೃಶದಭಿಶ್ವಸನ್ತ್ಸ್ತನಯನ್ನೇತಿ
ನಾನದತ್ ॥ ೫ ॥

ಪದಪಾಠಃ

ಆತ್ । ಅಸ್ಯ । ತೇ । ಧ್ವಸಯಂತಃ । ವೃಥಾ । ಈರತೇ । ಕೃಷ್ಣಂ । ಅಭ್ವಂ । ಮಹಿ । ವರ್ಪಃ । ಕರಿಕ್ರತಃ । ಯತ್ । ಸೀಂ । ಮಹೀಂ । ಅವನಿಂ । ಪ್ರ । ಅಭಿ । ಮರ್ಮೃಶತ್ । ಅಭಿಶ್ವಸನ್ । ಸ್ತನಯನ್ । ಏತಿ । ನಾನದತ್ ॥ ೫ ॥

ಸಾಯಣಭಾಷ್ಯಂ

ಆದನಂತರಮಸ್ಯ ಸ್ತೂಯಮಾನಸ್ಯಾಗ್ನೇಸ್ತೇ ಪ್ರಸಿದ್ಧಾ ವಿಸ್ಫುಲಿಂಗಾ ವೃಥಾ ಸಹೈವೇರತೇ । ಸರ್ವತೋ ಗಚ್ಛಂತಿ । ಕೀದೃಶಾಸ್ತೇ । ಧ್ವಸಯಂತಸ್ತಮಾಂಸಿ ಧ್ವಂಸಯಂತಃ ತಥಾ ಕೃಷ್ಣವರ್ಣಮಭ್ವಂ ಮಹಾಂತಮಭಿಭವದ್ಗಮನಮಾರ್ಗಂ ಮಹಿ ಮಹದ್ವರ್ಪೋ ರೂಪಂ ಪ್ರಕಾಶಂ ಕರಿಕ್ರತೋಽತ್ಯರ್ಥಂ ಕುರ್ವಂತಃ । ಕಸ್ಮಿನ್ ಕಾಲ ಇತಿ ತದುಚ್ಯತೇ । ಯದ್ಯದಾ ಮಹೀಂ ಮಹತೀಮವನಿಂ ಭೂಮಿಂ ಸೀಂ ಸರ್ವತೋ ಮರ್ಮೃಶತ್ ಪುನಃಪುನರಾಮೃಶತ್ ॥ ಮೃಶೇರ್ಯಙ್ಲುಗಂತಾಚ್ಛತರ್ಯಭ್ಯಸ್ತಾನಾಮಾದಿರಿತ್ಯಾದ್ಯುದಾತ್ತತ್ವಂ ॥ ಅಭಿಶ್ವಸನ್ ಸರ್ವತಶ್ಚೇಷ್ಟಮಾನಃ ಸ್ತನಯಞ್ಶಬ್ದಂ ಕುರ್ವನ್ ನಾನದದತ್ಯರ್ಥಂ ಶಬ್ದಯನ್ ॥ ಪೂರ್ವವತ್ಪ್ರತ್ಯಯಸ್ವರೌ ॥ ಅಭಿತಃ ಪ್ರಕರ್ಷೇಣೈತಿ ಗಚ್ಛತಿ । ಯದೇತಸ್ತತೋ ಜಿಹ್ವಾಭಿರ್ಲೇಲಿಹಾನೋ ಭುಗುಭುಗುಧ್ವನಿಂ ಕುರ್ವಞ್ಜ್ವಲತಿ ತದೈವ ವಿಸ್ಫುಲಿಂಗಾ ಉದ್ಭವಂತೀತ್ಯರ್ಥಃ ॥

### ಪ್ರತಿಪದಾರ್ಥ

**ಯತ್**—ಯಾವಾಗ (ಅಗ್ನಿಯು) । **ಅಭಿಶ್ವಸನ್**—ಮೇಲುಸಿರಿನಂತಿರುವ ಸ್ಪಂದನಶಬ್ದವನ್ನು ಮಾಡುತ್ತಲೂ । **ಸ್ತನಯನ್**—ಮೊಳಗುವ ಶಬ್ದವನ್ನು ಮಾಡುತ್ತಲೂ । **ನಾನದತ್**—ಗರ್ಜಿಸುತ್ತಲೂ । **ಮಹೀಂ**—ವಿಸ್ತಾರವಾದ । **ಅವನಿಂ**—ಭೂಮಿಯನ್ನು । **ಸೀಂ**—ಸುತ್ತಲೂ । **ಮಮೃಶತ್**—ಪದೇಪದೇ (ಬೆಳಗಿಸುತ್ತಲೂ) ಸ್ಪರ್ಶಿಸುತ್ತಲೂ । **ಅಭಿ**—ಎಲ್ಲಾ ಕಡೆಯೂ । **ಪ್ರ ಏತಿ**—ಚೆನ್ನಾಗಿ ಉರಿಯುತ್ತಾನೆಯೋ । **ಆತ್**—ಆ ಒಡನೆಯೇ । **ಅಸ್ಯ**—ಈ ಅಗ್ನಿಯ । **ತೇ**—ಪ್ರಸಿದ್ಧವಾದ ಜ್ವಾಲೆಗಳು । **ಧ್ವಸಯಂತಃ**—(ಕತ್ತಲನ್ನು) ನಾಶಮಾಡುತ್ತಲೂ । **ಕೃಷ್ಣಂ ಅಭ್ವಂ**—ಕಗ್ಗತ್ತಲೆಯ ಮಾರ್ಗದ ಸುತ್ತಲೂ । **ಮಹಿ**—ವಿಸ್ತಾರವಾದ । **ವರ್ಪಃ**—ಪ್ರಕಾಶವನ್ನು । **ಕರಿಕ್ರತಃ**—ಹರಡುತ್ತಲೂ । **ವೃಥಾ**—ಒಟ್ಟಿಗೆ ಸೇರಿಕೊಂಡು **ಈರತೇ**—ಚೆನ್ನಾಗಿ ಉರಿಯುತ್ತವೆ.

### ಭಾವಾರ್ಥ

ಅಗ್ನಿಯು ಮೇಲುಸಿರಿನಂತಿರುವ ಸ್ಪಂದನಶಬ್ದವನ್ನು ಮಾಡುತ್ತಲೂ, ಮೊಳಗುವ ಶಬ್ದವನ್ನು ಮಾಡುತ್ತಲೂ, ಗರ್ಜಿಸುತ್ತಲೂ ವಿಸ್ತಾರವಾದ ಭೂಮಿಯನ್ನು ಸುತ್ತಲೂ ಪದೇಪದೇ ಬೆಳಗಿಸುತ್ತಲೂ ಎಲ್ಲಾ ಕಡೆಯೂ ಯಾವಾಗ ಚೆನ್ನಾಗಿ ಉರಿಯುತ್ತಾನೆಯೋ, ಆ ಒಡನೆಯೇ ಈ ಅಗ್ನಿಯ ಪ್ರಸಿದ್ಧವಾದ ಜ್ವಾಲೆಗಳು ಕತ್ತಲನ್ನು ನಾಶಮಾಡುತ್ತಲೂ, ಕಗ್ಗತ್ತಲೆಯಮಾರ್ಗದ ಸುತ್ತಲೂ ವಿಸ್ತಾರವಾದ ಪ್ರಕಾಶವನ್ನು ಹರಡುತ್ತಲೂ, ಒಟ್ಟಿಗೆ ಸೇರಿಕೊಂಡು ಚೆನ್ನಾಗಿ ಉರಿಯುತ್ತವೆ

### English Translation

Thereupon those (flames of Agni) extend together in all directions, dispersing gloom, and spreading great light along the path of darkness ; when (Agni) illumines repeatedly the whole earth, and proceeds panting, thundering, and roaring aloud.

### ವಿಶೇಷ ವಿಷಯಗಳು

**ವೃಥಾ—ಸಹೈವ** । ಒಟ್ಟಿಗೆ ಸೇರಿಕೊಂಡು ಎಂದು ಅರ್ಥಮಾಡಿದ್ದಾರೆ. ಉಳಿದೆಡೆಗಳಲ್ಲೆಲ್ಲಾ ಎಂದರೆ,

**ವಿ ವಾತಜೂತೋ ಅತಸೇಷು ತಿಷ್ಠತೇ ವೃಥಾ ಜುಹೂಭಿಃ ಸೃಣ್ಯಾ ತುವಿಷ್ವಣಿಃ** ।

(ಋ. ಸಂ. ೧-೫೮-೪)

**ಅಸ್ತೋಭಯದ್ವೃಥಾಸಾಮನು ಸ್ವಧಾಂ ಗಭಸ್ತ್ಯೋಃ** ।

(ಋ. ಸಂ. ೧-೮೮-೬)

ಇತ್ಯಾದಿ ಋಕ್ಕುಗಳಲ್ಲೆಲ್ಲಾ ಸಾಧಾರಣವಾಗಿ **ವೃಥಾ** ಎಂಬ ಪದವು ಬರುವೆಡೆಗಳಲ್ಲೆಲ್ಲಾ, ಸಾಯಣರು **ವೃಥಾ ಇತಿ ಅನಾಯಾಸವಚನಃ** । ವೃಥಾ ಎಂಬ ಶಬ್ದಕ್ಕೆ ಆಯಾಸವಿಲ್ಲದೇ, ಶ್ರಮವಿಲ್ಲದೇ ಎಂದರ್ಥ. ಅಗ್ನಿಯು ಸ್ವಲ್ಪವೂ ಶ್ರಮವಿಲ್ಲದೇ ಪ್ರಸರಿಸುತ್ತಾನೆ ಎಂದು ತಾತ್ಪರ್ಯವೆಂದು ವಿವರಿಸಿದ್ದಾರೆ. ಪ್ರಕೃತವಾದ ಋಕ್ಕಿನಲ್ಲಿ ಅಗ್ನಿಯ ವಿಸ್ಫುಲಿಂಗಗಳೆಲ್ಲವೂ ಒಟ್ಟಿಗೆ ಸೇರಿಕೊಂಡು ಪ್ರಸರಿಸಿದವು ಎಂದು ವಿವರಿಸಿದ್ದಾರೆ. ಇಲ್ಲಿಯೂ ಸಹ ಅಗ್ನಿಯ ಜ್ವಾಲೆಗಳು ಕೊಂಚವೂ ತಡೆಯಿಲ್ಲದೆ ಹರಡಿದವು ಎಂದೂ ಹೇಳಬಹುದು.

**ಕೃಷ್ಣಂ ಅಭ್ವಂ**—ಅಭ್ವಶಬ್ದವು ಉದಕನಾಮಗಳಲ್ಲಿಯೂ (ನಿ. ೨-೨೪) **ಮಹನ್ನಾಮಗಳಲ್ಲಿಯೂ** (ನಿ. ೩-೧೩) ಪಠಿತವಾಗಿದೆ. ಆದರೆ ಈ ಎರಡು ಅರ್ಥಗಳೇ ಅಲ್ಲದೇ ಬೇರೆ ಅರ್ಥಗಳೂ ಸಾಧ್ಯವಾಗುವುದರಿಂದ ಸಾಯಣರೂ ಈ ಪದಕ್ಕೆ ಸಂದರ್ಭಾನುಸಾರವಾಗಿ ಅರ್ಥಮಾಡಿದ್ದಾರೆ. ಬೇರೆ ಬೇರೆ ಕಡೆಗಳಲ್ಲಿ ಈ ಪದಕ್ಕೆ ಯಾವ ಯಾವ ಅರ್ಥವನ್ನು ಮಾಡಿದ್ದಾರೆಂದು ತಿಳಿದರೆ ಅನಂತರ ಪ್ರಕೃತವಾದ ಋಕ್ಕಿನಲ್ಲಿ ಇದರ ಸರಿಯಾದ ಅರ್ಥವನ್ನು ನಿಷ್ಕರ್ಷಿಸಬಹುದು.

**ನೇಮಾ ಆಪೋ ಅನಿಮಿಷಂ ಚರಂತೀರ್ನ ಯೇ ವಾತಸ್ಯ ಪ್ರಮಿನಂತ್ಯಭ್ವಂ ।**
(ಋ. ಸಂ. ೧-೨೪-೬)

ಎಂಬ ಋಕ್ಕಿನಲ್ಲಿ ವರುಣನ ಸ್ತುತಿಯಿದೆ. ಇಲ್ಲಿ **ವಾತಸ್ಯ ಯೇ ಗತಿವಿಶೇಷಾಃ ತೇ ತ್ವದೀಯಂ ಅಭ್ವಂ ವೇಗಂ ನ ಹಿಂಸಂತಿ** ವಾಯುವಿನ ಗತಿವೇಗವೂ ಸಹ ವರುಣನ **ವೇಗವನ್ನು** ತಡೆಯಲಾರವು ಎಂದು **ಅಭ್ವ** ಶಬ್ದಕ್ಕೆ ವೇಗವೆಂದು ಅರ್ಥಮಾಡಿದ್ದಾರೆ.

**ಯುಷ್ಮೇಷಿತೋ ಮರುತೋ ಮರ್ತ್ಯೇಷಿತ ಆ ಯೋ ನೋ ಅಭ್ವ ಈಷತೇ ।**
(ಋ. ಸಂ. ೧-೩೯-೮)

ಎಂಬಲ್ಲಿ **ಮರುತ್ತು**ಗಳನ್ನು ಸ್ತುತಿಸಿದೆ. ಇಲ್ಲಿ **ಯಃ ಯಃಕಶ್ಚಿತ್ ಅಭ್ವಃ ಶತ್ರುಃ....ನಃ ಪ್ರಾಪ್ನೋತಿ ತಂ ಶವಸಾ ವಿ ಯುಯೋತ** ಎಂದು ಅಭ್ವ ಶಬ್ದಕ್ಕೆ ಶತ್ರುವೆಂದು ಹೇಳಿದ್ದಾರೆ. ಋ. ಸಂ. ೧-೧೬೮-೯ನೇ ಋಕ್ಕಿನಲ್ಲಿ **ಅಭ್ವಂ ಮೇಘಂ ಜನಯಂತಿ** ಎಂದು **ಮೇಘ**ವೆಂಬ ಅರ್ಥವನ್ನೂ, ೧-೧೬೯-೩ ನೇ ಋಕ್ಕಿನಲ್ಲಿ **ಉದಕ**ವೆಂಬ ಅರ್ಥವನ್ನೂ ೨-೪-೫ ರಲ್ಲಿ **ಮಹತ್ತೆಂ**ಬ ಅರ್ಥವನ್ನೂ ಹೇಳಿದ್ದಾರೆ.

**ಅರ್ಹನ್ಬಿಭರ್ಷಿ ಸಾಯಕಾನಿ ಧನ್ವಾರ್ಹನ್ನಿಷ್ಕಂ ಯಜತಂ ವಿಶ್ವರೂಪಂ ।**
**ಅರ್ಹನ್ನಿದಂ ದಯಸೇ ವಿಶ್ವಮಭ್ವಂ ನ ವಾ ಓಜೀಯೋ ರುದ್ರ ತ್ವದಸ್ತಿ ॥**
(ಋ. ಸಂ. ೨-೩೩-೧೦)

ಎಂಬ ಋಕ್ಕಿನಲ್ಲಿ **ವಿಶ್ವಂ ಅಭ್ವಂ । ಮಹನ್ನಾಮೈತತ್ । ಅತಿ ವಿಸ್ತೃತಂ ಜಗತ್ ।** ಮಹನ್ನಾಮಗಳಲ್ಲಿ ಪಠಿತವಾಗಿರುವುದರಿಂದ ಅತ್ಯಂತ ವಿಸ್ತಾರವಾದ ಜಗತ್ತೆಂದೂ ಅರ್ಥವಾಗುತ್ತದೆ. ದುಷ್ಟಶಕ್ತಿಯಲ್ಲಿರುವ ಮಹತ್ತ್ವವನ್ನು ತೋರಿಸುವಾಗಲೂ ಸಹ ಈ ಪದದ ಪ್ರಯೋಗವನ್ನು ಉಪಯೋಗಿಸಿದೆ.

**ಭೂರಿಂ ದ್ವೇ ಅಚರಂತೀ ಚರಂತಂ ಪದ್ವಂತಂ ಗರ್ಭಮಪದೀ ದಧಾತೇ ।**
**ನಿತ್ಯಂ ನ ಸೂನುಂ ಪಿತ್ರೋರುಪಸ್ಥೇ ದ್ಯಾವಾ ರಕ್ಷತಂ ಪೃಥಿವೀ ನೋ ಅಭ್ವಾತ್ ।**
(ಋ. ಸಂ. ೧-೧೮೫-೨)

ಎಂದು ದ್ಯಾವಾಪೃಥಿವಿಗಳನ್ನು **ನಃ ಅಸ್ಮಾನ್ ಅಭ್ವಾತ್ ಮಹತೋ ಭಯಹೇತೋಃ ಪಾಪಾತ್ ರಕ್ಷತಂ ಪಾಲಯತಂ ।** ನಮ್ಮನ್ನು ಮಹತ್ತಾದುದೂ ಭಯಹೇತುವಾದುದೂ ಆದ ಪಾಪದಿಂದ ರಕ್ಷಿಸಿ ಎಂದು ಪ್ರಾರ್ಥಿಸಿದೆ. ಇದೇ ರೀತಿಯಲ್ಲಿ ಈ ಸೂಕ್ತದ ೮ನೇ ಋಕ್ಕಿನವರೆಗೆ **ಅಭ್ವಾತ್** ಎಂಬ ಪದವನ್ನು **ಮಹದ್ಭಯ**ವೆಂಬರ್ಥದಲ್ಲಿ ಉಪಯೋಗಿಸಿದೆ. ಹೀಗಿರುವ ಬೇರೆಬೇರೆ ಅರ್ಥಗಳೆಲ್ಲವೂ ಪರಂಪರೆಯಾದವು. ಅಭ್ವ ಶಬ್ದಕ್ಕೆ ಮೂಲಾರ್ಥ

ವಾವುದು, ಆ ಮೂಲಾರ್ಥನ ಮೇಲೆ ಈ ಪರಂಪರೆಯಾದ ಅರ್ಥಗಳು ಹೇಗೆ ಸಾಧ್ಯ ಎಂಬುದನ್ನು ತಿಳಿಯಬೇಕಾದರೆ ಶತಪಥಬ್ರಾಹ್ಮಣದ ವಾಕ್ಯದಲ್ಲಿ ಪ್ರಯೋಗಿಸಿರುವ ಅಭ್ವಶಬ್ದವನ್ನು ಗಮನಿಸಿದರೆ ಈ ಮೂಲಾರ್ಥವು ತಿಳಿಯುತ್ತದೆ.

> **ಅಥ ಬ್ರಹ್ಮೈವ ಪರಾರ್ಧಮಗಚ್ಛತ್ । ತತ್ಪರಾರ್ಧಂ ಗತ್ವೈಕ್ಷತ ಕಥಂ ನ್ವಿಮಾನ್ಲ್ಲೋಕಾನ್ಪ್ರ-ತ್ಯವೇಯಾಮಿತಿ ತದ್ದ್ವಾಭ್ಯಾಮೇವ ಪ್ರತ್ಯವೈದ್ರೂಪೇಣ ಚೈವ ನಾಮ್ನಾ ಚ ಸ ಯಸ್ಯ ಕಸ್ಯ ಚ ನಾಮಾಸ್ತಿ ತನ್ನಾಮ ಯಸ್ಯೋಽಪಿ ನಾಮ ನಾಸ್ತಿ ಯದ್ವೇದ ರೂಪೇಣೇದಗ್ಂ ರೂಪಮಿತಿ ತದ್ರೂಪಮೇತಾವದ್ವಾ ಇದಂ ಯಾವದ್ರೂಪಂ ಚೈವ ನಾಮ ಚ । ತೇ ಹೈತೇ ಬ್ರಹ್ಮಣೋ ಮಹತೀ ಅಭ್ವೇ । ಸ ಯೋ ಹೈತೇ ಬ್ರಹ್ಮಣೋ ಮಹತೀ ಅಭ್ವೇ ವೇದ ಮಹದ್ಧೈವಾಭ್ವಂ ಭವತಿ ।**
>
> (ಶ. ಬ್ರಾ. ೧೧-೨-೩-೩).

ಎಂಬ ವಾಕ್ಯಗಳಲ್ಲಿ **ನಾಮ** ಮತ್ತು **ರೂಪ**ಗಳು ಬ್ರಹ್ಮನ ಮಹತ್ತಾದ **ಅಭ್ವ**ಗಳೆಂದು ಹೇಳಿದೆ. [ಇಲ್ಲಿ **ಅಭ್ವ** ಮತ್ತು **ಯಕ್ಷ** ಎಂಬ ಎರಡು ಪದಗಳಿಗೂ ಒಂದೇ ಅರ್ಥವೆಂದೂ ತೋರಿಸಿದೆ] ಬ್ರಹ್ಮನ **ಅಭ್ವವು ಮೂರ್ತ** (concrete), **ಅಮೂರ್ತ** (Abstract) ಎಂದು ಎರಡುವಿಧವಾಗಿದೆ. ಆದುದರಿಂದ ಬ್ರಹ್ಮನ ಮಹತ್ತಾದ **ಮೂರ್ತಶಕ್ತಿ, ಅಮೂರ್ತಶಕ್ತಿ** ಎಂದು ಎರಡು ವಿಧವಾದ ಶಕ್ತಿಗಳೂ ವಿಶ್ವವನ್ನು ವ್ಯಾಪಿಸಿವೆಯೆಂದರ್ಥ. ಈ ಮೂಲಾರ್ಥಗಳಿಂದ ಉಳಿದ ತಾತ್ಪರ್ಯಗಳು ನಿಷ್ಪನ್ನವಾಗುತ್ತವೆ. ಈ ವಿಧವಾಗಿ ಮೂರ್ತಾಮೂರ್ತರೂಪವಾದ ವಿಶ್ವ ತತ್ತ್ವವೆಂಬ ವ್ಯಾಪಕವಾದ ಅರ್ಥವು,

> **ಉದೂ ಅಯಾಁ ಉಪವಕ್ತೇವ ಬಾಹೂ ಹಿರಣ್ಯಯಾ ಸವಿತಾ ಸುಪ್ರತೀಕಾ ।**
> **ದಿವೋ ರೋಹಾಂಸ್ಯರುಹತ್ಪೃಥಿವ್ಯಾ ಅರೀರಮತ್ಪತಯತ್ಕಚ್ಚಿದಭ್ವಂ ॥**
>
> (ಋ. ಸಂ. ೬-೭೧-೫)

ಎಂಬ ಋಕ್ಕಿನಲ್ಲಿರುವ **ಅಭ್ವ**ಶಬ್ದದಲ್ಲಿ ಅಡಕವಾಗಿದೆ. ಈ ಪದವನ್ನು ಸಾಯಣರು ವಿವರಿಸುತ್ತಾ **ಅಭ್ವಂ ಮಹತ್ ಸರ್ವಂ ವಸ್ತುಜಾತಂ ।** ಎಂದು ಅವರ ವ್ಯಾಪಕವಾದ ತಾತ್ಪರ್ಯವನ್ನು ಹೇಳಿದ್ದಾರೆ. ಕೆಲವು ಕಡೆಗಳಲ್ಲಿ ವ್ಯಾಪಕ ವಾದ ಸಚ್ಛಕ್ತಿಯೂ ಇನ್ನು ಕೆಲವು ಕಡೆಗಳಲ್ಲಿ ದುಷ್ಟಶಕ್ತಿಯೂ ಸೂಚಿತವಾಗುತ್ತದೆ. ಈ ಎರಡು ಅರ್ಥಗಳಲ್ಲೂ ಋಕ್ಸಂಹಿತೆಯಲ್ಲಿ ಈ ಪದದ ಪ್ರಯೋಗವಿದೆ. ಉದಾಹರಣೆಗೆ—

> **ಪ್ರ ಯೇ ವಸುಭ್ಯ ಈವದಾ ನಮೋ ದುರ್ಯೇ ಮಿತ್ರೇ ವರುಣೇ ಸೂಕ್ತವಾಚಃ ।**
> **ಅವೈತ್ವಭ್ವಂ ಕೃಣುತಾ ವರೀಯೋ ದಿವಸ್ಪೃಥಿವ್ಯೋರವಸಾ ಮದೇಮ ॥**
>
> (ಋ. ಸಂ. ೫-೪೯-೫)

ಎಂಬಲ್ಲಿ **ಅಭ್ವಂ ಮಹದ್ಧನಂ ತೇಜೋ ವಾ ।** ಮಹತ್ತಾದ ತೇಜಶ್ಶಕ್ತಿಯೆಂದೂ,

> **ದ್ಯಾವೋ ನ ಯಸ್ಯ ಪನಯಂತ್ಯಭ್ವಂ ಭಾಸಾಂಸಿ ವಸ್ತೇ ಸೂರ್ಯೋ ನ ಶುಕ್ರಃ ।**
> **ವಿ ಯ ಇನೋತ್ಯಜರಃ ಪಾವಕೋಽಶ್ನಸ್ಯ ಚಿಚ್ಛಿಶ್ನಥತ್ಪೂರ್ವಾಣಿ ।**
>
> ( ಋ. ಸಂ. ೬-೪-೩ )

ಎಂಬಲ್ಲಿ **ಅಭ್ವಂ ಮಹತ್ಕರ್ಮ ।** ಎಂದು ಮಹತ್ತಾದ ಕರ್ಮಶಕ್ತಿಯೆಂದೂ ಅರ್ಥವಾಗುತ್ತದೆ. ಇವೆರಡೂ ಸಚ್ಛಕ್ತಿಗಳು.

ತಾ ಇನ್ವೋ೩ ಇವ ಸಮನಾ ಸಮಾನೀರಮೀತವರ್ಣಾ ಉಷಸಶ್ಚರಂತಿ ।
ಗೂಹಂತೀರಭ್ವಮಸಿತಂ ರುಶದ್ಭಿಃ ಶುಕ್ರಾಸ್ತನೂಭಿಃ ಶುಚಯೋ ರುಚಾನಾಃ ।
(ಋ. ಸಂ. ೪-೫೧-೯)

ಎಂಬ ಋಕ್ಕಿನಲ್ಲಿ **ಅತಿಮಹತ್ಕೃಷ್ಣಂ ರೂಪಂ ।** ಮಹತ್ತಾದ ಕಗ್ಗತ್ತಲೆಯೆಂಬ ಅರ್ಥವಾಗುತ್ತದೆ. ಹೀಗೆ ವಿಕಾರವಾದುದೂ, ಹಿಂಸಾತ್ಮಕವಾದುದೂ ಆದ ಭೂತಶಕ್ತಿಯನ್ನು ಸೂಚಿಸುವಾಗ **ಅಭ್ವ**ಶಬ್ದವು ಪ್ರಯೋಗಿಸಲ್ಪಟ್ಟಿರುವಂತೆ ಪ್ರಕೃತವಾದ ಋಕ್ಕಿನಲ್ಲಿಯೂ ಅದರ ಪ್ರಯೋಗವಿದೆ. ಈ ಋಕ್ಕಿನಲ್ಲಿ **ಕೃಷ್ಣಂ ಅಭ್ವಂ** ಎಂದರೆ ಸುತ್ತಲೂ ವ್ಯಾಪಿಸಿರುವ ಕಗ್ಗತ್ತಲೆಯ ಮಾರ್ಗವೆಂದು ಅರ್ಥಮಾಡಿದ್ದಾರೆ. ಅತಿ ಮಹತ್ತಾದ ಕಗ್ಗತ್ತಲೆಯೆಂದರ್ಥ.

**ವರ್ಣಃ—ರೂಪಂ ಪ್ರಕಾಶಂ ।** ಪ್ರಕಾಶಮಾನವಾದ ಸ್ವರೂಪವೆಂದರ್ಥ.

ವ್ಯಾಕರಣಪ್ರಕಿಯಾ

**ಈರತೇ**—ಈರ ಗತೌ ಕಂಪನೇ ಚ ಧಾತು. ಲಟ್‌ಪ್ರಥಮಪುರುಷಬಹುವಚನದಲ್ಲಿ **ಆತ್ಮನೇಪದೇಷ್ವನತಃ** ಎಂಬುದರಿಂದ ಅತಾದೇಶ. ಶಪಿಗೆ ಲುಕ್. ಅತಿಙಂತದ ಪರದಲ್ಲಿರುವುದರಿಂದನಿಘಾತಸ್ವರ ಬರುತ್ತದೆ.

**ಮಹಿ**—ಮಹ ಪೂಜಾಯಾಂ ಧಾತು. ಇದಕ್ಕೆ ಸರ್ವಧಾತುಭ್ಯ ಇನ್ ಎಂದು ಬರುವ ಇನ್ ಪ್ರತ್ಯಯ. ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್** (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಮಹೀಮ್**—ಮಹತೀಮ್ ಎಂದು ರೂಪವಾದಾಗ ಛಾಂದಸವಾಗಿ ಅತಿಗೆ ಲೋಪ ಬರುತ್ತದೆ. ಙೀಪ್ ಪಿತ್ತಾದರೂ **ಶತುರನುಮೋ ನದ್ಯಜಾದೀ** ಎಂಬಲ್ಲಿ **ಬೃಹನ್ಮಹತೋರುಪಸಂಖ್ಯಾನಮ್** (ಪಾ.ಸೂ. ೬-೧-೧೭೩-೧) ಎಂಬ ವಚನವಿರುವುದರಿಂದ ಉದಾತ್ತವಾಗುತ್ತದೆ. ಏಕಾದೇಶ ಬಂದಾಗ (ಅವುಸೊಡನೆ) **ಏಕಾದೇಶ ಉದಾತ್ತೇನೋದಾತ್ತಃ** (ಪಾ. ಸೂ. ೮-೨-೫) ಎಂಬುದರಿಂದ ಉದಾತ್ತವಾಗುತ್ತದೆ.

**ಮರ್ಮೃಶತ್**—ಮೃಶ ಆಮರ್ಶನೇ ಧಾತು. ತುದಾದಿ. ಪೌನಃಪುನ್ಯಾರ್ಥತೋರುವಾಗ **ಧಾತೋರೇಕಾಚಃ**—(ಪಾ. ಸೂ. ೩-೧-೨೨) ಎಂಬುದರಿಂದ ಯಙ್. **ಯಙೋಽಚಿಚ** ಎಂಬುದರಿಂದ ಅದಕ್ಕೆ ಅಜ್ನಿಮಿತ್ತಕವಾಗಿ ಲುಕ್. ಯಙ್‌ಲುಗಂತದ ಮೇಲೆ ಲಡರ್ಥದಲ್ಲಿ ಶತೃ ಪ್ರತ್ಯಯ. ಯಙ್ ನಿಮಿತ್ತವಾಗಿ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ **ಗುಣೋ ಯಙ್‌ಲುಕೋಃ** ಎಂಬುದರಿಂದ ಗುಣ. ಯಙ್‌ಲುಕ್ ಅದಾದಿಯಲ್ಲಿ ಸೇರಿತವಾದುದರಿಂದ ಶಪಿಗೆ **ಅಭ್ಯಸ್ತಾನಾಮಾದಿಃ** (ಪಾ. ಸೂ. ೬-೧-೧೮೯) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಅಭಿಶ್ವಸನ್**—ಶ್ವಸ ಪ್ರಾಣನೇ. ಧಾತು. ಲಡರ್ಥದಲ್ಲಿ ಶತೃಪ್ರತ್ಯಯ. **ಅದಿಪ್ರಭೃತಿಭ್ಯಃ ಶಪಃ** ಎಂಬುದರಿಂದ ಶಪಿಗೆ ಲುಕ್. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ. ಪ್ರಾದಿ ಸಮಾಸವಾದಾಗ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ಪ್ರಥಮಾ ಏಕವಚನಾಂತರೂಪ.

**ಸ್ತನಯನ್**—ಸ್ತನ ದೇವಶಬ್ದೇ ಧಾತು. ಚುರಾದಿ. **ಸತ್ಯಾಪಪಾಶ**— (ಪಾ. ಸೂ. ೩-೧-೨೫) ಎಂಬುದರಿಂದ ಣಿಚ್. ಣ್ಯಂತದಮೇಲೆ ಲಡರ್ಥದಲ್ಲಿ ಶತೃ ಪ್ರತ್ಯಯ. ಶಪ್ ವಿಕರಣ. ಧಾತುವು ಅದಂತವಾದುದರಿಂದ ಣಿಚ್ ನಿಮಿತ್ತವಾಗಿ ಅಕಾರಕ್ಕೆ ಲೋಪ ಬಂದು ಅದಕ್ಕೆ ಸ್ಥಾನಿವದ್ಭಾವವಿರುವುದರಿಂದ ಉಪಧಾವೃದ್ಧಿ ಬರುವುದಿಲ್ಲ. ಶಪ್ ನಿಮಿತ್ತವಾಗಿ ಣಿಚಿಗೆ ಗುಣ ಅಯಾದೇಶ. ಶಪ್ ಸಾರ್ವಧಾತುಕ ಅನುದಾತ್ತವಾಗುವುದರಿಂದ ಣಿಚ್ ಸ್ವರ ಉಳಿಯುತ್ತದೆ.

**ಏತಿ**—ಇಣ್ ಗತೌ ಧಾತು. ಅದಾದಿ. ಲಟ್ ಪ್ರಥಮಪುರುಷ ಏಕವಚನಾಂತರೂಪ. ಯದ್ವೋಗವಿರುವುದರಿಂದ **ನಿಪಾತೈರ್ಯದ್ಯದಿ**—(ಪಾ. ಸೂ. ೮-೧-೩೦) ಎಂಬುದರಿಂದ ನಿಘಾತಪ್ರತಿಷೇಧ ಬರುವುದರಿಂದ ಧಾತುಸ್ವರ ಉಳಿಯುತ್ತದೆ.

**ನಾನದತ್**—ಣದ ಅವ್ಯಕ್ತೇ ಶಬ್ದೇ. **ಣೋನಃ** (ಪಾ. ಸೂ. ೬-೧-೬೫) ಎಂಬುದರಿಂದ ಆದಿಗೆ ನತ್ವ. ಅತಿಶಯಾರ್ಥ ತೋರುವಾಗ ಹಿಂದಿನಂತೆ ಯಙ್ ಬಂದು ಅದಕ್ಕೆ ಅನ್ಯೈಮಿತ್ತಿಕವಾಗಿ ಲುಕ್. ಯಙ್‍ಲುಙಂತದ ಮೇಲೆ ಲಡರ್ಥದಲ್ಲಿ ಶತೃ ಪ್ರತ್ಯಯ. **ಅಭ್ಯಸ್ತಾನಾಮಾದಿಃ** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ॥ ೫ ॥

———— :o: ————

ಸಂಹಿತಾಪಾಠಃ

ಭೂಷನ್ನ ಯೋಽಧಿ ಬಭ್ರೂಷು ನಮ್ನತೇ ವೃಷೇವ ಪತ್ನೀರಭ್ಯೇತಿ ರೋರು-
ವತ್ ।
ಓಜಾಯಮಾನಸ್ತನ್ವಶ್ಚ ಶುಂಭತೇ ಭೀಮೋ ನ ಶೃಂಗಾ ದವಿಧಾವ ದು-
ರ್ಗೃಭಿಃ ॥ ೬ ॥

ಪದಪಾಠಃ

ಭೂಷನ್ । ನ । ಯಃ । ಅಧಿ । ಬಭ್ರೂಷು । ನಮ್ನತೇ । ವೃಷಾಽಇವ । ಪತ್ನೀಃ । ಅಭಿ । ಏತಿ । ರೋರುವತ್ ।
ಓಜಾಯಮಾನಃ । ತನ್ವಃ । ಚ । ಶುಂಭತೇ । ಭೀಮಃ । ನ । ಶೃಂಗಾ । ದವಿಧಾವ । ದುಃಽಗೃಭಿಃ ॥ ೬ ॥

ಸಾಯಣಭಾಷ್ಯಂ

ಯೋಽಗ್ನಿರ್ಬಭ್ರೂಷು ಬಭ್ರುವರ್ಣಾಸ್ವೋಷಧೀಷು ಭರಣಕುಶಲಾಸು ವಾ ಜಗತಾಮಧ್ಯಧಿಕಂ ನಮ್ನತೇ ನಮತಿ ಕಾಷ್ಠಾನಿ ಪ್ರವಿಶತಿ । ನಮತೇರ್ಲೇಟ್ಯಡಾಗಮಃ । ವ್ಯತ್ಯಯೇನ ಶ್ನಾ । ಯದ್ವಾ । ಲಟಿ ಚ್ಛಾಂದಸಃ ಶಪಃ ಶ್ಲುಃ । ವ್ಯತ್ಯಯೇನ ಹಲಾದಿಶೇಷಾಭಾವಃ ॥ ಭೂಷನ್ನ ಭೂತಾನ್ಯೇವ ಸ್ವತೇಜಸಾ ಭೂಷಯನ್ನಿವ । ಕಿಂಚಾಯಂ ಪ್ರವಿಶನ್ ವೃಷೇವ ಸೇಕ್ತಾ ವೃಷಭ ಇವ ಪತ್ನೀಸ್ತಮೋಷ ಪಾಲಯಿತ್ರೀಃ ಸಮರ್ಥಯಿತ್ರೀರೋಷಧೀ ರೋರುವತ್ । ರೌತೇರ್ಯಙ್‍ಲುಗಂತಾಚ್ಛತರ್ಯಭ್ಯಸ್ತಾನಾಮಾದಿರಿತ್ಯಾದ್ಯುದಾತ್ತತ್ವಂ ॥ ಅತ್ಯರ್ಥಂ ಶಬ್ದಯನ್ನಭ್ಯೇತಿ । ಅಭಿತೋ ಗಚ್ಛತಿ । ಪ್ರಥಮಮೋಷಧೀಃ ಪ್ರವಿಶ್ಯ ಪಶ್ಚಾತ್ಪ್ರಬುದ್ಧಃ ಸಂಸ್ತಾ ಏವ ದಹತೀತ್ಯರ್ಥಃ । ಕಿಂಚೈವಂ ಕೃತ್ವಾ ಓಜಾಯಮಾನಃ । ಓಜ ಇತಿ ಬಲನಾಮ । ಸ್ವಯಂ ಬಲಮಿವಾಚರನ್ ॥ ಕರ್ತುಃ ಕ್ಯಙ್ ಸಲೋಪಶ್ಚೇತಿ ಕ್ಯಙ್‍ಸಲೋಪೌ ॥ ಧೂಮಾದಿಭಿರ್ವಿನಾ ಕೇವಲಂ ತೇಜೋರೂಪ ಏವ ಸಂಸ್ತನ್ವಶ್ಚ ಶುಂಭತೇ । ಸ್ವಶರೀರಭೂತಾ ಜ್ವಾಲಾ

ಅಪಿ ದೀಪಯತಿ । ಪ್ರೋಷಯತೀತ್ಯರ್ಥಃ । ಕಿಂಚ ಪ್ರವೃದ್ಧಜ್ವಾಲೋ ದುರ್ಗೃಭಿಃ ಕೇನಚಿದಪಿ ಗ್ರಹೀತು-ಮಶಕ್ಯಃ ಸನ್ ಭೀಮೋ ನ ಭಯಂಕರೋ ಮೃಗ ಇವ ಸ ಯಥಾ ದುರ್ಗ್ರಹಃ ಸಞ್ಶೃಂಗಂ ಚಾಲಯತಿ ತದ್ವದಯಮಪಿ ಶೃಂಗಾಣಿ ಶೃಂಗವದುನ್ನತಾ ಜ್ವಾಲಾ ದವಿಧಾವ । ಅತ್ಯರ್ಥಂ ಚಾಲಯತಿ ॥ ಧೂನೋ-ತೇರ್ಯಙ್‌ಲುಗಂತಾಲ್ಲಿಟಿ ರೂಪಂ । ಅಸ್ಯ ಚ ದಾಧರ್ತ್ಯಾದಾವಿತಿಶಬ್ದೇನ ಸಂಗ್ರಹೋ ದ್ರಷ್ಟವ್ಯಃ ॥

ಪ್ರತಿಪದಾರ್ಥ

**ಯಃ**—ಯಾವ (ಅದೇ) ಅಗ್ನಿಯು । **ಬಭ್ರೂಷು**—ಕಂದುಬಣ್ಣದ ಪೊದೆಗಳಲ್ಲಿ । **ಭೂರ್ಷ ನ**—(ತನ್ನ ಜ್ವಾಲೆಗಳಿಂದ ಅವುಗಳನ್ನು) ಅಲಂಕರಿಸುವಂತೆ । **ಅಧಿ ನಮ್ನತೇ**—ಅತಿಶಯವಾಗಿ ಆಕ್ರಮಿಸುತ್ತಾನೆ. । **ವೃಷಾಃ**—ಗೂಳಿಗಳು । **ಪತ್ನೀಃ ಇವ**—ಗುಟುರುಹಾಕಿಕೊಂಡು ಗೋವುಗಳ ನಡುವೆ ಮುನ್ನುಗ್ಗುವಂತೆ । **ರೋರುವತ್**—ಗರ್ಜಿಸುತ್ತಾ । **ಅಭ್ಯೇತಿ**—ರಭಸದಿಂದ ಮುನ್ನುಗ್ಗುತ್ತಾನೆ. । **ಓಜಾಯಮಾನಃ**-(ಪೊದೆಗಳ ದಹನದಿಂದ) ತನ್ನ ಶಕ್ತಿಯನ್ನು ಹೆಚ್ಚಿಸಿಕೊಳ್ಳುತ್ತಾ । **ತನ್ವಶ್ಚ**—(ಹೊಗೆಯೇ ಇಲ್ಲದ) ಜ್ವಾಲಾರೂಪದ ತನ್ನ ದೇಹಗಳನ್ನೂ ಕೂಡ । **ಶುಂಭತೇ**—ವೃದ್ಧಿಪಡಿಸಿಕೊಂಡು ಹರಡುತ್ತಾನೆ. । (ಮತ್ತು) **ಭೀಮೋ ನ**—ಯಾರಿಂದಲೂ ತಡೆಯಲಸಾಧ್ಯವಾದ ಭಯಂಕರ ಮೃಗವು ತನ್ನ ಭೀಷಣವಾದ ಕೊಂಬನ್ನು ಬೀಸಿ ಆಡಿಸುವಂತೆ । **ದುರ್ಗೃಭಿಃ**--ತಡೆಯಲಸಾಧ್ಯನಾಗಿ । **ಶೃಂಗಾ**—ಕೊಂಬುಗಳಂತಿರುವ ತನ್ನ ಜ್ವಾಲೆಗಳನ್ನು । **ದವಿಧಾವ**—(ಭಯಂಕರವಾಗಿ) ಅಲ್ಲಾಡಿಸುತ್ತಾನೆ.

ಭಾವಾರ್ಥ

ಅಗ್ನಿಯು ತನ್ನ ಜ್ವಾಲೆಗಳಿಂದ ಅವುಗಳನ್ನು ಅಲಂಕರಿಸುವಂತೆ ಕಂದುಬಣ್ಣದ ಪೊದೆಗಳಲ್ಲಿ ಪ್ರವೇಶಿಸುತ್ತಾನೆ. ಮತ್ತು ಅವುಗಳ ನಡುವೆ ಗೂಳಿಗಳು ಗುಟುರು ಹಾಕಿಕೊಂಡು ಗೋವುಗಳ ನಡುವೆ ಮುನ್ನುಗ್ಗುವಂತೆ ಗರ್ಜಿಸುತ್ತಾ ರಭಸದಿಂದ ಮುನ್ನುಗ್ಗುತ್ತಾನೆ. ಪೊದೆಗಳ ದಹನದಿಂದ ತನ್ನ ಶಕ್ತಿಯನ್ನು ಹೆಚ್ಚಿಸಿಕೊಳ್ಳುತ್ತಾ ಹೊಗೆಯೇ ಇಲ್ಲದ ಜ್ವಾಲಾರೂಪವಾದ ತನ್ನ ದೇಹಗಳನ್ನೂ ಕೂಡ ವೃದ್ಧಿಪಡಿಸಿಕೊಂಡು ಹರಡುತ್ತಾನೆ. ಅಲ್ಲದೇ ಭಯಂಕರವಾದ ಮೃಗವು ತನ್ನ ಭೀಷಣವಾದ ಕೊಂಬನ್ನು ಬೀಸಿ ಆಡಿಸುವಾಗ ಯಾರಿಂದಲೂ ತಡೆಯಲುಸಾಧ್ಯವಿಲ್ಲದಿರುವಂತೆ ಈ ಅಗ್ನಿಯೂ ಕೂಡ ಭೀಷಣವಾದ ಕೊಂಬುಗಳಂತಿರುವ ತನ್ನ ಜ್ವಾಲೆಗಳನ್ನು ಹರಡಿ ಉರಿಯುತ್ತಿರುವಾಗ ಯಾರಿಂದಲೂ ತಡೆಯಲು ಸಾಧ್ಯವಿಲ್ಲ.

English Translation

He gets down among the bushes as if embellishing them (with his lustre), and rushes roaring like a bull amongst (a herd of) cows: thence increasing in intensity, he enhances (the fierceness) of his form, and is difficult to be arrested as a formidable (animal), when he brandishes his horns.

ವಿಶೇಷವಿಷಯಗಳು

ಈ ಋಕ್ಕಿನಲ್ಲಿ ಏಕಕಾಲದಲ್ಲಿ ರಮ್ಯವಾದುದೂ, ಭಯಂಕರವಾದುದೂ ಅಪ್ರತಿಹತವಾದ ಶಕ್ತಿಯುಳ್ಳದೂ ಆದ ಅಗ್ನಿಯ ಜ್ವಾಲೆಗಳ ಪ್ರಸರಣದ ವರ್ಣನೆಯಿದೆ. ಮೊದಲು ಕಂದುಬಣ್ಣದ ಪೊದೆಗಳಲ್ಲಿ ಆಕ್ರಮಿಸುವಾಗ

ಅಗ್ನಿಯ ಆಕರ್ಷಕವಾದ ಕಾಂತಿಯು ಪೊದೆಗಳಿಗೆ ಅಲಂಕಾರಪ್ರಾಯವಾಗಿದೆ. ಅನಂತರ ಪೊದೆಗಳ ದಹನದಿಂದ ತನ್ನ ಓಜಸ್ಸು ವೃದ್ಧಿಯಾದಾಗ ಭೀಷಣಾಕಾರವನ್ನು ಪಡೆದು ರೌದ್ರಸ್ವರೂಪವನ್ನು ಪ್ರಕಟಿಸುತ್ತಾನೆ. ಇದೇ ರೀತಿ, ಅಗ್ನಿಯ ನಾನಾರೂಪದ ವರ್ಣನೆಯು ಕಾಮ್ಯೇಷ್ಟಿಕಾಲಗಳಲ್ಲಿ ಪುರೋನುವಾಕ್ಯಗಳೊಡನೆ ಪಠಿಸಬೇಕಾದ ಮಂತ್ರಗಳಲ್ಲಿಯೂ ಅಗ್ನಿಯ ಮಹತ್ತ್ವವನ್ನು ಸ್ತುತಿಸುತ್ತವೆ. ತೈತ್ತಿರೀಯಸಂಹಿತೆಯಲ್ಲಿ ಕಾಮ್ಯೇಷ್ಟಿಕಾಂಡಾಂತರ್ಗತವಾದ ( ೨-೨-೨-೩ ರಿಂದ ೪ ) ಮಂತ್ರಗಳೊಡನೆ ಉದಾಹೃತವಾದ

**ಅಕ್ರಂದದಗ್ನಿಃ ಸ್ತನಯನ್ನಿವ ದ್ಯೌಃ ಕ್ಷಾಮಾ ರೇರಿಹದ್ವೀರುಧಃ ಸಮಂಜನ್ ।**
**ಸದ್ಯೋ ಜಜ್ಞಾನೋ ವಿ ಹೀಮಿದ್ಧೋ ಅಖ್ಯದಾ ರೋದಸೀ ಭಾನುನಾ ಭಾತ್ಯಂತಃ ।**
(ಋ. ಸಂ. ೧೦-೪೫ ೪) (ತೈ. ಸಂ. ೧-೩-೧೪)

ಇತ್ಯಾದಿ ಸಂಹಿತಾವಾಕ್ಯಗಳಲ್ಲಿಯೂ, ಮತ್ತು ಈ ದಾವಾಗ್ನಿಯನ್ನು ಸ್ತುತಿಸುವ ಮಂತ್ರದ ವರ್ಣನೆಯನ್ನು

**ಅಕ್ರಂದದಗ್ನಿಸ್ತನಯನ್ನಿವ ದ್ಯೌರಿತಿ । ಕ್ರಂದತೀವ ಹಿ ಪರ್ಜನ್ಯಸ್ತನಯನ್ ಕ್ಷಾಮಾ ರೇರಿಹದ್ವೀರುಧಃ ಸಮಂಜನ್ನಿತಿ ಕ್ಷಮಾ ವೈ ಪರ್ಜನ್ಯೋ ರೇರಿಹ್ಯಮಾಣೋ ವೀರುಧಃ ಸಮನಕ್ತಿ ಸದ್ಯೋಜಜ್ಞಾನೋ ವಿ ಹೀಮಿದ್ಧೋಽಖ್ಯದಿತಿ ಸದ್ಯೋ ವಾ ಏಷ ಜಜ್ಞಾನ ಇದಗ್ಂ ಸರ್ವಂ ವಿಖ್ಯಾಪಯತ್ಯಾ ರೋದಸೀ ಭಾನುನಾ ಭಾತ್ಯಂತರಿತೀಮೇ ವೈ ದ್ಯಾವಾಪೃಥಿವೀ ರೋದಸೀ ತೇ ಏಷ ಭಾನುನಾ ಭಾತಿ ।**

(ಶ. ಬ್ರಾ. ೬-೭-೩-೨)

ಎಂದು ವಿವರಿಸುವ ಬ್ರಾಹ್ಮಣವಾಕ್ಯಗಳಲ್ಲಿಯೂ ದಾವಾಗ್ನಿಯ ಸ್ವರೂಪವರ್ಣನೆಯು ವಿಶದವಾಗಿದೆ.

**ಬಭ್ರೂಷು**—ಬಭ್ರುವೆಂದರೆ ಕಂದುಬಣ್ಣ. ಈ ಬಣ್ಣವುಳ್ಳ ಪೊದೆಗಳಲ್ಲಿ ಎಂದರ್ಥ.

**ವೃಷಾಃ—ವೃಷನ್** ಶಬ್ದವು ಇಂದ್ರಾದಿದೇವತೆಗಳಿಗೆ ವಿಶೇಷಣವಾಗಿ ಇಷ್ಟಾರ್ಥಗಳನ್ನು ಪ್ರಭೂತವಾಗಿ ಸುರಿಸುವವರು ಎಂಬರ್ಥದಲ್ಲಿ ಪ್ರಯೋಗವಿರುವುದನ್ನು ಉದಾಹರಣೆಗಳೊಂದಿಗೆ ಹಿಂದೆಯೇ ತಿಳಿಸಿದೆ. ಪ್ರಕೃತವಾದ ಋಕ್ಕಿನಲ್ಲಿ ಆ ಅರ್ಥಕ್ಕೆ ಅವಕಾಶವಿಲ್ಲ. ಇಲ್ಲಿ ಕೇವಲ **ಪುಂಸ್ತ್ವಶಕ್ತಿ**ಯನ್ನು ತೋರಿಸುವ ಅರ್ಥವು ಮಾತ್ರ ಸಾಧ್ಯವಾಗುತ್ತದೆ. ಈ ಅರ್ಥವೂ ಪರಂಪರೆಯಾದುದು. ಆದುದರಿಂದ ಈ ಪದದ ಮೂಲಾರ್ಥವೇನು, **ಪುಂಸ್ತ್ವಶಕ್ತಿ** ಎಂಬರ್ಥವು ಹೇಗೆ ಸಾಧ್ಯ, ಈ ಪ್ರಯೋಗದ ವೈಶಿಷ್ಟ್ಯವೇನು ಎಂಬುದನ್ನು ವಿಮರ್ಶಿಸುವುದು ಅವಶ್ಯವಾಗಿರುತ್ತದೆ.

**ವೃಷಾಃ**—ಎಂಬ ಪದವು **ವೃಷು ಸೇಚನೇ; ವೃಷು ಶಕ್ತಿಬಂಧನೇ** ಎಂಬ ಎರಡು ಧಾತುಗಳಲ್ಲಿ **ಸುರಿಸು, ಚಿಮುಕಿಸು** ಎಂಬರ್ಥವನ್ನು ಕೊಡುವ **ವೃಷ** ಧಾತುವಿನಿಂದಾಗಲಿ, **ಶಕ್ತಿ** ಮತ್ತು **ಸಾಮರ್ಥ್ಯ** ಎಂಬರ್ಥವನ್ನು ಕೊಡುವ ಎರಡನೆಯ ಧಾತುವಿನಿಂದಾಗಲಿ ನಿಷ್ಪನ್ನವಾಗಬಹುದು. ಸೇಚನಸಾಮರ್ಥ್ಯವುಳ್ಳ **ಪುಮಾನ್** ಎಂಬರ್ಥದಲ್ಲಿರುವ ಪ್ರಯೋಗಗಳನ್ನು ಮಾತ್ರ ನಾವು ಪ್ರಕೃತದಲ್ಲಿ ವಿಮರ್ಶಿಸಬೇಕಾಗಿದೆ. **ಪುಲ್ಲಿಂಗ** ಸೂಚಕವಾಗಿ ಪುರುಷಪರ್ಯಾಯವಾಗಿಯಾಗಲಿ ಅಥವಾ ಅಶ್ವಾದಿ ಇತರ ಶಕ್ತಿಯುತಪ್ರಾಣಿಗಳ ಪರ್ಯಾಯವಾಗಿಯಾಗಲಿ ಸಾಧಾರಣವಾಗಿ ಈ ಪದವು ಉಪಯೋಗಿಸಲ್ಪಟ್ಟಿದೆ. ಅಷ್ಟೇ ಅಲ್ಲದೇ **ಪುಲ್ಲಿಂಗ**ಪರ್ಯಾಯವಾಗಿಯೇ ಅನೇಕಕಡೆ ಹೇಳಿದೆ. ಉದಾಹರಣೆಗೆ—

ಪ್ರೇಂಖಂ ಹೋತಾಧಿರೋಹತ್ಯೌದುಂಬರೀಮಾಸಂದೀಮುದ್ಗಾತಾ ವೃಷಾ ವೈ ಪ್ರೇಂಖೋ
ಯೋಷಾಸಂದೀ ತನ್ಮಿಥುನಂ ಮಿಥುನಮೇವ ತದುಕ್ಥಮುಖೇ ಕರೋತಿ ಪ್ರಜಾತ್ಯೈ ।
(ಐ. ಆರಣ್ಯಕಂ ೧-೨-೪.)

ಹೋತೃವು ಆಂದೋಲವನ್ನು (ಉಯ್ಯಾಲೆ), ಉದ್ಗಾತೃವು ಉದುಂಬರಾಸನವನ್ನು ಆರೋಹಣಮಾಡುತ್ತಾರೆ. ಆಂದೋಲವೇ ಪುಮಾನ್ (ವೃಷಾ), ಆಸಂದಿಯೇ ಸ್ತ್ರೀ (ಯೋಷಾ). ಪ್ರಜಾಕಾಮರಾದವರು ಮಂತ್ರಪಠನಕ್ಕೆ ಮೊದಲು ಈ ಸಂಗತಿಗಳನ್ನು ಪಡೆಯಬೇಕು ಎಂಬ ಐತರೇಯಾರಣ್ಯಕದ ವಾಕ್ಯದಲ್ಲೂ, ಅದರಂತೆಯೇ—

ಬ್ರಹ್ಮ ವೈ ಹಿಂಕಾರೋ ಬ್ರಹ್ಮೈತದಹರ್ಬ್ರಹ್ಮಣೈವ ತದ್ಬ್ರಹ್ಮ ಪ್ರತಿಪದ್ಯತೇ ಯ ಏವಂ ವೇದ ।
ಯದೇವ ಹಿಂಕಾರೇಣ ಪ್ರತಿಪದ್ಯತಾ ೩ ಇ ವೃಷಾ ವೈ ಹಿಂಕಾರೋ ಯೋಷರ್ಕ್ತನ್ಮಿಥುನಂ
ಮಿಥುನಮೇವ ತದುಕ್ಥಮುಖೇ ಕರೋತಿ ಪ್ರಜಾತ್ಯೈ ।
(ಐ. ಆ ೧-೩-೧)

ಹಿಂಕಾರವೇ ಪುಮಾನ್ (ವೃಷಾ), ಋಕ್ಕೇ ಸ್ತ್ರೀ. ಪ್ರಜಾಕಾಮನು ಈ ಮಿಥುನವನ್ನು ಸಂಪಾದಿಸಬೇಕು ಎಂಬ ವಾಕ್ಯದಲ್ಲೂ ಸಹ ವೃಷಾ ಎಂಬ ಪದವು ಪುಂಸ್ತ್ವ ಪರ್ಯಾಯವಾಗಿಯೇ ಇದೆ. ರೇತಸ್ಸನ್ನು ಚಿಮುಕಿಸುವ ಸಾಮರ್ಥ್ಯವುಳ್ಳ ವ್ಯಕ್ತಿಯೆಂದರ್ಥ. ಅದು ಮಾನವವ್ಯಕ್ತಿಯಾಗಬಹುದು ಅಥವಾ ಅಶ್ವಾದಿಪ್ರಾಣಿಗಳಾಗಬಹುದು. ಈ ಅರ್ಥದ ಆಧಾರದ ಮೇಲೆಯೇ ಅಶ್ವಾದಿಶಕ್ತಿಯುಕ್ತವಾದ ಪ್ರಾಣಿಗಳ ಪರ್ಯಾಯವಾಗಿಯೂ ಈ ಪದದ ಪ್ರಯೋಗವಿರುವುದನ್ನು ಗಮನಿಸಬಹುದು. ಋಕ್ಸಂಹಿತೆಯಲ್ಲಿಯೂ ಸಹ,

ಅಸಮಂ ಕ್ಷತ್ರಮಸಮಾ ಮನೀಷಾ ಪ್ರ ಸೋಮಪಾ ಅಪಸಾ ಸಂತು ನೇಮೇ ।
ಯೇ ತ ಇಂದ್ರ ದದುಷೋ ವರ್ಧಯಂತಿ ಮಹಿ ಕ್ಷತ್ರಂ ಸ್ಥವಿರಂ ವೃಷ್ಣ್ಯಂ ಚ ॥
(ಋ. ಸಂ. ೧-೫೪-೮)

ಎಂಬ ಋಕ್ಕಿನಲ್ಲಿ ವೃಷ್ಣ್ಯಂ ಎಂಬ ಪದಕ್ಕೆ ವೃಷತ್ವಂ ಸೇಚನಸಾಮರ್ಥ್ಯವುಳ್ಳ ಪುಂಸ್ತ್ವವೆಂದೂ,

ಪೂರ್ವೀರಹಂ ಶರದಃ ಶಶ್ರಮಾಣಾ ದೋಷಾ ವಸ್ತೋರುಷಸೋ ಜರಯಂತೀಃ ।
ಮಿನಾತಿ ಶ್ರಿಯಂ ಜರಿಮಾ ತನೂನಾಮಪ್ಯೂ ನು ಪತ್ನೀರ್ವೃಷಣೋ ಜಗಮ್ಯುಃ ॥
(ಪಾ. ಸೂ. ೧-೧೭೯-೧)

ಎಂಬ ಋಕ್ಕಿನಲ್ಲಿ ವೃಷಣಃ ಎಂಬುದಕ್ಕೆ ಸೇಕ್ತಾರಃ ಪುರುಷಾಃ ಎಂದೂ ಇನ್ನೂ ಬೇರೆಯೇ ಅನೇಕ ಕಡೆಗಳಲ್ಲಿ ಇದರಂತೆಯೇ ಪುಲ್ಲಿಂಗಸೂಚಕವಾದುದೂ ಪುರುಷಪ್ರಾಣಿಯ ಶಕ್ತಿಯನ್ನು ತೋರಿಸತಕ್ಕದ್ದೂ ಆದ ಅರ್ಥಗಳಲ್ಲಿ ಈ ಪದದ ಪ್ರಯೋಗವಿದೆ. ಮತ್ತು

ಮಹಾಁ ಅಸಿ ಮಹಿಷ ವೃಷ್ಣ್ಯೇಭಿರ್ಧನಸ್ಪೃದುಗ್ರ ಸಹಮಾನೋ ಅನ್ಯಾನ್ ।
ಏಕೋ ವಿಶ್ವಸ್ಯ ಭುವನಸ್ಯ ರಾಜಾ ಸ ಯೋಧಯಾ ಚ ಕ್ಷಯಯಾ ಚ ಜನಾನ್ ।
(ಋ. ಸಂ. ೩-೪೬-೨)

**ವ್ಯಸ್ತಭ್ನಾದ್ರೋದಸೀ ಮಿತ್ರೋ ಅದ್ಭುತೋಽಂತರ್ವಾವದಕೃಣೋಜ್ಜ್ಯೋತಿಷಾ ತಮಃ ।**
**ವಿ ಚರ್ಮಣೀವ ಧಿಷಣೇ ಅವರ್ತಯದ್ವೈಶ್ವಾನರೋ ವಿಶ್ವಮಧತ್ತ ವೃಷ್ಣ್ಯಂ ।**
(ಋ. ಸಂ. ೬-೮-೩)

ಇತ್ಯಾದಿ ನಾನಾ ಋಕ್ಕುಗಳಲ್ಲಿ **ವೃಷ್ಣ್ಯ** ಶಬ್ದಕ್ಕೆ ವೀರ್ಯ ಮತ್ತು ಪರಾಕ್ರಮ ಎಂಬ ಅರ್ಥವು ಸಾಧಾರಣವಾಗಿದೆ. ಪ್ರಕೃತವಾದ ಋಕ್ಕಿನಲ್ಲಿ ಅಗ್ನಿಯ ಪ್ರಸರಣವನ್ನು, ಸ್ತ್ರೀಗೋವುಗಳ ಗುಂಪಿನಲ್ಲಿ ಮುನ್ನುಗ್ಗುತ್ತಿರುವ ಗೂಳಿಗಳ ವೇಗಕ್ಕೂ ಉತ್ಸಾಹಕ್ಕೂ ಹೋಲಿಸಿರುವುದರಿಂದ ಇಲ್ಲಿ ಅಪ್ರತಿಹತವಾದ ಶಕ್ತಿಯೆಂದೇ ಅರ್ಥಮಾಡಬೇಕು. ಇಲ್ಲಿ ಪೊದೆಗಳನ್ನು ಪತ್ನಿಗಳಿಗೂ ಅಗ್ನಿಯನ್ನು ಪತಿಗೂ ಹೋಲಿಸಿದೆ. ಪೊದೆಗಳಲ್ಲಿ ಅಗ್ನಿಯ ಆಕ್ರಮಣವು ಪತಿಪತ್ನಿಯರ ಸಂಸರ್ಗದಂತೆ ಅಲಂಕಾರಪ್ರಾಯವಾಗಿದೆಯೆಂದು ಹೇಳಲು **ಭೂಷನ್ ಅಧಿನಮ್ನುತೇ** ಎಂದು ವರ್ಣಿಸಿದೆ.

**ಶುಂಭತೇ**—ದೀಪ್ತ್ಯರ್ಥಕವಾದ **ಶುಭ್** ಧಾತುವಿನಿಂದಾಗಲಿ ಅಥವಾ ಹಿಂಸಾರ್ಥಕವಾದ **ಶುಂಭ್** ಧಾತುವಿನಿಂದಾಗಲಿ ಈ ಪದವು ನಿಷ್ಪನ್ನವಾಗಬಹುದು. ಆದರೆ ಇಲ್ಲಿ ಎರಡನೆಯ ಅರ್ಥಕ್ಕೆ ಕಾರಣವಿಲ್ಲ.

**ವ್ಯಚಸ್ವತೀರುರ್ವಿಯಾ ವಿ ಶ್ರಯಂತಾಂ ಪತಿಭ್ಯೋ ನ ಜನಯಃ ಶುಂಭಮಾನಾಃ ।**
**ದೇವೀರ್ದ್ವಾರೋ ಬೃಹತೀರ್ವಿಶ್ವಮಿನ್ವಾ ದೇವೇಭ್ಯೋ ಭವತ ಸುಪ್ರಾಯಣಾಃ ।**
(ಋ. ಸಂ. ೧೦-೧೧೦-೫)

ಎಂಬ ಋಕ್ಕನ್ನುದಹರಿಸಿ ನಿರುಕ್ತಕಾರರು **ಶುಂಭಮಾನಾಃ** ಎಂದರೆ **ಶೋಭಮಾನಾಃ** ಎಂದರ್ಥಮಾಡಿರುವಂತೆ (ನಿ. ೮-೧೦-) ಇಲ್ಲಿಯೂ ಸಹ **ದೀಪಯತಿ** ಪ್ರಕಾಶಿಸುವಂತೆ ಮಾಡುತ್ತಾನೆ ಎಂದರ್ಥ.

**ದುರ್ಗೃಭಿಃ**—**ಕೇನಚಿದಪಿ ಗ್ರಹೀತುಮಶಕ್ಯಃ।** ಯಾರಿಂದಲೂ ತಡೆದು ನಿಲ್ಲಿಸಲು ಸಾಧ್ಯವಿಲ್ಲದ ಅಪ್ರತಿಹತವಾದ ಶಕ್ತಿಯೊಡಗೂಡಿ ಎಂದರ್ಥ. ಇದರಂತೆಯೇ ಅಗ್ನಿಯ ಅಪ್ರತಿಹತವಾದ ಶಕ್ತಿಯನ್ನು

**ಉತ ಸ್ಮ ದುರ್ಗೃಭೀಯಸೇ ಪುತ್ರೋ ನ ಹ್ವಾರ್ಯಾಣಾಂ ।**
**ಪುರೂ ಯೋ ದಗ್ಧಾಸಿ ವನಾಗ್ನೇ ಪಶುರ್ನ ಯವಸೇ ॥**
(ಋ. ಸಂ. ೫-೯-೪)

ಎಂಬ ಋಕ್ಕಿನಲ್ಲಿಯೂ **ದುರ್ಗೃಭೀಯಸೇ** ಎಂಬ ಪದದಿಂದಲೇ ವರ್ಣಿಸಿದೆ.

**ದವಿಧಾವ**—**ಅತ್ಯರ್ಥಂ ಚಾಲಯತಿ ।** ಅಗ್ನಿಯ ಭೀತಿಜನಕವಾದ ಚಾಲನವೂ ಕಂಪನವೂ ವೇಗವಾದ ಪ್ರಸರಣವೂ ಈ ಪದದಿಂದ ಸೂಚಿತವಾಗಿವೆ.

ವ್ಯಾಕರಣಪ್ರಕ್ರಿಯಾ

**ಭೂಷನ್**—ಭೂಷ ಅಲಂಕಾರೇ ಧಾತು. ಲಡರ್ಥದಲ್ಲಿ ಶತೃಪ್ರತ್ಯಯ. ಅದುಪದೇಶದ ಪರದಲ್ಲಿ ಲಸಾರ್ವಧಾತುಕ ಬಂದುದರಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಬಭ್ರೂಷು**—**ಅಪ್ರಾಣಿಜಾತೇಶ್ಚ ಅರಜ್ವಾದೀನಾಮುಪಸಂಖ್ಯಾನಮ್** (ಪಾ. ಸೂ. ೪-೧-೬೬-೧) ಎಂಬುದರಿಂದ ಊಙ್ ಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಸಪ್ತಮೀ ಬಹುವಚನಾಂತರೂಪ

**ನನ್ನತೇ**—ಣಮು ಪ್ರಹ್ವತ್ವೇ ಶಬ್ದೇ ಚ. ಧಾತು. **ಣೋನಃ** ಎಂಬುದರಿಂದ ಆದಿಗೆ ನತ್ವ. ಲೇಟ್ ಪ್ರಥಮಪುರುಷ ಏಕವಚನದಲ್ಲಿ ತಪ್ರತ್ಯಯ. ಟಿಗೆ ಏತ್ವ. **ಲೇಟೋಽಡಾಟೌ** (ಪಾ. ಸೂ. ೩-೪-೯೪) ಎಂಬುದರಿಂದ ಅಡಾಗಮ. **ವ್ಯತ್ಯಯೋ ಬಹುಲಮ್** (ಪಾ. ಸೂ. ೩-೧-೮೫) ಎಂಬುದರಿಂದ ಶ್ನಾವಿಕರಣ. ಆತ್ಮನೇಪದ ಪ್ರತ್ಯಯಕ್ಕೆ ಙಿತ್ತ್ವವಿರುವುದರಿಂದ **ಶ್ನಾಭ್ಯಸ್ತಯೋರಾತಃ** ಎಂಬುದರಿಂದ ಆಕಾರಕ್ಕೆ ಲೋಪ. ಅಥವಾ ಲಟಿನಲ್ಲಿಯೇ ಛಾಂದಸವಾಗಿ ಶಪಿಗೆ ಶ್ಲು ಆದೇಶ. **ಶ್ಲೌ** ಎಂಬುದರಿಂದ ಧಾತುವಿಗೆ ದ್ವಿತ್ವ. ವ್ಯತ್ಯಯದಿಂದ **ಹಲಾದಿಶೇಷಃ** ಎಂಬುದು ಪ್ರವರ್ತಿಸುವುದಿಲ್ಲ. **ಅನುದಾತ್ತೋಪದೇಶ**—(ಪಾ. ಸೂ. ೬-೪-೩೭) ಎಂಬುದರಿಂದ ಧಾತುವಿನ ಅನುನಾಸಿಕವಾದ ಮಕಾರಕ್ಕೆ ಲೋಪ. ಯಃ ಎಂದು ಹಿಂದೆ ಯಚ್ಛಬ್ದ ಸಂಬಂಧವಿರುವುದರಿಂದ **ಯದ್ವೃತ್ತಾನ್ನಿತ್ಯಮ್** (ಪಾ. ಸೂ. ೮-೧-೬೬) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ. ಅದುಪದೇಶದ ಪರದಲ್ಲಿರುವುದರಿಂದ ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಪತ್ನೀಃ**—**ಪತ್ಯುರ್ನೋ ಯಜ್ಞಸಂಯೋಗೇ** ಎಂಬುದರಿಂದ ಙೀಪ್. ತತ್ಸನ್ನಿಯೋಗದಿಂದ ನಕಾರಾದೇಶ. ದ್ವಿತೀಯಾ ಬಹುವಚನಾಂತರೂಪ.

**ರೋರುವತ್**—ರು ಶಬ್ದೇ ಧಾತು. ಭೃಶಾರ್ಥದಲ್ಲಿರುವಾಗ **ಧಾತೋರೇಕಾಚೋ**—(ಪಾ. ಸೂ. ೩-೧-೨೨) ಎಂಬುದರಿಂದ ಯಙ್. **ಯಙೋಽಚಿ ಚ** ಸೂತ್ರದಿಂದ ಅದಕ್ಕೆ ಲುಕ್. ಧಾತುವಿಗೆ ದ್ವಿತ್ವಾದಿಗಳು ಬಂದಾಗ **ಗುಣೋ ಯಙ್ಲುಕೋಃ** (ಪಾ. ಸೂ. ೭-೪-೮೨) ಎಂಬುದರಿಂದ ಅಭ್ಯಾಸಕ್ಕೆ ಗುಣ. ಯಙ್ಲುಗಂತದ ಮೇಲೆ ಲಡರ್ಥದಲ್ಲಿ ಶತೃ ಪ್ರತ್ಯಯ. **ಅಚಿಶ್ನುಧಾತುಭ್ರುವಾಂ**—ಎಂಬುದರಿಂದ ಉವಙಾದೇಶ. **ಅಭ್ಯಸ್ತಾನಾಮಾದಿಃ** (ಪಾ. ಸೂ. ೬-೧-೧೮೯) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಓಜಾಯಮಾನಃ**—ಓಜಃ ಇವ ಆಚರನ್ ಓಜಾಯಮಾನಃ **ಕರ್ತುಃ ಕ್ಯಙ್ ಸಲೋಪಶ್ಚ**—(ಪಾ. ಸೂ. ೩-೧-೧೧) ಎಂಬುದರಿಂದ ಆಚಾರಾರ್ಥದಲ್ಲಿ ಕ್ಯಙ್ ಪ್ರತ್ಯಯ. ತತ್ಸನ್ನಿಯೋಗದಿಂದ ಸಕಾರಲೋಪ. **ಸನಾದ್ಯಂತಾ ಧಾತವಃ**—ಎಂಬುದರಿಂದ ಕ್ಯಙಂತಕ್ಕೆ ಧಾತುಸಂಜ್ಞಾ ಬರುತ್ತದೆ. ಇದರ ಮೇಲೆ ಲಡರ್ಥದಲ್ಲಿ ಶಾನಚ್ ಪ್ರತ್ಯಯ. ಶಪ್ ವಿಕರಣ. **ಆನೇ ಮುಕ್**—(ಪಾ. ಸೂ. ೭-೨-೮೨) ಎಂಬುದರಿಂದ ಅದಂತಾಂಗಕ್ಕೆ ಮುಕಾಗಮ. ಲಸಾರ್ವಧಾತುಕವು **ತಾಸ್ಯನುದಾತ್ತೇತ್**—ಸೂತ್ರದಿಂದ ಅನುದಾತ್ತವಾಗುವುದರಿಂದ ಕ್ಯಙ್ಸ್ವರ ಉಳಿಯುತ್ತದೆ.

**ತನ್ವಃ**—**ತನ್ವಾದೀನಾಂ ಛಂದಸ್ಯುಪಸಂಖ್ಯಾನಮ್**—ಎಂಬ ವಚನದಿಂದ ಯಣಾದೇಶ. ಉದಾತ್ತಸ್ಥಾನದಲ್ಲಿ ಯಣಾದೇಶ ಬಂದು ಅದರ ಪರದಲ್ಲಿ ವಿಭಕ್ತಿ ಬಂದುದರಿಂದ **ಉದಾತ್ತಸ್ವರಿತಯೋರ್ಯಣಃ**—(ಪಾ. ಸೂ. ೮-೨-೪) ಎಂಬುದರಿಂದ ಸ್ವರಿತಸ್ವರ ಬರುತ್ತದೆ.

**ಶುಮ್ಭತೇ**—ಶುಂಭ ಶೋಭಾರ್ಥೇ (ಭಾಸನೇ) ಧಾತು. ಲಟ್ ಪ್ರಥಮಪುರುಷ ಏಕವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಭೀಮಃ**—ಞಿಭೀ ಭಯೇ. ಬಿಭೇತಿ ಅಸ್ಮಾತ್ ಇತಿ ಭೀಮಃ **ಭೀಮಾದಯೋಽಪಾದಾನೇ**—(ಪಾ. ಸೂ. ೩-೪-೭೪) ಎಂಬುದರಿಂದ ಮಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಶೃಂಗಾ**—ಶೃಂಗಾಣಿ ಎಂದು ರೂಪವಾದಾಗ **ಶೇಶ್ಛಂದಸಿ ಬಹುಲಮ್**—(ಪಾ. ಸೂ. ೬-೧-೭೦) ಎಂಬುದರಿಂದ ಶಿಗೆ ಲೋಪ.

ದವಿಧಾವ—ಧೂಞ್ ಕಂಪನೇ ಧಾತು. ಅತಿಶಯಾರ್ಥ ತೋರುವಾಗ ಇದಕ್ಕೆ **ಧಾತೋರೇಕಾಚಃ**— (ಪಾ. ಸೂ. ೩-೧-೨೨) ಎಂಬುದರಿಂದ ಯಙ್ **ಯಙೋಚಿಚ**—ಎಂಬುದರಿಂದ ಅದಕ್ಕೆ ಲುಕ್. ಯಙ್‌ಲುಗಂತದ ಮೇಲೆ ಲಿಟ್ ಬಂದಾಗ ದವಿಧಾವ ಎಂದು ರೂಪವಾಗುತ್ತದೆ. ತಿಙಂತಸ್ವರ ಬರುತ್ತದೆ ॥ ೬ ॥

———:o:———

**ಸಂಹಿತಾಪಾಠಃ**

ಸ ಸಂಸ್ತಿರೋ ವಿಷ್ಟಿರಃ ಸಂ ಗೃಭಾಯತಿ ಜಾನನ್ನೇವ ಜಾನತೀರ್ನಿತ್ಯ ಆ ಶಯೇ ।

ಪುನರ್ವರ್ಧಂತೇ ಅಪಿ ಯಂತಿ ದೇವ್ಯಮನ್ಯದ್ವರ್ಪಃ ಪಿತ್ರೋಃ ಕೃಣ್ವತೇ ಸಚಾ ॥ ೭ ॥

**ಪದಪಾಠಃ**

ಸಃ। ಸಂಽಸ್ತಿರಃ। ವಿಽಸ್ತಿರಃ । ಸಂ । ಗೃಭಾಯತಿ । ಜಾನನ್ । ಏವ । ಜಾನತೀಃ । ನಿತ್ಯಃ । ಆ । ಶಯೇ ।

ಪುನಃ । ವರ್ಧಂತೇ । ಅಪಿ । ಯಂತಿ । ದೇವ್ಯಂ । ಅನ್ಯತ್ । ವರ್ಪಃ । ಪಿತ್ರೋಃ । ಕೃಣ್ವತೇ । ಸಚಾ ॥೭॥

**ಸಾಯಣಭಾಷ್ಯಂ**

ಸೋಽಗ್ನಿಃ ಸಂಸ್ತಿರ ಆಚ್ಛನ್ನಃ ॥ ಸಂಪೂರ್ವಾತ್ಸ್ತೃಣಾತೇರ್ಮೂಲವಿಭುಜಾದಿತ್ವಾತ್ಕಪ್ರತ್ಯಯಃ। ಪಾ ೩-೨-೫-೨ । ಪರಾದಿಶ್ಛಂದಸಿ ಬಹುಲಮಿತ್ಯುತ್ತರಪದಾದ್ಯುದಾತ್ತತ್ವಂ ॥ ತಥಾ ವಿಸ್ತಿರಃ ಕದಾಚಿದ್ವಿಸ್ತೀರ್ಣಃ ಸನ್ ಸಂ ಗೃಭಾಯತಿ। ಸಂಗೃಹ್ಣಾತ್ಯೋಷಧೀಃ । ಕಿಂಚಾಯಂ ಜಾನನ್ನೇವ ಯಜಮಾನಾರ್ಥಂ ಪ್ರವೃದ್ಧೇನ ಭವಿತವ್ಯಂ ಅತೋ ಜ್ವಾಲಾಭಿಃ ಸಂಯೋಜ್ಯ ಇತ್ಯಧಿಗಚ್ಛನ್ನೇವ ಜಾನತೀರ್ಯಜಮಾನಾರ್ಥಂ ಪ್ರವೃದ್ಧಾಭಿರ್ಭವಿತವ್ಯಮಿತ್ಯವಗಚ್ಛಂತೀರ್ಜ್ವಾಲಾ ನಿತ್ಯೋಽವಿಚ್ಛಿನ್ನಃ ಸನ್ನಾ ಶಯೇ । ಆಶೇತೇ । ಆಶ್ರಯತೀತ್ಯರ್ಥಃ ॥ ಲೋಪಸ್ತ ಆತ್ಮನೇಪದೇಷ್ವಿತಿ ತಲೋಪಃ ॥ ಏವಂಭೂತಜ್ವಾಲಾಃ ಪುನಃ ಪೂರ್ವಂ। ಪ್ರವೃದ್ಧಾ ಏವ ಪುನರಪಿ ಯಾಗಯೋಗ್ಯಾ ಯಥಾ ಭವಂತಿ ತಥಾ ವರ್ಧಂತೇ । ದೇವ್ಯಂ ಯಾಗಾದಿ ವ್ಯವಹಾರಯೋಗ್ಯಂ ಸ್ತುತ್ಯಂ ವಾಗ್ನಿಮಪಿ ಯಂತಿ । ಪ್ರಾಪ್ನುವಂತಿ । ಯದ್ಯಪ್ಯಗ್ನಿಜ್ವಾಲಯೋರೇಕತ್ವಂ ತಥಾಪಿ ರಾಹೋಃ ಶಿರ ಇತಿವದೌಪಚಾರಿಕೋ ಗಂತೃಗಂತವ್ಯಭಾವಃ । ಕಿಂಚೈವಂ ಪ್ರವೃದ್ಧಾ ಜ್ವಾಲಾ ಓಷಧಯೋ ವಾ ಸಚಾಗ್ನಿನಾ ಸಹ ಪಿತ್ರೋರ್ಜಗತ್ಪಾಲಯಿತ್ರೋಸ್ತಾಭ್ಯಾಂ ಸಂಭೂಯ ದ್ಯಾವಾಪೃಥಿವ್ಯೋರನ್ಯತ್ಪೂರ್ವಮವಿದ್ಯಮಾನಂ ತೇಜೋಮಯಂ ವರ್ಪೋ ರೂಪಂ ಕೃಣ್ವತೇ । ಕುರ್ವಂತಿ । ಲೋಕದ್ವಯಂ ಸ್ಪೃಶಂತೀತ್ಯರ್ಥಃ ॥

ಪ್ರತಿಪದಾರ್ಥ

**ಸಃ**—ಅಗ್ನಿಯು । **ಸಂಸ್ತಿರಃ**—(ಒಂದೊಂದು ಸಲ) ಮರೆಸಿಕೊಂಡವನಾಗಿಯೂ, । **ವಿಸ್ತಿರಃ**—(ಕೆಲವು ಸಲ) ವಿಸ್ತಾರವಾಗಿ ಗೋಚರನಾಗಿಯೂ । **ಸಂಗೃಭಾಯತಿ**—(ಪೊದೆಗಳನ್ನು) ಆಕ್ರಮಿಸಿ ಹಿಡಿದುಕೊಳ್ಳುತ್ತಾನೆ. (ಮತ್ತು) **ಜಾನನ್ನೇವ**—(ಯಜಮಾನನಿಗಾಗಿ ವೃದ್ಧನಾಗಬೇಕು) ಎಂದು ತಿಳಿದುಕೊಂಡೇನೆ **ಜಾನತೀಃ**—ಹೀಗೆಯೇ ತಿಳಿದಿರುವ ಜ್ವಾಲೆಗಳನ್ನು । **ನಿತ್ಯಃ**—ಅವಿಚ್ಛಿನ್ನನಾಗಿ । **ಆ ಶಯೇ**—ಆಶ್ರಯಿಸಿ ಹರಡುತ್ತಾನೆ । **ಪುನಃ**—(ಪೊದೆಗಳಲ್ಲಿ ಪ್ರವೃದ್ಧಗಳಾಗಿದ್ದರೂ ಸಹ) ತಿರುಗಿಯೂ । **ವರ್ಧಂತೇ**—(ಈ ಜ್ವಾಲೆಗಳು) ವೃದ್ಧಿಯಾಗಿ ಬೆಳೆಯುತ್ತವೆ. । **ದೇವ್ಯಂ**—(ಯಾಗಾದಿಗಳಿಗೆ ಉಪಯುಕ್ತವಾಗಿ) ಪೂಜ್ಯನಾದ ಅಗ್ನಿಯನ್ನು । **ಅಪಿ ಯಂತಿ**—ಹೋಗಿ ಸೇರಿಕೊಳ್ಳುತ್ತವೆ. । **ಸಚಾ**—ಈ ಯಾಗಾಗ್ನಿಯೊಡನೆ (ಸೇರಿಕೊಂಡು) । **ಪಿತ್ರೋಃ**—ತಮ್ಮ ಪಿತೃಗಳಾದ ಅಥವಾ (ಜಗತ್ತನ್ನು) ಪಾಲಿಸುವ ದ್ಯಾವಾಪೃಥಿವಿಗಳಿಗೆ । **ಅನ್ಯತ್**—ಹಿಂದಿಲ್ಲದಿರುವ ಅಪೂರ್ವವಾದ । **ವರ್ಣಃ**—(ತೇಜೋಮಯವಾದ) ರೂಪವನ್ನು । **ಕೃಣ್ವತೇ**—ಉಂಟುಮಾಡುತ್ತವೆ

॥ ಭಾವಾರ್ಥ ॥

ಅಗ್ನಿಯು ಒಂದೊಂದು ಸಲ ಮರೆಸಿಕೊಂಡವನಾಗಿಯೂ, ಒಂದೊಂದು ಸಲ ವಿಸ್ತಾರವಾಗಿ ಗೋಚರನಾಗಿಯೂ ಪೊದೆಗಳನ್ನು ಆಕ್ರಮಿಸಿ ಹಿಡಿದುಕೊಳ್ಳುತ್ತಾನೆ. ಮತ್ತು ಯಜಮಾನನಿಗಾಗಿ ತಾನು ವೃದ್ಧನಾಗಬೇಕು ಎಂದು ತಿಳಿದುಕೊಂಡು ಹೀಗೆಯೇ ತಿಳಿದಿರುವ ಜ್ವಾಲೆಗಳನ್ನು ಅವಿಚ್ಛಿನ್ನನಾಗಿ ಆಶ್ರಯಿಸಿ ಹರಡುತ್ತಾನೆ. ಪೊದೆಗಳಲ್ಲಿ ಬೆಳೆದಿದ್ದರೂ ಸಹ ಈ ಜ್ವಾಲೆಗಳು ಯಜಮಾನನಿಗಾಗಿ ಪುನಃ ಹರಡಿ ಬೆಳೆಯುತ್ತವೆ. ಮತ್ತು ಯಾಗಾದಿಗಳಿಗೆ ಉಪಯುಕ್ತನಾದುದೂ ಪೂಜ್ಯವಾದುದೂ ಆದ ಅಗ್ನಿಯನ್ನು ಹೋಗಿ ಸೇರಿಕೊಳ್ಳುತ್ತವೆ. ಈ ಯಾಗಾಗ್ನಿಯೊಡನೆ ಸೇರಿಕೊಂಡು ತಮ್ಮ ಪಿತೃಗಳೂ ಜಗತ್ಪಾಲಕರೂ ಆದ ದ್ಯಾವಾಪೃಥಿವಿಗಳೆರಡನ್ನೂ ಆಕ್ರಮಿಸಿ ಅವಕ್ಕೆ ಹಿಂದೆಂದೂ ಇಲ್ಲದಿರುವ ತೇಜೋಮಯವಾದ ರೂಪವನ್ನುಂಟುಮಾಡುತ್ತವೆ.

English Translation

Now hidden, now displayed, he seizes (on the fuel), as if understanding (the purpose of the worshipper), and even reposes amidst the conscious (flames): again they break forth, and repair to the divine (fire of sacrifice) blending with which they give a different (luminous) form to their parents (heaven and earth).

ವಿಶೇಷವಿಷಯಗಳು

ಹಿಂದಿನ ಋಕ್ಕಿನಲ್ಲಿ **ದುರ್ಗೃಭಿಃ** ಎಂಬ ವಿಶೇಷಣದಿಂದ ಅಗ್ನಿಯ ಅಪ್ರತಿಹತವಾದ ಶಕ್ತಿಯು ತೋರುತ್ತದೆ. ಇಲ್ಲಿ **ಸಂಗೃಭಾಯತಿ** ಎಂಬ ಪದದಿಂದ ತಡೆಯಿಲ್ಲದ ಪ್ರಸರಣವು ಸೂಚಿತವಾಗಿದೆ. ಈ ಪ್ರಸರಣದ ಕ್ರಮವನ್ನು **ಸಂಸ್ತಿರಃ**; ವಿಸ್ತಿರಃ ಎಂಬ ವಿಶೇಷಣಗಳಿಂದ ವಿವರಿಸಿದೆ.

**ಜಾನನ್ನೇವ—ಯಜಮಾನಾರ್ಥಂ ಪ್ರವೃದ್ಧೇನ ಭವಿತವ್ಯಂ ಅತೋ ಜ್ವಾಲಾಭಿಸ್ಸಂಯೋಜ್ಯಃ** ಇತ್ಯಭಿಗಚ್ಛನ್ನೇವ । ಯಜಮಾನನಿಗಾಗಿ ತಾನು ಪ್ರವೃದ್ಧನಾಗಿ ಯಜ್ಞಕಾರ್ಯಕ್ಕೆ ಅನುಕೂಲನಾಗಬೇಕು ಎಂದು ತಿಳಿದುಕೊಂಡು ವೃದ್ಧನಾಗಿ ಬೆಳೆಯುತ್ತಾನೆ ಎಂದು ತಾತ್ಪರ್ಯ.

ಜನಸ್ಯ ಗೋಪಾ ಅಜನಿಷ್ಟ ಜಾಗೃವಿರಗ್ನಿಃ ಸುದಕ್ಷಃ ಸುವಿತಾಯ ನವ್ಯಸೇ ।
ಘೃತಪ್ರತೀಕೋ ಬೃಹತಾ ದಿವಿಸ್ಪೃಶಾ ದ್ಯುಮದ್ವಿಭಾತಿ ಭರತೇಭ್ಯಃಶುಚಿಃ ।
(ಋ. ಸಂ. ೫-೧೧-೧) (ತೈ. ಸಂ. ೪-೪-೪)

ಇತ್ಯಾದಿ ವಾಕ್ಯಗಳಲ್ಲಿ ವರ್ಣಿಸಿರುವಂತೆ ಇಲ್ಲಿಯೂ ಅಗ್ನಿಯ ಅನುಕೂಲಿಕವಾದ ವೃದ್ಧಿಯನ್ನು ಸ್ತುತಿಸಿದೆ

ಪಿತ್ರೋಃ—ಜಗತ್ಪಾಲಯಿತ್ರೋಃ । ಜಗತ್ಪಾಲಕರಾದ ದ್ಯಾವಾಪೃಥಿಗಳಿಗೆ ಅಥವಾ ತನ್ನ ಪಿತೃಗಳಾದ ದ್ಯಾವಾಪೃಥಿಗಳಿಗೆ.

ಉತ ಮನ್ಯೇ ಪಿತುರದ್ರುಹೋ ಮನೋ ಮಾತುರ್ಮಹಿ ಸ್ವತವಸ್ತದ್ಧವೀಮಭಿಃ ।
ಸುರೇತಸಾ ಪಿತರಾ ಭೂಮ ಚಕ್ರತುರುರು ಪ್ರಜಾಯಾ ಅಮೃತಂ ವರೀಮಭಿಃ ॥
(ಋ. ಸಂ. ೧-೧೫೯-೨)

ಇತ್ಯಾದ್ಯನೇಕ ಋಕ್ಕುಗಳಲ್ಲಿ ದ್ಯಾವಾಪೃಥಿವಿಗಳು ಜಗತ್ಪಿತೃಗಳೆಂದು ಹೇಳಿರುವುದರಿಂದ ಮೊದಲನೆಯ ಅರ್ಥವನ್ನೂ. ಮತ್ತು,

ಸ ರೋಚಯಜ್ಜನುಷಾ ರೋದಸೀ ಉಭೇ ಸ ಮಾತ್ರೋರಭವತ್ಪುತ್ರ ಈಡ್ಯಃ ।
ಹವ್ಯವಾಳಗ್ನಿರಜರಶ್ಚನೋಹಿತೋ ದೂಳಭೋ ವಿಶಾಮತಿಥಿರ್ವಿಭಾವಸುಃ ॥
(ಋ. ಸಂ. ೩-೨-೨)

ಅಗ್ನೇ ದಿವಃ ಸೂನುರಸಿ ಪ್ರಚೇತಾಸ್ತನಾ ಪೃಥಿವ್ಯಾ ಉತ ವಿಶ್ವವೇದಾಃ ।
ಋಧಗ್ದೇವಾँ ಇಹ ಯಜಾ ಚಿಕಿತ್ವಃ ॥
(ಋ. ಸಂ. ೩-೨೫-೧)

ಎಂಬ ಋಕ್ಕುಗಳಲ್ಲಿ ಅಗ್ನಿಯು ದ್ಯಾವಾಪೃಥಿವಿಗಳ ಪುತ್ರನೆಂದು ಹೇಳಿರುವುದರಿಂದ ಎರಡನೆಯ ಅರ್ಥವನ್ನು ಹೇಳಬಹುದು ಇದೇ ಭಾವವನ್ನು

ಸ ಜಾತೋ ಗರ್ಭೋ ಅಸಿ ರೋದಸ್ಯೋರಗ್ನೇ ಚಾರುರ್ವಿಭೃತ ಓಷಧೀಷು ।
ಚಿತ್ರಃ ಶಿಶುಃ ಪರಿ ತಮಾಂಸ್ಯಕ್ತೂನ್ಪ್ರ ಮಾತೃಭ್ಯೋ ಅಧಿ ಕನಿಕ್ರದದ್ಗಾಃ ॥
(ಋ. ಸಂ. ೧೦-೧-೨)

ಎಂಬ ಋಕ್ಕಿನಲ್ಲೂ ಹೇಳಿದೆ ಮತ್ತು ತೈತ್ತಿರೀಯ ಸಂಹಿತೆಯಲ್ಲೂ ಸಹ ಈ ಋಕ್ಕು ಉದಾಹೃತವಾಗಿ ಅಗ್ನಿಯನ್ನು ಸ್ತುತಿಸಿದೆ. (ತೈ. ಸಂ. ೪-೧-೪).

ಅನ್ಯತ್ ವರ್ಪ ಕೃಣ್ವತೇ । ಹಿಂದಿಲ್ಲದಿರುವ ಅಪೂರ್ವವಾದ ರೂಪವನ್ನುಂಟುಮಾಡುತ್ತದೆಂದರ್ಥ. ಮಂತ್ರಸಂಸ್ಕೃತವಾದ ಅಗ್ನಿಯ ತೇಜಸ್ಸು ಅತಿಶಯವಾದ ವೈಶಿಷ್ಟ್ಯವನ್ನು ಹೊಂದಿ ಯಜ್ಞಭೂಮಿಯನ್ನಲಂಕರಿಸುತ್ತದೆಂದರ್ಥ.

ವ್ಯಾಕರಣಪ್ರಕ್ರಿಯಾ

ಸಂಸ್ತಿರಃ—ಸ್ತೃಞ್ ಆಚ್ಛಾದನೇ. ಧಾತು. ಸಮ್ ಉಪಸರ್ಗಪೂರ್ವದಲ್ಲಿರುವಾಗ **ಕ ಪ್ರಕರಣೇ ಮೂಲವಿಭುಜಾದೀನಾಮುಪಸಂಖ್ಯಾನಮ್**—(ಪಾ. ಸೂ. ೩-೨-೫-೩) ಎಂಬ ವಚನದಿಂದ ಕಪ್ರತ್ಯಯ.

ಋತ ಇದ್ಧಾತೋಃ—(ಪಾ. ಸೂ. ೭-೧-೧೦೦) ಎಂಬುದರಿಂದ ಧಾತುವಿಗೆ ಇತ್ವ. ಸಂಸ್ತಿರ ಎಂದು ರೂಪವಾಗುತ್ತದೆ. ಪರಾದಿಶ್ಛಂದಸಿ ಬಹುಲಮ್—(ಪಾ. ಸೂ. ೬-೨-೧೯೯) ಎಂಬುದರಿಂದ ಉತ್ತರಪದ ಆದ್ಯುದಾತ್ತಸ್ವರ ಬರುತ್ತದೆ. ಹೀಗೆಯೇ ವಿ ಉಪಸರ್ಗ ಪೂರ್ವದಲ್ಲಿರುವಾಗ ವಿಸ್ತಿರ ಎಂದು ರೂಪವಾಗುತ್ತದೆ.

ಗೃಭಾಯತಿ—ಗ್ರಹ ಉಪಾದಾನೇ. ಧಾತು. ಲಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್‌ಪ್ರತ್ಯಯ. ಛಂದಸಿ ಶಾಯಜಪಿ - (ಪಾ. ಸೂ. ೩-೧-೮೪) ಎಂಬುದರಿಂದ ಶ್ನಾವಿಕರಣದ ಸ್ಥಾನದಲ್ಲಿ ಶಾಯಜಾದೇಶ. ಹೃಗ್ರಹೋರ್ಭಶ್ಛಂದಸಿ ಎಂಬುದರಿಂದ ಧಾತುವಿನ ಹಕಾರಕ್ಕೆ ಭಕಾರಾದೇಶ. ಪ್ರತ್ಯಯಕ್ಕೆ ಙಿತ್ವಾತಿದೇಶವಿರುವುದರಿಂದ ಧಾತುವಿನ ಇಕಿಗೆ ಗುಣ ಬರುವುದಿಲ್ಲ. ತಿಙಂತನಿಘಾತಸ್ವರ ಬರುತ್ತದೆ

ಜಾನನ್—ಜ್ಞಾ ಅವಬೋಧನೇ. ಧಾತು. ಲಡರ್ಥದಲ್ಲಿ ಶತೃ ಪ್ರತ್ಯಯ ಶ್ನಾವಿಕರಣ. ಜ್ಞಾಜನೋರ್ಜಾ—(ಪಾ. ಸೂ. ೭-೩-೭೯) ಎಂಬುದರಿಂದ ಜಾದೇಶ. ಶ್ನಾಭ್ಯಸ್ತಯೋರಾತಃ—(ಪಾ. ಸೂ. ೬-೪-೧೧೨) ಎಂಬುದರಿಂದ ಆಕಾರಕ್ಕೆ ಲೋಪ. ಪ್ರತ್ಯಯಸ್ವರ ಬರುತ್ತದೆ. ಜಾನತೀಃ ಎಂಬಲ್ಲಿಯೂ ಶತೃ ಪ್ರತ್ಯಯ ಬಂದಾಗ ಸ್ತ್ರೀತ್ವದಲ್ಲಿ ಉಗಿತಶ್ಚ— (ಪಾ. ಸೂ. ೪-೧-೬) ಎಂಬುದರಿಂದ ಙೀಪ್. ಶತುರನುಮೋನದ್ಯಜಾದೀ—(ಪಾ. ಸೂ. ೬-೧-೧೭೩) ಎಂಬುದರಿಂದ ಙೀಪಿಗೆ ಉದಾತ್ತಸ್ವರ ಬರುತ್ತದೆ.

ನಿತ್ಯಃ—ತ್ಯಬ್ನೇರ್ಧ್ರುವ ಇತಿ ವಕ್ತವ್ಯಮ್ ಎಂಬ ವಚನದಿಂದ ನಿ ಎಂಬುದಕ್ಕೆ ತ್ಯಪ್‌ಪ್ರತ್ಯಯ ಪಿತ್ತಾದುದರಿಂದ ಅನುದಾತ್ತವಾಗುತ್ತದೆ,

ಶಯೇ—ಶೀಙ್ ಸ್ವಪ್ನೇ. ಧಾತು. ಅದಾದಿ. ಲಟ್ ಪ್ರಥಮಪುರುಷ ಏಕವಚನದಲ್ಲಿ ತಪ್ರತ್ಯಯ. ಟಿತ ಆತ್ಮನೇ—ಎಂಬುದರಿಂದ ಟಿಗೆ ಏತ್ವ. ಅದಿಪ್ರಭೃತಿಭ್ಯಃ ಶಪಃ ಎಂಬುದರಿಂದ ಶಪಿಗೆ ಲುಕ್. ಲೋಪಸ್ತ ಆತ್ಮನೇಪದೇಷು (ಪಾ. ಸೂ. ೭-೧-೪೧) ಎಂಬುದರಿಂದ ಪ್ರತ್ಯಯ ತಕಾರಕ್ಕೆ ಲೋಪ. ಲಿಙಃಸಾರ್ವಧಾತುಕೇಗುಣಃ (ಪಾ. ಸೂ. ೭-೪-೨೧) ಎಂಬುದರಿಂದ ಗುಣ ಬಂದಾಗ ಅಚ್ ಪರವಾದುದರಿಂದ ಅಯಾದೇಶ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

ವರ್ಧಂತೇ—ವೃಧು ವೃದ್ಧೌ ಧಾತು. ಲಟ್ ಪ್ರಥಮಪುರುಷ ಬಹುವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

ದೇವ್ಯಮ್—ದೇವಾಯ ಯೋಗ್ಯಂ ದೇವ್ಯಮ್. ಯತ್ ಪ್ರತ್ಯಯ. ತಿತ್‌ಸ್ವರಿತಮ್ (ಪಾ. ಸೂ ೬-೧-೧೮೫) ಎಂಬುದರಿಂದ ಸ್ವರಿತಸ್ವರ ಬರುತ್ತದೆ

ಕೃಣ್ವತೇ—ಕೃವಿ ಹಿಂಸಾಕರಣಯೋಶ್ಚ ಧಾತು. ವ್ಯತ್ಯಯೋ ಬಹುಲಮ್ ಎಂಬುದರಿಂದ ಆತ್ಮನೇಪದವಾಗುತ್ತದೆ. ಲಟ್ ಪ್ರಥಮಪುರುಷ ಏಕವಚನದಲ್ಲಿ ತ ಪ್ರತ್ಯಯ. ಟಿಗೆ ಏತ್ವ. ಅಂತಾದೇಶ. ಧಿನ್ವಿಕೃಣ್ವ್ಯೋರ-ಚ (ಪಾ. ಸೂ. ೩-೧-೮೦) ಎಂಬುದರಿಂದ ಅಕಾರಾಂತಾದೇಶ. ಉ ವಿಕರಣ. ಇದಿತ್ತ್ವಾದುದರಿಂದ ಧಾತುವಿಗೆ ನುಮಾಗಮ. ಅತೋಲೋಪಃ ಎಂಬುದರಿಂದ ಅಕಾರಲೋಪ. ಯಣಾದೇಶ. ಣಕಾರದ ಪರದಲ್ಲಿರುವುದರಿಂದ ನಕಾರಕ್ಕೆ ಣತ್ವ. ತಿಙಂತನಿಘಾತಸ್ವರ ಬರುತ್ತದೆ.

ಸಚಾ—ಷಚ ಸಮವಾಯೇ. ಧಾತು. ಕ್ವಿಪ್ ಚ ಎಂಬುದರಿಂದ ಕ್ವಿಪ್ ಪ್ರತ್ಯಯ. ಸುಪಾಂ ಸುಲುಕ್— ಎಂಬುದರಿಂದ ವಿಭಕ್ತಿಗೆ ಆಕಾರಾದೇಶ. ॥ ೭ ॥

—— :O: ——

ಸಂಹಿತಾಪಾಠಃ

ತಮಗ್ರುವಃ ಕೇಶಿನೀಃ ಸಂ ಹಿ ರೇಭಿರ ಊರ್ಧ್ವಾಸ್ತಸ್ಥುರ್ಮಮ್ರುಷೀಃ ಪ್ರಾಯವೇ ಪುನಃ ।

ತಾಸಾಂ ಜರಾಂ ಪ್ರಮುಂಚನ್ನೇತಿ ನಾನದದಸುಂ ಪರಂ ಜನಯಞ್ಜೀವಮಸ್ತೃತಂ ॥ ೮ ॥

ಪದಪಾಠಃ

ತಂ । ಅಗ್ರುವಃ । ಕೇಶಿನೀಃ । ಸಂ । ಹಿ । ರೇಭಿರೇ । ಊರ್ಧ್ವಾಃ । ತಸ್ಥುಃ । ಮಮ್ರುಷೀಃ । ಪ್ರ । ಆಯವೇ । ಪುನರಿತಿ ।

ತಾಸಾಂ । ಜರಾಂ । ಪ್ರಮುಂಚನ್ । ಏತಿ । ನಾನದತ್ । ಅಸುಂ । ಪರಂ । ಜನಯನ್ । ಜೀವಂ । ಅಸ್ತೃತಂ ॥ ೮ ॥

ಸಾಯಣಭಾಷ್ಯಂ

ತಮಗ್ನಿಮಗ್ರುವೋಽಗ್ರತಃ ಸ್ಥಿತಾಃ । ಯದ್ವಾ । ಅಂಗುಲಿನಾಮೈತತ್ । ಅಂಗುಲಯ ಇವಾಕುಟಿಲಾಃ । ಕೇಶಿನೀಃ ಕೇಶಸ್ಥಾನೀಯೋರ್ಧ್ವಭಾವಿಕಾಷ್ಠೋರ್ಪೇತಾ ಜ್ವಾಲಾಃ ಸಂ ರೇಭಿರೇ ಹಿ । ಪರಿರಂಭಂ ಕುರ್ವಂತಿ ಖಲು । ಆಲಿಂಗಂತಿ । ಕಿಂಚೈವಂ ಕುರ್ವತ್ಯೋ ಮಮ್ರುಷೀರ್ಮೃತಾ ಅಂಗಾರಭಾವಮಾಪನ್ನಾ ಅಪಿ ॥ ಮ್ರಿಯತೇಃ ಕ್ವಸುಪ್ರತ್ಯಯಾಂತಾತ್ ಜಂಷಿ ರೂಪಂ । ಆಯವ ಆಗಚ್ಛತೇಽಗ್ನಯೇ ಭರ್ತ್ರೇ ಪುನಃ ಸ್ನೇಹವ್ರವನಮುಜಾನತ್ಯ ಊರ್ಧ್ವಾಃ ಪ್ರ ತಸ್ಥುಃ । ಊರ್ಧ್ವಮುಖಾ ಉನ್ನತಾಃ ಪ್ರತಸ್ಥಿರೇ । ಮೃತಪ್ರಾಯಾ ಅಪಿ ಪ್ರತ್ಯುತ್ಥಾನಂ ಕೃತವತ್ಯ ಇತ್ಯರ್ಥಃ । ಏವಂ ಕೃತವತೀಷು ಸತೀಷು ಸ ಭರ್ತಾಗ್ನಿಸ್ತಾಸಾಂ ಜ್ವಾಲಾನಾಂ ಜರಾಂ ವಯೋಹಾನಿಂ ಪ್ರಮುಂಚನ್ ಪ್ರಕರ್ಷೇಣ ಮೋಚಯನ್ ನಾನದಜ್ಜರಾಪರಿಹಾರಾಯ ಮಂತ್ರಯನ್ನಿವಾತ್ಯರ್ಥಂ ಶಬ್ದಯನ್ । ನ ಕೇವಲಂ ಜರಾಹಾನಿರೇವ ಅಪಿ ತು ಪರಂ ನಿರತಿಶಯಮಸುಂ ಪ್ರಾಣಮಸ್ತೃತಂ ಕಾಷ್ಠೋದಕಾದಿಪ್ರಕ್ಷೇಪೇಣಾಪ್ಯಹಿಂಸಿತಂ ಜೀವಂ ಪ್ರಾಣಧಾರಣಸಾಮರ್ಥ್ಯಂ ಜನಯನ್ನುತ್ಪಾದಯನ್ನೇತಿ । ಗಚ್ಛತಿ । ತಾಸಾಂ ಜ್ವಾಲಾನಾಂ ಸನ್ನಿಧಿಂ ಪ್ರಾಪ್ನೋತಿ । ಯಥಾ

ಲೋಕೇ ಕಾಶ್ಚನ ರಮಣ್ಯೋ ರಮಣೇನ ಸಹ ನಿರ್ಭರಂ ಕ್ರೀಡಿತ್ವಾ ಪಶ್ಚಾತ್ಪ್ರೋಷಿತೇ ತಸ್ಮಿನ್ಚಿರಪ್ರೋಷಿತೇ ಜೀರ್ಣಾ ಮ್ರಿಯಮಾಣಾಃ ಪಶ್ಚಾತ್ತಸ್ಮಿನ್ನಾಗತೇ ಸತಿ ಸ್ವದೌರ್ಬಲ್ಯಮಗಣಯಿತ್ವಾ ಸಂತೋಷೇಣ ಪರಿಷ್ವಂಗಾಯ ಚೇಷ್ಟಂತೇ । ಸ ಭರ್ತಾ ಮಂತ್ರೋಚ್ಚಾರಣೇನ ಜರಾಮಪನೀಯೋಚಿತಪ್ರದಾನೇನ ಪ್ರಾಣಿಯನ್ ರಕ್ಷತೀತ್ಯಯಂ ಭಾವೋಽತ್ರಾನುಸಂಧೇಯಃ ॥

ಪ್ರತಿಪದಾರ್ಥ

ತಂ—(ಪತಿಯಾದ) ಅಗ್ನಿಯನ್ನು । **ಅಗ್ರುವಃ**—ಮುಂಭಾಗದಲ್ಲಿರುವವೂ ಅಥವಾ ಬೆರಳುಗಳಂತೆ ಕುಟಿಲವಾದವೂ । **ಕೇಶಿನೀಃ**—(ಸ್ತ್ರೀಯ ಮೇಲಿನ) ಕೂದಲುಗಳಂತೆ ಕಪ್ಪು ಬಣ್ಣವುಳ್ಳವೂ ಆದ ಜ್ವಾಲೆಗಳು । **ಸಂರೇಭಿರೇ ಹಿ**—ಆಲಂಗಿಸುತ್ತವೆಯಲ್ಲವೇ । **ಮಮ್ರುಷೀಃ**—ನಂದಿಹೋಗಿ ಮೃತಪ್ರಾಯರಂತಿದ್ದರೂ ಸಹ । **ಆಯತೇ**—(ತಮ್ಮೆದುರಿಗೆ) ಬರುತ್ತಿರುವ ಪತಿಯಾದ ಅಗ್ನಿಗೆ । **ಪುನಃ**—(ತಮ್ಮ ತೊಂದರೆಯನ್ನೂ ಗಮನಿಸದೆ) ತಿರುಗಿಯೂ । **ಊರ್ಧ್ವಾಃ**—ಮೇಲ್ಮುಖವಾಗಿ ಎದ್ದು । **ಪ್ರತಸ್ಥುಃ**—ಎದುರುಗೊಳ್ಳುತ್ತವೆ. । **ತಾಸಾಂ**—(ಇಂತಹ ಪ್ರೇಮದಿಂದ ಕೂಡಿದ) ಆ ಜ್ವಾಲೆಗಳ । **ಜರಾಂ**—ಮುಪ್ಪಿನಂತಿರುವ ದೇಹಶೈಥಿಲ್ಯವನ್ನು । **ಪ್ರಮುಂಚನ್**—ಬಿಡಿಸುತ್ತಾ । **ನಾನದತ್**—(ಪತ್ನಿಯ ಜರಾ ಪರಿಹಾರಕ್ಕಾಗಿ ಪತಿಯು ಮಂತ್ರವನ್ನು ಜಪಿಸುವಂತೆ) ಶಬ್ದಮಾಡುತ್ತಾ । **ಪರಂ**—ಅತ್ಯತಿಶಯವಾಗಿ । **ಅಸುಂ**—ಚೈತನ್ಯವನ್ನೂ । **ಅಸ್ತೃತಂ**—ಅಕುಂಠಿತವಾದ । **ಜೀವಂ**—ಪ್ರಾಣಧಾರಣ ಶಕ್ತಿಯನ್ನೂ । **ಜನಯನ್**—ಉಂಟುಮಾಡುತ್ತಾ । **ಏತಿ**—(ಆ ಜ್ವಾಲೆಗಳನ್ನು) ಸೇರಿಕೊಳ್ಳುತ್ತಾನೆ.

ಭಾವಾರ್ಥ

ಸ್ತ್ರೀಯ ಮೇಲಿನ ಕೂದಲುಗಳಂತೆ ಕುಟಿಲವಾದವೂ ಮೇಲ್ಭಾಗದಲ್ಲಿ ಕೃಷ್ಣವರ್ಣವುಳ್ಳವೂ ಆದ ಸುಂದರವಾದ ಜ್ವಾಲೆಗಳು ತಾವು ನಂದಿಹೋಗಿ ಮೃತಪ್ರಾಯರಾಗಿದ್ದರೂ ಸಹ ಪ್ರೇಮಪೂರಿತವಾದ ಪತ್ನಿಯಂತೆ ತಮ್ಮೆದುರಿಗೆ ಬರುತ್ತಿರುವ ಪತಿಯಾದ ಅಗ್ನಿಗೆ ತಮ್ಮ ತೊಂದರೆಯನ್ನೂ ಸಹ ಗಮನಿಸದೇ ಮೇಲ್ಮುಖವಾಗಿ ಎದ್ದು ಎದುರುಗೊಳ್ಳುತ್ತಾ ಚೆನ್ನಾಗಿ ಆಲಂಗಿಸುತ್ತವೆ. ಇಂತಹ ಪ್ರೇಮದಿಂದ ಕೂಡಿದ ಆ ಜ್ವಾಲೆಗಳ ಮುಪ್ಪಿನಂತಿರುವ ದೇಹಶೈಥಿಲ್ಯವನ್ನು ಬಿಡಿಸುತ್ತಾ ಪತ್ನಿಯ ಜರಾಪರಿಹಾರಕ್ಕಾಗಿ ಪತಿಯು ಮಂತ್ರವನ್ನು ಜಪಿಸುವಂತೆ ಶಬ್ದವನ್ನು ಮಾಡುತ್ತಾ ಅವುಗಳಿಗೆ ಅತ್ಯತಿಶಯವಾದ ಚೈತನ್ಯವನ್ನೂ ಅಕುಂಠಿತವಾದ ಪ್ರಾಣಧಾರಣಶಕ್ತಿಯನ್ನೂ ಉಂಟುಮಾಡುತ್ತಾ ಅಗ್ನಿಯು ಆ ಜ್ವಾಲೆಗಳನ್ನು ಸೇರಿಕೊಳ್ಳುತ್ತಾನೆ.

English Translation

The curving tresses (of the flames) embrace him (Agni), and when expiring spring aloft again to (greet) their coming (lord): rescuing them from decrepitude, he comes sounding aloud, generating (in them) intenser animation and unimpaired vitality.

ವಿಶೇಷವಿಷಯಗಳು

**ಅಗ್ರುವಃ**—ಈ ಪದವು ನದೀನಾಮಗಳಲ್ಲಿಯೂ (ನಿ. ೨-೨೪) ಮತ್ತು ಅಂಗುಲಿನಾಮಗಳಲ್ಲಿಯೂ (ನಿ. ೩-೯) ಪಠಿತವಾಗಿದೆ. ಈ ಎರಡು ಅರ್ಥಗಳಲ್ಲಿಯೂ ಋಕ್ಸಂಹಿತೆಯಲ್ಲಿ ಈ ಪದದ ಪ್ರಯೋಗವಿದೆ.

ಅಜೀಜನನ್ನಮೃತಂ ಮರ್ತ್ಯಾಸೋಽಸ್ರೇಮಾಣಂ ತರಣಿಂ ವೀಳುಜಂಭಂ ।
ದಶ ಸ್ವಸಾರೋ ಅಗ್ರುವಃ ಸಮೀಚೀಃ ಪುಮಾಂಸಂ ಜಾತಮಭಿ ಸಂ ರಭಂತೇ ।
(ಋ ಸಂ. ೩-೨೯-೧೩)

ತಮೀಂ ಹಿನ್ವಂತ್ಯಗ್ರುವೋ ಧಮಂತಿ ಬಾಕುರಂ ದೃತಿಂ । ತ್ರಿಧಾತು ವಾರಣಂ ಮಧು ।
(ಋ. ಸಂ. ೯-೧-೮)

ಇತ್ಯಾದಿ ಋಕ್ಕುಗಳಲ್ಲಿ ಕರ್ಮಕರಣಾರ್ಥಮಗ್ರಮಂಗಂತೀತ್ಯಗ್ರುವೋಽಂಗುಲಯಃ । ಕರ್ಮಗಳನ್ನು ನೆರವೇರಿಸುವುದಕ್ಕಾಗಿ ಮುಂದುವರಿಯುವುದರಿಂದ ಅಂಗುಲಿಗಳಿಗೆ ಅಗ್ರುಗಳೆಂದು ಹೆಸರೆಂದು ನಿರ್ವಚನವಿದೆ.

ಪ್ರಾಗ್ರುವೋ ನಭನ್ವೋ೩ ನ ವಕ್ವಾ ಧ್ವಸ್ರಾ ಅಪಿನ್ವದ್ಯುವತೀರ್ಋತಜ್ಞಾಃ ।
ಧನ್ವಾನ್ಯಜ್ರಾಁ ಅಪೃಣಕ್ತೃಷಾಣಾಁ ಅಧೋಗಿಂದ್ರಃ ಸ್ತರ್ಯೋ೩ದಂಸುಪತ್ನೀಃ ॥
(ಋ. ಸಂ. ೪-೧೯-೭)

ಸ್ವಾಧ್ಯೋ೩ವಿ ದುರೋ ದೇವಯಂತೋಽಶಿಶ್ರಯುಃ ರಥಯುರ್ದೇವತಾತಾ ।
ಪೂರ್ವೀ ಶಿಶುಂ ನ ಮಾತರಾ ರಿಹಾಣೇ ಸಮಗ್ರುವೋ ನ ಸಮನೇಷ್ವಂಜನ್ ।
(ಋ. ಸಂ ೭-೨-೫)

ಇತ್ಯಾದಿ ಋಕ್ಕುಗಳಲ್ಲಿ ಅಗ್ರುವ ಇತಿ ನದೀನಾಮೈತತ್ । ಅಗ್ರಗಾಮಿನೀಃ ನದೀಃ । ಪ್ರಸರಿಸಿ ಮುಂದುವರಿದು ಹರಿಯುವುದರಿಂದ ನದಿಗೆ ಅಗ್ರುವೆಂದು ಹೆಸರು ಎಂಬ ನಿರ್ವಚನವಿದೆ. ಇಷ್ಟೇ ಅಲ್ಲದೆ,

ವಮ್ರೀಭಿಃ ಪುತ್ರಮಗ್ರುವೋ ಅದಾನಂ ನಿವೇಶನಾದ್ಧರಿವ ಆ ಜಭರ್ಥ ।
ವ್ಯಂ೧ಧೋ ಅಖ್ಯದಹಿಮಾದದಾನೋ ನಿರ್ಭೂದುಖಚ್ಛಿತ್ಸಮರಂತ ಪರ್ವ ।
(ಋ. ಸಂ. ೪-೧೯-೯)

ಇತ್ಯಾದಿ ಋಕ್ಕುಗಳಲ್ಲಿ ಅಗ್ರುವಃ ಎಂದರೆ ಅಗ್ರೂ ಎಂಬ ಹೆಸರುಳ್ಳ ಹೆಂಗಸಿನ ಎಂದರ್ಥವಾಗುತ್ತದೆ.

ಪ್ರಕೃತವಾದ ಋಕ್ಕಿನಲ್ಲಿ ಅಗ್ರುವಃ ಎನ್ನುವುದಕ್ಕೆ ಅಗ್ರೇಸ್ಥಿತಾಃ ಮುಂಭಾಗದಲ್ಲಿ ಪ್ರಸರಿಸುವ ಎಂದಾಗಲಿ ಅಥವಾ ಅಂಗುಲಯ ಇವ ಅಕುಟಿಲಾಃ ಕೈಬೆರಳುಗಳಂತೆ ಕುಟಿಲವಲ್ಲದೇ ನೇರವಾಗಿ ಚಾಚಿರುವುವೂ ಆದ ಎಂದು ಜ್ವಾಲೆಗಳಿಗೆ ವಿಶೇಷಣವಾಗಿದೆ.

ಈ ಋಕ್ಕಿನಲ್ಲಿ ಅಗ್ನಿಯನ್ನು ಪತಿಗೂ ಅಗ್ನಿಯ ಜ್ವಾಲೆಗಳನ್ನು ಪತ್ನಿಗೂ ಹೋಲಿಸಿದೆ. ಈ ಉಪಮಾನವನ್ನು ಸಾಯಣರು ಈರೀತಿ ವಿವರಿಸಿದ್ದಾರೆ.

ಯಥಾ ಲೋಕೇ ಕಾಶ್ಚನ ರಮಣ್ಯಃ ರಮಣೇನ ಸಹ ನಿರ್ಭರಂ ಕ್ರೀಡಿತ್ವಾ ಪಶ್ಚಾತ್ ಪ್ರೋಷಿತೇ ತಸ್ಮಿನ್ ವಿರಹೇಣ ಜೀರ್ಣಾ ಮ್ರಿಯಮಾಣಾಃ ಪಶ್ಚಾತ್ ತಸ್ಮಿನ್ನಾಗತೇ ಸತಿ ಸ್ವದೌರ್ಬಲ್ಯಮಗಣಯಿತ್ವಾ ಸಂತೋಷೇಣ ಪರಿಷ್ವಂಗಾಯ ಚೇಷ್ಟಂತೇ । ಸ ಭರ್ತಾಮಂತ್ರೋಚ್ಚಾರಣೇನ ಜರಾಂ ಅಪನೀಯ ಉಚಿತಪ್ರದಾನೇನ ಪ್ರಾಣಯನ್ ರಕ್ಷತಿ ಇತ್ಯಯಂ ಭಾವೋಽತ್ರಾನುಸಂಧೇಯಃ ॥

ಲೋಕದಲ್ಲಿ ರಮಣಿಯರು ಪತಿಗಳೊಂದಿಗೆ ಸಂಭೋಗಿಸಿ ಸುಖವಾಗಿ ಬೆಳೆದು ಅನಂತರ ಪತಿಗಳು ಪರದೇಶಕ್ಕೆ ಹೋದಾಗ ಚಿಂತೆಯಿಂದ ಕೃಶರಾದಾಗ ಪುನಃ ಪತಿಗಳ ಪ್ರತ್ಯಾಗಮನದನಂತರ ತಮ್ಮ ಶ್ರಮವನ್ನು ಗಮನಿಸದೆ

ಆಲಿಂಗನಕ್ಕಾಗಿ ಉತ್ಸಾಹದಿಂದ ಪ್ರಯತ್ನಿಸುವಂತೆ ಕೃಶವಾದ ಅಗ್ನಿಯ ಜ್ವಾಲೆಗಳು ಅಗ್ನಿಯ ಇಂಧನಾನಂತರ ಅಗ್ನಿಯನ್ನು ಆಲಂಗಿಸುತ್ತವೆ. ಮತ್ತು ಪತಿಗಳು ತಮ್ಮ ಪತ್ನಿಯರ ಕಾರ್ಶ್ಯವನ್ನೂ ಜರೆಯನ್ನೂ ಕಳೆಯುವಂತೆ ಮಾಡಿ ನವಚೈತನ್ಯವನ್ನು ತುಂಬುವ ಮಂತ್ರವನ್ನು ಜಪಿಸುವಂತೆ ಅಗ್ನಿಯೂ ಸಹ ಶಬ್ದಮಾಡುತ್ತಾ ಜ್ವಾಲೆಗಳ ಕ್ಷೀಣತೆಯನ್ನು ಹೋಗಲಾಡಿಸಿ ಅವುಗಳು ವೃದ್ಧಿಯಾಗುವಂತೆ ಮಾಡುತ್ತಾನೆಂದು ತಾತ್ಪರ್ಯ.

॥ ವ್ಯಾಕರಣಪ್ರಕ್ರಿಯಾ ॥

**ಕೇಶಿನೀಃ**—ಕೇಶಾಃ ಆಸಾಂ ಸಂತಿ ಎಂದು ಅರ್ಥ ವಿವಕ್ಷಾಮಾಡಿದಾಗ ಮತ್ವರ್ಥದಲ್ಲಿ **ಅತ ಇನಿ ಠನೌ**—(ಪಾ. ಸೂ. ೫-೨-೧೧೫) ಎಂಬುದರಿಂದ ಇನಿ ಪ್ರತ್ಯಯ. ನಾಂತವಾದುದರಿಂದ ಸ್ತ್ರೀತ್ವದಲ್ಲಿ **ಋನ್ನೇಭ್ಯೋಙೀಪ್** ಸೂತ್ರದಿಂದ ಙೀಪ್. ಜಸಪರವಾದಾಗ **ಸುಪಾಂ ಸುಲುಕ್**—(ಪಾ. ೭-೧-೩೯) ಎಂಬುದರಿಂದ ಪೂರ್ವಸವರ್ಣ ದೀರ್ಘ. ಪ್ರತ್ಯಯಸ್ವರದಿಂದ ಇಕಾರ ಉದಾತ್ತವಾಗುತ್ತದೆ.

**ರೇಭಿರೇ**—ರಭ ರಾಭಸ್ಯೇ. ಧಾತು. ಲಿಟ್ ಪ್ರಥಮಪುರುಷ ಬಹುವಚನದಲ್ಲಿ **ಲಿಟಸ್ತಝಯೋಃ**—ಎಂಬುದರಿಂದ ಇರೇ ಆದೇಶ. **ಅತ ಏಕಹಲ್ಮಧ್ಯೇ**—(ಪಾ. ಸೂ. ೬-೪-೧೨೦) ಎಂಬುದರಿಂದ ದ್ವಿತ್ವ ಬಂದಾಗ ಏತ್ವ ಅಭ್ಯಾಸಲೋಪ. ಹಿ ಎಂಬುದು ಹಿಂದೆ ಇರುವುದರಿಂದ **ಹಿಚ** (ಪಾ. ಸೂ. ೮-೧-೩೪) ಎಂಬುದರಿಂದ ನಿಘಾತ ಪ್ರತಿಷೇಧ ಬರುವುದರಿಂದ ಪ್ರತ್ಯಯುವು ಚಿತ್ತಾದುದರಿಂದ **ಚಿತಃ** (ಪಾ. ೬-೧-೧೬೩) ಎಂಬುದರಿಂದ ಅಂತೋದಾತ್ತ ಸ್ವರ ಬರುತ್ತದೆ.

**ತಸ್ಥುಃ**—ಷ್ಠಾ ಗತಿನಿವೃತ್ತೌ. ಧಾತು. ಲಿಟ್ ಪ್ರಥಮಪುರುಷ ಬಹುವಚನಾಂತರೂಪ. ತಿಙಂತನಿಘಾತ ಸ್ವರ ಬರುತ್ತದೆ.

**ಮಮೃಷೀಃ**—ಮೃಜ್ ಪ್ರಾಣತ್ಯಾಗೇ. ಧಾತು ಇದಕ್ಕೆ ಲಿಟ್ ಬಂದಾಗ **ಕ್ವಸುಶ್ಚ** (ಪಾ. ಸೂ. ೩-೨-೭೬) ಎಂಬುದರಿಂದ ಅದಕ್ಕೆ ಕ್ವಸುರಾದೇಶ. ಅದನ್ನು ನಿಮಿತ್ತೀಕರಿಸಿ ಧಾತುವಿಗೆ ದ್ವಿತ್ವ. **ಉರತ್** ಎಂಬುದರಿಂದ ಅಭ್ಯಾಸಕ್ಕೆ ಅತ್ವ. ರಪರವಾಗಿ ಬಂದಾಗ ಆದಿಹಲ್‌ಶೇಷ. ಉಗಿತ್ತಾದುದರಿಂದ ಸ್ತ್ರೀತ್ವದಲ್ಲಿ ಉಗಿತಶ್ಚ ಎಂಬುದರಿಂದ ಙೀಪ್. ಭಸಂಜ್ಞಾ ಇರುವುದರಿಂದ **ವಸೋಃ ಸಂಪ್ರಸಾರಣಮ್** ಎಂಬುದರಿಂದ ಸಂಪ್ರಸಾರಣ. **ಸಂಪ್ರಸಾರಣಾಚ್ಚ** ಎಂಬುದರಿಂದ ಪೂರ್ವರೂಪ. ಧಾತುವಿನ ಋಕಾರಕ್ಕೆ ಯಣಾದೇಶ. **ಶಾಸಿವಸಿಘಸೀನಾಂ ಚ** (ಪಾ. ಸೂ. ೮-೩-೬೦) ಎಂಬುದರಿಂದ ಷತ್ವ. ಜಸ್ ಪರವಾದಾಗ **ಸುಪಾಂ ಸುಲುಕ್**—ಎಂಬುದರಿಂದ ಪೂರ್ವ ಸವರ್ಣದೀರ್ಘ.

**ಪ್ರಮುಞ್ಚನ್**—ಮುಚ್‌ಲೃ ಮೋಕ್ಷಣೇ. ಧಾತು. ಪ್ರೇರಣಾತೋರುವುದರಿಂದ ಅಂತರ್ಭಾವಿತಣ್ಯರ್ಥಕ ವಾದ ಧಾತು. ಲಡರ್ಥದಲ್ಲಿ ಶತೃಪ್ರತ್ಯಯ. ಶ ವಿಕರಣ. **ಶೇಮುಚಾದೀನಾಮ್** (ಪಾ. ಸೂ. ೭-೧-೫೯) ಎಂಬುದರಿಂದ ನುಮಾಗಮ. ಪ್ರಥಮಾ ಏಕವಚನಾಂತರೂಪ. ವಿಕರಣಸ್ವರ ಬರುತ್ತದೆ. ಪ್ರಾದಿಸಮಾಸದಲ್ಲಿ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

**ನಾನದತ್**—ಣದ ಅವ್ಯಕ್ತೇ ಶಬ್ದೇ. ಧಾತು. ಯಙ್‌ಲುಗಂತದ ಮೇಲೆ ಲಡರ್ಥದಲ್ಲಿ ಶತೃಪ್ರತ್ಯಯ. ಅಭ್ಯಸ್ತಾನಾಮಾದಿಃ (ಪಾ. ಸೂ. ೬-೧-೧೮೯) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಜನಯನ್**—ಜನೀ ಪ್ರಾದುರ್ಭಾವೇ. ಧಾತು. **ಹೇತುಮತಿ ಚ** (ಪಾ. ಸೂ. ೩-೧-೨೬) ಎಂಬುದರಿಂದ ಣಿಚ್. **ಜನೀಜ್ರ್‌ಷ್‌ಕ್ನಸುರಂಜೋಽಮಂತಾಶ್ಚ** ಎಂಬುದರಿಂದ ಮಿತ್ ಸಂಜ್ಞಾ ಇರುವುದರಿಂದ, **ಅತ ಉಪಧಾಯಾಃ** ಸೂತ್ರದಿಂದ ವೃದ್ಧಿ ಬಂದಾಗ **ಮಿತಾಂ ಹ್ರಸ್ವಃ** (ಪಾ. ಸೂ. ೬-೪-೯೨) ಎಂಬುದರಿಂದ ಉಪಧಾಕ್ಕೆ ಹ್ರಸ್ವ ಣಿಜಂತದ ಮೇಲೆ ಲಡರ್ಥದಲ್ಲಿ ಶತೃಪ್ರತ್ಯಯ. ಶಪ್ ನಿಮಿತ್ತವಾಗಿ ಣಿಚಿಗೆ ಗುಣ ಅಯಾದೇಶ. ಲಸಾರ್ವಧಾತುಕವು **ತಾಸ್ಯನುದಾತ್ತೇತ್**—(ಪಾ. ಸೂ. ೬-೧-೧೮೬) ಸೂತ್ರದಿಂದ ಅನುದಾತ್ತವಾಗುವುದರಿಂದ ಣಿಚ್‌ಸ್ವರ ಉಳಿಯುತ್ತದೆ.

**ಅಸ್ತೃತಮ್**—ನಞ್‌ತತ್ಪುರುಷಸಮಾಸ. **ತತ್ಪುರುಷೇತುಲ್ಯಾ**— (ಪಾ. ಸೂ. ೬-೨-೨) ಎಂಬುದರಿಂದ ಅವ್ಯಯಪೂರ್ವಪದಪ್ರಕೃತಿಸ್ವರ ಬರುತ್ತದೆ. ॥ ೮ ॥



ಸಂಹಿತಾಪಾಠಃ

ಅಧೀವಾಸಂ ಪರಿ ಮಾತೂ ರಿಹನ್ನಹ ತುವಿಗ್ರೇಭಿಃ ಸತ್ವಭಿರ್ಯಾತಿ ವಿ ಜ್ರಯಃ ।
ವಯೋ ದಧತ್ಪದ್ವತೇ ರೇರಿಹತ್ಸದಾನು ಶ್ಯೇನೀ ಸಚತೇ ವರ್ತನೀರಹ ॥ ೯ ॥

। ಪದಪಾಠಃ ।

ಅಧೀವಾಸಂ । ಪರಿ । ಮಾತುಃ । ರಿಹನ್ । ಅಹ । ತುವಿಽಗ್ರೇಭಿಃ । ಸತ್ವಽಭಿಃ । ಯಾತಿ । ವಿ । ಜ್ರಯಃ ।
ವಯಃ । ದಧತ್ । ಪತ್‌ಽವತೇ । ರೇರಿಹತ್ । ಸದಾ । ಅನು । ಶ್ಯೇನೀ । ಸಚತೇ । ವರ್ತನಿಃ । ಅಹ ॥೯॥

॥ ಸಾಯಣಭಾಷ್ಯಂ ॥

ದಾವಾಗ್ನಿಃ ಸ್ತೂಯತೇ । ಅಯಮಗ್ನಿರ್ಮಾತುರ್ಭೂರ್ತಾನಾಂ ನಿರ್ಮಾತುರ್ಭೂಮೇರಧೀವಾಸಮುಪರ್ಯಾಚ್ಛಾದನಸ್ಥಾನೀಯಂ ತೃಣಗುಲ್ಮೌಷಧ್ಯಾದಿಕಂ ಪರಿ ಪರಿತೋ ರಿಹನ್ ಲಿಹನ್ । ಅಹೇತಿ ಪ್ರಸಿದ್ಧೌ । ಯದ್ವಾ । ಮಾತುರ್ಭೂಮೇರಧೀವಾಸಮುಪರಿ ಧಾರ್ಯಮಾಣಂ ವಸ್ತ್ರಂ ಪರಿ ಪರಿತೋ ರಿಹನ್ ಸಂಪಾದಯನ್ । ತುವಿಗ್ರೇಭಿಃ ಪ್ರಭೂತಂ ಶಬ್ದಯದ್ಭಿಃ ಪ್ರಭೂತಗಮನೈರ್ವಾ ಸತ್ವಭಿಃ ಪ್ರಾಣಿಭಿಃ ಸಹಿತೋ ಜ್ರಯೋ ಜ್ರಯಸಾ ಜವೇನ ವಿ ಯಾತಿ । ವಿವಿಧಂ ಗಚ್ಛತಿ । ಕಿಂಚ ಪದ್ವತೇ ಪಾದವತೇ ದ್ವಿಪದೇ ಚತುಷ್ಪದೇ ಚ ವಯೋಽನ್ನಂ ತತ್ತದುಚಿತಂ ದಧದ್ದದತ್ । ವಿವನೇ ದಾವಾನಲೇ ಭೀತ್ಯಾ ಪಲಾಯಮಾನಾನ್ಪ್ರಾಣಿನೋ ವ್ಯಾಘ್ರಾದಯೋ ಭಕ್ಷಯಂತೀತಿ ಪ್ರಸಿದ್ಧಂ । ಕಿಂ ಕುರ್ವನ್ । ಸದಾ ಸರ್ವದಾ ತೃಣಾದಿಕಂ ರೇರಿಹದ್ದಹನ್ । ಕಿಂಚ ಶ್ಯೇನೀ ಶ್ಯಾಮವರ್ಣೋ ವರ್ತನಿರ್ಮಾರ್ಗೋ ವಿಯೋಂತ-

ಮನ್ವನುಕ್ರಮೇಣ ಸಚತೇ । ಸೇವತೇ । ಯತ್ರ ಯತ್ರಾಗ್ನಿರ್ಗಚ್ಛತಿ ತತ್ರ ತತ್ರ ಮಾರ್ಗೋಽಪಿ ಕೃಷ್ಣೋ ಭವತಿ । ಅಹೇತಿ ಪ್ರಸಿದ್ಧೌ ॥

॥ ಪ್ರತಿಪದಾರ್ಥ ॥

**ಮಾತುಃ**—(ಈ ದಾವಾಗ್ನಿಯು ಸಕಲ ಭೂತಗಳಿಗೂ) ತಾಯಿಯಾದ ಭೂಮಿಯ । **ಅಧೀವಾಸಂ**—ಮೇಲುಹೊದ್ದಿಕೆಯಂತಿರುವ ತೃಣಗುಲ್ಮಾದಿಗಳನ್ನು । **ಪರಿ**—ಸುತ್ತಲೂ । **ರಿಹನ್ ಅಹ**—ನೆಕ್ಕುವಂತೆಯೇ (ಆಕ್ರಮಿಸುತ್ತಲೂ) । ಅಥವಾ **ಮಾತುಃ**—ಭೂಮಾತೆಗೆ । **ಅಧೀವಾಸಂ**—ಮೇಲುಹೊದ್ದಿಕೆಯನ್ನು । **ಪರಿ** ಸುತ್ತಲೂ । **ರಿಹನ್ ಅಹ**—ಸಂಪಾದಿಸುವಂತೆಯೇ (ಆಕ್ರಮಿಸುತ್ತಲೂ) । **ಪದ್ವತೇ**—(ಎರಡು ಮತ್ತು ನಾಲ್ಕು ಕಾಲುಗಳುಳ್ಳ ಸಕಲ ಪ್ರಾಣಿಗಳಿಗೂ । **ವಯಃ**—ಅನ್ನವನ್ನು । **ದಧತ್**—ಒದಗಿಸಿಕೊಡುತ್ತಲೂ । **ಸದಾ**—ಯಾವಾಗಲೂ । **ರೇರಿಹತ್**-(ತೃಣಾದಿಗಳನ್ನು) ಸುಡುತ್ತಲೂ । **ತುವಿಗ್ರೇಭಿಃ**—(ಭಯದಿಂದ) ಅಧಿಕವಾದ ಶಬ್ದವನ್ನು ಮಾಡತಕ್ಕ । **ಸತ್ವಭಿಃ**—ಪ್ರಾಣಿಗಳೊಡನೆ ಕೂಡಿಕೊಂಡು । **ಜ್ರಯಃ**—ವೇಗವಾಗಿ । **ವಿ ಯಾಂತಿ**—ನಾನಾ ದಿಕ್ಕಿಗೆ ಹರಡುತ್ತವೆ । **ಶ್ಯೇನೀ**—ಕಪ್ಪುಬಣ್ಣವುಳ್ಳ । **ವರ್ತನಿಃ**—(ಈ ಅಗ್ನಿಯ) ಮಾರ್ಗವು । **ಅನು ಸಚತೇ ಅಹ**—(ಈ ಅಗ್ನಿಯನ್ನು) ಅನುಸರಿಸಿ ಹೋಗುತ್ತದೆಯಲ್ಲವೆ ; ।

॥ ಭಾವಾರ್ಥ ॥

ಈ ದಾವಾಗ್ನಿಯು ಭೂಮಾತೆಯ ಮೇಲುಹೊದ್ದಿಕೆಯಂತಿರುವ ಸಕಲ ತೃಣಗುಲ್ಮಾದಿಗಳನ್ನು ಸುತ್ತಲೂ ನೆಕ್ಕುವಂತೆ ಆಕ್ರಮಿಸುತ್ತಲೂ, ಓಡಾಡತಕ್ಕ ಸಕಲ ಪ್ರಾಣಿಗಳಿಗೂ ಅನ್ನವನ್ನು ಒದಗಿಸುತ್ತಲೂ, ಯಾವಾಗಲೂ ತೃಣಾದಿಗಳನ್ನು ಸುಡುತ್ತಲೂ, ಭಯದಿಂದ ಅಧಿಕವಾಗಿ ಶಬ್ದವನ್ನು ಮಾಡತಕ್ಕ ಪ್ರಾಣಿಗಳೊಡನೆ ಕೂಡಿಕೊಂಡು ನಾನಾದಿಕ್ಕಿಗೂ ವೇಗವಾಗಿ ಹರಡುತ್ತದೆ. ಕೃಷ್ಣವರ್ಣವುಳ್ಳ ಮಾರ್ಗವು ಈ ಅಗ್ನಿಯ ಮಾರ್ಗವನ್ನೇ ಅನುಸರಿಸುತ್ತದೆ.

## English Translation

Licking up the (verdant) vesture of the mother (of all things, earth) the rapid (Agni) proceeds with resounding existences : granting sustenance to (every) footed (creature) : ever consuming (fuel), so that a blackened track follows (his path).

॥ ವಿಶೇಷವಿಷಯಗಳು ॥

**ಮಾತುಃ ಅಧೀವಾಸಂ ಪರಿ ರಿಹನ್** ಎನ್ನುವುದಕ್ಕೆ ಎರಡು ವಿಧವಾಗಿ ಅರ್ಥವನ್ನು ಹೇಳಬಹುದೆಂದು ಸಾಯಣರು ತೋರಿಸಿದ್ದಾರೆ. ಮೊದಲನೆಯದಾಗಿ, **ಮಾತುಃ—ಭೂತಾನಾಂ ನಿರ್ಮಾತುಃ ಭೂಮೇಃ** । ಸಕಲ ಭೂತಗಳಿಗೂ ಸೃಷ್ಟಿಕರ್ತೆಯಾದ ಪೃಥ್ವಿಗೆ ; **ಅಧೀವಾಸಂ—ಉಪರ್ಯಾಚ್ಛಾದನಸ್ಥಾನೀಯಂ ತೃಣಗುಲ್ಮೌಷಧ್ಯಾದಿಕಂ** । ಮೇಲುಹೊದ್ದಿಕೆಯಂತಿರುವ ಹುಲ್ಲು, ಪೊದೆ, ಲತಾದಿಗಳನ್ನು **ಪರಿ ಪರಿತಃ** । ಸುತ್ತಲೂ. **ರಿಹನ್-ಲಿಹನ್** । ಆಕ್ರಮಿಸುತ್ತಲೂ ಎಂದೂ ; ಎರಡನೆಯದಾಗಿ, **ಮಾತುಃ-ಭೂಮೇಃ, ಅಧೀವಾಸಂ-ಉಪರಿ ಧಾರ್ಯಮಾಣಂ ವಸ್ತ್ರಂ ಪರಿ ಪರಿತಃ ರಿಹನ್ ಸಂಪಾದಯನ್** । ಸುತ್ತಲೂ ತನ್ನ ಆಕ್ರಮಣದಿಂದ ಭೂಮಾತೆಗೆ ಮೇಲುಹೊದ್ದಿಕೆಯನ್ನು ಸಂಪಾದಿಸುವಂತೆ ಎಂದೂ ಅರ್ಥಮಾಡಬಹುದು.

**ಪದ್ವತೇ ಪಾದವತೇ, ದ್ವಿಪದೇ ಚತುಷ್ಪದೇ ಚ** । ಎರಡು ಮತ್ತು ನಾಲ್ಕು ಕಾಲುಗಳುಳ್ಳ ಸಕಲ ಪ್ರಾಣಿ ಜಾತಗಳಿಗೂ ಎಂದರ್ಥ. ಪ್ರಾಣಿಮಾತ್ರವನ್ನು ನಿರ್ದೇಶಿಸುವುದಕ್ಕೆ **ಪದ್ವತ್** ಎಂಬ ಪದವನ್ನೂ, ಸಸ್ಯಾದಿಗಳನ್ನು ನಿರ್ದೇಶಿಸುವುದಕ್ಕೆ **ಅಪಾತ್** ಎಂಬ ಪದವನ್ನೂ ಉಪಯೋಗಿಸುವುದು ರೂಢಿಯಾಗಿದೆ ಉದಾಹರಣೆಗೆ

**ದ್ವೇ ವಶಾಕ್ಷರೇ ಭವತ ಉಭಯೋರನ್ನಾದ್ಯಯೋರುಪಾಪ್ತ್ಯೈ ಯಚ್ಚ ಪದ್ವದ್ಯಚ್ಚಾಪಾದಕಮಿತಿ** ।
(ಐತರೇಯಾರಣ್ಯಕಂ ೧-೩-೭)

ಎಂಬ ವಾಕ್ಯದಲ್ಲಿ **ಪದ್ವತ್** ಎಂಬ ಪದಕ್ಕೆ ಕಾಲುಗಳುಳ್ಳ ಪ್ರಾಣಿಜಾತವೆಂದೂ, **ಅಪಾದಕ**ವೆಂಬುದಕ್ಕೆ ಸಸ್ಯಾದಿಗಳೆಂದೂ ಸಾಯಣರು ಅರ್ಥಮಾಡಿದ್ದಾರೆ. ಆದರೆ ಋಕ್ಸಂಹಿತೆಯ ಕೆಲವು ಋಕ್ಕುಗಳಲ್ಲಿ ಕಾಲುಗಳಿಂದ ನಡೆಯುವ ಪ್ರಾಣಿಗಳಿಗೆ ಮಾತ್ರ ಈ ಪದಪ್ರಯೋಗದಿಂದ ನಿರ್ದೇಶವಿರುವುದೂ, ಹಾರುವ ಪಕ್ಷ್ಯಾದಿ ಪ್ರಾಣಿಗಳಿಗೆ ವ್ಯಾಪಕವಾಗಿಲ್ಲದಿರುವುದೂ ಸ್ಪಷ್ಟವಾಗಿದೆ ಉದಾಹರಣೆಗೆ

**ಆ ಘಾ ಯೋಷೇವ ಸೂನರ್ಯುಷಾ ಯಾತಿ ಪ್ರಭುಂಜತೀ ।**
**ಜರಯಂತೀ ವೃಜನಂ ಪದ್ವದೀಯತ ಉತ್ಪಾತಯತಿ ಪಕ್ಷಿಣಃ ॥**
(ಋ. ಸಂ. ೧-೪೮-೫)

ಎಂಬ ಋಕ್ಕಿನಲ್ಲಿ **ಪಕ್ಷಿಣಃ** ಎಂಬ ಬೇರೆ ಪದವಿರುವುದರಿಂದ **ಪದ್ವತ್** ಎಂಬ ಪದವು ಕಾಲಿನಿಂದ ಸಂಚರಿಸತಕ್ಕ ಪ್ರಾಣಿಗಳನ್ನು ಮಾತ್ರ ನಿರ್ದೇಶಿಸುತ್ತದೆಯೆಂದು ಸ್ಪಷ್ಟವಾಗಿದೆ. ಇದರಂತೆಯೇ,

**ನಿ ಗ್ರಾಮಾಸೋ ಅವಿಕ್ಷತ ನಿ ಪದ್ವಂತೋ ನಿ ಪಕ್ಷಿಣಃ । ನಿ ಶ್ಯೇನಾಸಶ್ಚಿದರ್ಥಿನಃ ।**
(ಋ. ಸಂ. ೧೦-೧೨೭-೫)

ಎಂಬ ಋಕ್ಕಿನಲ್ಲಿಯೂ ಸಹ **ಪದ್ವಂತಃ, ಪಕ್ಷಿಣಃ** ಎಂದು ಬೇರೆ ಬೇರೆ ನಿರ್ದೇಶವಿದೆ

**ತುವಿಗ್ರೇಭಿಃ—ತುವಿ**ಶಬ್ದವು ಬಹುನಾಮಗಳಲ್ಲಿ ಪಠಿತವಾಗಿದೆ (ನಿ. ೩-೧೩) **ಪ್ರಭೂತಂ ಶಬ್ದಯದ್ಭಿಃ** ದಾವಾಗ್ನಿಯ ಪ್ರಸರಣದಿಂದ ಭಯಗೊಂಡು ಅತಿಪ್ರಭೂತವಾಗಿ ಶಬ್ದಮಾಡುವ ಎಂದು ಸತ್ವಭಿಃ ಎಂಬ ಪದಕ್ಕೆ ವಿಶೇಷಣವಾಗಿದೆ ಅಥವಾ **ಪ್ರಭೂತಗಮನೈರ್ವಾ** ನಾನಾಕಡೆಗೂ ಓಡಿಹೋಗತಕ್ಕ ಸತ್ವಗಳೆಂದೂ ಆಗಬಹುದೆಂದೂ ಹೇಳಿದ್ದಾರೆ.

**ಜ್ರಯಃ—ಜ್ರಯಸಾ ಜವೇನ** । ವೇಗವಾಗಿ ಎಂದರ್ಥ. ಸಾಧಾರಣವಾಗಿ **ವರ್ತತೇ, ಅಯತೇ, ಲೋಟತೇ** ಇತ್ಯಾದಿ ಗತಿಕರ್ಮನಾಮಗಳಲ್ಲಿ **ಜ್ರಯತಿ** ಶಬ್ದವು ಪಠಿತವಾಗಿರುವುದರಿಂದ (ನಿ. ೩-೧೪) ಗಮನವೆಂದರ್ಥವಾಗುತ್ತದೆ ಆದರೆ ಆ ಗಮನದಲ್ಲೂ ಒಂದು ವೈಶಿಷ್ಟ್ಯವನ್ನು ತೋರಿಸುವ ಗಮನದ ವೇಗವನ್ನು ಹೇಳಲು ಈ ಪದದ ಪ್ರಯೋಗವಿದೆ. ಉದಾಹರಣೆಗೆ

**ಯಾದೃಗೇವ ದದೃಶೇ ತಾದೃಗುಚ್ಯತೇ ಸಂ ಛಾಯಯಾ ದಧಿರೇ ಸಿಧ್ರಯಾಪ್ಸ್ವಾ ।**
**ಮಹೀಮಸ್ಮಭ್ಯಮುರುಷಾಮುರು ಜ್ರಯೋ ಬೃಹತ್ಸುವೀರಮನಪಚ್ಯುತಂ ಸಹಃ ।**
(ಋ. ಸಂ. ೫-೪೪-೬)

**ಅವಿತಾಸಿ ಸುನ್ವತೋ ವೃಕ್ತಬರ್ಹಿಷಃ ಪಿಬಾ ಸೋಮಂ ಮದಾಯ ಕಂ ಶತಕ್ರತೋ ।**
**ಯಂ ತೇ ಭಾಗಮಧಾರಯನ್ವಿಶ್ವಾಃ ಸೇಹಾನಃ ಪೃತನಾ ಉರು ಜ್ರಯಃ ಸಮಪ್ಸುಜಿನ್ಮರುತ್ವಾಁ**
**ಇಂದ್ರ ಸತ್ಪತೇ ॥**　　(ಋ. ಸಂ. ೮-೩೬-೧)

ಇತ್ಯಾದಿ ಋಕ್ಕುಗಳಲ್ಲಿ ಜ್ರಯಶ್ಶಬ್ದಕ್ಕೆ ವೇಗವೆಂದೇ ಅರ್ಥಮಾಡಿದ್ದಾರೆ. ಮತ್ತು

**ಪ್ರತಿಭದ್ರಾ ಅದೃಕ್ಷತ ಗವಾಂ ಸರ್ಗಾ ನ ರಶ್ಮಯಃ । ಓಷಾ ಅಪ್ರಾ ಉರು ಜ್ರಯಃ ।**
(ಋ. ಸಂ. ೪-೫೨-೫)

ಎಂಬಲ್ಲಿ ಜ್ರಯ ಶಬ್ದಕ್ಕೆ ಮಹತ್ತಾದ **ತೇಜಸ್ಸೆಂದು** ಅರ್ಥವಾಗುತ್ತದೆ. ಆದರೆ ಇಲ್ಲೂ ಸಹ ಸಾಮರ್ಥ್ಯದ ವೇಗವು ಸೂಚಿತವಾಗಿದೆ. ಪ್ರಕೃತವಾದ ಋಕ್ಕಿನಲ್ಲಿಯೂ ಸಹ ದಾವಾಗ್ನಿಯ ಪ್ರಸರಣಕಾಲದಲ್ಲಿ ಅತ್ಯಂತ ಭೀತಿಯಿಂದ ನಾನಾ ದಿಕ್ಕುಗಳಿಗೂ ಓಡಿಹೋಗತಕ್ಕ ಪ್ರಾಣಿಗಳ **ವೇಗವು** ನಿರ್ದಿಷ್ಟವಾಗಿದೆ.

ವ್ಯಾಕರಣಪ್ರಕ್ರಿಯಾ

**ಅಧೀವಾಸಮ್**— ವಸ ಆಚ್ಛಾದನೇ. ಧಾತು. ಘಞ್ ಪ್ರತ್ಯಯ. **ಅತ ಉಪಧಾಯಾಃ** (ಪಾ. ಸೂ. ೭-೨-೧೧೬) ಎಂಬುದರಿಂದ ಧಾತುವಿನ ಉಪಧೆಗೆ ವೃದ್ಧಿ. **ಅನ್ಯೇಷಾಮಪಿ ದೃಶ್ಯತೇ** (ಪಾ. ಸೂ. ೬-೩-೧೩೭) ಎಂಬುದರಿಂದ ಪೂರ್ವಪದಕ್ಕೆ ದೀರ್ಘ. **ಥಾಥಘಞ್ಕ್ತಾಜ**—(ಪಾ. ಸೂ. ೬-೨-೧೪೪) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಮಾತುಃ**—ಮಾಙ್ ಮಾನೇ. ಧಾತು. ಕರ್ತರಿಯಲ್ಲಿ ತೃಚ್ ಪ್ರತ್ಯಯ. **ಚಿತಃ** ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ಷಷ್ಠೀ ಏಕವಚನಾಂತರೂಪ.

**ರಿಹನ್**—ರಿಹ ಕತ್ಥನಯುದ್ಧನಿಂದಾಹಿಂಸಾದಾನೇಷು ಧಾತು. ತುದಾದಿ. ಲಡರ್ಥದಲ್ಲಿ ಶತೃಪ್ರತ್ಯಯ **ತುದಾದಿಭ್ಯಃ ಶಃ** ಎಂಬುದರಿಂದ ಶ ವಿಕರಣ. ವಿಕರಣಸ್ವರ ಉಳಿಯುತ್ತದೆ.

**ತುವಿಗ್ರೇಭಿಃ**—**ಬಹುಲಂ ಛಂದಸಿ** ಎಂಬುದರಿಂದ ಭಿಸಿಗೆ ಐಸ್‌ಭಾವ ಬರುವುದಿಲ್ಲ. **ಬಹುವಚನೇ-ಝಲ್ಯೇತ್** ಎಂಬುದರಿಂದ ಏತ್ವ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಯಾತಿ**—ಯಾ ಪ್ರಾಪಣೇ. ಧಾತು ಅದಾದಿ ಲಟ್ ಪ್ರಥಮಪುರುಷ ಏಕವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ.

**ಜ್ರಯಃ**—ಜ್ರಿ ಅಭಿಭವೇ. ಧಾತು. **ಸರ್ವಧಾತುಭ್ಯಅಸುನ್** ಎಂಬುದರಿಂದ ಅಸುನ್ ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ದಧತ್**—ಡುಧಾಞ್ ಧಾರಣಪೋಷಣಯೋಃ ಧಾತು. ಜುಹೋತ್ಯಾದಿ. ಲಡರ್ಥದಲ್ಲಿ ಶತೃಪ್ರತ್ಯಯ. ಶ್ಲುವಿಕರಣ. **ಅಭ್ಯಸ್ತಾನಾಮಾದಿಃ** (ಪಾ ಸೂ ೬-೧-೧೮೯) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. **ನಾಭ್ಯಸ್ತಾಚ್ಛತುಃ** ಎಂಬುದರಿಂದ ನುಮಾಗಮ ಬರುವುದಿಲ್ಲ.

ಷಷ್ವತೇ—ಷತ್=ಪಾದಃ ಅಸ್ಯ ಅಸ್ತಿ ಇತಿ ಷಷ್ವತ್. **ತದಸ್ಯಾ**—ಎಂಬುದರಿಂದ ಮತುಪ್ ಪ್ರತ್ಯಯ. **ಝಯಃ** (ಪಾ. ಸೂ. ೮-೨-೧೦) ಎಂಬುದರಿಂದ ಮತುಪಿನ ಮಕಾರಕ್ಕೆ ವತ್ವ. ವ್ಯತ್ಯಯದಿಂದ ಮತುಪಿನ ಉದಾತ್ತಸ್ವರ ಬರುತ್ತದೆ. ಚತುರ್ಥೀ ಏಕವಚನಾಂತರೂಪ.

**ರೇರಿಹತ್**—ಹಿಂದೆ ಉಕ್ತವಾದ ಧಾತುವಿಗೆ ಅತಿಶಯಾರ್ಥತೋರುವಾಗ ಯಙ್. **ಯಙೋಽಚಿಚ** ಎಂಬುದರಿಂದ ಅದಕ್ಕೆ ಲುಕ್. ಯಙ್‌ಲುಗಂತದ ಮೇಲೆ ಲಡರ್ಥದಲ್ಲಿ ಶತೃ ಪ್ರತ್ಯಯ. **ಅಭ್ಯಸ್ತಾನಾಮಾದಿಃ** (ಪಾ. ಸೂ. ೬-೧-೧೮೯) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಶ್ಯೇನೀ**—ಶ್ಯೇತ ಶಬ್ದ. ಇದಕ್ಕೆ ಸ್ತ್ರೀತ್ವದಲ್ಲಿ **ವರ್ಣಾದನುದಾತ್ತಾತ್**—(ಪಾ. ಸೂ. ೪-೧-೩೯) ಎಂಬುದರಿಂದ ಜೀಪ್. ತತ್ಸನ್ನಿಯೋಗದಿಂದ ತಕಾರಕ್ಕೆ ನಕಾರಾದೇಶ.

**ಸಚತೇ**—ಷಚ ಸಮವಾಯೇ ಧಾತು. ಲಟ್ ಪ್ರಥಮಪುರುಷ ಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ವರ್ತನಿಃ**—ವರ್ತತೇ ಅನೇನ ಇತಿ ವರ್ತನಿಃ. ವೃತು ವರ್ತನೇ. ಧಾತು. **ವರ್ತನಿಃ ಸ್ತೋತ್ರೇ** (ಪಾ. ಸೂ. ೬-೧-೧೬೦) ಎಂಬುದರಿಂದ ಸಿದ್ಧವಾದ ಈ ಶಬ್ದಕ್ಕೆ ವ್ಯತ್ಯಯದಿಂದ ಅಂತೋದಾತ್ತವು ಸಿದ್ಧವಾಗುತ್ತದೆ. ॥ ೯ ॥

———:o:———

ಸಂಹಿತಾಪಾಠಃ

## ಅಸ್ಮಾಕಮಗ್ನೇ ಮಘವತ್ಸು ದೀದಿಹ್ಯಧ ಶ್ವಸೀವಾನ್ವೃಷಭೋ ದಮೂನಾಃ।
## ಅವಾಸ್ಯಾ ಶಿಶುಮತೀರದೀದೇರ್ವರ್ಮೇವ ಯುತ್ಸು ಪರಿಜರ್ಭುರಾಣಃ ॥ ೧೦ ॥

। ಪದಪಾಠಃ ।

ಅಸ್ಮಾಕಂ । ಅಗ್ನೇ । ಮಘವತ್ಽಸು । ದೀದಿಹಿ । ಅಧ । ಶ್ವಸೀವಾನ್ । ವೃಷಭಃ । ದಮೂನಾಃ ।
ಅವಽಅಸ್ಯ । ಶಿಶುಽಮತೀಃ । ಅದೀದೇಃ । ವರ್ಮಽಇವ । ಯುತ್ಽಸು । ಪರಿಽಜರ್ಭುರಾಣಃ ॥ ೧೦ ॥

। ಸಾಯಣಭಾಷ್ಯಂ ॥

ಹೇ ಅಗ್ನೇ ಅಸ್ಮಾಕಂ ಮಘವತ್ಸ್ವಸ್ಮತ್ಸಂಬಂಧಿಷ್ವನ್ನವತ್ಸು ಯಾಗೇಷು ಗೃಹೇಷು ವಾ ದೀದಿಹಿ । ದೀಪ್ಯಸ್ವ । ಅಧಾಥಾನಂತರಂ ಶ್ವಸೀವಾನ್ ಶ್ವಸನವಾನ್ ಜ್ವಾಲಾಭಿರ್ಶ್ಲೇಷ್ಯಾವಾನ್ ಅಸ್ಮತ್ಪ್ರಾಣನವಾನ್ವಾ-ವೃಷಭೋ ವರ್ಷಿತಾಭಿಮತಾನಾಂ ದಮೂನಾ ದಾನಮನಾ ದಮಮನಾ ದಾಂತಮನಾ ವಾ ಸರ್ವತ್ರ ಭವೇತಿ ಶೇಷಃ। ಸ ಉಕ್ತಲಕ್ಷಣಸ್ತ್ವಂ ಶಿಶುಮತೀರವಾಸ್ಯ। ಶಿಶುಶಬ್ದೇನ ತದವಸ್ಥಾ ಲಕ್ಷ್ಯತೇ। ಶೈಶವವತೀರ್ಜ್ವಾಲಾ ಅಪಕ್ಷೇಪ್ಯ ವಿಹಾಯಾದೀದೇಃ । ಭೃಶಂ ದೀಪ್ಯಸ್ವ । ಕೀದೃಶಸ್ತ್ವಂ । ಯುತ್ಸು ಸಂಗ್ರಾಮೇಷು ವರ್ಮೇವ ಕವಚಮಿವ ಪರಿಜರ್ಭುರಾಣೋಽಸ್ಮದ್ದ್ವೇಷ್ಯಾನ್ ಪುನಃಪುನಃ ಪರಿಹರನ್ । ಯುಧ್ಯಾ । ಯುತ್ಸು

ಸಂಗ್ರಾಮೇಷು ವರ್ಮೇವ ಪರಿಜರ್ಭುರಾಣೋ ಭವ ॥ ಹರತೇರ್ಯಙ್ಲುಗಂತಾಚ್ಛ್ಯ ಕ್ಯೋಃ ಸ ಶಾನಚ್ ।
ಅಭ್ಯಸ್ತಾನಾಮಾದಿರಿತ್ಯಾದ್ಯುದಾತ್ತತ್ವಂ ॥ ಉಕ್ತಗುಣಕೋ ಭವಾನ್ಮಘವತ್ಸು ಯಜ್ಞೇಷು ದೀದ್ಯಸ್ತು ॥

ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ । ಅಸ್ಮಾಕಂ—ನಮ್ಮ । ಮಘವತ್ಸು—ಅನ್ನಪೂರಿತವಾದ (ನಮ್ಮ) ಯಜ್ಞ ಗೃಹಗಳಲ್ಲಿ । ದೀದಿಹಿ—ಪ್ರಕಾಶಿಸು । ಅಧ—ಆಮೇಲೆ । ಶ್ವಸೀವಾನ್—ಜ್ವಾಲೆಗಳಿಂದ ಉರಿಯುತ್ತಾ ಅಥವಾ ನಮ್ಮನ್ನು ಚೈತನ್ಯಯುಕ್ತರನ್ನಾಗಿ ಮಾಡುತ್ತಾ । ವೃಷಭಃ—ಇಷ್ಟಾರ್ಥಗಳನ್ನು ಸುರಿಸುವವನಾಗಿಯೂ । ದಮೂನಾಃ—ದಾನವಂತನಾಗಿಯೂ ಅಥವಾ ದಾಂತನಾಗಿಯೂ ಆಗಿರು । ಶಿಶುಮತೀಃ—(ಪ್ರಕಾಶವಿಲ್ಲದ) ಎಳೆಯ ಜ್ವಾಲೆಗಳನ್ನು । ಅವಾಸ್ಯ—ಬಿಟ್ಟು ಬಿಟ್ಟು । ಅದೀದೇಃ—ಅತ್ಯಂತವಾಗಿ ಪ್ರಕಾಶಿಸು । ಯುತ್ಸು—ಯುದ್ಧಗಳಲ್ಲಿ। ವರ್ಮೇವ—ರಕ್ಷಾಕವಚವು ರಕ್ಷಿಸುವಂತೆ। ಪರಿ ಜರ್ಭುರಾಣಃ—(ಪದೇಪದೇ ಸಂಭವಿಸಬಹುದಾದ ಶತ್ರುಗಳ ಏಟುಗಳನ್ನು) ಆಗಾಗ್ಗೆ ತಡೆದು ನಮ್ಮನ್ನು ರಕ್ಷಿಸು.

ಭಾವಾರ್ಥ

ಎಲೈ ಅಗ್ನಿಯೇ, ಅನ್ನಪೂರಿತವಾದ ನಮ್ಮ ಯಜ್ಞಗೃಹಗಳಲ್ಲಿ ಅತಿಶಯವಾಗಿ ಪ್ರಕಾಶಿಸು. ಅನಂತರ ನಮ್ಮನ್ನು ನಿನ್ನ ಜ್ವಾಲೆಗಳಿಂದ ಚೈತನ್ಯಯುಕ್ತರನ್ನಾಗಿ ಮಾಡುತ್ತಾ ಇಷ್ಟಾರ್ಥಗಳನ್ನು ಸುರಿಸುವವನಾಗಿಯೂ, ದಾನಿಯಾಗಿಯೂ ಆಗಿರು. ಪ್ರಕಾಶವಿಲ್ಲದ ಎಳೆಯ ಜ್ವಾಲೆಗಳನ್ನು ಬಿಟ್ಟುಬಿಟ್ಟು ತೀಕ್ಷ್ಣವಾದ ಜ್ವಾಲೆಗಳಿಂದ ಪ್ರಕಾಶಿಸು. ಯುದ್ಧಗಳಲ್ಲಿ ಶತ್ರುಗಳನ್ನು ತಡೆದು ರಕ್ಷಾಕವಚವು ರಕ್ಷಿಸುವಂತೆ ಪದೇಪದೇ ಸಂಭವಿಸಬಹುದಾದ ಶತ್ರುಗಳ ಏಟನ್ನು ತಡೆದು ನಮ್ಮನ್ನು ರಕ್ಷಿಸು.

## English Translation

Shine, Agni, in our opulent (abodes), vivifying, showering (blssings) bounteous, casting off infantine (glimmerings); blaze (fiercely), repelling repeatedly like a coat of mail, (our enemies) in combats.

ವಿಶೇಷವಿಷಯಗಳು

ಅಸ್ಮಾಕಂ—ಸಾಧಾರಣವಾಗಿ ಅಸ್ಮಾಕಂ ಎಂಬ ಪದವನ್ನು ಷಷ್ಠೀ ವಿಭಕ್ತ್ಯರ್ಥದಲ್ಲಿಯೇ ಉಪಯೋಗಿಸುತ್ತೇವೆ. ಆದರೆ ಅದೊಂದೇ ವಿಭಕ್ತಿಯನ್ನು ಮಾತ್ರ ಸೂಚಿಸದೇ ಇತರ ವಿಭಕ್ತಿಗಳಲ್ಲಿಯೂ ಈ ಪದದ ಪ್ರಯೋಗಗಳನ್ನು ಗಮನಿಸಬಹುದು. ಕೆಲವೆಡೆಗಳಲ್ಲಿ ಕ್ರಿಯಾವಿಶೇಷಣವಾಗಿಯೂ ಇರುವುದುಂಟು.

> ನೂ ನೋ ಅಗ್ನ ಊತಯೇ ಸಬಾಧಸಶ್ಚ ರಾತಯೇ। ಅಸ್ಮಾಕಾಸಶ್ಚ ಸೂರಯೋ ವಿಶ್ವಾ ಆಶಾಸ್ತರೀಷಣಿ ।
>
> (ಋ. ಸಂ. ೫-೧೦-೬)

ಎಂಬಲ್ಲಿ ಸೂರಯಃ ಎಂಬುದಕ್ಕೆ ವಿಶೇಷಣವಾಗಿ ಪ್ರಥಮಾವಿಭಕ್ತಿಯಲ್ಲಿಯೂ,

**ಸ ರಥೇನ ರಥೀತಮೋಽಸ್ಮಾಕೇನಾಭಿಯುಗ್ವನಾ । ಜೇಷಿ ಜಿಷ್ಣೋ ಹಿತಂ ಧನಂ ।**
(ಋ. ಸಂ ೬-೪೫-೧೫)

ಎಂಬಲ್ಲಿ ತೃತೀಯಾ ವಿಭಕ್ತಿಯಲ್ಲಿಯೂ ಉಪಯೋಗಿಸಲ್ಪಟ್ಟಿದೆ. ಹೀಗೆ **ಅಸ್ಮೇ** ಎಂಬ ಪದವೂ ಸಹ ಸರ್ವವಿಭಕ್ತ್ಯಂತ ವಾಗಿರುವುದನ್ನು ನಿರುಕ್ತಕಾರರ ಉದಾಹರಣೆಗಳೊಂದಿಗೆ (ನಿ. ೬-೭) ಋ. ಸಂ. ೧-೧೦೨-೨ ನೇ ಋಕ್ಕಿನ ವಿಶೇಷ ವಿಷಯಗಳಲ್ಲಿ ತಿಳಿಸಿದೆ.

**ದಮೂನಾಃ—ದಮೂನಾ ದಮುಮನಾ ವಾ, ದಾನಮನಾ ವಾ, ದಾಂತಮನಾ ವಾ । ಅಪಿ ವಾ ದಮ ಇತಿ ಗೃಹನಾಮ ತನ್ಮನಾಃ ಸ್ಯಾತ್ ।** ದಯಾಪೂರಿತವಾದ ಮನಸ್ಸುಳ್ಳವನಾದ್ದರಿಂದಾಗಲಿ, ಅಥವಾ, ದಾನ ಮಾಡತಕ್ಕ ಮನಸ್ಸುಳ್ಳವನಾದ್ದರಿಂದಾಗಲಿ ಅಥವಾ ಆತ್ಮಸಂಯಮದಲ್ಲಿ ನಿರತನಾಗಿರುವುದರಿಂದಾಗಲಿ **ದಮೂನಾಃ** ಎಂಬ ವಿಶೇಷಣವಿದೆ ಅಥವಾ **ದಮ** ಶಬ್ದವು **ಗೃಹದ** ಪರ್ಯಾಯನಾಮವಾಗಿರುವುದರಿಂದ **ಗೃಹದಲ್ಲಿ** ಆಸಕ್ತಿಯುಳ್ಳ ವನೆಂದಾಗಲಿ ಆಗಬಹುದು. (ನಿ. ೪-೫). ಆದುದರಿಂದಲೇ ಸಾಯಣರೂ ಸಹ **ದಾನಮನಾ, ದಮುಮನಾ, ದಾಂತಮನಾ ವಾ ಸರ್ವತ್ರ ಭವ** ಎಂದು **ಅಗ್ನಿಗೆ** ಪ್ರಾರ್ಥಿಸಿದೆಯೆಂದು ವಿವರಿಸಿದ್ದಾರೆ.

**ವರ್ಮ ಇವ—ಕವಚಮಿವ ।** ರಕ್ಷಾಕವಚದಂತೆ ಎಂದು ಅಗ್ನಿಯಿಂದ ಲಭಿಸತಕ್ಕ ರಕ್ಷಣೆಗೆ ಹೋಲಿಸಿದೆ.

**ನ ತಸ್ಯ ಮಾಯಯಾ ಚನ ರಿಪುರೀಶೀತ ಮರ್ತ್ಯಃ । ಯೋ ಅಗ್ನಯೇ ದದಾಶ ಹವ್ಯದಾತಿಭಿಃ ।**
(ಋ ಸಂ. ೮-೨೩-೧೫)

ಇತ್ಯಾದಿ ಋಕ್ಕುಗಳಲ್ಲಿ ಅಗ್ನಿಯ ಆಶ್ರಯವನ್ನು ಪಡೆದವನಿಗೆ ಶತ್ರುಗಳು ಎಷ್ಟು ಪ್ರಬಲರಾದರೂ ಯಾರೂ ಹಿಂಸೆ ಮಾಡಲು ಸಾಧ್ಯವಿಲ್ಲವೆಂದು ಹೇಳಿದೆ. ಅಂತಹ ರಕ್ಷಣೆಯು ನಮಗೂ ಇರಬೇಕೆಂದು ಪ್ರಾರ್ಥಿಸಿದೆ.

ವ್ಯಾಕರಣಪ್ರಕ್ರಿಯಾ

**ಮಘವತ್ಸು**—ಮಘಃ ಯೇಷಾಂ ಅಸ್ತಿ ಇತಿ ಮಘವಂತಃ ಮತುಪ್ ಪ್ರತ್ಯಯ. ಪಿತ್ತಾದುದರಿಂದ ಪ್ರತ್ಯಯ. ಅನುದಾತ್ತವಾಗುತ್ತದೆ. ಸಪ್ತಮೀ ಬಹುವಚನಾಂತರೂಪ.

**ದೀದಿಹಿ**—ದೀದಿ ಧಾತುವು ದೀಪ್ತ್ಯರ್ಥದಲ್ಲಿ ಪಠಿತವಾಗಿದೆ. ಇದು ಛಾಂದಸವಾದ ಧಾತು. ಲೋಟ್ ಮಧ್ಯಮಪುರುಷ ಏಕವಚನದಲ್ಲಿ **ಸೇಹ್ಯರ್ಪಿಚ್ಚ** ಎಂಬುದರಿಂದ ಸಿಪಿಗೆ ಹಿ ಆದೇಶ. **ಬಹುಲಂ ಛಂದಸಿ** ಎಂಬುದರಿಂದ ಶಪಿಗೆ ಲುಕ್. ಹೀಗೆ ಅಪಿತ್ತ್ವ ವಿಧಾನಮಾಡಿರುವುದರಿಂದ ಅದನ್ನು ನಿಮಿತ್ತೀಕರಿಸಿ ಗುಣ ಬರುವುದಿಲ್ಲ. ಅತಿಙಂತದ ಪರದಲ್ಲಿ ಬಂದುದರಿಂದ ನಿಘಾತಸ್ವರ ಬರುತ್ತದೆ.

**ಅಧ**—ಛಾಂದಸವಾಗಿ ಥಕಾರಕ್ಕೆ ವರ್ಣವಿಕಾರ ಬಂದಿದೆ.

**ಶ್ವಸೀವಾನ್**—ಶ್ವಸ ಪ್ರಾಣನೇ. ಧಾತು. ಮತುಪ್ ಪ್ರತ್ಯಯ. ಪಿತ್ತಾದುದರಿಂದ ಧಾತುಸ್ವರ ಉಳಿಯುತ್ತದೆ.

**ವೃಷಭಃ**—ವೃಷು ಸೇಚನೇ. ಧಾತು. **ಋಷಿವೃಷಿಭ್ಯಾಂ ಕಿತ್** (ಉ. ಸೂ. ೩-೩೦೩) ಎಂಬುದರಿಂದ ಅಭಚ್ ಪ್ರತ್ಯಯ. ಕಿತ್ವವಿಧಾನಮಾಡಿರುವುದರಿಂದ ಗುಣ ಬರುವುದಿಲ್ಲ. **ಚಿತಃ** (ಪಾ. ಸೂ. ೬-೧-೧೬೩) ಎಂಬುದ ರಿಂದ ಅಂತೋದಾತ್ತಸ್ವರ ಬರುತ್ತದೆ.

**ದಮೂನಾಃ**—ದಮಯತಿ ಇತಿ ದಮೂನಾಃ ದಮು ಉಪಶಮೇ ಧಾತು. **ದಮೇರೂನಸಿಃ** (ಉ. ಸೂ. ೪-೬೭೪) ಎಂಬುದರಿಂದ ಔಣಾದಿಕನಾದ ಊನಸಿ ಪ್ರತ್ಯಯ. ಈ ಶಬ್ದದ ವಿಷಯದಲ್ಲಿ ಯಾಸ್ಕರು ಹೀಗೆ ಹೇಳುತ್ತಾರೆ. ದಮೂನಾ ದಮಮನಾ ವಾ ದಾನಮನಾ ವಾ ದಾಂತಮನಾ ವಾಪಿ ವಾ ದಮ ಇತಿ ಗೃಹನಾಮ ತನ್ಮನಾಃ ಸ್ಯಾತ್ (ನಿರು. ೪-೪) ಇತಿ.

**ಅವಾಸ್ಯ**—ಅವ ಉಪಸರ್ಗ. ಅಸು ಕ್ಷೇಪಣೇ. ಧಾತು. **ಸಮಾಸೇನಞ್ಪೂರ್ವೇಕ್ತ್ವೋಲ್ಯಪ್** (ಪಾ. ಸೂ. ೭-೧-೩೭) ಎಂಬುದರಿಂದ ಲ್ಯಪ್. ಇದು ಪಿತ್ತಾದುದರಿಂದ ಧಾತುಸ್ವರ ಉಳಿಯುತ್ತದೆ. **ಗತಿಕಾರಕೋಪಪದಾತ್ಕೃತ್** ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಅದೀದೇಃ**—ದೀದಿ ಧಾತುವು ಹಿಂದೆ ಉಕ್ತವಾಗಿದೆ. **ಛಂದಸಿ ಲುಙ್‌ಲಙ್‌ಲಿಟಃ** (ಪಾ. ಸೂ. ೩-೪-೬) ಎಂಬುದರಿಂದ ಲೋಡರ್ಥದಲ್ಲಿ ಲಙ್. ಮಧ್ಯಮಪುರುಷ ಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ಯುತ್ಸು**—ಯು ಮಿಶ್ರಣಾಮಿಶ್ರಣಯೋಃ ಧಾತು. **ಕ್ವಿಪ್ ಚ** (ಪಾ. ಸೂ. ೩-೨-೭೬) ಎಂಬುದರಿಂದ ಕ್ವಿಪ್ ಪ್ರತ್ಯಯ. **ಹ್ರಸ್ವಸ್ಯ ಪಿತಿ ಕೃತಿ ತುಕ್** (ಪಾ. ಸೂ. ೬-೧-೭೧) ಎಂಬುದರಿಂದ ಧಾತುವಿಗೆ ತುಕಾಗಮ. ಸಪ್ತಮೀ ಬಹುವಚನಾಂತರೂಪ. **ಸಾವೇಕಾಚಸ್ತೃತೀಯಾದಿಃ** (ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಪರಿಜರ್ಭುರಾಣಃ**—ಹೃಞ್ ಹರಣೇ. ಧಾತು. ಇದಕ್ಕೆ ಪೌನಃಪುನ್ಯಾರ್ಥತೋರುವಾಗ **ಧಾತೋರೇಕಾಚಃ**—(ಪಾ. ಸೂ. ೩-೧-೨೨) ಎಂಬುದರಿಂದ ಯಙ್. **ಯಙೋಽಚಿಚ** (ಪಾ. ಸೂ. ೨-೪-೭೪) ಎಂಬುದರಿಂದ ಅದಕ್ಕೆ ಲುಕ್. **ವ್ಯತ್ಯಯೋ ಬಹುಲಮ್** (ಪಾ. ಸೂ. ೩-೧-೮೫) ಎಂಬುದರಿಂದ ಲಡರ್ಥದಲ್ಲಿ ಶಾನಚ್ ಪ್ರತ್ಯಯ. **ರುಕ್ ರಿಗೌಚಲುಕಿ** (ಪಾ. ಸೂ. ೭-೪-೯೧) ಎಂಬುದರಿಂದ ಅಭ್ಯಾಸಕ್ಕೆ ರುಕಾಗಮ. **ಅಭ್ಯಸ್ತಾನಾಮಾದಿಃ** (ಪಾ. ಸೂ. ೬-೧-೧೮೯) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಪ್ರಾದಿಸಮಾಸದಲ್ಲಿ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ॥ ೧೦ ॥



। ಸಂಹಿತಾಪಾಠಃ ।

ಇದಮಗ್ನೇ ಸುಧಿತಂ ದುರ್ಧಿತಾದಧಿ ಪ್ರಿಯಾದು ಚಿನ್ಮನ್ಮನಃ ಪ್ರೇಯೋ ಅಸ್ತು ತೇ ।
ಯತ್ತೇ ಶುಕ್ರಂ ತನ್ವೋ೩ ರೋಚತೇ ಶುಚಿ ತೇನಾಸ್ಮಭ್ಯಂ ವನಸೇ ರತ್ನಮಾ ತ್ವಂ ॥ ೧೧ ॥

ಪದಪಾಠಃ

ಇದಂ । ಅಗ್ನೇ । ಸುऽಧಿತಂ । ದುಃऽಧಿತಾತ್ । ಅಧಿ । ಪ್ರಿಯಾತ್ । ಊಂ ಇತಿ । ಚಿತ್ । ಮನ್ಮನಃ ।
ಪ್ರೇಯಃ । ಅಸ್ತು । ತೇ ।

ಯತ್ । ತೇ । ಶುಕ್ರಂ । ತನ್ವಃ । ರೋಚತೇ । ಶುಚಿ । ತೇನ । ಅಸ್ಮಭ್ಯಂ । ವನಸೇ । ರತ್ನಂ । ಆ ।
ತ್ವಂ ॥ ೧೧ ॥

ಸಾಯಣಭಾಷ್ಯಂ

ಹೇ ಅಗ್ನೇ ಇದಮಸ್ಮದೀಯಂ ಸೋಮಾದಿರೂಪಂ ಹವಿಃ । ಕೀದೃಶಂ ತತ್ । ದುರ್ಧಿತಾದ್ದುಷ್ಟಂ ಸ್ಥಾಪಿತಾತ್ಕಠಿನಾತ್ಕಾಷ್ಠಾದೇರಧ್ಯುಪರಿ ಸುಧಿತಂ ಸುಹಿತಂ ಸುಷ್ಠು ದತ್ತಂ । ಮನ್ಮನೋ ಮನನೀಯಾತ್ಪ್ರಿಯಾದು ಚಿತ್ ತವ ಹೃದ್ಯಾದಪಿ । ಉಶಬ್ದೋऽವಧಾರಣೇ ಚಿಚ್ಛಬ್ದೋऽಪಿಶಬ್ದಾರ್ಥಃ । ತೇ ತವ ಪ್ರೇಯೋऽತಿಪ್ರಿಯತಮಮಸ್ತು । ತತ್ಕಿಮಿತ್ಯಾಹ । ಹೇ ಅಗ್ನೇ ತೇ ತವ ತನ್ವಃ ಶರೀರಸ್ಯ ಘೃತೇನೋಜ್ಜ್ವಲಿತಾಯಾ ಜ್ವಾಲಾಯಾಃ ಶುಚಿ ನಿರ್ಮಲಂ ಶುಕ್ರಂ ದೀಪ್ತಂ ಯತ್ತೇಜೋ ರೋಚತೇ ತೇನ ಸಹ ರತ್ನಂ ರಮಣೀಯಂ ಮಣಿಮುಕ್ತಾದಿಕಂ ವಿತರನ್ನಸ್ಮಭ್ಯಂ ವನಸೇ । ಅಸ್ಮಾನ್ಸಂಭಜಸ್ವ ॥ ವನತೇರ್ವ್ಯತ್ಯಯೇನಾತ್ಮನೇಪದಂ ॥

ಪ್ರತಿಪದಾರ್ಥ

**ಅಗ್ನೇ**—ಎಲೈ ಅಗ್ನಿಯೇ । **ದುರ್ಧಿತಾತ್ ಅಧಿ**—ಕಠಿಣವಾದ ಕಾಷ್ಠಾದಿಗಳಮೇಲೆ । **ಸುಧಿತಂ**—ಎಚ್ಚರಿಕೆಯಿಂದ ಅರ್ಪಿತವಾದ । **ಇದಂ**—ಈ ಸೋಮಾದಿರೂಪವಾದ ಹವಿಸ್ಸು । **ಮನ್ಮನಃ**—ಸ್ತುತ್ಯರ್ಹವಾದುದೂ । **ಪ್ರಿಯಾದು ಚಿತ್**—ಹಿತಕರವಾದುದೂ ಆದ ಎಲ್ಲಾ ವಸ್ತುಗಳಿಗಿಂತಲೂ । **ತೇ**—ನಿನಗೆ । **ಪ್ರೇಯಃ**—ಅತ್ಯಂತ ಪ್ರೀತಿಪಾತ್ರವಾದುದಾಗಿ । **ಅಸ್ತು**—ಆಗಲಿ । **ತೇ**—ನಿನ್ನ । **ತನ್ವಃ**—(ಆಜ್ಯದಿಂದ ಪ್ರಜ್ವಲಿತವಾದ ಜ್ವಾಲಾರೂಪದ ಶರೀರದ । **ಶುಚಿ**— ನಿರ್ಮಲವಾದುದೂ । **ಶುಕ್ರಂ**—ಪ್ರಕಾಶಮಾನವಾದುದೂ ಆದ । **ಯತ್**—ಯಾವ ತೇಜಸ್ಸು । **ರೋಚತೇ**—ಪ್ರಕಾಶಿಸುತ್ತದೆಯೋ (ಬೆಳಗುತ್ತದೆಯೋ) । **ತೇನ**—ಅದರೊಂದಿಗೆ । **ತ್ವಂ**—ನೀನು । **ರತ್ನಂ**—ರಮಣೀಯವಾದ ಧನವನ್ನು । **ಅಸ್ಮಭ್ಯಂ**—ನಮಗೆ । **ಆ ವನಸೇ**—ತುಂಬಿಕೊಡು.

ಭಾವಾರ್ಥ

ಎಲೈ ಅಗ್ನಿಯೇ, ಕಠಿಣವಾದ ಕಾಷ್ಠಾದಿಗಳಮೇಲೆ ಎಚ್ಚರಿಕೆಯಿಂದ ಅರ್ಪಿತವಾದ ಈ ಸೋಮಾದಿರೂಪವಾದ ಹವಿಸ್ಸು ಸ್ತುತ್ಯರ್ಹವಾದುದೂ, ಹಿತಕರವಾದುದೂ ಆದ ನಿನ್ನ ಇತರ ಎಲ್ಲಾ ವಸ್ತುಗಳಿಗಿಂತಲೂ ಅತ್ಯಂತ ಹೆಚ್ಚಾಗಿ ಪ್ರೀತಿಪಾತ್ರವಾದುದಾಗಲಿ. ಆಜ್ಯದಿಂದ ಪ್ರಜ್ವಲಿತವಾದ ನಿನ್ನ ಜ್ವಾಲಾರೂಪದ ಶರೀರದ ನಿರ್ಮಲವಾದುದೂ, ಪ್ರಕಾಶಮಾನವಾದುದೂ ಆದ ನಿನ್ನ ತೇಜಸ್ಸಿನೊಡನೆ ನೀನು ಬಂದು ನಮಗೆ ರಮಣೀಯವಾದ ಧನವನ್ನು ತುಂಬಿಕೊಡು.

## English Translation

May this oblation, Agni, carefully placed upon the rugged but agreeable (pile of fuel), be most acceptable to you, so that the pure radiance of your person may shine brightly, and you may grant us wealth.

ವಿಶೇಷವಿಷಯಗಳು.

**ದುರ್ಧಿತಾತ್ ಅಧಿ ಸುಧಿತಂ**—ಕಾಷ್ಠಾದಿಗಳು ಕಠಿಣವಾಗಿದ್ದರೂ ಸಹ ಹವಿರಾದಿ ಅರ್ಪಣಗಳು ಮೃದುವಾಗಿಯೂ ಹಿತಕರವಾಗಿಯೂ ಇರುವುವೆಂದು ಅಗ್ನಿಯಲ್ಲಿ ಪ್ರಾರ್ಥಿಸಿದೆ.

**ಮನ್ಮನಃ**—ಮನ್ಮ ಶಬ್ದಕ್ಕೆ **ಮನನೀಯ,** ಧ್ಯಾನಾರ್ಹವಾದುದೆಂದು ಅರ್ಥಮಾಡಿದ್ದಾರೆ. ಸ್ತುತ್ಯವಾದ, ಪೂಜ್ಯವಾದ ಎಂಬರ್ಥಗಳಲ್ಲಿ ಈ ಪದದ ಪ್ರಯೋಗವಿದೆ. ೧-೨೬-೨ ; ೧-೧೨೭-೨ ; ೧-೧೫೧-೮, ಇತ್ಯಾದ್ಯನೇಕ ಋಕ್ಕುಗಳಲ್ಲಿ **ಮನ್ಮನಾ, ಮನ್ಮಭಿಃ** ಎಂಬ ಪದಗಳಿಗೆ ಶ್ರೇಷ್ಠವಾದ, ಮತ್ತು ಸ್ತುತ್ಯರ್ಹವಾದ ಮನಃಪ್ರವೃತ್ತಿಯೆಂದರ್ಥವಾಗುತ್ತದೆ. ನಿರುಕ್ತಕಾರರು **ಮನ್ಮ** ಶಬ್ದದ ಪ್ರಯೋಗವಿರುವ ಮೂರು ಋಕ್ಕುಗಳನ್ನು ಉದಹರಿಸಿದ್ದಾರೆ. ಮೊದಲನೆಯದಾಗಿ,

**ಉಪ ಪ್ರಾಗಾತ್ಸುಮನ್ಮೇಽಧಾಯಿ ಮನ್ಮ ದೇವಾನಾಮಾಶಾ ಉಪ ವೀತಪೃಷ್ಠಃ ।**
**ಅನ್ವೇನಂ ವಿಪ್ರಾ ಋಷಯೋ ಮದಂತಿ ದೇವಾನಾಂ ಪುಷ್ಟೇ ಚಕೃಮಾ ಸುಬಂಧುಂ ॥**
(ಋ. ಸಂ. ೧-೧೬೨-೭)

ಎಂಬ ಋಕ್ಕಿನಲ್ಲಿ **ಮನ್ಮ**ಶಬ್ದಕ್ಕೆ ನಿರುಕ್ತಕಾರರು **ಮಂತ್ರ**ವೆಂದರ್ಥಮಾಡಿದ್ದಾರೆ (ನಿ. ೬-೨೨) ಮನನೀಯವಾದ ಎಂದರೆ ಧ್ಯಾನಾರ್ಹವಾದ ಮಂತ್ರವೆಂದರ್ಥ. ಸಾಯಣರು ಮನನೀಯವಾದ ಫಲವೆಂದರ್ಥಮಾಡಿದ್ದಾರೆ. ಎರಡನೆಯದಾಗಿ,

**ತನೂನಪಾತ್ಪಥ ಋತಸ್ಯ ಯಾನಾನ್ಮಧ್ವಾ ಸಮಂಜನ್ತ್ಸ್ವದಯಾ ಸುಜಿಹ್ವ ।**
**ಮನ್ಮಾನಿ ಧೀಭಿರುತ ಯಜ್ಞಮೃಂಧನ್ ದೇವತ್ರಾ ಚ ಕೃಣುಹ್ಯಧ್ವರಂ ನಃ ॥**
(ಋ. ಸಂ. ೧೦-೧೧೦-೨)

ಎಂಬಲ್ಲಿ **ಅಸ್ಮದಭಿಪ್ರೇತಾನಿ ಸ್ತೋತ್ರಾಣಿ** ಎಂದರ್ಥಮಾಡಿದ್ದಾರೆ. ಹೀಗೆಯೇ ೧-೧೫೯-೯ನೇ ಋಕ್ಕನ್ನು ಉದಹರಿಸಿ (ನಿ. ೧೦-೪೨) ಅಲ್ಲಿಯೂ ಅದೇ ಅರ್ಥವಾಗುತ್ತದೆಂದು ತೋರಿಸಿದ್ದಾರೆ. ಪ್ರಕೃತವಾದ ಋಕ್ಕಿನಲ್ಲಿ ಸ್ತುತ್ಯರ್ಹವಾದ ಎಂದರ್ಥವಾಗುತ್ತದೆ.

**ತೇ ತನ್ವಃ ಶುಚಿ ಶುಕ್ರಂ**—ಆಜ್ಯದಿಂದ ಪ್ರಜ್ವಲಿತವಾದ ಜ್ವಾಲಾರೂಪದ ಶರೀರದ ನಿರ್ಮಲವಾದುದೂ ಪ್ರಕಾಶಮಾನವಾದುದೂ ಆದ ತೇಜಸ್ಸು, ಎಂದು ಯಜ್ಞಾಹುತಿಯಾದ ಮೇಲೆ ಅಗ್ನಿಯ ತೇಜಸ್ಸಿನ ವೈಶಿಷ್ಟ್ಯವನ್ನು ವರ್ಣಿಸಿದೆ.

ಅಗ್ನಿಶ್ಶುಚಿ ವ್ರತತಮಶ್ಶುಚಿರ್ವಿಪ್ರಃ ಶುಚಿಃ ಕವಿಃ । ಶುಚೀ ರೋಚತ ಆಹುತಃ । ಉದಗ್ನೇ ಶುಚಯಸ್ತವ ಶುಕ್ರಾ ಭ್ರಾಜಂತ ಈರತೇ । ತವ ಜ್ಯೋತೀಂಗ್ಷ್ಯರ್ಚಯಃ ॥
(ತೈ. ಸಂ. ೧-೩-೧೪)

ಎಂದು ತೈತ್ತಿರೀಯ ಸಂಹಿತೆಯಲ್ಲಿ ವರ್ಣಿಸಿರುವಂತೆ ಅಗ್ನಿಯ ಶುಭ್ರವಾದ ತೇಜಸ್ಸು ವರ್ಣಿತವಾಗಿದೆ.

ರತ್ನಂ—ರತ್ನಶಬ್ದವು ಧನನಾಮಗಳಲ್ಲಿ ಪಠಿತವಾಗಿದೆ. ( ನಿ. ೨-೯ ). ರಮಣೀಯವಾದ ಧನವೆಂದರ್ಥ.

ವ್ಯಾಕರಣಪ್ರಕ್ರಿಯಾ

**ಸುಧಿತಮ್**—ಡುಧಾಞ್ ಧಾರಣಪೋಷಣಯೋಃ ಧಾತು ಕರ್ಮಣಿಯಲ್ಲಿ ಕ್ತಪ್ರತ್ಯಯ. **ದಧಾತೇರ್ಹಿಃ** ಎಂಬುದರಿಂದ ಹಿಗೆ ಬದಲಾಗಿ ವ್ಯತ್ಯಯದಿಂದ ಧತ್ವ. **ಗತಿರನಂತರಃ**—(ಪಾ. ಸೂ. ೬-೨-೪೯) ಎಂಬುದರಿಂದ ಗತಿಗೆ ಪ್ರಕೃತಿಸ್ವರ ಬರುತ್ತದೆ. ಹೀಗೆಯೇ ಸುಧಿತಾತ್ ಎಂಬಲ್ಲಿಯೂ ಸ್ವರಾದಿಗಳು ಬರುತ್ತವೆ.

**ಮನ್ಮನಃ**—ಮನ ಜ್ಞಾನೇ. ಧಾತು. **ಅನ್ಯೇಭ್ಯೋಽಪಿದೃಶ್ಯತೇ**—(ಪಾ. ಸೂ. ೩-೨-೭೫) ಎಂಬುದ ರಿಂದ ಮನಿನ್ ಪ್ರತ್ಯಯ. **ಞ್ನಿತ್ಯಾದಿರ್ನಿತ್ಯಮ್**—ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಪಂಚಮೀ ಏಕವಚನಾಂತರೂಪ.

**ಪ್ರೇಯಃ**—ಅತಿಶಯಾರ್ಥದಲ್ಲಿ ಈಯಸುನ್ ಪ್ರತ್ಯಯ. **ಪ್ರಿಯಸ್ಥಿರಸ್ಫಿರ**—(ಪಾ. ಸೂ. ೬-೪-೧೫೭) ಎಂಬುದರಿಂದ ಪ್ರಿಯಶಬ್ದಕ್ಕೆ ಪ್ರಾದೇಶ. ಗುಣ. ಈಯಸುನ್ ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಅಸ್ತು**—ಅಸ ಭುವಿ ಧಾತು. ಅದಾದಿ ಲೋಟ್ ಪ್ರಥಮಪುರುಷ ಏಕವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ.

**ತನ್ವಃ**—ತನು ಶಬ್ದ. ಷಷ್ಠೀ ಏಕವಚನಪರವಾದಾಗ **ತನ್ವಾದೀನಾಂ ಛಂದಸ್ಯುಪಸಂಖ್ಯಾನಮ್**—ಎಂಬ ವಚನದಿಂದ ಯಣಾದೇಶ. ಉದಾತ್ತಸ್ಥಾನದಲ್ಲಿ ಯಣ್ ಬಂದುದರಿಂದ **ಉದಾತ್ತಸ್ವರಿತಯೋರ್ಯಣಃ**—(ಪಾ. ಸೂ. ೮-೨-೪) ಎಂಬುದರಿಂದ ಪರಕ್ಕೆ ಸ್ವರಿತಸ್ವರ ಬರುತ್ತದೆ

**ರೋಚತೇ**—ರುಚ ದೀಪ್ತೌ ಧಾತು. ಲಟ್. ಪ್ರಥಮಪುರುಷಏಕವಚನಾಂತರೂಪ. ಯತ್ ಸಂಬಂಧವಿರುವುದರಿಂದ **ಯದ್ವೃತ್ತಾನ್ನಿತ್ಯಮ್**—(ಪಾ. ಸೂ. ೮-೧-೬೬) ಎಂಬುದರಿಂದ ನಿಘಾತಸ್ವರಪ್ರತಿಷೇಧ ಬರುತ್ತದೆ. **ತಾಸ್ಯನುದಾತ್ತೇತ್**—(ಪಾ. ಸೂ. ೬-೧-೧೮೬) ಎಂಬುದರಿಂದ ಲಸಾರ್ವಧಾತುಕವು ಅನುದಾತ್ತ ವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ವನಸೇ**—ವನ ಷಣ ಸಂಭಕ್ತೌ ಧಾತು. **ವ್ಯತ್ಯಯೋ ಬಹುಲಮ್**—(ಪಾ. ಸೂ. ೩-೧-೮೫) ಎಂಬುದ ರಿಂದ ಆತ್ಮನೇಪದಿಯಾಗುತ್ತದೆ. ಲೇಟ್. ಮಧ್ಯಮಪುರುಷಏಕವಚನಾಂತರೂಪ. ಅತಿಙಂತದ ಪರದಲ್ಲಿರುವುದ ರಿಂದ ನಿಘಾತಸ್ವರ ಬರುತ್ತದೆ.

**ರತ್ನಮ್**—ರಮಯತೀತಿ ರತ್ನಮ್. ರಮು ಕ್ರೀಡಾಯಾಂ ಧಾತು. **ರಮೇಸ್ತಚ**—(ಉ. ಸೂ. ೩-೨೯೪) ಎಂಬುದರಿಂದ ನಪ್ರತ್ಯಯ. ತತ್ಸನ್ನಿಯೋಗದಿಂದ ಮಕಾರಕ್ಕೆ ತಕಾರಾದೇಶ. ನಿತ್ ಎಂದು ಅನುವೃತ್ತ ವಾಗುವುದರಿಂದ ಆದ್ಯುದಾತ್ತಸ್ವರ ಬರುತ್ತದೆ. ‖ ೧೧ ‖

———:o:———

ಸಾಯಣಭಾಷ್ಯಂ

ರಥಾಯ ನಾವಮುತ ನೋ ಗೃಹಾಯ ನಿತ್ಯಾರಿತ್ರಾಂ ಪದ್ವತೀಂ ರಾಸ್ಯಗ್ನೇ ।
ಅಸ್ಮಾಕಂ ವೀರಾ ಉತ ನೋ ಮಘೋನೋ ಜನಾಂಶ್ಚ ಯಾ ಪಾರಯಾ-
ಚ್ಛರ್ಮ ಯಾ ಚ ॥ ೧೨ ॥

ಪದಪಾಠಃ

ರಥಾಯ । ನಾವಂ । ಉತ । ನಃ । ಗೃಹಾಯ । ನಿತ್ಯಽಅರಿತ್ರಾಂ । ಪತ್ಽವತೀಂ । ರಾಸಿ । ಅಗ್ನೇ ।
ಅಸ್ಮಾಕಂ । ವೀರಾನ್ । ಉತ । ನಃ । ಮಘೋನಃ । ಜನಾನ್ । ಚ । ಯಾ । ಪಾರಯಾತ್ । ಶರ್ಮ ।
ಯಾ । ಚ ॥ ೧೨ ॥

ಸಾಯಣಭಾಷ್ಯಂ

ಹೇ ಅಗ್ನೇ ಉತಾಪಿ ಚ ರಥಾಯ ರಂಹಣಾಯ ಗೃಹಾಯ ಸರ್ವಸ್ಯಾಯತನಭೂತಾಯ ನೋಽಸ್ಮಾಕಂ ಯಜಮಾನಾಯ ನಾವಂ ಸಂಸಾರೋತ್ತಾರಿಕಾಂ ಸೋಮಯಾಗಾತ್ಮಿಕಾಂ ನಾವಂ । ಯಜ್ಞೋ ವೈ ಸುತರ್ಮಾ ನೌರಿತ್ಯಾದಿಷು ಶ್ರುತಿಷು ನೌರೂಪತ್ವೇನ ಸ್ತುತತ್ವಾತ್ । ಕೀದೃಶೀಂ ತಾಂ । ನಿತ್ಯಾರಿತ್ರಾಂ ನಿಯತರ್ತ್ವಿಗ್ರೂಪೋದಕಾಕರ್ಷಣಕಾಷ್ಠಸಾಧನೋಪೇತಾಂ ಪದ್ವತೀಂ ॥ ಹ್ರಸ್ವನುಡ್ಭ್ಯಾಮಿತಿ ಮತುಪ ಉದಾತ್ತತ್ವಂ ॥ ದ್ರವ್ಯದೇವತಾಮಂತ್ರಾದಿರೂಪಪಾದೋಪೇತಾಂ । ಈದೃಶೀಂ ಯಜ್ಞಾತ್ಮಿಕಾಂ ನಾವಂ ರಾಸಿ । ದೇಹಿ । ಸಂಪಾದಯ । ರಾತಿರ್ದಾನಕರ್ಮಾ ದಾಸತಿ ರಾತೀತಿ ತನ್ನಾಮಸು ಪಾಠಾತ್ । ಸೈವ ವಿಶೇಷ್ಯತೇ । ಉತಾಪಿ ಚ ಯಾ ನೌರಸ್ಮಾಕಂ ವೀರಾನಸ್ಮತ್ಸಂಬಂಧಿನಃ ಪುತ್ರಾದೀನ್ಮಘೋನೋ ಹವಿರ್ಲಕ್ಷಣಾನ್ನವತಃ ಕರೋತಿ । ಜನಾಂಶ್ಚ ಯಜಮಾನಾನಸ್ಮಾನಪಿ ಯಾ ನೌಃ ಪಾರಯಾತ್ ಪಾರಯೇತ್ ಉತ್ತಾರಯೇತ್ ॥ ಪಾರಯತೇರ್ಲೇಟ್ಯಾಡಾಗಮಃ । ಜನನಮರಣಾದಿಬಹುದುಃಖಾತ್ಮಕಸ್ಯ ಪಾರಂ ನಿರತಿಶಯಸುಖಾಸ್ಪದಂ ಬ್ರಹ್ಮಲೋಕಂ ಪ್ರಾಪಯೇತ್ । ಏಷ ವಃ ಪುಣ್ಯಃ ಸುಕೃತೋ ಬ್ರಹ್ಮಲೋಕ ಇತಿ ಯಾಗಾದ್ಯನುಷ್ಠಾನವತಾಂ ಶ್ರೂಯಮಾಣತ್ವಾತ್ । ಏವಂ ಪ್ರಾಪಯ್ಯ ಚ ಯಾ ನೌಃ ಶರ್ಮ ಸುಖಂ ನಿರತಿಶಯಂ ಬ್ರಹ್ಮ ಪ್ರಾಪಯೇತ್ ಪರಸ್ಯಾಂತೇ ಕೃತಾತ್ಮಾನಃ ಪ್ರವಿಶಂತಿ ಪರಂ ಪದಮಿತ್ಯುಕ್ತತ್ವಾತ್ । ಚಿತ್ತಶುದ್ಧ್ಯುತ್ಪಾದನದ್ವಾರಾ ವಿವಿದಿಷಂತಿ ಯಜ್ಞೇನ ದಾನೇನೇತಿ ಶ್ರುತೇಃ ॥

ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ ! ನಿತ್ಯಾರಿತ್ರಾಂ—ಋತ್ವಿಗ್ರೂಪದಲ್ಲಿ ನಿಯತವಾದ ಹುಟ್ಟುಗೋಲುಳ್ಳ ಮ... ಪದ್ವತೀಂ—ದ್ರವ್ಯ ದೇವತಾ ಮಂತ್ರಾದಿ ರೂಪವಾದ ಪಾದಗಳಿಂದ ಕೂಡಿದುದೂ । ಉತ—ಮತ್ತು । ಯಾ—ಯಾವುದು ! ಅಸ್ಮಾಕಂ—ನಮ್ಮ । ವೀರಾನ್—ವೀರಪುತ್ರರನ್ನು । ಮಘೋನಃ—ಧನವಂತರನ್ನಾಗಿ (ಹವಿಃ

ವುದೋ) | **ಉತ**—ಮತ್ತು | **ನಃ**—ನಮ್ಮ | **ಜನಾಂಶ್ಚ**—ಯಜಮಾನರನ್ನೂ | **ಪಾರಯಾತ್**—(ಸಂಸಾರದಿಂದ) ದಾಟಿಸುವುದೋ | **ಚ**—ಮತ್ತು | **ಯಾ**—ಯಾವುದು | **ಶರ್ಮ**—(ಅತಿಶಯವಾದ ಬ್ರಹ್ಮಲೋಕದ) ಸುಖವನ್ನು (ಕೊಡಿಸುವುದೋ) ಅಂತಹುದೂ ಆದ | **ನಾವಂ**—(ಸೋಮಯಾಗಾತ್ಮಿಕವಾದ) ದೋಣಿಯನ್ನು | **ರಥಾಯ**—ಪ್ರಿಯನಾದವನೂ | **ಗೃಹಾಯ**—ಗೃಹದಂತೆ ಆಶ್ರಯಸ್ಥಾನನಾದವನೂ ಆದ | **ನಃ**—ನಮ್ಮ ಯಜಮಾನನಿಗೆ | **ರಾಸಿ**—ಒದಗಿಸಿಕೊಡು

ಭಾವಾರ್ಥ

ಎಲೈ ಅಗ್ನಿಯೇ, ಋತ್ವಿಗ್ರೂಪದಲ್ಲಿರುವ ಶಾಶ್ವತವಾದ ಹುಟ್ಟುಗೋಲುಳ್ಳದ್ದೂ, ದ್ರವ್ಯದೇವತಾ ಮಂತ್ರಾದಿ ರೂಪವಾದ ಪಾದಗಳುಳ್ಳದ್ದೂ ಮತ್ತು ಯಾವುದು ನಮ್ಮ ವೀರಪುತ್ರರನ್ನು ಧನವಂತರನ್ನಾಗಿ ಮಾಡುವುದೋ, ಯಾವುದು (ಯಜ್ಞಕರ್ತರಾದ ನಮ್ಮನ್ನು) ಅಥವಾ [ನಮ್ಮ ಯಜಮಾನರನ್ನು] ಸಂಸಾರದಿಂದ ದಾಟಿಸಿ ಶಾಶ್ವತವಾದ ಬ್ರಹ್ಮಲೋಕದ ಸುಖವನ್ನು ಕೊಡಿಸುವುದೋ ಅಂತಹುದೂ ಆದ ಸೋಮಯಾಗಾತ್ಮಿಕವಾದ ದೋಣಿಯನ್ನು ನಮಗೆ ಪ್ರಿಯನಾದವನೂ, ಗೃಹದಂತೆ ಆಶ್ರಯಸ್ಥಾನನಾದವನೂ ಆದ ನಮ್ಮ ಯಜಮಾನನಿಗೆ ಒದಗಿಸಿಕೊಡು.

English Translation

Bestow, Agni, upon our excellent patron a boat ever fitted with oars and feet, ( one that may render ) our posterity prosperous, and may bear mankind across (the ocean of life) to felicity.

ವಿಶೇಷವಿಷಯಗಳು

ಈ ಋಕ್ಕಿನಲ್ಲಿ (ಸೋಮ) ಯಾಗವನ್ನು ದೋಣಿಗೂ ಸಂಸಾರವನ್ನು ಸಾಗರಕ್ಕೂ ಋತ್ವಿಕ್ಕುಗಳನ್ನು ಹುಟ್ಟುಗಳಿಗೂ ಹೋಲಿಸಿದೆ ದಾರಿದ್ರ್ಯ, ಶತ್ರುಭಯ, ಇತರ ವಿಧವಾದ ದುಃಖಗಳೇ ಸಂಸಾರಸಾಗರದ ಭಯಂಕರ ಸನ್ನಿವೇಶಗಳು. ಈ ಸಾಗರವನ್ನು ದಾಟಬೇಕಾದರೆ ದೋಣಿಯೇ ಮುಖ್ಯವಾದ ಸಾಧನವಾದರೂ ಸಹ ಈ ದೋಣಿಯು ಸುರಕ್ಷಿತವಾಗಿ ಯಜಮಾನನನ್ನು ಈ ಸಾಗರದ ಮೂಲಕ ದಾಟಿಸಬೇಕಾದರೆ, ದೋಣಿಯು ಮತ್ತು ಅದರ ಹುಟ್ಟುಗಳ ಸಹಾಯವಿಲ್ಲದೇ ಸಾಧ್ಯವಿಲ್ಲ. ಆದುದರಿಂದ ಶ್ರೇಷ್ಠವಾದ ಋತ್ವಿಗ್ರೂಪದಲ್ಲಿರುವ ಹುಟ್ಟುಗಳಿಂದ ನಡೆಸಲ್ಪಟ್ಟ ಸೋಮಯಾಗಾತ್ಮಿಕವಾದ ದೋಣಿಯು ನಮ್ಮನ್ನು ಸಂಸಾರದಿಂದ ಸುರಕ್ಷಿತವಾಗಿ ದಾಟಿಸಲಿ ಎಂದು ಪ್ರಾರ್ಥಿಸಿದೆ.

ಸಾಧಾರಣವಾಗಿ ಋಕ್ಸಂಹಿತೆಯಲ್ಲಿ ದಾರಿದ್ರ್ಯಾದಿದುಃಖವನ್ನೂ, ತದ್ಧೇತುವಾದ ದುರಿತವನ್ನೂ, ಶತ್ರುವನ್ನೂ ಆಳವಾದ ಜಲಪ್ರವಾಹಕ್ಕೂ, ಮತ್ತು ದೇವತೆಗಳ ಸಹಾಯವನ್ನು ದೋಣಿಗೂ ಹೋಲಿಸಿರುವುದು ಅತ್ಯುಚಿತವಾದ ಉಪಮಾನವಾಗಿದೆ. ಉದಾಹರಣೆಗೆ

**ಜಾತವೇದಸೇ ಸುನವಾಮ ಸೋಮಮರಾತೀಯತೋ ನಿ ದಹಾತಿ ವೇದಃ |**
**ಸ ನಃ ಪರ್ಷದತಿ ದುರ್ಗಾಣಿ ವಿಶ್ವಾ ನಾವೇವ ಸಿಂಧುಂ ದುರಿತಾತ್ಯಗ್ನಿಃ ||**

(ಋ. ಸಂ. ೧-೯೯-೧)

**ನೂ ನ ಇಂದ್ರಾವರುಣಾ ಗೃಣಾನಾ ಪೃಂಕ್ತಂ ರಯಿಂ ಸೌಶ್ರವಸಾಯ ದೇವಾ ।**
**ಇತ್ಥಾ ಗೃಣಂತೋ ಮಹಿನಸ್ಯ ಶರ್ಧೋಽಪೋ ನ ನಾವಾ ದುರಿತಾ ತರೇಮ ॥**

(ಋ. ಸಂ. ೬-೬೮-೮)

ಇತ್ಯಾದಿ ಋಕ್ಕುಗಳಲ್ಲಿ ಸಿಂಧುವನ್ನು ದೋಣಿಯಿಂದ ಸುಲಭವಾಗಿ ದಾಟುವಂತೆ ಅಗ್ನ್ಯಾದಿದೇವತೆಗಳ ಸಹಾಯದಿಂದ ದುರಿತವನ್ನು ದಾಟುವಂತಾಗಲಿ ಎಂದು ಪ್ರಾರ್ಥಿಸಿರುವಂತೆ ಇಲ್ಲಿಯೂ ಸಹ **ಯಾಗಾತ್ಮಿಕವಾದ** ದೋಣಿಯನ್ನು ಒದಗಿಸಿಕೊಡು ಎಂದು ಅಗ್ನಿಯು ಪ್ರಾರ್ಥಿತನಾಗಿದ್ದಾನೆ.

ಇಲ್ಲಿ ಸೋಮಯಾಗಾತ್ಮಿಕವಾದ ನಾವೆಯ ಉಪಕಾರವು ಮೂರುವಿಧವಾಗಿದೆಯೆಂದು ಹೇಳಿದೆ. ಮೊದಲನೆಯದಾಗಿ ಯಜ್ಞಕರ್ತರನ್ನೂ ಅವರ ಪುತ್ರರನ್ನೂ ಧನವಂತರನ್ನಾಗಿ ಮಾಡುವುದು ; ಎರಡನೆಯದಾಗಿ ಯಜಮಾನರನ್ನು ಸಂಸಾರದಿಂದ ದಾಟಿಸುವುದು, ಮೂರನೆಯದಾಗಿ ಅತಿಶಯವಾದ ಬ್ರಹ್ಮಲೋಕದ ಸುಖವನ್ನು ಕೊಡಿಸುವುದು ಎಂದು **ಅಸ್ಮಾಕಂ ವೀರಾನ್ ಮಘೋನಃ ; ಉತ ನಃ ಜನಾಂಶ್ಚ ಪಾರಯಾತ್ ; ಚ ಯಾ ಶರ್ಮ ನಾವಂ** ಎಂಬ ವಾಕ್ಯಕ್ಕೆ ಸಾಯಣರು ವಿವರಣೆಯನ್ನು ಹೇಳಿದ್ದಾರೆ. ಋಕ್ಸಂಹಿತೆಯಲ್ಲಿ ಮಾತ್ರವಲ್ಲದೇ ಶತಪಥಾದಿಬ್ರಾಹ್ಮಣದಲ್ಲಿಯೂ ಸಹ ಇದೇ ಉಪಮಾನವು ಪ್ರಸಿದ್ಧವಾಗಿದೆ. ಉದಾಹರಣೆಗೆ

**ನೌರ್ಹ ವಾ ಏಷಾ ಸ್ವರ್ಗ್ಯಾ । ಯದ್ಬಹಿಷ್ಪವಮಾನಂ ತಸ್ಯಾ ಋತ್ವಿಜ ಏವ ಸ್ಫ್ಯಾಶ್ಚಾರಿತ್ರಾಶ್ಚ ಸ್ವರ್ಗಸ್ಯ ಲೋಕಸ್ಯ ಸಂಪಾರಣಾಸ್ತಸ್ಯಾ ಏಕ ಏವ ಮಜ್ಜಯಿತಾ ಯ ಏವ ನಿಂದ್ಯಃ ಸ ಯಥಾ ಪೂರ್ಣಾಮಭ್ಯಾರುಹ್ಯ ಮಜ್ಜಯೇದೇವಂ ಹೈನಾಂ ಸಮಜ್ಜಯತಿ ತದ್ವೈ ಸರ್ವ ಏವ ಯಜ್ಞೋ ನೌಃ ಸ್ವರ್ಗ್ಯಾ ತಸ್ಮಾದು ಸರ್ವಸ್ಮಾದೇವ ಯಜ್ಞಾನ್ನಿಂದ್ಯಂ ಪರಿಬಿಬಾಧಿಷೇತ ।**

(ಶ. ಬ್ರಾ. ೪-೨-೫-೧೦)

ಸೋಮಯಾಗವೂ, ಸೋಮಯಾಗದ ಪ್ರಾರಂಭದ ದಿನ ಪಠಿಸಬೇಕಾದ **ಬಹಿಷ್ಪವಮಾನಸ್ತೋತ್ರವೂ** ಸಹ **ಸ್ವರ್ಗವನ್ನು** ಸೇರಿಸತಕ್ಕ ನಾವೆಗಳಾಗಿವೆ. ಋತ್ವಿಕ್ಕುಗಳೇ ಇವುಗಳ ಹರಿಗೋಲುಗಳಾಗಿದ್ದಾರೆ. ಈ ಋತ್ವಿಕ್ಕುಗಳಲ್ಲಿ ಯಾವನೊಬ್ಬನಾದರೂ ದೂಷ್ಯವಾದ ವೃತ್ತಿಯುಳ್ಳವನಾಗಿದ್ದರೂ ಸಹ ಅವನು ಈ ನಾವೆಗಳನ್ನು ಮುಳುಗುವಂತೆ ಮಾಡಿಬಿಡುತ್ತಾನೆ. ಆದುದರಿಂದ ಅಂತಹವನನ್ನು ಯಾಗಕ್ರಿಯೆಯಿಂದ ದೂರವಾಗಿಡಬೇಕು ಎಂದು ಶತಪಥಬ್ರಾಹ್ಮಣದಲ್ಲಿಯೂ ಹೀಗೆಯೇ,

**ಯಜ್ಞೋ ವೈ ಸುಶರ್ಮಾ ನೌಃ ।**

(ಐ. ಬ್ರಾ. ೧-೧೩)

**ನಾವಮಿವಾರುಹೇಮೇತಿ ಸಮೇವೈನಮೇತದಧಿರೋಹತಿ ಸ್ವರ್ಗಸ್ಯ ಲೋಕಸ್ಯ ಸಮಷ್ಟ್ಯೈ ಸಂಪತ್ತ್ಯೈ ಸಂಗತ್ಯೈ ॥**

(ಐ. ಬ್ರಾ. ೪-೨೦)

ಎಂದು ಐತರೇಯ ಬ್ರಾಹ್ಮಣದಲ್ಲಿಯೂ ಸಹ ಈ ವಿಧವಾದ ಉಪಮಾನವು ಪ್ರಸಿದ್ಧವಾಗಿದೆ. ಮತ್ತು ಈ ಯಾಗದ ಫಲವು ಅತ್ಯುತ್ತಮವಾದುದರಿಂದ ದೇವತೆಗಳೂ ಸಹ ಇದನ್ನು ಅಪೇಕ್ಷಿಸಿ ಯಜ್ಞದಲ್ಲಿ ಆಸಕ್ತರಾಗಿರುತ್ತಾರೆ. ಆದುದರಿಂದ ಅವರನ್ನು ಅನುಸರಿಸಿ ಮಾನವರೂ ಯಜ್ಞಕಾರ್ಯದಲ್ಲಿ ಆಸಕ್ತರಾಗಿರಬೇಕು, ಎಂದು ಉಪದೇಶಿಸುತ್ತಾ.

**ತ ಆಸತ । ಶ್ರಿಯಂ ಗಚ್ಛೇಮ । ಯಶಃ ಸ್ಯಾಮಾನ್ನಾದಾಃ ಸ್ಯಾಮೇತಿ ತಥೋ ಏವೇಮೇ ಸತ್ರ-ಮಾಸತೇ ಶ್ರಿಯಂ ಗಚ್ಛೇಮ ಯಶಃ ಸ್ಯಾಮಾನ್ನಾದಾಃ ಸ್ಯಾಮೇತಿ । ತೇ ಹೋಚುಃ ಯೋ ನಃ ಶ್ರಮೇಣ ತಪಸಾ ಶ್ರದ್ಧಯಾ ಯಜ್ಞೇನಾಹುತಿಭಿರ್ಯಜ್ಞಸ್ಯೋದೃಚಂ ಪೂರ್ವೋಽವ-ಗಚ್ಛಾತ್ಸ ನಃ ಶ್ರೇಷ್ಠೋಽಸತ್ತದು ನಃ ಸರ್ವೇಷಾಂ ಸಹೇತಿ ತಥೇತಿ । ತದ್ವಿಷ್ಣುಃ ಪ್ರಥಮಃ ಪ್ರಾಪ । ಸ ದೇವಾನಾಂ ಶ್ರೇಷ್ಠೋಽಭವತ್ತಸ್ಮಾದಾಹುರ್ವಿಷ್ಣುರ್ದೇವಾನಾಂ ಶ್ರೇಷ್ಠ ಇತಿ ।**

(ಶ. ಬ್ರಾ. ೧೪-೧-೧-೨-೩)

ಯಜ್ಞಾಚರಣೆಯಿಂದ ಘನತೆಯೂ ಮಾಹಾತ್ಮ್ಯವೂ ಮತ್ತು ಅನ್ನಸಂಪತ್ತೂ ಲಭಿಸುವುದರಿಂದ ದೇವತೆಗಳು ಅವನ್ನು ಇಚ್ಛಿಸಿ ಯಜ್ಞಾಸಕ್ತರಾದರು. ಅವರಲ್ಲಿ ವಿಷ್ಣುವು ಪ್ರಥಮಸ್ಥಾನವನ್ನು ಪಡೆದುದರಿಂದ ವಿಷ್ಣುವು ದೇವತೆಗಳಲ್ಲೆಲ್ಲಾ ಶ್ರೇಷ್ಠನಾದನು ಎಂದು ಯಜ್ಞಫಲವನ್ನು ಸ್ತುತಿಸಿದೆ. ಇದರಂತೆಯೇ,

**ತಸ್ಮಾದಾಹುಃ ಪುಣ್ಯಲೋಕ ಈಜಾನ ಇತಿ ।**

(ಶ. ಬ್ರಾ. ૩-೬-೨-೧೫)

ಎಂದು ಪುಣ್ಯಲೋಕಸಾಧಕವಾಗುವುದೆಂದು ಹೇಳಿರುವುದನ್ನೇ ಪ್ರಕೃತವಾದ ಋಕ್ಕಿನಲ್ಲಿ **ಶರ್ಮ**ವೆಂಬ ಪದದಿಂದ ಸೂಚಿಸಿದೆ. **ಶರ್ಮ**ವೆಂಬ ಪದಕ್ಕೆ ಸಾಯಣರು **ಸುಖಂ ನಿರತಿಶಯಂ ಬ್ರಹ್ಮ ಪ್ರಾಪಯೇತ್ ।** ನಿರತಿಶಯವಾದ ಬ್ರಹ್ಮಲೋಕದ ಸುಖವೆಂದು ವಿವರಿಸುತ್ತಾ **ವಿವಿದಿಷಂತಿ ಯಜ್ಞೇನ ದಾನೇನ**

(ಬೃ. ಉ. ೪-೪-೨೨)

ಎಂಬ ಬೃಹದಾರಣ್ಯಕೋಪನಿಷತ್ತಿನ ವಾಕ್ಯವನ್ನು ಉದಹರಿಸಿ **ಶರ್ಮ**ಪದದ ಅರ್ಥವನ್ನು ಹೇಳಿದ್ದಾರೆ. ಇಂತಹ ಶ್ರೇಷ್ಠವಾದ ಫಲದಾಯಕವಾದುದೂ ಸೋಮಯಾಗಾತ್ಮಕವಾದುದೂ ಆದ ದೋಣಿಯನ್ನು ಯಜಮಾನನಿಗೆ ಒದಗಿಸಿಕೊಡೆಂದು ಅಗ್ನಿಯನ್ನು ಪ್ರಾರ್ಥಿಸಿದೆ.

**ರಥಾಯ—ರಂಹಣಾಯ ಯಜಮಾನಾಯ ।** ಎಂದು ಯಜಮಾನನಿಗೆ ಈ ಪದವು ವಿಶೇಷಣವೆಂದು ತಿಳಿಸಿದೆ. ರಥ ಶಬ್ದಕ್ಕೆ ನಿರುಕ್ತಕಾರರು, **ರಥೋ ರಂಹತೇರ್ಗತಿಕರ್ಮಣಃ । ಸ್ಥಿರತೇರ್ವಾ ಸ್ಯಾದ್ವಿಪರೀತಸ್ಯ। ರಮಮಾಣೋಽಸ್ಮಿಂಸ್ತಿಷ್ಠತೀತಿ ವಾ, ರಪತೇರ್ವಾ, ರಸತೇರ್ವಾ ।** (ನಿ. ೯-೧೧) **ಗತಿ** ಅಥವಾ **ವೇಗವೆಂದು** ಅರ್ಥವನ್ನು ಕೊಡುವ **ರಂಹ್** ಧಾತುವಿನಿಂದಾಗಲಿ, ಅಥವಾ ವರ್ಣವ್ಯತ್ಯಯವಾಗಿ **ಸ್ಥಿರ** ಎಂಬುದರಿಂದಾಗಲಿ, ಇದರಲ್ಲಿ ಕುಳಿತು ಹರ್ಷಪಡು ಎಂಬರ್ಥವನ್ನು ಕೊಡುವ **ರಮ್** ಧಾತುವಿನಿಂದಾಗಲಿ, ಅಥವಾ ಶಬ್ದಮಾಡು ಎಂಬರ್ಥವುಳ್ಳ **ರಪ್** ಅಥವಾ **ರಸ್** ಧಾತುವಿನಿಂದಾಗಲಿ ನಿಷ್ಪನ್ನವಾಗಿದೆಯೆಂದು ನಿರುಕ್ತಕಾರರು **ವನಸ್ಪತೇ ವೀಡ್ವಂಗೋ** (ಋ. ಸಂ. ೬-೪೭-೨೬) ಎಂಬ ಋಕ್ಕನ್ನುದಹರಿಸಿ **ರಥ** ಶಬ್ದಕ್ಕೆ ನಿರ್ವಚನವನ್ನು ತೋರಿಸಿದ್ದಾರೆ. ಆದರೆ ಪ್ರಕೃತವಾದ ಋಕ್ಕಿನಲ್ಲಿ **ಯಜಮಾನನಿಗೆ** ವಿಶೇಷಣವಾಗಬೇಕಾದರೆ ಈ ಅರ್ಥಗಳಲ್ಲಿ ಯಾವುದಾದರೂ ಒಂದರ್ಥವನ್ನು ತೋರಿಸಬೇಕು. ಯಜಮಾನನು ಯಜ್ಞಾಚರಣೆಗಾಗಿ ಆತುರನಾಗಿ ಕ್ರಿಯಾಶಾಲಿಯಾಗಿರುವುದರಿಂದಲೂ, ಸ್ಥಿರಮನಸ್ಕನಾಗಿ ದೀಕ್ಷಿತನಾಗಿರುವುದರಿಂದಲೂ, ಸ್ತುತಿರೂಪವಾದ ಶಬ್ದವನ್ನುಂಟುಮಾಡುವುದರಿಂದಲೂ ಆದುದರಿಂದಲೇ ಇವನಿಗೆ **ರಾಷ್ಟಿನಸ್ಯ** (೧-೧೨೨-೪) ಎಂಬ ವಿಶೇಷಣವಿರುವುದರಿಂದಲೂ ಮೇಲೆ ನಿರುಕ್ತಕಾರರು ಹೇಳಿರುವ ಅರ್ಥಗಳಲ್ಲಿ ಯಾವ ಅರ್ಥವಲ್ಲಾದರೂ ಸಹ ಯಜ್ಞಕರ್ತನಿಗೆ **ರಥಾಯ** ಎಂಬ ವಿಶೇಷಣವಿರಬಹುದು.

**ರಥಾಯ, ಗೃಹಾಯ**—ಎಂಬ ಎರಡು ವಿಶೇಷಣಗಳೂ ಸಹ ಯಜ್ಞಕರ್ತನಾದ ಯಜಮಾನನ ಮಹತ್ತನ್ನೂ, ವಿಶ್ವಕ್ಕೆಲ್ಲಾ ಶ್ರೇಯಸ್ಸನ್ನುಂಟುಮಾಡತಕ್ಕ ಆತನ ದಿವ್ಯವಾದ ಸ್ಥಾನವನ್ನೂ ಸೂಚಿಸುತ್ತವೆ. ಯಜ್ಞವೇ ವಿಶ್ವದ ಉತ್ಪತ್ತಿಸ್ಥಿತಿಗಳಿಗೆ ಕಾರಣವಾಗಿರುವುದರಿಂದಲೂ, ಯಜ್ಞಕರ್ತನೇ ಇಂತಹ ಯಜ್ಞಕ್ಕೆ ಕಾರಣನಾಗಿರುವುದರಿಂದಲೂ ಸಹ ಅನೇಕ ಕಡೆಗಳಲ್ಲಿ ಇವೆರಡಕ್ಕೂ ತಾದಾತ್ಮ್ಯವನ್ನು ಹೇಳಿದೆ. ಆದುದರಿಂದಲೇ ಯಜ್ಞಕರ್ತನಿಗೂ ಪ್ರಜಾಪತಿಗೂ ಸಹ ತಾದಾತ್ಮ್ಯವು ಹೇಳಲ್ಪಟ್ಟಿದೆ. ಯಜ್ಞಕರ್ತನ ಅಲೌಕಿಕವಾದ ಶಕ್ತಿಯನ್ನು ತೈತ್ತಿರೀಯ ಸಂಹಿತೆಯಲ್ಲಿ ಈ ವಿಧವಾಗಿ ವಿವರಿಸುತ್ತಾ ಅತಿಶಯವಾದ ಸುಖಕ್ಕೆ ಆಧಾರವಾದ ಸ್ವರ್ಗನಿವಾಸದ ಸಂಪಾದಕನಾಗುತ್ತಾನೆಂಬ ವಿಷಯವನ್ನು ಈ ರೀತಿ ಹೇಳಿದೆ—

> **ನಾಕಸದ್ಭಿರ್ವೈ ದೇವಾಸ್ಸುವರ್ಗಂ ಲೋಕಮಾಯನ್ತನ್ನಾಕಸದಾಂ ನಾಕಸತ್ತ್ವಂ ಯನ್ನಾಕಸದ ಉಪದಧಾತಿ ನಾಕಸದ್ಭಿರೇವ ತದ್ಯಜಮಾನಸ್ಸುವರ್ಗಂ ಲೋಕಮೇತಿ ಸುವರ್ಗೋ ವೈ ಲೋಕೋ ನಾಕೋ ಯಸ್ಯೈತಾ ಉಪಧೀಯಂತೇ ನಾಸ್ಮಾ ಅಕಂ ಭವತಿ ಯಜಮಾನಾಯತನಂ ವೈ ನಾಕಸದೋ ಯನ್ನಾಕಸದ ಉಪದಧಾತ್ಯಾಯತನಮೇವ ತದ್ಯಜಮಾನಃ ಕುರುತೇ ಪೃಷ್ಠಾನಾಂ ವಾ ಏತತ್ತೇಜಃ ಸಂಭೃತಂ ಯನ್ನಾಕಸದೋ ಯನ್ನಾಕಸದಃ ।**
>
> (ತೈ. ಸಂ. ೫-೩-೭-೪)

ಇತ್ಯಾದಿವಾಕ್ಯಗಳಲ್ಲಿ ಯಜಮಾನನ **ಗೃಹದ** ಸ್ವರೂಪವೂ ಅದರ ವೈಶಿಷ್ಟ್ಯವೂ, ವೇದಿನಿರ್ಮಾಣಕಾರ್ಯದಲ್ಲಿಯೂ ಮತ್ತು ಅಗ್ನಿಚಯನಕ್ರಿಯೆಯಲ್ಲಿಯೂ ಪ್ರಾವೀಣ್ಯವನ್ನು ಪಡೆದಿರುವ ಯಜಮಾನನು ಯಾವ ಉತ್ಕೃಷ್ಟವಾದ ನಿವಾಸಸ್ಥಾನಕ್ಕೆ ಕಾರಣನಾಗುವನೆಂಬ ವಿಷಯವೂ ವಿಶದವಾಗಿ ಹೇಳಿರುವಂತೆ ಅದೇ ಅಂಶವನ್ನು ಕ್ರೋಡೀಕರಿಸಿ ಪ್ರಕೃತವಾದ ಋಕ್ಕಿನಲ್ಲಿ **ಗೃಹಾಯ** ಎಂಬ ವಿಶೇಷಣದಿಂದ ತಿಳಿಸಿದೆ. ಇಲ್ಲಿ **ಗೃಹ**ಶಬ್ದಕ್ಕೆ ಸಕಲ ಸಂಪತ್ತುಗಳಿಂದ ಕೂಡಿದ ಐಹಿಕಗೃಹವೆಂದಾಗಲಿ ಅಥವಾ ಅತಿಶಯವಾದ ಶ್ರೇಯಸ್ಸಿನಿಂದ ಕೂಡಿದ ಸ್ವರ್ಗನಿವಾಸವೆಂದಾಗಲಿ ಅರ್ಥವಾಗಬಹುದು.

### ವ್ಯಾಕರಣಪ್ರಕ್ರಿಯಾ

**ನಾವಮ್**— ಣುದ ಪ್ರೇರಣೇ ಧಾತು. **ಗ್ಲಾನುದಿಭ್ಯಾಂ ಡೌಃ** (ಉ. ಸೂ. ೨-೨೩೩) ಎಂಬುದರಿಂದ ಡೌ ಪ್ರತ್ಯಯ. ಡಿತ್ತ್ವಸಾಮರ್ಥ್ಯದಿಂದ ಧಾತುವಿನ ಟಿಗೆ ಲೋಪ. ಔಕಾರಾಂತಶಬ್ದವಾಗುತ್ತದೆ. ಪ್ರತ್ಯಯಸ್ವರ ಬರುತ್ತದೆ. ದ್ವಿತೀಯಾ ಅಮ್ ಪರವಾದಾಗ ಆವಾದೇಶ.

**ಗೃಹಾಯ**—ಗ್ರಹ ಉಪಾದಾನೇ. ಧಾತು. ಲೋಟ್ ಮಧ್ಯಮಪುರುಷ ಏಕವಚನದಲ್ಲಿ ಹಿ ಆದೇಶ. **ಛಂದಸಿ ಶಾಯಜಪಿ** (ಪಾ. ಸೂ. ೩-೧-೮೪) ಎಂಬುದರಿಂದ ಶ್ನಾವಿಕರಣಕ್ಕೆ ಶಾಯಜಾದೇಶ. **ಅತೋ ಹೇಃ** ಎಂಬುದರಿಂದ ಹಿಗೆ ಲುಕ್. ವ್ಯತ್ಯಯದಿಂದ ಭತ್ವ ಬರುವುದಿಲ್ಲ.

**ನಿತ್ಯಾರಿತ್ರಾಮ್**—ನಿತ್ಯಂ ನಿಯತಂ ಅರಿತ್ರಂ ಯಸ್ಯಾಸ್ತಾ. **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್** ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಪದ್ವತೀಮ್**—ಪತ್ ಪಾದಃ ಅಸ್ಯಾಃ ಅಸ್ತಿ ಇತಿ ಪದ್ವತ್. ಸ್ತ್ರೀತ್ವದಲ್ಲಿ **ಉಗಿತಶ್ಚ** (ಪಾ. ಸೂ. ೪-೧-೬) ಎಂಬುದರಿಂದ ಙೀಪ್. **ಹ್ರಸ್ವನುಡ್ಭ್ಯಾಂ ಮತುಪ್** (ಪಾ. ಸೂ. ೬-೧-೧೭೬) ಎಂಬುದರಿಂದ ಮತುಪಿಗೆ ಉದಾತ್ತ ಸ್ವರ ಬರುತ್ತದೆ. ದ್ವಿತೀಯಾಏಕವಚನಾಂತರೂಪ.

**ರಾಸಿ**—ರಾ ಆದಾನೇ. ಧಾತು. ಲೇಟ್ ಮಧ್ಯಮಪುರುಷ ಏಕವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ರಾಧಾತುವು ಇಲ್ಲಿ ದಾನಾರ್ಥದಲ್ಲಿ ಪಠಿತವಾಗಿದೆ. ದಾಸತಿ ರಾತಿ (ನಿ. ೩-೨೦೪) ಎಂದು ದಾನಕರ್ಮಾರ್ಥಗಳಲ್ಲಿ ಪಠಿತವಾಗಿದೆ.

**ವೀರಾನ್**—ಅಜ ಗತಿಕ್ಷೇಪಣಯೋಃ ಧಾತು. **ಸ್ಫಾಯಿತಞ್ಚಿ**—(ಉ. ಸೂ. ೨-೧೭೦) ಎಂಬುದರಿಂದ ರಕ್ ಪ್ರತ್ಯಯ. ಧಾತುವಿಗೆ ವೀಭಾವ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ದ್ವಿತೀಯಾ ಬಹುವಚನಾಂತರೂಪ

**ಮಘೋನಃ**—ಮಘಃ ಅಸ್ಯ ಅಸ್ತಿ ಇತಿ ಮಘವಾ. **ಛಂದಸೀ ವನಿಪೌ** ಎಂಬುದರಿಂದ ಮತ್ವರ್ಥದಲ್ಲಿ ವನಿಪ್ ಪ್ರತ್ಯಯ. ದ್ವಿತೀಯಾ ಬಹುವಚನ ಪರವಾದಾಗ **ಶ್ವಯುವಮಘೋನಾಮತದ್ಧಿತೇ** (ಪಾ. ಸೂ. ೬-೪-೧೩೩) ಎಂಬುದರಿಂದ ವಕಾರಕ್ಕೆ ಸಂಪ್ರಸಾರಣ. ಪೂರ್ವರೂಪ. ಗುಣ. **ಏಕಾದೇಶಉದಾತ್ತೇನೋದಾತ್ತಃ** (ಪಾ. ಸೂ. ೮-೨-೫) ಎಂಬುದರಿಂದ ಓಕಾರ ಉದಾತ್ತವಾಗುತ್ತದೆ.

**ಪಾರಯಾತ್**—ಪಾರ ತೀರ ಸಮಾಪ್ತೌ. ಧಾತು. ಲೇಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಸತ್ಯಾಪಪಾಶ**—(ಪಾ. ಸೂ. ೩-೧-೨೫) ಎಂಬುದರಿಂದ ಸ್ವಾರ್ಥದಲ್ಲಿ ಣಿಚ್. **ಇತಶ್ಚಲೋಪಃ ಪರ**—(ಪಾ. ಸೂ. ೩-೪-೯೭) ಎಂಬುದರಿಂದ ಪ್ರತ್ಯಯದ ಇಕಾರಕ್ಕೆ ಲೋಪ. **ಲೇಟೋಽಡಾಟೌ** (ಪಾ. ಸೂ. ೩-೪-೯೪) ಎಂಬುದರಿಂದ ಆಡಾಗಮ. ಣಿಚಿಗೆ ಗುಣ. ಅಯಾದೇಶ. ಯಚ್ಛಬ್ದವು ಪೂರ್ವದಲ್ಲಿರುವುದರಿಂದ **ಯದ್ವೃತ್ತಾನ್ನಿತ್ಯಮ್** (ಪಾ. ಸೂ. ೮-೧-೬೬) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ. ಣಿಚ್‌ಸ್ವರ ಉಳಿಯುತ್ತದೆ.

**ವೀರಾನ್+ಉತ**—**ದೀರ್ಘಾದಟಿ ಸಮಾನಪಾದೇ** (ಪಾ. ಸೂ. ೮-೩-೯) ಎಂಬುದರಿಂದ ನಕಾರಕ್ಕೆ ರುತ್ವ. **ಆತೋಽಟಿನಿತ್ಯಮ್** (ಪಾ. ಸೂ. ೮-೩-೩) ಎಂಬುದರಿಂದ ಪೂರ್ವದ ಆಕಾರಕ್ಕೆ ನಿತ್ಯಾನುನಾಸಿಕತ್ವ. ॥ ೧೨ ॥

———— :೦: ————

ಸಂಹಿತಾಪಾಠಃ

ಅಭೀ ನೋ ಅಗ್ನ ಉಕ್ಥಮಿಜ್ಜುಗುರ್ಯಾ ದ್ಯಾವಾಕ್ಷಾಮಾ ಸಿಂಧವಶ್ಚ

ಸ್ವಗೂರ್ತಾಃ ।

ಗವ್ಯಂ ಯವ್ಯಂ ಯಂತೋ ದೀರ್ಘಾಹೇಷಂ ವರಮರುಣ್ಯೋ ವರಂತ ॥೧೩॥

ಪದಪಾಠಃ

ಅಭಿ । ನಃ । ಅಗ್ನೇ । ಉಕ್ಥಂ । ಇತ್ । ಜುಗುರ್ಯಾಃ । ದ್ಯಾವಾಕ್ಷಾಮಾ । ಸಿಂಧವಃ । ಚ । ಸ್ವಽಗೂರ್ತಾಃ ।

ಗವ್ಯಂ । ಯವ್ಯಂ । ಯಂತಃ । ದೀರ್ಘಾ । ಅಹಾ । ಇಷಂ । ವರಂ । ಅರುಣ್ಯಃ । ವರಂತ ॥ ೧೩ ॥

### ಸಾಯಣಭಾಷ್ಯಂ

ಹೇ ಅಗ್ನೇ ನಃ ಉಕ್ಥಂ ಶಸ್ತ್ರಮಭಿ ಜುಗುರ್ಯಾಃ । ಅಭಿಮುಖ್ಯೇನ ಸ್ತುಹಿ ಪ್ರೋತ್ಸಾಹಯ । ಸಮ್ಯಕ್ ಶಸ್ತ್ರಮಿತ್ಯಂಗೀಕುರು ॥ ಗೄ ಶಬ್ದೇ । ಲಿಙಿ ಬಹುಲಂ ಛಂದಸೀತಿ ವಿಕರಣಸ್ಯ ಶ್ಲುಃ । ಬಹುಲಂ ಛಂದಸೀತ್ಯುತ್ವಂ ॥ ತಥಾ ದ್ಯಾವಾಕ್ಷಾಮಾ ದ್ಯಾವಾಪೃಥಿವ್ಯಾವಪಿ ಯಜ್ಞಸಾಧನಸಂಪಾದನೇನ ಪ್ರೋತ್ಸಾಹಯತಾಂ । ತಥಾ ಸಿಂಧವಃ ಸ್ಯಂದನಶೀಲಾ ನದ್ಯಶ್ಚ ಸ್ವಗೂರ್ತಾಃ ಸ್ವಯಮೇವ ಗಾಮಿನ್ಯೋ ಗವ್ಯಂ ಗೋಸಂಭವಂ ಕ್ಷೀರಾದಿಕಂ ಗವಾಂ ತೃಣಾದ್ಯುತ್ಪಾದನದ್ವಾರಾ ಯವ್ಯಂ । ಉಪಲಕ್ಷಣಮೇತತ್ । ಯವವ್ರೀಹ್ಯಾದಿಜನ್ಯಂ ಪುರೋಡಾಶಾದಿಕಂ ಯಂತಃ ಪ್ರಾಪಯಂತಃ ಪ್ರೋತ್ಸಾಹಯಂತು । ತಥಾರುಣ್ಯೋಽರುಣವರ್ಣಗೋಯುಕ್ತಾಃ ಮತ್ವರ್ಥೀಯೋ ಲುಪ್ಯತೇ ॥ ಆರುಣ್ಯಸಾಧನಭೂತಾ ಉಷಸಃ । ತದ್ಧೇತುತ್ವಾತ್ತಾಚ್ಛಬ್ದ್ಯಂ । ದೀರ್ಘಾಹಾ ಸರ್ವಾಣ್ಯಹಾನಿ ಸರ್ವಕಾಲಮಿಷಮಿಷ್ಯಮಾಣಮನ್ನರಸಾದಿಕಂ ವರಂ ವರಣೀಯಂ ಶ್ರೇಷ್ಠಮನ್ಯದಪಿ ಯಾಗಸಾಧನಂ ವರಂತ । ಪ್ರಾಪಯಂತು ॥ ವೃಙ್ ಸಂಭಕ್ತೌ । ಅಂತರ್ಭಾವಿತಣ್ಯರ್ಥಾಚ್ಛಾಂದಸೋ ಲಙ್ । ವ್ಯತ್ಯಯೇನ ಶಪ್ ॥ ಸಾಧಯಂತು । ಏತತ್ಸರ್ವಮಗ್ನೇಃ ಪ್ರಸಾದಾದಿತ್ಯಗ್ನೇರೇವ ಸ್ತುತಿತ್ವಾದಾಗ್ನೇಯತ್ವಮವಿರುದ್ಧಂ ॥

### ಪ್ರತಿಪದಾರ್ಥ

**ಅಗ್ನೇ**—ಎಲೈ ಅಗ್ನಿಯೇ । **ನಃ**—ನಮ್ಮ । **ಉಕ್ಥಂ**—ಸ್ತೋತ್ರವನ್ನು । **ಅಭಿ ಜುಗುರ್ಯಾಃ**—ಶ್ರೇಷ್ಠವಾಗಿದೆಯೆಂದು ಶ್ಲಾಘಿಸು. [ ಅಂಗೀಕಾರ ವಚನವನ್ನು ಹೇಳು ] । **ದ್ಯಾವಾಕ್ಷಾಮಾ**— ದ್ಯಾವಾಪೃಥಿವಿಯೂ ಶ್ಲಾಘಿಸಲಿ । **ಸಿಂಧವಃ**—ಪ್ರವಾಹ ರೂಪವುಳ್ಳವೂ । **ಸ್ವಗೂರ್ತಾಃ ಚ**—ಸ್ವಭಾವವಾಗಿಯೇ ಹರಿಯತಕ್ಕವೂ ಆದ ನದಿಗಳೂ ಸಹ । **ಗವ್ಯಂ**—(ಹುಲ್ಲನ್ನು ಬೆಳೆಸಿ ಪೋಷಿಸುವುದರ ಮೂಲಕ) ಹಸುಗಳ ಕ್ಷೀರಾದಿಗಳನ್ನೂ । **ಯವ್ಯಂ**—ಯವಜನ್ಯವಾದ ಪುರೋಡಾಶಾದಿಗಳನ್ನೂ । **ಯಂತಃ**—ಒದಗಿಸಿಕೊಡುತ್ತಾ (ನಮ್ಮ ಸ್ತೋತ್ರವನ್ನು ಶ್ಲಾಘಿಸಲಿ) । **ಆರುಣ್ಯಃ**—ಹೊಂಬಣ್ಣದ ಗೋವುಗಳಿಂದ ಕೂಡಿದ ಉಷಸ್ಸುಗಳು । **ದೀರ್ಘಾಹಾ**—ಸರ್ವದಿನಗಳಲ್ಲಿಯೂ । **ವರಂ**—ಶ್ರೇಷ್ಠವಾದ । **ಇಷಂ**—ಅನ್ನವನ್ನೂ । **ವರಂತ**—ಒದಗಿಸಿಕೊಡಲಿ ॥

### ಭಾವಾರ್ಥ

ಎಲೈ ಅಗ್ನಿಯೇ, ನಮ್ಮ ಸ್ತೋತ್ರವನ್ನು ಶ್ರೇಷ್ಠವಾಗಿದೆಯೆಂದು ಶ್ಲಾಘಿಸಿ ಅಂಗೀಕಾರವಾಕ್ಯವನ್ನು ಹೇಳು. ದ್ಯಾವಾಪೃಥಿವಿಯೂ ಹಾಗೆಯೇ ಶ್ಲಾಘಿಸಲಿ, ಸ್ವಭಾವವಾಗಿಯೇ ಪ್ರವಹಿಸತಕ್ಕ ನದಿಗಳೂ ಸಹ ಗೋವುಗಳ ಆಹಾರವಾದ ತೃಣಾದಿಗಳನ್ನು ಬೆಳೆಸಿ ತದ್ವಾರಾ ನಮಗೆ ಹಸುಗಳ ಕ್ಷೀರಾದಿಗಳನ್ನೂ ಯವಜನ್ಯವಾದ ಪುರೋಡಾಶಾದಿಗಳನ್ನೂ ಒದಗಿಸುತ್ತಾ ನಮ್ಮ ಸ್ತೋತ್ರವನ್ನು ಶ್ಲಾಘಿಸಲಿ. ಹೊಂಬಣ್ಣದ ಗೋವುಗಳಿಂದ ಕೂಡಿದ ಉಷಸ್ಸುಗಳು ಸರ್ವದಿನಗಳಲ್ಲಿಯೂ ಶ್ರೇಷ್ಠವಾದ ಅನ್ನವನ್ನು ಒದಗಿಸಿಕೊಡಲಿ.

### English Translation

Agni, be propitiated by this our earnest praise, and may heaven and earth, and the spontaneously-flowing (streams), provide for us the produce of

the herd, and of the field ; and may the purple coursers (of the dawn) bestow upon us abundant food through a length of days.

ವಿಶೇಷವಿಷಯಗಳು

**ಉಕ್ಥಂ ಅಭಿ ಜುಗುರ್ಯಾಃ** – ನಮ್ಮ ಉಕ್ಥವು ಶ್ರೇಷ್ಠವಾಗಿದೆಯೆಂದು ಪ್ರಶಂಸಿಸು ಎಂದು ಅಗ್ನಿಯನ್ನು ಪ್ರಾರ್ಥಿಸಿದೆ. ಇಲ್ಲಿ **ಉಕ್ಥವೆಂದರೆ ಶಸ್ತ್ರಂ** ಎಂದು ಸಾಯಣರು ಅರ್ಥಮಾಡಿದ್ದಾರೆ. **ಶಸ್ತ್ರಕ್ಕೂ ಸ್ತೋತ್ರಕ್ಕೂ** ಕೆಲವೆಡೆಗಳಲ್ಲಿ ಇರತಕ್ಕ ಸೂಕ್ಷ್ಮವಾದ ವ್ಯತ್ಯಾಸವನ್ನು ತಿಳಿಸಿ ಸಾಯಣರು ಶತಪಥಬ್ರಾಹ್ಮಣದ ೪-೩-೩-೭ನೇ ವಾಕ್ಯದಲ್ಲಿ ಉಕ್ಥಶಬ್ದಕ್ಕೆ ಮಾಡಿರುವ ಸ್ತೋತ್ರವೆಂಬ ಅರ್ಥಕ್ಕೂ ೪-೨-೩-೬ ರಿಂದ ೯ನೇ ವಾಕ್ಯಗಳಲ್ಲಿನ **ಉಕ್ಥ** ಶಬ್ದಾರ್ಥಕ್ಕೂ ಇರುವ ವ್ಯತ್ಯಾಸವನ್ನು ತಿಳಿಸಿ ಹಿಂದೆಯೇ ವಿವರಿಸಿದೆ ಇಲ್ಲಿ ಯಜಮಾನನ **ಉಕ್ಥವನ್ನು** ಅಗ್ನಿಯೂ, ದ್ಯಾವಾಪೃಥಿವಿಗಳೂ ಶ್ಲಾಘಿಸಲಿ ಎಂದಿರುವುದರಿಂದ ದೇವತೆಗಳನ್ನು ಹರ್ಷಗೊಳಿಸತಕ್ಕ ಈ **ಉಕ್ಥದ** ಮಹಿಮೆಯೇನು ಎಂಬುದನ್ನು ಕೊಂಚ ತಿಳಿಯಬೇಕು.

ಉಕ್ಥದ ಪ್ರಭಾವವು ಅತ್ಯಧಿಕವಾಗಿರುವುದರಿಂದ ಅದನ್ನು ಮರೆಹೊಕ್ಕಿದವರಿಗೆಲ್ಲಾ ವೃದ್ಧಿಯು ಖಂಡಿತವಾಗಿ ಆಗುವುದು. ಹಿಂದೆ ಅಸುರರು ಒಂದು ಸಲ ಉಕ್ಥದ ಆಶ್ರಯವನ್ನು ಪಡೆದಾಗ ಅವರಿಗೂ ಸಹ ಅತಿಶಯವಾದ ಶಕ್ತಿಯೂ ವೃದ್ಧಿಯೂ ಉಂಟಾಯಿತೆಂದೂ ಆಗ ಇಂದ್ರನು ಸ್ತುತನಾಗಿ ಬಂದು ಇವರನ್ನು ಓಡಿಸಿದನೆಂದೂ ಐತರೇಯ ಬ್ರಾಹ್ಮಣದ ಕಥೆಯಿದೆ.

**ತೇ ವಾ ಅಸುರಾ ಮೈತ್ರಾವರುಣಸ್ಯೋಕ್ಥಮಾಶ್ರಯಂತ ಸೋಽಬ್ರವೀದಿಂದ್ರಃ ಕಶ್ಚಾಹಂ ಚೇಮಾ-**
**ನಿತೋಽಸುರಾನ್ನೋತ್ಸ್ಯಾವಹಾ ಇತ್ಯಹಂ ಚೇತ್ಯಬ್ರವೀದ್ವರುಣಸ್ತಸ್ಮಾದೈಂದ್ರಾವರುಣಂ**
**ಮೈತ್ರಾವರುಣಸ್ತೃತೀಯಸವನೇ ಶಂಸಂತೀಂದ್ರಶ್ಚ ಹಿ ತಾನ್ವರುಣಶ್ಚ ತತೋ ನುದೇತಾಂ ।**

ಅಸುರರು ಮೈತ್ರಾವರುಣ ಉಕ್ಥವನ್ನು ಪ್ರವೇಶಿಸಿದರು. ಆಗ ಇಂದ್ರನು ಅಸುರರನ್ನು ಈ ಉಕ್ಥದಿಂದ ಓಡಿಸಲು ನಮಗೆ ನಿಮ್ಮಲ್ಲಿ ಯಾರು ಸಹಾಯಮಾಡುತ್ತೀರಿ ಎಂದಾಗ ವರುಣನು ತಾನು ಸಹಾಯಮಾಡುವುದಾಗಿ ಹೇಳಿದನು. ಆ ಕಾಲದಲ್ಲಿ ಹೋತೃವಿಗೆ ಸಹಾಯಕನಾದ ಮೈತ್ರಾವರುಣನು ತೃತೀಯ ಸವನಕಾಲದಲ್ಲಿ—

**ಇಂದ್ರಾವರುಣಾ ಯುವಮಧ್ವರಾಯ ನೋ ವಿಶೇ ಜನಾಯ ಮಹಿ ಶರ್ಮ ಯಚ್ಛತಂ ।**
(ಋ. ಸಂ. ೭-೮೨-೧)

ಎಂಬ ಋಕ್ಕಿನಿಂದ ಪ್ರಾರಂಭವಾಗುವ ಸೂಕ್ತವನ್ನು ಪಠಿಸಿ ಇಂದ್ರನನ್ನೂ ವರುಣನನ್ನೂ ಸ್ತುತಿಸಿದನು. ಆಗ ಇಂದ್ರಾವರುಣರು ಆ ಅಸುರರನ್ನು ಮಿತ್ರಾವರುಣಶಸ್ತ್ರದಿಂದ ಓಡಿಸಿದರು.

**ತೇ ವೈ ತತೋಽಪಹತಾ ಅಸುರಾ ಬ್ರಾಹ್ಮಣಾಚ್ಛಂಸಿನ ಉಕ್ಥಮಶ್ರಯಂತ ಸೋಽಬ್ರವೀದಿಂದ್ರಃ**
**ಕಶ್ಚಾಹಂ ಚೇಮಾನಿತೋಽಸುರಾನ್ನೋತ್ಸ್ಯಾವಹಾ ಇತ್ಯಹಂ ಚೇತ್ಯಬ್ರವೀದ್ಬೃಹಸ್ಪತಿಸ್ತ-**
**ಸ್ಮಾದೈಂದ್ರಾಬಾರ್ಹಸ್ಪತ್ಯಂ ಬ್ರಾಹ್ಮಣಾಚ್ಛಂಸೀ ತೃತೀಯಸವನೇ ಶಂಸತೀಂದ್ರಶ್ಚ ಹಿ ತಾನ್ಬೃ-**
**ಹಸ್ಪತಿಶ್ಚ ಹಿ ತತೋ ನುದೇತಾಂ ।**

ಅಲ್ಲಿಂದ ಓಡಿಸಲ್ಪಟ್ಟ ಅಸುರರು ಬ್ರಾಹ್ಮಣಾಚ್ಛಂಸಿಯ ಉಕ್ಥದಲ್ಲಿ ಪ್ರವೇಶಿಸಿದರು. ಆಗ ಇಂದ್ರನು ಎದ್ದು ಈ ಅಸುರರನ್ನು ಇಲ್ಲಿಂದ ಓಡಿಸಲು ಯಾರು ಸಹಾಯಮಾಡುತ್ತೀರಿ ಎಂದಾಗ ಬೃಹಸ್ಪತಿಯು ಎದ್ದು ತಾನು ಸಹಾಯ ಮಾಡುವುದಾಗಿ ಹೇಳಿದನು. ಆಗ ಬ್ರಾಹ್ಮಣಾಚ್ಛಂಸಿಯು ತೃತೀಯಸವನಕಾಲದಲ್ಲಿ

ಉದಪ್ರುತೋ ನ ವಯೋ ರಕ್ಷಮಾಣಾ ವಾವದತೋ ಅಭ್ರಿಯಸ್ಯೇವ ಘೋಷಾಃ ।
ಗಿರಿಭ್ರಜೋ ನೋರ್ಮಯೋ ಮದಂತೋ ಬೃಹಸ್ಪತಿಮಭ್ಯರ್ಕಾ ಅನಾವನ್ ।
(ಋ. ಸಂ ೧೦-೬೮-೧)

ಎಂಬ ಋಕ್ಕಿನಿಂದ ಪ್ರಾರಂಭವಾಗುವ ಸೂಕ್ತವನ್ನು ಪಠಿಸಿ ಇಂದ್ರನನ್ನೂ ಬೃಹಸ್ಪತಿಯನ್ನೂ ಸ್ತುತಿಸಿದನು. ಆಗ ಇಂದ್ರನೂ ಬೃಹಸ್ಪತಿಯೂ ಸಹ ಅಸುರರನ್ನು ಅಲ್ಲಿಂದ ಓಡಿಸಿದರು.

ತೇ ವೈ ತತೋಽಪಹತಾ ಅಸುರಾ ಅಚ್ಛಾವಾಕಸ್ಯೋಕ್ಥಮಶ್ರಯಂತ ಸೋಽಬ್ರವೀದಿಂದ್ರಃ ಕಶ್ಚಾಹಂ ಚೇಮಾನಿತೋಽಸುರಾನ್ನೋತ್ಸ್ಯಾವಹಾ ಇತ್ಯಹಂ ಚೇತ್ಯಬ್ರವೀದ್ವಿಷ್ಣುಸ್ತಸ್ಮಾದೈಂದ್ರಾವೈಷ್ಣವಮಚ್ಛಾವಾಕಸ್ತೃತೀಯಸವನೇ ಶಂಸತೀಂದ್ರಶ್ಚ ಹಿ ತಾನ್ವಿಷ್ಣುಶ್ಚ ತತೋ ನುದೇತಾಂ ।
(ಐ. ಬ್ರಾ. ೧೫-೬)

ಬ್ರಾಹ್ಮಣಾಚ್ಛಂಸಿಯ ಉಕ್ಥದಿಂದ ಓಡಿಸಲ್ಪಟ್ಟ ಅಸುರರು ಅಚ್ಛಾವಾಕನ ಉಕ್ಥದಲ್ಲಿ ಸೇರಿಕೊಂಡರು. ಆಗ ಇಂದ್ರನು ಎದ್ದು ಇವರನ್ನು ಇಲ್ಲಿಂದ ಓಡಿಸಲು ನಿಮ್ಮಲ್ಲಿ ಯಾರು ಸಹಾಯಮಾಡುತ್ತೀರೆಂದು ಕೇಳಿದನು. ಆಗ ವಿಷ್ಣುವು ತಾನು ಸಹಾಯಮಾಡುತ್ತೇನೆಂದನು ಆ ಕಾಲದಲ್ಲಿ ಅಚ್ಛಾವಾಕನು—

ಸಂ ವಾಂ ಕರ್ಮಣಾ ಸಮಿಷಾ ಹಿನೋಮೀಂದ್ರಾವಿಷ್ಣೂ ಅಪಸಸ್ಪಾರೇ ಅಸ್ಯ ।
ಜುಷೇಥಾಂ ಯಜ್ಞಂ ದ್ರವಿಣಂ ಚ ಧತ್ತಮರಿಷ್ಟೈರ್ನಃ ಪಥಿಭಿಃ ಪಾರಯಂತಾ ॥
(ಋ. ಸಂ. ೬-೬೯-೧)

ಎಂಬ ಋಕ್ಕಿನಿಂದ ಪ್ರಾರಂಭವಾಗುವ ಸೂಕ್ತವನ್ನು ಪಠಿಸಿ ಇಂದ್ರನನ್ನೂ ವಿಷ್ಣುವನ್ನೂ ಸ್ತುತಿಸಿದನು. ಆಗ ಅವರು ಅಸುರರನ್ನು ಅಲ್ಲಿಂದಲೂ ಓಡಿಸಿದರು ಎಂಬ ಕಥೆಯು ಐತರೇಯಬ್ರಾಹ್ಮಣದಲ್ಲಿ (೧೫-೬) ಪಠಿತವಾಗಿದೆ. ಇದರಿಂದ ಉಕ್ಥದ ಶಕ್ತಿಯೂ ಅದರಿಂದ ಅದನ್ನು ಪಠಿಸತಕ್ಕ ಯಜಮಾನನಿಗೆ ಆಗತಕ್ಕ ಉಪಕಾರವೂ ತಿಳಿಯುತ್ತದೆ.

ಯಾಗಾದಿಕರ್ಮಗಳ ಕಾಲದಲ್ಲಿ ಯಾವ ರೀತಿ ಉಕ್ಥದ ಪ್ರಭಾವವನ್ನು ವರ್ಣಿಸಿದೆಯೋ ಅದೇ ರೀತಿ ಅಧ್ಯಾತ್ಮಿಕವಾದ ಜ್ಞಾನವನ್ನು ಉಪದೇಶಿಸುವ ಕಾಲದಲ್ಲೂ ಸಹ ಸ್ತೋತ್ರಾತ್ಮಕವಾದ ಈ ಉಕ್ಥದ ಮಹಿಮೆಯನ್ನು ಸ್ತುತಿಸಿದೆ. ಬೃಹದಾರಣ್ಯಕೋಪನಿಷತ್ತಿನಲ್ಲಿ,

ಉಕ್ಥಂ ಪ್ರಾಣೋ ವಾ ಉಕ್ಥಂ ಪ್ರಾಣೋ ಹೀದಂ ಸರ್ವಮುತ್ಥಾಪಯತ್ಯುದ್ಧಾಸ್ಮಾದುಕ್ಥವಿದ್ವೀರಸ್ತಿಷ್ಠತ್ಯುಕ್ಥಸ್ಯ ಸಾಯುಜ್ಯಂ ಸಲೋಕತಾಂ ಜಯತಿ ಯ ಏವಂ ವೇದ
(ಬೃ. ಉ. ೫-೧೩-೧)

ಉಕ್ಥಂ ತಥೋಪಾಸನಾಂತರಂ । ಉಕ್ಥಂ ಶಸ್ತ್ರಂ । ತದ್ಧಿ ಪ್ರಧಾನಂ ಮಹಾವ್ರತೇ ಕ್ರತೌ ।
(ಶಾಂಕರಭಾಷ್ಯ)

ಮಹಾವ್ರತರೂಪವಾದ ಯಾಗದಲ್ಲಿ ಪ್ರಧಾನಶಸ್ತ್ರವಾದ ಉಕ್ಥವೇ ಪ್ರಾಣವು। ಇದರಿಂದಲೇ ಉತ್ಥಾನವಾಗುತ್ತದೆ. ಆದರಿಂದ **ಉಕ್ಥಜ್ಞ**ನಾದ ಪುತ್ರನು ಉತ್ಪನ್ನನಾಗಿ ತತ್ಸಮಾನತೆಯನ್ನೂ ಸಮಾನವಾದ ಮಾನ್ಯತೆಯನ್ನೂ ಪಡೆಯುತ್ತಾನೆ ಎಂದು **ಉಕ್ಥದ** ಮಹತ್ತ್ವವನ್ನು ಹೇಳಿದೆ. ಇಂತಹ ಮಹತ್ತ್ವವುಳ್ಳ **ಉಕ್ಥವನ್ನು** ಪಠಿಸುವಾಗ ಇದರ ಮಹಿಮೆಯನ್ನರಿತು ಇದನ್ನು ಪ್ರಶಂಸಿಸು ಎಂದರೆ ಇದುನಿನಗೆ ಹರ್ಷವನ್ನುಂಟುಮಾಡಿ ನಿನ್ನಪ್ರಶಂಸೆಗೆ ಅರ್ಹವಾಗಲಿ ಎಂದರ್ಥ.

**ಅಭಿ ಜುಗುರ್ಯಾಃ**— **ಆಭಿಮುಖ್ಯೇನ ಸ್ತುಹಿ। ಪ್ರೋತ್ಸಾಹಯ ಸಮ್ಯಕ್ಸ್ತುತಮಿತ್ಯಂಗೀಕುರು** ವಿಶೇಷರೀತಿಯಿಂದ ಸ್ತುತಿಸಿದೆಯೆಂಬ ಅಂಗೀಕಾರ ವಚನವನ್ನು ಹೇಳು ಎಂದರ್ಥ ಅಥವಾ

**ಪ್ರ ಸ್ತೋಷದುಪ ಗಾಸಿಷಚ್ಛ್ರವತ್ಸಾಮ ಗೀಯಮಾನಂ। ಅಭಿ ರಾಧಸಾ ಜುಗುರತ್।**

(ಋ. ಸಂ. ೮-೮೧-೫)

ಎಂಬ ಋಕ್ಕಿನಲ್ಲಿ **ಅಭಿ ಜುಗುರತ್** ಎಂಬ ಕ್ರಿಯಾಪದಕ್ಕೆ **ಅಭಿಗೃಣಾತು ಸ್ವೀಕುರು** ಸ್ವೀಕರಿಸು ಎಂಬರ್ಥವಾಗುವಂತೆ ಇಲ್ಲಿಯೂ ಸಹ ಅಂಗೀಕರಿಸು ಎಂದರ್ಥವಾಗಬಹುದು. ತಾತ್ಪರ್ಯವೊಂದೇ ಆಗುತ್ತದೆ.

**ಸ್ವಗೂರ್ತಾಃ—ಸ್ವಯಮೇವ ಗಾಮಿನ್ಯಃ।** ಸ್ವಭಾವವಾಗಿಯೇ ಹರಿಯತಕ್ಕವು ಎಂದು ಸಾಯಣರು ಅರ್ಥಮಾಡಿದ್ದಾರೆ. ಆದರೆ **ಗೂರ್ತ** ಶಬ್ದಕ್ಕೆ ಸಾಧಾರಣವಾಗಿ **ಸ್ತುತ್ಯರ್ಹವಾದ, ಪ್ರಖ್ಯಾತವಾದ** ಎಂಬರ್ಥವೇ ಇದೆ. **ಸ್ತೋತೃಗಳು**, ಪ್ರಶಂಸಿಸುವವರು ಎಂಬರ್ಥವೂ ಇದೆ. ಉದಾಹರಣೆಗೆ,

**ತಂ ಗೂರ್ತಯೋ ನೇಮನ್ನಿಷಃ ಪರೀಣಸಃ ಸಮುದ್ರಂ ನ ಸಂಚರಣೇ ಸನಿಷ್ಯವಃ।**
**ಪತಿಂ ದಕ್ಷಸ್ಯ ವಿದಥಸ್ಯ ನೂ ಸಹೋ ಗಿರಿಂ ನ ವೇನಾ ಅಧಿರೋಹ ತೇಜಸಾ।**

(ಋ. ಸಂ. ೧-೫೬-೨)

ಎಂಬ ಋಕ್ಕಿನಲ್ಲಿ **ಗೂರ್ತಯಃ** ಎಂಬುದಕ್ಕೆ **ಸ್ತೋತಾರಃ** ಎಂದೂ

**ತಂ ವಃ ಸಖಾಯೋ ಮದಾಯ ಪುನಾನಮಭಿ ಗಾಯತ।**
**ಶಿಶುಂ ನ ಯಜ್ಞೈಃ ಸ್ವದಯಂತ ಗೂರ್ತಿಭಿಃ।**

(ಋ. ಸಂ. ೯-೧೦೫-೧)

ಎಂಬಲ್ಲಿ **ಗೂರ್ತಿಭಿಃ** ಎಂಬುದಕ್ಕೆ **ಸ್ತುತಿಭಿಃ** ಸ್ತೋತ್ರಗಳಿಂದ ಎಂದೂ, ಹೀಗೆಯೇ ಇನ್ನೂ ಇತರ ಕಡೆಗಳಲ್ಲಿಯೂ ಸಹ ಸ್ತುತ್ಯವಾದ, ಪ್ರಖ್ಯಾತವಾದ ಎಂಬರ್ಥವೂ ಇದೆ. ಅದರಂತೆ ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಪ್ರಶಂಸಾರ್ಹವಾದ ಅಥವಾ ಪ್ರಭೂತವಾದ ಪ್ರವಾಹವುಳ್ಳ ಸಿಂಧುಗಳು ಎಂದರ್ಥಮಾಡಬಹುದು.

### ವ್ಯಾಕರಣಪ್ರಕ್ರಿಯಾ

**ಅಭಿ—ನಿಪಾತಸ್ಯ ಚ** (ಪಾ. ಸೂ. ೬-೩-೧೩೬) ಎಂಬುದರಿಂದ ಸಂಹಿತಾವಲ್ಲಿ ದೀರ್ಘ ಬರುತ್ತದೆ.

**ಜುಗುರ್ಯಾಃ**—ಗೄ ಶಬ್ದೇ. ಧಾತು. ಲಙ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್. **ಇತಶ್ಚ** ಎಂಬುದರಿಂದ ಇಕಾರಲೋಪ. **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಶ್ಲು ಆದೇಶ. **ಬಹುಲಂ ಛಂದಸಿ** ಎಂಬುದ

ರಿಂದ ಧಾತುವಿಗೆ ಉತ್ವ. ಉರಣ್ರಪರಃ ಎಂಬುದರಿಂದ ರಪರವಾಗಿ ಬರುತ್ತದೆ. **ಶ್ಲೌ** (ಪಾ. ಸೂ. ೬-೧-೧೦) ಎಂಬುದರಿಂದ ಧಾತುವಿಗೆ ದ್ವಿತ್ವ. ಪ್ರತ್ಯಯಕ್ಕೆ ಯಾಸುಟಾಗಮ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ದ್ಯಾವಾಕ್ಷಾಮಾ**—ದ್ಯೌಶ್ಚ ಕ್ಷಾಮಾಶ್ಚ ದ್ಯಾವಾಕ್ಷಾಮಾ. **ದಿವೋದ್ಯಾವಾ** (ಪಾ. ಸೂ. ೬-೩-೨೯) ಎಂಬುದರಿಂದ ಉತ್ತರಪದ ಪರವಾದಾಗ ದ್ಯಾವಾದೇಶ. **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ವಿಭಕ್ತಿಗೆ (ಔ) ಆಕಾರಾದೇಶ. **ದೇವತಾದ್ವಂದ್ವೇ ಚ** (ಪಾ. ಸೂ. ೬-೨-೧೪೧) ಎಂಬುದರಿಂದ ಉಭಯಪದ ಪ್ರಕೃತಿಸ್ವರ ಶಬ್ದಬರುತ್ತದೆ. ಕ್ಷಾಮಾ ವು ಭೂಮಿಪರ್ಯಾಯವಾಗಿ ವೇದದಲ್ಲಿ ಪಠಿತವಾಗಿದೆ.

**ಸಿಂಧವಃ**—ಸ್ಯಂದೂ ಪ್ರಸ್ರವಣೇ. ಧಾತು. **ಸ್ಯಂದೇಸ್ಸಂಪ್ರಸಾರಣಂ ಧಶ್ಚ** (ಉ. ಸೂ. ೧-೧೧) ಎಂಬುದರಿಂದ ಉನ್‌ಪ್ರತ್ಯಯ. ಧಾತು ದಕಾರಕ್ಕೆ ಧಕಾರಾದೇಶ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಗವ್ಯವ್**—ಗೋರ್ವಿಕಾರಃ ಗವ್ಯಮ್. **ಗೋಪಯಸೋರ್ಯತ್** (ಪಾ. ಸೂ. ೪-೩-೧೬೦) ಎಂಬುದರಿಂದ ಯತ್ ಪ್ರತ್ಯಯ. **ವಾಂತೋ ಯಿ ಪ್ರತ್ಯಯೇ** (ಪಾ. ಸೂ. ೬-೧-೭೯) ಎಂಬುದರಿಂದ ಅವಾದೇಶ. **ಯತೋಽನಾವಃ** (ಪಾ. ಸೂ. ೬-೧-೨೧೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಹೀಗೆಯೇ ಯವ್ಯಮ್ ಎಂಬಲ್ಲಿಯೂ ಸ್ವರ ಪ್ರತ್ಯಯಗಳು ಬರುತ್ತವೆ.

**ಯಂತಃ**—ಇಣ್ ಗತೌ ಧಾತು. ಪ್ರೇರಣಾತೋರುವುದರಿಂದ ಅಂತರ್ಭಾವಿತಣ್ಯರ್ಥಕವಾದ ಧಾತು. ಲಡರ್ಥದಲ್ಲಿ ಶತೃಪ್ರತ್ಯಯ. **ಇಣೋಯಣ್** (ಪಾ. ಸೂ. ೬-೪-೮೧) ಎಂಬುದರಿಂದ ಧಾತುವಿಗೆ ಯಣಾದೇಶ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

ಅಹಾ—**ಶೇಶ್ಛಂದಸಿ ಬಹುಲಮ್** (ಪಾ ಸೂ. ೬-೧-೭೦) ಎಂಬುದರಿಂದ ಶಿಗೆ ಲೋಪ.

**ಅರುಣ್ಯಃ**— ಇಲ್ಲಿ ಅರುಣವರ್ಣ ವಿಶಿಷ್ಟವಾದವುಗಳು ಎಂದು ಅರ್ಥ ತೋರುವುದರಿಂದ ಛಾಂದಸವಾಗಿ ಮತ್ವರ್ಥಪ್ರತ್ಯಯವು ಲುಪ್ತವಾಗಿದೆ.

**ವರಂತೆ**—ವೃಜ್ ಸಂಭಕ್ತೌ. ಧಾತು. **ಛಂದಸಿ ಲುಙ್‌ಲಙ್‌ಲಿಟಃ** (ಪಾ. ಸೂ. ೩-೪-೬) ಎಂಬುದರಿಂದ ಲೋಡರ್ಥದಲ್ಲಿ ಲಙ್. ಪ್ರೇರಣಾತೋರುವುದರಿಂದ ಅಂತರ್ಭಾವಿತಣ್ಯರ್ಥಕವಾದ ಧಾತು. ಪ್ರಥಮಪುರುಷ ಬಹುವಚನದಲ್ಲಿ ಝ ಪ್ರತ್ಯಯ. ಅಂತಾದೇಶ. ಶಪ್ ವಿಕರಣ. ಧಾತುವಿಗೆ ಗುಣ. **ಬಹುಲಂ ಛಂದಸ್ಯಮಾಙ್‌ಯೋಗೇಽಪಿ** (ಪಾ. ಸೂ. ೬-೪-೭೫) ಎಂಬುದರಿಂದ ಅಡಾಗಮ ಬರುವುದಿಲ್ಲ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೧೩ ॥

ಇಲ್ಲಿಗೆ ೧೪೦ನೇ ಸೂಕ್ತವು ಮುಗಿದುದು.



# ನೂರನಲವತ್ತೊಂದನೆಯ ಸೂಕ್ತವು

---

ಬಳಿತ್ಥೇತಿ ತ್ರಯೋದಶರ್ಚಂ ದ್ವಿತೀಯಂ ಸೂಕ್ತಂ ದೈರ್ಘತಮಸಂ ಜಾಗತಂ । ಅಂತ್ಯೇ ತ್ರಿಷ್ಟುಭೌ । ಅಗ್ನಿರ್ದೇವತಾ ॥ ಪ್ರಾತರನುವಾಕಾಶ್ವಿನಶಸ್ತ್ರಯೋರುಕ್ತೋ ವಿನಿಯೋಗಃ ॥

ಅನುವಾದವು—ಬಳಿತ್ಥಾ ಎಂಬ ಈ ಸೂಕ್ತವು ಇಪ್ಪತ್ತೊಂದನೆಯ ಅನುವಾಕದಲ್ಲಿ ಎರಡನೆಯ ಸೂಕ್ತವು. ಇದರಲ್ಲಿ ಹದಿಮೂರು ಋಕ್ಕುಗಳಿರುವವು. ಈ ಸೂಕ್ತಕ್ಕೆ ದೀರ್ಘತಮಸ್ ಎಂಬುವನು ಋಷಿಯು. ಅಗ್ನಿಯು ದೇವತೆಯು. ಕೊನೆಯ ಎರಡು ಋಕ್ಕುಗಳು ತ್ರಿಷ್ಟುಪ್ ಛಂದಸ್ಸಿನವು. ಉಳಿದ ಋಕ್ಕುಗಳು ಜಗತೀಛಂದಸ್ಸಿನವು. ಪ್ರಾತರನುವಾಕಮಂತ್ರಪಠನಕಾಲದಲ್ಲಿಯೂ ಆಶ್ವಿನಶಸ್ತ್ರಮಂತ್ರಪಠನಕಾಲದಲ್ಲಿಯೂ ಈ ಸೂಕ್ತದ ವಿನಿಯೋಗವಿರುವುದೆಂದು ಹಿಂದೆಯೇ ಹೇಳಿರುವುದು.

॥ ಓಂ ॥

**ಸೂಕ್ತ—೧೪೧**

॥ ಮಂಡಲ—೧ ॥ ಅನುವಾಕ—೨೧ ॥ ಸೂಕ್ತ—೧೪೧ ॥

॥ ಅಷ್ಟಕ— ೨ ॥ ಅಧ್ಯಾಯ— ೨ ॥ ವರ್ಗ— ೮, ೯ ॥

ಸೂಕ್ತದಲ್ಲಿರುವ ಋಕ್ಸಂಖ್ಯೆ—೧೩॥

॥ ಋಷಿಃ—ದೀರ್ಘತಮಾ ಔಚಥ್ಯಃ ॥

॥ ದೇವತಾ—ಅಗ್ನಿಃ ॥

॥ ಛಂದಃ—೧-೧೧ ಜಗತೀ । ೧೨-೧೩ ತ್ರಿಷ್ಟುಪ್ ॥

ಸಂಹಿತಾಪಾಠಃ

ಬಳಿತ್ಥಾ ತದ್ವಪುಷೇ ಧಾಯಿ ದರ್ಶತಂ ದೇವಸ್ಯ ಭರ್ಗಃ ಸಹಸೋ ಯತೋ ಜನಿ ।
ಯದೀಮುಪ ಹ್ವರತೇ ಸಾಧತೇ ಮತಿರ್ಋತಸ್ಯ ಧೇನಾ ಅನಯಂತ ಸಸ್ರುತಃ ॥ ೧ ॥

ಪದಪಾಠಃ

ಬಟ್ । ಇತ್ಥಾ । ತತ್ । ವಪುಷೇ । ಧಾಯಿ । ದರ್ಶತಂ । ದೇವಸ್ಯ । ಭರ್ಗಃ । ಸಹಸಃ । ಯತಃ । ಜನಿ ।
ಯತ್ । ಈಂ । ಉಪ । ಹ್ವರತೇ । ಸಾಧತೇ । ಮತಿಃ । ಋತಸ್ಯ । ಧೇನಾಃ । ಅನಯಂತ । ಸಸ್ರುತಃ ॥೧॥

ಸಾಯಣಭಾಷ್ಯಂ

ದೇವಸ್ಯ ದ್ಯೋತನಶೀಲಸ್ಯಾದಿತ್ಯಸ್ಯ ದರ್ಶತಂ ಸರ್ವೈರ್ದರ್ಶನೀಯಂ ತತ್ ಪ್ರಸಿದ್ಧಂ ಭರ್ಗಸ್ತೇಜ ಇತ್ಥೇತ್ಥಂ ಸರ್ವೈರ್ದೃಶ್ಯಮಾನಪ್ರಕಾರೇಣ ವಪುಷೇ ಶರೀರವ್ಯವಹಾರಾಯ ದಾರ್ಢ್ಯಾಯ ಧಾಯಿ । ಧಾರ್ಯತೇ ಸರ್ವೈಃ । ಬಳಿತ್ಥೇತ್ಯುಭೇ ಅಪಿ ಸತ್ಯನಾಮನೀ ಬಟ್ ಶ್ರತ್ ಸತ್ರೇತ್ಥೇತಿ ತನ್ನಾಮಸು ಪಾಠಾತ್ । ಜಾಠರಾಗ್ನಿನಾ ಭುಕ್ತಾನಾಂ ಜರಣೇನ ಶರೀರಧಾರಣಂ ಪ್ರಸಿದ್ಧಂ । ತತ್ರೋಪಪತ್ತಿಮಾಹ । ಯತಃ ಸಹಸೋ ಜನಿ । ಯತಃ ಕಾರಣಾನ್ಮಥನಕಾಲೇ ಬಲೇನೋತ್ಪನ್ನಃ ಅತೋ ಬಲಾಯ ಧಾರ್ಯತ ಇತ್ಯರ್ಥಃ । ಯದೀಂ ಯದೇತತ್ಪ್ರಸಿದ್ಧಂ ಲೋಕೋಪಕಾರ್ಯಗ್ನೇಸ್ತೇಜೋ ಮತಿರ್ಮದೀಯಾ ಬುದ್ಧಿರುಪ ಹ್ವರತೇ ಉಪಗಚ್ಛತಿ ಉಪಗಮ್ಯ ವರ್ತತೇ ವಾ ॥ ಹ್ವೃ ಕೌಟಿಲ್ಯೇ ॥ ಸಾಧತೇ ಚ ತೇನೈವ ತೇಜಸಾ ಸಾಧಯತಿ ಸ್ವಾಭೀಷ್ಟಂ । ಕಿಂಚ ಋತಸ್ಯ ಯಜ್ಞಸಾಧಕಸ್ಯಾಗ್ನೇಸ್ತೇಜಸಾ ಧೇನಾಃ ಸರ್ವಪ್ರಾಣಿನಾಂ ವಾಚಃ ಸಸ್ರುತಃ ಸಮಾನಂ ಗಚ್ಛಂತ್ಯಃ ಸಹೈವ ಪ್ರವರ್ತಮಾನಾಃ ॥ ಸ್ರವತೇಃ ಕರ್ತರಿ ಕ್ವಿಪ್ ॥ ಅನಯಂತ । ನಯಂತಿ । ನಿರ್ವಹಂತಿ ಜಗದ್ವ್ಯವಹಾರಂ ॥ ವ್ಯತ್ಯಯೇನಾತ್ಮನೇಪದಂ ॥ ಯದ್ವಾ । ಋತಸ್ಯ ಧೇನಾ ಯಜ್ಞಸ್ಯ ಸಂಬಂಧಿನ್ಯೋ ಮಂತ್ರರೂಪಾ ವಾಚಃ ಸಸ್ರುತೋ ಹೋತ್ರಾದಿಮುಖೇನ ಸಹೈವ ಪ್ರವರ್ತಮಾನಾ ಅನಯಂತ । ನಯಂತಿ । ಅಗ್ನೇಃ ಸ್ತೋತ್ರಂ ನಿರ್ವಹಂತಿ । ಅಗ್ನೇಸ್ತೇಜಸಾ ವಾ ಯಜ್ಞಂ ನಿರ್ವಹಂತಿ । ತೇಜೋಮಯೀ ವಾಗಿತಿ ಶ್ರುತೇಃ । ಛಾಂ. ಉ. ೬-೫-೪ । ಅತಃ ಕಾರಣಾನ್ಮತಿರುಪಹ್ವರತ ಇತ್ಯರ್ಥಃ । ಧೇನೇತಿ ವಾಙ್ನಾಮ ಧೇನಾ ಗ್ನಾ ಇತಿ ತನ್ನಾಮಸು ಪಾಠಾತ್ ॥

ಪ್ರತಿಪದಾರ್ಥ

ದೇವಸ್ಯ— ಪ್ರಕಾಶಮಾನನಾದ ಆದಿತ್ಯನ । ದರ್ಶತಂ — (ಎಲ್ಲರಿಗೂ) ಗೋಚರವಾಗತಕ್ಕದ್ದೂ । ತತ್ — ಪ್ರಸಿದ್ಧವಾದುದೂ ಆದ । ಭರ್ಗಃ — ತೇಜಸ್ಸು । ಇತ್ಥಾ — ಈ ಪ್ರಕಾರವಾಗಿ । ಯತಃ— ಯಾವ ಕಾರಣಕ್ಕಾಗಿ । ಸಹಸಃ— ಶಕ್ತಿಯಿಂದ । ಜನಿ— ಉತ್ಪನ್ನವಾಯಿತೋ (ಅಂತಹ) । ವಪುಷೇ —ಶರೀರಧಾರ್ಢ್ಯಕ್ಕಾಗಿ । ಧಾಯಿ— (ಎಲ್ಲರಿಂದಲೂ) ಧರಿಸಲ್ಪಡುತ್ತದೆ । ಯದೀಂ— ಯಾವ ಈ ಪ್ರಸಿದ್ಧವಾದುದೂ, ಲೋಕೋಪಕಾರಕವಾದುದೂ ಆದ ಈ ತೇಜಸ್ಸನ್ನು । ಮತಿಃ— ನನ್ನ ಬುದ್ಧಿಯು । ಉಪಹ್ವರತೇ— (ಪ್ರಯತ್ನದಿಂದ) ಸಮೀಪಿಸುತ್ತದೆ । ಸಾಧತೇ— (ತನ್ನ ಇಷ್ಟಾರ್ಥವನ್ನು) ಕೈಗೂಡಿಸಿಕೊಳ್ಳುತ್ತದೆ । ಋತಸ್ಯ— ಯಜ್ಞಸಾಧಕವಾದ ಅಗ್ನಿಯ (ತೇಜಸ್ಸಿನೊಡನೆ) । ಧೇನಾಃ— ಸಕಲಪ್ರಾಣಿಗಳ ವಾಕ್ಕೂ । ಸಸ್ರುತಃ — ಒಂದುಗೂಡಿ ಸೇರಿಕೊಳ್ಳುತ್ತವೆ । ಅನಯಂತ — (ಜಗದ್ವ್ಯಾಪಾರವನ್ನು) ನಿರ್ವಹಿಸುತ್ತವೆ । [ಅಥವಾ ಋತಸ್ಯ— ಯಜ್ಞಸಂಬಂಧಿಗಳಾದ । ಧೇನಾಃ— ಈ ಮಂತ್ರರೂಪವಾದ ವಾಕ್ಕುಗಳು । ಸಸ್ರುತಃ — ಹೋತ್ರಾದಿಗಳ ಮುಖದಿಂದ ಹೊರಟು ಅನಯಂತ— (ಅಗ್ನಿಯ ಸ್ತೋತ್ರವನ್ನು) ನಿರ್ವಹಿಸುತ್ತವೆ.]

॥ ಭಾವಾರ್ಥ ॥

ಎಲ್ಲರಿಗೂ ಗೋಚರವಾಗತಕ್ಕದ್ದೂ, ಪ್ರಸಿದ್ಧವಾದುದೂ ಆದ ಆದಿತ್ಯನ ತೇಜಸ್ಸು ಎಲ್ಲಾ ಪ್ರಾಣಿಗಳಿಗೂ ಶರೀರಧಾರ್ಢ್ಯವನ್ನು ಕೊಡುವುದಕ್ಕಾಗಿ ಶಕ್ತಿಯಿಂದ ಉತ್ಪನ್ನವಾಗಿದೆ ಆ ಧಾರ್ಢ್ಯಸಂಪಾದನೆಗಾಗಿಯೇ ಎಲ್ಲ ಪ್ರಾಣಿಗಳೂ ಇದನ್ನು ಧರಿಸುತ್ತವೆ ಪ್ರಸಿದ್ಧವಾದುದೂ, ಲೋಕೋಪಕಾರಕವಾದದ್ದೂ ಆದ ಈ ತೇಜಸ್ಸನ್ನು ನನ್ನ ಬುದ್ಧಿಯು ಗ್ರಹಿಸಿ ತನ್ನ ಇಷ್ಟಾರ್ಥವನ್ನು ಕೈಗೂಡಿಸಿಕೊಳ್ಳುತ್ತದೆ. ಯಜ್ಞಕಾಲದಲ್ಲಿ ಹೋತ್ರಾದಿಗಳ ಮುಖಗಳಿಂದ ಹೊರಟ ಮಂತ್ರಪೂರಿತವಾದ ವಾಕ್ಕು ಈ ಅಗ್ನಿಯ ಸ್ತೋತ್ರವನ್ನು ನಿರ್ವಹಿಸುತ್ತದೆ,

English Translation

Verily, that visible radiance of the divine ( Agni ) has been so apprehended (by all, that it may be) for (the support of) the body, for which end it has been generated by ( bodily ) srength : and that my mind may apprehend and apply ( that radiance ), they address the sacred prayers associated with oblations (to Agni).

॥ ವಿಶೇಷ ವಿಷಯಗಳು ॥

**ಭರ್ಗಃ – ತೇಜಃ** । (ಆದಿತ್ಯರೂಪನಾದ) ಅಗ್ನಿಯ ತೇಜಸ್ಸಿಗೆ ಮಾತ್ರ **ಭರ್ಗ** ಶಬ್ದದ ಪ್ರಯೋಗವು ರೂಢಿಯಲ್ಲಿರುವುದು. ಸಾಯಣರು,

**ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ । ಧಿಯೋ ಯೋ ನಃ ಪ್ರಚೋದಯಾತ್** ॥
(ಋ ಸಂ. ೩-೬೨-೧೦)

ಎಂಬ ಋಕ್ಕಿನಲ್ಲಿ **ಭರ್ಗಶಬ್ದಕ್ಕೆ ಅವಿದ್ಯಾತತ್ಕಾರ್ಯಯೋರ್ಭರ್ಜನಾದ್ಭರ್ಗಃ** । ಅವಿದ್ಯೆ ಮತ್ತು ಅದರ ಕಾರ್ಯಗಳಾದ ಕಾಮಮೋಹಾದಿಗಳನ್ನು ನಾಶಮಾಡುವುದರಿಂದ **ಭರ್ಗ**ವೆಂಬ ಪದದಿಂದ ಸವಿತೃವಿನ ಸ್ವರೂಪವು ಹೇಳಲ್ಪಟ್ಟಿದೆಯೆಂದು ತೋರಿಸಿದ್ದಾರೆ.

**ಸಹಸಃ ಜನಿ**—ಅರಣಿಮಥನಕಾಲದಲ್ಲಿ ಶಕ್ತಿಯಿಂದ ಉತ್ಪನ್ನನಾದುದರಿಂದ **ಸಹಸಃ ಜನಿ** ಎಂದು ವರ್ಣಿಸಿದೆ.

**ಋತಸ್ಯ ಧೇನಾಃ**—ಋತಶಬ್ದಕ್ಕೆ ಇಲ್ಲಿ ಯಜ್ಞವೆಂದರ್ಥ. **ಋತಸ್ಯ** ಎಂದರೆ ಯಜ್ಞಸಂಬಂಧಿಯಾದ (ಯಜ್ಞದ) ಅಥವಾ ಯಜ್ಞಸಾಧಕವಾದ ಅಗ್ನಿಯ **ಧೇನಾಃ** ಎಂದು ಅನ್ವಯವನ್ನು ತೋರಿಸಿ **ಧೇನಾಃ** ಎಂಬ ಪದಕ್ಕೆ **ಸರ್ವಪ್ರಾಣಿನಾಂ ವಾಚಃ ಯದ್ವಾ ಯಜ್ಞಸ್ಯ ಸಂಬಂಧಿನ್ಯಃ ಮಂತ್ರ-ರೂಪಾ ವಾಚಃ** । ಸಕಲ ಪ್ರಾಣಿಗಳ ವಾಕ್ಕು ಅಥವಾ ಯಜ್ಞಕ್ಕೆ ಸಂಬಂಧಿಸಿದ ಮಂತ್ರರೂಪವಾದ ವಾಕ್ಕೆಂದು ಅರ್ಥವಾಗಿ **ತೇಜೋಮಯೀ ವಾಕ್** ( ಛಾ. ಉ. ೬-೫-೪ ) ಎಂಬ ಉಪನಿಷದ್ವಾಕ್ಯವನ್ನು ಉದಹರಿಸಿದ್ದಾರೆ. ಈ ಉದಾಹರಣೆಯಿಂದಲೇ **ಧೇನಾ** ಎಂಬ ಪದಕ್ಕೆ ಸಾಧಾರಣವಾದ ವಾಕ್ಕೆಂದಾಗದೆ, ಅಲೌಕಿಕವಾದುದೂ ತೇಜಸ್ವಿ

ಸಿಂದ ಕೂಡಿರುವುದೂ ಆದ ಮಂತ್ರರೂಪವಾದ ವಾಕ್ಕೆಂದು ಅರ್ಥವಾಗುವುದಾಗಿ ತಿಳಿಯುತ್ತದೆ. ಆದರೆ ಸಾಯಣರು ಕೆಲವು ಕಡೆ ಅರ್ಥವ್ಯತ್ಯಾಸವನ್ನು ಮಾಡಿರುವುದರಿಂದ ಈ ಪದಕ್ಕೆ ನಿಶ್ಚಿತವಾದ ಒಂದೇ ಅರ್ಥವಿದೆಯೇ ಅಥವಾ ಸನ್ನಿವೇಶಗಳಿಗನುಸಾರವಾಗಿ ಅರ್ಥವ್ಯತ್ಯಾಸವಾಗುವುದೇ ಎಂಬುದನ್ನು ವಿಮರ್ಶಿಸಬೇಕಾಗಿದೆ.

**ಸಮ್ಯಕ್ಸ್ರವಂತಿ ಸರಿತೋ ನ ಧೇನಾ ಅಂತರ್ಹೃದಾ ಮನಸಾ ಪೂಯಮಾನಾಃ ।**
**ಏತೇ ಅರ್ಷಂತ್ಯೂರ್ಮಯೋ ಘೃತಸ್ಯ ಮೃಗಾ ಇವ ಕ್ಷಿಪಣೋರೀಷಮಾಣಾಃ ।**
(ಋ. ಸಂ. ೪-೫೮-೬)

**ತ್ವಮಿಂದ್ರ ಸ್ರವಿತವಾ ಅಪಸ್ಕಃ ಪರಿಷ್ಠಿತಾ ಅಹಿನಾ ಶೂರ ಪೂರ್ವೀಃ ।**
**ತ್ವದ್ವಾವಕ್ರೇ ರಥ್ಯೋ೩ ನ ಧೇನಾ ರೇಜಂತೇ ವಿಶ್ವಾ ಕೃತ್ರಿಮಾಣಿ ಭೀಷಾ ।**
(ಋ. ಸಂ. ೭-೨೧-೩)

ಎಂಬ ಋಕ್ಕುಗಳಲ್ಲಿ ಸಾಯಣರು **ಧೇನಾ** ಎನ್ನುವ ಪದಕ್ಕೆ ಪ್ರವಹಿಸುವ ನದಿಯೆಂದೂ,

**ಮಾದಯಸ್ವ ಹರಿಭಿರ್ಯೇ ತ ಇಂದ್ರ ವಿ ಷ್ಯಸ್ವ ಶಿಪ್ರೇ ವಿ ಸೃಜಸ್ವ ಧೇನೇ ।**
**ಆ ತ್ವಾ ಸುಶಿಪ್ರ ಹರಯೋ ವಹಂತೂಶನ್ಹವ್ಯಾನಿ ಪ್ರತಿ ನೋ ಜುಷಸ್ವ ।**
(ಋ. ಸಂ. ೧-೧೦೧-೧೦)

ಎಂಬ ಋಕ್ಕಿನಲ್ಲಿ **ಪಾನಸಾಧನಭೂತೇ ಜಿಹ್ವೋಪಜಿಹ್ವಿಕೇ** ಕುಡಿಯಲು ಸಾಧನಗಳಾದ ಜಿಹ್ವೆಯನ್ನೂ ಉಪಜಿಹ್ವೆಯನ್ನೂ ಎಂದೂ ಅರ್ಥಮಾಡಿದ್ದಾರೆ. ನಿರುಕ್ತಕಾರರು ಇದೇ ಋಕ್ಕನ್ನು (೧-೧೦೧-೧೦) ಉದಹರಿಸಿ **ಧೇನಾ ದಧಾತೇಃ** ಎಂಬ ನಿರ್ವಚನವನ್ನು ತೋರಿಸಿ ಪಾನೀಯವಾದ ಕ್ಷೀರವೆಂಬರ್ಥವನ್ನು ಮಾಡಿದ್ದಾರೆ. (ನಿ. ೬-೧೭) ಇವುಗಳಲ್ಲದೆ ಉಳಿದ ಋಕ್ಕುಗಳಲ್ಲಿ **ವಾಕ್** ಎಂಬರ್ಥವನ್ನು ಸಾಯಣರು ಹೇಳಿರುತ್ತಾರೆ. ಆದರೆ ಸಂಹಿತೆಯಲ್ಲೂ ಇತರ ಕಡೆಗಳಲ್ಲೂ ಈ ಪದಪ್ರಯೋಗಗಳ ಸನ್ನಿವೇಶಗಳನ್ನು ಪರಿಶೀಲಿಸಿದರೆ **ಸ್ತುತಿರೂಪವಾದ** ವಾಕ್ಕು ಎಂಬರ್ಥವನ್ನು ಬಿಟ್ಟು ಉಳಿದರ್ಥಗಳಾಗುವುದಕ್ಕೆ ಕಾರಣವಿಲ್ಲವೆಂದು ತೋರುತ್ತದೆ. ಈ ಸಂದರ್ಭದಲ್ಲಿ ಶ್ರೌತಸೂತ್ರಗಳಲ್ಲಿ ಉಪಯೋಗಿಸಿರುವ ಪ್ರಕರಣವನ್ನು ನೋಡಿದರೂ ಸಹ ಇದೇ ಅರ್ಥಕ್ಕೆ ಹೆಚ್ಚು ಅವಕಾಶವಿರುವುದಾಗಿ ತೋರುತ್ತದೆ.

ಶ್ರೌತಸೂತ್ರಗಳಲ್ಲಿ ದೇವಪತ್ನಿಯರ ಪಟ್ಟಿಯನ್ನು ಹೇಳುವಾಗ **ಸೇನೇಂದ್ರಸ್ಯ, ಧೇನಾ ಬೃಹಸ್ಪತೇಃ** ಎಂದು ಬೃಹಸ್ಪತಿಪತ್ನಿಗೆ **ಧೇನಾ** ಎಂಬ ಹೆಸರು ಪ್ರಸಿದ್ಧವಾಗಿದೆ. ಈ ಸ್ಥಳಗಳಲ್ಲೆಲ್ಲಾ **ಸ್ತುತಿರೂಪವಾದ ವಾಕ್ಕೆಂದೇ** ಅರ್ಥವೇ ಹೊರತು ಉಳಿದ ಅರ್ಥಗಳಿಗವಕಾಶವಿಲ್ಲ. ಮೇಲೆ ಉದಹರಿಸಿರುವ ಋಕ್ಕುಗಳಲ್ಲಿ ಅಂತರ್ಗತವಾಗಿರುವ ಪದಕ್ಕೂ ಸಹ ಇದೇ ಅರ್ಥವನ್ನು ಹೇಳಿದರೆ ತಪ್ಪಾಗಲಾರದು. ಉದಾಹರಣೆಗೆ ೪-೫೮-೬ ನೇ ಋಕ್ಕಿನಲ್ಲಿ **ಸಮ್ಯಕ್ಸ್ರವಂತಿ ಸರಿತೋ ನ ಧೇನಾ ಅಂತರ್ಹೃದಾ ಮನಸಾ ಪೂಯಮಾನಾಃ ।** ಎಂಬಲ್ಲಿ **ಸರಿತೋ ನ** ತಡೆಯಿಲ್ಲದೇ ಪ್ರವಹಿಸುವ ನದಿಗಳಂತೆ **ಅಂತರ್ಹೃದಾ ಮನಸಾ ಪೂಯಮಾನಾಃ ಧೇನಾಃ ।** ಹೃತ್ಪೂರ್ವಕವಾಗಿಯೂ, ಚಿತ್ತಶುದ್ಧಿಯಿಂದಲೂ ಸ್ವಾಭಾವಿಕವಾಗಿ ಹೊರಹೊಮ್ಮುವ **ಸ್ತುತಿರೂಪವಾದ ವಾಕ್ಕುಗಳು** ಎಂದರೆ ಉಚಿತವಾಗಿರುವುದೇ ಹೊರತು ತಪ್ಪಾಗಲಾರದು. ಅಲ್ಲದೆ **ಮನಸಾ, ಅಂತರ್ಹೃದಾ ಪೂಯಮಾನಾಃ** ಎಂಬ ಪದಗಳು **ಧೇನಾಃ** ಎಂಬುದರೊಂದಿಗೆ ಸಹಜವಾಗಿ ಹೊಂದಿಕೊಳ್ಳುತ್ತವೆ. ಸಾಯಣರು ಆ ಪದಗಳನ್ನು ಏತೇ

**ಘೃತಸ್ಯ ಊರ್ಮಯಃ** ಎಂಬ ಪದಗಳೊಂದಿಗೆ ಸೇರಿಸಿರುವುದು ಸಹಜವಾದ ಅರ್ಥವನ್ನು ಕೊಡುವುದಿಲ್ಲ. ಇದರಂತೆ ೧-೧೦೧-೧೦ ನೇ ಋಕ್ಕಿನಲ್ಲಿಯೂ ಸಹ **ಧೇನೇ** ಎಂಬ ದ್ವಿವಚನವು ಸ್ತುತಿ ಮತ್ತು ಹವಿಸ್ಸು ಎಂಬೆರಡು ಅರ್ಪಣೆಗಳನ್ನು ನಿರ್ದೇಶಿಸಿದ್ದರೂ ಇರಬಹುದು. ಆದರೆ,

> **ಪಿತುಶ್ಚಿದೂಧರ್ಜನುಷಾ ವಿವೇದ ವ್ಯಸ್ಯ ಧಾರಾ ಅಸೃಜದ್ವಿ ಧೇನಾಃ ।**
> **ಗುಹಾ ಚರಂತಂ ಸಖಿಭಿಃ ಶಿವೇಭಿರ್ದಿವೋ ಯಹ್ವೀಭಿರ್ನ ಗುಹಾ ಬಭೂವ ।**
> (ಋ. ಸಂ. ೩-೧-೯)

ಎಂಬ ಋಕ್ಕಿನಲ್ಲಿ **ಊಧಃ** ಎನ್ನುವುದಕ್ಕೆ ಅಂತರಿಕ್ಷವೆಂದೂ, **ಧಾರಾ** ಎಂಬ ಪದಕ್ಕೆ ವೃಷ್ಟಿಧಾರೆಯೆಂದೂ. **ಧೇನಾಃ** ಎನ್ನುವುದಕ್ಕೆ ಗುಡುಗಿನ ಗರ್ಜನಶಬ್ದವೆಂದೂ ಹೇಳಿರುವುದು ಸಮಂಜಸವಾಗಿರುತ್ತದೆ. ಈ ಕೆಲವು ಉದಾಹರಣೆಗಳನ್ನು ಬಿಟ್ಟರೆ ಉಳಿದ ಎಂದರೆ,

> **ವಿಶಂವಿಶಂ ಮಘವಾ ಪರ್ಯಶಾಯತ ಜನಾನಾಂ ಧೇನಾ ಅವಚಾಕಶದ್ವೃಷಾ ।**
> **ಯಸ್ಯಾಹ ಶಕ್ರಃ ಸವನೇಷು ರಣ್ಯತಿ ಸ ತೀವ್ರೈಃ ಸೋಮೈಃ ಸಹತೇ ಪೃತನ್ಯತಃ ।**
> (ಋ. ಸಂ. ೧೦-೪೩-೬)

> **ವಿರೇಣ್ಯಃ ಕ್ರತುರಿಂದ್ರಃ ಸುಶಸ್ತಿರುತಾಪಿ ಧೇನಾ ಪುರುಹೂತಮೀಟ್ಟೇ ।**
> **ಆರ್ದಯದ್ವೃತ್ರಮಕೃಣೋದು ಲೋಕಂ ಸಸಾಹೇ ಶಕ್ರಃ ಪೃತನಾ ಅಭಿಷ್ಟಿಃ ॥**
> (ಋ. ಸಂ. ೧೦-೧೦೪-೧೦)

ಇತ್ಯಾದಿ ಋಕ್ಕುಗಳಲ್ಲೆಲ್ಲಾ ಪ್ರೀಣಯಿತ್ರೀ **ಸ್ತುತಿವಾಕ್** ಎಂದೇ ಸಾಯಣರು ಅರ್ಥಮಾಡಿದ್ದಾರೆ. ಇದರಂತೆಯೇ ಮೇಲೆ ಉದಹರಿಸಿರುವ ೧-೧೦೧-೧೦ ನೇ ಋಕ್ಕಿನ **ಧೇನೇ** ಎಂಬ ಪದಕ್ಕೂ ಮತ್ತು

> **ಸ್ತ್ರಿಯೋ ಹಿ ದಾಸ ಆಯುಧಾನಿ ಚಕ್ರೇ ಕಿಂ ಮಾ ಕರನ್ನಬಲಾ ಅಸ್ಯ ಸೇನಾಃ ।**
> **ಅಂತರ್ಹ್ಯಖ್ಯದುಭೇ ಅಸ್ಯ ಧೇನೇ ಅಥೋಪ ಪ್ರೈದ್ಯುಧಯೇ ದಸ್ಯುಮಿಂದ್ರಃ ॥**
> (ಋ ಸಂ. ೫-೩೦-೯)

ಎಂಬ ಋಕ್ಕಿನಲ್ಲಿರುವ **ಪದಕ್ಕೂ** ಸಹ ಅಲ್ಲಿ ಎರಡು ಕಡೆಗಳಲ್ಲಿಯೂ ದ್ವಿವಚನವಿರುವುದರಿಂದ ಸ್ತುತಿ ಮತ್ತು ಹವಿಸ್ಸು ಎಂಬರ್ಥವನ್ನು ಮಾಡಬಹುದು. ಸಾಯಣರು ೫-೩೦-೯ ನೇ ಋಕ್ಕಿನಲ್ಲಿ **ಅಸ್ಯ (ಅಸುರಸ್ಯ) ಧೇನೇ ಉಭೇ ಅಂತಃ ಅಖ್ಯದ್ದಿ** । ಅಸುರನ ಇಬ್ಬರು ಸ್ತ್ರೀಯರೂ ಗೃಹಮಧ್ಯದಲ್ಲಿ ನಿಂತರು. ಆಗ ಇಂದ್ರನು **ನಮುಚಿಯ** ಮೇಲೆ ಸಾಕ್ಷಾತ್ತಾಗಿ ಯುದ್ಧಮಾಡಿದನು ಎಂದು **ಧೇನಾ** ಎಂಬ ಪದಕ್ಕೆ ಸ್ತ್ರೀ ಎನ್ನುವ ಬದಲು ಯಾವಾಗ ನಮುಚಿಯು ಸ್ತ್ರೀರೂಪವಾದ ಸೇನೆಯನ್ನು ಸಿದ್ಧಪಡಿಸಿದನೋ ಆಗ ಸ್ತುತಿಯೂ ಹವಿಸ್ಸೂ ಇಂದ್ರನ ಅಂತರ್ಹೃದಯವನ್ನು ಪ್ರವೇಶಿಸಿ ಅವನನ್ನು ಯುದ್ಧಕ್ಕೆ ಹುರಿದುಂಬಿಸಿದವು ಎಂದರೆ ಹೆಚ್ಚು ಹೊಂದಿಕೊಳ್ಳುವುದು.

ಇದರಂತೆಯೇ ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಋತಸ್ಯ **ಧೇನಾ ಸಸ್ರುವಃ** ಎನ್ನುವುದಕ್ಕೆ ಸಾಯಣರ ಮೊದಲನೆಯ ಅರ್ಥಕ್ಕಿಂತ ಯಜ್ಞಸಂಬಂಧಿಗಳಾದವೂ, ಹೋತ್ರಾದಿಮುಖದಿಂದ ಪ್ರವಹಿಸಿದವೂ ಆದ ಸ್ತುತಿರೂಪ

ಗಳಾದ ವಾಕ್ಯಗಳೆಂದರೆ—ಎಂದರೆ ಸಾಯಣರ ಎರಡನೆಯ ಅರ್ಥವು ವಿಶದವಾಗಿಯೂ ಸರಿಯಾಗಿಯೂ ಇರುವಂತೆ ಕಾಣುತ್ತದೆ.

**ಇತ್ಥಾ**—ಬಟ್, ಇತ್ಥಾ ಇತ್ಯುಭೇ ಅಪಿ ಸತ್ಯನಾಮನೀ । (ನಿ. ೩-೧೦) ಬಟ್, ಇತ್ಥಾ ಎರಡೂ ಸತ್ಯನಾಮಗಳಲ್ಲಿ ಸೇರಿವೆ. ಖಂಡಿತವಾಗಿಯೂ ಎಂದರ್ಥ.

॥ ವ್ಯಾಕರಣಪ್ರಕ್ರಿಯಾ ॥

**ಇತ್ಥಾ**—ಇದಮ್ ಶಬ್ದ. ಪ್ರಕಾರಾರ್ಥದಲ್ಲಿ **ಇದಮಸ್ಥಮುಃ** ಎಂಬುದರಿಂದ ಥಮು ಪ್ರತ್ಯಯ. ವ್ಯತ್ಯಯದಿಂದ ವಿಭಕ್ತಿಗೆ ಡಾದೇಶ.

**ಧಾಯಿ**—ಡು ಧಾಞ್ ಧಾರಣಪೋಷಣಯೋಃ ಧಾತು. **ಛಂದಸಿ ಲುಙ್‌ಲಙ್‌ಲಿಟಃ** (ಪಾ.ಸೂ. ೩-೪-೬) ಎಂಬುದರಿಂದ ವರ್ತಮಾನಾರ್ಥದಲ್ಲಿ ಕರ್ಮಣಿಯಲ್ಲಿ ಲುಙ್. ಲಟ್ ಪ್ರಥಮಪುರುಷ ಏಕವಚನದಲ್ಲಿ ತ ಪ್ರತ್ಯಯ. **ಚಿಣ್‌ಭಾವಕರ್ಮಣೋಃ** (ಪಾ. ಸೂ. ೩-೧-೬೬) ಎಂಬುದರಿಂದ ಚ್ಲಿಗೆ ಚಿಣಾದೇಶ. **ಚಿಣೋಲುಕ್** (ಪಾ. ಸೂ ೬-೪-೧೦೪) ಎಂಬುದರಿಂದ ತಶಬ್ದಕ್ಕೆ ಲುಕ್. **ಆತೋ ಯುಕ್ ಚಿಣ್‌ಕೃತೋಃ** (ಪಾ. ಸೂ. ೭-೩-೩೩) ಎಂಬುದರಿಂದ ಧಾತುವಿಗೆ ಯುಕಾಗಮ. **ಬಹುಲಂ ಛಂದಸ್ಯಮಾಙ್‌ಯೋಗೇಽಪಿ** ಎಂಬುದರಿಂದ ಅಡಾಗಮ ಬರುವುದಿಲ್ಲ. ತಿಙಂತನಿಘಾತಸ್ವರ ಬರುತ್ತದೆ.

**ದರ್ಶತಮ್**—ದೃಶಿರ್ ಪ್ರೇಕ್ಷಣೇ ಧಾತು. **ಭೃಮೃದೃಶಿ**—(ಉ. ಸೂ. ೩-೩೯೦) ಎಂಬುದರಿಂದ ಕರ್ಮಣಿಯಲ್ಲಿ ಅತಚ್ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿನ ಇಕಿಗೆ ಗುಣ. **ಉರಣ್ರಪರಃ** ಎಂಬುದರಿಂದ ರಪರವಾಗಿ ಬರುತ್ತದೆ. ಪ್ರತ್ಯಯ ಚಿತ್ತಾದುದರಿಂದ **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಸಹಸಃ**—ಷಹ ಮರ್ಷಣೇ. ಧಾತು. ಔಣಾದಿಕವಾದ ಅಸುನ್ ಪ್ರತ್ಯಯ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಜನಿ**—ಜನೀ ಪ್ರಾದುರ್ಭಾವೇ. ಧಾತು. ಹಿಂದಿನಂತೆಯೇ ಛಾಂದಸವಾಗಿ ಲುಙ್. ಪ್ರಥಮಪುರುಷ ಏಕವಚನಾಂತರೂಪ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ.

**ಹ್ವರತೇ**—ಹ್ವೃ ಕೌಟಿಲ್ಯೇ ಧಾತು. ಲಟ್ ಪ್ರಥಮಪುರುಷ ಏಕವಚನದಲ್ಲಿ ತ ಪ್ರತ್ಯಯ. ಟಿಗೆ ಏತ್ವ. ಶಪ್ ವಿಕರಣ. ಅದನ್ನು ನಿಮಿತ್ತೀಕರಿಸಿ ಧಾತುವಿನ ಇಕಿಗೆ ಗುಣ. ರಪರವಾಗಿ ಬರುತ್ತದೆ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅದುಪದೇಶದ ಪರದಲ್ಲಿ ಲಸಾರ್ವಧಾತುಕ ಬಂದುದರಿಂದ **ತಾಸ್ಯನುದಾತ್ತೇತ್**.—(ಪಾ. ಸೂ. ೬-೧-೧೮೬) ಎಂಬುದರಿಂದ ಅದು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಸಾಧತೇ**—ಸಾಧ ಸಂಸಿದ್ಧೌ. ಧಾತು. **ಹೇತುಮತಿ ಚ** ಎಂಬುದರಿಂದ ಣಿಚ್. ಲಟ್ ಪ್ರಥಮಪುರುಷ ಏಕವಚನದಲ್ಲಿ ತಪ್ರತ್ಯಯ. ಟಿಗೆ ಏತ್ವ. ಶಪಿಗೆ **ಛಂದಸ್ಯುಭಯಥಾ** (ಪಾ. ಸೂ. ೩-೪-೧೧೭) ಎಂಬುದರಿಂದ ಆರ್ಧಧಾತುಕಸಂಜ್ಞೆ ಇರುವುದರಿಂದ **ಣೇರನಿಟಿ** (ಪಾ. ಸೂ. ೬-೪-೫೧) ಎಂಬುದರಿಂದ ಣಿಚಿಗೆ ಲೋಪ. ತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಧಾತುಸ್ವರ ಉಳಿಯುತ್ತದೆ.

**ಅನಯಂತ**—ಣೀಞ್ ಪ್ರಾಪಣೇ. ಧಾತು. **ಛಂದಸಿ ಲುಙ್ಲಙ್ಲಿಟಃ** ಎಂಬುದರಿಂದ ವರ್ತಮಾನಾರ್ಥ ದಲ್ಲಿ ಲಙ್. **ವ್ಯತ್ಯಯೋ ಬಹುಲಮ್** ಎಂಬುದರಿಂದ ಆತ್ಮನೇಪದ ಪ್ರತ್ಯಯ ಬರುತ್ತದೆ. ಪ್ರಥಮಪುರುಷ ಬಹುವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಸಸ್ರುತಃ**—ಸಮಾನಂ ಸ್ರವಂತಿ ಇತಿ ಸಸ್ರುತಃ. ಸ್ರು ಗತೌ ಧಾತು. **ಕ್ವಿಪ್ ಚ** (ಪಾ. ಸೂ. ೩-೨-೭೬) ಎಂಬುದರಿಂದ ಕರ್ತರಿಯಲ್ಲಿ ಕ್ವಿಪ್ ಪ್ರತ್ಯಯ. **ಹ್ರಸ್ವಸ್ಯ ಪಿತಿ ಕೃತಿ ತುಕ್** (ಪಾ. ಸೂ. ೬-೧-೭೧) ಎಂಬುದರಿಂದ ತುಕಾಗಮ. ಸಮಾನಕ್ಕೆ ಸಭಾವ. **ಗತಿಕಾರಕೋಪಪದಾತ್ಕೃತ್** ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ಪ್ರಥಮಾ ಬಹುವಚನಾಂತರೂಪ ॥ ೧ ॥



ಸಂಹಿತಾಪಾಠಃ

**ಪೃಕ್ಷೋ ವಪುಃ ಪಿತುಮಾನ್ನಿತ್ಯ ಆ ಶಯೇ ದ್ವಿತೀಯಮಾ ಸಪ್ತಶಿವಾಸು ಮಾತೃಷು ।**

**ತೃತೀಯಮಸ್ಯ ವೃಷಭಸ್ಯ ದೋಹಸೇ ದಶಪ್ರಮತಿಂ ಜನಯಂತ ಯೋಷಣಃ ॥ ೨ ॥**

ಪದಪಾಠಃ

ಪೃಕ್ಷಃ । ವಪುಃ । ಪಿತುಽಮಾನ್ । ನಿತ್ಯಃ । ಆ । ಶಯೇ । ದ್ವಿತೀಯಂ । ಆ । ಸಪ್ತಽಶಿವಾಸು । ಮಾತೃಷು ।

ತೃತೀಯಂ । ಅಸ್ಯ । ವೃಷಭಸ್ಯ । ದೋಹಸೇ । ದಶಽಪ್ರಮತಿಂ । ಜನಯಂತ । ಯೋಷಣಃ ॥ ೨ ॥

॥ ಸಾಯಣಭಾಷ್ಯಂ ॥

ಅಯಮಗ್ನಿಃ ಪೃಕ್ಷೋಽನ್ನಸಾಧಕಃ ಪಾಕಾದಿನಾ ವಪುರ್ವಪುಷ್ಮಾಞ್ಛರೀರಾಭಿವೃದ್ಧಿಹೇತುಃ ಪಿತುಮಾನ್ ಹವಿರ್ಲಕ್ಷಣಾನ್ನಯುಕ್ತೋ ನಿತ್ಯಃ ಶಾಶ್ವತಃ । ಈದೃಶಃ ಸನ್ ಪ್ರಥಮಂ ಪೃಥಿವೀಸ್ಥಾನಃ ಸನ್ನಾ ಶಯೇ । ಆಶೇತೇ । ದಾಹಪಾಕಾದಿ ಲೌಕಿಕಂ ಕರ್ಮ, ಯಜ್ಞಾದಿ ವೈದಿಕಂ ಕರ್ಮ, ಚ ನಿರ್ವರ್ತಯನ್ನುರೂಪೋ ಭೂಮೌ ವರ್ತತ ಇತ್ಯರ್ಥಃ । ತಥಾ ಸಪ್ತಶಿವಾಸು ಮಾತೃಷು ಸಪ್ತಲೋಕಶಿವಕರೀಷು ಮಾತೃಸ್ಥಾನೀಯಾಸು ಹಿತಕರೀಷು ವೃಷ್ಟಿಷು ದ್ವಿತೀಯಮಾಶೇತೇ । ಮಧ್ಯಮಸ್ಥಾನೋ ವಿದ್ಯುದ್ರೂಪೋ ವಾ ವರ್ತತೇ । ಅಸ್ಯ ವೃಷಭಸ್ಯ ವರ್ಷಿತುರಸ್ಯೈವ ವೈದ್ಯುತಾಗ್ನೇಃ ಸಹಾಯತ್ವೇನ ಸಂಬಂಧಿನೇ ದೋಹಸೇ ದೋಗ್ಧ್ರೇ ಆದಿತ್ಯಸ್ಥೋದಕಸ್ಯ ವರ್ಷಯಿತ್ರೇ ಆದಿತ್ಯರಶ್ಮಯೇ ॥ ದುಹೇಃ ಕರ್ತರ್ಯಸುಪ್ರತ್ಯಯಃ ॥ ತತ್ಪ್ರವೃತ್ತಯೇ ತೃತೀಯಮಾಶೇತೇ । ದ್ಯುಸ್ಥಾನೋ ವರ್ತತೇ । ಯದ್ವಾ । ಅಸ್ಯ ವೃಷಭಸ್ಯ

ವರ್ಷಿತುಃ ಪ್ರಸಿದ್ಧಸ್ಯಾದಿತ್ಯಸ್ಯ ಸಂಬಂಧಿನೀ ದೋಗ್ಧ್ರೀ ರಶ್ಮಯೇ ತತ್ಪ್ರವೃತ್ತ್ಯರ್ಥಂ । ಆದಿತ್ಯ-ರಶ್ಮಯೋ ಘರ್ಮಕಾಲೇ ಭೂಮಿಷ್ಠಮುದಕಮಾತ್ಮಸ್ಯ ಸೂರ್ಯಂ ಪ್ರಾಪಯ್ಯ ತತ್ರ ಚಿರಕಾಲಂ ಧೃತ್ವಾ ಪುನರಂತರಿಕ್ಷಂ ಪ್ರಾಪ್ಯ ಮೇಘೇಷು ಸ್ಥಿತ್ವಾ ವರ್ಷಕಾಲೇ ಪ್ರವರ್ಷಂತೀತಿ ಪ್ರಸಿದ್ಧಂ । ಅತೋ ರಶ್ಮೇರ್ದೋಗ್ಧೃತ್ವಂ । ಈದೃಶಂ ತ್ರಿಸ್ಥಾನಮಗ್ನಿಂ ಮಹಾಭಾಗಂ ಯೋಷಣೋ ಮಿಶ್ರಣಶೀಲಾಃ ಸರ್ವಾ ದಿಶೋ ಜನಯಂತ । ಉತ್ಪಾದಯಂತಿ । ಸರ್ವಾಸು ದಿಕ್ಷು ಪ್ರಸೃತ ಇತ್ಯರ್ಥಃ । ಕೀದೃಶಂ ತಂ । ದಶಪ್ರಮತಿಂ । ದಶಸು ದಿಕ್ಷು ಪ್ರಕೃಷ್ಟಮನನವಂತಂ ಪೂಜ್ಯತ್ವಾಯ । ಯದ್ವಾ । ಮಥನಕಾಲೇ ದಶಭಿರಂಗುಲೀಭಿರುತ್ಪನ್ನಂ ಲೋಕತ್ರಯೇ ದಶದಿಕ್ಷು ಚ ವ್ಯಾಪ್ತಮಿತ್ಯರ್ಥಃ ॥

ಪ್ರತಿಪದಾರ್ಥ

(**ಅಯಂ ಅಗ್ನಿಃ**—ಈ ಅಗ್ನಿಯು) । **ಪೃಕ್ಷಃ**— ಪಾಕಾದಿಗಳಿಂದ ಅನ್ನಪ್ರೋಷಕನಾಗಿಯೂ ( ಜೀರ್ಣ ಕಾರಕನಾಗಿಯೂ) । **ವಪುಃ**—ಶರೀರಾಭಿವೃದ್ಧಿ ಕಾರಕನಾಗಿಯೂ । **ಪಿತುಮಾನ್**—ಹವಿಸ್ಸಿನರೂಪದ ಅನ್ನವುಳ್ಳವ ನಾಗಿಯೂ । **ನಿತ್ಯಃ**—ಶಾಶ್ವತನಾಗಿಯೂ ಇದ್ದುಕೊಂಡು । **ಆ ಶಯೇ**—(ಮೊದಲನೆಯದಾಗಿ ಅಗ್ನಿಯ ರೂಪದಲ್ಲಿ ಪೃಥ್ವಿಯಮೇಲೆ) ಹರಡಿ ಮಲಗಿರುತ್ತಾನೆ । **ದ್ವಿತೀಯಂ**—ಎರಡನೆಯದಾಗಿ (ಎರಡನೇ ರೂಪದಲ್ಲಿ) । **ಸಪ್ತ ಶಿವಾಸು**—ಏಳು ಲೋಕಗಳಿಗೂ ಮಂಗಳಕಾರಕಗಳೂ । **ಮಾತೃಷು**—ಮಾತೃಸ್ಥಾನದಲ್ಲಿರುವುವೂ ಆದ ವೃಷ್ಟಿ ಪ್ರಾಂತಗಳಲ್ಲಿ । **ಆ (ಶಯೇ)**—(ವಿದ್ಯುದ್ರೂಪದಲ್ಲಿ) ಹರಡಿರುತ್ತಾನೆ । **ತೃತೀಯಂ**—ಮೂರನೆಯದಾಗಿ (ಇನ್ನೊಂದು ರೂಪದಲ್ಲಿ) । **ಅಸ್ಯ ವೃಷಭಸ್ಯ**—ವೃಷ್ಟಿಕಾರಕನಾದ ಆದಿತ್ಯನಿಗೆ ಸೇರಿದವೂ । **ದೋಹಸೇ**—ಮಳೆಯನ್ನು ಸುರಿಸುವುವೂ ಆದ (ಆದಿತ್ಯನ) ಕಿರಣಗಳ ಪ್ರವೃತ್ತಿಗಾಗಿ (ದ್ಯುಲೋಕದಲ್ಲಿ ಹರಡಿರುತ್ತಾನೆ) । **ದಶಪ್ರಮತಿಂ**—ಹತ್ತು ದಿಕ್ಕುಗಳನ್ನೂ ಬೆಳಗಿ ಪೂಜ್ಯನೂ ಹರ್ಷದಾಯಕನಾಗಿಯೂ ಇರುವ ಅಥವಾ ಹತ್ತು ಬೆರಳುಗಳ ಸಹಾಯದಿಂದ ಉತ್ಪನ್ನನಾಗಿ ಹತ್ತು ದಿಕ್ಕುಗಳಿಗೂ ಹರಡಿರುವವನೂ ಆಗಿರುವ ಈ ಅಗ್ನಿಯನ್ನು । **ಯೋಷಣಃ**—ಸಂಯುಕ್ತವಾಗಿರುವ ಸಕಲ ದಿಗ್ಭಾಗಗಳೂ । **ಜನಯಂತ**—ವಿಕಾಸಗೊಳಿಸುತ್ತವೆ.

ಭಾವಾರ್ಥ

ಅನ್ನಪ್ರೋಷಕನಾಗಿಯೂ (ಜೀರ್ಣಕಾರಕನಾಗಿಯೂ) ಶರೀರಾಭಿವೃದ್ಧಿಕಾರಕನಾಗಿಯೂ ಹವಿಸ್ಸಿನ ರೂಪದ ಅನ್ನವುಳ್ಳವನಾಗಿಯೂ ಶಾಶ್ವತನಾಗಿಯೂ ಇರುವ ಅಗ್ನಿಯು ಮೊದಲನೆಯದಾಗಿ, ಪಾಕಾದಿಲೌಕಿಕಕರ್ಮಗಳನ್ನೂ ಯಜ್ಞಾದಿವೈದಿಕಕರ್ಮಗಳನ್ನೂ ನೆರವೇರಿಸಿಕೊಂಡು ಭೂಮಿಯ ಮೇಲೆ ಶಾಶ್ವತವಾಗಿ ಹರಡಿರುತ್ತಾನೆ. ಎರಡನೆಯದಾಗಿ ಏಳು ಲೋಕಗಳಿಗೂ ಮಂಗಳಕಾರಕಗಳೂ ಮಾತೃಸ್ಥಾನದಲ್ಲಿರುವುವೂ ಆದ ವೃಷ್ಟಿಪ್ರಾಂತಗಳಲ್ಲಿ ವಿದ್ಯುದ್ರೂಪದಿಂದ ಹರಡಿರುತ್ತಾನೆ. ಮೂರನೆಯದಾಗಿ, ವೃಷ್ಟಿಕಾರಕನಾದ ಆದಿತ್ಯನಿಗೆ ಸೇರಿದವೂ ಮಳೆಯನ್ನು ಸುರಿಸುವುವೂ ಆದ ಆದಿತ್ಯನ ಕಿರಣಗಳ ಪ್ರವೃತ್ತಿಗಾಗಿ ದ್ಯುಲೋಕದಲ್ಲಿ ಹರಡಿರುತ್ತಾನೆ. ಹತ್ತು ದಿಕ್ಕುಗಳನ್ನೂ ಬೆಳಗುವುದರಿಂದ ಪೂಜ್ಯನೂ ಹರ್ಷದಾಯಕನೂ ಆದ ಈ ಅಗ್ನಿಯನ್ನು ಸಕಲ ದಿಗ್ಭಾಗಗಳೂ ಸಂಯುಕ್ತವಾಗಿ ವಿಕಾಸಗೊಳಿಸುತ್ತವೆ.

## English Translation

First, he reposes (on the earth) as the digestive (faculty), the embodied, the accepter of food, the eternal: secondly, (he dwells) among the seven

auspicious mothers (of fertility): thirdly, the associated (regions) generate him, delighting in the ten (quarters) of space, for the sake of milking this showerer (of rain).

‖ ವಿಶೇಷವಿಷಯಗಳು ‖

ಈ ಋಕ್ಕಿನಲ್ಲಿ ಅಗ್ನಿಯ ಮೂರು ವಿಧವಾದ ಆವಿರ್ಭಾವಗಳು ವರ್ಣಿತವಾಗಿವೆ. ದ್ಯುಲೋಕದಲ್ಲಿ ಆದಿತ್ಯ ರೂಪದಲ್ಲಿಯೂ, ಅಂತರಿಕ್ಷದಲ್ಲಿ ವೈದ್ಯುತಾಗ್ನಿರೂಪದಲ್ಲಿಯೂ ಮತ್ತು ಪೃಥ್ವಿಯ ಮೇಲೆ ಅಗ್ನಿರೂಪದಲ್ಲಿಯೂ ಇರುವ ಅಗ್ನಿದೇವತೆಯನ್ನು ಸಕಲ ಋಷಿಗಳೂ ವಂದಿಸುತ್ತಾರೆಂದು ನಿರುಕ್ತಕಾರರು ಹೇಳಿ, ಅನಂತರ ಈ ಮೂರು ಸ್ಥಾನ ಗಳಲ್ಲಿರುವ ಮೂರು ಸ್ವರೂಪಗಳನ್ನೂ ಸಂಹಿತಾವಾಕ್ಯಗಳ ಉದಾಹರಣೆಗಳಿಂದ ವಿಶದವಾಗಿ ವಿವರಿಸಿದ್ದಾರೆ. ಈ ಋಕ್ಕಿನಲ್ಲಿರುವ ಕ್ರಮದಂತೆ ನಿರುಕ್ತವಾಕ್ಯವನ್ನುದಹರಿಸುವುದಾದರೆ ಮೊದಲು,

**ಸ್ತೋಮೇನ ಹಿ ಯಂ ದಿವಿ ದೇವಾ ಅಗ್ನಿಮಜನಯಞ್ಛಕ್ತಿಭಿಃ ಕರ್ಮಭಿರ್ದ್ಯಾವಾಪೃಥಿವ್ಯೋಃ ಪೂರಣಂ ತಮಕುರ್ವಂಸ್ತ್ರೇಧಾಭಾವಾಯ ಪೃಥಿವ್ಯಾಮಂತರಿಕ್ಷೇ ದಿವೀತಿ ಶಾಕಪೂಣಿಃ ।**

(ನಿ. ೭-೨೮)

ಎಂಬ ವಾಕ್ಯದಿಂದ ನಿರುಕ್ತಕಾರರು ಶಾಕಪೂಣಿಯ ವಿವರಣೆಯನ್ನನುಸರಿಸಿ ಪೃಥಿವೀ, ಅಂತರಿಕ್ಷ ಮತ್ತು ದ್ಯುಲೋಕ ಗಳೆಂಬ ಪ್ರಭೇದಗಳುಳ್ಳ ಮೂರು ಸ್ಥಾನಗಳಲ್ಲೂ **ಅಗ್ನಿಃ, ಜಾತವೇದಾಃ, ವೈಶ್ವಾನರಃ** ಎಂಬ ಮೂರು ರೂಪಗಳಲ್ಲಿ ಅಗ್ನಿಯು ಆವಿರ್ಭವಿಸುವನೆಂದು ನಿರ್ದೇಶಿಸಿದ್ದಾರೆ. ಈ ಕ್ರಮವನ್ನು ಋಕ್ಸಂಹಿತೆಯ **ಮೂರ್ಧಾ ಭುವೋ ಭವತಿ ನಕ್ತಮಗ್ನಿಃ ।** (ಋ. ಸಂ. ೧೦-೮೮-೬) ಇತ್ಯಾದಿ ಋಕ್ಕುಗಳ ಆಧಾರದ ಮೇಲೆ ನಿರುಕ್ತದಲ್ಲಿ (ನಿ. ೭-೧೪ ರಿಂದ ೭-೨೮) ತಿಳಿಸಿದೆ. ಇದೇ ವಿಭಾಗವನ್ನು,

**ಅಗ್ನಯೇ ಪವಮಾನಾಯ ಪುರೋಡಾಶಮಷ್ಟಾಕಪಾಲಂ ನಿರ್ವಪೇದಗ್ನಯೇ ಪಾವಕಾ. ಯಾಗ್ನಯೇ ಶುಚಯೇ ।**

(ತೈ. ಸಂ. ೨-೨-೪)

ಎಂಬ ತೈತ್ತಿರೀಯ ಸಂಹಿತಾವಾಕ್ಯಗಳಲ್ಲಿ **ಪವಮಾನ, ಶುಚಿ** ಮತ್ತು **ಪಾವಕ** ಎಂಬ ಕ್ರಮದಲ್ಲಿ ಹೇಳಿದೆ.

ಅಗ್ನಿಯ ಈ ಮೂರುವಿಧವಾದ ಅಸ್ತಿತ್ವವೂ, ಅವಕ್ಕೆ ಅನುಗುಣವಾದ ಮೂರು ವಿಧವಾದ ಆವಿರ್ಭಾವವೂ ಜಗತ್ತಿನ ಮೂಲತತ್ತ್ವವನ್ನೇ ಪ್ರತಿಬಿಂಬಿಸುತ್ತವೆ ಎಂಬುದು ಬೃಹದ್ದೇವತೆಯ ವರ್ಣನೆಯಿಂದ ತಿಳಿಯುತ್ತದೆ.

**ಭವದ್ಭೂತಸ್ಯ ಭವ್ಯಸ್ಯ ಜಂಗಮಸ್ಥಾವರಸ್ಯ ಚ ।**
**ಅಸ್ಯೈಕೇ ಸೂರ್ಯಮೇವೈಕಂ ಪ್ರಭವಂ ಪ್ರಲಯಂ ವಿದುಃ ॥**
**ಏತದ್ಭೂತೇಷು ಲೋಕೇಷು.ಅಗ್ನಿಭೂತಂ ಸ್ಥಿತಂ ತ್ರಿಧಾ ।**
**ಋಷಯೋ ಗೀರ್ಭಿರರ್ಚಂತಿ ವ್ಯಂಜಿತಂ ನಾಮಭಿಸ್ತ್ರಿಭಿಃ ॥**

(ಬೃ. ದೇ. ೧-೬೧ ; ೧-೬೪)

ಎಂಬ ಶ್ಲೋಕಗಳಲ್ಲಿ ಬೃಹದ್ದೇವತಾಕಾರರು ಅಗ್ನಿಯ ಮಹತ್ತ್ವವನ್ನು ವರ್ಣಿಸುವ ಸಂದರ್ಭದಲ್ಲಿ ಸಕಲ ಭೂತ ಗಳಿಗೂ ಯೋನಿಯಾದ ಪ್ರಜಾಪತಿಯು ಭೂತಭವಿಷ್ಯದ್ವರ್ತಮಾನಗಳಲ್ಲಿರುವ ಸಕಲಚರಾಚರವಾದ ಭೂತಗಳಿಗೂ

ಸೃಷ್ಟಿಪ್ರಳಯಗಳ ಮೂಲವಾಗಿ ಅಗ್ನಿರೂಪದಿಂದ ಮೂರು ವಿಧವಾಗಿ ಮೂರು ಸ್ಥಾನಗಳಲ್ಲಿ ತನ್ನ ಅಸ್ತಿತ್ವವನ್ನು ಪಡೆದಿರುತ್ತಾನೆ. ಈ ಮೂರು ವಿಧವಾದ ಅಗ್ನಿಯ ಆವಿರ್ಭಾವವನ್ನೂ ಸಹ ಋಷಿಗಳು ಮೂರು ಹೆಸರುಗಳಿಂದ ಕೆಳಗೆ ಕಂಡಂತೆ ಹೇಳಿರುತ್ತಾರೆ ಎಂದು ಇದೇ ಅಗ್ನಿಯ ಪ್ರಶಂಸೆಯನ್ನು ಮುಂದುವರಿಸುತ್ತಾ,

**ತ್ರಿಸ್ಥಾನಂ ಚೈನಮರ್ಚಂತಿ ಹೋತ್ರಾಯಾಂ ವೃಕ್ತಬರ್ಹಿಷಃ ।**
**ಇಹೈವ ಪವಮಾನೋಽಗ್ನಿರ್ಮಧ್ಯಮೋಽಗ್ನಿರ್ವನಸ್ಪತಿಃ ॥**
**ಅಮುಷ್ಮಿನ್ನೇವ ವಿಪ್ರೈಸ್ತು ಲೋಕೇಽಗ್ನಿಶ್ಶುಚಿರುಚ್ಯತೇ ॥**
**ಇಹಾಗ್ನಿಭೂತಸ್ತ್ವೃಷಿಭಿರ್ಲೋಕೇ ಸ್ತುತಿಭಿರೀಳಿತಃ ॥**
**ಜಾತವೇದಾಃ ಸ್ತುತೋ ಮಧ್ಯೇ ಸ್ತುತೋ ವೈಶ್ವಾನರೋ ದಿವಿ ॥**
(ಬೃ. ದೇ. ೧-೬೫ ರಿಂದ ೬೭)

ಈ ಮೂರು ವಿಧಗಳಲ್ಲಿ ಪೃಥ್ವಿಯಲ್ಲಿ ಆವಿರ್ಭವಿಸುವ ಅಗ್ನಿಗೆ **ಪವಮಾನಾಗ್ನಿ**ಯೆಂದೂ, ಮಧ್ಯಮಲೋಕವರ್ತಿಯಾದ ಅಗ್ನಿಗೆ **ವನಸ್ಪತಿಯೆಂದೂ** ದ್ಯುಲೋಕಸ್ಥನಾದ ಅಗ್ನಿಗೆ **ಶುಚಿಯೆಂದೂ** ಪ್ರಸಿದ್ಧಿಯಿದೆ. ಈ ಪ್ರಭೇದವನ್ನೇ,

**ದಿವಸ್ಪರಿ ಪ್ರಥಮಂ ಜಜ್ಞೇ ಅಗ್ನಿರಸ್ಮದ್ದ್ವಿತೀಯಂ ಪರಿ ಜಾತವೇದಾಃ ।**
**ತೃತೀಯಮಪ್ಸು ನೃಮಣಾ ಅಜಸ್ರಮಿಂಧಾನ ಏನಂ ಜರತೇ ಸ್ವಾಧೀಃ ॥**
(ಋ. ಸಂ. ೧೦-೪೫-೧ ; ವಾ. ಸಂ. ೧೨-೧೮ ; ತೈ. ಸಂ. ೧-೩-೧೪-೫)

ಎಂಬ ವಾಕ್ಯದಿಂದ ಎಲ್ಲಾ ಸಂಹಿತೆಗಳಲ್ಲಿಯೂ ವಿವರಿಸಿದೆ.

**ಪೃಕ್ಷಃ**—ಪೃಕ್ಷಶಬ್ದವು ಅನ್ನನಾಮಗಳಲ್ಲಿ ಪಠಿತವಾಗಿದೆ (ನಿ. ೩-೯) ಇಲ್ಲಿ **ಅನ್ನಸಾಧಕಃ ಪಾಕಾದಿನಾ**—ಪಾಕಾದಿಗಳಿಂದ ಅನ್ನಪೋಷಕನಾಗಿರತಕ್ಕವನೆಂದೂ,

**ಪಿತುಮಾನ್**—ಎಂಬುದಕ್ಕೆ **ಹವಿರ್ಲಕ್ಷಣಾನ್ನಯುಕ್ತಃ ।** ಹವಿಸ್ಸಿನ ರೂಪದ ಅನ್ನದಿಂದ ಕೂಡಿದವನೆಂದೂ ತಾತ್ಪರ್ಯ.

**ಸಪ್ತಶಿವಾಸು ಮಾತೃಷು - ಸಪ್ತಲೋಕಶಿವಕರೀಷು ಮಾತೃಸ್ಥಾನೀಯಾಸು ಹಿತಕರೀಷು ವೃಷ್ಟಿಷು ।** ಸಪ್ತಲೋಕಗಳಿಗೂ ಹಿತವನ್ನುಂಟುಮಾಡುವ ವೃಷ್ಟಿಗಳಲ್ಲಿ ಎಂದರೆ ವೃಷ್ಟ್ಯುತ್ಪತ್ತಿಸ್ಥಾನವಾದ ಅಂತರಿಕ್ಷದಲ್ಲಿ; **ಮಧ್ಯಮಸ್ಥಾನೋ ವಿದ್ಯುದ್ರೂಪೋ ವಾ ವರ್ತತೇ ।** ವಿದ್ಯುದ್ರೂಪದಲ್ಲಿರುತ್ತಾನೆಂದರ್ಥ.

**ದಶಪ್ರಮತಿಂ—ದಶಸು ದಿಕ್ಷು ಪ್ರಕೃಷ್ಟಮನನವಂತಂ ಪೂಜ್ಯತ್ವಾಯ ।** ಹತ್ತು ದಿಕ್ಕುಗಳಲ್ಲಿಯೂ ಪೂಜ್ಯನಾಗಿಯೂ, ಧ್ಯಾನವಿಷಯನಾಗಿಯೂ ಇರುವವನನ್ನು ಎಂದು ಒಂದರ್ಥವೂ ಅಥವಾ **ಮಂಥನಕಾಲೇ ದಶಭಿರಂಗುಲೀಭಿರುತ್ಪನ್ನಂ ಲೋಕತ್ರಯೇ ದಶದಿಕ್ಷು ಚ ವ್ಯಾಪ್ತಂ ।** ಮಥನಕಾಲದಲ್ಲಿ ಹತ್ತು ಬೆರಳುಗಳ ಸಹಾಯದಿಂದ ಉತ್ಪನ್ನನಾಗಿ ಹತ್ತು ದಿಕ್ಕುಗಳಿಗೂ ಹರಡಿರುವವನನ್ನು ಎಂದು ಇನ್ನೊಂದರ್ಥವೂ ಸಾಧ್ಯವಾಗುತ್ತದೆ. ಈ ಎರಡು ವಿಧವಾದ ಅರ್ಥಗಳಿಗೂ ಶ್ರುತಿಪ್ರಮಾಣಗಳಿವೆ. ಅಗ್ನಿಯ ಮೂಲಸ್ಥಾನವು ಅಂತರಿಕ್ಷವಾಗಿದ್ದು, ಸೂಕ್ಷ್ಮರೂಪವಾದ ಅಗ್ನಿಯನ್ನು ಪೃಥಿವ್ಯಂತರಿಕ್ಷಗಳೆರಡೂ ಆವಿರ್ಭವಿಸುವಂತೆ ಮಾಡಿದವು ಎಂಬ ಅಗ್ನ್ಯುತ್ಪತ್ತಿಯ ವರ್ಣನೆಯು,

**ಯಂ ತ್ವಾ ದ್ಯಾವಾಪೃಥಿವೀ ಯಂ ತ್ವಾಪಸ್ತ್ವಷ್ಟಾ ಯಂ ತ್ವಾ ಸುಜನಿಮಾ ಜಜಾನ ।**
**ಪಂಥಾಮನು ಪ್ರವಿದ್ವಾನ್ಪಿತೃಯಾಣಂ ದ್ಯುಮದಗ್ನೇ ಸಮಿಧಾನೋ ವಿ ಭಾಹಿ ।**
(ಋ. ಸಂ. ೧೦-೨-೭)

ಇತ್ಯಾದಿ ಸಂದರ್ಭಗಳಲ್ಲಿ ಅಗ್ನಿಯ ಉತ್ಪತ್ತಿಗೆ ದಶದಿಕ್ಕುಗಳನ್ನೊಳಗೊಂಡ ದ್ಯಾವಾಪೃಥಿವಿಗಳು ಮೂಲವು ಎಂದು ವಿವರಿಸಿರುತ್ತೆ. ಅಲ್ಲದೆ,

**ದ್ವಿರ್ಯಂ ಪಂಚ ಜೀಜನನ್ತ್ಸಂವಸಾನಾಃ ಸ್ವಸಾರೋ ಅಗ್ನಿಂ ಮಾನುಷೀಷು ವಿಕ್ಷು ।**
**ಉಷರ್ಬುಧಮಥರ್ಯೋ೩ ನ ದಂತಂ ಶುಕ್ರಂ ಸ್ವಾಸಂ ಪರಶುಂ ನ ತಿಗ್ಮಂ ॥**
(ಋ. ಸಂ. ೪-೬-೮)

ಇತ್ಯಾದಿ ಋಕ್ಕುಗಳಲ್ಲಿ ಎರಡು ಕೈಗಳ ಹತ್ತು ಬೆರಳುಗಳೂ ಅಗ್ನಿಯನ್ನು ಸೃಷ್ಟಿಸಿದವು ಎಂದು ಪಾರ್ಥಿವವಾದ ಅಗ್ನ್ಯುತ್ಪತ್ತಿಯ ಕ್ರಮವನ್ನು ವಿವರಿಸಿದೆ. ಆದುದರಿಂದ ಈ ಸಂದರ್ಭದಲ್ಲಿ **ದಶ** ಎಂಬ ಪದಕ್ಕೆ ಪೃಥಿವ್ಯಂತರಿಕ್ಷಗಳನ್ನು ಆವರಿಸಿರುವ ದಶದಿಕ್ಕುಗಳೆಂದಾಗಲಿ, ಅಥವಾ ಮಥನಕಾರ್ಯದಲ್ಲಿ ಉದ್ಯುಕ್ತವಾಗುವ ಹತ್ತು ಬೆರಳುಗಳೆಂದಾಗಲಿ ಅರ್ಥವನ್ನು ಮಾಡಬಹುದು.

**ಯೋಷಣಃ**—**ಮಿಶ್ರಣಶೀಲಾಃ ಸರ್ವಾ ದಿಶಃ ।** ಸಂಯುಕ್ತವಾಗಿರುವ ಸಕಲ ದಿಗ್ಭಾಗಗಳು ಎಂದು ಒಂದರ್ಥವೂ ಅಥವಾ **ಏಕಸ್ಮಿನ್ ಪಾಣೌ ಸಂಹೃತ್ಯ ಅವಸ್ಥಿತಾಃ ।** ಒಂದೇ ಕೈಯಿನಲ್ಲಿ ಒಟ್ಟಿಗೆ ಸೇರಿಕೊಂಡು ಒಂದೇ ಸ್ಥಾನದಲ್ಲಿರುವ ಹತ್ತು ಬೆರಳುಗಳು ಎಂದು ಇನ್ನೊಂದರ್ಥವೂ ಆಗುತ್ತದೆ.

**ವೃಷಭಸ್ಯ ದೋಹಸೇ**—ವೃಷ್ಟಿಸೇಚನಸಾಮರ್ಥ್ಯವುಳ್ಳವನಾದುದರಿಂದ ವೈದ್ಯುತಾಗ್ನಿಗೆ **ವೃಷಭನೆಂಬ** ವಿಶೇಷಣವಿದೆ. ಈ ಶಬ್ದದ ವ್ಯುತ್ಪತ್ತಿಯನ್ನೂ ವಿಶೇಷಾರ್ಥವನ್ನೂ ಹಿಂದೆ ತಿಳಿಸಿದೆ. **ದೋಹಸೇ** ಎಂಬ ಪದದ ವಿವರಣೆಯನ್ನು ಸಾಯಣರು ಈರೀತಿ ತಿಳಿಸಿದ್ದಾರೆ. **ಆದಿತ್ಯರಶ್ಮಯಃ ಘರ್ಮಕಾಲೇ ಭೂಮಿಸ್ಥಮುದಕಮಾಕೃಷ್ಯ ಸೂರ್ಯಂ ಪ್ರಾಪಯ್ಯ ತತ್ರ ಚಿರಕಾಲಂ ಧೃತ್ವಾ ಪುನರಂತರಿಕ್ಷಂ ಪ್ರಾಪ್ಯ ಮೇಘೇಷು ಸ್ಥಿತ್ವಾ ವರ್ಷಕಾಲೇ ಪ್ರವರ್ಷಂತೀತಿ ಪ್ರಸಿದ್ಧಂ । ಅತೋ ರಶ್ಮೇರ್ದೋಗ್ಧೃತ್ವಂ ।** ಆದಿತ್ಯರಶ್ಮಿಗಳು ಬೇಸಿಗೆಯ ಕಾಲದಲ್ಲಿ ಭೂಮಿಸ್ಥವಾದ ಉದಕವನ್ನು ಆಕರ್ಷಿಸಿ ಸೂರ್ಯನಲ್ಲಿ ಸೇರಿಸಿ ಅಲ್ಲಿ ಕೆಲಕಾಲವಿರಿಸಿ ಅನಂತರ ಅಂತರಿಕ್ಷಸ್ಥವಾದ ಮೇಘಾಂತರ್ಗತವಾಗುವಂತೆ ಮಾಡಿ ಮಳೆಗಾಲದಲ್ಲಿ ವೃಷ್ಟಿಯನ್ನು ಸುರಿಸುತ್ತವೆಯಾದ್ದರಿಂದ **ದೋಹಸೇ** ಎಂಬ ಪದವು ಸೂರ್ಯರಶ್ಮಿಯ ದೋಗ್ಧೃತ್ವವನ್ನು ತಿಳಿಸುತ್ತದೆ.

॥ ವ್ಯಾಕರಣಪ್ರಕ್ರಿಯಾ ॥

**ಶಯೇ**—ಶೀಙ್ ಸ್ವಪ್ನೇ ಧಾತು ಲಟ್ ಪ್ರಥಮಪುರುಷ ಏಕವಚನದಲ್ಲಿ ತ ಪ್ರತ್ಯಯ. ಟಿಗೆ ಏತ್ವ. **ಲೋಪಸ್ತ ಆತ್ಮನೇಪದೇಷು** (ಪಾ. ಸೂ. ೭-೧-೪೧) ಎಂಬುದರಿಂದ ತಕಾರಕ್ಕೆ ಲೋಪ. **ಅದಿಪ್ರಭೃತಿಭ್ಯಃ ಶಪಃ** ಎಂಬುದರಿಂದ ಶಪಿಗೆ ಲುಕ್. **ಶೀಙಃ ಸಾರ್ವಧಾತುಕೇ ಗುಣಃ** (ಪಾ. ಸೂ. ೭-೪-೨೧) ಎಂಬುದರಿಂದ ಗುಣ. ಅಚ್ ಪರವಾದುದರಿಂದ ಅಯಾದೇಶ. ಅತಿಙಂತದ ಪರದಲ್ಲಿ ಬಂದುದರಿಂದ ನಿಘಾತಸ್ವರ ಬರುತ್ತದೆ.

**ಪೃಕ್ಷಃ**—ಪೃಚೀ ಸಂಪರ್ಕೇ ಧಾತು. ಅಸುನ್ ಪ್ರತ್ಯಯ ಸುಡಾಗಮ. **ಚೋಃ ಕುಃ** ಎಂಬುದರಿಂದ ಕುತ್ವ. ಸಕಾರಕ್ಕೆ ಷತ್ವ ವ್ಯತ್ಯಯದಿಂದ ಅಂತೋದಾತ್ತಸ್ವರ ಬರುತ್ತದೆ.

**ಪಿತುಮಾನ್**—ಪ್ರಸ್ವದ ಪದದಲ್ಲಿ ಮತುಪ್ ಪ್ರತ್ಯಯ ಬಂದುದರಿಂದ **ಹ್ರಸ್ವನುಡ್ಭ್ಯಾಂ ಮತುಪ್** (ಪಾ. ಸೂ. ೬-೧-೧೭೬) ಎಂಬುದರಿಂದ ಅದಕ್ಕೆ ಉದಾತ್ತಸ್ವರಬರುತ್ತದೆ.

**ನಿತ್ಯಃ**—**ತ್ಯಪ್ ನೇರ್ಧ್ರುವ ಇತಿ ವ್ಯಕ್ತವ್ಯಮ್** ಎಂಬುದರಿಂದ ನಿ ಎಂಬ ಅವ್ಯಯಕ್ಕೆ ತ್ಯಪ್ ಪ್ರತ್ಯಯ ಪಿತ್ತಾದುದರಿಂದ ಇದು ಅನುದಾತ್ತವಾಗುತ್ತದೆ

**ದ್ವಿತೀಯಮ್**—**ದ್ವೇಸ್ತೀಯಃ** (ಪಾ. ಸೂ ೫-೨-೫೪) ಎಂಬುದರಿಂದ ತೀಯ ಪ್ರತ್ಯಯ. ಪ್ರತ್ಯಯದ ಆದ್ಯುದಾತ್ತಸ್ವರದಿಂದ ಈಕಾರ ಉದಾತ್ತವಾಗುತ್ತದೆ.

**ತೃತೀಯಮ್**—**ತ್ರೇಸ್ಸಂಪ್ರಸಾರಣಂ ಚ** ಎಂಬುದರಿಂದ ತ್ರಿಶಬ್ದಕ್ಕೆ ತೀಯ ಪ್ರತ್ಯಯ ಬಂದಾಗ ಸಂಪ್ರಸಾರಣವು ವಿಶೇಷವಾಗಿ ಬರುತ್ತದೆ. **ಇಗ್ಯಣಃ ಸಂಪ್ರಸಾರಣಮ್** ಎಂಬುದರಿಂದ ರೇಫಕ್ಕೆ ಋಕಾರರೂಪ ಸಂಪ್ರಸಾರಣ. ಹಿಂದಿನಂತೆಯೇ ಸ್ವರ ಬರುತ್ತದೆ

**ದೋಹಸೇ**—ದುಹ ಪ್ರಪೂರಣೇ. ಧಾತು. **ಸರ್ವಧಾತುಭ್ಯ ಅಸುನ್** ಎಂಬುದರಿಂದ ಕರ್ತರಿಯಲ್ಲಿ ಅಸುನ್ ಪ್ರತ್ಯಯ. **ಪುಗಂತಲಘೂಪಧಸ್ಯ ಚ** ಸೂತ್ರದಿಂದ ಪ್ರತ್ಯಯನಿಮಿತ್ತವಾಗಿ ಗುಣ. ಚತುರ್ಥೀ ಏಕವಚನಾಂತರೂಪ.

**ಜನಯಂತ**—ಜನೀ ಪ್ರಾದುರ್ಭಾವೇ. ಧಾತು **ಹೇತುಮತಿಚ** (ಪಾ ಸೂ. ೩-೧-೨೬) ಎಂಬುದರಿಂದ ಪ್ರಯೋಜಕವ್ಯಾಪಾರತೋರುವಾಗ ಣಿಚ್. ಉಪಧಾವೃದ್ಧಿ ಬಂದಾಗ **ಜನೀಜ್ರ್ಯಾಷ್ಕ್ನಸುರಂಜೊ**—ಎಂಬುದರಿಂದ ಇದಕ್ಕೆ ಉಪಧಾ ಹ್ರಸ್ವ ಬರುತ್ತದೆ. **ಛಂದಸಿ ಲುಙ್ಲಙ್ಲಿಟಃ** (ಪಾ. ಸೂ. ೩-೪-೬) ಎಂಬುದರಿಂದ ವರ್ತಮಾನಾರ್ಥದಲ್ಲಿ ಲಙ್. ಪ್ರಥಮಪುರುಷ ಬಹುವಚನಾಂತರೂಪ **ಬಹುಲಂ ಛಂದಸ್ಯಮಾಙ್ಯೋಗೇಽಪಿ** ಎಂಬುದರಿಂದ ಅಡಾಗಮ ಬರುವುದಿಲ್ಲ. ಅತಿಙಂತದ ಪದದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೨ ॥

———— :o: ————

ಸಂಹಿತಾಪಾಠಃ

ನಿರ್ಯದೀಂ ಬುಧ್ನಾನ್ಮಹಿಷಸ್ಯ ವರ್ಪಸ ಈಶಾನಾಸಃ ಶವಸಾ ಕ್ರಂತ ಸೂ-
ರಯಃ ।
ಯದೀಮನು ಪ್ರದಿವೋ ಮಧ್ವ ಆಧವೇ ಗುಹಾ ಸಂತಂ ಮಾತರಿಶ್ವಾ
ಮಥಾಯತಿ ॥ ೩ ॥

। ಪದಪಾಠಃ ।

ನಿಃ । ಯತ್ । ಈಂ । ಬುಧ್ನಾತ್ । ಮಹಿಷಸ್ಯ । ವರ್ಪಸಃ । ಈಶಾನಾಸಃ । ಶವಸಾ । ಕ್ರಂತ । ಸೂರಯಃ । ಯತ್ । ಈಂ । ಅನು । ಪ್ರದಿವಃ । ಮಧ್ವಃ । ಆಽಧವೇ । ಗುಹಾ । ಸಂತಂ । ಮಾತರಿಶ್ವಾ । ಮಥಾಯತಿ ॥ ೩ ॥

ಸಾಯಣಭಾಷ್ಯಂ

ಈಮೇನಮಗ್ನಿಂ ಯದ್ಯಸ್ಮಾತ್ಕಾರಣಾನ್ಮಹಿಷಸ್ಯ। ಮಹನ್ನಾಮೈತತ್। ಮಹಿಷೋಽಭ್ವ ಋಭುಕ್ಷಾ ಇತಿ ತನ್ನಾಮಸು ಪಾಠಾತ್ । ಮಹತೋ ಯಜ್ಞಸ್ಯ ಬುಧ್ನಾನ್ಮೂಲಾದಾಧಾನಾದಾರಭ್ಯ ವರ್ಪಸಃ। ರೂಪನಾಮೈತತ್ । ರೂಪಸ್ಯೋಪಕ್ರಮೋಪಸಂಹಾರಾತ್ಮಕಸ್ಯ ಸಿದ್ಧ್ಯೈ ಈಶಾನಾಸಃ ಸ್ವಕೀಯವ್ಯಾಪಾರಸಮರ್ಥಾಃ ಸೂರಯೋ ಮೇಧಾವಿನ ಋತ್ವಿಜಃ ಶವಸಾ ಬಲೇನ ಮಂತ್ರಾದಿರೂಪೇಣ ಶಾರೀರೇಣ ವಾ ನಿಷ್ಕ್ರಂತ ನಿಷ್ಕುರ್ವಂತಿ ಸಾಧಯಂತಿ ಉತ್ಪಾದಯಂತಿ ಕಾಷ್ಠಾತ್ । ಯದ್ವಾ । ಏನಮಗ್ನಿಂ ಬುಧ್ನಾದಾದಿತೋ ಮಥನಾದಾರಭ್ಯ ಮಹಿಷಸ್ಯ ವರ್ಪಸೋ ಮಹತೋ ರೂಪಸ್ಯಾಹುತಿಸ್ವೀಕಾರಸಮರ್ಥಸ್ಯ ಸಿದ್ಧ್ಯೈ ನಿಷ್ಕುರ್ವಂತಿ ॥ ಕರೋತೇಶ್ಛಂದಸೀ ಲುಙಿ ಮಂತ್ರೇ ಘಸೇತಿ ಚ್ಲೇರ್ಲುಕ್ । ವ್ಯತ್ಯಯೇನಾಂತಾದೇಶಃ ॥ ಕಿಂಚ ಯದೀಮೇನಮೇವಾಗ್ನಿಂ ಪ್ರದಿವಃ ಪುರಾಣಾತ್ । ಅನಾದಿಕಾಲಮಾರಭ್ಯ ನ ಕೇವಲಮಿದಾನೀಮೇವೇತ್ಯರ್ಥಃ । ಪೂರ್ವವದಿದಾನೀಂ ಮಧ್ವೋ ಮಧುನೋ ಮಧುಸದೃಶಸ್ಯಾಥವ ಆಧವನೇ ಪ್ರಕ್ಷೇಪೇ ನಿಮಿತ್ತೇ ಸತಿ ಗುಹಾ ಸಂತಂ ಗುಹಾಯಾಂ ವೇದ್ಯಾಂ ಕಾಷ್ಠೇಷು ನಿಗೂಢಂ ಸಂತಂ ಮಾತರಿಶ್ವಾಂತರಿಕ್ಷೇ ಚೇಷ್ಟಮಾನೋ ವಾಯುರನುಕ್ರಮೇಣ ಮಥಾಯತಿ ಚಾಲಯತಿ। ಉದ್ಬೋಧಯತೀತ್ಯರ್ಥಃ । ಯದ್ವಾ । ಮಾತರಿ ಫಲಸ್ಯ ಮಾತರಿ ಯಾಗೇ ಶ್ವಸಿತಿ ಚೇಷ್ಟತ ಇತಿ ಮಾತರಿಶ್ವಾ ಯಜಮಾನೋ ಗುಹಾ ಸಂತಮರಣ್ಯೋರ್ನಿಗೂಢಂ ಸಂತಂ ಪ್ರಾದುರ್ಭಾವಾಯಾನುಕ್ರಮೇಣ ಮಥಾಯತಿ ಮಥ್ನಾತಿ । ಉತ್ಪಾದಯತೀತ್ಯರ್ಥಃ। ಯಸ್ಮಾದೇವಂರೂಪಸ್ತಸ್ಮಾತ್ಸ್ತೋತವ್ಯ ಇತ್ಯರ್ಥಃ ॥

ಪ್ರತಿಪದಾರ್ಥ

**ಈಂ**—ಈ ಅಗ್ನಿಯನ್ನು । **ಯತ್**—ಯಾವ ಕಾರಣದಿಂದ । **ಮಹಿಷಸ್ಯ**—ಮಹತ್ತಾದ ಯಜ್ಞದ । **ಬುಧ್ನಾತ್**—ಅಗ್ನ್ಯಾಧಾನ ಕಾಲದಿಂದಲೂ ಆರಂಭಿಸಿ । **ವರ್ಪಸಃ** (ಉಪಕ್ರಮ ಮತ್ತು ಉಪಸಂಹಾರಾತ್ಮಕವಾದ) ಸ್ವರೂಪಸಿದ್ಧಿಗಾಗಿ । **ಈಶಾನಾಸಃ**—ಸ್ವಕರ್ತವ್ಯ ನಿರ್ವಹಣೆಯಲ್ಲಿ ಸಮರ್ಥರಾದ । **ಸೂರಯಃ**—ಮೇಧಾವಿಗಳಾದ ಋತ್ವಿಕ್ಕುಗಳು । **ಶವಸಾ**—ಮಂತ್ರರೂಪವಾದ ಶಕ್ತಿಯಿಂದ ಅಥವಾ ಶರೀರ ಶಕ್ತಿಯಿಂದ । **ನಿಃಕ್ರಂತ**—(ಕಾಷ್ಠದಿಂದ) ಉತ್ಪನ್ನವಾಗುವಂತೆ ಮಾಡಿದರೋ [ (**ಅಥವಾ**) **ಬುಧ್ನಾತ್**-ಅರಣಿಗಳ ಮಥನಕಾಲದಿಂದಾರಂಭಿಸಿ **ಮಹಿಷಸ್ಯ ವರ್ಪಸಃ**--(ಆಹುತಿ ಸ್ವೀಕಾರಕ್ಕೆ ಯೋಗ್ಯವಾದ) ವಿಸ್ತೃತವಾದ ಆಕಾರವನ್ನು ಪಡೆಯುವುದಕ್ಕಾಗಿ । **ನಿಃ ಕ್ರಂತ**—ಕಾಷ್ಠದಿಂದ ಉತ್ಪನ್ನವಾಗುವಂತೆ ಮಾಡಿದರೋ ] (**ಮತ್ತು**)। **ಗುಹಾ ಸಂತಂ ಯದೀಂ**—ಕಟ್ಟಿಗೆಯಲ್ಲಿ ಸುಪ್ತವಾಗಿರುವ ಯಾವ ಈ ಅಗ್ನಿಯನ್ನು । **ಪ್ರದಿವಃ**—ಅನಾದಿಕಾಲದಿಂದಲೂ (ಇದುವರೆಗೆ

ಈಗಲೂ) । **ಮಧ್ವಃ**—ಮಧುವಿನಂತೆ ಮಧುರವಾಗಿರುವ । **ಅಥನೇ**—ಆಹುತಿಯನ್ನು ಇಡುವ ಸಲುವಾಗಿ (ಅರ್ಪಿಸುವ ಸಲುವಾಗಿ) । **ಮಾತರಿಶ್ವಾ**—ಅಂತರಿಕ್ಷದಲ್ಲಿ ಸಂಚರಿಸುವ ವಾಯುವು । **ಮಥಾಯತಿ**—ಬೀಸಿ ಪ್ರಜ್ವಲಿಸುವಂತೆ ಮಾಡುತ್ತಾನೆಯೋ । [ (**ಅಥವಾ**) **ಮಾತರಿಶ್ವಾ**—ಯಜ್ಞಕರ್ತನಾದ ಯಜಮಾನನು । **ಮಥಾಯತಿ**—(ಕಟ್ಟಿಗೆಯಿಂದ) ಉತ್ಪನ್ನನಾಗುವಂತೆ ಮಾಡುತ್ತಾನೆಯೋ (ಆದ್ದರಿಂದ ಈ ಅಗ್ನಿಯು ಸ್ತೋತ್ರಾರ್ಹನು) ]

### ಭಾವಾರ್ಥ

ಮಹತ್ತಾದ ಯಜ್ಞದಲ್ಲಿ ಅಗ್ನ್ಯಾಧಾನ ಕಾಲದಿಂದಲೂ ಆರಂಭಿಸಿ ಆಹುತಿಯ ಸ್ವೀಕಾರಕ್ಕೆ ಯೋಗ್ಯವಾದ ಮತ್ತು ವಿಸ್ತೃತವಾದ ಆಕಾರವನ್ನು ಹೊಂದುವುದಕ್ಕಾಗಿ ಸ್ವಕರ್ತವ್ಯನಿರ್ವಹಣೆಯಲ್ಲಿ ಸಮರ್ಥರಾದವರೂ ಮೇಧಾವಿಗಳೂ ಆದ ಋತ್ವಿಕ್ಕುಗಳು ತಮ್ಮ ಮಂತ್ರರೂಪವಾದ ಶಕ್ತಿಯಿಂದಲೂ ಶರೀರಸಾಮರ್ಥ್ಯದಿಂದಲೂ ಸಹ ಈ ಅಗ್ನಿಯನ್ನು ಕಾಷ್ಠದಿಂದ ಉತ್ಪನ್ನನಾಗುವಂತೆ ಮಾಡಿದರು. ಮತ್ತು ಕಟ್ಟಿಗೆಯಲ್ಲಿ ಸುಪ್ತನಾಗಿರುವ ಈ ಅಗ್ನಿಯನ್ನು ಅನಾದಿಕಾಲದಿಂದಲೂ ಇರುವ ಹಾಗೆ ಈಗಲೂ ಸಹ ಮಧುಮಧುರವಾದ ಆಹುತಿಯನ್ನು ಅರ್ಪಿಸಲಿಕ್ಕಾಗಿ ಅಂತರಿಕ್ಷದಲ್ಲಿ ಸಂಚರಿಸುವ ವಾಯುವು ಚೆನ್ನಾಗಿ ಬೀಸಿ ಪ್ರಜ್ವಲಿಸುವಂತೆ ಮಾಡುತ್ತಾನೆ. ಆದುದರಿಂದ ಈ ಅಗ್ನಿಯು ಸ್ತೋತ್ರಾರ್ಹನು.

## English Translation

As powerful priests extract by the force (of prayer), this Agni from his primitive seat, (for the evolvement) of his mighty form ; as the wind arouses him lurking in the hiding-place ( of the altar ), for the sake of offering oblations now as of old.

### ವಿಶೇಷವಿಷಯಗಳು

**ಮಹಿಷಸ್ಯ**—ಮಹಿಷಶಬ್ದವು ಮಹನ್ನಾಮಗಳಲ್ಲಿ ಪಠಿತವಾಗಿದೆ. (ನಿ ೩-೧೩) ನಿರುಕ್ತಕಾರರು—

**ಅಪಾಮುಪಸ್ಥೇ ಮಹಿಷಾ ಅಗೃಭ್ಣತ ವಿಶೋ ರಾಜಾನಮುಪ ತಸ್ಥುರೃಗ್ಮಿಯಂ ।**
**ಆ ದೂತೋ ಅಗ್ನಿಮಭರದ್ವಿವಸ್ವತೋ ವೈಶ್ವಾನರಂ ಮಾತರಿಶ್ವಾ ಪರಾವತಃ ॥**
(ಋ. ಸಂ. ೬-೮-೪)

ಎಂಬ ಋಕ್ಕನ್ನುದಹರಿಸಿ ಅಲ್ಲಿರುವ **ಮಹಿಷ** ಶಬ್ದಕ್ಕೆ **ಮಹತ್ಯಂತರಿಕ್ಷೇ** ಅಥವಾ **ಮಹಾಂತೋ** ಮರುತಃ ಎಂಬರ್ಥವನ್ನು ತೋರಿಸಿ ಪ್ರಕೃತವಾದ ಋಕ್ಕಿನ ಭಾವವೂ ಈ ಉದಾಹೃತವಾದ ಋಕ್ಕಿನಲ್ಲಿಯೂ ಇರುವುದಾಗಿ ತೋರಿಸಿದ್ದಾರೆ.

ಪ್ರಕೃತವಾದ ಋಕ್ಕಿನಲ್ಲಿ **ಮಹಿಷಸ್ಯ** ಎಂಬ ಪದವನ್ನು **ಬುಧ್ನಾತ್** ಎಂಬುದರೊಂದಿಗೆ ಸೇರಿಸಿ ಒಂದು ಅನ್ವಯವನ್ನೂ, **ಅರ್ಪಸಃ** ಎಂಬುದರೊಂದಿಗೆ ಸೇರಿಸಿ ಇನ್ನೊಂದು ವಿಧವಾದ ಅನ್ವಯವನ್ನೂ ಭಾಷ್ಯಕಾರರು ಮಾಡಿ ತೋರಿಸಿದ್ದಾರೆ. ಮೊದಲನೆಯ ಅನ್ವಯದ ಪ್ರಕಾರ **ಮಹಿಷಸ್ಯ ಬುಧ್ನಾತ್** ಎಂದರೆ ಮಹತ್ತಾದ ಯಜ್ಞದ ಅಗ್ನ್ಯಾಧಾನಕಾಲದಿಂದ ಎಂತಲೂ, ಎರಡನೆಯ ಅನ್ವಯದ ಪ್ರಕಾರ **ಮಹಿಷಸ್ಯ ವರ್ಪಸಃ** ಎಂದರೆ ವಿಸ್ತೃತವಾದ

ಆಕಾರವೆಂತಲೂ ಅರ್ಥವಾಗುತ್ತದೆ. ಈ ಸನ್ನಿವೇಶದ ವಿವರಣೆಯನ್ನು ತಿಳಿಯಬೇಕಾದರೆ **ಬುಧ್ನಾತ್** ಎಂಬ ಪದದ ಅರ್ಥವನ್ನು ಸರಿಯಾಗಿ ತಿಳಿಯಬೇಕು.

**ಬುಧ್ನಾತ್** ಎಂಬ ಪದಕ್ಕೆ **ಮೂಲಾತ್, ಆಧಾನಾದಾರಭ್ಯ** ಎಂದರ್ಥಮಾಡಿದ್ದಾರೆ. ಋಕ್ಸಂಹಿತೆಯಲ್ಲಿ **ಬುಧ್ನ** ಶಬ್ದವನ್ನು ಅಂತರಿಕ್ಷ ಪರ್ಯಾಯವಾಗಿಯೇ ಅಧಿಕವಾಗಿ ಉಪಯೋಗಿಸಿದೆ. ಆದರೆ ಅಂತರಿಕ್ಷವೆಂಬ ಅರ್ಥವನ್ನು ಕೊಡುವಾಗಲೂ ಸಹ **ಬದ್ಧಾ ಅಸ್ಮಿನ್, ಧೃತಾ ಅಪಃ** ನೀರನ್ನು ಹಿಡಿದು ನಿಲ್ಲಿಸಿಕೊಳ್ಳುವುದರಿಂದ ಎಂದರೆ, ನೀರಿಗೆ ಆಧಾರವಾಗಿರುವುದರಿಂದ ಅಂತರಿಕ್ಷಕ್ಕೆ ಬುಧ್ನವೆಂದು ಹೆಸರು. (ನಿ. ೧೦-೪೪).

**ಇಂದ್ರಾಯ ಗಿರೋ ಅನಿಶಿತಸರ್ಗಾ ಅಪಃ ಪ್ರೇರಯಂ ಸಗರಸ್ಯ ಬುಧ್ನಾತ್ ।**
**ಯೋ ಅಕ್ಷೇಣೇವ ಚಕ್ರಿಯಾ ಶಚೀಭಿರ್ವಿಷ್ವಕ್ತಸ್ತಂಭ ಪೃಥಿವೀಮುತ ದ್ಯಾಂ ।**
(ಋ. ಸಂ. ೧೦-೮೯-೪)

ಎಂಬ ಋಕ್ಕಿನಲ್ಲಿ **ಸಗರಸ್ಯ ಬುಧ್ನಾತ್** ಎಂದರೆ ಅಂತರಿಕ್ಷಕ್ಕೇ ಆಧಾರಭೂತವಾದದ್ದು । ಅಂತರಿಕ್ಷದ ಗಹನವಾದ ಮೂಲಪ್ರದೇಶವೆಂದರ್ಥ.

ಪ್ರಕೃತವಾದ ಋಕ್ಕಿನಲ್ಲಿಯೂ ಇದೇ ಅರ್ಥವನ್ನು ಮಾಡಬೇಕು. ಆಗ ಯಜ್ಞದ ಗಹನವಾದ ಮೂಲವೆಂದರೆ ಅಗ್ನ್ಯಾಧಾನಕಾಲವಾಗಲಿ ಅಥವಾ ಅರಣಿಗಳ ಮಥನಕಾಲವಾಗಲಿ ಆಗುತ್ತದೆ. ಇಂತಹ ಆರಂಭಕಾಲದಿಂದಲೂ ಸೂರಿಗಳು ಪ್ರಯತ್ನಿಸಿ ಅಗ್ನಿಯನ್ನು ಉತ್ಪನ್ನನಾಗುವಂತೆಯೂ ಯಜ್ಞಾನುಕೂಲನಾಗುವಂತೆಯೂ ಮಾಡಿದರೆಂದು ತಾತ್ಪರ್ಯ.

**ಈಶಾನಾಸಃ—ಸ್ವಕೀಯವ್ಯಾಪಾರಸಮರ್ಥಾಃ ।** ಸ್ವಕರ್ತವ್ಯನಿರ್ವಹಣೆಯಲ್ಲಿ ಸಮರ್ಥರೆಂದರ್ಥ. ಈಶಾನ ಶಬ್ದಕ್ಕೆ ಸ್ವಾಮಿ, ಒಡೆಯ ಎಂದೇ ಅರ್ಥ.

**ಅರ್ವದ್ಭಿರಗ್ನೇ ಅರ್ವತೋ ನೃಭಿರ್ನೄನ್ವೀರೈರ್ವೀರಾನ್ವನುಯಾಮಾ ತ್ವೋತಾಃ ।**
**ಈಶಾನಾಸಃ ಪಿತೃವಿತ್ತಸ್ಯ ರಾಯೋ ವಿ ಸೂರಯಃ ಶತಹಿಮಾ ನೋ ಅಶ್ಯುಃ ।**
(ಋ ಸಂ ೧-೭೩-೯)

**ಈಶಾನಮಸ್ಯ ಜಗತಃ ಸ್ವರ್ದೃಶಂ ।**
(ಐ. ಬ್ರಾ. ೧೭-೧೦)

**ಈಶಾನಂ ಭೂತಭವ್ಯಸ್ಯ ।**
(ಕ. ಉ. ೪-೫)

ಇತ್ಯಾದಿ ವಾಕ್ಯಗಳಲ್ಲೆಲ್ಲಾ ಸ್ವಾಮಿಯೆಂದರ್ಥವಾಗುವಂತೆ ಇಲ್ಲಿಯೂ ಸಹ ತನ್ನ ಕಾರ್ಯಗಳಿಗೆ ಯಜಮಾನನು ಸ್ವಾಮಿಯು ಎಂದರ್ಥವಾಗುತ್ತದೆ. **ಈಶಾನಾಸಃ ಸೂರಯಃ** ಎಂದಿರುವುದರಿಂದ ಪ್ರಾಜ್ಞರಾದ ಋತ್ವಿಕ್ಕುಗಳು ತಮ್ಮ ಕರ್ತವ್ಯವನ್ನು ಲೋಪವಿಲ್ಲದೆ ನೆರವೇರಿಸಿ ಫಲಕ್ಕೂ ಸ್ವಾಮಿಗಳಾಗುವರೆಂದು ತಾತ್ಪರ್ಯ. ಇಂತಹ **ಸೂರಿಗಳು** ಪಾರ್ಥಿವವಾದ ಅಗ್ನಿಯನ್ನು ಉತ್ಪನ್ನನಾಗುವಂತೆ ಮಾಡುವ ರೀತಿಯಲ್ಲಿ ಮಾತರಿಶ್ವನೂ ಸಹ ಸುಪ್ತವಾಗಿದ್ದ ಅಗ್ನಿಯನ್ನು ಪ್ರಜ್ವಲಿಸುವಂತೆ ಮಾಡುತ್ತಾನೆಂದು **ಮಾತರಿಶ್ವಾ ಮಥಾಯತಿ** ಎಂಬುದರಿಂದ ಹೇಳಿದೆ. ಯಜ್ಞಾತ್ಮ

ನಾದ ಅಗ್ನಿಯ ಅಲೌಕಿಕವಾದ ಆವಿರ್ಭಾವವೂ, ಲೌಕಿಕವಾದ ಉತ್ಪತ್ತಿಯೂ ಅನೇಕ ವಿಧಗಳಲ್ಲಿ ವರ್ಣಿತವಾಗಿವೆ. ಯಜ್ಞಕ್ಕೆ ಹಿತ್ಕವಾದ ಅಗ್ನಿಯ ಆವಿರ್ಭಾವವು ವಿದ್ಯುದ್ರೂಪದಲ್ಲಿ ಮೊದಲು ವಾಯುವಿಗಾಯಿತೆಂದು ಋಕ್ಸಂಹಿತೆಯ

**ತ್ವಮಗ್ನೇ ಪ್ರಥಮೋ ಮಾತರಿಶ್ವನ ಆವಿರ್ಭವ ಸುಕ್ರತೂಯಾ ವಿವಸ್ವತೇ ।**
**ಅರೇಜೇತಾಂ ರೋದಸೀ ಹೋತೃವೂರ್ಯೇಽಸಘ್ನೋರ್ಭಾರಮಯಜೋ ಮಹೋ ವಸೋ ।**
(ಋ. ಸಂ. ೧-೩೧-೩)

ಇತ್ಯಾದಿ ಋಕ್ಕುಗಳಲ್ಲಿ ಹೇಳಿರುವಂತೆ ಮಾತರಿಶ್ವನು ಯಜ್ಞಕರ್ತರಾದ ಭೃಗು ಮತ್ತು ಮನು ಇವರ ಪ್ರಯೋಜನಕ್ಕಾಗಿ ದೂರದೇಶದಲ್ಲಿ ಗುಪ್ತವಾಗಿದ್ದ ಅಗ್ನಿಯನ್ನು ಪೃಥ್ವಿಗೆ ಕರೆತಂದು ಪೃಥ್ವಿಯಲ್ಲಿ ಎಲ್ಲಾ ಪ್ರಜೆಗಳಿಗೂ ಉಪಕಾರಮಾಡಿದ ವಿಷಯವನ್ನು ಹಿಂದೆ ವಿಶದವಾಗಿ ತಿಳಿಸಿದೆ. ಪ್ರಕೃತವಾದ ಋಕ್ಕಿನಲ್ಲೂ ಸಹ ಗುಹಾ ಸಂತಂ ಎಂಬ ವಿಶೇಷಣದಿಂದ ಅದೇ ಅಂಶವನ್ನು ಹೇಳಿದೆ. ಇಲ್ಲಿ **ಮಾತರಿಶ್ವಾ** ಎಂಬ ಪದಕ್ಕೆ **ಅಂತರಿಕ್ಷೇ ಚೇಷ್ಟಮಾನೋ ವಾಯುಃ** ಎಂಬ ಅರ್ಥವಲ್ಲದೆ, **ಮಾತರಿ ಫಲಸ್ಯ ಮಾತರಿ ಯಾಗೇ ಶ್ವಸಿತಿ ಚೇಷ್ಟತೇ ಇತಿ ಮಾತರಿಶ್ವಾ ಯಜಮಾನೋ ಗುಹಾ ಸಂತಂ ಅರಣ್ಯೋರ್ನಿಗೂಢಂ ಸಂತಂ ಮಥಾಯತಿ ।** ಸಕಲ ವಿಧವಾದ ಫಲಕ್ಕೂ ಉತ್ಪಾದಕವಾದ ಯಜ್ಞದಲ್ಲಿ ವ್ಯವಹರಿಸುವುದರಿಂದ ಯಜಮಾನನಿಗೆ **ಮಾತರಿಶ್ವ**ನೆಂದೂ, ಅವನು ಅರಣಿಗಳಲ್ಲಿ ಗೂಢವಾಗಿರುವ ಅಗ್ನಿಯನ್ನು ಶ್ರಮದಿಂದ ಬೀಸಿ ಪ್ರಜ್ವಲಿಸುವಂತೆ ಮಾಡುತ್ತಾನೆಂದೂ ಎರಡನೆಯ ಅರ್ಥವನ್ನು ಹೇಳಿದೆ.

**ಪ್ರದಿವಃ—ಪ್ರದಿವ**ಶಬ್ದವು **ಪುರಾಣ**ನಾಮಗಳಲ್ಲಿ ಪಠಿತವಾಗಿದೆ (ನಿ. ೩-೧೯) ನಿರುಕ್ತಕಾರರು—
**ಮರುತ್ವಾँ ಇಂದ್ರ ವೃಷಭೋ ರಣಾಯ ಪಿಬಾ ಸೋಮಮನುಷ್ವಧಂ ಮದಾಯ ।**
**ಆ ಸಿಂಚಸ್ವ ಜಠರೇ ಮಧ್ವ ಊರ್ಮಿಂ ತ್ವಂ ರಾಜಾಸಿ ಪ್ರದಿವಃ ಸುತಾನಾಂ ।**
(ಋ. ಸಂ. ೩-೪೭-೧)

ಎಂಬ ಋಕ್ಕನ್ನು ಉದಹರಿಸಿ (ನಿ. ೪-೮) ಅಲ್ಲಿ **ಪ್ರದಿವಃ** ಎಂಬ ಶಬ್ದಕ್ಕೆ **ಪೂರ್ವೇಷ್ವಪ್ಯಹಸ್ಸು ।** ಹಿಂದಿನ ದಿನಗಳಲ್ಲಿ (ಹಿಂದಿನಂತೆಯೇ) ಎಂದರ್ಥಮಾಡಿದ್ದಾರೆ. ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಅನಾದಿಕಾಲದಿಂದ ಯಾವ ರೀತಿ ಆಹುತಿಯು ಅರ್ಪಣೆಯಾಗುತ್ತಿದೆಯೋ ಈಗಲೂ ಅದೇ ರೀತಿ ಅರ್ಪಿಸುವುದಕ್ಕಾಗಿ ಎಂದು ತಾತ್ಪರ್ಯ.

### ವ್ಯಾಕರಣಪ್ರಕ್ರಿಯಾ

**ಬುಧ್ನಾತ್**—ಬಧ ಬಂಧನೇ. ಧಾತು. **ಬಂಧೇ ಬ್ರಧಿಬುಧೀಚ** ( ಉ. ಸೂ. ೨-೨೭೫) ಎಂಬುದರಿಂದ ನಕ್ ಪ್ರತ್ಯಯ. ಧಾತುವಿಗೆ ಬುಧಿ ಆದೇಶ. ಪ್ರತ್ಯಯಸ್ವರದಿಂದ ಅಂತೋದಾತ್ತ. ಸಪ್ತಮೀಏಕವಚನಾಂತರೂಪ

**ಮಹಿಷಸ್ಯ**—ಮಹಧಾತು. **ಅವಿಮಹ್ಯೋಷ್ಟಿಷಚ್** (ಉ. ಸೂ. ೧-೪೫) ಎಂಬುದರಿಂದ ಟಿಷಚ್ ಪ್ರತ್ಯಯ. **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ಷಷ್ಠೀಏಕವಚನಾಂತರೂಪ.

**ವರ್ಪಸಃ**—ವೃಜ್ ಸಂಭಕ್ತೌ ಧಾತು **ವೃಜ್‌ಶೀಜ್‌ಭ್ಯಾಂರೂಪೆ ಸ್ವಾಂಗಯೋಃ ಪುಟ್‌ಚ** (ಉ.ಸೂ. ೪-೬೪೦) ಎಂಬುದರಿಂದ ರೂಪಾರ್ಥದಲ್ಲಿ ಅಸುನ್ ಪ್ರತ್ಯಯ. ಧಾತುವಿಗೆ ಪುಟಾಗಮ. ಪ್ರತ್ಯಯನಿಮಿತ್ತವಾಗಿ ಧಾತುವಿನ ಇಕಿಗೆ ಗುಣ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಈಶಾನಾಸಃ**—ಈಶ ಐಶ್ವರ್ಯೇ ಧಾತು. **ತಾಚ್ಛೀಲ್ಯವಯೋವಚನೇಷು ಚಾನಶ್** (ಪಾ. ಸೂ. ೩-೨-೧೨೯) ಎಂಬುದರಿಂದ ಚಾನಶ್ ಪ್ರತ್ಯಯ. **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ಜಸ್ ಪರವಾದಾಗ **ಆಜ್ಜಸೇರಸುಕ್** ಎಂಬುದರಿಂದ ಅದಕ್ಕೆ ಅಸುಕಾಗಮ.

**ಕ್ರಂತ**—ಡುಕೃಞ್ ಕರಣೇ. **ಛಂದಸಿ ಲುಙ್‌ಲಙ್‌ಲಿಟಃ** (ಪಾ ಸೂ. ೩-೪-೬) ಎಂಬುದರಿಂದ ವರ್ತಮಾನಾರ್ಥದಲ್ಲಿ ಲುಙ್. ಪ್ರಥಮಪುರುಷಬಹುವಚನದಲ್ಲಿ ಝಿ ಪ್ರತ್ಯಯ. **ಚ್ಲಿ ಲುಙಿ** ಎಂಬುದರಿಂದ ಚ್ಲಿವಿಕರಣ ಬಂದಾಗ **ಮಂತ್ರೇಘಸಹ್ವರ**—(ಪಾ. ಸೂ. ೨-೪-೮೦) ಎಂಬುದರಿಂದ ಚ್ಲಿಗೆ ಲುಕ್. ಅನಕಾರದ ಪರದಲ್ಲಿ ಝಿ ಬಂದರೂ ವ್ಯತ್ಯಯದಿಂದ ಅದಕ್ಕೆ ಅಂತಾದೇಶ ಬರುತ್ತದೆ. ಪ್ರತ್ಯಯಕ್ಕೆ ಙಿತ್ತ್ವವಿರುವುದರಿಂದ ಗುಣ ಬರುವುದಿಲ್ಲ. ಯಣಾದೇಶ. **ಬಹುಲಂ ಛಂದಸ್ಯಮಾಙ್‌ಯೋಗೇಪಿ** (ಪಾ ಸೂ. ೬-೪-೭೫) ಎಂಬುದರಿಂದ ಅಡಾಗಮ ಬರುವುದಿಲ್ಲ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

**ಸೂರಯಃ**—ಷೂಙ್ ಪ್ರಾಣಿಪ್ರಸವೇ ಧಾತು. **ಸೂಙ್‌ಕ್ರಿಃ** ಎಂಬುದರಿಂದ ಕ್ರಿ ಪ್ರತ್ಯಯ. ಕಿತ್ತಾದುದರಿಂದ ಗುಣ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಪ್ರಥಮಾಬಹುವಚನಾಂತರೂಪ.

**ಪ್ರದಿವಃ**—ಪ್ರಗತಾ ದಿವೋ ದಿವಸಾ ಯಸ್ಮಾತ್ ಸಃ **ಗತಿಕಾರಕೋಪಪದಾತ್‌ಕೃತ್** ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

**ಗುಹಾ**—ಸಪ್ತಮೀವಿಭಕ್ತಿ ಪರವಾದಾಗ **ಸುಪಾಂ ಸುಲುಕ್** (ಪಾ. ಸೂ. ೭-೧-೩೯) ಎಂಬುದರಿಂದ ಅದಕ್ಕೆ ಲುಕ್.

**ಸಂತಮ್**—ಅಸ ಭುವಿ ಧಾತು. ಲಡರ್ಥದಲ್ಲಿ ಶತೃಪ್ರತ್ಯಯ **ಅದಿಪ್ರಭೃತಿಭ್ಯಃ ಶಪಃ** ಎಂಬುದರಿಂದ ಶಪಿಗೆ ಲುಕ್. **ಶ್ನಸೋರಲ್ಲೋಪಃ** (ಪಾ. ಸೂ. ೬-೪-೧೧೧) ಎಂಬುದರಿಂದ ಧಾತುವಿನ ಅಕಾರಕ್ಕೆ ಲೋಪ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ. ದ್ವಿತೀಯಾಏಕವಚನದಲ್ಲಿ ನುಮಾಗಮ.

**ಮಾತರಿಶ್ವಾ**—ಮಾತರಿ ಶ್ವಯತೀತಿ ಮಾತರಿಶ್ವಾ. **ಶ್ವನ್ನುಕ್ಷನ್** (ಉ. ಸೂ. ೧-೧೫೬) ಎಂಬುದರಿಂದ ಕನಿ ಪ್ರತ್ಯಯಾಂತವಾಗಿ ನಿಪಾತಿತವಾಗಿದೆ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

**ಮಥಾಯತಿ**—ಮಂಥ ವಿಲೋಡನೇ ಧಾತು. ಲಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಛಂದಸಿ ಶಾಯಜಪಿ** (ಪಾ. ಸೂ. ೩-೧-೮೪) ಎಂಬುದರಿಂದ ಶ್ನಾವಿಕರಣಕ್ಕೆ ಶಾಯಚಾದೇಶ. **ಸಾರ್ವಧಾತುಕಮಪಿತ್** ಎಂಬುದರಿಂದ ಅದಕ್ಕೆ ಙಿತ್ತ್ವವಿರುವುದರಿಂದ **ಅನಿದಿತಾಂ ಹಲ**—ಸೂತ್ರದಿಂದ ಧಾತುವಿನ ಉಪಧಾ ನಕಾರಕ್ಕೆ ಲೋಪ. ಯದ್ಯೋಗವಿರುವುದರಿಂದ ನಿಘಾತಪ್ರತಿಷೇಧ ಬರುತ್ತದೆ. ಶಾಯಚ್ ಚಿತ್ತಾದುದರಿಂದ ಅಂತೋದಾತ್ತಸ್ವರ ಬರುತ್ತದೆ. ॥ ೩ ॥



। ಸಂಹಿತಾಪಾಠಃ ।

ಪ್ರ ಯತ್ಪಿತುಃ ಪರಮಾನ್ನೀಯತೇ ಪರ್ಯಾ ಪೃಕ್ಷುಧೋ ವೀರುಧೋ ದಂ-
ಸು ರೋಹತಿ ।
ಉಭಾ ಯದಸ್ಯ ಜನುಷಂ ಯದಿನ್ವತ ಆದಿದ್ಯವಿಷ್ಠೋ ಅಭವದ್ಘೃಣಾ
ಶುಚಿಃ ॥ ೪ ॥

ಪದಪಾಠಃ

ಪ್ರ । ಯತ್ । ಪಿತುಃ । ಪರಮಾತ್ । ನೀಯತೇ । ಪರಿ । ಆ । ಪೃಕ್ಷುಧಃ । ವೀರುಧಃ । ದಂಽಸು । ರೋ-
ಹತಿ ।
ಉಭಾ । ಯತ್ । ಅಸ್ಯ । ಜನುಷಂ । ಯತ್ । ಇನ್ವತಃ । ಆತ್ । ಇತ್ । ಯವಿಷ್ಠಃ । ಅಭವತ್ ।
ಘೃಣಾ । ಶುಚಿಃ ॥ ೪ ॥

॥ ಸಾಯಣಭಾಷ್ಯಂ ॥

ಯದ್ಯಸ್ಮಾತ್ಪಿತುರನ್ನಸ್ಯ ಪಶುಲಕ್ಷಣಸ್ಯ ॥ ಷಷ್ಠೀಸ್ಥಾನೇ ಪ್ರಥಮಾ ॥ ತಸ್ಯ ಪರಮಾತ್ ಪರಮ-ತ್ವಾದ್ಧೇತೋಃ । ಉತ್ಕೃಷ್ಟತ್ವಾಯೇತ್ಯರ್ಥಃ । ತದರ್ಥಂ ಪ್ರ ಪರಿ ಣೀಯತೇ ಪ್ರಕರ್ಷೇಣ ಪರಿತೋ ನೀಯತೇ । ಪರ್ಯಗ್ನಿಕ್ರಿಯತ ಇತ್ಯರ್ಥಃ । ಯದ್ವಾ । ಪಿತುರುತ್ಪಾದಕಾತ್ಪರಮಾದುತ್ಕೃಷ್ಟಾದ್ಗಾರ್ಹ-ಪತ್ಯಲಕ್ಷಣಸ್ಯಾಗ್ನೇಃ ಸಕಾಶಾದಾಹವನೀಯಂ ಪ್ರತಿ ಪ್ರ ಪರಿ ಣೀಯತೇ ಪ್ರಕರ್ಷೇಣ ನೀಯತೇ । ಪರ್ಯನರ್ಥಕಃ । ಕಿಂಚ ಪೃಕ್ಷುಧಃ ಪಶುಪುರೋಡಾಶಾದಿಷು ದಾಹಮಧ್ಯೇ ಧೀಯಮಾನಾಃ । ಯದ್ವಾ॥ ಪೃಶಬ್ದಸ್ಯ ಸಂಪ್ರಸಾರಣಂ । ಕ್ಷುಧ ಬುಭುಕ್ಷಾಯಾಂ । ಕ್ವಿಪ್ ॥ ಪ್ರಕ್ಷೋಧ್ಯಾಃ ಪ್ರಕರ್ಷೇಣ ಬುಭು-ಕ್ಷಿತಾ ಭೋಕ್ತುಮಿಷ್ಯಮಾಣಾಃ । ವೀರುಧೋ ದಂಸು ದಂತೇಷು ಮಧ್ಯ ಆ ರೋಹತಿ । ಆರೋಹಂತಿ । ಪ್ರವಿಶಂತೀತ್ಯರ್ಥಃ । ಯದ್ಯಸ್ಮಾದುಭೋಭಾವಧ್ವರ್ಯುರ್ಯಜಮಾನೌ ಉಭೇ ಅರಣೀ ವಾಸ್ಯಾಗ್ನೇ-ರ್ಜನುಷಂ ಜನ್ಮೋತ್ಪತ್ತಿಮಿನ್ವತಃ ವ್ಯಾಪ್ನುತಃ । ಸ್ವೀಕುರುತ ಇತ್ಯರ್ಥಃ ॥ ಇವಿ ವ್ಯಾಪ್ತೌ । ಇದಿತ್ವಾನ್ನುಮ್ ॥ ಆದಿದತ ಏವ ಕಾರಣಾಚ್ಛುಚಿಃ ಶುದ್ಧೋಽಯಮಗ್ನಿರ್ಘೃಣಾ ಯಜಮಾನೇಷ್ವನುಗ್ರಹೇಣ । ಯದ್ವಾ । ಘೃಣಾ ಘೃಣೋ ದೀಪ್ತಿಮಾನ್ ॥ ಮತ್ವರ್ಥೋ ಲುಪ್ಯತೇ ॥ ದೀಪ್ತ್ಯಾ ವಾ ಯವಿಷ್ಠೋ ಯುವತಮೋಽಭವತ್ । ಸಂಪನ್ನಃ । ಸ್ವೀಕಾರಸಮರ್ಥೋಽಭವದಿತ್ಯರ್ಥಃ ॥

ಪ್ರತಿಪದಾರ್ಥ

ಯತ್—ಯಾವ ಕಾರಣದಿಂದ । ಪಿತುಃ—ಪಶುರೂಪವಾದ ಅನ್ನವು । ಪರಮಾತ್ ಉತ್ಕೃಷ್ಟ-ವಾಗಿರುವ ನಿಮಿತ್ತವಾಗಿ । ಪ್ರ ಪರಿ ನೀಯತೇ—(ಈ ಅಗ್ನಿಯು) ಪ್ರದಕ್ಷಿಣವಾಗಿ ಒಯ್ಯಲ್ಪಡುವನೋ

**ಅಥವಾ** [**ಪರಮಾತ್**—ಉತ್ಕೃಷ್ಟವಾದುದೂ | **ಪಿತುಃ**—ಮೂಲಭೂತವಾದುದೂ ಆದ ಗಾರ್ಹಪತ್ಯಾಗ್ನಿಯಿಂದ | **ಪ್ರ ಪರಿ ನೀಯತೇ**—(ಆವಹನಾಗ್ನಿಯ ಸಮೀಪಕ್ಕೆ) ಅತಿಶಯವಾಗಿ ಒಯ್ಯಲ್ಪಡುವನೋ |] (**ಮತ್ತು**) **ಪ್ರಕ್ಷುಧಃ**—(ಪಶುಪುರೋಡಾಶಾದಿಗಳಲ್ಲಿ) ದಾಹಾತ್ಮಕವಾಗಿ ಎದ್ದುನಿಲ್ಲುವುವೂ, **ಅಥವಾ** ಆಹುತಿಗಳನ್ನು ಭಕ್ಷಿಸಲು ಆತುರವುಳ್ಳವೂ | **ವೀರುಧಃ**—ಲತೆಗಳ ರೂಪದಲ್ಲಿ (ಊರ್ಧ್ವಮುಖವಾಗಿ) ಹರಡಿರುವುವೂ ಆದ ಶಾಖೆಗಳು | **ದಂಸು**—ದಂತಗಳಂತಿರುವ ಜ್ವಾಲೆಗಳ ನಡುವೆ | **ಆರೋಹಂತಿ**—ಊರ್ಧ್ವಮುಖವಾಗಿ ಹತ್ತುತ್ತವೆಯೋ | (**ಮತ್ತು**) **ಯತ್**—ಯಾವ ಕಾರಣದಿಂದ | **ಉಭಾ**—ಅಧ್ವರ್ಯು ಮತ್ತು ಯಜಮಾನರು ಅಥವಾ ಎರಡು ಅರಣಿಗಳು ಒಟ್ಟಿಗೆ ಸೇರಿ | **ಅಸ್ಯ**—ಈ ಅಗ್ನಿಗೆ | **ಜನುಷಂ**—ಉತ್ಪತ್ತಿಯನ್ನು | **ಇನ್ವತಃ**—ಹೊಂದಿಸಿಕೊಡುತ್ತಾರೋ | **ಅದಿತ್**—ಆದ್ದರಿಂದಲೇ | **ಶುಚಾಂ**—ಶುದ್ಧನಾದವನೂ | **ಘೃಣಾ**—(ಯಜಮಾನರಲ್ಲಿ) ಅನುಗ್ರಹವುಳ್ಳವನೂ ಅಥವಾ ಪ್ರಕಾಶಮಾನನಾದವನೂ | **ಯುವಿಷ್ಠಃ**—ಅತ್ಯಂತ ಯುವಕನಾದವನೂ ಆಗಿ | **ಅಭವತ್**—ಉಂಟಾದನು. |

॥ ಭಾವಾರ್ಥ ॥

ಪಶುರೂಪವಾದ ಅನ್ನವು ಉತ್ಕೃಷ್ಟವಾಗಿ ಲಭಿಸಬೇಕೆಂಬ ಉದ್ದಿಶ್ಯದಿಂದ ಈ ಅಗ್ನಿಯು ಪ್ರದಕ್ಷಿಣವಾಗಿ ಒಯ್ಯಲ್ಪಡುವನು. ಪಶುಪುರೋಡಾಶಾದಿಗಳಲ್ಲಿ ದಾಹಾತ್ಮಕವಾಗಿ ಎದ್ದು ನಿಲ್ಲುವುವೂ ಲತೆಗಳ ರೂಪದಲ್ಲಿ ಊರ್ಧ್ವಮುಖವಾಗಿ ಎದ್ದುನಿಲ್ಲುವುವೂ ಆದ ಈ ಅಗ್ನಿಯ ಶಾಖೆಗಳು ದಂತರೂಪವಾದ ಜ್ವಾಲೆಗಳ ನಡುವೆ ಊರ್ಧ್ವಮುಖವಾಗಿ ಹತ್ತುತ್ತವೆ. ಅಧ್ವರ್ಯು ಮತ್ತು ಋತ್ವಿಕ್ಕುಗಳು ಈ ಇಬ್ಬರೂ ಸೇರಿ ಈ ಅಗ್ನಿಗೆ ಉತ್ಪತ್ತಿಯನ್ನು ಸಂಪಾದಿಸಿಕೊಡುತ್ತಾರೆ. ಈ ಎಲ್ಲಾ ಕಾರಣಗಳಿಂದಲೂ ಸಹ ಅತ್ಯಂತ ಶುದ್ಧನಾದವನೂ, ಯಜಮಾನರಲ್ಲಿ ಅನುಗ್ರಹವುಳ್ಳವನೂ ಮತ್ತು ಅತ್ಯಂತ ಯುವಕನಾಗಿ ಪ್ರಕಾಶಮಾನನಾದವನೂ ಆಗಿ ಅಗ್ನಿಯು ಉತ್ಪನ್ನನಾದನು.

English Translation

As for securing the perfection of food (Agni) is generated and the consumable branches rise amidst (the flames); and as both ( the institutor of the rite and the priest) combine for his generation, therefore has he been generated, pnre, youthful, and radiant

ವಿಶೇಷವಿಷಯಗಳು

ಪಿತುಃ—ಪಿತುಶಬ್ದವು ಅನ್ನನಾಮಗಳಲ್ಲಿ ಪಠಿತವಾಗಿದೆ. (ನಿ ೨-೯) ನಿರುಕ್ತಕಾರರು ಪಿತುಶಬ್ದದ ನಿರ್ವಚನವನ್ನು ಹೇಳುವಾಗ

**ಪಿತುಂ ನ ಸ್ತೋಷಂ ಮಹೋ ಧರ್ಮಾಣಂ ತವಿಷೀಂ |**
**ಯಸ್ಯ ತ್ರಿತೋ ವ್ಯೋಜಸಾ ವೃತ್ರಂ ವಿಪರ್ವಮರ್ದಯತ್ ||**

(ಋ. ಸಂ. ೧-೧೮೭-೧)

ಎಂಬ ಋಕ್ಕನ್ನು ಉದಹರಿಸಿ, ಪಿತುಃ ಪಿತುರಿತ್ಯನ್ನನಾಮ | ಪಾತೇರ್ವಾ ಪಿಬತೇರ್ವಾ ಪ್ಯಾಯತೇ ರ್ವಾ | ರಕ್ಷಣಾರ್ಥಕವಾದ ಪಾ ಧಾತುವಿನಿಂದಾಗಲಿ ಅಥವಾ ಕುಡಿ ಎಂಬರ್ಥವನ್ನು ಕೊಡುವ ಪಾ ಧಾತುವಿನಿಂದಾಗಲಿ

ಅಥವಾ ವೃದ್ಧಿಹೊಂದು ಎಂಬರ್ಥವನ್ನು ಹೇಳುವ ಪ್ಯೈ ಧಾತುವಿನಿಂದಾಗಲಿ ನಿಷ್ಪನ್ನವಾಗಬಹುದೆಂದು ತೋರಿಸಿದ್ದಾರೆ. ಅತ್ಯಂತ ಬಲಯುತವೂ ಬಲಕಾರಕವೂ ಆದ ಅನ್ನವನ್ನು ಸ್ತುತಿಸುತ್ತೇನೆಂದು ಉಪದೇಶಿಸುವ ಋಕ್ಕಿನ ಭಾವಾರ್ಥ.

ಪ್ರಕೃತದಲ್ಲಿ **ಪಿತುಃ** ಎನ್ನುವುದಕ್ಕೆ ಅನ್ನವೆಂದು ಒಂದರ್ಥವನ್ನೂ ಪಿತೃವೆಂದು ಇನ್ನೊಂದರ್ಥವನ್ನೂ ಸಾಯಣರು ಮಾಡಿದ್ದಾರೆ. ಮೊದಲನೆಯ ಅನ್ವಯದಂತೆ **ಪಿತುಃ** ಎಂಬುದು ಪ್ರಥಮಾಂತವಾಗಿ **ಪರಮಾತ್** ಎಂಬುದು ಕ್ರಿಯಾವಿಶೇಷಣವಾಗುತ್ತದೆ. ಪಶುರೂಪವಾದ ಅನ್ನವು ಉತ್ಕೃಷ್ಟವಾಗಿರುವ ನಿಮಿತ್ತವಾಗಿ **ಪ್ರಪರಿನೀಯತೇ** ಎಂದೂ, ಎರಡನೆಯ ಅನ್ವಯದಂತೆ **ಪಿತುಃ** ಎಂಬುದು ಪಂಚಮ್ಯಂತವಾಗಿ **ಪರಮಾತ್** ಎಂಬ ಪದಕ್ಕೆ ವಿಶೇಷಣವಾಗುತ್ತದೆ. ಉತ್ಕೃಷ್ಟವಾದುದೂ, ಎಲ್ಲಕ್ಕೂ ಆಧಾರಭೂತವಾದದ್ದೂ, ಯಜ್ಞಪಾಲಕವಾದದ್ದೂ ಆದ ಗಾರ್ಹಪತ್ಯಾಗ್ನಿಯಿಂದ ಪ್ರಪರಿನೀಯತೇ ಎಂದರ್ಥವಾಗುತ್ತದೆ.

**ಪ್ರಕ್ಷುಧಃ—ಪ್ರಕರ್ಷೇಣ ಬುಭುಕ್ಷಿತಾ ಭೋಕ್ತುಮಿಷ್ಯಮಾಣಾಃ ।** ಆಹುತಿಗಳನ್ನು ಭಕ್ಷಿಸಲು ಆತುರವುಳ್ಳವು ಎಂದು ಒಂದರ್ಥವೂ ಅಥವಾ **ಪಶುಪುರೋಡಾಶಾದಿಷು ದಾಹಮಧ್ಯೇ ಧೀಯಮಾನಾಃ ।** ಪಶುಪುರೋಡಾಶಾದಿಗಳ ನಡುವೆ ದಾಹಾತ್ಮಕವಾಗಿ ಎದ್ದು ನಿಲ್ಲತಕ್ಕವು ಎಂದು ಇನ್ನೊಂದರ್ಥವೂ ಸಾಧ್ಯವಾಗುತ್ತದೆ. **ವೀರುಧಃ** ಎಂಬ ಪದಕ್ಕೆ ವಿಶೇಷಣವಾಗಿದೆ.

**ವೀರುಧಃ ವೀರುಧ ಓಷಧಯೋ ಭವಂತಿ ವಿರೋಹಣಾತ್ ।** ವಿಶೇಷವಾದ ರೀತಿ ಬೆಳೆಯುವುದರಿಂದ (ಲತಾರೂಪವಾದ) ಪೊದೆಗಳಿಗೆ ಈ ಹೆಸರು ಎಂದು ನಿರ್ವಚನವನ್ನು ಹೇಳಿ (ನಿ. ೬-೩)

**ಓಷಧೀಃ ಪ್ರತಿ ಮೋದಧ್ವಂ ಪುಷ್ಪವತೀಃ ಪ್ರಸೂವರೀಃ ।**
**ಅಶ್ವಾ ಇವ ಸಜಿತ್ವರೀರ್ವೀರುಧಃ ಪಾರಯಿಷ್ಣ್ವಃ ॥**
(ಋ ಸಂ. ೧೦-೯೭-೩)

ಎಂಬ ಋಕ್ಕನ್ನು ಉಪಹರಿಸಿ ಇಲ್ಲಿರುವ **ವೀರುಧಃ** ಎಂಬ ಪದದ ಸ್ವಾರಸ್ಯವನ್ನು ತೋರಿಸಿದ್ದಾರೆ.

**ದಂಸು**—ದಂತಗಳಂತಿರುವ ಜ್ವಾಲೆಗಳ ನಡುವೆಯೆಂದರ್ಥ.

**ಇನ್ವತಃ—ಇನ್ವತಿ, ನಕ್ಷತಿ** ಇತ್ಯಾದಿ ವ್ಯಾಪ್ತಿಕರ್ಮನಾಮಗಳಲ್ಲಿ ಪಠಿತವಾಗಿದೆ. (ನಿ ೩-೧೦) ವ್ಯಾಪಿಸುವಂತೆ ಮಾಡುತ್ತಾರೆಂದರ್ಥ.

**ಘೃಣಾ**—ಜ್ವಾಲೆಯಿಂದ ಪ್ರಕಾಶಿಸುವ ಅರ್ಥವನ್ನು ಸೂಚಿಸತಕ್ಕ **ಜಮತ್, ಅರ್ಚಿಃ, ಶೋಚಿಃ** ಇತ್ಯಾದಿ ನಾಮಗಳಲ್ಲಿ **ಘೃಣಿ**ಶಬ್ದವು ಪಠಿತವಾಗಿರುವುದರಿಂದ (ನಿ. ೨-೨೮) ಪ್ರಕಾಶಮಾನನಾದವನು ಎಂದಾಗಲಿ ಅಥವಾ **ಘೃಣಾ** ಎಂಬ ಪದಕ್ಕೆ ಕಾರುಣ್ಯವೆಂದರ್ಥವಿರುವುದರಿಂದ ಯಜಮಾನನಲ್ಲಿ ದಯೆಯನ್ನು ತೋರಿಸತಕ್ಕವನು ಎಂದಾಗಲಿ ಅರ್ಥವಾಗಿ ಅಗ್ನಿಗೆ ವಿಶೇಷಣವಾಗಿದೆ.

ಪ್ರಜ್ವಲಿತನಾದೊಡನೆಯೇ ಅಗ್ನಿಯು **ಶುಚಿ**ಯಾಗಿಯೂ **ಘೃಣ**ನಾಗಿಯೂ, **ಯವಿಷ್ಠ**ನಾಗಿಯೂ ಆಗುವನು ಎಂದು ಈ ಋಕ್ಕಿನಲ್ಲಿರುವ ವರ್ಣನೆಯು

**ಅಗ್ನಿರ್ಹೋತಾ ನಿಷಸಾದಾ ಯಜೀಯಾನುಪಸ್ಥೇ ಮಾತುಸ್ಸುರಭಾವು ಲೋಕೇ । ಯುವಾ ಕವಿಃ**
**ಪುರುನಿಷ್ಠಃ । ಋತಾವಾ ಧರ್ತಾ ಕೃಷ್ಟೀನಾಮುತ ಮಧ್ಯ ಇದ್ಧಃ ॥**

**ಅಗ್ನಿಶ್ಶುಚಿವ್ರತತಮಶ್ಶುಚಿರ್ವಿಪ್ರಶ್ಶುಚಿಃಕವಿಃ । ಶುಚೀ ರೋಚತ ಆಹುತಃ ॥**
(ತೈ. ಸಂ. ೧-೩-೧೪)

ಇತ್ಯಾದಿ ಸಂಹಿತಾವಾಕ್ಯಗಳಲ್ಲಿಯೂ ಅಗ್ನಿಯ ಪ್ರಭಾವವನ್ನು ತೋರಿಸುತ್ತದೆ.

ವ್ಯಾಕರಣಪ್ರಕ್ರಿಯಾ

**ಪಿತುಃ**—ಪಾ ಪಾನೇ. ಧಾತು. **ಪಃ ಕಿಚ್ಚ** (ಉ. ಸೂ. ೧-೭೦) ಎಂಬುದರಿಂದ ತು ಪ್ರತ್ಯಯ ಕಿತ್ವದಿಂದ **ಘುಮಾಸ್ಥಾ**—ಎಂಬುದರಿಂದ ಧಾತುವಿಗೆ ಇತ್ವ. ವ್ಯತ್ಯಯದಿಂದ ಷಷ್ಠಿಗೆ ಪ್ರಥಮಾ ವಿಭಕ್ತಿ ಬಂದಿದೆ.

**ನೀಯತೇ**—ಣೀಞ್ ಪ್ರಾಪಣೇ ಧಾತು ಕರ್ಮಣಿ ಲಟ್ ಪ್ರಥಮಪುರುಷ ಏಕವಚನಾಂತರೂಪ. **ನಿಪಾತೈರ್ಯದ್ಯದಿ**—(ಪಾ. ಸೂ. ೮-೧-೩೦) ಎಂಬುದರಿಂದ ನಿಘಾತಪ್ರತಿಷೇಧ ಬರುವುದರಿಂದ ಯಕ್‌ಸ್ವರ ಉಳಿಯುತ್ತದೆ.

**ಪೃಕ್ಷುಧಃ**—ಪ್ರ ಉಪಸರ್ಗ. ಕ್ಷುಧ ಬುಭುಕ್ಷಾಯಾಂ ಧಾತು. **ಬಹುಲಂ ಛಂದಸಿ** ಎಂಬುದರಿಂದ ಪ್ರ ಎಂಬಲ್ಲಿ ಸಂಪ್ರಸಾರಣ. **ಸಂಪ್ರಸಾರಣಾಚ್ಚ** ಸೂತ್ರದಿಂದ ಪೂರ್ವರೂಪ. **ಕ್ವಿಪ್ ಚ** (ಪಾ ಸೂ ೩-೨-೭೬) ಎಂಬುದರಿಂದ ಧಾತುವಿಗೆ ಕ್ವಿಪ್ ಪ್ರತ್ಯಯ. ಪ್ರಥಮಾ ಬಹುವಚನಾಂತರೂಪ **ಗತಿಕಾರಕೋಪಪದಾತ್‌ಕೃತ್** (ಪಾ ಸೂ ೬-೨-೧೩೯) ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

**ರೋಹತಿ**—ರುಹ ಬೀಜಜನ್ಮನಿ ಪ್ರಾದುರ್ಭಾವೇ ಚ. ಧಾತು. ಲಟ್ ಪ್ರಥಮಪುರುಷ ಏಕವಚನಾಂತರೂಪ. **ವ್ಯತ್ಯಯೋ ಬಹುಲಮ್** ಎಂಬುದರಿಂದ ಬಹುವಚನಕ್ಕೆ ಏಕವಚನ ಪ್ರತ್ಯಯ ಬಂದಿದೆ. ಅತಿಜಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ

**ಉಭಾ—ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ದ್ವಿವಚನ ಔಕಾರ ವಿಭಕ್ತಿಗೆ ಆಕಾರಾದೇಶ.

**ಇನ್ವತಃ**—ಇವಿ ವ್ಯಾಪ್ತೌ ಧಾತು. ಲಟ್ ಪ್ರಥಮಪುರುಷ ದ್ವಿವಚನದಲ್ಲಿ ತಸ್ ಪ್ರತ್ಯಯ. **ಇದಿತೋ ನುಮ್ ಧಾತೋಃ**—(ಪಾ. ಸೂ. ೭-೧-೫೮) ಎಂಬುದರಿಂದ ನುಮಾಗಮ- ಶಪ್ ವಿಕರಣ. ಪ್ರತ್ಯಯಸ್ವರಕ್ಕೆ ರುತ್ವವಿಸರ್ಗ. **ನಿಪಾತೈರ್ಯದ್ಯದಿ**—(ಪಾ. ಸೂ. ೮-೧-೩೦) ಎಂಬುದರಿಂದ ಯದ್ಯೋಗವಿರುವುದರಿಂದ ನಿಘಾತಪ್ರತಿಷೇಧ ಬರುತ್ತದೆ. ಅದುಪದೇಶದ ಪರದಲ್ಲಿ ಲಸಾರ್ವಧಾತುಕ ಬಂದುದರಿಂದ **ತಾಸ್ಯನುದಾತ್ತೇತ್**—(ಪಾ. ಸೂ. ೬-೧-೧೮೬) ಎಂಬುದರಿಂದ ಅದು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಯವಿಷ್ಠ**—ಅತಿಶಯೇನ ಯುವಾ ಯವಿಷ್ಠಃ **ಅತಿಶಾಯನೇ ತಮಬಿಷ್ಠನೌ** (ಪಾ. ಸೂ. ೫-೩-೫೫) ಎಂಬುದರಿಂದ ಇಷ್ಠನ್ ಪ್ರತ್ಯಯ. **ಸ್ಥೂಲದೂರ**—(ಪಾ. ಸೂ. ೬-೪-೧೫೬) ಎಂಬುದರಿಂದ ಪ್ರತ್ಯಯವು ಪರವಾದಾಗ ಯುವನ್ ಎಂಬಲ್ಲಿರುವ ಯಣಾದಿಗೆ (ವನ್) ಲೋಪ. ಪೂರ್ವದ ಉಕಾರಕ್ಕೆ ಗುಣ. ಅಚ್ ಪರವಾದುದರಿಂದ ಅವಾದೇಶ. ಪ್ರತ್ಯಯ ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ

**ಘೃಣಾ**—ಛಾಂದಸವಾಗಿ ಮತುಪಿಗೆ ಲೋಪ. **ಸುಪಾಂ ಸುಲುಕ್**—ಎಂಬುದರಿಂದ ವಿಭಕ್ತಿಗೆ ಆಕಾರಾದೇಶ.

ಅಭವತ್—ಭೂ ಸತ್ತಾಯಾಂ ಧಾತುಃ. ಲಙ್ ಪ್ರಥಮಪುರುಷ ಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ. ॥ ೬ ॥

ಸಂಹಿತಾಪಾಠಃ

ಆದಿನ್ಮಾತೃ ರಾವಿಶದ್ಯಾಸ್ವಾ ಶುಚಿರಹಿಂಸ್ಯಮಾನ ಉರ್ವಿಯಾ ವಿ ವಾವೃಧೇ।
ಅನು ಯತ್ಪೂರ್ವಾ ಅರುಹತ್ಸನಾಜುವೋ ನಿ ನವ್ಯಸೀಷ್ವವರಾಸು ಧಾವ-
ತೇ ॥ ೫ ॥

ಪದಪಾಠಃ

ಆತ್ । ಇತ್ । ಮಾತೃಃ । ಆ । ಅವಿಶತ್ । ಯಾಸು । ಆ । ಶುಚಿಃ । ಅಹಿಂಸ್ಯಮಾನಃ । ಉರ್ವಿಯಾ । ವಿ । ವವೃಧೇ ।

ಅನು । ಯತ್ । ಪೂರ್ವಾಃ । ಅರುಹತ್ । ಸನಾಽಜುವಃ । ನಿ । ನವ್ಯಸೀಷು । ಅವರಾಸು । ಧಾವತೇ ।।೫।।

ಸಾಯಣಭಾಷ್ಯಂ

ಅಯಮಗ್ನಿರಾ ಸುಚಿರ್ದೀಪ್ತಃ ಸನ್ ಆದಿತ್ ಪೂರ್ವಮಂತ್ರೇ ಯವಿಷ್ಠೋಽಭವದಿತ್ಯುಕ್ತ-ತ್ವಾತ್ ತದನಂತರಮೇವ ಮಾತ್ರ್ಯರುತ್ಪಾದಯಿತ್ರೀರ್ಮಾತೃಸ್ಥಾನೀಯಾ ದಶ ದಿಶ ಆವಿಶತ್ । ಸರ್ವತಃ ಪ್ರವಿಶತಿ । ಪೂರ್ವತ್ರ ದಶಪ್ರಮತಿಂ ಜನಯಂತ ಯೋಷಣ ಇತ್ಯುಕ್ತತ್ವಾತ್ ದಿಶಾಂ ಮಾತೃತ್ವಂ । ದಿಕ್ಷು ಪ್ರಕಾಶೇನ ವ್ಯಾಪ್ತ ಇತ್ಯರ್ಥಃ । ಮಾತರೋ ವಿಶೇಷ್ಯಂತೇ । ಯಾಸು ಮಾತೃಷ್ವಹಿಂಸ್ಯಮಾನಃ ಪರೈರ-ಪೀಡ್ಯಮಾನ ಉರ್ವಿಯೋರ್ವತಿಪ್ರಭೂತಂ ವಿ ವವೃಧೇ ವಿವಿಧಂ ಪ್ರವೃದ್ಧೋಽಭವತ್ ತಾಸ್ವಾವಿಶತ್ । ಯಥಾ ಲೋಕೇ ಕಶ್ಚಿತ್ತೇಜಸ್ವೀ ಜನನ್ಯಾಃ ಸ್ತನಪಾನಪರಿಪೀಡಾದಿಭಿಃ ಸಮ್ಯಕ್ ಪೋಷಿತೋ ಲೋಕೇ ಪ್ರಕಾಶ್ಯ ಪುನರಾಗತ್ಯ ಮಾತರಮಾಲಿಂಗತಿ ತದ್ವದಿತಿ ಭಾವಃ । ಕಸ್ಮಿನ್ಕಾಲ ಇತಿ ತತ್ರಾಹ । ಯದ್ಯದಾ ಸನಾಜುವೋ ದೀರ್ಘಕಾಲವಿಯೋಗಿನ್ಯಃ ಸ್ಥಾಪನಕಾಲ ಏವ ಪ್ರಕ್ಷಿಪ್ತಾಃ ಅತ ಏವ ಪೂರ್ವಾಃ ಪ್ರಥಮ-ಭಾವಿನೀರೋಷಧೀರನುಕ್ರಮೇಣಾರುಹತ್ ಆರೋಹತಿ॥ ರುಹೇಶ್ಛಂದಸೋ ಲುಙ್ । ಕೃಮೃದೃರುಹಿಭ್ಯ-ಶ್ಛಂದಸೀತಿ ಚ್ಲೇರಙಾದೇಶಃ ॥ ಉಪರಿ ಪ್ರಜ್ವಲತಿ । ತಥಾ ನವ್ಯಸೀಷು ನವತರಾಸು ಅತ ಏವಾ-ವರಾಸು ಅತ ಏವ ಪೂರ್ವಾಪೇಕ್ಷಯಾ ನಿಕೃಷ್ಟಾಸು ಪಶ್ಚಾದ್ಭಾವಿನೀಷ್ವೋಷಧೀಷು ನಿ ಧಾವತೇ ನಿತರಾಂ ನೀಚೈರ್ವಾ ಗಚ್ಛತಿ । ಅಂತಃಪ್ರವಿಶತೀತ್ಯರ್ಥಃ । ಯದಾ ಕಾಷ್ಠಾನಾಮಧಸ್ತಾದುಪರಿಷ್ಟಾಚ್ಚ ಪ್ರವಿಶ್ಯ ಜ್ವಲತಿ ತದಾ ದಿಕ್ಷು ಪ್ರಕಾಶಿತೋಽಭವದಿತ್ಯರ್ಥಃ ॥

ಪ್ರತಿಪದಾರ್ಥ

(ಅಯಂ ಅಗ್ನಿಃ—ಈ ಅಗ್ನಿಯು) । ಆ ಶುಚಿಃ—ಅತ್ಯಂತ ಪ್ರಕಾಶಮಾನನಾಗಿ । ಆದಿತ್—ಪೂರ್ವ ಮಂತ್ರದಿಂದ ಸ್ತುತನಾದೊಡನೆಯೇ । ಯತ್—ಯಾವಾಗ । ಸನಾಜುವಃ—ಬಹಳ ಹಿಂದಿನಿಂದಲೂ ಸಿದ್ಧವಾಗಿ

ದ್ದವೂ । **ಪೂರ್ವಾಃ**—(ಅದ್ದರಿಂದಲೇ) ಶ್ರೇಷ್ಠವಾಗಿ (ಒಣಗಿ) ಇದ್ದವೂ ಆದ ಮೂಲಿಕಾದಿಗಳನ್ನು । **ಅನು**—ಕ್ರಮಕ್ರಮವಾಗಿ । **ಅರುಹತ್**—ಆಕ್ರಮಿಸಿ ಉರಿಸಿದನೋ, (ಹಾಗೆಯೇ) । **ನವ್ಯಸೀಷು**—ನೂತನವಾದವೂ । **ಅವರಾಸು**—(ಅದ್ದರಿಂದಲೇ) ಹೆಚ್ಚು ಶ್ರೇಷ್ಠವಲ್ಲದೇ (ಹೆಚ್ಚು ಒಣಗದೇ) ಇರುವವೂ ಆದ ಮೂಲಿಕಾದಿಗಳಲ್ಲಿ । **ನಿ ಧಾವತೇ**—ಒಳಹೊಕ್ಕು ಉರಿಸುತ್ತಾನೆಯೋ, ಆಗ । **ಯಾಸು**—ಯಾವ ದಶದಿಕ್ಕುಗಳಲ್ಲೂ । **ಅಹಿಂಸ್ಯಮಾನಃ**—(ಇತರರಿಂದ) ಹಿಂಸಿಸಲ್ಪಡದೆ । **ಉರ್ವಿಯಾ**—ಅತಿ ಪ್ರಭೂತವಾಗಿ । **ವಿ ವವೃಧೇ**—ವಿಧವಿಧವಾದ ಜ್ವಾಲೆಗಳಿಂದ ಬೆಳೆದನೋ ಅಂತಹ । **ಮಾತೄಃ**—ಮಾತೃಸ್ಥಾನಗಳಲ್ಲಿರುವ ದಶದಿಕ್ಕುಗಳನ್ನೂ । **ಆ ಅವಿಶತ್**—ಸುತ್ತಲೂ ಆಕ್ರಮಿಸಿಕೊಳ್ಳುತ್ತಾನೆ.

### ಭಾವಾರ್ಥ

ಅತ್ಯಂತ ಪ್ರಕಾಶಮಾನನಾದ ಈ ಅಗ್ನಿಯು ಪೂರ್ವಮಂತ್ರದಿಂದ ಸ್ತುತನಾದೊಡನೆಯೇ ಬಹಳ ಪ್ರಾಚೀನವಾದವೂ ಶ್ರೇಷ್ಠವಾದವೂ ಆದ ಮೂಲಿಕೆಗಳನ್ನೂ ಮತ್ತು ನೂತನವಾದವೂ ಅಷ್ಟು ಶ್ರೇಷ್ಠವಲ್ಲದವೂ ಆದ ಮೂಲಿಕಾದಿಗಳನ್ನೂ ಸಹ ಕ್ರಮಕ್ರಮವಾಗಿ ಆಕ್ರಮಿಸಿ ಉರಿಸುತ್ತಾನೆ. ಆಗ ಇತರರಿಂದ ಅಹಿಂಸ್ಯನಾಗಿಯೂ ಅತಿ ಪ್ರಭೂತವಾಗಿಯೂ ಯಾವ ದಶದಿಕ್ಕುಗಳಲ್ಲೂ ವಿಧವಿಧವಾದ ಜ್ವಾಲೆಗಳಿಂದ ಬೆಳೆಯುತ್ತಾನೆಯೋ ಅಂತಹ ಮಾತೃಸ್ಥಾನಗಳಲ್ಲಿರುವ ದಶದಿಕ್ಕುಗಳನ್ನೂ ಸುತ್ತಲೂ ಆಕ್ರಮಿಸಿ ಪ್ರಕಾಶಿಸುತ್ತಾನೆ.

## English Translation

Therefore has the brilliant Agni entered the maternal (quarters of space), amidst which, pure and unharmed he had evolved into magnitude so that he mounted (the bushes) placed before him, as he had (consumed others) prior to them, and runs rapidly among the more recent and inferior branches.

### ವಿಶೇಷ ವಿಷಯಗಳು

**ವಿ ವವೃಧೇ—ವಿವಿಧಂ ಪ್ರವೃದ್ಧಃ ಅಭವತ್** ವಿಧವಿಧವಾದ ರೂಪಗಳಿಂದ ಜಗತ್ತನ್ನಾವರಿಸಿ ಪ್ರವೃದ್ಧನಾದನು ಎಂದು ಅಗ್ನಿಯ ಬೆಳವಣಿಗೆಯನ್ನು ವರ್ಣಿಸಿದೆ.

**ಆದಿತ್**—ಎಂಬ ಪದದಿಂದ ಅಗ್ನಿಯ ಬೆಳವಣಿಗೆಯ ಕಾಲವೂ ಕಾರಣವೂ ಹೇಳಲ್ಪಟ್ಟಿದೆ. ಹಿಂದಿನ ಮಂತ್ರದಲ್ಲಿ ಯುವಿಷ್ಠಃ ಅಭವತ್ ಎಂದು ಹೇಳಿದೆ. ಅವನು ಯುವಿಷ್ಠನಾದೊಡನೆಯೇ ಪ್ರವೃದ್ಧನಾದನು ಎಂದರ್ಥ. ಅಥವಾ ಪೂರ್ವಮಂತ್ರದಿಂದ ಸ್ತುತನಾದೊಡನೆಯೇ ಎಂದರ್ಥ. ಚೆನ್ನಾಗಿ ಒಣಗಿ ಅಗ್ನಿವ್ಯಾಪನಕ್ಕೆ ಅನುಕೂಲವಾದವೂ, ಚೆನ್ನಾಗಿ ಒಣಗದೇ ಹಸಿಯಾಗಿರತಕ್ಕವೂ ಆದ ಸಸ್ಯಮೂಲಿಕಾದಿಗಳನ್ನೆಲ್ಲಾ ಪ್ರವೇಶಿಸಿ ಹರಡಿದನೆಂದು ವರ್ಣಿಸಿದೆ. ಅಗ್ನಿವ್ಯಾಪನದ ಇದೇ ವರ್ಣನೆಯನ್ನು ಅನೇಕಕಡೆಗಳಲ್ಲಿ ಹೇಳಿದೆ.

**ಸನಾಜುವಃ**—ಬಹಳ ಕಾಲದಿಂದಲೂ ಇದ್ದು ಪ್ರಾಚೀನವಾಗಿದ್ದರೂ ಸಹ. ಅದ್ದರಿಂದಲೇ ಅಗ್ನಿಯ ಆಕ್ರಮಣಕಾಲದಲ್ಲಿ ಯೋಗ್ಯವಿದ್ದವೆಂದರ್ಥ.

ವ್ಯಾಕರಣಪ್ರಕ್ರಿಯಾ

**ಅವಿಶತ್**—ವಿಶ ಪ್ರವೇಶನೇ. ಧಾತು. ಲಙ್ ಪ್ರಥಮಪುರುಷ ಏಕವಚನಾಂತರೂಪ. **ತಿಙ್ಙತಿಙಃ** ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಅಹಿಂಸ್ಯಮಾನಃ**–ಹಿಸಿ ಹಿಂಸಾಯಾಂ ಧಾತು. **ಇದಿತೋ ನುಮ್ ಧಾತೋಃ** ಎಂಬುದರಿಂದ ನುಮಾಗಮ. ಕರ್ಮಣಿಯಲ್ಲಿ ಲಡರ್ಥದಲ್ಲಿ ಶಾನಚ್ ಪ್ರತ್ಯಯ. **ಸಾರ್ವಧಾತುಕೇ ಯಕ್** (ಪಾ. ಸೂ. ೩-೧-೬೭) ಎಂಬುದರಿಂದ ಯಕ್. **ಆನೇಮುಕ್** (ಪಾ. ಸೂ. ೭-೨-೮೨) ಎಂಬುದರಿಂದ ಮುಕಾಗಮ. ನಞ್‌ತತ್ಪುರುಷಸಮಾಸ. **ತತ್ಪುರುಷೇ ತುಲ್ಯಾರ್ಥ**—(ಪಾ. ಸೂ. ೬-೨-೨) ಎಂಬುದರಿಂದ ಅವ್ಯಯಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಉರ್ವಿಯಾ—ಇಯಾಡಿಯಾಜೀಕಾರಾಣಾಮುಪಸಂಖ್ಯಾನಮ್** (ಪಾ.ಸೂ. ೬–೧–೩೯–೧) ಎಂಬುದರಿಂದ ವಿಭಕ್ತಿಗೆ ಇಯಾಚ್ ಆದೇಶ. ಚಿತ್ತಾದುದರಿಂದ ಅಂತೋದಾತ್ತಸ್ವರ ಬರುತ್ತದೆ.

**ವಾವೃಧೇ**—ವೃಧು ವೃದ್ಧೌ ಧಾತು. ಲಿಟ್ ಪ್ರಥಮಪುರುಷ ಏಕವಚನಾಂತರೂಪ. ಛಾಂದಸವಾಗಿ ಸಂಹಿತಾದಲ್ಲಿ ಅಭ್ಯಾಸಕ್ಕೆ ದೀರ್ಘ ಬರುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಅರುಹತ್**—ರುಹ ಬೀಜಜನ್ಮನಿ ಪ್ರಾದುರ್ಭಾವೇ ಚ- ಧಾತು. **ಛಂದಸಿ ಲುಙ್‌ಲಙ್‌ಲಿಟಃ** ಎಂಬುದರಿಂದ ವರ್ತಮಾನಾರ್ಥದಲ್ಲಿ ಲುಙ್. ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಇತಶ್ಚ** ಎಂಬುದರಿಂದ ಇಕಾರ ಲೋಪ. **ಕೃಮೃದೃರುಹಿಭ್ಯಶ್ಛಂದಸಿ** (ಪಾ.ಸೂ. ೩-೧-೫೯) ಎಂಬುದರಿಂದ ಚ್ಲಿಗೆ **ಅಙಾದೇಶ**. ಅಂಗಕ್ಕೆ ಅಡಾಗಮ. ಅಙ್ ಙಿತ್ತಾದುದರಿಂದ ಗುಣಬರುವುದಿಲ್ಲ. **ನಿಪಾತೈರ್ಯದ್ಯದಿ**—(ಪಾ. ಸೂ. ೮-೧-೩೧) ಎಂಬುದರಿಂದ ನಿಘಾತ ಪ್ರತಿಷೇಧ ಬರುವುದರಿಂದ ಅಡಾಗಮ ಉದಾತ್ತವಾಗುವುದರಿಂದ ಆದ್ಯುದಾತ್ತವಾದ ಪದವಾಗುತ್ತದೆ.

**ನವ್ಯಸೀಷು**—ನವ ಶಬ್ದದಮೇಲೆ ಅತಿಶಯಾರ್ಥದಲ್ಲಿ ಈಯಸುನ್ ಪ್ರತ್ಯಯ ಸ್ತ್ರೀತ್ವವಿವಕ್ಷಾಮಾಡಿದಾಗ **ಉಗಿತಶ್ಚ** ಎಂಬುದರಿಂದ ಙೀಪ್. **ಯಸ್ಯೇತಿ ಚ** ಎಂಬುದರಿಂದ ನವಶಬ್ದದ ಅಂತ್ಯ ಅಕಾರಕ್ಕೆ ಲೋಪ. ಛಾಂದಸವಾಗಿ ಈಯಸುನಿನ ಈಕಾರಕ್ಕೆ ಲೋಪ. ಈಯಸುನ್ ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಧಾವತೇ**—ಧಾವು ಗತಿಶುದ್ಧ್ಯೋಃ ಧಾತು. ಲಟ್ ಪ್ರಥಮಪುರುಷ ಏಕವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ‖ ೫ ‖

——— :O: ———

ಸಂಹಿತಾಪಾಠಃ

ಆದಿದ್ಧೋತಾರಂ ವೃಣತೇ ದಿವಿಷ್ಟಿಷು ಭಗಮಿವ ಪಪೃಚಾನಾಸ ಋಂಜ-
ತೇ ।

ದೇವಾನ್ಯತ್ಕ್ರತ್ವಾ ಮಜ್ಮನಾ ಪುರುಷ್ಟುತೋ ಮರ್ತಂ ಶಂಸಂ ವಿಶ್ವಧಾ
ವೇತಿ ಧಾಯಸೇ ॥ ೬ ॥

। ಪದಪಾಠಃ ।

ಆತ್ । ಇತ್ । ಹೋತಾರಂ । ವೃಣತೇ । ದಿವಿಷ್ಟಿಷು । ಭಗಂऽಇವ । ಪಪೃಚಾನಾಸಃ । ಋಂಜತೇ ।
ದೇವಾನ್ । ಯತ್ । ಕ್ರತ್ವಾ । ಮಜ್ಮನಾ । ಪುರುऽಸ್ತುತಃ । ಮರ್ತಂ । ಶಂಸಂ । ವಿಶ್ವಧಾ । ವೇತಿ ।
ಧಾಯಸೇ ॥ ೬ ॥

ಸಾಯಣಭಾಷ್ಯಂ

ಹೋತಾರಂ ಹೋಮನಿಷ್ಪಾದಕಮಾಹ್ವಾತಾರಂ ವಾ ದೇವಾನಾಂ ಈದೃಶಮಗ್ನಿಂ ದಿವಿಷ್ಟಿಷು ದಿವಸೈಷಣೇಷು ನಿಮಿತ್ತಭೂತೇಷು ವೃಣತೇ । ಸಂಭಜತೇ । ಆದಿದನಂತರಮೇವ ತಥಾ ಪಪೃಚಾನಾಸೋ ಹವಿಷಾ ಸ್ತುತ್ಯಾ ಚ ಸಂಪೃಚಾನಾ ಋತ್ವಿಜೋ ಯಜಮಾನಾಃ ॥ ಪೃಚೇಶ್ಛಾಂದಸಸ್ಯ ಲಿಟಃ ಕಾನಚ್ ॥ ಋಂಜತೇ । ಪ್ರಸಾಧಯಂತಿ । ಕಿಮಿವ । ಭಗಮಿವ । ತಂ ಯಥಾ ಜನಾಃ ಪ್ರಸಾಧಯಂತಿ ತದ್ವತ್ । ಯದ್ವಾ । ಮಹಾಂತಂ ರಾಜಾನಮಿವ ಸೂರ್ಯದೀಪ್ತಿವತ್ಪೂಜ್ಯಮಿತ್ಯರ್ಥಃ । ಋಂಜತಿಃ ಪ್ರಸಾಧನಕರ್ಮೇತಿ ಯಾಸ್ಕಃ । ಯದ್ಯಸ್ಮಾದಯಮಗ್ನಿಃ ಪುರುಷ್ಟುತೋ ಬಹುಭಿರ್ಬಹುಧಾ ವಾ ಸ್ತೂಯಮಾನಃ ಕ್ರತ್ವಾ ಕ್ರತುನಾ ಕರ್ಮಣಾ ಯಾಗಾದಿರೂಪೇಣ ಮಜ್ಮನಾ ಶಾರೀರೇಣ ಬಲೇನ ಚ ಯುಕ್ತಾನ್ದೇವಾನ್ಹವ್ಯವಹತ್ಯರ್ನತ್ವಿಜೋ ಯಜ್ಞಭುಜೋ ದೇವಾನ್ವಾ ಕ್ರತ್ವಾ ಮಜ್ಮನಾ ಚ ಯೋಜಯಿತುಂ ತಥಾ ಮರ್ತಂ ಯಜಮಾನಂ ಶಂಸಂ ಸ್ತುತಿಂ ಚ ಸ್ತುತ್ಯಂ ವಾ ತಂ ವಿಶ್ವಧಾ ವಿಶ್ವಧನೋ ಯದ್ವಾ ವಿಶ್ವಾತ್ಮಕೋऽಯಂ ವೇತಿ ಪೂರ್ವೋಕ್ತಾನ್ಕಾಮಯತೇ । ಕಿಮರ್ಥಂ । ಧಾಯಸೇ ಹವಿರ್ಲಕ್ಷಣಾನ್ನಾಯ । ತಸ್ಮಾದ್ಧೋತಾರಮಗ್ನಿಂ ವೃಣತೇ ಋಂಜತೇ ಚ ॥

ಪ್ರತಿಪದಾರ್ಥ

ಪಪೃಚಾನಾಸಃ—(ಹವಿಸ್ಸಿನಿಂದಲೂ ಸ್ತೋತ್ರದಿಂದಲೂ) ಪೂಜಿಸತಕ್ಕ ಋತ್ವಿಕ್ಕುಗಳೂ ಮತ್ತು ಯಜಮಾನರೂ । ಹೋತಾರಂ— ಹೋಮಸಂಪಾದಕನಾದ ಅಥವಾ ದೇವತೆಗಳಿಗೆ ಆಹ್ವಾನವನ್ನುಕೊಡುವವನಾದ ಅಗ್ನಿಯನ್ನು । ದಿವಿಷ್ಟಿಷು - ದೇವತೆಗಳ ತೃಪ್ತ್ಯರ್ಥವಾಗಿ । ವೃಣತೇ—ಪೂಜಿಸುತ್ತಾರೆ । ಆದಿತ್—ಅನಂತರವೇ। ಭಗಮಿವ—ಭಗರೂಪನಾದ ಆದಿತ್ಯನನ್ನು ಅಥವಾ ರಾಜನನ್ನು ಪೂಜಿಸಿ ಅಲಂಕರಿಸುವಂತೆ। ಋಂಜತೇ—ಅಲಂಕರಿಸುತ್ತಾರೆ। ಯತ್—ಯಾತಕ್ಕೆಂದರೆ । ಪುರುಷ್ಟುತಃ—ಅನೇಕ ವಿಧವಲ್ಲಿ ಅಥವಾ ಅನೇಕರಿಂದ ಸ್ತುತಿಸಲ್ಪಡುವವನೂ। ವಿಶ್ವಧಾ—ಸಕಲವನ್ನೂ ರಕ್ಷಿಸಿ ಎತ್ತಿ ಹಿಡಿಯುವವನೂ ಆದ ಅಗ್ನಿಯು । ಕ್ರತ್ವಾ—ಯಾಗಾದಿರೂಪವಾದ ಕರ್ಮದಿಂದಲೂ ಕೂಡಿ। ಮಜ್ಮನಾ—ಶಾರೀರಕವಾದ ಬಲದಿಂದಲೂ । ದೇವಾನ್—ದೇವತೆಗಳನ್ನೂ ಅಥವಾ ಋತ್ವಿಕ್ಕುಗಳನ್ನೂ । ಶಂಸಂ—ಸ್ತೋತ್ರವನ್ನು ಮಾಡತಕ್ಕ । ಮರ್ತಂ—ಯಜಮಾನನ್ನೂ ಸಹ! ವೇತಿ—ಒಟ್ಟಿಗೆ ಸೇರಿಸುತ್ತಾನೆ ॥

ಭಾವಾರ್ಥ

ಋತ್ವಿಕ್ಕುಗಳೂ ಮತ್ತು ಯಜಮಾನನೂ ಸಹ ಹೋಮಸಂಪಾದಕನಾದ ಅಗ್ನಿಯನ್ನು ದೇವತೆಗಳಿಗೆ ತೃಪ್ತಿಯನ್ನುಂಟುಮಾಡುವ ಉದ್ದೇಶ್ಯದಿಂದ ಪೂಜಿಸುತ್ತಾರೆ. ಅನಂತರ ದೊರೆಗೆ ಅಲಂಕರಿಸಿ ಪೂಜಿಸುವಂತೆ ಇವನನ್ನೂ ಪೂಜಿಸುತ್ತಾರೆ. ಅನೇಕರಿಂದ ಸ್ತುತಿಸಲ್ಪಡುವವನೂ ವಿಶ್ವವನ್ನೆಲ್ಲಾ ರಕ್ಷಿಸಿ ಎತ್ತಿ ಹಿಡಿಯುವವನೂ ಆದ ಅಗ್ನಿಯು ಯಾಗಾದಿ ರೂಪವಾದ ಕರ್ಮದಿಂದಲೂ, ಶಾರೀರಕವಾದ ಬಲದಿಂದಲೂ ಕೂಡಿ ದೇವತೆಗಳನ್ನು ಅಥವಾ ಋತ್ವಿಕ್ಕುಗಳನ್ನೂ ಮತ್ತು ಭಕ್ತನಾದ ಯಜಮಾನನ್ನೂ ಸಹ ಒಟ್ಟಿಗೆ ಸೇರಿಸುತ್ತಾನೆ.

English Translation

Pious worshippers then adore the invoker ( of the gods ), for (the propitiation of) the dwellers in heaven, as (such men) adore a powerful prince, since the manylauded, and all-upholding (Agni) knows how by (holy) act and (bodily) strength to bring together the gods and their mortal worshippers for the sake of obtaining (mutual) sustenance.

ವಿಶೇಷವಿಷಯಗಳು

**ಪಪೃಚಾನಾಸಃ**– ಸಂಪರ್ಕವನ್ನು ಹೊಂದು ಎಂಬರ್ಥವನ್ನು ಕೊಡುವ **ಪೃಚ್** ಧಾತುವಿನಿಂದ ನಿಷ್ಪನ್ನವಾಗಿದೆ. ಋತ್ವಿಕ್ಕುಗಳಿಗೂ ಯಜಮಾನರಿಗೂ ವಿಶೇಷಣವಾಗಿದೆ. ಅಗ್ನಿಯನ್ನು ಪೂಜಿಸತಕ್ಕ ಋತ್ವಿಗಾದಿಗಳ ಪೂಜಾಸಾಧನಗಳಾದ ಹವಿಸ್ಸುಗಳಿಂದಲೂ, ಸ್ತುತಿಗಳಿಂದಲೂ ಕೂಡಿಕೊಂಡಿದ್ದರು ಎಂದರ್ಥ. ತಾದಾತ್ಮ್ಯವನ್ನು ಹೊಂದುವ ಸಂದರ್ಭದಲ್ಲಿ ಈ ಪದವು ಉಪಯೋಗಿಸಲ್ಪಡುತ್ತದೆ. ಉದಾಹರಣೆಗೆ,

**ಅದ್ಭಿಃ ಸೋಮ ಪಪೃಚಾನಸ್ಯ ತೇ ರಸೋಽವ್ಯೋ ವಾರಂ ವಿ ಪವಮಾನ ಧಾವತಿ ।**
**ಸ ಮೃಜ್ಯಮಾನಃ ಕವಿಭಿರ್ಮದಿಂತಮ ಸ್ವದಸ್ವೇಂದ್ರಾಯ ಪವಮಾನ ಪೀತಯೇ ।**
(ಋ. ಸಂ. ೯-೭೪.೯)

ಎಂಬ ಋಕ್ಕಿನಲ್ಲಿ ವಸತೀವರಿಯೆಂಬ ಪರಿಷ್ಕೃತವಾದ ಉದಕದೊಂದಿಗೆ ಮಿಶ್ರಹೊಂದಬೇಕಾದ ಸೋಮವನ್ನು ದ್ದೇಶಿಸಿ **ಪಪೃಚಾನಸ್ಯ ತೇ** ಎಂದು ಸಂಬೋಧಿಸಿದೆ. ಇಲ್ಲಿ ಸೋಮರಸಕ್ಕೂ ಉದಕಕ್ಕೂ ಮಿಶ್ರವಾದನಂತರ ಐಕ್ಯವಿರುವುದರಿಂದ ಈ ಪದದ ಪ್ರಯೋಗವಿದೆ. ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಹವಿರಾದಿಗಳನ್ನು ಅಭಿನ್ನಭಾವದಿಂದ ಹಿಡಿದು ಅತ್ಯಂತ ಭಕ್ತಿಶ್ರದ್ಧೆಗಳಿಂದ ಪೂಜಿಸತಕ್ಕ ಋತ್ವಿಗಾದಿಗಳಿಗೂ ಹವಿರಾದಿಗಳಿಗೂ ಇರುವ ಅಭಿನ್ನವಾದ ಸಂಬಂಧವು ಸೂಚಿತವಾಗಿದೆ.

**ಹೋತಾರಂ**— ಹೋಮನಿಷ್ಪಾದಕಂ ಆಹ್ವಾತಾರಂ ವಾ । ಹವಿರಾದ್ಯರ್ಪಣೆಗಳಿಂದ ಹೋಮಸಂಪಾದಕ ಅಥವಾ ದೇವತೆಗಳಿಗೆ ಆಹ್ವಾನವನ್ನು ಕೊಡತಕ್ಕ ಎಂದು ಹೋತೃವಿಗೆ ಎರಡುವಿಧವಾದ ಕ್ರಿಯೆಗಳುಂಟೆಂದು ಹೋತೃ ಶಬ್ದಕ್ಕೆ ಎರಡು ಅರ್ಥಗಳನ್ನು ಹೇಳಿದೆ. ಇದೇ ಅಭಿಪ್ರಾಯವನ್ನು ಐತರೇಯ ಬ್ರಾಹ್ಮಣದಲ್ಲಿ—

**ಯಜ್ಞೋ ವೈ ದೇವೇಭ್ಯ ಉದಕ್ರಾಮತ್ತಮಿಷ್ಟಿಭಿಃ ಪ್ರೈಷಮೈಚ್ಛನ್ಯದಿಷ್ಟಿಭಿಃ ಪ್ರೈಷಮೈಚ್ಛಂಸ್ತದಿಷ್ಟೀನಾಮಿಷ್ಟಿತ್ವಂ ತಮನ್ವವಿಂದನ್ । ಅನುವಿತ್ತಯಜ್ಞೋ ರಾಧ್ನೋತಿ ಯ ಏವಂ ವೇದ । ಆಹುತಯೋ ವೈ ನಾಮೈತಾ ಯದಾಹುತಯ ಏತಾಭಿರ್ವೈ ದೇವಾನ್ಯಜಮಾನೋ ಹ್ವಯತಿ ತದಾಹುತೀನಾಮಾಹುತಿತ್ವಂ । ಊತಯಃ ಖಲು ವೈ ತಾ ನಾಮ ಯಾಭಿರ್ದೇವಾ ಯಜಮಾನಸ್ಯ ಹವಮಾಯಂತಿ ಯೇ ವೈ ಪಂಥಾನೋ ಯಾಃ ಸ್ರುತಯಸ್ತಾ ವಾ ಊತಯಸ್ತ ಉ ಏವೈತತ್ಸ್ವರ್ಗಯಾಣಾ ಯಜಮಾನಸ್ಯ ಭವಂತಿ ।**

ಒಂದು ಸಲ ಯಜ್ಞವು ದೇವತೆಗಳಿಂದ ದೂರವಾಯಿತು. ಆಗ ಅವರು ಆಹುತಿಯನ್ನು ಅರ್ಪಿಸುವುದರಿಂದ ಅದನ್ನು ಪುನಃ ಪಡೆದರು. ಆಹುತಿಯೆಂದರೆ ದೇವತೆಯ ಹೆಸರನ್ನು ಉದ್ದೇಶಿಸಿ ಆಹ್ವಾನಮಾಡುವುದರ ಮೂಲಕ ಮಾಡತಕ್ಕ ಅರ್ಪಣೆ. ಇಂತಹ ಆಹುತಿಯನ್ನರ್ಪಿಸುವವನಿಗೆ **ಹೋತೃ**ವೆಂದು ಹೆಸರು ಎಂದು ಹೇಳಿದರೆ ಆಗ ಇನ್ನೊಂದು ಪ್ರಶ್ನೆಯು ಏಳುತ್ತದೆ.

**ತದಾಹುರ್ಯದನ್ಯೋ ಜುಹೋತ್ಯಥ ಯೋಽನು ಚಾಹ ಯಜತಿ ಚ ಕಸ್ಮಾತ್ತಂ ಹೋತೇತ್ಯಾಚಕ್ಷತ ಇತಿ ಯದ್ವಾವ ಸ ತತ್ರ ಯಥಾಭಾಜನಂ ದೇವತಾ ಅಮುಮಾವಹಾಮುಮಾವಹೇತ್ಯಾವಾಹಯತಿ ತದೇವ ಹೋತುರ್ಹೋತೃತ್ವಂ ಹೋತಾ ಭವತಿ । ಹೋತೇತ್ಯೇನಮಾಚಕ್ಷತೇ ಯ ಏವಂ ವೇದ ।**

(ಐ. ಬ್ರಾ. ೧-೨)

ಆಹುತಿಯನ್ನರ್ಪಿಸುವವನೇ ಬೇರೆ, ಆಹುತ್ಯರ್ಪಣಕ್ಕೆ ಆಹ್ವಾನವನ್ನು ಕೊಟ್ಟು ಮಂತ್ರವನ್ನುಚ್ಚರಿಸುವವನೇ ಬೇರೆಯಾದರೂ ಸಹ ಅರ್ಪಣಮಂತ್ರವನ್ನುಚ್ಚರಿಸುವವನಿಗೆ ಹೇಗೆ **ಹೋತೃ**ವೆಂಬ ಹೆಸರು ಉಚಿತವಾಗುತ್ತದೆಂಬ ಪ್ರಶ್ನೆಗೆ, ಈ ಮಂತ್ರವನ್ನು ಪಠಿಸತಕ್ಕವನು ಆಯಾ ಅರ್ಪಣಾಪರಿಮಾಣಕ್ಕನುಗುಣವಾಗಿ ಆಯಾ ದೇವತೆಗಳನ್ನು ಕರೆಯುವುದರಿಂದ ಅವನಿಗೂ ಹೋತೃವೆಂಬ ಹೆಸರು ಸರಿಯಾಗಿದೆಯೆಂದು ತಿಳಿಸಿ ಅನಂತರ,

**ಮನೋ ವೈ ಯಜ್ಞಸ್ಯ ಮೈತ್ರಾವರುಣೋ ವಾಗ್ಯಜ್ಞಸ್ಯ ಹೋತಾ ।**

(ಐ. ಬ್ರಾ ೨-೫)

ಎಂಬ ವಾಕ್ಯದಿಂದ ಮಂತ್ರಪಠಿಸುವ ವಾಕ್ಕಿಗೂ ಹೋತೃವಿಗೂ ತಾದಾತ್ಮ್ಯವನ್ನು ಹೇಳಿದೆ ಮತ್ತು—

**ಸೀದ ಹೋತಃ ಸ್ವ ಉ ಲೋಕೇ ಚಿಕಿತ್ವಾನಿತ್ಯಗ್ನಿರ್ವೈ ದೇವಾನಾಂ ಹೋತಾ ತಸ್ಯೈಷ ಸ್ವೋ ಲೋಕೋ ಯದುತ್ತರವೇದೀನಾಭಿಃ .... .... .... ನಿ ಹೋತಾ ಹೋತೃಷದನೇ ವಿದಾನ ಇತ್ಯಗ್ನಿರ್ವೈ ದೇವಾನಾಂ ಹೋತಾ ತಸ್ಯೈತದ್ಧೋತೃಷದನಂ ಯದುತ್ತರವೇದೀನಾಭಿಃ ।**

(ಐ ಬ್ರಾ. ೧-೨೮)

ಇತ್ಯಾದಿ ವಾಕ್ಯಗಳು ಹೋಮನಿಷ್ಪಾದಕನಾದ ಅಗ್ನಿಯನ್ನು ದೇವಹೋತೃವೆಂದು ಸಂಬೋಧಿಸುತ್ತವೆ. ಆದುದರಿಂದ ಪ್ರಕೃತವಾದ ಋಕ್ಕಿನಲ್ಲಿ **ಹೋತಾರಂ** ಎಂಬ ಪದಕ್ಕೆ **ಹೋಮನಿಷ್ಪಾದಕಂ ಆಹ್ವಾತಾರಂ ವಾ** ಎಂದು ಅರ್ಥಮಾಡಿ ಅಗ್ನಿಗೆ ವಿಶೇಷಣವೆಂದು ತೋರಿಸಿದೆ.

**ದಿವಿಷ್ಟಿಷು**—ದಿವಿಷ್ಟಿಷು ದಿವ ಏಷಣೇಷು (ನಿ. ೬-೨೨) ಸ್ವರ್ಗಕ್ಕೆ ಮಾರ್ಗವನ್ನು ಸಂಪಾದಿಸತಕ್ಕ ಯಾಗಕರ್ಮಗಳೆಂದರ್ಥ, ಎಂದು ನಿರುಕ್ತಕಾರರು,

**ಸ್ಥೂರಂ ರಾಧಃ ಶತಾಶ್ವಂ ಕುರುಂಗಸ್ಯ ದಿವಿಷ್ಟಿಷು ।**
**ರಾಜ್ಞಸ್ತ್ವೇಷಸ್ಯ ಸುಭಗಸ್ಯ ರಾತಿಷು ತುರ್ವಶೇಷ್ವಮನ್ಮಹಿ ॥**
(ಋ. ಸಂ. ೮-೪-೧೯)

ಎಂಬ ಋಕ್ಕನ್ನುದಹರಿಸಿ ಈ ಪದದ ಸರಿಯಾದ ಅರ್ಥವನ್ನು ತೋರಿಸಿದ್ದಾರೆ. ಸಾಯಣರೂ ಈ ಪದಕ್ಕೆ **ದಿವಃ ಸ್ವರ್ಗಸ್ಯೈಷಣೇಷು ಪ್ರಾಪ್ತಿಹೇತುಭೂತಾಸು ಯಾಗಕ್ರಿಯಾಸು ।** ಎಂದು ವ್ಯಾಖ್ಯಾನಮಾಡಿದ್ದಾರೆ.

**ಋಂಜತೇ**—**ಋಂಜತಿಃ ಪ್ರಸಾಧನಕರ್ಮಾ** ( ನಿ. ೬-೨೧ ) ಅಲಂಕಾರಮಾಡು ಎಂದರ್ಥವೆಂದು ನಿರುಕ್ತಕಾರರು,

**ಆ ವ ಋಂಜಸ ಊರ್ಜಾಂ ವ್ಯುಷ್ಟಿಷ್ವಿಂದ್ರಂ ಮರುತೋ ರೋದಸೀ ಅನಕ್ತನ ।**
**ಉಭೇ ಯಥಾ ನೋ ಅಹನೀ ಸಚಾಭುವಾ ಸದಃಸದೋ ವರಿವಸ್ಯಾತ ಉದ್ಭಿದಾ ॥**
(ಋ. ಸಂ. ೧೦-೭೬-೧)

ಎಂದು ಋಂಜಸೇ ಎಂಬ ಪದವು ಇರತಕ್ಕ ಋಕ್ಕನ್ನು ಉದಹರಿಸಿದ್ದಾರೆ. ಸಾಯಣರೂ ಈ ಪದಕ್ಕೆ **ಪ್ರಸಾಧಯಂತಿ** ಅಲಂಕರಿಸುತ್ತಾರೆಂದರ್ಥಮಾಡಿದ್ದಾರೆ.

**ಮಜ್ಮನಾ**—ಈ ಪದವು ಬಲನಾಮಗಳಲ್ಲಿ ಪಠಿತವಾಗಿದೆ. (ನಿ. ೩-೯) **ಶಾರೀರೇಣ ಬಲೇನ ।** ಶರೀರಶಕ್ತಿಯೊಡನೆ ಎಂದು ಸಾಯಣರು ಅರ್ಥಮಾಡಿದ್ದಾರೆ.

### ವ್ಯಾಕರಣಪ್ರಕ್ರಿಯಾ

**ಹೋತಾರಮ್**—ಹು ದಾನಾದನಯೋಃ ಧಾತು. ಕರ್ತರಿಯಲ್ಲಿ ತೃನ್ ಪ್ರತ್ಯಯ. ಪ್ರತ್ಯಯ ನಿಮಿತ್ತವಾಗಿ ಧಾತುವಿನ ಇಕಿಗೆ ಗುಣ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ದ್ವಿತೀಯಾ ಏಕವಚನಾಂತರೂಪ.

**ವೃಣತೇ**—ವೃಙ್ ಸಂಭಕ್ತೌ ಧಾತು. ಲಟ್ ಪ್ರಥಮಪುರುಷ ಏಕವಚನಾಂತರೂಪ. ಅತಿಙಂತದ ಪರದಲ್ಲಿ ಬಂದುದರಿಂದ ತಿಙಂತನಿಘಾತಸ್ವರ ಬರುತ್ತದೆ.

**ದಿವಿಷ್ಟಿಷು**—ದಿವಃ ಏಷಣಾನಿ ಯೇಷು ತೇ. ದಿವಿಷ್ಟಯಃ **ಸರ್ವೇ ವಿಧಯಶ್ಛಂದಸಿ ವಿಕಲ್ಪ್ಯಂತೇ** ಎಂಬ ವಚನದಿಂದ **ದಿವಉತ್** (ಪಾ. ಸೂ. ೬-೧-೧೩೧) ಎಂಬುದರಿಂದ ಉತ್ವ ಬರುವುದಿಲ್ಲ. **ಬಹುವ್ರೀಹೌ ಪ್ರಕೃತ್ಯಾ-ಪೂರ್ವಪದಮ್** ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಪಪೃಚಾನಾಸಃ**—ಪೃಚೀ ಸಂಪರ್ಕೇ ಧಾತು. **ಛಂದಸಿ ಲುಙ್‌ಲ**—ಸೂತ್ರದಿಂದ ವರ್ತಮಾನಾರ್ಥದಲ್ಲಿ ಲಿಟ್ ಬಂದಾಗ **ಲಿಟಃ ಕಾನಜ್ವಾ** (ಪಾ. ಸೂ. ೩-೨-೧೦೬) ಎಂಬುದರಿಂದ ಅದಕ್ಕೆ ಕಾನಜಾದೇಶ. ಅದನ್ನು ನಿಮಿತ್ತೀಕರಿಸಿ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಉರದತ್ವ ಬಂದಾಗ ಆದಿಹಲ್‌ಶೇಷ. ಪ್ರತ್ಯಯ ಕಿತ್ತಾದುದರಿಂದ ಗುಣ

ಬರುವುದಿಲ್ಲ. ಇದಕ್ಕೆ ಜಸ್ ಪರವಾದಾಗ **ಆಜ್ಜಸೇರಸುಕ್** ಎಂಬುದರಿಂದ ಅದಕ್ಕೆ ಅಸುಕಾಗಮ. ಕಾನಚ್ ಚಿತ್ತಾದು ದರಿಂದ **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಋಞ್ಜತೇ**—'ಋಂಜತಿಃ ಪ್ರಸಾಧನಕರ್ಮಾ' ಎಂದು ಯಾಸ್ಕರು ಹೇಳಿರುತ್ತಾರೆ. ಅಲಂಕಾರ ಅರ್ಥವಿಕ್ಕಿದೆ. ಲಟ್ ಪ್ರಥಮಪುರುಷ ಬಹುವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಕ್ರತ್ವಾ**—ಕ್ರತು ಶಬ್ದ. ತೃತೀಯಾ ಟಾ ಪರವಾದಾಗ **ಜಸಾದಿಷು ಛಂದಸಿ ವಾ ವಚನಮ್** ಎಂಬ ವಚನ ದಿಂದ ವಿಕಲ್ಪವಾಗಿ ನಾಭಾವ ಬರುವುದರಿಂದ ಇಲ್ಲಿ ಬರುವುದಿಲ್ಲ. ಯಣಾದೇಶ.

**ಮಜ್ಮನಾ**—ಟುಮಸ್ಜೋ ಶುದ್ಧೌ ಧಾತು. ಇದಕ್ಕೆ ಔಣಾದಿಕವಾದ ಮನಿ ಪ್ರತ್ಯಯ. ಪ್ರತ್ಯಯಸ್ವರದಿಂದ ಮಕಾರೋತ್ತರಾಕಾರ ಉದಾತ್ತವಾಗುತ್ತದೆ. ತೃತೀಯಾ ಏಕವಚನಾಂತರೂಪ.

**ಪುರುಷ್ಟುತಃ**—ಪುರುಭಿಃ=ಬಹುಭಿಃ ಸ್ತುತಃ ಪುರುಷ್ಟುತಃ. ಷ್ಟುಞ್ ಸ್ತುತೌ ಧಾತು. ಕರ್ಮಣಿಯಲ್ಲಿ **ನಿಷ್ಠಾ** ಎಂಬುದರಿಂದ ಕ್ತ ಪ್ರತ್ಯಯ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ. ಸಮಾಸವಾದಾಗ **ಗತಿಕಾರಕೋಪ-ಪದಾತ್ ಕೃತ್** ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಮರ್ತನ್**—ಮೃಙ್ ಪ್ರಾಣತ್ಯಾಗೇ ಧಾತು. **ಅಸಿಹಸಿಮೃ**—(ಉ. ಸೂ. ೩-೩೬೬) ಎಂಬುದರಿಂದ ತನ್ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿನ ಇಕಿಗೆ ಗುಣ. ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಶಂಸಮ್**—ಶಂಸು ಸ್ತುತೌ ಧಾತು. **ಹಲಶ್ಚ** (ಪಾ. ಸೂ. ೩-೩-೧೨೧) ಎಂಬುದರಿಂದ ಭಾವಾರ್ಥದಲ್ಲಿ ಘಞ್ ಪ್ರತ್ಯಯ. ಞಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ವೇತಿ**—ವೀ ಗತಿಪ್ರಜನಕಾಂತ್ಯಸನಖಾದನೇಷು. ಅದಾದಿ. ಲಟ್ ಪ್ರಥಮಪುರುಷ ಏಕವಚನಾಂತರೂಪ. ಯತ್‌ಸಂಬಂಧವಿರುವುದರಿಂದ **ನಿಪಾತೈರ್ಯದ್ಯದಿ**—(ಪಾ. ಸೂ. ೮-೧-೩೦) ಎಂಬುದರಿಂದ ನಿಘಾತಪ್ರತಿಷೇಧ ಬರುವುದರಿಂದ ತಿಪ್ ಪಿತ್ತಾದುದರಿಂದ ಧಾತುಸ್ವರ ಉಳಿಯುತ್ತದೆ.

**ಧಾಯಸೇ**—ಡುಧಾಞ್ ಧಾರಣಪೋಷಣಯೋಃ ಧಾತು. **ವಹಿಹಾಧಾಞ್‌ಭ್ಯಶ್ಛಂದಸಿ** (ಉ. ಸೂ. ೫-೬೬೦) ಎಂಬುದರಿಂದ ಅಸುನ್ ಪ್ರತ್ಯಯ. ಣಿತ್ ಎಂದು ಹಿಂದಿನ ಸೂತ್ರದಿಂದ ಅನುವೃತ್ತವಾಗುವುದರಿಂದ **ಆತೋ ಯುಕ್ ಚಿಣ್‌ಕೃತೋಃ** (ಪಾ. ಸೂ. ೭-೩-೩೩) ಎಂಬುದರಿಂದ ಧಾತುವಿಗೆ ಯುಕಾಗಮ. ಅಸುನ್ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಚತುರ್ಥೀ ಏಕವಚನಾಂತರೂಪ. ॥ ೬ ॥



ಸಂಹಿತಾಪಾಠಃ

ವಿ ಯದಸ್ಥಾದ್ಯಜತೋ ವಾತಚೋದಿತೋ ಹ್ವಾರೋ ನ ವಕ್ವಾ ಜರಣಾ

ಅನಾಕೃತಃ ।

ತಸ್ಯ ಪತ್ಮನ್ಧಕ್ಷುಷಃ ಕೃಷ್ಣಜಂಹಸಃ ಶುಚಿಜನ್ಮನೋ ರಜ ಆ ವ್ಯಧ್ವನಃ ॥ ೭ ॥

ಪದಪಾಠಃ

ವಿ । ಯತ್ । ಅಸ್ಥಾತ್ । ಯಜತಃ । ವಾತಽಚೋದಿತಃ । ಹ್ವಾರಃ । ನ । ವಕ್ವಾ । ಜರಣಾಃ । ಅನಾಕೃತಃ ।

ತಸ್ಯ । ಪತ್ಮನ್ । ಧಕ್ಷುಷಃ । ಕೃಷ್ಣಽಜಂಹಸಃ । ಶುಚಿಽಜನ್ಮನಃ । ರಜಃ । ಆ । ವಿಽಅಧ್ವನಃ ॥ ೭ ॥

ಸಾಯಣಭಾಷ್ಯಂ

ಯದ್ಯದಾಯಮಗ್ನಿರ್ವಾತಚೋದಿತೋ ವಾಯುನಾ ಪ್ರೇರಿತಃ ॥ ತೃತೀಯಾ ಕರ್ಮಣೀತಿ ಪೂರ್ವಪದಪ್ರಕೃತಿಸ್ವರತ್ವಂ ॥ ಯಜತಃ ಸರ್ವೈರ್ಯಷ್ಟವ್ಯೋ ಯಷ್ಟುಂ ಯೋಗ್ಯಃ ಸನ್ ವ್ಯಸ್ಥಾತ್ ವಿತಿಷ್ಠತೇ ಸರ್ವತೋ ವ್ಯಾಪ್ತೋ ಭವತಿ । ತತ್ರ ದೃಷ್ಟಾಂತಃ । ಅನಾಕೃತೋಽನಿವಾರಿತೋಽಪ್ರತಿಹತಪ್ರಸರೋ ವಕ್ವಾ ಬಹುವಕ್ತಾ ॥ ವಚೇರನ್ಯೇಭ್ಯೋಽಪಿ ದೃಶ್ಯಂತ ಇತಿ ವನಿಪ್ । ದೃಶಿಗ್ರಹಣಾತ್ಕುತ್ವಂ ॥ ಹ್ವಾರೋ ನ ಕುಟಿಲ ಇವ ವಿದೂಷಣಕಾದಿರಿವ ॥ ಹ್ವರತೇರ್ಣ್ಯಂತಾತ್ಪಚಾದ್ಯಚ್ ॥ ಸ ಯಥಾ ಜರಣಾಃ ಸ್ತುತೀರ್ವಿತಿಷ್ಠತೇ ವಿವಿಧಂ ಕುರ್ವನ್ ವರ್ತತೇ ತದ್ವದಯಮಪ್ಯನಾಕೃತೋಽಪ್ರತಿಬದ್ಧಪ್ರಸರೋ ವ್ಯವಸ್ಥಿತಃ । ತದಾ ತಸ್ಯಾಗ್ನೇಃ ಪತ್ಮನ್ ಪತನೇ ಮಾರ್ಗೇ ಯಜ್ಞರೂಪೇ ರಜೋ ರಂಜನಾತ್ಮಕೋ ಲೋಕ ಆಸ್ಥಾತ್ । ಆತಿಷ್ಠತಿ । ಸರ್ವತ ಆಶ್ರಯತಿ । ಅಗ್ನೌ ಬಹುಧಾ ಯಜತೀತ್ಯರ್ಥಃ । ಕೀದೃಶಸ್ಯ ತಸ್ಯ । ಧಕ್ಷುಷೋ ದಹತಃ ॥ ದಹೇರ್ಲಿಟಃ ಕ್ವಸುಃ ॥ ಕೃಷ್ಣಜಂಹಸಃ । ಕೃಷ್ಣಮಾರ್ಗಸ್ಯ । ಪುನಃಪುನರ್ಗಮ್ಯತ ಇತಿ ಜಂಹಾ ಮಾರ್ಗಃ । ಹಂತೇರ್ಯಙ್ಲುಗಂತಾತ್ಕರ್ಮಣ್ಯಸುನ್ । ಕುತ್ವಾಭಾವಶ್ಛಾಂದಸಃ ॥ ಶುಚಿಜನ್ಮನಃ ಮಂತ್ರಸಹಿತಾರಣ್ಯೋರುತ್ಪನ್ನತ್ವಾತ್ ವ್ಯಧ್ವನೋ ವಿವಿಧಜ್ವಾಲಸ್ಯಾನಿಯತಮಾರ್ಗಸ್ಯ ॥

ಪ್ರತಿಪದಾರ್ಥ

ಅನಾಕೃತಃ—ತಡೆಯಿಲ್ಲದ ಪಾತ್ರ ಸರವುಳ್ಳವನೂ । ಹ್ವಾರಃ— ವಂಚಕನಾದವನೂ ಆದ । ವಕ್ವಾ ನ—ಹರಟೆಯುಮಲ್ಲನು ಯಾವ ರೀತಿ । ಜರಣಾಃ—(ತಾರತಮ್ಯಜ್ಞಾನವಿಲ್ಲದೆ) ನಾನಾವಿಧವಾದ ಸ್ತೋತ್ರಗಳಿಂದ ಮಾತನ್ನು ಬೆಳೆಸುತ್ತಾನೆಯೋ ಹಾಗೆ (ಈ ಅಗ್ನಿಯು) । ವಾತಚೋದಿತಃ—ವಾಯುವಿನಿಂದ ಪ್ರೇರಿತನಾದವನೂ । ಯಜತಃ—(ಸಕಲರ) ಪೂಜೆಗೂ ಯೋಗ್ಯನಾದವನೂ ಆಗಿ । ಯತ್—ಯಾವಾಗ । ವಿ ಅಸ್ಥಾತ್—(ತಡೆಯಿಲ್ಲದ ಪ್ರಸರವುಳ್ಳವನಾಗಿ) ನಾನಾಕಡೆಯೂ ಹರಡುವನೋ, (ಆಗ) । ಧಕ್ಷುಷಃ—(ಸಕಲವನ್ನು) ದಹಿಸುವವನೂ, । ಕೃಷ್ಣಜಂಹಸಃ—ಕಪ್ಪಾದ ಮಾರ್ಗವುಳ್ಳವನೂ । ಶುಚಿಜನ್ಮನಃ—(ಮಂತ್ರಪೂರ್ವಕವಾಗಿ) ಶುದ್ಧ

ವಾದ ಉತ್ಪತ್ತಿಯುಳ್ಳವನೂ । **ವ್ಯಧ್ವನಃ**—ನಾನಾ ಮಾರ್ಗವಾಗಿ ಹರಡಿದ ಜ್ವಾಲೆಗಳುಳ್ಳವನೂ ಆದ । **ತಸ್ಯ**—ಆ ಅಗ್ನಿಯ । **ಪತ್ಮನ್**—ಯಜ್ಞರೂಪವಾದ ಪೂಜಾಮಾರ್ಗದಲ್ಲಿ । **ರಜಃ**—ಲೋಕವು । **ಆ(ಅಸ್ಥಾತ್)**—ನಿರತವಾಗಿರುತ್ತದೆ. ।

**ಭಾವಾರ್ಥ**

ತಡೆಯಿಲ್ಲದ ವಾಕ್ಪ್ರಸರವುಳ್ಳವನೂ, ವಂಚಕನಾದವನೂ ಆದ ಹರಟೆಯುವಲ್ಲನು ಯಾವರೀತಿ ತಾರತಮ್ಯಜ್ಞಾನವಿಲ್ಲದೇ ನಾನಾವಿಧವಾದ ಸ್ತೋತ್ರದಿಂದ ತನ್ನ ಮಾತನ್ನು ಬೆಳೆಸುತ್ತಾನೆಯೋ, ಹಾಗೆ ಈ ಅಗ್ನಿಯೂ ಸಹ ವಾಯುವಿನಿಂದ ಪ್ರೇರಿತನಾದವನೂ, ಸಕಲರ ಪೂಜೆಗೂ ಯೋಗ್ಯನಾದವನೂ ಆಗಿ, ಯಾವಾಗ ತನ್ನ ತಡೆಯಿಲ್ಲದ ಪ್ರಸರಣದಿಂದ ನಾನಾಕಡೆಯೂ ಹರಡುವನೋ ಆಗ ಸಕಲವನ್ನೂ ದಹಿಸುವವನೂ, ಕತ್ತಲೆಯ ಮಾರ್ಗವುಳ್ಳವನೂ, ಮಂತ್ರಪೂರ್ವಕವಾದುದರಿಂದ ಶುದ್ಧವಾದ ಉತ್ಪತ್ತಿಯುಳ್ಳವನೂ, ನಾನಾಮಾರ್ಗವಾಗಿ ಹರಡಿದ ಜ್ವಾಲೆಗಳುಳ್ಳವನೂ ಆದ ಈ ಅಗ್ನಿಯ ಯಜ್ಞರೂಪವಾದ ಪೂಜಾಮಾರ್ಗದಲ್ಲಿ ಲೋಕವೆಲ್ಲವೂ ನಿರತವಾಗಿರುತ್ತದೆ.

## English Translation

Since the adorable (Agni), impelled by the wind, spreads, in various directions, like an insincere and unrestrained chatterer, (who utters indiscriminate) praises, therefore the world is assiduous in the worship of him, the consumer of all, whose way is dark, who is pure of birth, and follows various paths.

**ವಿಶೇಷವಿಷಯಗಳು**

ಈ ಋಕ್ಕಿನಲ್ಲಿ ತಡೆಯಿಲ್ಲದ ಪ್ರಸರಣವುಳ್ಳ ಅಗ್ನಿಯ ಬೆಳವಣಿಗೆಯನ್ನು ಹರಟೆಮಲ್ಲನ ಅವಿಚ್ಛಿನ್ನವಾದ ಮಾತುಗಳ ಬೆಳವಣಿಗೆಗೆ ಹೋಲಿಸಿದೆ.

**ಅನಾಕೃತಃ—ಅನಿವಾರಿತಃ ಅಪ್ರತಿಹತಪ್ರಸರಃ ।** ತಡೆಯಿಲ್ಲದ ಪ್ರವಾಹವುಳ್ಳದ್ದೆಂದು ಸಾಯಣರು ಅರ್ಥಮಾಡಿದ್ದಾರೆ. ಇದರ ವ್ಯುತ್ಪತ್ತಿಯು ಎರಡು ಕ್ರಮದಿಂದ ನಿಷ್ಪನ್ನವಾಗಬಹುದು. **ಅನಾ** ಅಪ್ರತಿಹತವಾಗಿ **ಕೃತಃ** ಮಾಡಲ್ಪಡುವುದು ಎಂದು ಈ ಸಂದರ್ಭಕ್ಕೆ ಸರಿಯಾಗಿ ನಿರ್ವಚನವನ್ನು ತೋರಿಸಬಹುದು. ಹೇಗೆಂದರೆ,

**ಅಭ್ರಾತೃವ್ಯೋ ಅನಾ ತ್ವಮನಾಪಿರಿಂದ್ರ ಜನುಷಾ ಸನಾದಸಿ । ಯುಧೇದಾಪಿತ್ವಮಿಚ್ಛಸೇ ।**
(ಋ. ಸಂ. ೮-೨೧-೧೩)

ಎಂಬ ಋಕ್ಕಿನಲ್ಲಿ **ಅನಾ** ಎಂಬ ಪದಕ್ಕೆ **ಅನಿಯಂತೃಕಃ** । ತಡೆಯಿಲ್ಲದವನು ಎಂದು ಸಾಯಣರು ಅರ್ಥಮಾಡಿದ್ದಾರೆ. **ಅನಾ** ಎಂಬ ಪದಕ್ಕೆ **ಆಸ್ಯೇನ** (೧೦-೯೪-೩) ಎಂದೂ, ಪ್ರಾಣರೂಪೇಣ **ಬಲೇನ** (೪-೩೦-೩) ಎಂದೂ ಬೇರೆ ಬೇರೆ ಅರ್ಥಗಳಿರುವುದಾದರೂ ನಮಗೆ ಆ ಅರ್ಥಗಳು ಸದ್ಯಃ ಅಪ್ರಕೃತವಾಗಿವೆ. ಆದುದರಿಂದ ಅನಾ-ಕೃತಃ ತಡೆಯಿಲ್ಲದೆ ಮುಂದುವರಿಸತಕ್ಕ ಮಾತುಗಾರ ಎಂದರ್ಥವಾಗುತ್ತದೆ.

**ಹ್ವಾರಃ**—ಕುಟಿಲಃ ನೇರವಾದ ಎಂದರೆ ಸತ್ಯವಾದ ಭಾವವೂ, ವ್ಯವಹಾರವೂ ಇಲ್ಲದ ವಂಚಕನೆಂದರ್ಥ. ಹರಟೆಮಲ್ಲನು ಮಿತಿಮೀರಿ ಹರಟುವುದರಿಂದ ಅದು ನೇರವಾದ ಮತ್ತು ನಿರ್ದಿಷ್ಟವಾದ ವಸ್ತುವನ್ನು ಹೊಂದಿರುವುದಿಲ್ಲ. ವಕ್ರವಾಗಿರುವುದರಿಂದ ಹ್ವಾರಃ ಎಂಬ ವಿಶೇಷಣವಿದೆ. ತಸ್ಕರನಿಗೂ ಈ ವಿಶೇಷಣವಿದೆ. ಉದಾಹರಣೆಗೆ

**ಯುವಂ ಪಯ ಉಸ್ರಿಯಾಯಾಮಧತ್ತಂ ಪಕ್ವಮಾಮಾಯಾಮವ ಪೂರ್ವ್ಯಂ ಗೋಃ ।**
**ಅಂತರ್ಯದ್ವನಿನೋ ವಾಮೃತಪ್ಸೂ ಹ್ವಾರೋ ನ ಶುಚಿರ್ಯಜತೇ ಹವಿಷ್ಮಾನ್ ।**
(ಋ. ಸಂ. ೧-೧೮೦-೩)

ಎಂಬ ಋಕ್ಕಿನಲ್ಲಿ ಯಜಮಾನನ ಎಚ್ಚರಿಕೆಯನ್ನು ಚೋರನ ಎಚ್ಚರಿಕೆಗೆ ಹೋಲಿಸಿದೆ. ಇಲ್ಲಿ **ಹ್ವಾರೋ ನ** ಎಂದರೆ ತಸ್ಕರನಂತೆ ಎಂದರ್ಥವಾಗುತ್ತದೆ. **ಹ್ವಾರಶಬ್ದಕ್ಕೆ ತಸ್ಕರ, ವಂಚಕ** ಎಂಬುವು ಪರಂಪರೆಯಾಗಿ ಬಂದ ಅರ್ಥಗಳು ಈ ಪದದ ಮೂಲಾರ್ಥವು ಕುಟಿಲ, ವಕ್ರ ಎಂದಾಗುತ್ತದೆ.

**ಕ್ರತ್ವಾ ಹಿ ದ್ರೋಣೇ ಅಜ್ಯಸೇಽಗ್ನೇ ವಾಜೀ ನ ಕೃತ್ವ್ಯಃ ।**
**ಪರಿಜ್ಮೇವ ಸ್ವಧಾ ಗಯೋಽತ್ಯೋ ನ ಹ್ವಾರ್ಯಃ ಶಿಶುಃ ॥**
(ಋ. ಸಂ. ೬-೨-೮)

ಎಂಬ ಋಕ್ಕಿನಲ್ಲಿ ಹ್ವಾರ್ಯಃ ಎಂಬ ಪದವು ಜಾತಿ ಕುದುರೆಯ **ಕುಟಿಲಗತಿಯನ್ನೂ** ಮತ್ತು

**ಉತ ಸ್ಮ ದುರ್ಗೃಭೀಯಸೇ ಪುತ್ರೋ ನ ಹ್ವಾರ್ಯಾಣಾಂ ।**
**ಪುರೂ ಯೋ ದಗ್ಧಾಸಿ ವನಾಗ್ನೇ ಪಶುರ್ನ ಯವಸೇ ॥**
(ಋ. ಸಂ. ೫-೯-೪)

ಎಂಬ ಋಕ್ಕಿನಲ್ಲಿ **ಹ್ವಾರ್ಯಾಣಾಂ** ಎಂಬ ಪದವು **ಕುಟಿಲಂ ಗಚ್ಛತಾಂ ಸರ್ಪಾಣಾಂ ।** ಕುಟಿಲವಾಗಿ ಸರಿಯುವ ಸರ್ಪಗಳ ವಕ್ರವಾದ ಗತಿಯನ್ನೂ ತಿಳಿಸುತ್ತದೆ. ಪ್ರಕೃತವಾದ ಋಕ್ಕಿನಲ್ಲಿ ನಿರ್ದಿಷ್ಟವಾದ ಗುರಿಯಿಲ್ಲದೇ ಕೇವಲ ಮಾತಿಗಾಗಿ ಹರಟುವ ಹರಟೇಮಲ್ಲನ ವಕ್ರವಾದ ಮಾರ್ಗವನ್ನು ತಿಳಿಸಲು ಮತ್ತು ಅವನ ವಂಚಕವಾದ ವ್ಯವಹಾರವನ್ನು ತಿಳಿಸಲು **ಹ್ವಾರಃ** ಎಂಬ ವಿಶೇಷಣವಿದೆ.

**ವಕ್ವಾ—ಬಹುವಕ್ತಾ ।** ಅತಿಯಾಗಿ ಮಾತನ್ನಾಡುವವನು ಎಂದು ಹೇಳಿ ಸಾಯಣರು **ವಚ್** ಧಾತುವಿನಿಂದ ನಿಷ್ಪನ್ನವಾಗಿದೆಯೆಂದು ತೋರಿಸಿದ್ದಾರೆ. ಆದರೆ **ವಕಿ** (ಕೌಟಿಲ್ಯೇ ಗತೌ ಚ) ಎಂಬ ಧಾತುವು ಇದರ ಮೂಲವೆಂದು ಹೇಳುವುದು ಸರಿಯಾಗಿ ಕಾಣುವುದು. ವಕ್ರ ಅಥವಾ ಕೌಟಿಲ್ಯವೇ ಈ ಪದದ ಅರ್ಥವಾಗಿರುವುದು. **ವಚ್** ಧಾತುವಿನಿಂದ **ವಕ್ವಾ** ಎಂಬ ನಿಷ್ಪತ್ತಿಯನ್ನು ತೋರಿಸುವುದು **ವಕಿ** ಧಾತುವಿನಿಂದ ನಿಷ್ಪನ್ನವಾಗಿದೆಯೆನ್ನುವಷ್ಟು ಸಾಧುವಾಗಿ ಕಾಣುವುದಿಲ್ಲ. ಅರ್ಥವೂ ಸಹ ಎರಡನೆಯ ಧಾತುವಿಗೇ ಹೊಂದಿಕೊಳ್ಳುತ್ತದೆ. ಆದರೆ ಅತಿಯಾಗಿ ಶಬ್ದಮಾಡತಕ್ಕ ಸಂದರ್ಭಗಳಲ್ಲೆಲ್ಲಾ **ವಕ್ವಾ** ಎಂಬ ಪದವನ್ನುಪಯೋಗಿಸಿರುವುದರಿಂದ ಆ ಸ್ಥಳಗಳಲ್ಲಿ **ವಚ್** ಧಾತುವಿನಿಂದಲೇ ನಿಷ್ಪನ್ನವಾಗಿದೆಯೆಂದು ಹೇಳಬೇಕಾಗುತ್ತದೆ. ಉದಾಹರಣೆಗೆ

**ಅಸರ್ಜಿ ವಕ್ವಾ ರಥ್ಯೇ ಯಥಾಜೌ ಧಿಯಾ ಮನೋತಾ ಪ್ರಥಮೋ ಮನೀಷೀ ।**
**ದಶ ಸ್ವಸಾರೋ ಅಧಿ ಸಾನೋ ಅವ್ಯೇಽಜಂತಿ ವಹ್ನಿಂ ಸದನಾನ್ಯಚ್ಛ ।**
(ಋ. ಸಂ. ೯-೯೧-೧)

ಎಂಬ ಋಕ್ಕಿನಲ್ಲಿ **ಶಬ್ದಾಯಮಾನಃ** ಎಂದು ಸೋಮಕ್ಕೆ ವಿಶೇಷಣವಾಗಿಯೂ

**ಶ್ರುಧೀ ಹವಮಿಂದ್ರ ಶೂರ ಪೃಥ್ಯಾ ಉತ ಸ್ತವಸೇ ವೇನ್ಯಸ್ಯಾರ್ಕೈಃ ।**
**ಆ ಯಸ್ತೇ ಯೋನಿಂ ಘೃತವಂತಮಸ್ವಾರೂರ್ಮಿರ್ನ ನಿಮ್ನೈರ್ದ್ರವಯಂತ ವಕ್ವಾಃ ।**
(ಋ. ಸಂ ೧೦-೧೪೮-೫)

ಎಂಬ ಋಕ್ಕಿನಲ್ಲಿ ಶಬ್ದಮಾಡತಕ್ಕ ಸ್ತೋತ್ರಗಳಿಗೆ ವಿಶೇಷಣವಾಗಿಯೂ,

**ಪ್ರಾಗ್ರುವೋ ನಭನ್ವೋ೩ ನ ವಕ್ವಾ ಧ್ವಸ್ರಾ ಅಪಿನ್ವದ್ಯುವತೀರ್ಋತಜ್ಞಾಃ ।**

**ಧನ್ವಾನ್ಯಜ್ರಾँ ಅಪೃಣಕ್ತೃಷಾಣಾँ ಅಧೋಗಿಂದ್ರಃ ಸ್ತರ್ಯೋ೩ದಂಸುಪತ್ನೀಃ ॥**

(ಋ. ಸಂ. ೪-೧೯-೭)

ಎಂಬ ಋಕ್ಕಿನಲ್ಲಿ ಶಬ್ದಮಾಡತಕ್ಕ ಸೇನೆಗೆ ವಿಶೇಷಣವಾಗಿಯೂ ಇರುವುದರಿಂದ **ವಚ್** ಧಾತುವೇ ಮೂಲವೆಂದು ಹೇಳಬೇಕಾಗುತ್ತದೆ. ಪ್ರಕೃತವಾದ ಋಕ್ಕಿನಲ್ಲಿ ಶಬ್ದ ಮತ್ತು ಕೌಟಿಲ್ಯ ಈ ಎರಡು ಗುಣಗಳೂ ಇರುವುದರಿಂದ ಯಾವ ಧಾತುವಿನಿಂದಲಾದರೂ ನಿಷ್ಪನ್ನವಾಗಿರಬಹುದು. ಹರಟೀಮಲ್ಲನೆಂದರ್ಥ.

**ಜರಣಾಃ**—ಈ ಪದವು ಸಾಧಾರಣವಾಗಿ **ಜ್ಯಾ** (ವಯೋಹಾನೌ) ಎಂಬ ಧಾತುವಿನಿಂದ ನಿಷ್ಪನ್ನವಾಗಿ ವಾರ್ಧಕ್ಯವನ್ನೂ ಶೈಥಿಲ್ಯವನ್ನೂ ಸೂಚಿಸುತ್ತದೆ. [೪-೩೩-೩ ; ೧೦-೪೦-೩ ಇತ್ಯಾದಿ ಋಕ್ಕುಗಳಲ್ಲಿ ಪ್ರಯೋಗಿಸಲ್ಪಟ್ಟಿದೆ] ಆದರೆ ಈ ಋಕ್ಕಿನಲ್ಲಿಯೂ ಮತ್ತು

**ಅಧ ಪ್ರ ಜಜ್ಞೇ ತರಣಿರ್ಮಮತ್ತು ಪ್ರ ರೋಚ್ಯಸ್ಯಾ ಉಷಸೋ ನ ಸೂರಃ ।**

**ಇಂದುರ್ಯೇಭಿರಾಷ್ಟ ಸ್ವೇದುಹವ್ಯೈಃ ಸ್ರುವೇಣ ಸಿಂಚಞ್ಜರಣಾಭಿ ಧಾಮ ।**

(ಋ. ಸಂ. ೧-೧೨೧-೬)

ಎಂಬ ಋಕ್ಕಿನಲ್ಲಿಯೂ ಸಹ ಸ್ತುತ್ಯರ್ಥಕವಾಗಿ ಉಪಯೋಗಿಸಲ್ಪಟ್ಟಿದೆ. ಸಾಯಣರು ಇದರ ನಿರ್ವಚನವನ್ನು ತೋರಿಸುತ್ತಾ **ಜರತಿಃ ಸ್ತುತಿಕರ್ಮಾ** (ನಿ. ೩-೧೯) **ಅಸ್ಮಾತ್ ಕರ್ಮಣಿ ಲ್ಯುಟ್** ಎಂದು ವಿವರಿಸಿ **ಜರಣಾ** ಎಂದರೆ **ಸ್ತೋತವ್ಯಃ** ಎಂದು ೧-೨೬ನೇ ಋಕ್ಕಿನ ವಿವರಣೆಯಲ್ಲಿ ಹೇಳಿದ್ದಾರೆ. ನಿರುಕ್ತಕಾರರು,

**ಜರಾಬೋಧ ತದ್ವಿವಿಡ್ಢಿ ವಿಶೇವಿಶೇ ಯಜ್ಞಿಯಾಯ । ಸ್ತೋಮಂ ರುದ್ರಾಯ ದೃಶೀಕಂ ।**

(ಋ. ಸಂ. ೧-೨೭-೧೦)

ಎಂಬ ಋಕ್ಕನ್ನುದಹರಿಸಿ ಇಲ್ಲಿ **ಜರಾಬೋಧ** ಎಂಬ ಶಬ್ದದ ನಿರ್ವಚನವನ್ನು ತೋರಿಸುತ್ತಾ

**ಜರಾ ಸ್ತುತಿಃ ಜರತೇಃ ಸ್ತುತಿಕರ್ಮಣಃ ।** (ನಿ. ೧೦-೮) ಎಂದು ಈ ಶಬ್ದದ ಅರ್ಥವನ್ನು ನಿರ್ದೇಶಿಸಿದ್ದಾರೆ. ಅದರಂತೆಯೇ ಪ್ರಕೃತವಾದ ಋಕ್ಕಿನಲ್ಲಿಯೂ **ಜರಣಾಃ** ಎಂದರೆ ಸ್ತೋತ್ರವೆಂದರ್ಥ. ಇಲ್ಲಿ **ಹರಟೆಮಲ್ಲನಿಗೂ ಸ್ತುತಿಕಾರನಿಗೂ** ಇರುವ ಸಾಮಾನ್ಯಧರ್ಮವು ಯಾವುದೆಂದರೆ ಇಬ್ಬರೂ ಸಹ ಮಿತಿಯಿಲ್ಲದ ರೀತಿಯಲ್ಲಿ ತಮ್ಮ ವಾಕ್ಕುಗಳನ್ನು ಮುಂದುವರಿಸುತ್ತಾರೆಂಬುದೇ ಆಗಿದೆ.

ಹೀಗೆ **ಅನಾಕೃತಃ, ಹ್ವಾರಃ,** ಜರಣಾಃ ಎಂಬ ವಿಶೇಷಣಗಳು **ವಕ್ವ** ನ ಸ್ವರೂಪವನ್ನು ತಿಳಿಸುವಂತೆಯೇ **ಅಗ್ನಿಗೂ** ವಿಶೇಷಣಗಳಾಗಿ ಅಗ್ನಿಯ ಅಪ್ರತಿಹತವಾದುದೂ ಕುಟಿಲವಾದುದೂ ಶಬ್ದಪೂರಿತವಾದುದೂ ಆದ ಪ್ರಸರಣವನ್ನು ತಿಳಿಸುತ್ತವೆ.

**ಕೃಷ್ಣಜಂಹಸಃ**—**ಕೃಷ್ಣಮಾರ್ಗಸ್ಯ ।** ಕತ್ತಲೆಯ ಮಾರ್ಗವುಳ್ಳ ಎಂದು ಅಗ್ನಿಗೆ ವಿಶೇಷಣವಾಗಿದೆ. **ಪುನಃಪುನರ್ಗಮ್ಯತೇ** ಇತಿ ಜಂಹಾ ಮಾರ್ಗಃ । ಎಂದು ಜಂಹಶಬ್ದದ ನಿರ್ವಚನವನ್ನು ತೋರಿಸಿ ಮಾರ್ಗವೆಂದರ್ಥವೆಂಬುದಾಗಿ ಸಾಯಣರು ವಿವರಿಸಿದ್ದಾರೆ.

ಆ ಯಸ್ಮಿನ್ತ್ವೇ ಸ್ವಪಾಕೇ ಯಜತ್ರ ಯಕ್ಷದ್ರಾಜನ್ತ್ಸರ್ವತಾತೇವ ನು ದ್ಯೌಃ ।
ತ್ರಿಷಧಸ್ಥಸ್ತತರುಷೋ ನ ಜಂಹೋ ಹವ್ಯಾ ಮಘಾನಿ ಮಾನುಷಾ ಯಜಧ್ಯೈ ॥.
(ಋ ಸಂ. ೬-೧೨-೨)

ಎಂಬ ಋಕ್ಕಿನಲ್ಲಿ ಜಂಹಃ ಎಂಬ ಪದಕ್ಕೆ **ಶೀಘ್ರಂ ಗಂತಾ** ಎಂಬರ್ಥವಾಗುವಂತೆ ಇಲ್ಲಿಯೂ ಸಹ ಗಮನಮಾರ್ಗ ವುಳ್ಳವನೆಂದರ್ಥ. **ಕೃಷ್ಣವರ್ತ್ಮಾ** ಎಂದು ಅಗ್ನಿಗೆ ವಿಶೇಷಣವಿರುವಂತೆ **ಕೃಷ್ಣಜಂಹಾಃ** ಎಂಬುದೂ ಅವನ ಸ್ವರೂಪ ವನ್ನು ತಿಳಿಸುತ್ತದೆ.

**ಪತ್ಮನ್**—ಮಾರ್ಗದಲ್ಲಿ ಎಂದರೆ ಇಲ್ಲಿ ಯಜ್ಞರೂಪವಾದ ಪೂಜಾಮಾರ್ಗದಲ್ಲಿ ಎಂದರ್ಥ.

ರಜಃ—ಈ ಶಬ್ದದ ವಿಶೇಷಾರ್ಥಗಳನ್ನು ೧-೧೩೯-೪ನೇ ಋಕ್ಕಿನ ವಿಶೇಷವಿಷಯಗಳಲ್ಲಿ ತಿಳಿಸಿದೆ.

ವ್ಯಾಕರಣಪ್ರಕ್ರಿಯಾ

**ಅಸ್ಥಾತ್**—ಷ್ಠಾ ಗತಿನಿವೃತ್ತೌ ಧಾತು. **ಛಂದಸಿಲುಙ್**—ಎಂಬುದರಿಂದ ವರ್ತಮಾನಾರ್ಥದಲ್ಲಿ ಲುಙ್. ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ ಇಕಾರ ಲೋಪ. ಚ್ಲಿಗೆ ಸಿಚಾದೇಶ ಬಂದಾಗ **ಗಾತಿಸ್ಥಾಘು**—(ಪಾ. ಸೂ. ೨-೪-೭೭) ಎಂಬುದರಿಂದ ಅದಕ್ಕೆ ಲುಕ್. ಅಂಗಕ್ಕೆ ಅಡಾಗಮ ಯದ್ಯೋಗವಿರುವುದರಿಂದ ನಿಘಾತ ಸ್ವರ ಪ್ರತಿಷೇಧಬರುವುದರಿಂದ ಆದ್ಯುದಾತ್ತವಾಗುತ್ತದೆ

**ಯಜತಃ**—ಯಜ ದೇವಪೂಜಾಸಂಗತಿಕರಣದಾನೇಷು ಧಾತು. ಇದಕ್ಕೆ **ಭೃಮೃದೃಶಿಯಜ**—(ಉ. ಸೂ. ೩೯೦) ಎಂಬುದರಿಂದ ಅತಚ್ ಪ್ರತ್ಯಯ ಚಿತ್ತಾದುದರಿಂದ **ಚಿತಃ** ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ವಾತಚೋದಿತಃ**—ವಾತೇನ ಚೋದಿತಃ ವಾತಚೋದಿತಃ. **ಚುದ** ಪ್ರೇರಣೇ. ಧಾತು. ಕರ್ಮಣಿಯಲ್ಲಿ ಕ್ತ ಪ್ರತ್ಯಯ. **ತೃತೀಯಾಕರ್ಮಣಿ** (ಪಾ. ಸೂ. ೬-೨-೪೮) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಹ್ವಾರಃ**—ಹ್ವೃ ಕೌಟಿಲ್ಯೇ ಧಾತು. ಭ್ವಾದಿ. **ಹೇತುಮತಿ ಚ** ಎಂಬುದರಿಂದ ಣಿಚ್. **ಅಚೋಞ್ಣಿತಿ** ಎಂಬುದರಿಂದ ಧಾತುವಿಗೆ ವೃದ್ಧಿ. ಣಿಜಂತದಮೇಲೆ **ನಂದಿಗ್ರಹಪಚಾದಿಭ್ಯಃ**—(ಪಾ. ಸೂ. ೩-೧-೧೩೪) ಎಂಬುದ ರಿಂದ ಅಚ್ ಪ್ರತ್ಯಯ. **ಣೇರನಿಟಿ** (ಪಾ. ಸೂ. ೬-೪-೫೧) ಎಂಬುದರಿಂದ ಣಿಚಿಗೆ ಲೋಪ. **ಚಿತಃ** ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ವಕ್ವಾ**—ವಚ ಪರಿಭಾಷಣೇ. ಧಾತು. **ಅನ್ಯೇಭ್ಯೋಽಪಿದೃಶ್ಯಂತೇ** (ಪಾ. ಸೂ. ೩-೨-೭೫) ಎಂಬುದ ರಿಂದ ವನಿಪ್ ಪ್ರತ್ಯಯ. ಸೂತ್ರದಲ್ಲಿ ದೃಶಿಗ್ರಹಣವು ಇತರ ನಿಮಿತ್ತಗಳಿಲ್ಲದಿದ್ದರೂ ಕಾರ್ಯ ಬರುತ್ತದೆ ಎಂದು ಸೂಚಿಸುವುದಕ್ಕೋಸ್ಕರ ಉಪಾತ್ತವಾದುದರಿಂದ ಧಾತುವಿನ ಚಕಾರಕ್ಕೆ ಕುತ್ವ. ವನಿಪ್ ಪಿತ್ತಾದುದರಿಂದ ಅನುದಾತ್ತ ವಾಗುವುದರಿಂದ ಧಾತುಸ್ವರ ಉಳಿಯುತ್ತದೆ. ಪ್ರಥಮಾ ಏಕವಚನಾಂತರೂಪ.

ಜರಣಾಃ—ಜ್ಯಾ ಧಾತುವು ಸ್ತುತ್ಯರ್ಥದಲ್ಲಿ ಪ್ರಯುಕ್ತವಾಗಿದೆ ಇದಕ್ಕೆ ಕರ್ಮಣಿಯಲ್ಲಿ ಲ್ಯುಟ್ ಪ್ರತ್ಯಯ **ಯುವೋರನಾಕೌ** (ಪಾ. ಸೂ. ೭-೧-೧) ಎಂಬುದರಿಂದ ಪ್ರತ್ಯಯಕ್ಕೆ ಅನಾದೇಶ. ಅದನ್ನು ನಿಮಿತ್ತೀಕರಿಸಿ ಧಾತು ವಿನ ಇಕಿಗೆ ಗುಣ. ರಪರವಾಗಿ ಬರುತ್ತದೆ. ಪ್ರತ್ಯಯದಿಂದ ಲಿತ್ಸ್ವರ ಬರುವುದಿಲ್ಲ. **ಅಟ್ಕುಪ್ವಾಙ್**—ಸೂತ್ರದಿಂದ ಪ್ರತ್ಯಯ ನಕಾರಕ್ಕೆ ಣತ್ವ.

**ಅನಾಕೃತಃ**—ನಞ್‌ತತ್ಪುರುಷಸಮಾಸ. **ತತ್ಪುರುಷೇ**—(ಪಾ. ಸೂ. ೬-೨-೨) ಎಂಬುದರಿಂದ ಅವ್ಯಯ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಪತ್ಮನ್**—ಪತ್ಲೃ ಗತೌ ಧಾತು. **ಅನ್ಯೇಭ್ಯೋಽಪಿದೃಶ್ಯಂತೇ** ಎಂಬುದರಿಂದ ಮನಿನ್ ಪ್ರತ್ಯಯ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಲುಕ್ ಬರುತ್ತದೆ,

**ದಕ್ಷುಷಃ**—ದಹ ಭಸ್ಮೀಕರಣೇ. ಧಾತು. ಇದಕ್ಕೆ ಲಿಟ್ ಬಂದಾಗ **ಕ್ವಸುಶ್ಚ** (ಪಾ. ಸೂ. ೩-೨-೧೦೭) ಎಂಬುದರಿಂದ ಕ್ವಸು ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿಗೆ ಛಾಂದಸವಾಗಿ ದ್ವಿತ್ವ ಬರುವುದಿಲ್ಲ. ಬಹುಲ ಗ್ರಹಣದಿಂದ ಸಿಪ್. ಹಕಾರಕ್ಕೆ ಢತ್ವ ಅದನ್ನು ನಿಮಿತ್ತೀಕರಿಸಿ **ಏಕಾಚೋ**—ಸೂತ್ರದಿಂದ ಧಾತುವಿನ ದಕಾರಕ್ಕೆ ಧತ್ವ. **ಷಢೋಃ ಕಃ ಸಿ** ಎಂಬುದರಿಂದ ಢಕಾರಕ್ಕೆ ಕತ್ವ. ಸಕಾರಕ್ಕೆ ಷತ್ವ. ಷಷ್ಠೀಏಕವಚನಪರವಾದಾಗ **ವಸೋಃ ಸಂಪ್ರಸಾರಣಮ್** (ಪಾ. ಸೂ. ೬-೪-೧೩೧) ಎಂಬುದರಿಂದ ವಸುವಿನ ವಕಾರಕ್ಕೆ ಸಂಪ್ರಸಾರಣ. ಪೂರ್ವರೂಪ. **ಶಾಸಿವಸಿಘಸೀನಾಂ ಚ** (ಪಾ. ಸೂ ೮-೩-೬೭) ಎಂಬುದರಿಂದ ಪ್ರತ್ಯಯ ಸಕಾರಕ್ಕೆ ಷತ್ವ. ಪ್ರತ್ಯಯಸ್ವರದಿಂದ ಉಕಾರ ಉದಾತ್ತವಾಗುತ್ತದೆ.

**ಕೃಷ್ಣಜಂಹಸಃ**—ಕೃಷ್ಣಃ ಜಂಹಾಃ ಯಸ್ಯ ಸಃ ಕೃಷ್ಣಜಂಹಾಃ. ಪುನಃ ಪುನಃ ಗಮ್ಯತೇ ಇತಿ ಜಂಹಾಃ ಮಾರ್ಗಃ ಹನ ಹಿಂಸಾಗತ್ಯೋಃ ಧಾತು. ಪೌನಃಪುನ್ಯಾರ್ಥದಲ್ಲಿ ಯಙ್ ಬಂದಾಗ ಅನೈಮಿತ್ತಿಕವಾಗಿ ಅದಕ್ಕೆ ಲುಕ್. ಯಙ್‌ಲುಙಂತದ ಮೇಲೆ ಅಸುನ್ ಪ್ರತ್ಯಯ. ಛಾಂದಸವಾಗಿ **ಅಭ್ಯಾಸಾಚ್ಚ** (ಪಾ. ಸೂ. ೭-೩-೫೫) ಎಂಬುದರಿಂದ ಕುತ್ವ ಬರುವುದಿಲ್ಲ. **ಬಹುವ್ರೀಹೌ ಪ್ರಕೃತ್ಯಾಪೂರ್ವಪದಮ್** (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ. ಷಷ್ಠೀ ಏಕವಚನಾಂತರೂಪ ಹೀಗೆಯೇ ಶುಚಿಜನ್ಮನಃ ಎಂಬಲ್ಲಿಯೂ ಬಹುವ್ರೀಹಿ ಸಮಾಸವಾದುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ವ್ಯಧ್ವನಃ**—ವಿವಿಧಾಃ ಅಧ್ವಾನಃ ಜ್ವಾಲಾಃ ಯಸ್ಯ ಸಃ ವ್ಯಧ್ವಾ ತಸ್ಯ ವ್ಯಧ್ವನಃ. ಬಹುವ್ರೀಹಿಯಲ್ಲಿ ಪೂರ್ವ ಪದಪ್ರಕೃತಿಸ್ವರ ಬರುತ್ತದೆ. ॥ ೭ ॥

——— :o: ———

ಸಂಹಿತಾಪಾಠಃ

ರಥೋ ನ ಯಾತಃ ಶಿಕ್ವಭಿಃ ಕೃತೋ ದ್ಯಾಮಂಗೇಭಿರರುಷೇಭಿರೀಯತೇ ।
ಆದಸ್ಯ ತೇ ಕೃಷ್ಣಾಸೋ ದಕ್ಷಿ ಸೂರಯಃ ಶೂರಸ್ಯೇವ ತ್ವೇಷಥಾದೀಷತೇ
ವಯಃ ॥ ೮ ॥

ಪದಪಾಠಃ

ರಥಃ । ನ । ಯಾತಃ । ಶಿಕ್ವಽಭಿಃ । ಕೃತಃ । ದ್ಯಾಂ । ಅಂಗೇಭಿಃ । ಅರುಷೇಭಿಃ । ಈಯತೇ ।

ಆತ್ । ಅಸ್ಯ । ತೇ । ಕೃಷ್ಣಾಸಃ । ಧಕ್ಷಿ । ಸೂರಯಃ । ಶೂರಸ್ಯಽಇವ । ತ್ವೇಷಥಾತ್ । ಈಷತೇ ।

ವಯಃ ॥ ೯ ॥

ಸಾಯಣಭಾಷ್ಯಂ

ಅಯಮಗ್ನಿಃ ಶಿಕ್ವಭೀ ರಜ್ಜುಭಿಃ ಕೃತೋ ಬದ್ಧೋ ರಥೋ ನ ರಥ ಇವ । ಸ ಯಥಾ ಸ್ವೀಯೈ-ಶ್ಚಕ್ರಾದಿಭಿರಂಗೈರೀಯತೇ ತದ್ವದ್ಯಾತಃ ಸ್ಥಾಪಿತಃ ಸನ್ನರುಷೇಭಿರ್ಗಮನಶೀಲೈರಂಗೇಭಿರ್ಜ್ವಾಲಾದಿರೂಪೈ-ರವಯವೈರ್ದ್ಯಾಮಂತರಿಕ್ಷಮಾಜ್ಯೇನ ಹೃಷ್ಟಃ ಸನ್ನೀಯತೇ । ಗಚ್ಛತಿ । ಈಜ್ ಗತೌ ॥ ಆತ್ ಪ್ರವೃದ್ಧ್ಯ-ನಂತರಮಸ್ಯಾಗ್ನೇಸ್ತೇ ಸೂರಯಃ ಸರಣಯೋ ಮಾರ್ಗಾಃ ಕೃಷ್ಣಾಸಃ ಕೃಷ್ಣವರ್ಣಾ ಭವಂತಿ । ಯತ ಏವಂ ಭವಂತಿ ತದರ್ಥಂ ಧಕ್ಷಿ । ದಹತಿ ಕಾಷ್ಠಾನ್ ॥ ಪುರುಷವ್ಯತ್ಯಯಃ । ಛಾಂದಸಃ ಶಪೋ ಲುಕ್ ॥ ಕಿಂಚ ಜ್ವಲಿತಸ್ಯಾಗ್ನೇಸ್ತ್ವೇಷಥಾದ್ದೀಪ್ತಾತ್ತೇಜಸಃ ಸಕಾಶಾದ್ವಯೋ ಗಮನವಂತಃ ಪಕ್ಷಿಮೃಗಾದಯ ಈಷತೇ । ಗಚ್ಛಂತಿ ॥ ಈಷ ಗತ್ಯಾದೌ । ಬಹುಲಂ ಛಂದಸೀತಿ ಶಪೋ ಲುಕ್ ॥ ಪಲಾಯಂತೇ । ತತ್ರ ದೃಷ್ಟಾಂತಃ । ಶೂರಸ್ಯ ತ್ವೇಷಥಾದ್ಭಯ ಇವ । ಕಸ್ಯಚಿದ್ವಿಕ್ರಾಂತಸ್ಯ ದೀಪ್ತಾತ್ತೇಜಸಃ ಸಕಾಶಾದ್ಭೀತ್ಯಾ ಪಲಾಯಮಾನಾ ಇವ । ಏವಮಂತರಿಕ್ಷಂ ಸ್ಪೃಶನ್ ಸರ್ವತೋ ದಹತೀತಿ ಸರ್ವದಾ ದಾವಾಗ್ನಿರೂಪೇಣ ಸ್ತೂಯತೇ ॥

ಪ್ರತಿಪದಾರ್ಥ

**ಶಿಕ್ವಭಿಃ**—ಹಗ್ಗಗಳಿಂದ । **ಕೃತಃ**—ಕಟ್ಟಲ್ಪಟ್ಟ । **ರಥೋ ನ**—ರಥವು ಸುಲಭವಾಗಿ ಚಲಿಸುವಂತೆ **ಯಾತಃ**—(ನಮ್ಮಿಂದ) ಸ್ಥಾಪಿತನಾದ ಅಗ್ನಿಯು । **ಅರುಷೇಭಿಃ**—ಸಂಚಾರ ಸ್ವಭಾವವುಳ್ಳ । **ಅಂಗೇಭಿಃ**—ಜ್ವಾಲಾ ರೂಪಗಳಾದ ಅವಯವಗಳಿಂದ । **ದ್ಯಾಂ**—ಅಂತರಿಕ್ಷವನ್ನು । **ಈಯತೇ**—ಸೇರುತ್ತಾನೆ । **ಆತ್**—ಹೀಗೆ ವೃದ್ಧಿ ಯಾದೊಡನೆಯೇ । **ಅಸ್ಯ**—ಈ ಅಗ್ನಿಯ । **ಸೂರಯಃ**—ಮಾರ್ಗಗಳು । **ಧಕ್ಷಿ**—(ಕಾಷ್ಠಗಳನ್ನು) ಸುಡುವುದ ರಿಂದ । **ಕೃಷ್ಣಾಸಃ**—(ಹೊಗೆಯಿಂದ) ಕಪ್ಪುಬಣ್ಣವುಳ್ಳದ್ದಾಗುತ್ತವೆ । **ಶೂರಸ್ಯ ಇವ**—ಪರಾಕ್ರಮಿಯ ತೇಜಸ್ಸಿಗೆ ಬೆದರಿ ದೂರವಾಗಿ ಓಡುವ ಶತ್ರುವಿನಂತೆ । **ತ್ವೇಷಥಾತ್**—(ಈ ಅಗ್ನಿಯ) ಪ್ರಕಾಶಮಾನವಾದ ತೇಜಸ್ಸಿನಿಂದ । **ವಯಃ**—ಓಡಾಡತಕ್ಕ ಮೃಗ ಪಕ್ಷ್ಯಾದಿಗಳೆಲ್ಲವೂ । **ಈಷತೇ**—ದೂರವಾಗಿ ಓಡುತ್ತವೆ ।

॥ ಭಾವಾರ್ಥ ॥

ಹಗ್ಗಗಳಿಂದ ಕಟ್ಟಿದ ರಥವು ಸುಲಭವಾಗಿ ಚಲಿಸುವಂತೆ ನಮ್ಮಿಂದ ಸ್ಥಾಪಿತನಾದ ಅಗ್ನಿಯು ತನ್ನ ಸಂಚಾರ ಸ್ವಭಾವವುಳ್ಳ ಜ್ವಾಲಾರೂಪಗಳಾದ ಅವಯವಗಳಿಂದ ಅಂತರಿಕ್ಷವನ್ನು ಸೇರುತ್ತಾನೆ. ಹೀಗೆ ವೃದ್ಧಿಯಾದೊಡನೆಯೇ ಈ ಅಗ್ನಿಯ ಮಾರ್ಗಗಳು ಕಾಷ್ಠಾದಿಗಳನ್ನು ಸುಡುವುದರಿಂದ ಹೊಗೆಯಿಂದ ಕೂಡಿ ಕಪ್ಪುಬಣ್ಣವುಳ್ಳವಾಗುತ್ತವೆ. ಮತ್ತು ಪರಾಕ್ರಮಿಯಾದ ಶೂರನ ತೇಜಸ್ಸಿಗೆ ಬೆದರಿ ಶತ್ರುಗಳು ದೂರವಾಗಿ ಓಡಿಹೋಗುವಂತೆ ಈ ಅಗ್ನಿಯ ಪ್ರಕಾಶಮಾನವಾದ ತೇಜಸ್ಸಿನಿಂದ ಬೆದರಿ ಓಡಾಡತಕ್ಕ ಮೃಗ ಪಕ್ಷ್ಯಾದಿಗಳೆಲ್ಲವೂ ದೂರವಾಗಿ ಓಡಿಹೋಗುತ್ತವೆ.

## English Translation

Like a chariot drawn by ropes, Agni, set in movement by his own revolving members (his flames) proceeds to the heavens; the paths he traverses are blackened by smoke, as he consumes (the fuel), and (beasts and) birds fly from his radiance as (enemies fly from the prowess) of a hero.

॥ ವಿಶೇಷವಿಷಯಗಳು ॥

**ಶಿಕ್ವಭಿಃ**— ಈ ಪದಕ್ಕೆ ಈ ಋಕ್ಕಿನಲ್ಲಿ ಸಾಯಣರು **ರಜ್ಜುಭಿಃ** ಹಗ್ಗಗಳಿಂದ ಎಂದರ್ಥಮಾಡಿದ್ದಾರೆ. Monier Williams ಎಂಬ ಪಂಡಿತನು ತನ್ನ Sanskrit—English Dictionaryಯಲ್ಲಿ ಈ ಪದಕ್ಕೆ Skilful, clever, artistic ಎಂಬ ಅರ್ಥವನ್ನು ಮೊದಲು ಹೇಳಿ ಅನಂತರ (accord say=Rajju and tejas ಎಂದು) ಸಾಯಣರ ಅಭಿಪ್ರಾಯವನ್ನು ತಿಳಿಸಿದ್ದಾನೆ. ಸಾಯಣರೂ ಸಹ ಶಿಕ್ವ ಶಬ್ದಕ್ಕೆ ಇದೊಂದು ಸ್ಥಳದಲ್ಲಿ ಬಿಟ್ಟು ಉಳಿದೆಡೆಗಳಲ್ಲೆಲ್ಲಾ ಶಕ್ತಿ ಅಥವಾ ತೇಜಸ್ಸು ಎಂದೇ ಅರ್ಥಮಾಡಿದ್ದಾರೆ. ಉದಾಹರಣೆಗೆ—

**ಪ್ರ ಯೇ ಮೇ ಬಂಧ್ವೇಷೇ ಗಾಂ ವೋಚಂತ ಸೂರಯಃ ಪೃಶ್ನಿಂ ವೋಚಂತ ಮಾತರಂ ।**
**ಅಧಾ ಪಿತರಮಿಷ್ಮಿಣಂ ರುದ್ರಂ ವೋಚಂತ ಶಿಕ್ವಸಃ ॥**

(ಋ. ಸಂ. ೫-೫೨-೧೬)

**ವ್ಯಕ್ತೂನ್ರುದ್ರಾ ವ್ಯಹಾನಿ ಶಿಕ್ವಸೋ ವ್ಯಂತರಿಕ್ಷಂ ವಿ ರಜಾಂಸಿ ಧೂತಯಃ ।**
**ವಿ ಯದಜ್ರಾँ ಅಜಥ ನಾವ ಈಂ ಯಥಾ ವಿ ದುರ್ಗಾಣಿ ಮರುತೋ ನಾಹ ರಿಷ್ಯಥ ॥**

(ಋ. ಸಂ. ೫-೫೪-೪)

ಎಂಬ ಋಕ್ಕುಗಳಲ್ಲಿ ಸಾಯಣರು ಶಿಕ್ವಸಃ ಎಂಬ ಪದಕ್ಕೆ ಶಕ್ತಾಃ ಶಕ್ತಿಯುಳ್ಳವರು ಎಂದೂ, ಮತ್ತು

**ತ್ವಂ ತ್ಯಾ ಚಿದಚ್ಯುತಾಗ್ನೇ ಪಶುರ್ನ ಯವಸೇ ।**
**ಧಾಮಾ ಹ ಯತ್ತೇ ಅಜರ ವನಾ ವೃಶ್ಚಂತಿ ಶಿಕ್ವಸಃ ॥**

(ಋ. ಸಂ. ೬-೨-೯)

ಎಂಬಲ್ಲಿ ದೀಪ್ತಸ್ಯ ಪ್ರಕಾಶಮಾನನಾದ ಎಂದೂ,

**ತಮುಸ್ಮೇರಾ ಯುವತಯೋ ಯುವಾನಂ ಮರ್ಮೃಜ್ಯಮಾನಾಃ ಪರಿ ಯಂತ್ಯಾಪಃ ।**
**ಸ ಶುಕ್ರೇಭಿಃ ಶಿಕ್ವಭೀ ರೇವದಸ್ಮೇ ದೀದಾಯಾನಿಧ್ಮೋ ಘೃತನಿರ್ಣಿಗಪ್ಸು ।**

(ಋ ಸಂ. ೨-೩೫-೪)

ಎಂಬ ಋಕ್ಕಿನಲ್ಲಿ ಶಿಕ್ವಭಿಃ ಎಂದರೆ ತೇಜೋಭಿಃ ತೇಜಸ್ಸುಗಳೊಡನೆ ಎಂದೂ ಅರ್ಥಮಾಡಿದ್ದಾರೆ. ಈ ಅರ್ಥಗಳೆಲ್ಲಾ Monier williams ಎಂಬುವನು ಹೇಳಿರುವ ಅರ್ಥವನ್ನು ಸಮರ್ಥಿಸುತ್ತದೆ. ಇದೊಂದು ಕಡೆಯಲ್ಲಿ ಮಾತ್ರ **ರಜ್ಜುಭಿಃ** ಎಂದು ಹೇಳಿದ್ದಾರೆ. ಈ ಅರ್ಥವೂ ಈ ಸಂದರ್ಭಕ್ಕೆ ಸಮಂಜಸವಾಗಿದೆ.

**ಅರುಷೇಭಿಃ**—ಈ ಪದಕ್ಕೆ ಸಾಯಣರು **ಗಮನಶೀಲೈಃ** ಸಂಚರಿಸುವ ಸ್ವಭಾವವುಳ್ಳ ಎಂದರ್ಥಮಾಡಿ **ಅಂಗೇಭಿಃ** ಎಂಬುದಕ್ಕೆ ವಿಶೇಷಣವೆಂದು ತೋರಿಸಿದ್ದಾರೆ. ಅಥವಾ ಅರುಷವರ್ಣವುಳ್ಳ **ಅಂಗೇಭಿಃ** ಎಂದಾದರೂ ಆಗಬಹುದು. ಅರುಷ ಶಬ್ದಕ್ಕೆ ಅನೇಕ ಅರ್ಥಗಳಿರುವುದರಿಂದ ಸಂದರ್ಭಾನುಸಾರವಾಗಿ ತಕ್ಕ ಅರ್ಥಗಳನ್ನು ಗಮನಿಸಬಹುದು. ನಿರುಕ್ತಕಾರರು ಈ ಪದವನ್ನು **ಅಶ್ವನಾಮಗಳಲ್ಲಿಯೂ** (ನಿ. ೨-೨೬) **ಗತಿಕರ್ಮನಾಮಗಳಲ್ಲಿಯೂ** (ನಿ. ೩-೯) **ಉಷಸ್ಸಿನ** ಪರ್ಯಾಯನಾಮವಾಗಿಯೂ (ನಿ. ೨-೧೯) ಪಠಿಸಿದ್ದಾರೆ. ಅಲ್ಲದೇ

**ಏತಾ ಉ ತ್ಯಾ ಉಷಸಃ ಕೇತುಮಕ್ರತ ಪೂರ್ವೇ ಅರ್ಧೇ ರಜಸೋ ಭಾನುಮಂಜತೇ ।**
**ನಿಷ್ಕೃಣ್ವಾನಾ ಆಯುಧಾನೀವ ಧೃಷ್ಣವಃ ಪ್ರತಿ ಗಾವೋಽರುಷೀರ್ಯಂತಿ ಮಾತರಃ ॥**

(ಋ. ಸಂ. ೧-೯೨-೧)

ಎಂಬ ಋಕ್ಕನ್ನುದಾಹರಿಸಿ ಇಲ್ಲಿ **ಅರುಷೀಃ** ಎಂಬ **ಆರೋಚಮಾನಾ**–ಕಾಂತಿಯುಕ್ತವಾದ ಎಂದರ್ಥವಾಗಿ ಉಷಸ್ಸಿಗೆ ವಿಶೇಷಣವಾಗಿದೆ. ಹೀಗೆ ಈ ಪದವು ಕೆಲವು ಕಡೆ ವಿಶೇಷಣರೂಪವಾಗಿಯೂ ಇನ್ನು ಕೆಲವು ಕಡೆ ವಿಶೇಷ್ಯವಾಗಿಯೂ ಉಪಯೋಗಿಸಲ್ಪಟ್ಟು ಬೇರೆ ಬೇರೆ ಅರ್ಥಗಳನ್ನು ಕೊಡುತ್ತದೆ. ಉದಾಹರಣೆಗೆ—

**ಯುಂಜಂತಿ ಬ್ರಧ್ನಮರುಷಂ ಚರಂತಂ ಪರಿ ತಸ್ಥುಷಃ । ರೋಚಂತೇ ರೋಚನಾ ದಿವಿ ।**

(ಋ. ಸಂ. ೧-೬-೧)

ಎಂಬ ಋಕ್ಕಿನಲ್ಲಿರುವ **ಅರುಷ** ಶಬ್ದವನ್ನು ಪರಿಶೀಲಿಸಿದರೆ, ಇಲ್ಲಿ ಋಷಿಯು ಸೂರ್ಯೋದಯವನ್ನು ವರ್ಣಿಸಿದ್ದಾನೆ. ಇಂದ್ರನು ಪ್ರಕಾಶಮಾನವಾದ ಅಹಸ್ಸಿನ ದೇವತೆಯೆಂದೂ, **ಸೂರ್ಯನು** ಅವನ ಅಶ್ವವೆಂದೂ, **ಮರುತ್ತುಗಳು** ಅವನ ಸಖಿಗಳೆಂದೂ ಭಾವಿಸಿದೆ. **ಅರುಷ** ಶಬ್ದವು ಕೆಂಪುಬಣ್ಣವೆಂದು ಅರ್ಥಕೊಡುವುದಾದರೂ ಇಲ್ಲಿ **ಅಶ್ವಪರ್ಯಾಯವಾಗಿಯಾಗಲಿ** ಅಥವಾ **ಅಶ್ವರೂಪದ ಸೂರ್ಯಪರ್ಯಾಯವಾದ** ಪದವಾಗಲಿ ಆಗಿದೆ. **ಬ್ರಧ್ನವೆಂಬುದು** **ಅರುಷ** ಶಬ್ದಕ್ಕೆ ವಿಶೇಷಣವಾಗಿದೆ. ಇದೇ ರೀತಿ, ವಿಶೇಷ್ಯವಾಗಿದ್ದು ಸ್ವತಂತ್ರವಾದ ಮತ್ತು ರೂಢವಾದ ಅರ್ಥವನ್ನು ಕೊಡತಕ್ಕ ಸನ್ನಿವೇಶಗಳು ಬಹಳವಾಗಿವೆ. ಉದಾಹರಣೆಗೆ—

**ತವ ತ್ಯೇ ಅಗ್ನೇ ಹರಿತೋ ಘೃತಸ್ನಾ ರೋಹಿತಾಸ ಋಜ್ವಂಚಃ ಸ್ವಂಚಃ ।**
**ಅರುಷಾಸೋ ವೃಷಣ ಋಜುಮುಷ್ಕಾ ಆ ದೇವತಾತಿಮಹ್ವಂತ ದಸ್ಮಾಃ ॥**

(ಋ. ಸಂ. ೪-೬-೯)

ಎಂಬ ಋಕ್ಕಿನಲ್ಲಿ **ಹರಿತಃ, ರೋಹಿತಾಸಃ, ಅರುಷಾಸಃ** ಎಂಬ ವರ್ಣನಾಮಗಳು ಆಯಾ ವರ್ಣದ ಅಶ್ವಗಳನ್ನು ಸೂಚಿಸುತ್ತವೆ. ಮತ್ತು

**ಅವರ್ಧಯನ್ತ್ಸುಭಗಂ ಸಪ್ತ ಯಹ್ವೀಃ ಶ್ವೇತಂ ಜಜ್ಞಾನಮರುಷಂ ಮಹಿತ್ವಾ ।**
**ಶಿಶುಂ ನ ಜಾತಮಭ್ಯಾರುರಶ್ವಾ ದೇವಾಸೋ ಅಗ್ನಿಂ ಜನಿಮನ್ವಪುಷ್ಯನ್ ।**

(ಋ. ಸಂ. ೩-೧-೪)

ಎಂಬಲ್ಲಿ ಅಗ್ನಿಗೆ ವಿಶೇಷಣವಾಗಿಯೂ,

**ತ್ವಂ ನೃಚಕ್ಷಾ ವೃಷಭಾನು ಪೂರ್ವೀಃ ಕೃಷ್ಣಾಸ್ವಗ್ನೇ ಅರುಷೋ ವಿ ಭಾಹಿ ।**
**ವಸೋ ನೇಷಿ ಚ ಪರ್ಷಿ ಚಾತ್ಯಂಹಃ ಕೃಧೀ ನೋ ರಾಯ ಉಶಿಜೋ ಯವಿಷ್ಠ ॥**

(ಋ. ಸಂ. ೩-೧೫-೩)

ಎಂಬಲ್ಲಿ ಕ್ರಿಯಾವಿಶೇಷಣವಾಗಿಯೂ ಇದೆ. ಹೀಗೆಯೇ ೪-೩-೧೨ ; ೧-೧೧೮-೫ ೪-೪೩-೬ ೫-೭೩-೫, ಇತ್ಯಾದಿ ನಾನಾ ಋಕ್ಕುಗಳಲ್ಲಿ ವಿಶೇಷಣವಾಗಿ ಉಪಯೋಗಿಸಲ್ಪಟ್ಟಿದೆ. ಕೆಲವು ಕಡೆಗಳಲ್ಲಿ **ಅರುಷವೆಂದು** ಪ್ರತ್ಯೇಕವಾದ

ದೇವತೆಯನ್ನೇ ನಿರ್ದೇಶಿಸಿದ ಅಂಕಿತನಾಮವಾಗಿಯೂ ಉಪಯೋಗಿಸಿರುವುದನ್ನು ನೋಡಬಹುದು. ಎರಡು ಋಕ್ಕುಗಳನ್ನು ಮಾತ್ರ ಉದಾಹರಣೆಗೆ ತೆಗೆದುಕೊಂಡರೆ—

**ಅಪ ಸ್ವಸುರುಷಸೋ ನಗ್ಜಿಹೀತೇ ರಿಣಕ್ತಿ ಕೃಷ್ಣೀರರುಷಾಯ ಪಂಥಾಂ ।**
**ಅಶ್ವಾಮಘಾ ಗೋಮಘಾ ವಾಂ ಹುವೇಮ ದಿವಾ ನಕ್ತಂ ಶರುಮಸ್ಮದ್ಯುಯೋತಂ ॥**

(ಋ. ಸಂ. ೭-೭೧-೧)

ಇಲ್ಲಿ **ಅರುಷಾಯ** ಎಂಬ ಪದಕ್ಕೆ ಸಾಯಣರೇ ನಿರ್ದಿಷ್ಟವಾದ ಅರ್ಥವನ್ನು ಹೇಳಿಲ್ಲ. **ಆರೋಚಮಾನಾಯ ಅಹ್ನೇ ಸೂರ್ಯಾಯ** ವಾ ಎಂದು ಎರಡನ್ನೂ ಪರ್ಯಾಯವಾಗಿ ಹೇಳಿದ್ದಾರೆ. ಈ ಋಕ್ಕನ್ನು ವಿವರಿಸುವಾಗ Max Muller ಎಂಬ ಪಂಡಿತನ ಅಭಿಪ್ರಾಯವು ಗಮನಾರ್ಹವಾದುದು. ಆತನು,

Here Arusha shares the same half-mythological-character as Ushas, where we should speak of Dawn and morning as mere periods of time, the Vedic poet speaks of them as living and intelligent beings, half human, half divine, as powers of nature capable of understanding his prayers and powerful enough to reward his praises. I do not think that we need hesitate to take Arusha in this passage as a proper name of the morning, or of the morning sun to whom the dark Goddess, the Night, yields the path when he rises in the East

(The Sacred Books of the East. Vol· XXXI1—P· 21·)

ಇದೇ ರೀತಿಯಲ್ಲಿ,

**ವಿಶೋವಿಶ ಈಡ್ಯಮಧ್ವರೇಷ್ವದೃಪ್ತಕ್ರತುಮರತಿಂ ಯುವತ್ಯೋಃ ।**
**ದಿವಃ ಶಿಶುಂ ಸಹಸಃ ಸೂನುಮಗ್ನಿಂ ಯಜ್ಞಸ್ಯ ಕೇತುಮರುಷಂ ಯಜಧ್ಯೈ ॥**

(ಋ. ಸಂ. ೬-೪೯-೨)

ಎಂಬ ಋಕ್ಕಿನಲ್ಲಿಯೂ ಸಹ **ಅರುಷಂ** ಎಂಬ ಪದವು **ಅಗ್ನಿಗೆ** ವಿಶೇಷಣವಾಗಿರುವುದು ಸ್ಪಷ್ಟವಾಗಿದ್ದರೂ ಸಹ **ಅರುಷ ಪದವು** ಅಗ್ನಿಪರ್ಯಾಯವಾದ ಮತ್ತು ಅಗ್ನ್ಯಂಶವನ್ನು ಸೂಚಿಸುವ ಬೇರೆ ಅಂಕಿತನಾಮವೇ ಆಗಿದೆಯೆಂದು ಹೇಳಿದರೂ ತಪ್ಪಾಗಲಾರದು, ಈ ಋಕ್ಕನ್ನು ವಿವರಿಸುವಾಗಲೂ ಸಹ Max Muller ಎಂಬ ಪಂಡಿತನು ಈ ಪದದ ವಿಷಯದಲ್ಲಿ ತನ್ನ ಅಭಿಪ್ರಾಯವನ್ನು ಈ ರೀತಿ ಸೂಚಿಸಿದ್ದಾನೆ.

.... .... .... .... But I return to my original translation, and I prefer to see in Arusha as the representative of the rising Sun and, at the same time, of the sacrificial fire of the morning, but nevertheless as having in the mind of the poet a personality of his own. He is the child of Dyu, originally the offspring of heaven. He is the son of strength, originally generated by the strong rubbing of the Aranis. He is the light of the sacrifice, whether as reminding man that the time for the morning sacrifice has come, or as himself lighting the sacrifice on the eastern altar of the sky. Hs is Arusha, originally as clothed in bright red colour, but gradually changed into the representative of the morning.

( S. B. E. Vol· 32—P· 25-6 )

ಇದಲ್ಲದೇ, ಅರುಷೀ ಎಂಬ ಸ್ತ್ರೀಲಿಂಗದ ಪದದ ಪ್ರಯೋಗವಿರುವ ಕಡೆಗಳಲ್ಲಿರತಕ್ಕ ಅರ್ಥಗಳನ್ನು ಗಮನಿಸಿದರೆ.

ವಯಂ ಹಿ ತೇ ಅಮನ್ಮಹ್ಯಾನ್ತಾದಾ ಪರಾಕಾತ್ । ಅಶ್ವೇ ನ ಚಿತ್ರೇ ಅರುಷಿ ।

(ಋ. ಸಂ. ೧-೩೦-೨೧)

ಇತ್ಯಾದಿ ಋಕ್ಕುಗಳಲ್ಲಿ ಉಷೋದೇವತೆಯೆಂದೂ,

ಯುಕ್ಷ್ವಾ ಹ್ಯರುಷೀ ರಥೇ ಹರಿತೋ ದೇವ ರೋಹಿತಃ । ತಾಭಿರ್ದೇವಾಁ ಇಹಾ ವಹ।

(ಋ. ಸಂ. ೧-೧೪-೧೨)

ಅಧಿ ಶ್ರಿಯಂ ನಿ ದಧುಶ್ಚಾರುಮಸ್ಮಿನ್ದಿವೋ ಯದಕ್ಷೀ ಅಮೃತಾ ಅಕೃಣ್ವನ್ ।
ಅಧ ಕ್ಷರಂತಿ ಸಿಂಧವೋ ನ ಸೃಷ್ಟಾಃ ಪ್ರ ನೀಚೀರಗ್ನೇ ಅರುಷೀರಜಾನನ್ ।

(ಋ ಸಂ. ೧-೭೨-೧೦)

ಇತ್ಯಾದಿ ಋಕ್ಕುಗಳಲ್ಲಿ ಅಗ್ನಿಯ ಹೊಂಬಣ್ಣದ ಕುದುರೆಯೆಂದೂ, ಉಳಿದ ೮-೬೮-೧೮ ಇತ್ಯಾದಿ ಋಕ್ಕುಗಳಲ್ಲಿ ಸಾಮಾನ್ಯವಾದ ಕುದುರೆಯೆಂದೂ ಅರ್ಥವಾಗುತ್ತದೆ ಸ್ತ್ರೀಲಿಂಗದಲ್ಲಿ ಉಪಯೋಗಿಸಿರುವ **ಅರುಷೀ** ಎಂಬ ಪದದ ವಿಶೇಷಾರ್ಥಗಳನ್ನು ಕುರಿತು Max Mullerನು ಪುನಃ ಈರೀತಿ ಹೇಳಿದ್ದಾನೆ.

Further on, where the meanings attributable to Arushi in the Veda are collected, it is said: that Arushi means a red horse, also the teams of Agni and Ushas. Now, here surely, a distinction should have been made between those passages in which Arushi means a real horse and those where it expresses the imaginary steeds of Agni. The former, it should be observed, occur in one Mandala only, and in places of somewhat doubtful authority. Again. two passages are set apart where Arushi is supposed to mean flames. Now, it may be perfectly true that the red horses of Agni are meant for flames, just as the red horses of Indra may be the rays of the Sun. But, in that case, the red horses of Agni, should always have been thus translated, or rather interpreted, and not in one passage only.

( S. B. E. XXXII—P. 27 )

ಪ್ರಕೃತವಾದ ಋಕ್ಕಿನಲ್ಲಿ **ಅರುಷೇಭಿಃ** ಎಂಬ ಪದಕ್ಕೆ ಸಂಚಾರಸ್ವಭಾವವುಳ್ಳ ಎಂದಾಗಲಿ, ಹೊಂಬಣ್ಣವುಳ್ಳ ಎಂದಾಗಲಿ ಅರ್ಥಮಾಡಬಹುದು.

**ಸೂರಯಃ** - ಸರಣಯಃ ಮಾರ್ಗಾಃ । ಪ್ರಸರಿಸುವ ಮಾರ್ಗಗಳೆಂದು ಸಾಯಣರು ಅರ್ಥಮಾಡಿದ್ದಾರೆ. ಸಾಧಾರಣವಾಗಿ **ಸೂರಿ** ಶಬ್ದವು ಪ್ರಾಜ್ಞ ಎಂಬರ್ಥದಲ್ಲಿಯೇ ಉಪಯೋಗಿಸಲ್ಪಟ್ಟಿದೆ. ಪ್ರಾಜ್ಞನಾದ ಸ್ತೋತೃ ಎಂದು ತಾತ್ಪರ್ಯವಾಗುತ್ತದೆ. ರೇಭಃ, ಜರಿತಾ ಇತ್ಯಾದಿ **ಸ್ತೋತೃನಾಮ**ಗಳಲ್ಲಿ ನಿರುಕ್ತದಲ್ಲಿ ಪಠಿತವಾಗಿದೆ. (ನಿ. ೩-೧೯)

ಉಷೋ ಯೇ ತೇ ಪ್ರ ಯಾಮೇಷು ಯುಂಜತೇ ಮನೋ ದಾನಾಯ ಸೂರಯಃ ।
ಅತ್ರಾಹ ತತ್ಕಣ್ವ ಏಷಾಂ ಕಣ್ವತಮೋ ನಾಮ ಗೃಣಾತಿ ನೃಣಾಂ ।

(ಋ ಸಂ. ೧-೪೮-೪)

ಇದಂ ನಮೋ ವೃಷಭಾಯ ಸ್ವರಾಜೇ ಸತ್ಯಶುಷ್ಮಾಯ ತವಸೇಽವಾಚಿ ।
ಅಸ್ಮಿನ್ನಿಂದ್ರ ವೃಜನೇ ಸರ್ವವೀರಾಃ ಸ್ಮತ್ಸೂರಿಭಿಸ್ತವ ಶರ್ಮನ್ತ್ಸ್ಯಾಮ ।
(ಋ. ಸಂ. ೧-೫೧-೧೫)

ಇತ್ಯಾದಿ ಋಕ್ಕುಗಳಲ್ಲಿ ವಿದ್ವಾಂಸಃ, ವಿದ್ವದ್ಭಿಃ ಎಂದರ್ಥವಾಗುತ್ತದೆ. ಪ್ರಕೃತವಾದ ಋಕ್ಕಿನಲ್ಲೂ ಇನ್ನೂ ಕೆಲವು ಮಾತ್ರ ಋಕ್ಕುಗಳಲ್ಲೂ ಸಹ ಮೇಲೆ ಹೇಳಿರುವಂತೆ ಮಾರ್ಗಗಳು ಎಂದು ಅಗ್ನಿಪ್ರಸರಣದ ಮಾರ್ಗಗಳು ಸೂಚಿತವಾಗುತ್ತವೆ.

ವ್ಯಾಕರಣಪ್ರಕ್ರಿಯಾ

**ಯಾತಃ**—ಯಾ ಪ್ರಾಪಣೇ ಧಾತು. ಕ್ತ ಪ್ರತ್ಯಯ. ಅನಿಟ್ಟಾದುದರಿಂದ ಇಡಾಗಮ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಅಂಗೇಭಿಃ**—**ಬಹುಲಂ ಛಂದಸಿ** ಎಂಬುದರಿಂದ ಭಿಸಿಗೆ ಐಸ್ ಭಾವ ವಿಕಲ್ಪಿತವಾದುದರಿಂದ ಇಲ್ಲಿ ಬರುವುದಿಲ್ಲ. **ಬಹುವಚನೇಝಲ್ಯೇತ್** ಎಂಬುದರಿಂದ ಏತ್ವ.

**ಅರುಷೇಭಿಃ**—ಋಗತೌ ಧಾತು. **ಋಹನಿಭ್ಯಾಮುಷನ್** (ಉ. ಸೂ. ೪-೫೭೩) ಎಂಬುದರಿಂದ ಉಷನ್ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿಗೆ ಗುಣ. ರಪರವಾಗಿ ಬರುತ್ತದೆ. ವ್ಯತ್ಯಯದಿಂದ ಅಂತೋದಾತ್ತವಾಗುತ್ತದೆ ಹಿಂದಿನಂತೆ ಐಸ್ ಭಾವ ವಿಕಲ್ಪಿತವಾದುದರಿಂದ ಏತ್ವ.

**ಈಯತೇ**—ಈಙ್ ಗತೌ ಧಾತು. ದಿವಾದಿ. ಲಟ್ ಪ್ರಥಮಪುರುಷಏಕವಚನದಲ್ಲಿ ತ ಪ್ರತ್ಯಯ. ಟಿಗೆ ಏತ್ವ. **ದಿವಾದಿಭ್ಯಃಶ್ಯನ್** (ಪಾ. ಸೂ. ೩-೧-೬೯) ಎಂಬುದರಿಂದ ಶ್ಯನ್ ವಿಕರಣ. **ಸಾರ್ವಧಾತುಕಮಪಿತ್** ಎಂಬುದರಿಂದ ಇದಕ್ಕೆ ಙಿತ್ವವಿರುವುದರಿಂದ ಗುಣ ಬರುವುದಿಲ್ಲ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಕೃಷ್ಣಾಸಃ**—ಕೃಷ ವಿಲೇಖನೇ ಧಾತು. **ಕೃಷೇ ವರ್ಣೆ** (ಉ. ಸೂ. ೩-೩೮೪) ಎಂಬುದರಿಂದ ನಕ್ ಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಜಸ್ ಪರವಾದಾಗ **ಆಜ್ಜಸೇರಸುಕ್** ಎಂಬುದರಿಂದ ಅಸುಕಾಗಮ.

**ಧಕ್ಷಿ**—ದಹ ಭಸ್ಮೀಕರಣೇ. ಧಾತು. **ವ್ಯತ್ಯಯೋ ಬಹುಲಮ್** ಎಂಬುದರಿಂದ ತಿಪಿಗೆ ಸಿಪ್ ಬರುತ್ತದೆ. **ಬಹುಲಂ ಛಂದಸಿ** ಎಂಬುದರಿಂದ ಶಪಿಗೆ ಲುಕ್. **ಹೋಢಃ** ಎಂಬುದರಿಂದ ಹಕಾರಕ್ಕೆ ಢತ್ವ. **ಝಷಸ್ತಥೋಃ** ಎಂಬುದರಿಂದ ಧಾತು ದಕಾರಕ್ಕೆ ಧತ್ವ **ಷಢೋಃ ಕಃ ಸಿ** ಎಂಬುದರಿಂದ ಢಕಾರಕ್ಕೆ ಕತ್ವ ಆದೇಶ **ಪ್ರತ್ಯಯಯೋಃ** ಸೂತ್ರದಿಂದ ಷತ್ವ. ಧಕ್ಷಿ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಸೂರಯಃ**—ಷೂಙ್ ಪ್ರಾಣಿಪ್ರಸವೇ ಧಾತು **ಸೂಙಃಕ್ರಿಃ** (ಉ. ಸೂ. ೫-೫೭೪) ಎಂಬುದರಿಂದ ಕ್ರಿ ಪ್ರತ್ಯಯ ಕಿತ್ತಾದುದರಿಂದ ಗುಣ ಬರುವುದಿಲ್ಲ. ಪ್ರತ್ಯಯಸ್ವರ ಬರುತ್ತದೆ. ಪ್ರಥಮಾಬಹುವಚನಾಂತರೂಪ.

**ತ್ವೇಷಥಾತ್**—ತ್ವಿಷ ದೀಪ್ತೌ ಧಾತು. ಉಣಾದಿಯಲ್ಲಿ ಬಹುಲಗ್ರಹಣವಿರುವುದರಿಂದ ಅಥ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿನ ಲಘೂಪಧೆಗೆ ಗುಣ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ. ಪಂಚಮೀ ಏಕವಚನಾಂತರೂಪ.

**ಈಷತೇ**—ಈಷ ಗತಿಹಿಂಸಾದರ್ಶನೇಷು. ಧಾತು. ಭ್ವಾದಿ ಲಟ್ ಪ್ರಥಮಪುರುಷಬಹುವಚನದಲ್ಲಿ ಝ ಪ್ರತ್ಯಯ. **ಬಹುಲಂ ಛಂದಸಿ** ಎಂಬುದರಿಂದ ಶಪಿಗೆ ಲುಕ್. **ಆತ್ಮನೇಪದೇಷ್ವನತಃ** (ಪಾ. ಸೂ. ೭-೧-೫) ಎಂಬುದರಿಂದ ಝ ಪ್ರತ್ಯಯಕ್ಕೆ ಅತಾದೇಶ. ತಿಙಂತನಿಘಾತಸ್ವರ ಬರುತ್ತದೆ.

**ವಯಃ**— ವಾ ಗತಿಗಂಧನಯೋಃ ಧಾತು. **ವಾತೇರ್ಡಿಚ್ಚ** (ಉ. ಸೂ. ೫-೫೭೩) ಎಂಬುದರಿಂದ ಇಣ್ ಪ್ರತ್ಯಯ. ಡಿತ್ವ ವಿಧಾನದಿಂದ ಟಿಗೆ ಲೋಪ. ಪ್ರತ್ಯಯಸ್ವರ ಬರುತ್ತದೆ. ವಿಃ ಎಂದು ರೂಪವಾಗುತ್ತದೆ. ಪ್ರಥಮಾವಿಭಕ್ತಿಬಹುವಚನಾಂತರೂಪ. ॥ ೮ ॥

ಸಂಹಿತಾಪಾಠಃ

**ತ್ವಯಾ ಹ್ಯಗ್ನೇ ವರುಣೋ ಧೃತವ್ರತೋ ಮಿತ್ರಃ ಶಾಶದ್ರೇ ಅರ್ಯಮಾ ಸುದಾನವಃ ।**
**ಯತ್ಸೀಮನು ಕ್ರತುನಾ ವಿಶ್ವಥಾ ವಿಭುರರಾನ್ನ ನೇಮಿಃ ಪರಿಭೂರಜಾಯಥಾಃ ॥ ೯ ॥**

ಪದಪಾಠಃ

ತ್ವಯಾ । ಹಿ । ಅಗ್ನೇ । ವರುಣಃ । ಧೃತಽವ್ರತಃ । ಮಿತ್ರಃ । ಶಾಶದ್ರೇ । ಅರ್ಯಮಾ । ಸುಽದಾನವಃ । ಯತ್ । ಸೀಂ । ಅನು । ಕ್ರತುನಾ । ವಿಶ್ವಽಥಾ । ವಿಽಭುಃ । ಅರಾನ್ । ನ । ನೇಮಿಃ । ಪರಿಽಭೂಃ । ಅಜಾಯಥಾಃ ॥ ೯ ॥

ಸಾಯಣಭಾಷ್ಯಂ

ಹೇ ಅಗ್ನೇ ತ್ವಯಾ ಖಲು ವರುಣೋ ರಾತ್ರ್ಯಭಿಮಾನೀ ದೇವೋ ಧೃತವ್ರತಃ ಸ್ವೀಕೃತವರ್ಷಣಾದಿಕರ್ಮಾ ಭವತಿ । ತಥಾ ಮಿತ್ರೋಽಹರಭಿಮಾನೀ ದೇವಃ ಶಾಶದ್ರೇ । ಶಾತಯತಿ ತಮಃ ॥ ಶದ್ಲೃ ಶಾತನೇ । ಛಾಂದಸೋ ಲಿಜ್ । ಬಹುಲಂ ಛಂದಸೀತಿ ರುಟ್ । ತುಜಾದಿತ್ವಾದಭ್ಯಾಸದೀರ್ಘಃ ॥ ತಥಾರ್ಯಮೋಭಯೋರ್ಮಧ್ಯವರ್ತೀ ದೇವಃ ಸುದಾನವಃ ಶೋಭನದಾನೋ ಭವತಿ ॥ ವ್ಯತ್ಯಯೇನ ಬಹುವಚನಂ ॥ ಯದ್ವಾ । ಏತೇ ವರುಣಾದಯಃ ಸುದಾನವಃ ಶೋಭನದಾನಾಃ ಸ್ವಸ್ವಕಾರ್ಯಕರ್ತಾರಸ್ತ್ವಯಾ

ಹಿ ಶಾಶದ್ರೇ । ತೀಕ್ಷ್ಣೀಕ್ರಿಯಂತೇ । ಹಿಶಬ್ದೋ ಮಂತ್ರಾಂತರಪ್ರಸಿದ್ಧಿದ್ಯೋತನಾರ್ಥಃ । ತ್ವಮಗ್ನೇ ವರುಣೋ ಜಾಯಸೇ । ಋ. ೫-೩-೧ । ಇತಿ ಹಿ ಮಂತ್ರಾಂತರಂ ॥ ಶದೇಃ ಕರ್ಮಣಿ ಛಾಂದಸೋ ಲಿಟ್। ಇರಯೋ ರ ಇತಿ ರೇಭಾವಃ । ಹಿ ಚೇತಿ ನಿಘಾತಾಭಾವಃ ॥ ವರುಣಾದೀನಾಮಗ್ನ್ಯಾಯತ್ತತ್ವೆ ಉಪಪತ್ತಿಮಾಹ । ಯದ್ಯಸ್ಮಾತ್ಕಾರಣಾತ್ ಹೇ ಅಗ್ನೇ ಸೀಂ ಸರ್ವತಃ ಕ್ರತುನಾ ಕರ್ಮಣಾ ವಿಶ್ವಥಾ ವಿಶ್ವ ಇವ ವಿಶ್ವಾತ್ಮಕ ಇವ ವಿಭುರ್ನಿರ್ಮಿತಾಯ್ಯರ್ವಮಾತ್ಮನಾ ಸರ್ವವ್ಯಾಪೀ ಪರಿಭೂಃ ಸ್ವತೇಜಸಾ ಸರ್ವತಃ ಪರಿಭಾವಿತಾ ಸನ್ನನುಕ್ರಮೇಣಾಜಾಯಥಾಃ ಜಾಯಸೇ ಪ್ರಾದುರ್ಭವಸಿ । ತತ್ರ ದೃಷ್ಟಾಂತಃ । ಅರಾನ್ರಥಸ್ಯ ಚಕ್ರಾನ್ನೇಮಿರ್ನ ವಾಹ್ಯವಲಯ ಇವ । ಸ ಯಥಾ ವ್ಯಾಪ್ಯ ತಿಷ್ಠತಿ ತದ್ವದಯಮಗ್ನಿರ್ವರುಣಾದೀನ್ವ್ಯಾಪ್ಯ ತಿಷ್ಠತಿ ॥

ಪ್ರತಿಪದಾರ್ಥ

**ಅಗ್ನೇ**—ಎಲೈ ಅಗ್ನಿಯೇ, । **ತ್ವಯಾ ಹಿ**—ನಿನ್ನಿಂದಲೇ (ನಿನ್ನ ಸಹಾಯದಿಂದಲೇ) । [**ವರುಣಃ**—ವರುಣನು । **ಧೃತವ್ರತಃ**—(ತನ್ನ ವರ್ಣಾದಿ) ಕರ್ತವ್ಯಗಳನ್ನು ಸರಿಯಾಗಿ ನಿರ್ವಹಿಸುತ್ತಾನೆ। **ಮಿತ್ರಃ**—ಅಹರಭಿಮಾನಿದೇವನಾದ ಮಿತ್ರನು । **ಶಾಶದ್ರೇ**—ಕತ್ತಲನ್ನು ಮಾಡುತ್ತಾನೆ । **ಅರ್ಯಮಾ**—ಅರ್ಯಮನು । **ಸುದಾನವಃ**—ಶ್ರೇಷ್ಠವಾದ ದಾನಿಯಾಗಿ (ಆಗುತ್ತಾನೆ) ] । ಅಥವಾ [**ಧೃತವ್ರತಃ**—ತನ್ನ ಕರ್ತವ್ಯವನ್ನು ನಿರ್ವಹಿಸುವ । **ವರುಣಃ**—ವರುಣನೂ । **ಸುದಾನವಃ**—ಉದಾರವಾದ ದಾನಿಗಳಾದ । **ಮಿತ್ರಃ**—ಮಿತ್ರನೂ (ಮತ್ತು) । **ಅರ್ಯಮಾ**—ಅರ್ಯಮನೂ ಸಹ । **ತ್ವಯಾ ಹಿ**—ನಿನ್ನಿಂದಲೇ । **ಶಾಶದ್ರೇ**—ತೀಕ್ಷ್ಣವಾದ ಚೈತನ್ಯವುಳ್ಳವರಾಗುತ್ತಾರೆ । ] **ಯತ್**—ಯಾವ ಕಾರಣದಿಂದ । **ಸೀಂ**—ಸುತ್ತಲೂ । **ಕ್ರತುನಾ**—ಸಕಲ ಕರ್ಮಗಳಿಂದಲೂ । **ಅರಾನ್**—ರಥದ ಶಂಕುಗಳನ್ನು । **ನೇಮಿಃ ನ**—ಚಕ್ರದ ವಲಯವು ಸುತ್ತುವರಿಯುವಂತೆ । **ವಿಶ್ವಥಾ**—ವಿಶ್ವಾತ್ಮಕನಾಗಿಯೂ । **ವಿಭುಃ**—ಸರ್ವವ್ಯಾಪಿಯಾಗಿಯೂ । **ಪರಿಭೂಃ**—(ನಿನ್ನ ತೇಜಸ್ಸಿನಿಂದ) ಎಲ್ಲರನ್ನೂ ಮೀರಿಸುತ್ತಾ । **ಅಜಾಯಥಾಃ**—ಉತ್ಪನ್ನನಾಗಿದ್ದೀಯೆ.

ಭಾವಾರ್ಥ

ಎಲೈ ಅಗ್ನಿಯೇ, ತನ್ನ ಕರ್ತವ್ಯವನ್ನು ಸರಿಯಾಗಿ ನಿರ್ವಹಿಸುವ ವರುಣನೂ, ಉದಾರವಾದ ದಾನಿಗಳಾದ ಮಿತ್ರನೂ ಮತ್ತು ಅರ್ಯಮನೂ ಸಹ ನಿನ್ನ ಸಹಾಯದಿಂದಲೇ ತೀಕ್ಷ್ಣವಾದ ಚೈತನ್ಯವನ್ನು ಪಡೆಯುತ್ತಾರೆ. ನೀನೂ ಸಹ ಆ ಕಾರಣದಿಂದಲೇ ರಥದ ಶಂಕುಪಟ್ಟಿಗಳನ್ನು ಚಕ್ರದವಲಯವು ಸುತ್ತುವರಿಯುವಂತೆ ನಿನ್ನ ಸಕಲ ಕರ್ಮಗಳಿಂದಲೂ ಸಹ ವಿಶ್ವಾತ್ಮಕನಾಗಿಯೂ ಸರ್ವವ್ಯಾಪಿಯಾಗಿಯೂ ಮತ್ತು ನಿನ್ನ ತೇಜಸ್ಸಿನಿಂದ ಎಲ್ಲಾ ಕಡೆಯೂ ಆಕ್ರಮಿಸಿದವನಾಗಿಯೂ ಉತ್ಪನ್ನನಾಗಿದ್ದೀಯೆ.

English Translation

By you Agni, Varuna, observant of his duties, and Mitra and Aryaman, bountiful divinities, are animated, so that you have been born comprehending them all universally in all ( their ) functions, and encompassing ( them all ) as the circumference ( encompasses ) the spokes (of a wheel).

**ವಿಶೇಷವಿಷಯಗಳು**

ಈ ಋಕ್ಕಿನ ಪೂರ್ವಾರ್ಧಕ್ಕೆ ಎರಡು ವಿಧವಾದ ಅನ್ವಯವನ್ನು ಸಾಯಣರು ಮಾಡಿದ್ದಾರೆ. ಮೊದಲನೆಯ ಅನ್ವಯದ ಪ್ರಕಾರ **ವರುಣ, ಮಿತ್ರ** ಮತ್ತು **ಅರ್ಯಮ** ಈ ದೇವತೆಗಳಿಗೆ ವೈಯಕ್ತಿವಾದ ಗುಣಗಳನ್ನೂ ಕರ್ತವ್ಯಗಳನ್ನೂ ನಿರ್ದೇಶಿಸಿ ಅವರೆಲ್ಲರೂ ಅಗ್ನಿಯ ಸಹಾಯದಿಂದಲೇ ತಮ್ಮ ಗುಣಗಳನ್ನೂ ಪ್ರಕಾಶಪಡಿಸಿ ತಮ್ಮ ಕರ್ತವ್ಯವನ್ನು ನೆರವೇರಿಸುತ್ತಾರೆಂದು ಹೇಳಿ ಅಗ್ನಿಸ್ತುತಿಯಲ್ಲಿ ಪರ್ಯಾವಸಾನವಾಗುವಂತೆ ಮಾಡಿದೆ. ಈ ಅನ್ವಯದಂತೆ **ವರುಣನು ಧೃತವ್ರತನು; ಮಿತ್ರನು ತಮಸ್ಸನ್ನು ನಾಶಮಾಡುವವನು** ಮತ್ತು **ಅರ್ಯಮನು ಸುದಾನಿಯು**. ಈ ಅನ್ವಯಕ್ಕೆ ಶ್ರುತಿವಾಕ್ಯಗಳ ಪ್ರಮಾಣವಿರುವುದು.

**ವರುಣನು** ಧೃತವ್ರತನೆಂದು ಋಕ್ಸಂಹಿತೆಯಲ್ಲಿ ಪ್ರಸಿದ್ಧನಾಗಿದ್ದಾನೆ. ಅವನು ಸಕಲವಾದ ನೈತಿಕವ್ಯವಹಾರಗಳಿಗೂ ನೇತೃವಾಗಿಯೂ ಶಿಕ್ಷಕನಾಗಿಯೂ ಇರುವ ವಿಷಯವನ್ನು ಅನೇಕ ಕಡೆಗಳಲ್ಲಿ ಸ್ತುತಿಸಿದೆ.

**ತ್ವಮಗ್ನೇ ರಾಜಾ ವರುಣೋ ಧೃತವ್ರತಸ್ತ್ವಂ ಮಿತ್ರೋ ಭವಸಿ ದಸ್ಮ ಈಡ್ಯಃ ।**
**ತ್ವಮರ್ಯಮಾ ಸತ್ಪತಿರ್ಯಸ್ಯ ಸಂಭುಜಂ ತ್ವಮಂಶೋ ವಿದಥೇ ದೇವ ಭಾಜಯುಃ ॥**
(ಋ. ಸಂ. ೨-೧-೪)

ಎಂಬ ಋಕ್ಕಿನಲ್ಲಿ ಧೃತವ್ರತನಾದ ವರುಣನೂ, ಈಡ್ಯನಾದ ಮಿತ್ರನೂ ಮತ್ತು ಸತ್ಪತಿಯಾದ ಅರ್ಯಮನೂ ಅಗ್ನಿಯೇ ಆಗಿರುವರು ಎಂದು ಹೇಳಿರುವಂತೆ ಈ ಋಕ್ಕಿನಲ್ಲಿಯೂ ಸಹ **ತ್ವಯಾ ಹ್ಯಗ್ನೇ ವರುಣೋ ಧೃತವ್ರತಃ** ಇತ್ಯಾದಿಯಾಗಿ ವರುಣಾದಿಗಳ ವ್ಯವಹಾರಶಕ್ತಿಗೆಲ್ಲಾ **ಅಗ್ನಿಯೇ** ಮೂಲಕಾರಣವೆಂದು ಹೇಳಿದೆ. ಅಲ್ಲದೇ,

**ಸೋಽಗ್ನೇರೇಕೋ ಭಾಗೋಽಥ ಯದ್ವಾರುಣೋ ಯವಮಯಶ್ಚರುರ್ಭವತಿ ಯೋ ವೈ ವರುಣಃ ಸೋಽಗ್ನಿಃ ಸೋಽಗ್ನೇರ್ದ್ವಿತೀಯೋ ಭಾಗಃ ।**
(ಶ. ಬ್ರಾ. ೫-೨-೪-೧೩)

ಇತ್ಯಾದಿ ವಾಕ್ಯಗಳು ಅಗ್ನಿಗೂ ವರುಣನಿಗೂ ತಾದಾತ್ಮ್ಯವನ್ನು ಹೇಳುತ್ತವೆ. ಅಗ್ನಿಸಂಬಂಧಿಗಳಾದ ಮಿತ್ರಾವರುಣರಿಗೆ ಲೋಕವ್ಯವಹಾರ ಕಾರ್ಯದಲ್ಲಿ ನಿಯತವಾಗಿರುವ,

**ಕ್ರತೂದಕ್ಷೌ ಹ ವಾ ಅಸ್ಯ ಮಿತ್ರಾವರುಣೌ । ಏತನ್ನ್ವಧ್ಯಾತ್ಮಂ ಸ ಯದೇವ ಮನಸಾ ಕಾಮಯತ ಇದಂ ಮೇ ಸ್ಯಾದಿದಂ ಕುರ್ವೀಯೇತಿ ಸ ಏವ ಕ್ರತುರಥ ಯದಸ್ಮೈ ತತ್ಸಮೃಧ್ಯತೇ ಸ ದಕ್ಷೋ ಮಿತ್ರ ಏವ ಕ್ರತುರ್ವರುಣೋ ದಕ್ಷೋ ಬ್ರಹ್ಮೈವ ಮಿತ್ರಃ ಕ್ಷತ್ರಂ ವರುಣಃ ।**
(ಶ. ಬ್ರಾ. ೪-೧-೪-೧)

ಇತ್ಯಾದಿವಾಕ್ಯಗಳಲ್ಲಿ **ಮಿತ್ರನು ಸಂಕಲ್ಪಕಾರಕನೆಂದೂ** ಆ ಸಂಕಲ್ಪವನ್ನು ನೆರವೇರಿಸಲು ವರುಣನು ಕ್ರಿಯಾಕಾರಕನೆಂದೂ ಅವರವರ ಸಂಬಂಧವನ್ನು ತಿಳಿಸಿ ಹೇಳಿದೆ.

**ಮಿತ್ರಃ ಶಾತದ್ರೇ**—ಅಹರಭಿಮಾನೀ ದೇವಃ **ತಮಃ ಶಾತಯತಿ** ಮಿತ್ರನು ಅಹರಭಿಮಾನಿಯಾದ ದೇವತೆಯೆಂದೂ ರಾತ್ರಿಯ ಕಗ್ಗತ್ತಲೆಯನ್ನೆಲ್ಲಾ ನಾಶಮಾಡತಕ್ಕವನೆಂದೂ ಅವನ ಕಾರ್ಯವನ್ನೂ ಸ್ವರೂಪಶಕ್ತಿಯನ್ನೂ ಹೇಳಿದೆ. ಹಾಗೆಯೇ ವರುಣನು ರಾತ್ರ್ಯಭಿಮಾನಿಯಾದ ದೇವತೆಯೆಂದು ಅವನ ಜೊತೆಯಲ್ಲಿಯೇ ಹೇಳಿದೆ.

**ಪ್ರಾಣಾಪಾನೌಹ್ಯೇತೌ ಯದುಪಾಗ್‌ಶ್ವಂತರ್ಯಾಮೌ ಮಿತ್ರೋಹರಜನಯದ್ವರುಣೋ ರಾತ್ರಿಂ ತತೋ ವಾ ಇದಂ ವ್ಯಾಚ್ಛದ್ಯನ್ಮೈತ್ರಾವರುಣೋ ಗೃಹ್ಯತೇ ವ್ಯುಷ್ಟ್ಯೈ ।**
(ತೈ. ಸಂ. ೬-೪-೮-೪)

ಎಂಬ ಸಂಹಿತಾವಾಕ್ಯಗಳಲ್ಲೂ ಮತ್ತು ಬ್ರಾಹ್ಮಣಗಳಲ್ಲೂ ಹೇಳಿರುವುದನ್ನೂ ಮುಂದೆ ಇದೇ ಅಧ್ಯಾಯದ ೧೫೧-೧೫೩ನೇ ಸೂಕ್ತಗಳಲ್ಲಿ ವಿವರಿಸಲಾಗುತ್ತೆ.

ಎರಡನೇ ಅನ್ವಯದ ಪ್ರಕಾರ **ಮಿತ್ರ ಶಾಶದ್ರೇ** ಮಿತ್ರನು ಶತ್ರುಲನ್ನು ಅಗ್ನಿಯ ಸಹಾಯದಿಂದ ನಾಶ ಮಾಡುತ್ತಾನೆ ಎನ್ನುವುದರ ಬದಲು, **ತ್ವಯಾ ಹಿ ಮಿತ್ರಃ, ವರುಣಃ, ಅರ್ಯಮಾ ಶಾಶದ್ರೇ,** ಈ ದೇವತೆಗಳೆಲ್ಲಾ ನಿನ್ನಿಂದಲೇ ಚೈತನ್ಯಗೊಳ್ಳುತ್ತಾರೆ ಎಂದು ಅಗ್ನಿಯನ್ನು ಸಂಬೋಧಿಸಬೇಕಾಗುತ್ತದೆ.

**ಉಷಉಷೋ ಹಿ ವಸೋ ಅಗ್ರಮೇಷಿ ತ್ವಂ ಯಮಯೋರಭವೋ ವಿಭಾವಾ ।**
**ಋತಾಯ ಸಪ್ತ ದಧಿಷೇ ಪದಾನಿ ಜನಯನ್ಮಿತ್ರಂ ತನ್ವೆಃ ಸ್ವಾಯೈ ॥**
(ಋ. ಸಂ. ೧೦-೮-೪)

ಇತ್ಯಾದಿ ಋಕ್ಕುಗಳಲ್ಲಿ **ಮಿತ್ರಾದಿಗಳ** ಜನಕನಾದುದರಿಂದ ಅಗ್ನಿಯೇ ಇವರಿಗೆ ಚೈತನ್ಯಕಾರಕನೆಂದು ಹೇಳಿರುವುದರಿಂದ ಎರಡನೆಯ ಅನ್ವಯವೂ ಸಾಧ್ಯವಾಗುತ್ತದೆ.

ಋಕ್ಕಿನ ಉತ್ತರಾರ್ಧದಲ್ಲಿ **ವಿಭುಃ, ಪರಿಭೂಃ** ಎಂಬ ವಿಶೇಷಣಗಳಿಂದ ಅಗ್ನಿಯ ಸರ್ವವ್ಯಾಪಕತ್ವವೂ ಸರ್ವಶ್ರೇಷ್ಠತ್ವವೂ ಸೂಚಿತವಾಗಿದೆ. ಮತ್ತು ಕರ್ಮಗಳನ್ನೂ ಅಗ್ನಿಯನ್ನೂ ರಥದ ಶಂಕು ಮತ್ತು ವಲಯಗಳಿಗೆ ಹೋಲಿಸಿರುವುದರಿಂದ ಯಾಗಾದಿಕರ್ಮಗಳಿಗೂ ಅಗ್ನಿಗೂ ಇರತಕ್ಕ ತಾದಾತ್ಮ್ಯವೂ, ನಿಯತವಾದುದೂ ಅಭಿನ್ನವಾದುದೂ ಆದ ಸಂಬಂಧವೂ ತಿಳಿಯುತ್ತದೆ.

ಯಜ್ಞವು ವಿಶ್ವತತ್ತ್ವವನ್ನು ಪ್ರತಿಬಿಂಬಿಸುತ್ತದೆ. ಯಜ್ಞವೇದಿಯು ಯಜ್ಞದ ನಾಭಿಯಾದುದರಿಂದ ವಿಶ್ವಕ್ಕೇ ನಾಭಿಯಾಗಿರುತ್ತದೆ. ಈ ನಾಭಿಯಲ್ಲಿ ಪ್ರತಿಷ್ಠಿತನಾದ ಅಗ್ನಿಯು ವಿಶ್ವದ ಸಕಲ ತತ್ವಕ್ಕೂ ಕೇಂದ್ರನಾಗಿಯೂ ಮತ್ತು ಸರ್ವವ್ಯಾಪಕನಾಗಿಯೂ ಇರುತ್ತಾನೆ. ಸೂರ್ಯಚಂದ್ರಾದಿ ಸಕಲ ಗ್ರಹಗಳೂ ಈ ಕೇಂದ್ರವನ್ನೇ ತಮ್ಮ ಚಲನಗಳಿಗೆ ಆಶ್ರಯವನ್ನಾಗಿಟ್ಟುಕೊಂಡಿರುತ್ತವೆ.

**ದ್ಯೌರ್ಹ ತ್ವೇವೈಷೋಽಗ್ನಿಶ್ಚಿತಃ । ತಸ್ಯಾಪ ಏವ ಪರಿಶ್ರಿತೋ ಯಥಾ ಹ ವಾ ಇದಂ ಕೋಶಃ ಸಮುಬ್ಜಿತ ಏವಮಿಮೇ ಲೋಕಾ ಅಪ್ಸ್ವಂತಸ್ತದ್ಯಾ ಇಮಾಂ ಲೋಕಾನ್ಪರೇಣಾಪಸ್ತಾಃ ಪರಿಶ್ರಿತೋ ದೇವಾ ಯಜುಷ್ಮತ್ಯ ಇಷ್ಟಕಾ ಯದೇವೈತಸ್ಮಿಂಲ್ಲೋಕೇಽನ್ನಂ ತತ್ಪೂದದೋಹಾ ನಕ್ಷತ್ರಾಣಿ ಪುರೀಷಮಾಹುತಯಃ ಸಮಿಧ ಆದಿತ್ಯೋ ಲೋಕಂ ಪೃಣಾ ತದ್ವಾ ಏತತ್ಸರ್ವಮಾದಿತ್ಯಮೇವಾಭಿಸಂಪದ್ಯತೇ ತತ್ಸರ್ವೋಽಗ್ನಿಃ ॥**
(ಶ. ಬ್ರಾ. ೧೦-೫-೪-೩)

**ಸರ್ವಾಣಿ ಹ ತ್ವೇವ ಭೂತಾನಿ । ಸರ್ವೇ ದೇವಾ ಏಷೋಽಗ್ನಿಶ್ಚಿತ ಆಪೋ ವೈ ಸರ್ವೇ ದೇವಾಸ್ಸರ್ವಾಣಿ ಭೂತಾನಿ ತಾ ಹೈತಾ ಆಪ ಏವೈಷೋಽಗ್ನಿಶ್ಚಿತಸ್ತಸ್ಯ ನಾವ್ಯಾ ಏವ ಪರಿಶ್ರಿತಸ್ತಾಃ ಷಷ್ಟಿಶ್ಚ ತ್ರೀಣಿ ಚ ಶತಾನಿ ಭವಂತಿ...... ಯೋಽಯಂ ಹಿರಣ್ಮಯಃ ಪುರುಷಃ ॥**
(ಶ. ಬ್ರಾ. ೧೦-೫-೪-೧೪)

ಎಂಬ ವಾಕ್ಯಗಳಲ್ಲಿ ಅಗ್ನಿವೇದಿಕೆಯಲ್ಲಿ ಇದ್ದನಾದ ಅಗ್ನಿಯು ಸಕಲ ಲೋಕಗಳನ್ನು ವ್ಯಾಪಿಸುವವನಾಗಿಯೂ, ಸಕಲ ಕರ್ಮಗಳಿಗೂ ಅಧ್ಯಕ್ಷನಾಗಿಯೂ ಈ ಕೇಂದ್ರವನ್ನಾಶ್ರಯಿಸಿಯೇ ಸರ್ವವ್ಯವಹಾರಗಳೂ ನಡೆಯುವುದಾಗಿಯೂ ವರ್ಣಿತವಾಗಿದೆ. ಆದುದರಿಂದಲೇ ಪ್ರಕೃತವಾದ ಋಕ್ಕಿನಲ್ಲಿ **ವಿಶ್ವಥಾ** ಎಂಬ ವಿಶೇಷಣವು ಅಗ್ನಿಯು ವಿಶ್ವಾತ್ಮಕನಾದ ಸ್ವರೂಪವನ್ನು ತಿಳಿಸುತ್ತದೆ. ಅಗ್ನಿಯೇ ಹೋತೃವು, ಅಗ್ನಿಯೇ ಅಧ್ವರ್ಯುವು, ಇವನೇ ಯಜ್ಞವು-ಎಂದು ಸಕಲ ಯಜ್ಞಾಂಗಗಳೂ ಮತ್ತು ಯಜ್ಞಕ್ರಿಯೆಗಳೂ ಅಗ್ನಿಯಲ್ಲಿಯೇ ಸುತ್ತುವರಿದು ಆಶ್ರಯವನ್ನು ಪಡೆಯುವುದರಿಂದ ಈ ರಥನೇಮಿಯ ಉಪಮಾನವು ಉಚಿತವಾಗಿದೆ.

**ದಿವಶ್ಚಿತ್ತೇ ಬೃಹತೋ ಜಾತವೇದೋ ವೈಶ್ವಾನರ ಪ್ರ ರಿರಿಚೇ ಮಹಿತ್ವಂ ।**
**ರಾಜಾ ಕೃಷ್ಟೀನಾಮಸಿ ಮಾನುಷೀಣಾಂ ಯುಧಾ ದೇವೇಭ್ಯೋ ವರಿವಶ್ಚಕರ್ಥ ॥**
(ಋ. ಸಂ. ೧-೫೯-೫)

**ವೈಶ್ವಾನರ ತವ ಧಾಮಾನ್ಯಾ ಚಕೇ ಯೇಭಿಃ ಸ್ವರ್ವಿದಭವೋ ವಿಚಕ್ಷಣ ।**
**ಜಾತ ಆಪೃಣೋ ಭುವನಾನಿ ರೋದಸೀ ಅಗ್ನೇ ತಾ ವಿಶ್ವಾ ಪರಿಭೂರಸಿ ತ್ಮನಾ ॥**
(ಋ. ಸಂ. ೩-೩-೧೦)

ಇತ್ಯಾದಿ ಋಕ್ಕುಗಳಲ್ಲಿ ಅಗ್ನಿಯ ವಿಭುತ್ವವನ್ನೂ ಪರಿಭಾವಿತ್ವವನ್ನೂ ವರ್ಣಿಸಿ ಅಗ್ನಿಯು ತನ್ನ ತೇಜಸ್ಸಿನಿಂದ ಸಕಲ ದೇವಮಾನವಾದಿಗಳನ್ನೂ ಮೀರಿಸುತ್ತಾನೆಂದಿರುವ ಅಂಶವನ್ನು ಪ್ರಕೃತವಾದ ಋಕ್ಕಿನಲ್ಲಿಯೂ ಹೇಳಿದೆ.

॥ ವ್ಯಾಕರಣಪ್ರಕ್ರಿಯಾ ॥

**ಅಗ್ನೇ—ಆಮಂತ್ರಿತಸ್ಯ ಚ** (ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಧೃತವ್ರತಃ**—ಧೃತಂ ವ್ರತಂ ಯೇನ ಸಃ ಧೃತವ್ರತಃ **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್** (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಶಾಶದ್ರೇ**—ಶದ್ಲೃ ಶಾತನೇ ಧಾತು **ಛಂದಸಿ ಲುಙ್ಲಙ್ಲಿಟಃ** (ಪಾ. ಸೂ ೩-೪-೬) ಎಂಬುದರಿಂದ ವರ್ತಮಾನಾರ್ಥದಲ್ಲಿ ಲಿಟ್. ಪ್ರಥಮಪುರುಷಏಕವಚನದಲ್ಲಿ **ಲಿಟಸ್ತಝಯೋರೇಶಿರೇಚ್** (ಪಾ. ಸೂ. ೩-೪-೮೧) ಎಂಬುದರಿಂದ ಏಶಾದೇಶ. ಅದನ್ನು ನಿಮಿತ್ತೀಕರಿಸಿ ಧಾತುವಿಗೆ ದ್ವಿತ್ವ. ಅಭ್ಯಾಸದಲ್ಲಿ ಆದಿಹಲ್‌ಶೇಷ ಬಂದಾಗ **ತುಜಾದೀನಾಂ ದೀರ್ಘೋಽಭ್ಯಾಸಸ್ಯ** (ಪಾ. ಸೂ. ೬-೧-೭) ಎಂಬುದರಿಂದ ದೀರ್ಘ. **ಬಹುಲಂ ಛಂದಸಿ** ಎಂಬುದರಿಂದ ಪ್ರತ್ಯಯಕ್ಕೆ ರುಟಾಗಮ. ಟಿತ್ತಾದುದರಿಂದ ಆದ್ಯವಯವವಾಗಿ ಬರುತ್ತದೆ. ಹಿ ಎಂಬುದರ ಸಂಬಂಧವಿರುವುದರಿಂದ **ಹಿ ಚ** (ಪಾ. ಸೂ. ೮-೧-೩೪) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಸುದಾನವಃ**—ಶೋಭನಂ ದಾನು ಯಸ್ಯ ಸಃ ಸುದಾನು. ದಾಞ್ ದಾನೇ ಧಾತು. **ದಾಭಾಭ್ಯಾಂ ನುಃ** (ಉ. ಸೂ. ೩-೩೨) ಎಂಬುದರಿಂದ ನುಪ್ರತ್ಯಯ. ಅಂತೋದಾತ್ತವಾಗುತ್ತದೆ. ಸಮಾಸದಲ್ಲಿ **ನಞ್ಸುಭ್ಯಾಮ್** (ಪಾ. ಸೂ. ೬-೨-೧೭೨) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. **ವ್ಯತ್ಯಯೋ ಬಹುಲಂ** (ಪಾ. ಸೂ. ೩-೧೮೫) ಎಂಬುದರಿಂದ ಏಕವಚನಕ್ಕೆ ಬಹುವಚನಪ್ರತ್ಯಯ ಬರುತ್ತದೆ.

**ಶಾಶದ್ರೇ**— ಎರಡನೇ ವ್ಯಾಖ್ಯಾನದಲ್ಲಿ ಇದರ ಪ್ರತಿಕ್ರಿಯೆಯು ಬೇರೆಯಾಗುತ್ತದೆ. ಶದಲೃ ಶಾತನೇ ಧಾತು. ಹಿಂದಿನಂತೆ ಛಾಂದಸವಾಗಿ ಕರ್ಮಣಿಯಲ್ಲಿ ಲಿಟ್. **ಇರಯೋರೇ** (ಪಾ. ಸೂ. ೬-೪-೭೬) ಎಂಬುದರಿಂದ ಪ್ರತ್ಯಯಕ್ಕೆ ರೇ ಆದೇಶ. ಹಿಂದಿನಂತೆ ಸ್ವರಾದಿಗಳು ಬರುತ್ತವೆ.

**ವಿಶ್ವಥಾ**— ಇವಾರ್ಥ ತೋರುವಾಗ **ಪ್ರತ್ನಪೂರ್ವವಿಶ್ವೇಮಾತ್ಥಾಲ್ ಛಂದಸಿ** (ಪಾ. ಸೂ. ೫-೩-೧೧೧) ಎಂಬುದರಿಂದ ಥಾಲ್ ಪ್ರತ್ಯಯ. ಲಿತ್ತಾದುದರಿಂದ **ಲಿತಿ** (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ.

**ಪರಿಭೂಃ**—ಪರಿ ಸರ್ವತಃ ಭಾವಿತಾ ಪರಿಭೂಃ. ಭೂಸತ್ತಾಯಾಂ ಧಾತು. ಕ್ವಿಪ್ ಪ್ರತ್ಯಯ. ಪ್ರಾದಿ ಸಮಾಸವಾದಾಗ **ಗತಿಕಾರಕೋಪಪದಾತ್ ಕೃತ್** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಅಜಾಯಥಾಃ**— ಜನೀ ಪ್ರಾದುರ್ಭಾವೇ ಧಾತು. ಛಾಂದಸವಾಗಿ ವರ್ತಮಾನಾರ್ಥದಲ್ಲಿ ಲಙ್. ಮಧ್ಯಮ ಪುರುಷಏಕವಚನದಲ್ಲಿ ಥಾಸ್ ಪ್ರತ್ಯಯ. **ದಿವಾದಿಭ್ಯಃ ಶ್ಯನ್** (ಪಾ. ಸೂ. ೩-೧-೬೯) ಎಂಬುದರಿಂದ ಶ್ಯನ್ ವಿಕರಣ. **ಜ್ಞಾಜನೋರ್ಜಾ** (ಪಾ. ಸೂ. ೭-೩-೭೯) ಎಂಬುದರಿಂದ ಧಾತುವಿಗೆ ಜಾದೇಶ. ಅಂಗಕ್ಕೆ ಅಡಾಗಮ. ಯದ್ಯೋಗವಿರುವುದರಿಂದ **ನಿಪಾತೈರ್ಯದ್ಯದಿ** ಎಂಬುದರಿಂದ ನಿಘಾತಪ್ರತಿಷೇಧ ಬರುವುದರಿಂದ ಅಡಾಗಮ ಉದಾತ್ತವೆಂಬುದರಿಂದ ಆದ್ಯುದಾತ್ತವಾದ ಪದವಾಗುತ್ತದೆ. ॥ ೯ ॥

———— :O: ————

। ಸಂಹಿತಾಪಾಠಃ ।

ತ್ವಮಗ್ನೇ ಶಶಮಾನಾಯ ಸುನ್ವತೇ ರತ್ನಂ ಯವಿಷ್ಠ ದೇವತಾತಿಮಿನ್ವಸಿ ।
ತಂ ತ್ವಾ ನು ನವ್ಯಂ ಸಹಸೋ ಯುವನ್ವಯಂ ಭಗಂ ನ ಕಾರೇ ಮಹಿರತ್ನ ಧೀಮಹಿ ॥ ೧೦ ॥

ಪದಪಾಠಃ

ತ್ವಂ । ಅಗ್ನೇ । ಶಶಮಾನಾಯ । ಸುನ್ವತೇ । ರತ್ನಂ । ಯವಿಷ್ಠ । ದೇವऽತಾತಿಂ । ಇನ್ವಸಿ ।
ತಂ । ತ್ವಾ । ನು । ನವ್ಯಂ । ಸಹಸಃ । ಯುವನ್ । ವಯಂ । ಭಗಂ । ನ । ಕಾರೇ । ಮಹಿऽರತ್ನ ।
ಧೀಮಹಿ ॥ ೧೦ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ಯವಿಷ್ಠ ಯುವತಮ ತ್ವಂ ಶಶಮಾನಾಯ ತ್ವಾಂ ಸ್ತುವತೇ । ಶಶಮಾನಃ ಶಂಸಮಾನ ಇತಿ ಯಾಸ್ಕಃ । ನಿ. ೬-೮ । ಸುನ್ವತೇ ತ್ವದರ್ಥಮಭಿಷವಂ ಕುರ್ವತೇ ಯಜಮಾನಾಯ ತದ್ಯಾ-

ಗಾರ್ಥಂ ರತ್ನಂ ರಮಣೀಯಂ ಹವಿರ್ದೇವತಾತಿಂ ದೇವೇಷು ತಾಯಮಾನಂ ವಿಸ್ತಾರ್ಯಮಾಣಮಿನ್ವಸಿ। ವ್ಯಾಪ್ನೋಷಿ । ಅಸ್ಮತ್ಪ್ರತ್ತಂ ಹವಿರ್ದೇವಾನ್ಪ್ರಾಪಯಸೀತ್ಯರ್ಥಃ । ಇನ್ವತಿರ್ವ್ಯಾಪ್ತಿಕರ್ಮಾ ಇನ್ವತಿ ನನಕ್ಷೇತಿ ತನ್ನಾಮಸು ಪಾಠಾತ್ । ಹೇ ಸಹಸೋ ಯುವನ್ । ಯುವಶಬ್ದೇನೋತ್ಪತ್ತಿರ್ಲಕ್ಷ್ಯತೇ । ಮಥನಕಾಲೇ ಬಲೇನೋತ್ಪನ್ನ ಬಲಸ್ಯ ಮಿಶ್ರಯಿತರ್ವಾ । ಯದ್ವಾ । ಸಹಸಸ್ಪುತ್ರ ಯುವನ್ನಿತ್ಯತರುಣ ಮಹಿರತ್ನಾಸ್ಮತ್ಪ್ರದೇಯಮಹದ್ರಮಣೀಯಧನ ನವ್ಯಂ ನವತರಂ ಸ್ತುತ್ಯಂ ವಾ ತಂ ತಾದೃಶಂ ಹವಿರ್ಭಜಂ ತ್ವಾ ತ್ವಾಂ ವಯಂ ಯಜಮಾನಾಃ ಕಾರೇ ಶಬ್ದೇ ಸ್ತೋತ್ರಲಕ್ಷಣೇ ನು ಕ್ಷಿಪ್ರಂ ಧೀಮಹಿ । ಸ್ಥಾಪಯಾಮಃ । ಹವಿಷ್ಪ್ರದಾನಸಮಯೇ ಕ್ಷಿಪ್ರಮೇವ ಸ್ತುಮ ಇತ್ಯರ್ಥಃ । ತತ್ರ ದೃಷ್ಟಾಂತಃ । ಭಗಂ ನಾದಿತ್ಯಮಿವ । ಯದ್ವಾ । ಮಹಾಂತಂ ರಾಜಾನಮಿವ । ತಂ ಯಥಾ ಸ್ತುವಂತಿ ತದ್ವತ್ ॥

ಪ್ರತಿಪದಾರ್ಥ

**ಯವಿಷ್ಠ**—ಅತ್ಯಂತ ಯುವಕನಾದ । **ಅಗ್ನೇ**—ಎಲೈ ಅಗ್ನಿಯೇ । **ತ್ವಂ** ನೀನು । **ಶಶಮಾನಾಯ**—(ನಿನ್ನನ್ನು) ಸ್ತೋತ್ರಮಾಡುವವನೂ । **ಸುನ್ವತೇ**—(ನಿನಗಾಗಿ) ಸೋಮರಸವನ್ನು ಹಿಂಡುವವನೂ ಆದ ಯಜಮಾನನಿಗೋಸ್ಕರ । **ರತ್ನಂ**—ರಮಣೀಯವಾದ ಹವಿಸ್ಸನ್ನು । **ದೇವತಾತಿಂ**—ದೇವತೆಗಳಿಗೆ ಪ್ರೀತಿಕರವಾಗಿರುವಂತೆ । **ಇನ್ವಸಿ**—(ಅವರಿಗೆ) ಸೇರಿಸುತ್ತೀಯೆ । **ಸಹಸಃ ಯುವನ್**—ಶಕ್ತಿಯಿಂದ ಉತ್ಪನ್ನನಾದವನೂ ಅಥವಾ ಶಕ್ತಿಯಿಂದ ಉತ್ಪನ್ನನಾದುದರಿಂದ ನಿತ್ಯಯುವಕನಾದವನೂ । **ಮಹಿರತ್ನ**—(ನಮಗೆ ಕೊಡಬಹುದಾದ) ಪ್ರಭೂತವಾದ ಧನವುಳ್ಳವನೂ ಆದ ಅಗ್ನಿಯೇ । **ನವ್ಯಂ**—ನೂತನನಾದವನೂ ಅಥವಾ ಸ್ತೋತ್ರಾರ್ಹನಾದವನೂ । **ತಂ** ಹವಿಸ್ಸಿನ ಸ್ವೀಕಾರಕ್ಕೆ ಪ್ರಸಿದ್ಧನಾದವನೂ ಆದ । **ತ್ವಾ**—ನಿನ್ನನ್ನು । **ವಯಂ**—ಯಜಮಾನರಾದ ನಾವು । **ಕಾರೆ**—ಸ್ತೋತ್ರರೂಪವಾದ ಶಬ್ದದಲ್ಲಿ । **ಭಗಂ ನ**—ಭಗನನ್ನು ಅಥವಾ ದೊಡ್ಡರಾಜನನ್ನು ಇರಿಸುವಂತೆ । **ನು**—ಜಾಗ್ರತೆಯಾಗಿ । **ಧೀಮಹಿ**—ಶ್ಲಾಘ್ಯವಾದ ರೀತಿಯಲ್ಲಿ ಇರಿಸುತ್ತೇವೆ. (ಶ್ಲಾಘ್ಯವಾದ ರೀತಿಯಲ್ಲಿ ಸ್ತೋತ್ರಮಾಡುತ್ತೇವೆ)

॥ ಭಾವಾರ್ಥ ॥

ಅತ್ಯಂತ ಯುವಕನಾದ ಎಲೈ ಅಗ್ನಿಯೇ, ನೀನು ನಿನ್ನನ್ನು ಸ್ತೋತ್ರಮಾಡುವವನೂ, ನಿನಗಾಗಿ ಸೋಮರಸವನ್ನು ಹಿಂಡುವವನೂ ಆದ ಯಜಮಾನನಿಗೋಸ್ಕರ ರಮಣೀಯವಾದ ಹವಿಸ್ಸನ್ನು ದೇವತೆಗಳಿಗೆ ಪ್ರೀತಿಕರವಾಗಿರುವಂತೆ ಅವರಿಗೆ ಸೇರಿಸುತ್ತೀಯೆ. ಶಕ್ತಿಯಿಂದ ಉತ್ಪನ್ನನಾದವನೂ, ಯುವಕನೂ, ಪ್ರಭೂತವಾದ ಧನವುಳ್ಳವನೂ, ಆದ ಎಲೈ ಅಗ್ನಿಯೇ, ಸ್ತೋತ್ರಾರ್ಹನಾದವನೂ ಹವಿಸ್ಸಿನ ಸ್ವೀಕಾರಕ್ಕೆ ಪ್ರಸಿದ್ಧನಾದವನೂ ಆದ ನಿನ್ನನ್ನು ಯಜಮಾನರಾದ ನಾವು ದೊರೆಯನ್ನು ಶ್ಲಾಘ್ಯವಾದ ರೀತಿಯಲ್ಲಿ ಸ್ತೋತ್ರಮಾಡುವಂತೆ ಅತಿಶಯವಾಗಿ ಸ್ತೋತ್ರ ಮಾಡುತ್ತೇವೆ

English Translation

Most youthfull Agni, for the good of him who praises you and offers you libations, you make the precious ( offering ) acceptable to the gods: new-born of strength, we glorify you who is to be landed: to whom rich offerings ( are to be presented: ) we glorify you in ( our ) hymn as ( men eulogize ) a powerful prince.

ವಿಶೇಷವಿಷಯಗಳು

**ಶಶಮಾನಾಯ** - **ಶಶಮಾನಃ ಶಂಸಮಾನಃ** (ನಿ. ೬-೮) ಎಂಬ ನಿರುಕ್ತವಾಕ್ಯವನ್ನು ಸಾಯಣರು ಉದಹರಿಸಿ **ಸ್ತುವತೇ** ಸ್ತೋತ್ರಮಾಡತಕ್ಕ ಯಜಮಾನನಿಗೆ ಎಂದರ್ಥಮಾಡಿದ್ದಾರೆ. ನಿರುಕ್ತಕಾರರು,

**ಯೋ ವಾಂ ಯಜ್ಞೈಃ ಶಶಮಾನೋ ಹ ದಾಶತಿ ಕವಿರ್ಹೋತಾ ಯಜತಿ ಮನ್ಮಸಾಧನಃ ।**
**ಉಪಾಹ ತಂ ಗಚ್ಛಥೋ ವೀಥೋ ಅಧ್ವರಮಚ್ಛಾ ಗಿರಃ ಸುಮತಿಂ ಗಂತಮಸ್ಮಯೂ ।**
(ಋ. ಸಂ. ೧-೧೫೧-೭)

ಎಂಬ ಋಕ್ಕನ್ನುದಹರಿಸಿ **ಶಶಮಾನಃ** ಎಂಬ ಪದದ ಅರ್ಥವನ್ನು ವಿವರಿಸಿದ್ದಾರೆ (ನಿ. ೬-೮).

ಋಕ್ಕಿನ ಪೂರ್ವಾರ್ಧದಲ್ಲಿ **ಅಗ್ನಿಯು** ಯಜ್ಞಕರ್ತನಿಗಾಗಿ ರಮಣೀಯವಾದ ಹವಿಸ್ಸನ್ನು ದೇವತೆಗಳಿಗೆ ತೆಗೆದುಕೊಂಡುಹೋಗಿ ಅರ್ಪಿಸುವುದೂ, ಅದರಿಂದ ಯಜಮಾನನಿಗೆ ಅವನು ಮಾಡತಕ್ಕ ಉಪಕಾರವೂ ವರ್ಣಿಸಲ್ಪಟ್ಟಿದೆ.

**ಇನ್ವಸಿ—ಇನ್ವತಿಃ ವ್ಯಾಪ್ತಿಕರ್ಮಾ** । (ನಿ. ೨-೧೮) **ಅಸ್ಮತ್ಪ್ರತ್ತಂ ಹವಿಃ ದೇವಾನ್ ಪ್ರಾಪಯಸೀತ್ಯರ್ಥಃ** । ಸಕಲದೇವತೆಗಳಿಗೂ ಹಂಚಿ ಎಲ್ಲರಿಗೂ ತೃಪ್ತಿಯನ್ನುಂಟುಮಾಡುವ ಅರ್ಥವನ್ನು ಈ ಪದವು ಸೂಚಿಸುತ್ತದೆ.

**ನವ್ಯಂ—ನವಂ, ನೂತನಂ** ಇತ್ಯಾದಿ ನವನಾಮಗಳಲ್ಲಿ ಪಠಿತವಾಗಿದೆ (೩-೧೯). **ಕ್ಷಿಪ್ರೋತ್ಪನ್ನಂ ನೂತನಮಿತ್ಯರ್ಥಃ** । ಈಗ ತಾನೇ ಉತ್ಪನ್ನವಾದುದು ಎಂದರ್ಥ. ಆದುದರಿಂದಲೇ ಸ್ತುತ್ಯವಾಗಿರತಕ್ಕದ್ದು.

**ಕಾರೇ—ಸ್ತೋತ್ರಲಕ್ಷಣೇ ಶಬ್ದೇ** । ಸ್ತೋತ್ರರೂಪವಾದ ಶಬ್ದದಲ್ಲಿ **ಧೀಮಹಿ**—ಸ್ಥಾಪಿಸುತ್ತೇವೆ ಎಂದರೆ ಶ್ರೇಷ್ಠವಾದ ಸ್ತೋತ್ರಕ್ಕೆ ನಿನ್ನನ್ನು ವಿಷಯನನ್ನಾಗಿ ಮಾಡುತ್ತೇವೆಂದರ್ಥ. **ಕ್ರಿಯತೆ ಇತಿ ಕಾರಃ** ಎಂದು ಮಾಡತಕ್ಕ ಕ್ರಿಯೆಯನ್ನು ಈ ಪದವು ಸೂಚಿಸುವುದರಿಂದ ಯಜ್ಞಕ್ರಿಯೆಯಾಗಬಹುದು, ಯುದ್ಧಕ್ರಿಯೆಯಾಗಬಹುದು ಅಥವಾ ಸ್ತುತಿಕ್ರಿಯೆಯಾಗಬಹುದು. ಈ ಪದದ ಅರ್ಥವನ್ನು ಆಯಾ ಸಂದರ್ಭಗಳಿಗನುಗುಣವಾಗಿ ತಿಳಿಯಬೇಕು. ಉದಾಹರಣೆಗೆ—

**ಸಹಾವಾ ಪೃತ್ಸು ತರಣಿರ್ನಾರ್ವಾ ವ್ಯಾನಶೀ ರೋದಸೀ ಮೇಹನಾವಾನ್ ।**
**ಭಗೋ ನ ಕಾರೇ ಹವ್ಯೋ ಮತೀನಾಂ ಪಿತೇವ ಚಾರುಃ ಸುಹವೋ ವಯೋಧಾಃ ।**
(ಋ. ಸಂ. ೩-೪೯-೩)

ಎಂಬ ಋಕ್ಕಿನಲ್ಲಿ ಕ್ರಿಯತೆ ಇತಿ ಕಾರಃ ಯಜ್ಞಾದಿಃ ತಸ್ಮಿನ್ ಯಜ್ಞೇ ಎಂದು ಕಾರ ಶಬ್ದಕ್ಕೆ ಯಜ್ಞವೆಂಬರ್ಥವನ್ನೂ,

**ಜಯೇಮ ಕಾರೇ ಪುರುಹೂತ ಕಾರಿಣೋಽಭಿ ತಿಷ್ಠೇಮ ದೂಢ್ಯಃ ।**
**ನೃಭಿರ್ವೃತ್ರಂ ಹನ್ಯಾಮ ಶೂಶುಯಾಮ ಚಾವೇರಿಂದ್ರ ಪ್ರ ಣೋ ಧಿಯಃ ।**
(ಋ. ಸಂ. ೮-೨೧-೧೨)

ಎಂಬ ಋಕ್ಕಿನಲ್ಲಿ ಕಾರೇ । ಕೀರ್ಯಂತೆ ಆಯುಧಾನ್ಯತ್ರ ಇತಿ ಕಾರಃ ಯುದ್ಧಂ ತಸ್ಮಿನ್ ಜಯೇಮ । ಆಯುಧಗಳು ತೀಕ್ಷ್ಣವಾಗಿ ಬಿಡಲ್ಪಡುವುವಾದ್ದರಿಂದ ಯುದ್ಧಕ್ಕೆ ಕಾರಃ ಎಂಬ ಹೆಸರು. ಈ ಯುದ್ಧದಲ್ಲಿ ನಾವು ಜಯಿಸೋಣ ಎಂಬ ಪ್ರಾರ್ಥನೆಯನ್ನೂ ಕಾರ ಶಬ್ದವು ಸೂಚಿಸುತ್ತದೆ. ಪ್ರಕೃತವಾದ ಋಕ್ಕಿನಲ್ಲಿ **ಸ್ತೋತ್ರಕ್ರಿಯೆಯೆಂದರ್ಥ.**

**ಭಗಂ ನ**—ಇಲ್ಲಿ ಭಗ ಶಬ್ದಕ್ಕೆ ಆದಿತ್ಯರಲ್ಲೊಬ್ಬನಾದ **ಭಗದೇವನೆಂದಾಗಲಿ** ಅಥವಾ ಮಹಾತ್ಮನಾದ ರಾಜನೆಂದಾಗಲಿ ಅರ್ಥನೆಂದು ಹೇಳಿದ್ದಾರೆ. **ಭಗೋ ಭಜತೇಃ** । (ನಿ. ೧-೭) ಪೂಜ್ಯಾರ್ಥವನ್ನು ಹೇಳುವುದರಿಂದ ಈ ಪದಕ್ಕೆ ಈ ಎರಡು ಅರ್ಥಗಳಲ್ಲಿ ಯಾವುದನ್ನಾದರೂ ಹೇಳಬಹುದು. ಭಗದೇವನೂ ಹಾಗೆಯೇ ಪೂಜ್ಯನಾದ ರಾಜನೂ ಸ್ತೋತ್ರವಿಷಯನಾಗುವುದರಿಂದ ಅದರಂತೆಯೇ ಅಗ್ನಿಯನ್ನೂ ಸ್ತೋತ್ರವಿಷಯನನ್ನಾಗಿ ಮಾಡುತ್ತೇನೆಂದು ಹೋಲಿಸಿದೆ.

ವ್ಯಾಕರಣಪ್ರಕ್ರಿಯಾ

**ಶಶಮಾನಾಯ**—ಶಶಮಾನಃ ಶಂಸಮಾನಃ (ನಿರು. ೬-೮) ಎಂದು ಯಾಸ್ಕರು ಹೇಳುತ್ತಾರೆ. ಸ್ತುತ್ಯರ್ಥಕವಾದ ಈ ಧಾತುವಿಗೆ ಲಡರ್ಥದಲ್ಲಿ ಕಾನಚ್ ಪ್ರತ್ಯಯ. ಚಿತ್ತ್ವಾದುದರಿಂದ ಅಂತೋದಾತ್ತಸ್ವರ ಬರುತ್ತದೆ. **ಚತುರ್ಥೀಏಕವಚನಾಂತರೂಪ.**

**ಸುನ್ವತೇ**—ಷುಞ್ ಅಭಿಷವೇ ಧಾತು. **ಧಾತ್ವಾದೇಃ ಷಃ ಸಃ** ಎಂಬುದರಿಂದ ಆದಿಗೆ ಸತ್ವ. ಲಡರ್ಥದಲ್ಲಿ ಶತೃ ಪ್ರತ್ಯಯ. **ಸ್ವಾದಿಭ್ಯಃ ಶ್ನುಃ** (ಪಾ. ಸೂ. ೩-೧-೭೩) ಎಂಬುದರಿಂದ ಶ್ನುವಿಕರಣ. **ಸಾರ್ವಧಾತುಕಮಪಿತ್** ಎಂಬುದರಿಂದ ಇದಕ್ಕೆ ಙಿತ್ವವಿರುವುದರಿಂದ ಗುಣ ಬರುವುದಿಲ್ಲ. ಯಣಾದೇಶ. **ಚತುರ್ಥೀಏಕವಚನಾಂತರೂಪ**-ನುಮ್ ರಹಿತವಾದ ಶತೃಪ್ರತ್ಯಯದ ಪರದಲ್ಲಿ ವಿಭಕ್ತಿ ಬಂದುದರಿಂದ **ಶತುರನುಮೋ ನದ್ಯಜಾದೀ** (ಪಾ. ಸೂ. ೬-೧-೧೭೩) ಎಂಬುದರಿಂದ ಅದು ಉದಾತ್ತವಾಗುತ್ತದೆ.

**ರತ್ನಮ್**—ರಮಯತೀತಿ ರತ್ನಮ್. **ರಮೇಸ್ತ ಚ** (ಉ. ಸೂ. ೩-೧೪) ಎಂಬುದರಿಂದ ನ ಪ್ರತ್ಯಯ. ಧಾತುವಿನ ಮಕಾರಕ್ಕೆ ತಕಾರಾದೇಶ. ನಿತ್ ಎಂದು ಅನುವೃತ್ತವಾಗುವುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಯವಿಷ್ಠ**—ಅತಿಶಯೇನ ಯುವಾ ಯವಿಷ್ಠಃ ಯುವನ್ ಶಬ್ದ. ಇದಕ್ಕೆ **ಅತಿಶಾಯನೇ ತಮ-** (ಪಾ. ಸೂ. ೫-೩-೫೫) ಎಂಬುದರಿಂದ ಇಷ್ಠನ್ ಪ್ರತ್ಯಯ. **ಸ್ಥೂಲದೂರ**—(ಪಾ. ಸೂ ೬-೪-೧೫೬) ಎಂಬುದರಿಂದ ಯಣಾದಿ ಪರವಾದುದಕ್ಕೆ (ವನ್) ಲೋಪ; ಉಕಾರಕ್ಕೆ ಗುಣ. ಅಜಾದಿಪ್ರತ್ಯಯ ಪರವಾದುದರಿಂದ ಅವಾದೇಶ. ಸಂಬುದ್ಧಿಯಲ್ಲಿ **ಆಮಂತ್ರಿತಸ್ಯ ಚ** ಎಂಬುದರಿಂದ ನಿಘಾತಸ್ವರ ಬರುತ್ತದೆ.

**ದೇವತಾತಿಮ್**—**ಸರ್ವದೇವಾತ್ತಾತಿಲ್** (ಪಾ. ಸೂ. ೪-೪-೧೪೨) ಎಂಬುದರಿಂದ ತಾತಿಲ್ ಪ್ರತ್ಯಯ. ಲಿತ್ತ್ವಾದುದರಿಂದ ಲಿತಿ (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ.

**ಇನ್ವಸಿ**—ಇವಿ ವ್ಯಾಪ್ತೌ ಧಾತು. ಇನ್ವತಿ ನನಕ್ಷ (ನಿರು. ೨-೧೮-೧) ಎಂದು ವ್ಯಾಪ್ತಿಕರ್ಮಕ ಧಾತುಗಳೊಡನೆ ಪಠಿತವಾಗಿದೆ. ಇದಿತ್ತ್ವಾದುದರಿಂದ ನುಮಾಗಮ. ಲಟ್ ಪ್ರಥಮಪುರುಷ ಏಕವಚನಾಂತರೂಪ ಅತಿಙಂತದ ಪರದಲ್ಲಿ ಬಂದುದರಿಂದ ನಿಘಾತಸ್ವರ ಬರುತ್ತದೆ.

**ನವ್ಯಮ್**—**ಭವೇ ಛಂದಸಿ** (ಪಾ. ಸೂ. ೪-೪-೧೧೦) ಎಂಬುದರಿಂದ ಯತ್ ಪ್ರತ್ಯಯ. **ಯಸ್ಯೇತಿ ಚ** ಎಂಬುದರಿಂದ ಅಕಾರಲೋಪ **ಯತೋಽನಾವಃ** (ಪಾ. ಸೂ. ೬-೧-೨೧೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಸಹಸೋ ಯುವನ್**—**ಸುಬಾಮಂತ್ರಿತೇ ಪರಾಂಗವತ್ಸ್ವರೇ** (ಪಾ. ಸೂ ೨-೧-೨) ಎಂಬುದರಿಂದ ಸಹಸಃ ಎಂಬ ಷಷ್ಠ್ಯಂತಕ್ಕೆ ಪರಾಂಗವದ್ಭಾವ ಬರುವುದರಿಂದ ಸಮುದಾಯಕ್ಕೆ **ಆಮಂತ್ರಿತಸ್ಯ ಚ** (ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಮಹಿರತ್ನ**—ಮಹಿ ರತ್ನಂ ಯಸ್ಯ ಸಃ ಮಹಿರತ್ನಃ. ಸಂಬುದ್ಧಿಯಲ್ಲಿ ಆಮಂತ್ರಿತನಿಘಾತಸ್ವರ ಬರುತ್ತದೆ.

**ಧೀಮಹಿ**—ಡುಧಾಞ್ ಧಾರಣಪೋಷಣಯೋಃ ಧಾತು. ಲಿಙ್ ಉತ್ತಮಪುರುಷ ಬಹುವಚನದಲ್ಲಿ ಮಹಿಙ್ ಪ್ರತ್ಯಯ. **ಲಿಙಃ ಸೀಯುಟ್** ಎಂಬುದರಿಂದ ಸೀಯುಟಾಗಮ. **ಲೋಪೋವ್ಯೋರ್ವಲಿ** ಎಂಬುದರಿಂದ ಯಕಾರ ಲೋಪ. **ಛಂದಸ್ಯುಭಯಥಾ** (ಪಾ. ಸೂ. ೩-೪-೧೧೭) ಎಂಬುದರಿಂದ ಪ್ರತ್ಯಯಕ್ಕೆ ಸಾರ್ವಧಾತುಕಸಂಜ್ಞೆಯೂ ಇರುವುದರಿಂದ **ಲಿಙಃ ಸಲೋಪೋಽನಂತ್ಯಸ್ಯ** (ಪಾ. ಸೂ. ೭-೨-೭೯) ಎಂಬುದರಿಂದ ಸಕಾರಕ್ಕೆ ಲೋಪ. **ಸಾರ್ವಧಾತುಕಮಪಿತ್** ಎಂಬುದರಿಂದ ಙಿತ್ವ. ಶಪ್ ವಿಕರಣ. **ಬಹುಲಂ ಛಂದಸಿ** ಎಂಬುದರಿಂದ ಶಪಿಗೆ ಲುಕ್ ಆರ್ಧಧಾತುಕಸಂಜ್ಞೆ ಇರುವುದರಿಂದ **ಅತೋ ಲೋಪ ಇಟಿ ಚ** (ಪಾ. ಸೂ. ೬-೪-೬೪) ಎಂಬುದರಿಂದ ಧಾತುವಿನ ಆಕಾರಕ್ಕೆ ಲೋಪ. ಧೀಮಹಿ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥೧೦॥



ಸಂಹಿತಾಪಾಠಃ

ಅಸ್ಮೇ ರಯಿಂ ನ ಸ್ವರ್ಥಂ ದಮೂನಸಂ ಭಗಂ ದಕ್ಷಂ ನ ಪಪೃಚಾಸಿ
ಧರ್ಣಸಿಂ ।
ರಶ್ಮೀಂರಿವ ಯೋ ಯಮತಿ ಜನ್ಮನೀ ಉಭೇ ದೇವಾನಾಂ ಶಂಸಮೃತ ಆ ಚ
ಸುಕ್ರತುಃ ॥ ೧೧ ॥

। ಪದಪಾಠಃ ।

ಅಸ್ಮೇ ಇತಿ । ರಯಿಂ । ನ । ಸುಽಅರ್ಥಂ। ದಮೂನಸಂ। ಭಗಂ । ದಕ್ಷಂ । ನ । ಪಪೃಚಾಸಿ । ಧರ್ಣಸಿಂ ।
ರಶ್ಮೀನ್ಽಇವ । ಯಃ । ಯಮತಿ । ಜನ್ಮನೀ ಇತಿ । ಉಭೇ ಇತಿ । ದೇವಾನಾಂ । ಶಂಸಂ । ಋತೇ । ಆ ।
ಚ । ಸುಽಕ್ರತುಃ ॥ ೧೧ ॥

ಸಾಯಣಭಾಷ್ಯಂ

ಹೇ ಅಗ್ನೇ ತ್ವಮಸ್ಮೇ ಅಸ್ಮಾಸು ಸ್ವರ್ಥಂ ಸುಷ್ಠ್ವರಣೀಯಂ ದಮೂನಸಂ ದಮನೀಯಮುಪಾಜ್ಯಂ ॥ ದಮೇರೂನಸಿಃ । ಉ. ೪-೨೩೪ । ಇತ್ಯೂನಸಿಪ್ರತ್ಯಯಃ ॥ ರಯಿಂ ನ ಪಪೃಚಾಸಿ ಧನಂ ಯಥಾ ಸಂಪೃಣಕ್ಷಿ । ತಥಾ ಭಗಂ ಸರ್ವೈರ್ಭಜನೀಯಂ ದಕ್ಷಂ ಸೋತ್ಸಾಹವಂತಂ ಪ್ರಬುದ್ಧಂ ವಾ ಧರ್ಣಸಿಂ ವಿದ್ಯಾದಿಧಾರಣಕುಶಲಂ ಪುತ್ರಂ ಯಥಾ ಪಪೃಚಾಸಿ ಸಂಪೃಣಕ್ಷಿ । ಉಭಯಮಪಿ ದದಾಸೀತ್ಯರ್ಥಃ ॥ ಪೃಚೀ ಸಂಪರ್ಕೇ । ಲೇಟ್ಯಾಡಾಗಮಃ । ಬಹುಲಂ ಛಂದಸೀತಿ ವಿಕರಣಸ್ಯ ಶ್ಲುಃ । ಇದಾನೀಂ ಪರೋಕ್ಷೇಣಾಹ । ಯೋಽಗ್ನೀ ರಶ್ಮೀರಿವ ಸ್ವಕೀಯಾನ್ರಶ್ಮೀನ್ಯಥಾ ಯಮತಿ ನಿಯಮಯತಿ ವಿಸ್ತಾರಯತಿ ತದ್ವತ್ ಸ ಉಭೇ ಜನ್ಮನೀ ಜನನಾಧಾರಭೂತಾವುಭೌ ಲೋಕಾವಿಹಲೋಕಪರಲೋಕೌ ಯಮತಿ ನಿಯಚ್ಛತಿ । ತಥಾ ಸುಕ್ರತುಃ ಶೋಭನಕರ್ಮಾಯಮೃತೇಽಸ್ಮದೀಯಯಜ್ಞೇ ದೇವಾನಾಂ ದೇವಸಂಬಂಧಿನಂ ಶಂಸಂ ಸ್ತವಂ ಚಾ ಯಮತಿ ಆಯಚ್ಛತಿ ಸರ್ವದಾ ದದಾತಿ । ಯದ್ವಾ । ಪೂರ್ವಾರ್ಧೇ ಪಪೃಚಾಸೀತ್ಯಪಿ ಪರೋಕ್ಷತ್ವಾಯ ಪ್ರಥಮಪುರುಷತಯಾ ಯೋಜ್ಯಂ ॥

ಪ್ರತಿಪದಾರ್ಥ

(ಅಗ್ನೇ—ಎಲೈ ಅಗ್ನಿಯೇ, ತ್ವಂ-ನೀನು) । **ಅಸ್ಮೇ**—ನಮಗೆ । **ರಯಿಂ ನ**—ಧನವನ್ನು ಕೊಡುವಂತೆ **ಸ್ವರ್ಥಂ**—ಬಹಳ ಅಪೇಕ್ಷಿತನಾದವನೂ । **ದಮೂನಸಂ**—ಸಾಧುವಾದವನೂ । **ಭಗಂ**—ಪ್ರೀತಿಪಾತ್ರನಾದವನೂ । **ದಕ್ಷಂ**—ಸಮರ್ಥನಾದವನೂ । **ಧರ್ಣಸಿಂ**—ವಿದ್ಯಾಧಾರಣೆಗೆ ಯೋಗ್ಯನಾದವನೂ ಆದ ಪುತ್ರನನ್ನು । **ಪಪೃಚಾಸಿ**—ಅನುಗ್ರಹಿಸಿ ಕೊಡುತ್ತೀಯೆ । **ಯಃ**—ಯಾವ ಅದೇ ಅಗ್ನಿಯು । **ರಶ್ಮೀನ್ ಇವ**—ತನ್ನ ಕಿರಣಗಳನ್ನು ವಿಸ್ತಾರಪಡಿಸುವಂತೆ । **ಉಭೇ ಜನ್ಮನೀ**—ತನ್ನ ಜನನಿಗಳಾದ ಎರಡು ಲೋಕಗಳನ್ನೂ । **ಯಮತಿ**—ನಿಯಮಿಸಿ ವಿಸ್ತರಿಸುತ್ತಾನೆಯೋ (ಹಾಗೆಯೇ) । **ಸುಕ್ರತುಃ**—ಶ್ರೇಷ್ಠವಾದ ಕರ್ಮವುಳ್ಳ ಅಗ್ನಿಯು । **ಋತೇ**—ನಮ್ಮ ಯಜ್ಞದಲ್ಲಿ । **ದೇವಾನಾಂ**—ದೇವತೆಗಳನ್ನು ಉದ್ದೇಶಿಸಿದ । **ಶಂಸಂ ಚ**—ಸ್ತೋತ್ರವನ್ನೂ ಸಹ । **ಆ (ಯಮತಿ)**—ನಿಯಮಿಸಿ ವಿಸ್ತರಿಸುತ್ತಾನೆ.

ಭಾವಾರ್ಥ

ಎಲೈ ಅಗ್ನಿಯೇ, ನೀನು ನಮಗೆ ಉತ್ತಮವಾದ ಧನವನ್ನು ಅನುಗ್ರಹಿಸಿ ಕೊಡುವಂತೆ ಬಹಳ ಅಪೇಕ್ಷಿತನಾದವನೂ, ಸಾಧುವಾದವನೂ, ಎಲ್ಲರ ಪ್ರೀತಿಗೆ ಪಾತ್ರನಾದವನೂ, ಸಮರ್ಥನಾದವನೂ, ವಿದ್ಯಾಧಾರಣೆಗೆ ಯೋಗ್ಯನಾದವನೂ ಆದ ಪುತ್ರನನ್ನು ಅನುಗ್ರಹಿಸಿ ಕೊಡುತ್ತೀಯೆ. ಅದೇ ಅಗ್ನಿಯು ತನ್ನ ಕಿರಣಗಳನ್ನು ವಿಸ್ತಾರಪಡಿಸುವಂತೆ ತನ್ನ ಜನನಿಗಳಾದ ಎರಡು ಲೋಕಗಳನ್ನೂ (ದ್ಯಾವಾಪೃಥಿವಿಗಳನ್ನೂ) ಸಹ ವಿಸ್ತಾರವಾಗುವಂತೆ ಮಾಡುತ್ತಾನೆ. ಹಾಗೆಯೇ ಶ್ರೇಷ್ಠವಾದ ಕರ್ಮಯುಕ್ತನಾದ ಅಗ್ನಿಯು ನಮ್ಮ ಯಜ್ಞದಲ್ಲಿ ದೇವತೆಗಳನ್ನು ಉದ್ದೇಶಿಸಿದ ಸ್ತೋತ್ರವನ್ನೂ ಸಹ ನಿಯಮದಿಂದ ವಿಸ್ತರಿಸುತ್ತಾನೆ.

## English Translation

In like manner as you confer upon us riches, (so you bestow upon us) a well-disposed, obedient, and energetic (son); the receptacle (of

learning and other merits), one who is the performer of holy rites. Agni, who regulates as it were his own rays, (and the condition of) both (his) births, (or heaven and earth), he regulates at (our) sacrifice the adoration of the gods.

। ವಿಶೇಷವಿಷಯಗಳು ।

ಈ ಋಕ್ಕಿನಲ್ಲಿ ಪುತ್ರಾದಿಸಂಪತ್ತನ್ನು ಕೊಡತಕ್ಕ ಅಗ್ನಿಯ ಔದಾರ್ಯವೂ, ದ್ಯಾವಾಪೃಥಿವಿಗಳನ್ನು ವಿಸ್ತರಿಸತಕ್ಕ ಶಕ್ತಿಯೂ ಮತ್ತು ಭಕ್ತರಸ್ತೋತ್ರವನ್ನು ನಿಯಮಿಸಿ ವಿಸ್ತರಿಸುವಂತೆ ಮಾಡುವ ಅನುಗ್ರಹವೂ ವರ್ಣಿತವಾಗಿವೆ.

**ಸ್ವರ್ಥಂ—ಸುಷ್ಠು ಅರಣೀಯಂ ।** ಶ್ರೇಷ್ಠವಾದ ಧ್ಯೇಯವನ್ನು ಅನುಸರಿಸುವವನು ಅಥವಾ ಶ್ರೇಷ್ಠವಾದ ವ್ಯವಹಾರವುಳ್ಳವನು ಎಂದರ್ಥವುಳ್ಳದ್ದಾಗಿ ಪುತ್ರನಿಗೆ ವಿಶೇಷಣವಾಗಿದೆ. ಗಮನಾರ್ಥಕವಾದ **ಅರ್** ಧಾತುವಿನಿಂದ ನಿಷ್ಪನ್ನವಾಗಿ ಶ್ರೇಷ್ಠವಾದ ವ್ಯವಹಾರಕ್ರಿಯೆಯುಳ್ಳ ಎಂದಾಗಲಿ ಅಥವಾ ಅರ್ಥ ಶಬ್ದಕ್ಕೆ ಪ್ರಯೋಜನವೆಂದರ್ಥವಾಗಿ ಉತ್ತಮವಾದ ಪ್ರಯೋಜನವನ್ನಾರೈಸುವ ಎಂದಾಗಲಿ ತಾತ್ಪರ್ಯವನ್ನು ಕೊಡಬಹುದೆಂದು ನಿರುಕ್ತಕಾರರ (ನಿ. ೧-೧೮) ನಿರ್ವಚನದಿಂದ ತಿಳಿಯುತ್ತದೆ.

**ದಮೂನಸಂ**—ದಮನೀಯಂ ಉಪಾಜ್ಯಂ । ಸಾಧುವಾದವನೆಂದು ತಾತ್ಪರ್ಯ. **ದಮೂನಾಃ** ಎಂಬ **ಪದಕ್ಕೆ ದಮಮನಾ ವಾ ದಾನಮನಾ ವಾ ದಾಂತಮನಾ ವಾ । ಅಪಿ ವಾ ದಮ ಇತಿ ಗೃಹನಾಮ ತನ್ಮನಾಃ ಸ್ಯಾತ್ ।** (ನಿ. ೪-೫) ಎಂಬ ನಿರುಕ್ತಕಾರರ ನಿರ್ವಚನವನ್ನುದಹರಿಸಿ ಈ ಪದದ ವಿಶೇಷಾರ್ಥಗಳನ್ನೂ ಇದೇ ಭಾಗವ ೧-೧೪೦-೧೦ನೇ ಋಕ್ಕಿನ ವಿಶೇಷವಿಷಯಗಳಲ್ಲಿ ತಿಳಿಸಿದೆ. ಪ್ರಕೃತವಾದ ಋಕ್ಕಿನಲ್ಲಿ ಸಂಯಮದಿಂದ ಕೂಡಿದವನೂ ವಿನಯಪೂರಿತನೂ ಆದ ಪುತ್ರನೆಂದು ಅರ್ಥಮಾಡಬಹುದು

**ಭಗಂ—ಭಗೋ ಭಜತೇಃ** ಎಂದು ಹಿಂದಿನ ಋಕ್ಕಿನಲ್ಲಿ ನಿರುಕ್ತವಾಕ್ಯವನ್ನುದಹರಿಸಿ ಪೂಜ್ಯವಾದ ಎಂಬರ್ಥವನ್ನು ಕೊಡುತ್ತದೆಯೆಂದು ಹೇಳಿದೆ. ಇಲ್ಲಿ ಪ್ರೀತಿಪಾತ್ರನಾದ ಪುತ್ರನೆಂದು ಹೇಳಬೇಕು.

**ಧರ್ಣಸಿಂ**—ನಿರುಕ್ತಕಾರರು **ಧರ್ಣಸಿ** ಶಬ್ದವನ್ನು ಬಲನಾಮಗಳಲ್ಲಿ ಪಠಿಸಿದ್ದಾರೆ. (ನಿ. ೩-೯). ಸಾಧಾರಣವಾಗಿ ಧಾರಕವಾದ ಶಕ್ತಿಯೆಂಬರ್ಥದಲ್ಲಿಯೇ ಈ ಪದದ ಪ್ರಯೋಗವಿದೆ. ಉದಾಹರಣೆಗೆ—

**ಆ ಧರ್ಣಸಿರ್ಬೃಹದ್ದಿವೋ ರರಾಣೋ ವಿಶ್ವೇಭಿರ್ಗನ್ತ್ವೋಮಭಿರ್ಹುವಾನಃ ।**
**ಗ್ನಾ ವಸಾನ ಓಷಧೀರಮೃಧ್ರಸ್ತ್ರಿಧಾತುಶೃಂಗೋ ವೃಷಭೋ ವಯೋಧಾಃ ॥**
(ಋ. ಸಂ. ೫-೪೩-೧೩)

ಎಂಬಲ್ಲಿ **ಸರ್ವಸ್ಯ ಧಾರಕಃ** ಎಂದು ಅಗ್ನಿಗೆ ವಿಶೇಷಣವಾಗಿಯೂ,

**ಆ ವಚ್ಯಸ್ವ ಮಹಿ ಪ್ಸರೋ ವೃಷೇಂದೋ ದ್ಯುಮ್ನವತ್ತಮಃ । ಆ ಯೋನಿಂ ಧರ್ಣಸಿಃ ಸದಃ ।**
(ಋ. ಸಂ. ೯-೨-೨)

ಎಂಬಲ್ಲಿ **ಧರ್ತಾ ತ್ವಂ** ಧಾರಕನಾದ ನೀನು ಎಂದು **ಸೋಮ**ನನ್ನುದ್ದೇಶಿಸಿಯೂ ಹೀಗೆಯೇ ಇತರ ಕಡೆಗಳಲ್ಲಿ ಧಾರಣಶಕ್ತಿಯನ್ನೇ ಸೂಚಿಸತಕ್ಕ ಅರ್ಥವುಳ್ಳದ್ದಾಗಿಯೂ ಉಪಯೋಗಿಸಲ್ಪಟ್ಟಿದೆ. ಪ್ರಕೃತವಾದ ಋಕ್ಕಿನಲ್ಲಿ

**ವಿದ್ಯಾದಿಧಾರಣಕುಶಲಂ ಪುತ್ರಂ** । ವಿದ್ಯೆಯನ್ನು ಗ್ರಹಿಸುವುದಕ್ಕೂ ಮತ್ತು ಧರಿಸುವುದಕ್ಕೂ ಯೋಗ್ಯವಾದ ಶಕ್ತಿಯುಳ್ಳ ಪುತ್ರನೆಂದು ಅರ್ಥಮಾಡಿದ್ದಾರೆ.

**ಸಪ್ಸೃಚಾಸಿ**—ಹಿಂದೆ **ಸಪ್ಸೃಚಾನಾಸಃ** ಎಂಬ ಪದಕ್ಕೆ ಅಭಿನ್ನವಾದ ಸಂಬಂಧಸೂಚಕಾರ್ಥವಿದೆಯೆಂದು ಹೇಳಿದೆ. ಇಲ್ಲಿಯೂ ಸಹ ಶ್ರೇಷ್ಠನಾದ ಪುತ್ರನಿಗೂ ನಮಗೂ ಸಂಬಂಧವಿರುವಂತೆ ಮಾಡು ಎಂದರೆ ಅತ್ಯಂತ ಆದರಕ್ಕೆ ಪಾತ್ರನಾದ ಪುತ್ರನನ್ನನುಗ್ರಹಿಸು ಎಂದು ಪ್ರಾರ್ಥಿಸಿದೆ; ಅಥವಾ ಯಜ್ಞಕರ್ತರಿಗೆ ಕೊಟ್ಟೇ ಕೊಡುತ್ತೀಯೆ ಎಂಬ ಭರವಸೆಯೂ ಸೂಚಿತವಾಗಿದೆ.

**ಅಗ್ನಿಸ್ತುವಿಶ್ರವಸ್ತಮಂ ತುವಿಬ್ರಹ್ಮಾಣಮುತ್ತಮಂ ।**
**ಅತೂರ್ತಂ ಶ್ರಾವಯತ್ಪತಿಂ ಪುತ್ರಂ ದದಾತಿ ದಾಶುಷೇ ॥**
(ಋ. ಸಂ. ೫-೨೫-೫)

ಇತ್ಯಾದಿ ಋಕ್ಕುಗಳಲ್ಲಿ ಆಹುತಿಯನ್ನರ್ಪಿಸತಕ್ಕ ಯಜಮಾನನಿಗೆ ಅಗ್ನಿಯು ಅತೂರ್ತನೂ, ಉತ್ತಮನೂ, ಪಿತ್ರಾದಿಗಳಿಗೆ ಒಳ್ಳೆಯ ಖ್ಯಾತಿಯನ್ನು ತರತಕ್ಕವನೂ ಆದ ಪುತ್ರನನ್ನನುಗ್ರಹಿಸುತ್ತಾನೆಂಬ ವಾಕ್ಯಗಳ ಆಧಾರದ ಮೇಲೆ ಪ್ರಕೃತವಾದ ಋಕ್ಕಿನಲ್ಲಿಯೂ ಆ ಭರವಸೆಯನ್ನು ತೋರಿಸಿದೆ.

**ಉಭೇ ಜನ್ಮನೀ ಯಮತಿ**—**ಜನಾನಾಧಾರಭೂತೌ ಉಭೌ ಲೋಕೌ ಯಮತಿ ನಿಯಚ್ಛತಿ** । ತನ್ನ ಉತ್ಪತ್ತಿಗೆ ಕಾರಣಗಳಾದ ದ್ಯಾವಾಪೃಥಿವಿಗಳಲ್ಲಿ ನಿಯಮಿಸಿ ವಿಸ್ತರಿಸುವಂತೆ ಮಾಡುತ್ತಾನೆಂದರ್ಥ.

**ಅಜೋ ನ ಕ್ಷಾಂ ದಾಧಾರ ಪೃಥಿವೀಂ ತಸ್ತಂಭ ದ್ಯಾಂ ಮಂತ್ರೇಭಿಃ ಸತ್ಯೈಃ ।**
**ಪ್ರಿಯಾ ಪದಾನಿ ಪಶ್ವೋ ನಿ ಪಾಹಿ ವಿಶ್ವಾಯುರಗ್ನೇ ಗುಹಾ ಗುಹಂ ಗಾಃ ॥**
(ಋ ಸಂ. ೧-೬೭-೩)

ಇತ್ಯಾದಿ ಋಕ್ಕುಗಳಲ್ಲಿ ವರ್ಣಿಸಿರುವಂತೆ ದ್ಯಾವಾಪೃಥಿವಿಗಳನ್ನು ಧರಿಸಿದವನು ಮತ್ತು ತನ್ನ ರಶ್ಮಿಗಳನ್ನು ವಿಸ್ತರಿಸುವಂತೆ ಈ ಲೋಕಗಳನ್ನೂ ಬೆಳಗಿಸಿ ವಿಸ್ತಾರವಾಗುವಂತೆ ಮಾಡಿದನೆಂದು ತಾತ್ಪರ್ಯ.

**ಶಂಸಂ ಚ ಆ ಯಮತಿ— ಸ್ತವಂ ಚ ಆಯಚ್ಛತಿ ಸರ್ವದಾ ದದಾತಿ** । ದೇವತೆಗಳಿಗೆ ಆಹ್ವಾನರೂಪವಾದ ಸ್ತೋತ್ರವನ್ನು ಯಾವಾಗಲೂ ಅರ್ಪಿಸುತ್ತಾನೆಂದರ್ಥ. ಅಗ್ನಿಯು ಯಜ್ಞಕ್ಕೆ ಹೋತೃವಾಗಿರುವುದರಿಂದಲೂ,

**ವಾಗ್ವೈ ಯಜ್ಞಸ್ಯ ಹೋತಾ ತದ್ಯೇಯಂ ವಾಕ್ಸೋಽಯಮಗ್ನಿಃ ಸ ಹೋತಾ ಸ ಮುಕ್ತಿಃ ಸಾತಿಮುಕ್ತಿಃ ।** (ಬೃ. ಉ. ೩-೧-೩)

ಇತ್ಯಾದಿ ವಾಕ್ಯಗಳು ಸ್ತುತಿವಾಕ್ಕಿಗೂ ಹೋತೃವಿಗೂ ತಾದಾತ್ಮ್ಯವನ್ನು ಹೇಳಿ ಅಗ್ನಿಯು ಹೋತೃವೂ, ವಾಗಧಿದೇವತೆಯೂ ಆಗಿರುವುದರಿಂದ ಸ್ತುತಿಯನ್ನು ವಿಸ್ತರಿಸುವಂತೆ ಮಾಡುತ್ತಾನೆಂದು ತಾತ್ಪರ್ಯವು.

॥ ವ್ಯಾಕರಣಪ್ರಕ್ರಿಯಾ ॥

**ಅಸ್ಮೇ**—ಅಸ್ಮದ್‌ಶಬ್ದ. ಇದಕ್ಕೆ ಸಪ್ತಮೀ ಬಹುವಚನ ಪರವಾದಾಗ ಅದಕ್ಕೆ **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಶೇಆದೇಶ. ಮಪರ್ಯಂತದ ಶೇಷಕ್ಕೆ ಲೋಪ.

**ದಮೂನಸಮ್**—ದಮು ಉಪಶಮೇ. ಧಾತು. ಇದಕ್ಕೆ **ದಮೇರೂನಸಿಃ** (ಉ. ಸೂ. ४-೬೭೮) ಎಂಬುದರಿಂದ ಊನಸಿ ಪ್ರತ್ಯಯ. ಅಲ್ಲಿ ಇಕಾರಕ್ಕೆ ಇತ್‌ಸಂಜ್ಞಾ. ದಮೂನಸ್ ಶಬ್ದವಾಗುತ್ತದೆ. ದ್ವಿತೀಯಾ ಏಕವಚನಾಂತರೂಪ

**ಪಪೃಚಾಸಿ**—ಪೃಚೀ ಸಂಪರ್ಕೇ ಧಾತು. ಲೇಟ್‌ಮಧ್ಯಮಪುರುಷ ಏಕವಚನದಲ್ಲಿ ಸಿಪ್ ಪ್ರತ್ಯಯ **ಲೇಟೋಽಡಾಟೌ**—(ಪಾ. ಸೂ. ೩-४-೯४) ಎಂಬುದರಿಂದ ಅದಕ್ಕೆ ಆಡಾಗಮ. **ಬಹುಲಂ ಛಂದಸಿ**—ಎಂಬುದರಿಂದ ವಿಕರಣಕ್ಕೆ ಶ್ಲು ಆದೇಶ. **ಶ್ಲೌ**—(ಪಾ. ಸೂ. ೬-೧-೧೦) ಎಂಬುದರಿಂದ ಧಾತುವಿಗೆ ದ್ವಿತ್ವ. **ಉರತ್**—(ಪಾ. ಸೂ ೭-४-೬೬) ಎಂಬುದರಿಂದ ಅಭ್ಯಾಸಋವರ್ಣಕ್ಕೆ ಅತ್ವ. ಆದಿಹಲ್‌ಶೇಷ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಧರ್ಣಸಿಮ್**—ಧೃಞ್ ಧಾರಣೇ ಧಾತು. **ಸಾನಸಿರ್ಧಸಿ ಪರ್ಣಸಿ**—(ಉ. ಸೂ. ४-೫४೭) ಎಂಬುದರಿಂದ ಅಸಿಚ್ ಪ್ರತ್ಯಯಾಂತವಾಗಿ ನಿಪಾತಿತವಾಗಿದೆ. ಚಿತ್ತಾದುದರಿಂದ **ಚಿತಃ**—(ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ದ್ವಿತೀಯಾ ಏಕವಚನಾಂತರೂಪ.

**ಯಮತಿ**—ಯಮ ಉಪರಮೇ ಧಾತು. ಲಟ್ ಪ್ರಥಮಪುರುಷಏಕವಚನಾಂತರೂಪ. ಛಾಂದಸವಾಗಿ ಛತ್ವ ಬರುವುದಿಲ್ಲ. ಯಃ ಎಂದು ಯಚ್ಛಬ್ದದ ಸಂಬಂಧವಿರುವುದರಿಂದ **ಯದ್ವೃತ್ತಾನ್ನಿತ್ಯಮ್**—(ಪಾ. ಸೂ. ೮-೧-೬೬) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ. ಶಪ್. ತಿಪ್. ಪಿತ್ತಾದುದರಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ

**ಜನ್ಮನೀ**—ಜನೀ ಪ್ರಾದುರ್ಭಾವೇ. ಧಾತು. **ಅನ್ಯೇಭ್ಯೋಽಪಿ ದೃಶ್ಯಂತೇ**—(ಪಾ. ಸೂ. ೩-೨-೭೫) ಎಂಬುದರಿಂದ ಮನಿನ್ ಪ್ರತ್ಯಯ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ದ್ವಿವಚನಾಂತರೂಪ

**ಶಂಸಮ್**—ಶಂಸು ಸ್ತುತೌ ಧಾತು. **ಹಲಶ್ಚ**—(ಪಾ. ಸೂ. ೩-೩-೧೨೧) ಎಂಬುದರಿಂದ ಘಞ್ ಪ್ರತ್ಯಯ. **ಞ್ನಿತ್ಯಾದಿರ್ನಿತ್ಯಮ್**—ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಸುಕ್ರತುಃ**—ಶೋಭನಃ ಕ್ರತುಃ ಯಸ್ಯ ಸಃ ಸುಕ್ರತುಃ. **ಕ್ರತ್ವಾದಯಶ್ಚ**—(ಪಾ. ಸೂ. ೬-೨-೧೧೮) ಎಂಬುದರಿಂದ ಉತ್ತರಪದ ಆದ್ಯುದಾತ್ತಸ್ವರ ಬರುತ್ತದೆ. ॥ ೧೧ ॥



**ಸಂಹಿತಾಪಾಠಃ**

## ಉತ ನಃ ಸುದ್ಯೋತ್ಮಾ ಜೀರಾಶ್ವೋ ಹೋತಾ ಮಂದ್ರಃ ಶೃಣವಚ್ಚಂದ್ರರಥಃ ।

ಸ ನೋ ನೇಷನ್ನೇಷತಮೈರಮೂರೋಽಗ್ನಿರ್ವಾಮಂ ಸುವಿತಂ ವಸ್ಯೋ

ಅಚ್ಛ ॥ ೧೨ ॥

ಪದಪಾಠಃ

ಉತ । ನಃ । ಸುಽದ್ಯೋತ್ಮಾ । ಜೀರಽಅಶ್ವಃ । ಹೋತಾ । ಮಂದ್ರಃ । ಶೃಣವತ್ । ಚಂದ್ರಽರಥಃ ।

ಸಃ । ನಃ । ನೇಷತ್ । ನೇಷಽತಮೈಃ । ಅಮೂರಃ । ಅಗ್ನಿಃ । ವಾಮಂ । ಸುಽಇತಂ । ವಸ್ಯಃ । ಅಚ್ಛ ॥೧೨॥

। ಸಾಯಣಭಾಷ್ಯಂ ॥

ಉತಶಬ್ದೋಽಪ್ಯರ್ಥಃ । ಸ ಚ ಸಂಭಾವನಾಯಾಂ । ಸೋಽಗ್ನಿರ್ನೋಽಸ್ಮದೀಯಮಾಹ್ವಾನಮುತ ಶೃಣವತ್ । ಅಪಿ ನಾಮ ಶೃಣುಯಾತ್ । ಯದ್ವಾ । ನೋಽಸ್ಮಾನ್ ಶ್ರಾವಯೇತ್ । ದೇವೇಷು ಮಧ್ಯೇ ಪ್ರಖ್ಯಾಪಯೇತ್ ॥ ಶೃಣೋತೇರ್ಲೇಟ್ಯಡಾಗಮಃ ॥ ಕೀದೃಶೋಽಯಂ । ಸುದ್ಯೋತ್ಮಾ ಸುದ್ಯೋತಮಾನಃ ॥ ದ್ಯುತ ದೀಪ್ತೌ । ಅನ್ಯೇಭ್ಯೋಽಪಿ ದೃಶ್ಯಂತ ಇತಿ ಮನಿನ್ ॥ ಜೀರಾಶ್ವಃ ಶೀಘ್ರಗಮನಾಶ್ವಃ ಹೋತಾ ದೇವಾನಾಮಾಹ್ವಾತಾ ಮಂದ್ರೋ ಮದನಶೀಲಃ ಚಂದ್ರರಥಃ ಸುವರ್ಣಮಯರಥೋಪೇತಃ । ಕಿಂಚಾಯಮಮೂರೋಽಮೂಢಬಲೋ ವಸ್ಯೋ ವಸನೀಯಃ ಸ ಪ್ರಸಿದ್ಧೋಽಗ್ನಿರ್ನೇಷತಮೈರತ್ಯರ್ಥಂ ನೇತೃಭಿಃ ಕರ್ಮಭಿಃ ಸ್ತೋತ್ರೈರ್ವಾ ನೋಽಸ್ಮಾನುತ ನೇಷತ್ । ಅಪಿ ನಾಮ ನಯೇತ್ । ಯಜ್ಞಸ್ಯ ಪಾರಂ ಪ್ರಾಪಯೇತ್ ॥ ನಯತೇರ್ಲೇಟ್ಯಡಾಗಮಃ । ಸಿಬ್ಬಹುಲಮಿತಿ ಸಿಪ್ ॥ ಕಿಮರ್ಥಂ । ವಾಮಂ ವನನೀಯಂ ಸುವಿತಂ ಸುಷ್ಠು ಪ್ರಾಪ್ಯಂ ಸರ್ವೈಃ ಕಾಂಕ್ಷಣೀಯಂ ಸ್ವರ್ಗಮಚ್ಛಾಭಿಮುಖ್ಯೇನ ಪ್ರಾಪ್ತುಂ ನೇಷತ್ ॥

ಪ್ರತಿಪದಾರ್ಥ

**ಸುದ್ಯೋತ್ಮಾ**—ಅತ್ಯಂತ ಪ್ರಕಾಶಮಾನನೂ । **ಜೀರಾಶ್ವಃ**—ಶೀಘ್ರಗಾಮಿಗಳಾದ ಅಶ್ವಗಳುಳ್ಳವನೂ । **ಹೋತಾ**—(ದೇವತೆಗಳಿಗೆ) ಆಹ್ವಾನವನ್ನು ಕೊಡುವವನೂ । **ಮಂದ್ರಃ**—ಹರ್ಷಯುಕ್ತನೂ । **ಚಂದ್ರರಥಃ**—ಸುವರ್ಣಮಯವಾದ ರಥಯುಕ್ತನೂ ಆದ ಅಗ್ನಿಯು । **ನಃ**—ನಮ್ಮ (ಆಹ್ವಾನವನ್ನು) । **ಉತ ಶೃಣವತ್**—ಖಂಡಿತವಾಗಿ ಕೇಳಲಿ ಅಥವಾ (ದೇವತೆಗಳ ನಡುವೆ) ಪ್ರಕಟಿಸಲಿ । **ಅಮೂರಃ**—ಅಪ್ರತಿಹತವಾದ ಶಕ್ತಿಯುಳ್ಳವನೂ । **ವಸ್ಯಃ**—ಸೌಮ್ಯನಾದವನೂ । **ಸಃ**—ಪ್ರಸಿದ್ಧನೂ ಆದ । **ಅಗ್ನಿಃ**—ಅಗ್ನಿಯು । **ನೇಷತಮೈಃ**—ಮಾರ್ಗದರ್ಶಕಗಳಾದ ಉತ್ತಮವಾದ ಕರ್ಮಗಳಿಂದ ಅಥವಾ ಸ್ತೋತ್ರಗಳಿಂದ । **ನಃ**—ನಮ್ಮನ್ನು । **ವಾಮಂ**—ಅಪೇಕ್ಷಿತವಾದುದೂ । **ಸುವಿತಂ**—ವೈಭವದಿಂದ ಪ್ರವೇಶಿಸಬಹುದಾದುದೂ ಆದ ಸ್ವರ್ಗಕ್ಕೆ । **ಅಚ್ಛ**—ಅಭಿಮುಖವಾಗಿ ಹೋಗಿ ಸೇರಲು । **ನೇಷತ್**—ಕರೆದುಕೊಂಡುಹೋಗಲಿ.

ಭಾವಾರ್ಥ

ಅತ್ಯಂತ ಪ್ರಕಾಶಮಾನನೂ, ಶೀಘ್ರಗಾಮಿಗಳಾದ ಅಶ್ವಗಳುಳ್ಳವನೂ, ದೇವತೆಗಳನ್ನು ಯಜ್ಞಕ್ಕೆ ಕರೆಯುವವನೂ, ಹರ್ಷಯುಕ್ತನೂ, ಸುವರ್ಣಮಯವಾದ ರಥಯುಕ್ತನೂ ಆದ ಅಗ್ನಿಯು ನಮ್ಮ ಆಹ್ವಾನವನ್ನು ಖಂಡಿತ

ವಾಗಿ ಕೇಳಲಿ. ಅಪ್ರತಿಹತವಾದ ಶಕ್ತಿಯುಳ್ಳವನೂ, ಆದರೂ ಸೌಮ್ಯನಾದವನೂ ಪ್ರಸಿದ್ಧನೂ ಆದ ಅಗ್ನಿಯು ಮಾರ್ಗದರ್ಶಕಗಳಾದ ಉತ್ತಮವಾದ ಕರ್ಮಗಳಿಂದ ನಮ್ಮನ್ನು ಅಪೇಕ್ಷಿತವಾದುದೂ, ವೈಭವದಿಂದ ಪ್ರವೇಶಿಸಬಹುದಾದುದೂ ಆದ ಸ್ವರ್ಗದ ಅಭಿಮುಖವಾಗಿ ಕರೆದುಕೊಂಡು ಹೋಗಲಿ.

English Translation

May he who is one with light, who has fleet horses, the invoker (of the gods), full of joy, and borne in a golden chariot, listen to us : may that irresistible, yet placable Agni, conduct us, by the most efficacious (means), to that desirable and accessible (heaven).

ವಿಶೇಷವಿಷಯಗಳು

ಋಕ್ಕಿನ ಪೂರ್ವಾರ್ಧದಲ್ಲಿ ಜೀರಾಶ್ವಃ ಇತ್ಯಾದಿವಿಶೇಷಣಗಳಿಂದ ಅಗ್ನಿಯ ವರ್ಣನೆಯಿದೆ.

**ಜೀರಾಶ್ವಃ**—ಜೀರಶಬ್ದವು ಕ್ಷಿಪ್ರನಾಮಗಳಲ್ಲಿ ಪಠಿತವಾಗಿದೆ. (ನಿ. ೩-೯) ಜೀರಃ, ಜೀರಂ ಎಂದು ಪ್ರತ್ಯೇಕವಾಗಿಯೂ, ಜೀರಾಶ್ವಃ, ಜೀರಾಧ್ವರಃ, ಜೀರದಾನುಃ ಇತ್ಯಾದಿ ಸಮಸ್ತಪದವಾಗಿಯೂ ಅನೇಕಕಡೆ ಉಪಯೋಗಿಸಲ್ಪಟ್ಟಿದೆ.

**ದಿವಿಸ್ಪೃಶಂ ಯಜ್ಞಮಸ್ಮಾಕಮಶ್ವಿನಾ ಜೀರಾಧ್ವರಂ ಕೃಣುತಂ ಸುಮ್ನಮಿಷ್ಟಯೇ ।**
**ಪ್ರಾಚೀನರಶ್ಮಿಮಾಹುತಂ ಘೃತೇನ ತದ್ದೇವಾನಾಮವೋ ಅದ್ಯಾ ವೃಣೀಮಹೇ ॥**
(ಋ. ಸಂ. ೧೦-೩೬-೬)

ಎಂಬ ಋಕ್ಕಿನಲ್ಲಿ ನಮ್ಮ ಕರ್ಮವನ್ನು ಜೀರಾಧ್ವರವನ್ನಾಗಿ ಮಾಡಿ ಎಂದು ಅಶ್ವಿನೀದೇವತೆಗಳನ್ನು ಪ್ರಾರ್ಥಿಸಿದೆ. ಇಲ್ಲಿ ಜೀರಾಧ್ವರವೆಂದರೆ ವಿಘ್ನಗಳಿಂದ ತಡೆಯಾಗದೆಯೂ, ಹಿಂಸಾರಹಿತವಾದುದೂ, ಶೀಘ್ರವಾಗಿ ನೆರವೇರುವುದಾದುದೂ ಆಗಿ ನೆರವೇರಿಸಿಕೊಡಿ ಎಂದರ್ಥವಾಗುತ್ತದೆ.

**ಪೃಕ್ಷೇ ತಾ ವಿಶ್ವಾ ಭುವನಾ ವವಕ್ಷಿರೇ ಮಿತ್ರಾಯ ವಾ ಸದಮಾ ಜೀರದಾನವಃ ।**
**ಪೃಷದಶ್ವಾಸೋ ಅನವಭ್ರರಾಧಸ ಋಜಿಪ್ಯಾಸೋ ನ ವಯುನೇಷು ಧೂರ್ಷದಃ ।**
(ಋ. ಸಂ. ೨-೩೪-೪)

ಎಂಬಲ್ಲಿ ಜೀರದಾನವಃ ಎಂದು ಮರುತ್ತುಗಳಿಗೆ ವಿಶೇಷಣವಾಗಿದೆ. ಅತಿಶೀಘ್ರವಾಗಿ ಯಜಮಾನನ ಇಷ್ಟಾರ್ಥಗಳನ್ನು ನೆರವೇರಿಸತಕ್ಕವರೆಂದರ್ಥ. ಇದರಂತೆಯೇ ಜೀರಾಶ್ವಃ, ಜೀರಾಶ್ವಂ ಎಂಬ ಸಮಸ್ತಪದಗಳೂ ಸಹ ಅಗ್ನ್ಯಾದಿದೇವತೆಗಳಿಗೆ ವಿಶೇಷಣವಾಗಿವೆ. ಅಥವಾ ಅವರ ರಥಕ್ಕೆ ವಿಶೇಷಣವಾಗಿರುವುದೂ ಉಂಟು ಉದಾಹರಣೆಗೆ—

**ಆ ವಾಂ ರಥಂ ಪುರುಮಾಯಂ ಮನೋಜವಂ ಜೀರಾಶ್ವಂ ಯಜ್ಞಿಯಂ ಜೀವಸೇ ಹುವೇ ।**
**ಸಹಸ್ರಕೇತುಂ ವನಿನಂ ಶತದ್ವಸುಂ ಶ್ರುಷ್ಟೀವಾನಂ ವರಿವೋಧಾಮಭಿ ಪ್ರಯಃ ।**
(ಋ. ಸಂ. ೧-೧೧೯-೧)

ಇತ್ಯಾದಿ ಕೆಲವು ಋಕ್ಕುಗಳಲ್ಲಿ ಶೀಘ್ರವಾಗಿ ಓಡತಕ್ಕ ಕುದುರೆಗಳುಳ್ಳವೆಂದು ಅಶ್ವಿನೀದೇವತೆಗಳ ರಥವನ್ನು ವರ್ಣಿಸುತ್ತವೆ. ಅದರಂತೆ ಪ್ರಕೃತವಾದ ಋಕ್ಕಿನಲ್ಲಿ ಶೀಘ್ರವಾಗಿ ಸಂಚರಿಸತಕ್ಕ ಕುದುರೆಗಳೇ ವಾಹನಗಳಾಗಿ ಉಳ್ಳವನೆಂದು ಅಗ್ನಿಯನ್ನು ವರ್ಣಿಸಿ ಸ್ತುತಿಸಿದೆ. ಅಗ್ನಿಗೆ ಜೀರಾಶ್ವ ಎಂಬ ವಿಶೇಷಣಮಾತ್ರವಲ್ಲದೆ **ಘೃತಪೃಷ್ಠ, ಪಾತಜೂತ, ಸ್ವಶ್ವ,** ಇತ್ಯಾದಿ ವಿಶೇಷಣಗಳೂ ಅವನ ವಾಹನಗಳ ಸ್ವರೂಪವನ್ನು ತಿಳಿಸುತ್ತವೆ.

**ಸುದ್ಯೋತ್ಮಾ—ಸುದ್ಯೋತಮಾನಃ ।** ಅತ್ಯಂತವಾಗಿಯೂ, ಅತಿಶಯವಾಗಿಯೂ ಪ್ರಕಾಶಿಸುವ ಎಂದು ಅಗ್ನಿಗೆ ವಿಶೇಷಣವಾಗಿದೆ.

> **ಅಗ್ನಿಶ್ಶುಚಿವ್ರತತಮಶ್ಶುಚಿರ್ವಿಪ್ರಃ ಶುಚಿಃ ಕವಿಃ । ಶುಚೀ ರೋಚತ ಆಹುತಃ । ಉದಗ್ನೇ ಶುಚಯಸ್ತವ ಶುಕ್ರಾ ಭ್ರಾಜಂತ ಈರತೇ । ತವ ಜ್ಯೋತೀಗ್‌ಂಷ್ಯರ್ಚಯಃ । ಆಯುರ್ದಾ ಅಗ್ನೇ—ಸ್ಯಾಯುರ್ನೋ ದೇಹಿ ವರ್ಚೋದಾ ಅಗ್ನೇಽಸಿ ವರ್ಚೋ ಮೇ .... ....ಸಂ ತ್ವಮಗ್ನೇ ಸೂರ್ಯಸ್ಯ ವರ್ಚಸಾಗಥಾಸ್ಸಮೃಷೀಣಾಗ್ ಸ್ತುತೇನ ಸಂ ಪ್ರಿಯೇಣ ಧಾಮ್ನಾ ।**
> (ತೈ. ಸಂ. ೧-೫-೫)

ಇತ್ಯಾದಿ ವಾಕ್ಯಗಳಲ್ಲಿ ಅಗ್ನಿಯ ವರ್ಣನೆಯು ಅವನ ಪ್ರಕಾಶವನ್ನೂ ಪ್ರಭಾವವನ್ನೂ ತಿಳಿಸುತ್ತವೆ. ಸ್ವಯಂ ಪ್ರಕಾಶನೂ, ಲೋಕಕ್ಕೆಲ್ಲಾ ಪ್ರಕಾಶಕಾರಕನೂ ಆದ ಅಗ್ನಿಯ ಮುಖ್ಯಗುಣವನ್ನು ಹೇಳಿದೆ.

**ಮಂದ್ರಃ—ಮಂದ್ರಶಬ್ದವು** ವಾಙ್‌ನಾಮಗಳಲ್ಲಿ ಪಠಿತವಾಗಿದೆ. ( ನಿ. ೨-೨೩ ) ಮಧುರವಾದುದೂ, ಹರ್ಷದಾಯಕವಾದುದೂ ಆದ ವಾಕ್ಕೆಂದರ್ಥ. **ಮಂದ್ರಜಿಹ್ವವೆಂಬ** ಪದವು **ಅಗ್ನಿಗೂ ಬೃಹಸ್ಪತಿಗೂ** ವಿಶೇಷಣವಾಗಿ ಉಪಯೋಗಿಸಲ್ಪಟ್ಟಾಗ ಅವರ ಸ್ವರೂಪವನ್ನು ವರ್ಣಿಸುತ್ತದೆ. ಆದರೆ ಅರ್ಥವು ಮಾತ್ರ ಕೊಂಚ ವ್ಯತ್ಯಾಸವಾಗುತ್ತದೆ. ಉದಾಹರಣೆಗೆ—

> **ಅನರ್ವಾಣಂ ವೃಷಭಂ ಮಂದ್ರಜಿಹ್ವಂ ಬೃಹಸ್ಪತಿಂ ವರ್ಧಯಾ ನವ್ಯಮರ್ಕೈಃ ।**
> **ಗಾಥಾನ್ಯಃ ಸುರುಚೋ ಯಸ್ಯ ದೇವಾ ಆಶೃಣ್ವಂತಿ ನವಮಾನಸ್ಯ ಮರ್ತಾಃ ।**
> **(ಋ. ಸಂ. ೧-೧೯೦-೧)**

ಎಂಬ ಋಕ್ಕಿನಲ್ಲಿ **ಬೃಹಸ್ಪತಿಗೆ** ವಿಶೇಷಣವಾಗಿ ಹರ್ಷದಾಯಕವಾದ ವಾಕ್ಕುಳ್ಳವನೆಂದು ಅರ್ಥವಾಗುತ್ತದೆ. ಅದೇ ವಿಶೇಷಣವು ೪-೧೧-೫ ಮತ್ತು ೫-೨೫-೨ರಲ್ಲಿ ಅಗ್ನಿಗೆ ವಿಶೇಷಣವಾದಾಗ ರಮಣೀಯವೂ ಹರ್ಷದಾಯಕವೂ ಆದ ಜ್ವಾಲಾರೂಪವಾದ ಜಿಹ್ವೆಗಳುಳ್ಳ ಎಂದರ್ಥವಾಗುತ್ತದೆ. ಪ್ರಕೃತವಾದ ಋಕ್ಕಿನಲ್ಲಿ **ಮಂದ್ರಶಬ್ದಕ್ಕೆ** ರಮಣೀಯವಾದುದೂ ಮಾವನಶೀಲವಾದದ್ದೂ ಆದ ಸ್ವರೂಪವುಳ್ಳ **ಅಗ್ನಿಯೆಂದರ್ಥ.**

**ಚಂದ್ರರಥಃ—ಚಂದ್ರಶಬ್ದವು ಹಿರಣ್ಯನಾಮಗಳಲ್ಲಿ** ಪಠಿತವಾಗಿದೆ. (ನಿ. ೨-೧೦) ಚಂದ್ರರಥನೆಂದರೆ **ಸುವರ್ಣಮಯ**ವಾದ ರಥವುಳ್ಳವನೆಂದರ್ಥ ಅಥವಾ **ಚಂದ್ರಶ್ಚಂದತೇಃ ಕಾಂತಿಕರ್ಮಣಃ** (ನಿ. ೧೧-೫) ಕಾಂತಿಯುತವಾದುದೂ ರಮ್ಯವಾದುದೂ ಆದ ಎಂಬರ್ಥವನ್ನು ಕೊಡುವುದರಿಂದ **ಚಂದ್** ಧಾತುವಿನಿಂದ ಚಂದ್ರಶಬ್ದವು ನಿಷ್ಪನ್ನವಾಗುವುದೆಂದು ನಿರುಕ್ತಕಾರರ ನಿರ್ವಚನವನ್ನನುಸರಿಸಿ ಸಾಯಣರು ಋ. ಸಂ. ೬-೬೫-೨ನೇ ಋಕ್ಕಿನಲ್ಲಿ

ಉಷಸ್ಸುಗಳಿಗೆ ವಿಶೇಷಣವಾಗಿರುವ **ಚಂದ್ರರಥಾಃ** ಎಂಬ ಪದಕ್ಕೆ **ಕಾಂತಿರಥಾಃ** ಎಂದರ್ಥಮಾಡಿದ್ದಾರೆ. ಅದರಂತೆಯೇ,

**ಚಂದ್ರಮಗ್ನಿಂ ಚಂದ್ರರಥಂ ಹರಿವ್ರತಂ ವೈಶ್ವಾನರಮಪ್ಸುಷದಂ ಸ್ವರ್ವಿದಂ ।**
**ವಿಗಾಹಂ ತೂರ್ಣಿಂ ತವಿಷೀಭಿರಾವೃತಂ ಭೂರ್ಣಿಂ ದೇವಾಸ ಇಹ ಸುಶ್ರಿಯಂ ದಧುಃ ।**
(ಋ. ಸಂ. ೩-೩-೫)

ಎಂಬ ಋಕ್ಕಿನಲ್ಲಿ ವೈಶ್ವಾನರಾಗ್ನಿಗೆ ವಿಶೇಷಣವಾಗಿರುವ **ಚಂದ್ರರಥ** ಶಬ್ದಕ್ಕೆ ಸಾಯಣರು **ಆಹ್ಲಾದಕಃ ರಥಃ ಯಸ್ಯ ।** ಸಂತೋಷದಾಯಕವಾದ ರಥವುಳ್ಳವನೆಂದು ವಿವರಿಸಿದ್ದಾರೆ. ಅದರಂತೆ ಇಲ್ಲಿಯೂ ಸಹ ಅರ್ಥ ಮಾಡಬಹುದು.

**ಶೃಣವತ್—ಶೃಣುಯಾತ್ ಯದ್ವಾ ಶ್ರಾವಯೇತ್, ದೇವೇಷು ಮಧ್ಯೇ ಪ್ರಖ್ಯಾಪಯೇತ್।** ನಮ್ಮ ಆಹ್ವಾನವನ್ನು ಅಗ್ನಿಯು ತಾನು ಗಮನಿಸಿ ಕೇಳಲಿ ಅಥವಾ ದೇವತೆಗಳನ್ನು ಕೇಳುವಂತೆಮಾಡಲಿ ಎಂದರೆ ಅವರ ಮುಂದೆ ನಮ್ಮ ಆಹ್ವಾನವನ್ನು ಪ್ರಕಟಿಸಲಿ ಎಂದರ್ಥ.

**ವಸ್ಯಃ**—ಕಾಂತ್ಯರ್ಥಕವಾದ **ವಸ್** ಧಾತುವಿನಿಂದ ನಿಷ್ಪನ್ನವಾಗಿ **ವಸನೀಯಃ** ಎಂದರೆ ಸೌಮ್ಯರೂಪವುಳ್ಳ ಎಂದರ್ಥವಾಗುತ್ತದೆ.

**ಅಮೂರಃ—ಅಮೂಢಬಲಃ** ಎಂದರ್ಥಮಾಡಿದ್ದಾರೆ. ಸಾಧಾರಣವಾಗಿ **ಮೂರ**ನೆಂದರೆ ಮೂಢನೆಂದೂ, **ಅಮೂರ**ನೆಂದರೆ ಮೂಢನಲ್ಲದ ಎಂದರೆ ಪ್ರಾಜ್ಞನಾದವನೆಂದೂ ಅರ್ಥವಾಗುತ್ತದೆ. ನಿರುಕ್ತಕಾರರು,

**ಮೂರಾ ಅಮೂರ ನ ವಯಂ ಚಿಕಿತ್ವೋ ಮಹಿತ್ವಮಗ್ನೇ ತ್ವಮಂಗ ವಿತ್ಸೇ ।**
**ಶಯೇ ವವ್ರಿಶ್ಚರತಿ ಜಿಹ್ವಯಾದನ್ರೇರಿಹ್ಯತೇ ಯುವತಿಂ ವಿಶ್ಪತಿಃ ಸನ್ ।**
(ಋ. ಸಂ. ೧೦-೪-೪)

ಎಂಬ ಋಕ್ಕನ್ನುದಾಹರಿಸಿ **ಮೂಢಾ ವಯಂ ಸ್ಮೋಽಮೂಢಸ್ತ್ವಮಸಿ** ಎಂದು ವ್ಯಾಖ್ಯಾನಮಾಡಿದ್ದಾರೆ. ಅದರಂತೆ ಇಲ್ಲಿಯೂ ಸಹ ಪ್ರಾಜ್ಞನಾದ ಎಂದು ವಿಶೇಷಣರೂಪದಲ್ಲಿ ಅಗ್ನಿಪರವಾದ ಅರ್ಥವನ್ನು ಮಾಡಬಹುದು.

**ನೇಷತಮೈಃ—ಅತ್ಯರ್ಥಂ ನೇತೃಭಿಃ ಕರ್ಮಭಿಃ ಸ್ತೋತ್ರೈರ್ವಾ ।** ಮಾರ್ಗದರ್ಶಕಗಳಾದವೂ ಉತ್ತಮವಾದವೂ ಆದ ಕರ್ಮಗಳಿಂದ ಅಥವಾ ಸ್ತೋತ್ರಗಳಿಂದ ಎಂದರ್ಥ-

ವ್ಯಾಕರಣಪ್ರಕ್ರಿಯಾ

**ಸುದ್ಯೋತ್ಮಾ**—ದ್ಯುತ ದೀಪ್ತೌ ಧಾತು. **ಅನ್ಯೇಭ್ಯೋಽಪಿ ದೃಶ್ಯಂತೇ**—(ಪಾ. ಸೂ. ೩-೨-೭೫) ಎಂಬುದರಿಂದ ಮನಿನ್ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ **ಪುಗಂತಲಘೂಪಧಸ್ಯ ಚ**—(ಪಾ. ಸೂ. ೭-೩-೮೬) ಎಂಬುದರಿಂದ ಧಾತುವಿನ ಲಘೂಪಧೆಗೆ ಗುಣ. **ಕೃತ್ಸ್ವಾದಯಶ್ಚ**—(ಪಾ. ಸೂ. ೬-೨-೧೧೮) ಎಂಬುದರಿಂದ ಉತ್ತರಪದ ಆದ್ಯುದಾತ್ತಸ್ವರ ಬರುತ್ತದೆ.

**ಜೀರಾಶ್ವಃ**—ಜೀರಾಃ ಅಶ್ವಾಃ ಯಸ್ಯ ಸಃ ಜೀರಾಶ್ವಃ ಜುಎಂಬುದು ಸೌತ್ರಧಾತು. **ಜೋರೀಚ**—(ಉ. ಸೂ. ೨-೧೪೧) ಎಂಬುದರಿಂದ ರಕ್‌ಪ್ರತ್ಯಯ. ವೃತ್ತಿಕಾರರ ಮತದಲ್ಲಿ ಜ್ಯಾ ಧಾತುವಿಗೆ ರಕ್‌ಪ್ರತ್ಯಯ. ರಕಿಜ್ಯಃ **ಸಂಪ್ರಸಾರಣೇ ಜೀರೇತಿ**—(ಪಾ. ಸೂ. ೧-೧-೪-೬) ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್—(ಪಾ. ಸೂ. ೬-೨-೨) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಮಂದ್ರಃ**—ಮದೀ ಹರ್ಷೇ. ಧಾತು. **ಸ್ಫಾಯಿತಂಚಿ ವಂಚಿ**—(ಉ ಸೂ. ೨-೧೭೦) ಎಂಬುದರಿಂದ ರಕ್ ಪ್ರತ್ಯಯ. **ಇದಿತೋನುಮ್‌ಧಾತೋಃ**—ಎಂಬುದರಿಂದ ನುಮಾಗಮ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಶೃಣವತ್**—ಶ್ರು ಶ್ರವಣೇ. ಧಾತು. ಲೇಟ್‌ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಇತಶ್ಚ ಲೋಪಃ**—(ಪಾ. ಸೂ. ೩-೪-೯೭) ಎಂಬುದರಿಂದ ಅಂತ್ಯ ಇಕಾರಕ್ಕೆ ಲೋಪ. **ಲೇಟೋಡಾಟೌ**--(ಪಾ. ಸೂ. ೩-೪-೯೪) ಎಂಬುದರಿಂದ ಅದಕ್ಕೆ ಅಡಾಗಮ. **ಶ್ರುವಃ ಶೃಚ**—(ಪಾ. ಸೂ. ೩-೧-೭೪) ಎಂಬುದರಿಂದ ಧಾತುವಿಗೆ ಶೃ ಆದೇಶ, ಶ್ನುವಿಕರಣ. ಋಕಾರದ ಪರದಲ್ಲಿ ಬಂದುದರಿಂದ ಣತ್ವ. ಅದರ ಉಕಾರಕ್ಕೆ ಪ್ರತ್ಯಯ ನಿಮಿತ್ತವಾಗಿ ಗುಣ. ಅವಾದೇಶ. ಶೃಣವತ್ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ತಿಙಂತ ನಿಘಾತಸ್ವರ ಬರುತ್ತದೆ.

**ಚಂದ್ರರಥಃ**—ಹಿಂದಿನಂತೆ ಬಹುವ್ರೀಹಿಸಮಾಸ. ಪೂರ್ವಪದವು ರಕ್ ಪ್ರತ್ಯಯಾಂತವಾದುದರಿಂದ ಅಂತೋದಾತ್ತ. ಬಹುವ್ರೀಹಿಯಲ್ಲಿ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ನೇಷತ್**—ಣೀಞ್ ಪ್ರಾಪಣೇ. ಧಾತು, ಲೇಟ್‌ಪ್ರಥಮಪುರುಷಏಕವಚನದಲ್ಲಿ ತಿಪ್‌ಪ್ರತ್ಯಯ. **ಇತಶ್ಚ ಲೋಪಃ**—(ಪಾ. ಸೂ. ೩-೪-೯೭) ಎಂಬುದರಿಂದ ಅಂತ್ಯ ಇಕಾರಲೋಪ. **ಲೇಟೋಽಡಾಟೌ**—(ಪಾ. ಸೂ. ೩-೪-೯೪)—ಎಂಬುದರಿಂದ ಅಡಾಗಮ. **ಸಿಬ್ಬಹುಲಂ ಲೇಟಿ**—(ಪಾ. ಸೂ. ೩-೧-೩೪) ಎಂಬುದರಿಂದ ಸಿಪ್. ಅದನ್ನು ನಿಮಿತ್ತೀಕರಿಸಿ **ಸಾರ್ವಧಾತುಕಾರ್ಧಧಾತುಕಯೋಃ**—ಎಂಬುದರಿಂದ ಧಾತುವಿನ ಇಕಿಗೆ ಗುಣ. **ಆದೇಶಪ್ರತ್ಯಯಯೋಃ**—ಎಂಬುದರಿಂದ ಪ್ರತ್ಯಯ ಸಕಾರಕ್ಕೆ ಷತ್ವ. ತಿಙಂತನಿಘಾತಸ್ವರ ಬರುತ್ತದೆ.

**ನೇಷತಮೈಃ**—**ಅತಿಶಾಯನೇ ತಮಬಿಷ್ಠನೌ**—ಎಂಬುದರಿಂದ ತಮಪ್‌ಪ್ರತ್ಯಯ ಪಿತ್ತಾದುದರಿಂದ ಇದು ಅನುದಾತ್ತವಾಗುತ್ತದೆ. ತೃತೀಯಾಬಹುವಚನಾಂತರೂಪ.

**ಸುವಿತಮ್**—ಇಣ್ ಗತೌ ಧಾತು. ಇದಕ್ಕೆ ಕರ್ಮಣಿಯಲ್ಲಿ ಕ್ತಪ್ರತ್ಯಯ. **ತನ್ವಾದೀನಾಂ ಛಂದಸ್ಯುಪಸಂಖ್ಯಾನಮ್**—ಎಂಬಲ್ಲಿ ಬಹುಲಗ್ರಹಣವಿರುವುದರಿಂದ ಉವಙಾದೇಶ. **ಗತಿರನಂತರಃ**—(ಪಾ. ಸೂ. ೬-೨-೪೯) ಎಂಬುದರಿಂದ ಪೂರ್ವಪದಪ್ರಕೃತಿಸ್ವರವು ಪ್ರಾಪ್ತವಾದರೆ **ಸೂಪಮಾನಾತ್‌ಕ್ತಃ**—ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ. ದ್ವಿತೀಯಾಏಕವಚನಾಂತರೂಪ.

**ವಸ್ಯಃ**—**ಯತೋಽನಾವಃ**—(ಪಾ. ಸೂ. ೬-೧-೨೧೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

ಸಂಹಿತಾಪಾಠಃ

ಅಸ್ತಾವ್ಯಗ್ನಿಃ ಶಿಮೀವದ್ಭಿರರ್ಕೈಃ ಸಾಮ್ರಾಜ್ಯಾಯ ಪ್ರತರಂ ದಧಾನಃ ।

ಅಮೀ ಚ ಯೇ ಮಘವಾನೋ ವಯಂ ಚ ಮಿಹಂ ನ ಸೂರೋ ಅತಿ

ನಿಷ್ಟತನ್ಯುಃ ॥ ೧೩ ॥

ಪದಪಾಠಃ

ಅಸ್ತಾವಿ । ಅಗ್ನಿಃ । ಶಿಮೀವತ್ಽಭಿಃ । ಅರ್ಕೈಃ । ಸಾಂಽರಾಜ್ಯಾಯ । ಪ್ರಽತರಂ । ದಧಾನಃ ।

ಅಮೀ ಇತಿ । ಚ । ಯೇ । ಮಘವಾನಃ । ವಯಂ । ಚ । ಮಿಹಂ । ನ । ಸೂರಃ । ಅತಿ । ನಿಃ । ತತನ್ಯುಃ ॥ ೧೩ ॥

ಸಾಯಣಭಾಷ್ಯಂ

ಅಯಮಗ್ನಿಃ ಶಿಮೀವದ್ಭಿರ್ಹವಿಷ್ಪ್ರದಾನಾದಿಕರ್ಮವದ್ಭಿರರ್ಕೈರರ್ಚನಸಾಧನೈರ್ಮಂತ್ರೈರಸ್ತಾವಿ। ಸ್ತುತೋಽಸ್ಮಾಭಿರ್ಯಜಮಾನೈಃ । ಶಿಮೀತಿ ಕರ್ಮನಾಮ ಶಿಮೀ ಶಕ್ತಿರಿತಿ ತನ್ನಾಮಸು ಪಾಠಾತ್ । ಕೀದೃಶೋಽಯಂ । ಸಾಮ್ರಾಜ್ಯಾಯ ಸಾಮ್ರಾಜ್ಯಸ್ಯೇತಿ ಕರ್ಮಣಿ ಷಷ್ಠೀಸ್ಥಾನೇ ಚತುರ್ಥೀ । ಸಮ್ಯಗ್ರಾಜಮಾನತ್ವಂ ಪ್ರತರಂ ಪ್ರಕೃಷ್ಟತರಮತ್ಯರ್ಥಂ ದಧಾನಃ ॥ ಅಮು ಚ ಛಂದಸೀತ್ಯಮುಪ್ರತ್ಯಯಃ ॥ ಕಿಂಚೇಮಮಗ್ನಿಮಮೀ ಚ ಪುರೋವರ್ತಮಾನಾ ಋತ್ವಿಜಃ ಪುತ್ರಾದಯೋ ವಾ ಯೇ ವಯಂ ಚ ಪೂರ್ವಂ ಸ್ತೋತೃತ್ವೇನ ಪ್ರಸಿದ್ಧಾ ವಯಮಪ್ಯತ್ಯರ್ಥಂ ನಿಷ್ಟತನ್ಯುಃ । ಶಬ್ದಯಂತು ॥ ನಿಷ್ಪೂರ್ವಃ ಸ್ತನತಿಃ ಶಬ್ದಕರ್ಮಾ ॥ ಇತಃ ಪರಮಪ್ಯಸ್ಮತ್ಪುತ್ರಪೌತ್ರಾದಯೋ ವಯಂ ಚಾಗ್ನಿಂ ಸ್ತುಮ ಇತ್ಯರ್ಥಃ । ತತ್ರ ದೃಷ್ಟಾಂತಃ । ಮಿಹಂ ನ ಸೂರಃ । ಮಿಹಂ ಮೇಹನಶೀಲಂ ಮೇಘಂ ಯಥಾ ಸೂರಃ ಸೂರ್ಯೋ ವೃಷ್ಟ್ಯರ್ಥಂ ಶಬ್ದಯತಿ ತದ್ವತ್ ॥ ಲಿಙಃ ಛಾಂದಸೋ ವಿಕರಣಸ್ಯ ಶ್ಲುಃ । ಅಭಿನಿಸಃ ಸ್ತನಃ ಶಬ್ದಸಂಜ್ಞಾಯಾಂ । ಪಾ. ೮-೩-೮೬ । ಇತಿ ಷತ್ವಂ ॥

ಪ್ರತಿಪದಾರ್ಥ

ಸಾಮ್ರಾಜ್ಯಾಯ—ಸಾರ್ವಭೌಮತ್ವಕ್ಕೆ । ಪ್ರತರಂ—ಶ್ರೇಷ್ಠವಾದ ಅರ್ಹತೆಯನ್ನು । ದಧಾನಃ—ಹೊಂದಿರುವ । ಅಗ್ನಿಃ—ಅಗ್ನಿಯು । ಶಿಮೀವದ್ಭಿಃ—ಹವಿಷ್ಪ್ರದಾನಾದಿಕರ್ಮಗಳಿಂದಲೂ । ಅರ್ಕೈಃ—ಪೂಜೆಗೆ ಯೋಗ್ಯವಾದ ಮಂತ್ರಗಳಿಂದಲೂ । ಅಸ್ತಾವಿ—ಸ್ತುತನಾಗಿದ್ದಾನೆ (ಈ ಅಗ್ನಿಯನ್ನು) । ಅಮೀ ಚ—ಎದುರಿಗಿರುವ ಈ ಋತ್ವಿಕ್ಕುಗಳೂ ಅಥವಾ ನಮ್ಮ ಪುತ್ರಾದಿಗಳೂ । ಮಘವಾನಃ—(ಅಗ್ನಿಯ ಅನುಗ್ರಹದಿಂದ) ಧನವಂತರಾದ । ಯೇ ವಯಂ ಚ—ಭಕ್ತರಾದ ಈ ನಾವುಗಳೂ ಕೂಡ । ಸೂರಃ—ಸೂರ್ಯನು । ಮಿಹಂ ನ—(ವೃಷ್ಟ್ಯರ್ಥವಾಗಿ) ಮೇಘವನ್ನು ಗರ್ಜಿಸುವ ಹಾಗೆ ಮಾಡುವಂತೆ । ಅತಿ—ಬಹಳ (ಗಂಭೀರವಾದ) ಶಬ್ದದಿಂದ । ನಿಷ್ಟತನ್ಯುಃ—ಸ್ತುತಿಸುತ್ತೇವೆ.

ಭಾವಾರ್ಥ

ಸಾರ್ವಭೌಮನಾದ ಪ್ರಭುವಾಗಿರಲು ಶ್ರೇಷ್ಠವಾದ ಅರ್ಹತೆಯನ್ನು ಹೊಂದಿರುವ ಈ ಅಗ್ನಿಯನ್ನು ನಾವು ಹವಿಷ್ಪ್ರದಾನಾದಿ ಕರ್ಮಗಳಿಂದಲೂ, ಪೂಜೆಗೆ ಯೋಗ್ಯವಾದ ಮಂತ್ರಗಳಿಂದಲೂ ಸ್ತುತಿಸಿದ್ದೇವೆ. ಮತ್ತು ಪುನಃ ಆ ಅಗ್ನಿಯನ್ನು ಎದುರಿಗಿರುವ ಈ ಋತ್ವಿಕ್ಕುಗಳೂ, ಮತ್ತು ಅವನ ಅನುಗ್ರಹದಿಂದ ಧನವಂತರಾದ ನಾವುಗಳೂ ಸಹ ಸೂರ್ಯನು ವೃಷ್ಟ್ಯರ್ಥವಾಗಿ ಮೇಘವನ್ನು ಗರ್ಜಿಸುವ ಹಾಗೆ ಮಾಡುವಂತೆ ಬಹಳ ಗಂಭೀರವಾದ ಶಬ್ದದಿಂದ ಸ್ತುತಿಸುತ್ತೇವೆ.

English Translation

Agni, possessing eminent (fitness) for supreme sovereignty, has been glorified by us with holy rites, and with hymns : Let all who are present, as well as we ourselves, enriched (by his favour), shout aloud (the praise of Agni), as (loudly as) the sun (causes) the rain-cloud (to thunder)

ವಿಶೇಷವಿಷಯಗಳು

**ಸಾಮ್ರಾಜ್ಯಾಯ ಪ್ರತರಂ—ಸಾಮ್ರಾಜ್ಯಸ್ಯ ಪ್ರಕೃಷ್ಟತರಮತ್ಯರ್ಥಂ ದಧಾನಃ** ಸಾಮ್ರಾಜ್ಯಸ್ಯ ಎಂಬ ಷಷ್ಠಿಯಲ್ಲಿರಬೇಕಾದ ಪದವು ಆ ಸ್ಥಾನದಲ್ಲಿ ಚತುರ್ಥೀವಿಭಕ್ತಿಯಲ್ಲಿದೆ ಸಾಮ್ರಾಜ್ಯಪದವಿಯ ಉತ್ಕೃಷ್ಟಸ್ಥಾನವನು ಹೊಂದಿರುವ ಎಂದು ಅಗ್ನಿಯನ್ನು ಸ್ತುತಿಸಿದೆ.

**ಪ್ರ ಸಮ್ರಾಜೋ ಅಸುರಸ್ಯ ಪ್ರಶಸ್ತಿಂ ಪುಂಸಃ ಕೃಷ್ಟೀನಾಮನುಮಾದ್ಯಸ್ಯ ।**
**ಇಂದ್ರಸ್ಯೇವ ಪ್ರ ತವಸಸ್ಕೃತಾನಿ ವಂದೇ ದಾರುಂ ವಂದಮಾನೋ ವಿವಕ್ಮಿ ॥**
(ಋ ಸಂ. ೭-೬-೧)

ಇತ್ಯಾದಿ ಋಕ್ಕುಗಳಲ್ಲಿಯೂ,

**ಅಗ್ನಿರ್ಹ ದೈವೀನಾಂ ವಿಶಾಂ ಪುರ ಏತೇತ್ಯಗ್ನಿರ್ಹಿ ದೇವತಾನಾಂ ಮುಖಂ ।**
(ಶ. ಬ್ರಾ. ೩-೭-೩-೧೦)

ಇತ್ಯಾದಿ ಬ್ರಾಹ್ಮಣವಾಕ್ಯಗಳಲ್ಲಿಯೂ ವರ್ಣಿಸಿರುವಂತೆ ದೇವತೆಗಳಿಗೂ ಮೇಲಾದ ಸಾರ್ವಭೌಮನಾಗಿರತಕ್ಕ ಅಗ್ನಿಯ ಪ್ರಭಾವವನ್ನು **ಸಾಮ್ರಾಜ್ಯಾಯ ಪ್ರತರಂ** ಎಂಬ ವಾಕ್ಯದಿಂದ ಹೇಳಿದೆ.

**ಶಿಮೀವದ್ಭಿಃ—ಶಿಮೀತಿ ಕರ್ಮನಾಮ । ಶಿಮೀ ಶಕ್ತಿಃ** (ನಿ. ೨-೧) **ಇತಿ ತನ್ನಾಮಸು ಪಾಠಾತ್ । ಹವಿಷ್ಪ್ರದಾನಾದಿ ಕರ್ಮವದ್ಭಿಃ ।** ಹವಿಷ್ಪ್ರದಾನವೇ ಮುಂತಾದ ಕರ್ಮಗಳಿಂದ ಎಂದು ಸಾಯಣರು ನಿರುಕ್ತ ವಚನದ ಆಧಾರದ ಮೇಲೆ ಅರ್ಥಮಾಡಿದ್ದಾರೆ.

**ಅರ್ಕೈಃ—ಅರ್ಚನಸಾಧನೈರ್ಮಂತ್ರೈಃ ।** ಪೂಜೆಗೆ ಸಾಧನವಾದ ಮಂತ್ರಗಳಿಂದ ಎಂದು ಇಲ್ಲಿ ಅರ್ಥ ಮಾಡಿದೆ.

**ಅರ್ಕೋ॰ ದೇವೋ॰ ಭವತಿ ಯದೇನಮರ್ಚಂತಿ ।**
**ಅರ್ಕೋ॰ ಮಂತ್ರೋ॰ ಭವತಿ ಯದನೇನಾರ್ಚಂತಿ ।**
**ಅರ್ಕಮನ್ನಂ ಭವತ್ಯರ್ಚತಿ ಭೂತಾನಿ ।**
**ಅರ್ಕೋ॰ ವೃಕ್ಷೋ॰ ಭವತಿ ಸಂವೃತ್ತಃ ಕಟುಕಿಮ್ನಾ ।**
(ನಿ. ೫-೪)

ಪೂಜಾ ವಿಷಯುವಾದುದರಿಂದ **ಅರ್ಕವೇ** ಪೂಜಾಸಾಧನವಾದುದರಿಂದ ಅರ್ಕವೇ ಮಂತ್ರವು, ಭೂತಗಳಿಗೆ ಚೈತನ್ಯ ದಾಯಿಯಾದುದರಿಂದ ಅರ್ಕವೇ ಅನ್ನವು. ಕಟುವಾದುದರಿಂದ ಅರ್ಕವೇ ವೃಕ್ಷವು ಎಂದು ನಿರುಕ್ತಕಾರರು ಬೇರೆ ಬೇರೆ ಅರ್ಥಗಳನ್ನು ಹೇಳಿ,

**ಗಾಯಂತಿ ತ್ವಾ ಗಾಯತ್ರಿಣೋ॰ऽರ್ಚಂತ್ಯರ್ಕಮರ್ಕಿಣಃ ।**
**ಬ್ರಹ್ಮಾಣಸ್ತ್ವಾ ಶತಕ್ರತ ಉದ್ವಂಶಮಿವ ಯೇಮಿರೇ ।**
(ಋ ಸಂ. ೧-೧೦-೧)

ಎಂಬ ಋಕ್ಕನ್ನುದಪರಿಸಿ **ಅರ್ಕದ** ಸ್ವರೂಪವನ್ನು ವಿವರಿಸಿದ್ದಾರೆ. **ಅರ್ಕದ** ಪ್ರಭಾವವು ಅತ್ಯಧಿಕವಾದುದೆಂದು ನಾನಾ ಕಡೆಗಳಲ್ಲಿ ಅದರ ಮಹಿಮೆಯನ್ನು ಸ್ತುತಿಸಿದೆ. ಐತರೇಯಾರಣ್ಯಕದಲ್ಲಿ—

**ಅಥಾತಃ ಶಿರಃ । ತದ್ಗಾಯತ್ರೀಷು ಭವತ್ಯಗ್ರಂ ವೈ ಛಂದಸಾಂ ಗಾಯತ್ರ್ಯಗ್ರಮಂಗಾನಾಂ ಶಿರಃ ।**
**ತದರ್ಕವತೀಷು ಭವತ್ಯಗ್ನಿರ್ವಾ ಅರ್ಕಃ । ತಾ ನವ ಭವಂತಿ ನವ ಕಪಾಲಂ ಶಿರಃ ।**
(ಐ. ಆ. ೧-೪-೧)

ಎಂದು **ಇಂದ್ರಮಿದ್ಗಾಥಿನೋ॰ ಬೃಹದಿಂದ್ರಮರ್ಕೇಭಿರರ್ಕಿಣಃ ।** (ಋ. ಸಂ. ೧-೭-೧) ಎಂಬ ಋಕ್ಕಿನಿಂದ ೯ ಋಕ್ಕುಗಳು **ಅರ್ಕಮಂತ್ರಗಳೆಂದೂ,** ಅವೇ ಶಿರಆತ್ಮಕವಾದ ಮಂತ್ರಗಳೆಂದೂ, **ಗಾಯತ್ರವೇ** ಪ್ರಧಾನವಾದ ತತ್ತ್ವವಾಗಿ ಈ ಮಂತ್ರಗಳೂ ಆ ಗಾಯತ್ರರೂಪದಲ್ಲಿರುವುದರಿಂದ **ಅರ್ಕ** ಮಂತ್ರಗಳು ಎಲ್ಲಾ ಮಂತ್ರಗಳಿಗಿಂತಲೂ ಪ್ರಧಾನವಾದ ಸ್ಥಾನವನ್ನು ಹೊಂದಿವೆಯೆಂದು ಹೇಳಿದೆ.

**ಮಿಹಂ ನ—ಮೇಹನಶೀಲಂ ಮೇಘಂ ಯಥಾ** । ವೃಷ್ಟಿಯನ್ನು ಸುರಿಸತಕ್ಕ ಮೇಘದಂತೆ ಎಂದು ಯಜಮಾನನ ಗಂಭೀರವಾದ ಸ್ತುತಿಧ್ವನಿಯನ್ನು ಮೇಘನಾದಕ್ಕೆ ಹೋಲಿಸಿದೆ.

### ವ್ಯಾಕರಣಪ್ರಕ್ರಿಯಾ

**ಅಸ್ತಾವಿ**—ಷ್ಟುಞ್ ಸ್ತುತೌ ಧಾತು. ಕರ್ಮಣಿಯಲ್ಲಿ ಲುಙ್. ಪ್ರಥಮಪುರುಷ ಏಕವಚನದಲ್ಲಿ ತಪ್ರತ್ಯಯ. **ಚಿಣ್ ಭಾವಕರ್ಮಣೋಃ** (ಪಾ. ಸೂ. ೩-೧-೬೬) ಎಂಬುದರಿಂದ ಚ್ಲಿಗೆ ಚಿಣಾದೇಶ. **ಅಚೋ॰ಞ್ಣಿತಿ** ಎಂಬುದ ರಿಂದ ವೃದ್ಧಿ. **ಚಿಣೋ॰ ಲುಕ್** (ಪಾ. ಸೂ. ೬-೪-೧೦೪) ಎಂಬುದರಿಂದ ತಶಬ್ದಕ್ಕೆ ಲುಕ್. ಅಂಗಕ್ಕೆ ಅಡಾಗಮ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾದ ಪದವಾಗುತ್ತದೆ.

**ಶಿಮೀವದ್ಭಿಃ**— ಶಿಮ್ಯಃ ಏಷಾಂ ಸಂತಿ ಇತಿ ಶಿಮೀವಂತಃ **ತದಸ್ಯಾಸ್ತಿ**–ಎಂಬುದರಿಂದ ಮತುಪ್ ಪ್ರತ್ಯಯ. **ಛಂದಸೀರಃ** (ಪಾ. ಸೂ. ೮-೨-೧೫) ಎಂಬುದರಿಂದ ಮತುಪಿನ ಮಕಾರಕ್ಕೆ ವತ್ವ. ಇದು ಪಿತ್ತಾದುದರಿಂದ ಅನುದಾತ್ತವಾಗುತ್ತದೆ.

**ಅರ್ಕೈಃ**—ಅರ್ಚ ಪೂಜಾಯಾಂ ಧಾತು. **ಕೃದಾಧಾರಾರ್ಚಿ**—(ಉ: ಸೂ. ೩-೪೦) ಎಂಬುದರಿಂದ ಕ ಪ್ರತ್ಯಯ. ಬಹುಲಗ್ರಹಣದಿಂದ ಕಕಾರಕ್ಕೆ ಇತ್ ಸಂಜ್ಞಾ ಬರುವುದಿಲ್ಲ ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಪ್ರತರಮ್** - ಅತಿಶಯಾರ್ಥದಲ್ಲಿ ತರಪ್ ಪ್ರತ್ಯಯ ಬಂದಾಗ **ಅಮು ಚ ಚ್ಛಂದಸಿ** (ಪಾ. ಸೂ. ೫-೪-೧೨) ಎಂಬುದರಿಂದ ತರಪಿನ ಮೇಲೆ ಅಮು ಪ್ರತ್ಯಯ. ಉಕಾರಕ್ಕೆ ಇತ್‌ಸಂಜ್ಞಾದಿಂದ ಲೋಪ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ

**ದಧಾನಃ**—ಡುಧಾಞ್ ಧಾರಣಪೋಷಣಯೋಃ ಧಾತು. ಲಡರ್ಥದಲ್ಲಿ ಶಾನಚ್ ಪ್ರತ್ಯಯ. ಶ್ಲು ವಿಕರಣ. **ಅಭ್ಯಸ್ತಾನಾಮಾದಿಃ** (ಪಾ. ಸೂ. ೬-೧-೧೮೯) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಸಾಮ್ರಾಜ್ಯಾಯ**—ಸಮ್ರಾಜೋ ಭಾವಃ ಸಾಮ್ರಾಜ್ಯಮ್. **ಗುಣವಚನಬ್ರಾಹ್ಮಣಾದಿಭ್ಯಃ**—(ಪಾ. ಸೂ. ೫-೧-೧೨೪) ಎಂಬುದರಿಂದ ಷ್ಯಞ್ ಪ್ರತ್ಯಯ. **ಞ್ನಿತ್ಯಾದಿರ್ನಿತ್ಯಮ್** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಷಷ್ಠೀಸ್ಥಾನದಲ್ಲಿ ಚತುರ್ಥೀ ಬಂದಿದೆ.

**ಮಿಹಮ್**—ಮಿಹ ಸೇಚನೇ. ಧಾತು. ಮೇಹತಿ ಸಿಂಚತಿ ಇತಿ ಮಿಹ್ **ಕ್ವಿಪ್ ಚ** (ಪಾ. ಸೂ. ೩-೨-೭೬) ಎಂಬುದರಿಂದ ಕ್ವಿಪ್ ಪ್ರತ್ಯಯ ದ್ವಿತೀಯಾ ಏಕವಚನಾಂತರೂಪ.

**ನಿಷ್ಟತನ್ಯುಃ**—ನಿಸ್ ಉಪಸರ್ಗ. ತನ ಧಾತುವು ಇಲ್ಲಿ ಶಬ್ದಕ್ರಿಯಾದಲ್ಲಿ ಪಠಿತವಾಗಿದೆ. ಲಿಙ್ ಪ್ರಥಮ ಪುರುಷ ಬಹುವಚನದಲ್ಲಿ ಝಿ ಪ್ರತ್ಯಯ. ಅದಕ್ಕೆ ಜುಸಾದೇಶ. **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಶ್ಲು ಆದೇಶ. **ಶ್ಲೌ** (ಪಾ. ಸೂ. ೬-೧-೧೦) ಎಂಬುದರಿಂದ ಧಾತುವಿಗೆ ದ್ವಿತ್ವ. **ಯಾಸುಟ್ ಪರಸ್ಮೈ**—ಎಂಬುದರಿಂದ ಪ್ರತ್ಯಯಕ್ಕೆ ಯಾಸುಟಾಗಮ. **ಲಿಙಃ ಸಲೋಪೋಽನಂತ್ಯಸ್ಯ** ಸೂತ್ರದಿಂದ ಸಕಾರಲೋಪ. **ಉಸ್ಯಪದಾಂತಾತ್** (ಪಾ. ಸೂ. ೬-೧-೯೬) ಎಂಬುದರಿಂದ ಪರರೂಪ. **ಅಭಿನಿಸಃ ಸ್ತನಃ ಶಬ್ದಸಂಜ್ಞಾಯಾಮ್** (ಪಾ. ಸೂ. ೮-೩-೮೬) ಎಂಬುದರಿಂದ ಷತ್ವ ಬರುತ್ತದೆ. ಧಾತುವಿಗೆ **ತಿಙ್ಙತಿಙಃ** ಎಂಬುದರಿಂತ ನಿಘಾತಸ್ವರ ಬರುತ್ತದೆ. ॥ ೧೩ ॥

ಇಲ್ಲಿಗೆ ೧೪೧ನೇ ಸೂಕ್ತವು ಮುಗಿದುದು.

——— :C: ———

# ನೂರನಲವತ್ತೆರಡನೆಯ ಸೂಕ್ತವು

ಸಮಿದ್ಧ ಇತಿ ತ್ರಯೋದಶರ್ಚಂ ತೃತೀಯಂ ಸೂಕ್ತಮಾನುಷ್ಟುಭಂ । ಪ್ರಥಮಾಯಾಃ ಸಮಿನ್ನಾಮಕೋಽಗ್ನಿರ್ದೇವತಾ ಸಮಿದ್ಧೋಽಗ್ನಿಃ । ದ್ವಿತೀಯಾದೀನಾಂ ತನೂನಪಾನ್ನರಾಶಂಸ ಇಳೋ ಬರ್ಹಿರ್ದೇವೀರ್ದ್ವಾರ ಉಷಾಸಾನಕ್ತಾ ದೈವ್ಯಾ ಹೋತಾರಾ ಪ್ರಚೇತಸಾ ತಿಸ್ರೋ ದೇವ್ಯಃ ಸರಸ್ವತೀಳಾಭಾರತ್ಯಸ್ತ್ವಷ್ಟಾ ವನಸ್ಪತಿಃ ಸ್ವಾಹಾಕೃತಿರಿತ್ಯೇತಾಃ ಕ್ರಮೇಣ ದೇವತಾಃ । ಅಂತ್ಯಾಯಾ ಇಂದ್ರಃ । ತಿಸ್ರೋ ದೇವ್ಯ ಇತ್ಯಸ್ಯ ವಿವರಣಂ ಸರಸ್ವತೀಳಾಭಾರತ್ಯ ಇತಿ । ಅತ್ರಾನುಕ್ರಮಣಿಕಾ । ಸಮಿದ್ಧ ಆಪ್ರಿಯ ಆನುಷ್ಟುಭಮಂತ್ಯೈಂದ್ರೀತಿ ॥ ಅತ್ರೇಧ್ಮತನೂನಪಾದಾದಿಭಿರ್ಯಜ್ಞಾವಯವವಾಚಿಭಿರ್ಯಜ್ಞ ಏವೋಚ್ಯತೇ । ಅತಃ ಸ ಏವ ದೇವತೇತಿಕಾತ್ಥಕ್ಯಸ್ಯ ಮತಂ। ಅಗ್ನಿರೇವ ಸಮಿದಾದಿಭಿರುಚ್ಯತೇ। ಅತಃ ಸ ಏವ ದೇವತೇತಿ ಶಾಕಪೂಣೇರ್ಮತಂ। ನಿರುಕ್ತೇ ಕಿಂದೇವತಾಃ ಪ್ರಯಾಜಾನುಯಾಜಾ ಇತಿ ಚ್ಛಂದೋದೇವತಾ ಇತ್ಯಾದಿಪಕ್ಷಾಂತರಂ ಬಹುಧಾ ಪ್ರದರ್ಶ್ಯ ತದರ್ಥೇ ಬ್ರಾಹ್ಮಣಾದಿ ಚೋದಾಹೃತ್ಯ ಇತರೇ ಪಕ್ಷಾ ಅರ್ಥವಾದಾ ಆಗ್ನೇಯಾ ಏವೇತಿ ಸಿದ್ಧಾಂತಿತಂ ಅಥ ಕಿಂದೇವತಾಃ ಪ್ರಯಾಜಾನುಯಾಜಾ ಇತ್ಯಾದಿನಾ। ನಿ ೮.೨೧॥ ಪಶಾವಂಗಿರೋಗೋತ್ರೋತ್ಪನ್ನಾನಾಮೇತದಾಪ್ರೀಸೂಕ್ತಂ । ಏಕಾದಶ ಪ್ರಯಾಜಾ ಇತಿ ಖಂಡೇ ಸೂತ್ರಿತಂ । ಸಮಿದ್ಧೋ ಅದ್ಯೇತಿ ಸರ್ವೇಷಾಂ ಯಥಋಷಿ ವಾ । ಆ. ೩-೨ । ಇತಿ । ಅತ್ರ ಯಥಋಷಿಗ್ರಹಣಾತ್ ॥ ಆಪ್ರೀಸೂಕ್ತಾನಿ ತ್ರಿವಿಧಾನಿ । ತತ್ರ ವಾಸಿಷ್ಠಾತ್ರೇಯವಾಧ್ರ್ಯಶ್ವಗಾರ್ತ್ಸಮದಾನಿ ಚತ್ವಾರಿ ನರಾಶಂಸವಂತಿ । ಮೈಧಾತಿಥದೈರ್ಘತಮಸಪ್ರೈಷಿಕಾಣಿ ನರಾಶಂಸತನೂನಪಾದುಭಯವಂತಿ । ಇತರಾಣಿ ತನೂನಪಾತ್ವಂತೀತಿ । ತತ್ರೈತತ್ಸೂಕ್ತಂ ದೈರ್ಘತಮಸತ್ವಾದುಭಯವತ್ ॥

ಅನುವಾದವು—**ಸಮಿದ್ಧೋ ಅಗ್ನೇ** ಎಂಬ ಈ ಸೂಕ್ತವು ಇಪ್ಪತ್ತೊಂದನೆಯ ಅನುವಾಕದಲ್ಲಿ ಮೂರನೆಯ ಸೂಕ್ತವು. ಇದರಲ್ಲಿ ಹದಿಮೂರು ಋಕ್ಕುಗಳಿರುವವು. ಮೊದಲನೆಯ ಋಕ್ಕಿಗೆ ಸಮಿನ್ನಾಮಕನಾದ ಸಮಿದ್ಧೋಽಗ್ನಿಯೇ ದೇವತೆಯು ಎರಡನೆಯ ಋಕ್ಕಿನಿಂದ ಹನ್ನೆರಡನೆಯ ಋಕ್ಕುಗಳಿಗೆ ಕ್ರಮವಾಗಿ ತನೂನಪಾತ್, ನರಾಶಂಸಃ, ಇಳಃ, ಬರ್ಹಿಃ, ದೇವೀರ್ದ್ವಾರಃ, ಉಷಾಸಾನಕ್ತಾ, ದೈವ್ಯಾಹೋತಾರಾ ಪ್ರಚೇತಸಾ, ಸರಸ್ವತೀಳಾಭಾರತ್ಯಃ ಎಂಬ ಮೂರು ಮಂದಿ ದೇವತೆಯರು, ತ್ವಷ್ಟಾ, ವನಸ್ಪತಿಃ, ಸ್ವಾಹಾಕೃತಿಃ ಎಂಬುವರು ದೇವತೆಗಳು. ಕೊನೆಯ ಋಕ್ಕಿಗೆ ಇಂದ್ರನು ದೇವತೆಯು. ತಿಸ್ರೋ ದೇವ್ಯಃ ಎಂದರೆ ಸರಸ್ವತೀ, ಇಳಾ, ಭಾರತೀ ಎಂಬ ಮೂರು ಮಂದಿ ದೇವತೆಯರು. ಅನುಕ್ರಮಣಿಕೆಯಲ್ಲಿ—**ಸಮಿದ್ಧ ಆಪ್ರಿಯ ಆನುಷ್ಟುಭಮಂತ್ಯೈಂದ್ರೀತಿ** ಎಂದು ಹೇಳಿರುವುದು. ಇಧ್ಮ, ತನೂನಪಾತ್ ಮೊದಲಾದ ಶಬ್ದಗಳು ಯಜ್ಞಾವಯವಗಳಾದ್ದರಿಂದ ಇವೆಲ್ಲವೂ ಯಜ್ಞವನ್ನೇ ಸೂಚಿಸುತ್ತವೆ. ಆದುದರಿಂದ ಈ ಸೂಕ್ತಕ್ಕೆ ಯಜ್ಞವೇ ದೇವತೆಯೆಂದು ಕಾತ್ಥಕ್ಯ ಎಂಬುವರ ಮತವು. ಸಮಿದಾದಿಪದಗಳು ಅಗ್ನಿಗೇ ಅನ್ವಯಿಸುವುದರಿಂದ ಅಗ್ನಿಯೇ ಈ ಸೂಕ್ತಕ್ಕೆ ದೇವತೆಯೆಂದು ಶಾಕಪೂಣಿ ಎಂಬುವರ ಮತವು. ನಿರುಕ್ತದಲ್ಲಿ—**ಕಿಂ ದೇವತಾಃ ಪ್ರಯಾಜಾನೂಯಾಜಾಃ** ಎಂದು ಈ ಸೂಕ್ತಕ್ಕೆ ಪ್ರಯಾಜ ಮತ್ತು ಅನುಯಾಜ ಆಹುತಿಗಳೇ ದೇವತೆಗಳೆಂದು ವಿವರಿಸಿ ಅದರ ಸಮರ್ಥನೆಗಾಗಿ ಬ್ರಾಹ್ಮಣವಾಕ್ಯಗಳು ಉದಹರಿಸಲ್ಪಟ್ಟಿರುವುವು. ಋಕ್ಕುಗಳಲ್ಲಿ

ಹೇಳಿರುವ ಅರ್ಥವನ್ನನುಸರಿಸಿ ಈ ಋಕ್ಕುಗಳೆಲ್ಲಾ ಅಗ್ನಿಸಂಬಂಧವಾದವು ಎಂದು ಪಕ್ಷಾಂತರವನ್ನೂ ಪ್ರತಿಪಾದಿಸಿರುವುದು. (ನಿ. ೮-೨೧) ಪಶುಹೋಮಮಾಡುವಾಗ ಅಂಗಿರಾಋಷಿಗೋತ್ರೋತ್ಪನ್ನರಾದವರು ಈ ಆಪ್ರೀಸೂಕ್ತದಿಂದ ಹೋಮಮಾಡಬೇಕೆಂದು ಆಶ್ವಲಾಯನ ಶ್ರೌತಸೂತ್ರದ ಏಕಾದಶ ಪ್ರಯಾಜಾ ಎಂಬ ಖಂಡದಲ್ಲಿ **ಸಮಿಧ್ವೋ ಅದ್ಯೇತಿ ಸರ್ವೇಷಾಂ ಯಥಋಷಿವಾ।** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೩-೨) ಇಲ್ಲಿ **ಯಥಋಷಿಃ** ಎಂಬ ಶಬ್ದಪ್ರಯೋಗದಿಂದ—ಆಪ್ರೀಸೂಕ್ತಗಳು ಮೂರು ವಿಧವಾಗಿರುವುವು. ಅವುಗಳಲ್ಲಿ ವಸಿಷ್ಠ, ಅತ್ರಿ ವಾಧ್ರ್ಯಶ್ವ, ಗೃತ್ಸಮದ ಎಂಬ ಋಷಿ ದೃಷ್ಟವಾದ ನಾಲ್ಕು ಆಪ್ರೀಸೂಕ್ತಗಳು ನರಾಶಂಸ (ನರಾಶಂಸ ಎಂಬ ದೇವತೆಯನ್ನೊಳಗೊಂಡ) ಸಂಬಂಧವಾದ ಸೂಕ್ತಗಳು. ಮೇಧಾತಿಥಿಃ ದೀರ್ಘತಮಸ್, ಎಂಬ ಋಷಿದೃಷ್ಟವಾದ ಆಪ್ರೀಸೂಕ್ತಗಳು ನರಾಶಂಸ ಮತ್ತು ತನೂನಪಾತ್ ಎಂಬ ಉಭಯದೇವತಾಕವಾದವು. ಉಳಿದ ಆಪ್ರೀಸೂಕ್ತಗಳು ತನೂನಪಾತ್ ಎಂಬ ದೇವತಾಕವು. ಆದುದರಿಂದ ಇಲ್ಲಿ ಪ್ರಸಕ್ತವಾಗಿರುವ ದೀರ್ಘತಮ ಎಂಬ ಋಷಿದೃಷ್ಟವಾದ ಈ ಸೂಕ್ತವು ನರಾಶಂಸ ಮತ್ತು ತನೂನಪಾತ್ ಎಂಬ ಉಭಯದೇವತಾಕವಾಗಿರುವುದು.



॥ ಓಂ ॥

## ಸೂಕ್ತ—೧೪೨

### ಆಪ್ರೀಸೂಕ್ತಂ

॥ ಮಂಡಲ—೧ ॥ ಅನುವಾಕ—೨೧ ॥ ಸೂಕ್ತ—೧೪೨ ॥

॥ ಅಷ್ಟಕ— ೨ ॥ ಅಧ್ಯಾಯ— ೨ ॥ ವರ್ಗ— ೧೦, ೧೧ ॥

ಸೂಕ್ತದಲ್ಲಿರುವ ಋಕ್ಸಂಖ್ಯೆ–೧೩॥

॥ ಋಷಿಃ—ದೀರ್ಘತಮಾ ಔಚಥ್ಯಃ ॥

॥ ದೇವತಾ—೧. ಸಮಿತ್ | ೨. ತನೂನಪಾತ್ । ೩. ನರಾಶಂಸಃ । ೪. ಇಳಃ । ೫. ಬರ್ಹಿಃ । ೬. ದೇವೀರ್ದ್ವಾರಃ । ೭. ಉಷಾಸಾನಕ್ತಾ । ೮. ದೈವ್ಯಾ, ಹೋತಾರಾ ಪ್ರಚೇತಸಾ । ೯. ತಿಸ್ರೋದೇವ್ಯಃ ಸರಸ್ವತೀಳಾಭಾರತ್ಯಃ । ೧೦. ತ್ವಷ್ಟಾ । ೧೧. ವನಸ್ಪತಿಃ । ೧೨. ಸ್ವಾಹಾಕೃತಯಃ । ೧೩. ಇಂದ್ರಃ ॥

॥ ಛಂದಃ—ಅನುಷ್ಟುಪ್ ॥

## ಆಪ್ರೀಸೂಕ್ತಗಳು

---

ಆಪ್ರೀಸೂಕ್ತಗಳ ವಿವರಣೆಯನ್ನು ನಾವು ಋಗ್ವೇದಸಂಹಿತಾ ಭಾಗ ೨ ಪೇಜುಗಳು 73-74 ಮತ್ತು 528ರಲ್ಲಿ ಕೊಟ್ಟಿದೇವೆ. ಋಗ್ವೇದದಲ್ಲಿ ಒಟ್ಟು ೧೦ ಆಪ್ರೀಸೂಕ್ತಗಳಿವೆ. ಇವುಗಳಲ್ಲಿ-ಇಧ್ಮಃ (ಸಮಿದ್ಧೋಗ್ನಿರ್ವಾ) ನರಾಶಂಸಃ, ತನೂನಪಾತ್, ಇಳಃ, ಬರ್ಹಿಃ, ದೇವೀರ್ದ್ವಾರಃ, ಉಷಾಸಾನಕ್ತಾ, ದೈವ್ಯಾ ಹೋತಾರಾ ಪ್ರಚೇತಸಾ, ತಿಸ್ರೋ ದೇವ್ಯಃ ಸರಸ್ವತೀಳಾಭಾರತ್ಯಃ, ತ್ವಷ್ಟಾ, ವನಸ್ಪತಿಃ, ಸ್ವಾಹಾಕೃತಯಃ ಎಂಬ ದೇವತಾಕವಾದ ಮಂತ್ರಗಳಿವೆ ಅವರೆ ನರಾಶಂಸಃ ಮತ್ತು ತನೂನಪಾತ್ ಎಂಬ ದೇವತೆಗಳ ವಿಷಯವಾಗಿ ಕೆಲವು ಸೂಕ್ತಗಳಲ್ಲಿ ನರಾಶಂಸಃ ಎಂಬ

ಒಂದೇ ದೇವತೆಯನ್ನೂ ಮತ್ತೆ ಕೆಲವು ಸೂಕ್ತಗಳಲ್ಲಿ ತನೂನಪಾತ್ ಎಂಬ ಒಂದೇ ದೇವತೆಯನ್ನೂ ಮತ್ತೆ ಕೆಲವು ಸೂಕ್ತ ಗಳಲ್ಲಿ ನರಾಶಂಸಃ ಮತ್ತು ತನೂನಪಾತ್ ಎಂಬ ಉಭಯದೇವತೆಗಳನ್ನೂ ಸ್ತುತಿಸಲಾಗಿದೆ. ಈ ಅರ್ಥಕ್ಕನುಸಾರವಾಗಿ ಈ ಆಪ್ರೀಸೂಕ್ತಗಳನ್ನು ಮೂರುವಿಧವಾಗಿ ವಿಂಗಡಿಸಿದ್ದಾರೆ. ಹೇಗೆಂದರೆ—ವಸಿಷ್ಠ, ಅತ್ರಿ, ವಾಧ್ರ್ಯಶ್ವ, ಗೃತ್ಸಮದ ಎಂಬ ಋಷಿಪ್ರಣೀತಗಳಾದ ಆಪ್ರಿಸೂಕ್ತಗಳು ಎಂದರೆ—

೧) **ಜುಷಸ್ವನಃ ಸಮಿಧಮಗ್ನೇ**—ಋ. ಸಂ. ೭-೨ (ಮೈತ್ರಾವರುಣಿರ್ವಸಿಷ್ಠಃ)

೨) **ಸುಸಮಿದ್ಧಾಯ ಶೋಚಿಷೇ**—ಋ. ಸಂ. ೫-೫ (ವಸುಶ್ರುತ ಆತ್ರೇಯಃ)

೩) **ಇಮಾಂ ಮೇ ಅಗ್ನೇ ಸಮಿಧಂ**—ಋ. ಸಂ ೧೦ ೭೦ (ಸುಮಿತ್ರೋ ವಾಧ್ರ್ಯಶ್ವಃ)

೪) **ಸಮಿದ್ಧೋ ಅಗ್ನಿರ್ನಿಹಿತಃ**—ಋ. ಸಂ. ೨-೩ (ಗೃತ್ಸಮದಃ)

ಎಂಬ ಈ ನಾಲ್ಕು ಸೂಕ್ತಗಳೂ ಒಂದು ಗುಂಪಿಗೆ ಸೇರಿದವು. ಇವುಗಳಲ್ಲಿ ನರಾಶಂಸಃ ಎಂಬ ದೇವತಾಕವಾದ ಒಂದೊಂದು ಋಕ್ಕುಗಳಿವೆ. ಆದುದರಿಂದ ಈ ನಾಲ್ಕು ಸೂಕ್ತಗಳಿಗೆ **ನರಾಶಂಸವಂತಿ ಸೂಕ್ತಾನಿ**—ನರಾಶಂಸ ದೇವತೆಯನ್ನು ಮಾತ್ರ ಸ್ತುತಿಸುವ ಆಪ್ರೀಸೂಕ್ತಗಳೆಂದು ಹೆಸರು.

೧) **ಸುಸಮಿದ್ಧೋನ ಆ ವಹ**—ಋ. ಸಂ. ೧-೧೩ ( ಮೇಧಾತಿಥಿಃ ಕಾಣ್ವಃ )

೨) **ಸಮಿದ್ಧೋ ಅಗ್ನ ಆ ವಹ**—ಋ. ಸಂ. ೧-೧೪೨ (ದೀರ್ಘತಮಾ ಔಚಥ್ಯಃ) ಎಂಬ ಈ ಎರಡು ಆಪ್ರೀಸೂಕ್ತಗಳು ಎರಡನೆಯ ಗುಂಪಿಗೆ ಸೇರಿದವು. ಇವುಗಳಲ್ಲಿ ನರಾಶಂಸ ಮತ್ತು ತನೂನಪಾತ್ ಎಂಬ ಉಭಯ ದೇವತೆಗಳ ಪರವಾಗಿ ಒಂದೊಂದು ಋಕ್ಕುಗಳಿವೆ. ಆದುದರಿಂದ ಈ ಆಪ್ರೀಸೂಕ್ತಗಳು ನರಾಶಂಸ ಮತ್ತು ತನೂನ ಪಾತ್ ಎಂಬ ಉಭಯವಿಧ ದೇವತಾಕವಾದ ಸೂಕ್ತಗಳೆಂದು ಪ್ರಸಿದ್ಧವಾಗಿವೆ. ಈ ಸೂಕ್ತಗಳಲ್ಲಿ ಉಭಯದೇವತೆಗಳೂ ಇರುವುದರಿಂದ (ಪ್ರಸಕ್ತವಾದ ಸೂಕ್ತದಲ್ಲಿ ಇಂದ್ರನನ್ನು ಬಿಟ್ಟು) ಹನ್ನೊಂದು ಪ್ರಯಾಜ ಹೋಮಗಳಿಗೆ ಬದಲಾಗಿ ಹನ್ನೆರಡು ಹೋಮಗಳಿದ್ದಂತಾಯಿತು.

(೧) **ಸಮಿದ್ಧೋ ಅದ್ಯ ರಾಜಸಿ**—ಋ ಸಂ ೧-೧೮೮ (ಅಗಸ್ತ್ಯೋ ಮೈತ್ರಾವರುಣಿಃ)

(೨) **ಸಮಿತ್ಸಮಿತ್ಸುಮನಾ**— ಋ. ಸಂ. ೩-೪ (ಗಾಧಿನೋ ವಿಶ್ವಾಮಿತ್ರಃ)

(೩) **ಸಮಿದ್ಧೋ ವಿಶ್ವತಸ್ಪತಿಃ**— ಋ ಸಂ. ೯-೫ (ಕಾಶ್ಯಪೋಽಸಿತೋ ದೇವಲೋ ವಾ)

(೪) **ಸಮಿದ್ಧೋ ಅದ್ಯ ಮನುಷೋ**— ಋ. ಸಂ. ೧೦-೧೧೦ (ಜಮದಗ್ನಿರ್ಭಾರ್ಗವಃ)

ಎಂಬ ಸೂಕ್ತಗಳು ಮೂರನೆಯ ಗುಂಪಿಗೆ ಸೇರಿದವು. ಇವುಗಳಲ್ಲಿ ತನೂನಪಾತ್ ಎಂಬ ದೇವತಾಕವಾದ ಋಕ್ಕು ಗಳು ಮಾತ್ರವಿರುವುವು (ನರಾಶಂಸಂದೇವತಾಕವಾದ ಋಕ್ಕುಗಳಿರುವುದಿಲ್ಲ.) ಆದುದರಿಂದ ಇವುಗಳಿಗೆ **ತನೂನ ಪಾತ್ವಂತಿ ಸೂಕ್ತಾನಿ** ಎಂದರೆ ತನೂನಪಾತ್ ಎಂಬ ದೇವತಾಕವಾದ ಮಂತ್ರವನ್ನೊಳಗೊಂಡ ಆಪ್ರೀಸೂಕ್ತಗಳೆಂದು ಹೆಸರು.

ಈ ಆಪ್ರೀಸೂಕ್ತಗಳನ್ನು ಪಶುಹೋಮಮಾಡುವಾಗ ಏಕಾದಶ (ಹನ್ನೊಂದು) ಪ್ರಯಾಜಹೋಮಗಳನ್ನು ಮಾಡುವುದಕ್ಕಾಗಿ ಪಠಿಸುವರು. **ಏಕಾದಶಾವದಾನಾನ್ಯವದ್ಯತಿ ದಶ ವೈ ಪಶೋಃ ಪ್ರಾಣಾ ಆತ್ಮೈಕಾದಶಃ** (ತೈ. ಸಂ. ೬-೩-೧೦-೩) ಎಂದು ತೈತ್ತಿರೀಯಸಂಹಿತಾ ವಾಕ್ಯವಿರುವುದು. ಈ ಆಪ್ರೀಸೂಕ್ತಗಳನ್ನು ಪಠಿಸಿ ಪಶು

ಹೋಮಮಾಡುವಾಗ ಒಂದು ವಿಶೇಷನಿಯಮವಿರುವುದು. ಆಯಾ ಗೋತ್ರೋತ್ಪನ್ನರಾದ ಯಜ್ಞಕರ್ತರು ಯಜ್ಞ ಮಾಡುವಾಗ ಆಯಾ ಋಷಿಪ್ರಣೀತವಾದ ಆಪ್ರೀಸೂಕ್ತಗಳನ್ನೇ ಪಠಿಸಬೇಕೆಂಬ ನಿಯಮವಿರುವುದು (ಅ. ೩-೨) ಪ್ರಕೃತವಾದ ಆಪ್ರೀಸೂಕ್ತವು ಅಂಗಿರಾಋಷಿಗೋತ್ರೋತ್ಪನ್ನರಾದವರು ಪಠಿಸಬೇಕಾಗಿರುವುದು.

ಆಪ್ರೀಸೂಕ್ತಗಳ ಸ್ವರೂಪ ಮತ್ತು ಕರ್ಮಾಚರಣೆಯಲ್ಲಿ ಅವುಗಳು ಹೊಂದಿರುವ ಸ್ಥಾನಗಳನ್ನು ತಿಳಿಯಬೇಕಾದರೆ ನಮಗಿರುವ ಆಧಾರಗಳು ಎರಡು ಬಗೆಯಾಗಿವೆ. ಒಂದನೆಯದು ? ಬ್ರಾಹ್ಮಣಾದಿ ಶ್ರುತಿವಾಕ್ಯಗಳು ; ಎರಡನೆಯದಾಗಿ ನಿರುಕ್ತಾದಿನಿರ್ವಚನವಾಕ್ಯಗಳು. ಈ ಎರಡು ಬಗೆಯ ಆಧಾರಗಳಲ್ಲಿ ನಿರುಕ್ತಾದಿನಿರ್ವಚನವಾಕ್ಯಗಳು ಹೆಚ್ಚು ಯುಕ್ತಿಯುಕ್ತವಾಗಿಯೂ ಶಾಸ್ತ್ರೀಯವಾದ ವಿವರಣೆಗಳಿಂದಲೂ ಕೂಡಿವೆ.

ಐತರೇಯಾದಿ ಬ್ರಾಹ್ಮಣಗಳಲ್ಲಿ ಉಕ್ತವಾಗಿರುವ ಆಪ್ರೀಪದದ ನಿಷ್ಪತ್ತಿಯನ್ನು ಗಮನಿಸಿದರೆ ಅವೆಲ್ಲವೂ ಯಜ್ಞಯಾಗಾದಿ ಕರ್ಮಾಚರಣೆಯ ದೃಷ್ಟಿಯಿಂದಲೇ ಈ ಪದವನ್ನು ಅರ್ಥಮಾಡಿಕೊಂಡು ವಿವರಿಸಿವೆಯೆಂದು ಹೇಳಬಹುದು. ಉದಾಹರಣೆಗೆ—

**ತದ್ಯದಾ ಪ್ರೀಣಾತಿ ತಸ್ಮಾದಾಪ್ರಿಯೋ ನಾಮ ।**

(ಕೌ. ಬ್ರಾ ೧೦-೩)

ತೃಪ್ತಿಪಡಿಸುವ ಸಾಧನವಾದ್ದರಿಂದ ಈ ಹೆಸರೆಂದು ಕೌಷೀತಕಿಬ್ರಾಹ್ಮಣದಲ್ಲೂ,

**ಆಪ್ರೀಭಿರಾಪ್ನುವನ್ । ತದಾಪ್ರೀಣಾಮಾಪ್ರಿತ್ವಂ ।**

(ತೈ. ಬ್ರಾ ೨-೨-೮-೬)

ಎಂದು ಮೇಲಿನ ಅಭಿಪ್ರಾಯವನ್ನೇ ಹೇಳಿ ತೈತ್ತಿರೀಯಬ್ರಾಹ್ಮಣದಲ್ಲೂ,

**ಯದೇತಾನ್ಯಾಪ್ರಿಯ ಆಜ್ಯಾನಿ ಭವಂತಿ । ಆತ್ಮಾನಮೇವೇತೈರಾಪ್ರೀಣಾತಿ ।**

(ತಾ ಬ್ರಾ ೧೫-೮-೨)

ಎಂದು ತಾಂಡ್ಯಬ್ರಾಹ್ಮಣದಲ್ಲೂ **ಆಪ್ರೀ** ಎಂಬ ಪದದ ಸ್ವರೂಪವನ್ನು ತಿಳಿಸಿದೆ.

ಐತರೇಯಬ್ರಾಹ್ಮಣದಲ್ಲಿ ಅಗ್ನಿಷ್ಟೋಮಯಾಗಕಾಲದಲ್ಲಿ ಹೋತೃವು ಆಚರಿಸಬೇಕಾದ ಕರ್ತವ್ಯಗಳನ್ನು ನಿರ್ದೇಶಿಸುವಾಗ **ಆಪ್ರಿ**ಗಳ ವಿವರಣೆಯನ್ನು ಹೇಳಿದೆ. **ಅಗ್ನಿ**ಯನ್ನೂ **ಸೋಮ**ನನ್ನೂ ಉದ್ದೇಶಿಸಿ ಯಾಗಮಾಡಬೇಕಾದ ಪಶುವಿನ ವರ್ಣನೆಯಾದಮೇಲೆ (೨-೩) ಹನ್ನೊಂದು 'ಪ್ರಯಾಜಮಂತ್ರಗಳು ಉಕ್ತವಾಗಿವೆ. ( ೨-೪ ) ಆ ಸಂದರ್ಭದಲ್ಲಿ,

**ಆಪ್ರೀಭಿರಾಪ್ರೀಣಾತಿ । ತೇಜೋ ವೈ ಬ್ರಹ್ಮವರ್ಚಸಮಾಪ್ರಿಯಸ್ತೇಜಸೈವೈನಂ ತದ್ಬ್ರಹ್ಮವರ್ಚಸೇನ ಸಮರ್ಧಯತಿ ।**

(ಐ. ಬ್ರಾ. ೨-೪)

ಆಪ್ರೀಸೂಕ್ತಗಳು ತೇಜೋಮಯವಾದವೂ ಬ್ರಹ್ಮವರ್ಚಸ್ಸಿನಿಂದ ಕೂಡಿದವೂ ಆಗಿವೆ. ಅಂತಹ ಸೂಕ್ತಗಳಿಂದ (ಹೋತೃವು) ತೃಪ್ತಿಕಾರಣನಾಗುತ್ತಾನೆ ಎಂದು ಇಲ್ಲಿಯೂ ಆತ್ಮತೃಪ್ತಿಗೆ ಸಾಧನವಾಗಿರುವುದನ್ನು ತಿಳಿಸಿದೆ. ಅನಂತರ

**ಸಮಿಧ್, ತನೂನಪಾತ್** ಇತ್ಯಾದಿ ದೇವತೆಗಳನ್ನು **ಪ್ರಾಣಾದಿತತ್ತ್ವ**ಗಳೊಡನೆ ತಾದಾತ್ಮ್ಯವನ್ನು ಹೊಂದಿರುವುದಾಗಿ ತಿಳಿಸಿದೆ.

ಋಕ್ಸಂಹಿತೆಯ ಬೇರೆ ಬೇರೆ ಮಂಡಲಗಳಲ್ಲಿ ಉಕ್ತವಾಗಿರುವ ಈ ಸೂಕ್ತಗಳನ್ನೂ ಇವುಗಳ ಫಲವನ್ನೂ ಹೇಳುತ್ತಾ ಇವುಗಳನ್ನು ಪಠಿಸಿರುವ ಋಷಿಗಳ ವಿಷಯವನ್ನೂ ಐತರೇಯಬ್ರಾಹ್ಮಣದಲ್ಲೇ ಎಲ್ಲಕ್ಕಿಂತ ಮೊದಲು ಹೇಳಿದೆ.

**ತಾಭಿರ್ಯಥಋಷ್ಯಾಪ್ರೀಣೀಯಾದ್ಯದ್ಯಥಋಷ್ಯಾ ಪ್ರೀಣಾತಿ ಯಜಮಾನಮೇವ ತದ್ಬಂಧುತಾಯಾ ನೋತ್ಸೃಜತಿ ।**

(ಐ. ಬ್ರಾ. ೨-೪)

ಋಷಿಪ್ರಣೀತವಾದ ಈ ಋಕ್ಕುಗಳ ಪಠನದಿಂದ ಯಜಮಾನನ್ನು ಯಜ್ಞಸಂಬಂಧದಿಂದ ಬಿಡಿಸದೇ ಕಾಪಾಡುತ್ತಾನೆಂದು ಈ ಋಕ್ಕುಗಳನ್ನು ಪಠಿಸುವುದರ ಫಲವನ್ನು ತಿಳಿಸಿದೆ. ಈ ಸೂಕ್ತಗಳು ಒಂದೇ ಋಷಿಯಿಂದ ದೃಷ್ಟವಾದವಲ್ಲ. ಬೇರೆ ಬೇರೆ ಋಷಿಗಳು ಈ ಸೂಕ್ತಗಳನ್ನು ತಮ್ಮ ತಮ್ಮ ವೈಯಕ್ತಿಕವಾದ ಸನ್ನಿವೇಶಗಳಲ್ಲಿ ದರ್ಶನಮಾಡಿದರು. ಆದರೂ ಸಹ ಈ ಸೂಕ್ತಗಳ ಸ್ವರೂಪವೂ, ಇವುಗಳ ಪಠನದ ಫಲವೂ ಎಲ್ಲದರಲ್ಲಿಯೂ ಒಂದೇ ವಿಧವಾಗಿ ಕಾಣುತ್ತದೆ.

ಈ ಆಪ್ರೀಸೂಕ್ತಗಳ ವಿಷಯದಲ್ಲೂ ಈ ಸೂಕ್ತಗಳ ದೇವತೆಗಳ ವಿಷಯದಲ್ಲೂ **ಬ್ರಾಹ್ಮಣಾದಿ** ಪ್ರಾಚೀನ ಕಾಲದಿಂದಲೇ ವಿಪ್ರತಿಪತ್ತಿಯಿದೆಯೆಂದು ನಿರುಕ್ತಕಾರರ ವಿವರಣೆಯಿಂದ ತಿಳಿಯುತ್ತದೆ.

**ಅಥಾತ ಆಪ್ರಿಯಃ । ಆಪ್ರಿಯಃ ಕಸ್ಮಾದಾಪ್ನೋತೇಃ ಪ್ರೀಣಾತೇರ್ವಾ । ಆಪ್ರೀಭಿರಾಪ್ರೀಣಾತೀತಿ ಚ ಬ್ರಾಹ್ಮಣಂ ।**

(ನಿ. ೮-೪)

ಎಂದು ನಿರುಕ್ತಕಾರರು ಆಪ್ರೀಸೂಕ್ತಗಳ ವಿಷಯದಲ್ಲಿ ತಮ್ಮ ಅಭಿಪ್ರಾಯಕ್ಕಿಂತ ಬ್ರಾಹ್ಮಣಾದಿಗಳ ಅಭಿಪ್ರಾಯವು ಬೇರೆಯೆಂದು ತೋರಿಸಿದ್ದಾರೆ. ಅಲ್ಲದೇ, **ಕಾತ್ಥಕ್ಯ, ಶಾಕಪೂಣಿ, ಮಾಧ್ಯಮಿಕ** ಇತ್ಯಾದಿ ಋಷಿಗಳ ಅಭಿಪ್ರಾಯಗಳನ್ನು ಆಗಾಗ್ಗೆ ಉದಹರಿಸಿದ್ದಾರೆ. ಕಾತ್ಥಕ್ಯಾದಿಗಳು ಯಾಜ್ಞಿಕರೇ ಆದರೂ ಸಹ ಅವರು ಬ್ರಾಹ್ಮಣಾದಿಗಳಲ್ಲಿ ಹೇಳಿರತಕ್ಕ ನಿರ್ವಚನಗಳನ್ನು ಅನೇಕ ಸಂದರ್ಭಗಳಲ್ಲಿ ಒಪ್ಪುವುದಿಲ್ಲನೆಂಬುದನ್ನು ಆಯಾ ಋಕ್ಕಿನ ವಿಶೇಷವಿಷಯಗಳಲ್ಲಿ ತಿಳಿಸಿದೆ. ಈ ಎಲ್ಲಾ ಅಭಿಪ್ರಾಯಗಳನ್ನೂ ತಿಳಿಸಿ ಯಾಸ್ಕರು ಕೊನೆಗೆ ತಮ್ಮ ಖಚಿತವಾದ ಅಭಿಪ್ರಾಯವನ್ನು ತಿಳಿಸಿದ್ದಾರೆ. ಉದಾಹರಣೆಗೆ ಆಪ್ರೀದೇವತೆಗಳ ವಿಚಾರವಾಗಿ ಬ್ರಾಹ್ಮಣಾದಿಗಳಲ್ಲಿ ಹೇಳಿರುವ ಅಭಿಪ್ರಾಯಗಳು ಹೀಗಿವೆಯೆಂದು ಮೊದಲು ಅವನ್ನೆಲ್ಲಾ ಸಂಗ್ರಹಿಸಿದ್ದಾರೆ.

**ಇತೀಮಾ ಆಪ್ರೀದೇವತಾ ಅನುಕ್ರಾಂತಾಃ । ಅಥ ಕಿಂ ದೇವತಾಃ ಪ್ರಯಾಜಾನುಯಾಜಾಃ ? ಆಗ್ನೇಯಾ ಇತ್ಯೇಕೇ। ಆಗ್ನೇಯಾ ವೈ ಪ್ರಯಾಜಾ ಆಗ್ನೇಯಾ ಅನುಯಾಜಾ ಇತಿ ಚ ಬ್ರಾಹ್ಮಣಂ। ಛಂದೋದೇವತಾ ಇತ್ಯಪರಂ। ಛಂದಾಂಸಿ ವೈ ಪ್ರಯಾಜಾಶ್ಛಂದಾಂಸ್ಯನುಯಾಜಾ ಇತಿ ಚ ಬ್ರಾಹ್ಮಣಂ । ಋತುದೇವತಾ ಇತ್ಯಪರಂ। ಋತವೋ ವೈ ಪ್ರಯಾಜಾ ಋತವೋಽನುಯಾಜಾ ಇತಿ ಚ ಬ್ರಾಹ್ಮಣಂ । ಪಶುದೇವತಾ ಇತ್ಯಪರಂ । ಪಶವೋ ವೈ ಪ್ರಯಾಜಾಃ ಪಶವೋಽನುಯಾಜಾ ಇತಿ ಚ ಬ್ರಾಹ್ಮಣಂ । ಪ್ರಾಣದೇವತಾ ಇತ್ಯಪರಂ । ಪ್ರಾಣಾ ವೈ ಪ್ರಯಾಜಾಃ**

ಪ್ರಾಣಾ ವಾ ಅನುಯಾಜಾಃ ಇತಿ ಚ ಬ್ರಾಹ್ಮಣಂ। ಆತ್ಮದೇವತಾ ಇತ್ಯಪರಂ। ಆತ್ಮಾ ವೈ ಪ್ರಯಾಜಾಃ ಆತ್ಮಾ ವಾ ಅನುಯಾಜಾ ಇತಿ ಚ ಬ್ರಾಹ್ಮಣಂ। ಆಗ್ನೇಯಾ ಇತಿ ತು ಸ್ಥಿತಿಃ। ಭಕ್ತಿಮಾತ್ರಮಿತರಂ।

(ನಿ. ೮-೨೨)

ಎಂದು ಆಯಾಮತವನ್ನು ಹೇಳುತ್ತಾ ಮೊದಲು,

ತವ ಪ್ರಯಾಜಾ ಅನುಯಾಜಾಶ್ಚ ಕೇವಲ ಊರ್ಜಸ್ವಂತೋ ಹವಿಷಃ ಸಂತು ಭಾಗಾಃ।
ತವಾಗ್ನೇ ಯಜ್ಞೋಽಯಮಸ್ತು ಸರ್ವಸ್ತುಭ್ಯಂ ನಮಂತಾಂ ಪ್ರದಿಶಶ್ಚತಸ್ರಃ।

(ಋ. ಸಂ. ೧೦--೫೧-೯)

ಎಂಬ ಋಕ್ಕನ್ನುದಹರಿಸಿ ಇದರಲ್ಲಿ ಹೇಳಿರುವಂತೆ ಪ್ರಯಾಜ ಮತ್ತು ಅನುಯಾಜ ಮಂತ್ರಗಳು ಅಗ್ನಿಯನ್ನೇ ಉದ್ದೇಶಿಸಿವೆ. ಎಂದು ತಾವು ತಮ್ಮ ವಿವರಣೆಯನ್ನು ಕೊಟ್ಟು ಅನಂತರ ಇತರ ಅಭಿಪ್ರಾಯಗಳನ್ನೂ ಹೇಳಿದ್ದಾರೆ. ಆದರಲ್ಲಿ ಬ್ರಾಹ್ಮಣ ವಾಕ್ಯದಿಂದ ಇದೇ ಅಭಿಪ್ರಾಯವು ಸಮರ್ಥಿತವಾಗುತ್ತದೆ. ಆದರೆ ಕೆಲವರು **ಛಂದೋದೇವತೆ**ಯನ್ನುದ್ದೇಶಿಸಿದೆಯೆಂದೂ (ಶ. ಬ್ರಾ. ೧-೩-೨-೯), ಇನ್ನು ಕೆಲವರು **ಋತ್ವಾತ್ಮಕ**ವಾದ ದೇವತೆಗಳನ್ನುದ್ದೇಶಿಸಿದೆಯೆಂದೂ (ಶ. ಬ್ರಾ ೧-೩-೨-೮), ಇತರರು **ಯಾಗಪಶು**ವನ್ನುದ್ದೇಶಿಸಿದೆಯೆಂದೂ (ಕೌ. ಬ್ರಾ ೩-೪) ಕೆಲವರು **ಪ್ರಾಣಾತ್ಮಕ**ವಾದ ದೇವತೆಯನ್ನುದ್ದೇಶಿಸಿದೆಯೆಂದೂ (ಐ. ಬ್ರಾ. ೧-೧೧, ಶ. ಬ್ರಾ. ೧೧-೨-೭-೨೭,) ಮತ್ತು ಇನ್ನೂ ಕೆಲವರು **ಆತ್ಮ**ನನ್ನೇ ಉದ್ದೇಶಿಸಿದೆಯೆಂದೂ (ತೈ. ಸಂ. ೬-೧-೫-೪) ಹೇಳಿರುವುದನ್ನೆಲ್ಲಾ ಸಂಗ್ರಹಿಸಿ ಹೇಳಿ ಅನಂತರ ಅಗ್ನಿಯನ್ನುದ್ದೇಶಿಸಿದೆಯೆಂದು ಹೇಳುವುದೇ ಸಾಧುವಾದ ಮತವೆಂದು ತಮ್ಮ ಉಚಿತವಾದ ಅಭಿಪ್ರಾಯವನ್ನು ಹೇಳಿದ್ದಾರೆ.

**ಕಾತ್ಯಾಯನರ ಸರ್ವಾನುಕ್ರಮಣಿ**ಯಲ್ಲಿ **ಆಪ್ರ** ಮತ್ತು **ಆಪ್ರೀ** ಎಂಬ ವ್ಯತ್ಯಾಸವನ್ನು ತಿಳಿಸಿ (ಈ ವ್ಯತ್ಯಾಸವನ್ನು ಆಪ್ರೀಸೂಕ್ತದ ಎಂದರೆ ೧-೧೪೨ ನೇ ಸೂಕ್ತದ ಕೊನೆಯಲ್ಲಿ ತಿಳಿಸಲಾಗುತ್ತದೆ.) **ನರಾಶಂಸ** ದೇವತೆಯನ್ನು ಉದ್ದೇಶಿಸಿರುವ ಋಕ್ಕುಗಳಿಗೆ **ಆಪ್ರ** ಮಂತ್ರಗಳೆಂದೂ, ಮತ್ತು **ತನೂನಪಾತ್** ಎಂಬ ದೇವತೆಯನ್ನು ಉದ್ದೇಶಿಸಿರುವ ಋಕ್ಕುಗಳಿಗೆ **ಆಪ್ರೀ** ಮಂತ್ರಗಳೆಂದೂ ಪ್ರಸಿದ್ಧಿಯಿದೆಯೆಂದು ತೋರಿಸಿದ್ದಾರೆ.

**ಬೃಹದ್ದೇವತೆ**ಯಲ್ಲಿ,

ದ್ವಿತೀಯೇ ದ್ವಾದಶರ್ಚೇ ತು ಪ್ರತ್ಯೃಚಂ ಯಾಸ್ತು ದೇವತಾಃ।
ಸ್ತೂಯಂತೇ ಹ್ಯಗ್ನಿನಾ ಸಾರ್ಧಂ ತಾಸಾಂ ನಾಮಾನಿ ಮೇ ಶೃಣು॥
ಪ್ರಥಮಾಯಾಂ ಸ್ತುತಶ್ಚೇಧ್ಮೋ ದ್ವಿತೀಯಾಂ ತನೂನಪಾತ್।
ನರಾಶಂಸಸ್ತ್ರಿತೀಯಾಯಾಂ ಚತುರ್ಥ್ಯಾಂ ಸ್ತೂಯತೇ ತ್ವಿಳಃ॥
ಬರ್ಹಿರೇವ ತು ಪಂಚಮ್ಯಾಂ ದ್ವಾರೋ ದೇವ್ಯಸ್ತತೋಽನ್ಯಯಾ॥
ನಕ್ತೋಷಾಸಾ ತು ಸಪ್ತಮ್ಯಾಮಷ್ಟಮ್ಯಾಂ ಸಂಸ್ತುತೌ ಸಹ।
ದೇವ್ಯಾವಿತಿ ತು ಹೋತಾರೌ ನವಮ್ಯಾಮೃಚಿ ಸಂಸ್ತುತಾಃ॥
ತಿಸ್ರೋ ದೇವ್ಯೋ ದಶಮ್ಯಾಂ ತು ಜ್ಞೇಯಸ್ತ್ವಷ್ಟೈವ ತು ಸ್ತುತಃ।

ಏಕಾದಶ್ಯಾಂ ತು ಸೂಕ್ತಸ್ಯ ಸ್ತುತಂ ವಿದ್ಯಾದ್ವನಸ್ಪತಿಂ ॥
ದ್ವಾದಶ್ಯಾಂ ತು ಸ್ತುತಾ ದೇವೀರ್ವಿದ್ಯಾತ್ಸ್ವಾಹಾಕೃತೀರಿತಿ ।
ಸೂಕ್ತೇಽಸ್ಮಿನ್ಪ್ರತ್ಯೃಚಂ ಯಾಸ್ತು ದೇವತಾಃ ಪರಿಕೀರ್ತಿತಾಃ ॥
ತಾ ಏವ ಸರ್ವಾಸ್ವಾಪ್ರೀಷು ದ್ವಿತೀಯಾ ತು ವಿಕಲ್ಪತೇ ।

(ಬೃ. ದೇ. ೨-೧೪೬ ರಿಂದ ೧೫೧)

ಎಂದು ಇಧ್ಮಾದಿ ಎಲ್ಲಾ ದೇವತೆಗಳ ಹೆಸರನ್ನೂ ನಿರ್ದೇಶಿಸಿ ಸೂಕ್ತದ ಕ್ರಮವನ್ನೂ ಅಲ್ಲಿ ಒಂದೊಂದು ಋಕ್ಕುಗಳಲ್ಲೂ ಪ್ರತ್ಯೇಕವಾದ ದೇವತೆಯನ್ನುದ್ದೇಶಿಸಿರುವುದನ್ನೂ ತಿಳಿಸಿದ್ದಾರೆ.

ಆಪ್ರೀಸೂಕ್ತಗಳೆಷ್ಟು ಎಂಬ ವಿಷಯದಲ್ಲಿ ಹೇಳುತ್ತಾ ನಿರುಕ್ತಕಾರರು,

ಇತೀಮಾನ್ಯೇಕಾದಶಾಪ್ರೀಸೂಕ್ತಾನಿ । ತೇಷಾಂ ವಾಸಿಷ್ಠಮಾತ್ರೇಯಂ ವಾಧ್ರ್ಯಶ್ವಂ ಗಾರ್ತ್ಸ-ಮದಮಿತಿ ನಾರಾಶಂಸವಂತಿ ; ಮೈಧಾತಿಥಂ ದೈರ್ಘತಮಸಂ ಪ್ರೈಷಿಕಮಿತ್ಯುಭಯವಂತ್ಯ-ತೋಽನ್ಯಾನಿ ತನೂನಪಾತ್ವಂತಿ ತನೂನಪಾತ್ವಂತಿ ।

(ನಿ. ೮-೨೨)

ಈ ಸೂಕ್ತಗಳಲ್ಲಿ **ವಸಿಷ್ಠ, ಅತ್ರಿ, ವಧ್ರ್ಯಶ್ವ** ಮತ್ತು **ಗೃತ್ಸಮದ** ಇವರಿಂದ ದೃಷ್ಟವಾದ ಸ್ತುತಿಗಳು ನರಾಶಂಸಪರವಾದವು. **ಮೇಧಾತಿಥಿ** ಮತ್ತು **ದೀರ್ಘತಮಸ್** ಈ ಋಷಿಗಳಿಂದ ದೃಷ್ಟವಾದವೂ ಮತ್ತು ಪ್ರೈಷಸೂಕ್ತವೂ ಸಹ **ತನೂನಪಾತ್** ಮತ್ತು **ನರಾಶಂಸ** ಎಂಬ ಎರಡು ದೇವತೆಗಳನ್ನೂ ಉದ್ದೇಶಿಸಿದವು. ಉಳಿದ ನಾಲ್ಕು ಸೂಕ್ತಗಳೂ ಕೇವಲ **ತನೂನಪಾತ್** ಎಂಬ ದೇವತಾಪರವಾದವು. ಒಟ್ಟಿನಲ್ಲಿ (ಪ್ರೈಷಸೂಕ್ತವನ್ನೂ ಸೇರಿಸಿದರೆ) ಹನ್ನೊಂದು ಆಪ್ರೀಸೂಕ್ತಗಳು. ಇದೇ ಅಭಿಪ್ರಾಯವನ್ನು ಬೃಹದ್ದೇವತೆಯಲ್ಲಿಯೂ,

ಪ್ರೈಷೈಃ ಸಹಾಪ್ರೀಸೂಕ್ತಾನಿ ತಾನ್ಯೇಕಾದಶ ಸಂತಿ ಚ ।
ಯಜೂಂಷಿ ಪ್ರೈಷಸೂಕ್ತಂ ವಾ ದಶೈತಾನೀತರಾಣಿ ತು ॥
ಸೌತ್ರಾಮಣ್ಯಾನಿ ತು ತ್ರೀಣಿ ಪ್ರಾಜಾಪತ್ಯಾಶ್ವಮೇಧಿಕೇ ।
ಪುರುಷಸ್ಯ ತು ಯನ್ಮೇಧೇ ಯಜುಃಷ್ವೇವ ತು ತಾನಿ ಷಟ್ ॥
ಅತ್ರೈವ ಪ್ರೈಷಸೂಕ್ತಂ ಸ್ಯಾನ್ನ ಯಜುಃಷ್ವಾದ್ರಿಯೇತ ತತ್ ।
ತೇಷಾಂ ಪ್ರೈಷಗತಂ ಸೂಕ್ತಂ ಯಚ್ಚ ದೀರ್ಘತಮಾ ಜಗೌ ॥
ಮೇಧಾತಿಥೌ ಯದುಕ್ತಂ ಚ ತ್ರೀಣ್ಯೇವೋಭಯವಂತಿ ತು ।
ಋಷೌ ಗೃತ್ಸಮದೇ ಯಚ್ಚ ವಾಧ್ರ್ಯಶ್ವೇ ಚ ಯದುಚ್ಯತೇ ॥
ನರಾಶಂಸವದತ್ರೇಶ್ಚ ದದರ್ಶ ಚ ಯದೌರ್ವಶಃ ।
ತನೂನಪಾದಗಸ್ತ್ಯಶ್ಚ ಜಮದಗ್ನಿಶ್ಚ ಯಜ್ಜಗೌ ॥
ವಿಶ್ವಾಮಿತ್ರ ಋಷಿರ್ಯಚ್ಚ ಜಗೌ ವೈ ಕಾಶ್ಯಪೋಽಸಿತಃ ।
ಮೇಧಾತಿಥೇರ್ಋಚಾಂ ಯಾಸ್ತು ಪ್ರೋಕ್ತಾ ದ್ವಾದಶ ದೇವತಾಃ ॥
ಸಂಪದ್ಯಂತೇ ಯಥಾಗ್ನಿಂ ತಾಃ ಸಂಪದಂ ತಾಂ ನಿಬೋಧತ ।

(ಬೃ. ದೇ ೨-೧೫೨ ರಿಂದ ೧೫೮)

ಎಂಬ ವಾಕ್ಯಗಳಲ್ಲಿ ಪ್ರೈಷಸೂಕ್ತವನ್ನು ಸೇರಿಸಿದರೆ ಒಟ್ಟು ಹನ್ನೊಂದು ಆಪ್ರೀಸೂಕ್ತಗಳೆಂದೂ ಇಲ್ಲದಿದ್ದರೆ ಹತ್ತು ಸೂಕ್ತಗಳೆಂದೂ ಹೇಳಿದೆ. ಮತ್ತು ನಿರುಕ್ತವಾಕ್ಯವನ್ನೇ ಅನುಸರಿಸಿ **ನರಾಶಂಸ, ತನೂನಪಾತ್** ಇತ್ಯಾದಿ ದೇವತೆಗಳನ್ನು ದ್ಯೋತಿಸಿದವೂ ಮತ್ತು ಮೇಧಾತಿಥ್ಯಾದಿ ಋಷಿಗಳಿಂದ ಪ್ರಣೀತವಾದವೂ ಆದ ಸೂಕ್ತಗಳ ಕ್ರಮವನ್ನು ಕೊಟ್ಟಿದೆ.

ಪ್ರೈಷಸೂಕ್ತವು ಕ್ರಮಬದ್ಧವಾಗಿಯೂ, ಎಲ್ಲಾ ಆಪ್ರೀಸೂಕ್ತಗಳ ಸಾರಾಂಶವನ್ನೂ ಒಟ್ಟಿಗೆ ಶೇಖರಿಸಿ ಒಂದು ನಿರ್ದಿಷ್ಟವಾದ ಚಿತ್ರವನ್ನು ಕೊಡತಕ್ಕದ್ದಾಗಿಯೂ ಇದೆ. ಆಪ್ರೀ ಸೂಕ್ತಗಳಲ್ಲಿ ಉದ್ದೇಶಿಸಿರುವ ದೇವತೆಗಳ ವೈಯಕ್ತಿಕವಾದ ವಿಶೇಷಣಗಳನ್ನೆಲ್ಲಾ ಒಟ್ಟಿಗೆ ಸೇರಿಸಿ ಆಯಾ ದೇವತೆಗಳ ಸ್ವರೂಪವನ್ನೂ ಕರ್ತವ್ಯವನ್ನೂ ವಿಭಾಗಿಸಿ ತಿಳಿಸುತ್ತದೆ. ಪ್ರತಿಯೊಂದು ದೇವತೆಯನ್ನು ಉದ್ದೇಶಿಸುವಾಗಲೂ ಸಹ ಮೊದಲು **ಹೋತಾ ಯಕ್ಷತ್ ।** ಎಂಬ ಒಂದು ನಿಯತವಾದ ಮಂತ್ರಭಾಗವನ್ನುಚ್ಚರಿಸಿ ಅನಂತರ ಆಯಾ ದೇವತೆಗಳನ್ನು ನಿರ್ದೇಶಿಸಿದೆ. ಮೊದಲು ಪ್ರೈಷ ಸೂಕ್ತದಲ್ಲಿ ವಿವರಿಸಿರುವ **ದೇವತಾ,** ದೇವತೆಯ ವಿಶೇಷಣ, ಮತ್ತು ಕರ್ತವ್ಯ ಇವುಗಳನ್ನು ಪರಿಶೀಲಿಸಿ ಅನಂತರ ಇಂತಹ ದೇವತಾತ್ಮಕವಾದ ಆಪ್ರೀ ಸೂಕ್ತಗಳ ಉದ್ದಿಶ್ಯವೇನು, ಅವುಗಳ ಲಕ್ಷಣಗಳೇನು, ಅವುಗಳ ಪಠನೆಗಳಿಂದ ಆಗತಕ್ಕ ಲಾಭವೇನು ಎಂಬ ವಿಷಯದಲ್ಲಿರುವ ಅಭಿಪ್ರಾಯಗಳ ಸಾಮರಸ್ಯವನ್ನೂ ಅಥವಾ ಭಿನ್ನಾಭಿಪ್ರಾಯಗಳನ್ನೂ ತಿಳಿಯಬಹುದು.

| ಸಂಖ್ಯೆ | ದೇವತಾ | ವಿಶೇಷಣಗಳು |
|---|---|---|
| ೧. | **ಅಗ್ನಿಃ (ಸಮಿತ್)** | ಸಮಿಧಾ, ಸುಸಮಿಧಾ, ಸಮಿದ್ಧಃ |
| ೨. | **ಅಗ್ನಿಃ (ತನೂನಪಾತ್)** | ಅದಿತೇಃ ಗರ್ಭಂ ಭುವನಸ್ಯ ಗೋಪಾಂ |
| ೩. | **ಅಗ್ನಿಃ (ನರಾಶಂಸಃ)** | ನೃಶಸ್ತ್ರಂ ನೃಃ ಪ್ರಣೇತ್ರಂ |
| ೪. | **ಅಗ್ನಿಃ (ಇಳಃ)** | ಈಳಿತೋ ದೇವಃ, ಹವ್ಯವಾಟ್, ಅಮೂರಃ |
| ೫. | **ಬರ್ಹಿಃ** | ಸುಷ್ಟರೀಮ, ಊರ್ಣಮ್ರದ, ದೇವೇಭ್ಯಃ, ಸ್ವಾಸಸ್ಥಂ |
| ೬. | **ದೇವೀರ್ದ್ವಾರಃ** | ಋಷ್ವಾಃ, ಕವಷ್ಯಃ, ಕೋಷಧಾವನೀಃ |
| ೭. | **ಉಷಾಸಾನಕ್ತಾ** | ಬೃಹತೀ, ಸುಪೇಶಸಾ ಪತಿಭ್ಯಃ ಯೋನಿಂ ಕೃಣ್ವಾನೇ ಸಂಸ್ಮಯಮಾನೇ |
| ೮. | **ದೈವ್ಯಾ ಹೋತಾರಾ** | ಮಂದ್ರಾ, ಪೋತಾರಾ, ಕವೀ, ಪ್ರಚೇತಸಾ |
| ೯. | **ತಿಸ್ರೋ ದೇವೀಃ** | ಅಪಸಾಂ ಅಪಸ್ತಮಾಃ ದೇವೀಃ |
| ೧೦. | **ತ್ವಷ್ಟಾ** | ಅಚಿಷ್ಟಃ, ಅಪಾಕಃ, ರೇತೋಧಾಃ, ವಿಶ್ರವಸ್, ಯಶೋಧಾಃ, ಪುರುರೂಪಃ, ಅಕಾಮಕರ್ಶನ |
| ೧೧. | **ವನಸ್ಪತಿಃ** | ಧಿಯೋ ಜ್ಯೇಷ್ಠಾ, ಸ್ವದಾನ್ ಸ್ವಧಿತಿಃ, ದೇವೇಭ್ಯಃ ಋತುಥಾ ಹವ್ಯವಾಟ್, ಯಜ್ಞಸ್ಯ, ಆಯುಃ ಕಲ್ಪಮಾನಃ |
| ೧೨. | **ಅಗ್ನಿಃ (ಸ್ವಾಹಾ)** | ಆಜ್ಯಸ್ಯ ಮೇದಸಃ ಸ್ವಾಹಾ |

ಈ ರೀತಿಯಲ್ಲಿ ಪ್ರೈಷಸೂಕ್ತವು ಸಕಲವಾದ ಆಪ್ರೀಸೂಕ್ತಗಳ ಮುಖ್ಯಾಂಶಗಳನ್ನು ಸಂಗ್ರಹಿಸಿ ಒಂದು ಕ್ರಮಬದ್ಧವಾದ ಚಿತ್ರವನ್ನು ಕೊಟ್ಟಿದೆ. ಈ ಆಪ್ರೀಸೂಕ್ತಗಳ ರಚನಾಕ್ರಮಗಳನ್ನೂ ಅವುಗಳ ಶೈಲಿಗಳನ್ನೂ ಮತ್ತು ಯಜ್ಞಕಾರ್ಯದಲ್ಲಿ

ಅವುಗಳ ಪ್ರಯೋಜನಗಳೇ ಅಲ್ಲದೇ ಅವುಗಳ ಕಾವ್ಯಾತ್ಮಕವಾದ ಸ್ವರೂಪವನ್ನೂ ಅವುಗಳ ವಿಷಯದಲ್ಲಿ ಆಧುನಿಕ ಪಂಡಿತರು ಹೇಳಿರುವ ಅಭಿಪ್ರಾಯಗಳನ್ನೂ ಸಹ ಈ ಸೂಕ್ತದ (೧-೧೪೨) ವಿವರಣೆಯಾದನಂತರ ಸೂಕ್ತದ ಕೊನೆಯಲ್ಲಿ ಹೇಳಲಾಗುತ್ತದೆ.

———— :C: ————

ಸಂಹಿತಾಪಾಠಃ

**ಸಮಿದ್ಧೋ ಅಗ್ನ ಆ ವಹ ದೇವಾँ ಅದ್ಯ ಯತಸ್ರುಚೇ ।**

**ತಂತುಂ ತನುಷ್ವ ಪೂರ್ವ್ಯಂ ಸುತಸೋಮಾಯ ದಾಶುಷೇ ॥ ೧ ॥**

। ಪದಪಾಠಃ ।

ಸಂಽಇದ್ಧಃ । ಅಗ್ನೇ । ಆ । ವಹ । ದೇವಾನ್ । ಅದ್ಯ । ಯತಽಸ್ರುಚೇ ।

ತಂತುಂ । ತನುಷ್ವ । ಪೂರ್ವ್ಯಂ । ಸುತಽಸೋಮಾಯ । ದಾಶುಷೇ ॥ ೧ ॥

ಸಾಯಣಭಾಷ್ಯಂ

ಹೇ ಅಗ್ನೇ ಸಮಿದ್ಧಃ ಸಮ್ಯಗ್ದೀಪಿತ ಏತನ್ನಾಮಕಸ್ತ್ವಮದ್ಯಾಸ್ಮಿನ್ಯಾಗದಿನೇ ದೇವಾನ್ ಹವಿಷಾಂ ಭೋಕ್ತ್ರೀನಗ್ನ್ಯಾದೀನಾ ವಹ। ಅಸ್ಮದ್ಯಜ್ಞಂ ಪ್ರತಿ ಪ್ರಾಪಯ । ಯತಸ್ರುಚೇ ಯಾಗಾಯೋದ್ಯತಸ್ರುಚೇ ಯಜಮಾನಾಯ ತದರ್ಥಂ । ಆವಾಹ್ಯ ಚ ಸುತಸೋಮಾಯ ಯಾಗಾರ್ಥಮಭಿಷುತಸೋಮಾಯ ದಾಶುಷೇ ಹವಿರ್ದತ್ತವತೇ । ಯದ್ಯಪೀದಾನೀಮೇವಾಹೂಯಂತೇ ದೇವಾಃ ತಥಾಪಿ ಪೂರ್ವಾನುಷ್ಠಾ-ನಾಪೇಕ್ಷಯಾ ಭಾವ್ಯಪೇಕ್ಷಯಾ ವಾ ದಾಶುಷ ಇತ್ಯುಚ್ಯತೇ । ಹವಿರ್ದಾತ್ರೇ ವಾ ಯಜಮಾನಾಯ ತದರ್ಥಂ ಪೂರ್ವ್ಯಂ ಪೂರ್ವೇಭ್ಯೋ ದೇವೇಭ್ಯೋ ಹಿತಂ ಪೂರ್ವಕಾಲೀನಂ ವಾ ತಂತುಂ ಯಜ್ಞಂ ತನುಷ್ವ । ವಿಸ್ತಾರಯ ॥

ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ । **ಸಮಿದ್ಧಃ**–(ಚೆನ್ನಾಗಿ ಪ್ರಜ್ವಲಿತನಾಗಿ) ಸಮಿದ್ಧನೆಂದು ಪ್ರಖ್ಯಾತನಾದ ನೀನು । **ಅದ್ಯ**—ಈ ಯಾಗಕಾಲದಲ್ಲಿ । **ಯತಸ್ರುಚೇ**—ಯಾಗಕ್ಕಾಗಿ ಸೌಟನ್ನು ಹಿಡಿದಿರುವ ಯಜಮಾನನಿಗಾಗಿ । **ದೇವಾನ್**—(ಹವಿಸ್ಸನ್ನು ಸ್ವೀಕರಿಸುವ) ದೇವತೆಗಳನ್ನು । **ಆ ವಹ**—ಕರೆತಂದು ಸೇರಿಸು ! (ಮತ್ತು) **ಸುತಸೋಮಾಯ**—ಸೋಮರಸವನ್ನು ಹಿಂಡಿರುವವನೂ । **ದಾಶುಷೇ**—ಹವಿಸ್ಸನ್ನು ಅರ್ಪಿಸುವವನೂ ಆದ ಯಜಮಾನನಿಗಾಗಿ । **ಪೂರ್ವ್ಯಂ**—ಪ್ರಾಚೀನವಾದ । **ತಂತು**—ಯಜ್ಞವನ್ನು । **ತನುಷ್ವ**—ವಿಸ್ತರಿಸಿ ನೆರವೇರಿಸು.

### ಭಾವಾರ್ಥ

ಎಲೈ ಅಗ್ನಿಯೇ, ಚೆನ್ನಾಗಿ ಪ್ರಜ್ವಲಿತನಾಗಿ ಸಮಿದ್ಧನೆಂದು ಪ್ರಖ್ಯಾತನಾದ ನೀನು ಈ ಯಾಗಕಾಲದಲ್ಲಿ ಯಾಗಕ್ಕಾಗಿ ಸೌಟನೊಡನೆ ಸಿದ್ಧನಾಗಿರುವ ಯಜಮಾನನಿಗೋಸ್ಕರ ಹವಿಸ್ಸನ್ನು ಸ್ವೀಕರಿಸುವ ದೇವತೆಗಳನ್ನು ಕರೆತಂದು ಸೇರಿಸು. ಮತ್ತು ಸೋಮರಸವನ್ನು ಹಿಂಡಿರುವವನೂ, ಹವಿಸ್ಸನ್ನು ಅರ್ಪಿಸುವವನೂ ಆದ ಯಜಮಾನನಿಗಾಗಿ ಪ್ರಾಚೀನವಾದ ಯಜ್ಞವನ್ನು ವಿಸ್ತರಿಸಿ ನೆರವೇರಿಸು.

### English Translation

Agni, who is Samiddha, bring the gods to-day (to the worhipper), whose ladle is uplifted : extend (the merit of) former sacrifice to the giver (of the Soma libation) is poured forth.

### ವಿಶೇಷ ವಿಷಯಗಳು

**ಸಮಿದ್ಧಃ—ಸಮ್ಯಗ್ದೀಪಿತಃ ಏತನ್ನಾಮಕಃ ತ್ವಂ ।** **ಸಮಿದ್ಧಃ** ಎಂಬ ಹೆಸರಿನಿಂದ ಪ್ರಖ್ಯಾತನಾದ ಎಂದು ಸಾಯಣರು ವಿವರಿಸಿದ್ದಾರೆ. ಆಪ್ರೀಸೂಕ್ತದಲ್ಲಿ ಪ್ರಥಮಸ್ಥಾನವನ್ನು ಹೊಂದಿರುವ ಸಮಿದ್ಧಾಗ್ನಿಯನ್ನು ಉದ್ದೇಶಿಸಿದೆ.

**ಇಧ್ಮೋ ಯಃ ಸರ್ವಮೇವಾಗ್ನಿರಯಂ ಹೀಧ್ಮಃ ಸಮಿಧ್ಯತೇ ।**
**ಧ್ಮಾತೇರ್ವೈತತ್ಕೃತಂ ರೂಪಂ ಧ್ಮಾತೋ ಹೀಧ್ಮಃ ಸಮಿಧ್ಯತೇ ॥**
(ಬೃ. ದೇ. ೨-೧೫೮)

ಕಾಷ್ಠರೂಪವಾದ ಇಧ್ಮಕ್ಕೂ ಸರ್ವವ್ಯಾಪಿಯಾದ ಅಗ್ನಿಗೂ ಇಲ್ಲಿ ತಾದಾತ್ಮ್ಯವನ್ನು ಹೇಳಿದೆ. **ಧ್ಮಾ** ಎಂಬ ಧಾತುವಿನಿಂದ **ಇಧ್ಮ**ಶಬ್ದವು ನಿಷ್ಪನ್ನವಾಗಿದೆ. ಊದಿದನಂತರ ಪ್ರಜ್ವಲಿತವಾಗುವುದರಿಂದ ಈ ಹೆಸರು ಎಂದು ಬೃಹದ್ದೇವತಾಕಾರರು **ಇಧ್ಮ ಸಮಿದ್ಧ** ಎಂಬ ಪದಗಳ ನಿರ್ವಚನವನ್ನು ಹೇಳಿದ್ದಾರೆ. ಈ ನಿರ್ವಚನವು ನಿರುಕ್ತಕಾರರ ವಿವರಣೆಯನ್ನನುಸರಿಸಿದೆ. ನಿರುಕ್ತದಲ್ಲೂ,

**ತಾಸಾಮಿಧ್ಮಃ ಪ್ರಥಮಾಗಾಮೀ ಭವತಿ । ಇಧ್ಮಃ ಸಮಿಂಧನಾತ್ ।**
(ನಿ. ೮-೫)

ಎಂದು ಆಪ್ರೀಸೂಕ್ತದ ಪ್ರಥಮದೇವತೆಯ ವಿಷಯವಾಗಿ ಹೇಳಿದ್ದಾರೆ. **ತೈತ್ತಿರೀಯ ಬ್ರಾಹ್ಮಣದಲ್ಲೂ ಪ್ರೈಷ-ಸೂಕ್ತದ** ಆರಂಭದಲ್ಲಿ

**ಹೋತಾ ಯಕ್ಷದಗ್ನಿಗ್ಂ ಸಮಿಧಾ ಸುಷಮಿಧಾ ಸಮಿದ್ಧಂ ನಾಭಾ ಪೃಥಿವ್ಯಾಃ ಸಂಗಥೇ ವಾಮಸ್ಯ।**
(ತೈ. ಬ್ರಾ. ೩-೬-೨-೧)

ಎಂದು ಸಮಿಧಾಖ್ಯವಾದ ಮತ್ತು ಪ್ರಥಮಪ್ರಯಾಜದೇವತೆಯಿಂದೊಡಗೂಡಿದ ಅಗ್ನಿಯನ್ನುದ್ದೇಶಿಸಿ ಯಾಗಮಾಡಿರೆಂದು ಸಂಬೋಧಿಸಿದೆ.

ಇಲ್ಲಿ ಇನ್ನೊಂದು ವಿಷಯವನ್ನು ಗಮನಿಸಬೇಕಾಗಿದೆ. **ಇಧ್ಮ**ವೆಂಬ ಅಂಕಿತನಾಮವು ಆಪ್ರೀಸೂಕ್ತಗಳಲ್ಲಿ ಬರುವುದಿಲ್ಲ. **ಪ್ರೈಷ** ಸೂಕ್ತದಲ್ಲೂ ಸಹ ಈ ನಾಮವಿಲ್ಲ. ಸರ್ವಾನುಕ್ರಮಣಿಯಲ್ಲಿ ಮಾತ್ರ—

**ಸುಸಮಿದ್ಧ ಇತೀಧ್ಮ ಸಮಿದ್ಧೋ ವಾ ಅಗ್ನಿ...........ಇತಿ ಪ್ರತ್ಯೃಚಂ ದೇವತಾಃ ।**

ಎಂದು ನಿರ್ದೇಶಿಸಿದೆ. ಐತರೇಯಬ್ರಾಹ್ಮಣದಲ್ಲೂ ಈ ಪದದ ಪ್ರಯೋಗವು ಈ ಸನ್ನಿವೇಶದಲ್ಲಿಲ್ಲದಿರುವಾಗ **ಶೌನಕರೂ, ಕಾತ್ಯಾಯನರೂ** ಇದನ್ನುಪಯೋಗಿಸಿರುವುದರಲ್ಲಿ ನಿರುಕ್ತಕಾರರನ್ನು ಅನುಸರಿಸಿರುವುದು ಗೊತ್ತಾಗುತ್ತದೆ. ಅಲ್ಲದೆ **ಸಮಿದ್ಧ** ಅಥವಾ **ಸುಸಮಿದ್ಧ**ವೆಂಬ ವಿಶೇಷಣವು ಏಳು ಸೂಕ್ತಗಳಲ್ಲೂ **ಸಮಿಧ್** ಎಂಬ ವಿಶೇಷಣವು ಋ. ಸಂ. ೩-೪-೧ ; ೭-೨-೧ ; ೧೦-೭೦-೧ ಎಂಬ ಉಳಿದ ಮೂರು ಸೂಕ್ತಗಳಲ್ಲೂ ಉಪಯೋಗಿಸಲ್ಪಟ್ಟಿದೆ.

ಸಮಿದ್ಧಾಖ್ಯವಾದ ಈ ಅಗ್ನಿಯು ದೇವತೆಗಳನ್ನು ಆಹ್ವಾನಿಸಬೇಕಾದುದು ಮೊದಲನೆಯ ಕರ್ತವ್ಯ. ೧-೧೩-೧ ; ೧-೧೪೨-೧ ; ೩-೪-೧ ; ೧೦-೧೧೦-೧ ಎಂಬ ಸೂಕ್ತಗಳ ಪ್ರಾರಂಭದ ಋಕ್ಕುಗಳಲ್ಲಿ **ಸುಸಮಿದ್ಧೋ ನ ಆ ವಹ ದೇವಾँ ಅಗ್ನೇ ಹವಿಷ್ಮತೇ** (ಋ ಸಂ. ೧-೧೩-೧) ಎಂಬ ಪ್ರಾರ್ಥನೆಯಿಂದ ಅಗ್ನಿಯ ಕರ್ತವ್ಯವನ್ನು ಸೂಚಿಸಿದೆ. ಇಷ್ಟೇ ಅಲ್ಲದೇ ಹವಿರಾದಿಗಳನ್ನು ವಹಿಸಬೇಕೆಂದೂ ಪ್ರಾರ್ಥಿಸಿದೆ.

ಈ ದೇವತೆಯು ಅಗ್ನಿಯೇ ಅಲ್ಲವೇ ಎಂಬ ವಿಷಯದಲ್ಲಿ ಮೊದಲಿನಿಂದಲೂ ವಿಪ್ರತಿಪತ್ತಿಯಿದ್ದೇ ಇದೆ. ಈ ವಿಪ್ರತಿಪತ್ತಿಯನ್ನು ನಿರುಕ್ತಕಾರರೂ ಉದಹರಿಸಿ ಅನಂತರ ತಮ್ಮ ಅಭಿಪ್ರಾಯವನ್ನು ಹೇಳುತ್ತಾರೆ

**ಯಜ್ಞೇಧ್ಮ ಇತಿ ಕಾತ್ಥಕ್ಯಃ** (ನಿ ೮-೫) ; **ಅಗ್ನಿರಿತಿ ಶಾಕಪೂಣಿಃ** (೮-೫) ಎಂದು ಆಯಾ ಋಷಿಗಳ ಮತವನ್ನು ತಿಳಿಸಿ ಅನಂತರ **ಆಗ್ನೇಯೊ ಇತಿ ತು ಸ್ಥಿತಿಃ** (ನಿ. ೮-೨೨) ಎಂದು ತಮ್ಮ ಅಭಿಪ್ರಾಯವನ್ನೂ ಹೇಳಿದ್ದಾರೆ. **ಐತರೇಯ ಬ್ರಾಹ್ಮಣದಲ್ಲಿ,**

**ಸಮಿಧೋ ಯಜತಿ । ಪ್ರಾಣಾ ವೈ ಸಮಿಧಃ । ಪ್ರಾಣಾ ಹೀದಂ ಸರ್ವಂ ಸಮಿಂಧತೇ ಯದಿದಂ ಕಿಂಚ ಪ್ರಾಣಾನೇವ ತತ್ಪ್ರೀಣಾತಿ ಪ್ರಾಣಾನ್ಯಜಮಾನೇ ದಧಾತಿ ।**

(ಐ. ಬ್ರಾ. ೨-೪)

ಎಂಬ ವಾಕ್ಯಗಳಿಂದ **ಸಮಿಧ್** ಮತ್ತು **ಪ್ರಾಣ** ಇವೆರಡಕ್ಕೂ ತಾದಾತ್ಮ್ಯವನ್ನು ಹೇಳಿದೆಯಾದರೂ ಕೂಡ ಉಳಿದ ಅನೇಕ ಆಧಾರಗಳಿಂದ ಈ ದೇವತೆಯು **ಅಗ್ನಿಯೇ** ಆಗಿರಬೇಕೆಂದು ಹೇಳಬಹುದು.

**ತಂತುಂ**—**ತಂತು**ಶಬ್ದಕ್ಕೆ ಇಲ್ಲಿ ಯಜ್ಞವೆಂದರ್ಥಮಾಡಿದ್ದಾರೆ. ವಿಚ್ಛಿತ್ತಿಯಿಲ್ಲದೆ ಅನುಸ್ಯೂತವಾದುದೂ, ನಾನಾವಿಧವಾದ ಅವಯವಗಳಿಂದ ಕೂಡಿ ವಿಸ್ತಾರವಾಗಿ ಬೆಳೆಯತಕ್ಕದ್ದೂ ಆದುದರಿಂದ ತಂತುವೆಂಬ ಹೆಸರು. ಈ ಎರಡು ಗುಣಗಳೂ ಇರತಕ್ಕ ಪದಾರ್ಥಗಳಿಗೆಲ್ಲಾ **ತಂತು**ವೆಂಬ ವಿಶೇಷಣವಿದೆ. ಉದಾಹರಣೆಗೆ

**ತಂತುಂ ತನ್ವನ್ರಜಸೋ ಭಾನುಮನ್ವಿಹಿ ಜ್ಯೋತಿಷ್ಮತಃ ಪಥೋ ರಕ್ಷ ಧಿಯಾ ಕೃತಾನ್ ।**
**ಅನುಲ್ಬಣಂ ವಯತ ಜೋಗುವಾಮಪೋ ಮನುರ್ಭವ ಜನಯಾ ದೈವ್ಯಂ ಜನಂ ।**

(ಋ. ಸಂ. ೧೦-೫೩-೬)

ಎಂಬ ಋಕ್ಕನ್ನುದಹರಿಸಿ ಐತರೇಯ ಬ್ರಾಹ್ಮಣದಲ್ಲಿ,

**ತಂತುಂ ತನ್ವನ್ರಜಸೋ ಭಾನುಮನ್ವಿಹೀತಿ ಸ್ಪ್ರಾಜಾಪತ್ಯಾಂ ಶಂಸತಿ ಪ್ರಜಾ ವೈ ತಂತುಃ ಪ್ರಜಾ ನೋವಾಸ್ಮಾ ಏತತ್ಸಂತನೋತಿ ।**

(ಐ. ಬ್ರಾ. ೩-೨೮)

ಎಂಬ ವಾಕ್ಯದಿಂದ **ಯಜ್ಞ, ಪ್ರಕಾಶ, ಪ್ರಜಾಸಂತತಿ** ಎಲ್ಲವೂ **ತಂತು**ಶಬ್ದದಿಂದ ವ್ಯವಹರಿಸಲ್ಪಟ್ಟಿರುವುದು ಮೇಲಿನ ಅರ್ಥವನ್ನು ಸಮರ್ಥಿಸುತ್ತದೆ.

॥ ವ್ಯಾಕರಣಪ್ರಕ್ರಿಯಾ ॥

**ಸಮಿದ್ಧಃ**—ಸಮ್ ಉಪಸರ್ಗ. ಞಿಇಂಧೀ ದೀಪ್ತೌ ಧಾತು. **ನಿಷ್ಠಾ** ಎಂಬುದರಿಂದ ಕ್ತ ಪ್ರತ್ಯಯ **ಅನಿದಿತಾಂ ಹಲ**—ಎಂಬುದರಿಂದ ಉಪಧಾನಕಾರಲೋಪ **ಝಷಸ್ತ**—(ಪಾ. ಸೂ. ೮-೨-೪೦) ಎಂಬುದರಿಂದ ಪ್ರತ್ಯಯಕ್ಕೆ ಧತ್ವ. ಪೂರ್ವಕ್ಕೆ ಜಸ್ತ್ವ. **ಗತಿರನಂತರಃ** (ಪಾ. ಸೂ. ೬-೨-೪೯) ಎಂಬುದರಿಂದ ಗತಿಗೆ (ಸಮ್) ಪ್ರಕೃತಿಸ್ವರ ಬರುತ್ತದೆ.

**ವಹ**—ವಹ ಪ್ರಾಪಣೇ. ಧಾತು. ಲೋಟ್ ಮಧ್ಯಮಪುರುಷ ಏಕವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಯತಸ್ರುಚೇ**—ಯತಾ ಸ್ರುಕ್ ಯೇನ ಸಃ ಯತಸ್ರುಕ್. **ಬಹುವ್ರೀಹೌ ಪ್ರಕೃತ್ಯಾಪೂರ್ವಪದಮ್** (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ. ಚತುರ್ಥೀಏಕವಚನಾಂತರೂಪ.

**ತನುಷ್ವ**—ತನು ವಿಸ್ತಾರೇ. ಧಾತು. ಲೋಟ್ ಮಧ್ಯಮಪುರುಷ ಏಕವಚನಾಂತರೂಪ. **ತಿಙ್ಙತಿಙಃ** ಎಂಬುದರಿಂದ ತಿಙಂತನಿಘಾತಸ್ವರ ಬರುತ್ತದೆ

**ಪೂರ್ವ್ಯಮ್—ಪೂರ್ವೈಃಕೃತಮಿನಯೌ ಚ** (ಪಾ. ಸೂ. ೪-೪-೧೩೩) ಎಂಬುದರಿಂದ ಪೂರ್ವ ಶಬ್ದಕ್ಕೆ ಯಪ್ರತ್ಯಯ. **ಯಸ್ಯೇತಿ ಚ** ಎಂಬುದರಿಂದ ಅಕಾರಲೋಪ ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ದ್ವಿತೀಯಾ ಏಕವಚನಾಂತರೂಪ.

**ಸುತಸೋಮಾಯ**—ಷುಞ್ ಅಭಿಷವೇ. ಧಾತು. ಕರ್ಮಣಿಯಲ್ಲಿ ಕ್ತ ಪ್ರತ್ಯಯ. ಬಹುವ್ರೀಹಿಸಮಾಸ. **ಬಹುವ್ರೀಹೌ ಪ್ರಕೃತ್ಯಾ**—ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ದಾಶುಷೇ**—ದಾಶೃ ದಾನೇ ಧಾತು. **ದಾಶ್ವಾನ್ ಸಾಹ್ವಾನ್**—(ಪಾ. ಸೂ. ೬-೧-೧೨) ಎಂಬುದರಿಂದ ಕ್ವಸುಪ್ರತ್ಯಯಾಂತವಾಗಿ ನಿಪಾತಿತವಾಗಿದೆ. ಚತುರ್ಥೀ ಏಕವಚನ ಪರವಾದಾಗ ಭಸಂಜ್ಞಾ ಇರುವುದರಿಂದ **ವಸೋಃ ಸಂಪ್ರಸಾರಣಮ್** ಎಂಬುದರಿಂದ ಸಂಪ್ರಸಾರಣ. **ಸಂಪ್ರಸಾರಣಾಚ್ಚ** ಎಂಬುದರಿಂದ ಪೂರ್ವರೂಪ. **ಶಾಸಿವಸಿಘಸೀನಾಂ ಚ** (ಪಾ. ಸೂ. ೮-೩-೬೦) ಎಂಬುದರಿಂದ ಪ್ರತ್ಯಯ ಸಕಾರಕ್ಕೆ ಷತ್ವ. ॥ ೧ ॥



। ಸಂಹಿತಾಪಾಠಃ ।

ಘೃತವಂತಮುಪ ಮಾಸಿ ಮಧುಮಂತಂ ತನೂನಪಾತ್ ।

ಯಜ್ಞಂ ವಿಪ್ರಸ್ಯ ಮಾವತಃ ಶಶಮಾನಸ್ಯ ದಾಶುಷಃ ॥ ೨ ॥

ಪದಪಾಠಃ

ಘೃತSವಂತಂ । ಉಪ । ಮಾಸಿ । ಮಧುSಮಂತಂ । ತನೂSನಪಾತ್ ।

ಯಜ್ಞಂ । ವಿಪ್ರಸ್ಯ । ಮಾSವತಃ । ಶಶಮಾನಸ್ಯ । ದಾಶುಷಃ ॥ ೨ ॥

ಸಾಯಣಭಾಷ್ಯಂ

ಹೇ ತನೂನಪಾತ್ । ತನೂನಪಾದಾಜ್ಯಮಿತಿ ಕಾತ್ಥಕ್ಯಪಕ್ಷೇ ತನ್ವೋ ಗಾವೋ ಭೋಗಾನಾಂ ತಾಸು ಜಾಯಮಾನತ್ವಾತ್ ತಾಭ್ಯ ಉತ್ಪನ್ನಂ ಕ್ಷೀರಂ ಕ್ಷೀರಾತ್ಸರ್ಪಿರಿತ್ಯಾಜ್ಯಸ್ಯ ನಪ್ತೃತ್ವಂ । ತದ್ವಾನ್ಯಜ್ಞಃ । ಅಗ್ನಿಪಕ್ಷ ಆಪಸ್ತನ್ವ ಉಚ್ಯಂತೇ । ತಾಭ್ಯ ಓಷಧಿವನಸ್ಪತಯಃ । ತೇಭ್ಯೋಽಗ್ನಿರಿತಿ ನಪ್ತೃತ್ವಂ । ಅರಣೀಭ್ಯಾಮಿತಿ ಭಾವಃ । ಏತನ್ನಾಮಕ ಹೇ ಅಗ್ನೇ ವಿಪ್ರಸ್ಯ ಮೇಧಾವಿನಃ ಶಶಮಾನಸ್ಯ ಶಂಸಮಾನಸ್ಯ ತ್ವಾಂ ಸ್ತುವತೋ ದಾಶುಷೋ ಹವಿರ್ದತ್ತವತೋ ಮಾವತೋ ಮತ್ಸದೃಶಸ್ಯ ಯಜಮಾನಸ್ಯ ॥ ಯುಷ್ಮದಸ್ಮದ್ಭ್ಯಾಂ ಛಂದಸಿ ಸಾದೃಶ್ಯ ಇತಿ ಮತುಪ್ । ಆ ಸರ್ವನಾಮ್ನ ಇತ್ಯಾತ್ವಂ ॥ ಘೃತವಂತಂ ಕ್ಷರದಾಜ್ಯೋಪೇತಂ ಮಧುಮಂತಂ ಮಾಧುರ್ಯೋಪೇತಂ ಸೋಮಾದಿಮಧುರದ್ರವ್ಯೇಣ ತದ್ವಂತಂ ಯಜ್ಞಮುಪೋಪೇತ್ಯ ಮಾಸಿ । ನಿರ್ಮಿಮೀಷೇ । ಮಿತೋ ಭವಸಿ ವಾ । ಸಂಪೂರ್ತಿಪರ್ಯಂತಂ ತಿಷ್ಠಸೀತ್ಯರ್ಥಃ ॥ ಮಾ ಮಾನೇ । ಅದಾದಿಕಃ ॥

ಪ್ರತಿಪದಾರ್ಥ

**ತನೂನಪಾತ್**—'ತನೂನಪಾತ್' ಎಂಬ ಹೆಸರುಳ್ಳ ಅಗ್ನಿಯೇ । **ವಿಪ್ರಸ್ಯ**—ಮೇಧಾವಿಯೂ । **ಶಶಮಾನಸ್ಯ**—(ನಿನ್ನನ್ನು) ಸ್ತುತಿಸುವವನೂ । **ದಾಶುಷಃ**—ಹವಿಸ್ಸನ್ನು ಅರ್ಪಿಸುವವನೂ । **ಮಾವತಃ**—ನನ್ನಂತೆಯೇ (ಶ್ರದ್ಧೆಯಿಂದಕೂಡಿ) ಇರುವವನೂ ಆದ ಯಜಮಾನನ । **ಘೃತವಂತಂ**—ಆಜ್ಯದಿಂದ ಪೂರಿತವಾದುದೂ । **ಮಧುಮಂತಂ**—ಸೋಮಾದಿ ಮಧುರ ದ್ರವ್ಯದಿಂದ ಕೂಡಿದುದೂ ಆದ । **ಯಜ್ಞಂ**—ಯಜ್ಞಕ್ಕೆ । **ಉಪ**—ದಯಮಾಡಿ । **ಮಾಸಿ**—ಯಜ್ಞಸಮಾಪ್ತಿಯವರೆಗೂ ಇರು.

ಭಾವಾರ್ಥ

'ತನೂನಪಾತ್' ಎಂದು ಪ್ರಸಿದ್ಧನಾದ ಎಲೈ ಅಗ್ನಿಯೇ, ಮೇಧಾವಿಯೂ, ನಿನ್ನನ್ನು ಪೂಜಿಸುವವನೂ, ಹವಿಸ್ಸನ್ನು ಅರ್ಪಿಸುವವನೂ, ನನ್ನಂತೆಯೇ ಶ್ರದ್ಧೆಯಿಂದ ಕೂಡಿರುವವನೂ ಆದ ಯಜಮಾನನ ಆಜ್ಯದಿಂದ ಪೂರಿತ

ವಾದುದೂ, ಸೋಮಾದಿ ಮಧುರ ದ್ರವ್ಯದಿಂದ ಕೂಡಿದುದೂ ಆದ ಯಜ್ಞಕ್ಕೆ ದಯಮಾಡಿ ಯಜ್ಞಸಮಾಪ್ತಿಯವರೆಗೂ ಇಲ್ಲಿರು.

## English Translation

Tanunapat, be present at this well-flavoured and butter-fed sacrifice, (the offering) of a pious offerer (of oblations) ; glorifying you.

### ವಿಶೇಷವಿಷಯಗಳು

**ತನೂನಪಾತ್**—ಪದಕ್ಕೆ ಸಾಯಣರು ನಿರುಕ್ತದ ಆಧಾರದಮೇಲೆ ಎರಡುವಿಧವಾದ ಅರ್ಥಗಳನ್ನು ಹೇಳಿದ್ದಾರೆ. ಮೊದಲನೆಯದಾಗಿ **ತನೂನಪಾತ್ ಆಜ್ಯಂ ಇತಿ ಕಾತ್ಥಕ್ಯಪಕ್ಷೇ ತನ್ವೋ ಗಾವೋ ಭೋಗಾನಾಂ ತಾಸು ಜಾಯಮಾನತ್ವಾತ್ । ತಾಭ್ಯಃ ಉತ್ಪನ್ನಂ ಕ್ಷೀರಂ ಕ್ಷೀರಾತ್ಸರ್ಪಿಃ ಇತಿ ಆಜ್ಯಸ್ಯ ನಪ್ತೃತ್ವಂ । ತದ್ವಾನ್ ಯಜ್ಞಃ ।** **ತನೂನಪಾತ್** ಎಂದರೆ ಆಜ್ಯವೆಂಬ **ಕಾತ್ಥಕ್ಯರ** ಅರ್ಥವನ್ನು ಪರಿಗ್ರಹಿಸಿದರೆ, ಆಗ **ತನು** ಶಬ್ದಕ್ಕೆ ಗೋವೆಂದೂ, ಅದರಿಂದ ಉತ್ಪನ್ನವಾದ ಕ್ಷೀರದಿಂದ ಆಜ್ಯೋತ್ಪತ್ತಿಯಾಗುವುದರಿಂದ **ತನೂನಪಾತ್** ಎಂದರೆ ಆಜ್ಯ. ಅಥವಾ ಆಜ್ಯಯುತವಾದ ಯಜ್ಞವೆಂದೂ ಅರ್ಥಮಾಡಿದ್ದಾರೆ. ಈ ಸಂದರ್ಭದಲ್ಲಿ **ನಪಾದಿತ್ಯನಂತರಾಯಾಃ ಪ್ರಜಾಯಾ ನಾಮಧೇಯಂ ನಿರ್ಣತತಮಾ ಭವತಿ** (ನಿ. ೮-೫) ಎಂಬ ನಿರುಕ್ತಕಾರರ ವಾಕ್ಯದಿಂದ ನಪಾತ್ ಎಂಬ ಶಬ್ದಕ್ಕೆ ಪೌತ್ರನೆಂಬರ್ಥವಾಗುವುದರಿಂದ ಇಲ್ಲಿಯೂ ಗೋಜನ್ಯವಾದ ಕ್ಷೀರದಿಂದ ಉತ್ಪನ್ನವಾದ **ಆಜ್ಯ**ವೆಂದರ್ಥ. ಎರಡನೆಯದಾಗಿ, **ಅಗ್ನಿಪಕ್ಷೇ ಆಪಸ್ತನ್ವ ಉಚ್ಯಂತೇ । ತಾಭ್ಯಃ ಓಷಧಿವನಸ್ಪತಿಯಃ, ತೇಭ್ಯೋಽಗ್ನಿರಿತಿ ನಪ್ತೃತ್ವಂ । ಅರಣೀಭ್ಯಾಂ ಇತಿ ಭಾವಃ । ತನು** ಶಬ್ದಕ್ಕೆ ನೀರು ಎಂಬ ಅರ್ಥ. ಅದರಿಂದ ಓಷಧಿ ವನಸ್ಪತಿಗಳು (ಅರಣಿಗಳು) ಉತ್ಪನ್ನವಾಗಿ ಅವುಗಳಿಂದ ಅಗ್ನಿಜನನವಾಗುವುದರಿಂದ **ತನೂನಪಾತ್** ಎಂದು ಹೆಸರು ಎಂಬುದಾಗಿ ಎರಡು ವಿಧವಾದ ಅರ್ಥಗಳನ್ನು ಹೇಳಿದ್ದಾರೆ. ಬೃಹದ್ದೇವತೆಯಲ್ಲಿ,

**ಅಯಂ ತನೂನಪಾದಗ್ನಿರಸೌ ಹಿ ತನನಾತ್ತನುಃ ।**
**ತತಸ್ತು ಮಧ್ಯಮೋ ಜಜ್ಞೇ ಸ್ಥಾನೇಽಯಂ ಮಧ್ಯಮಾತ್ತತಃ ॥**
**ಅನಂತರಾಂ ಪ್ರಜಾಮಾಹುರ್ನಪಾದಿತಿ ಕೃಪಣ್ಯವಃ ।**
**ನಪಾದಮುಷ್ಯಚೈವಾಯಂ ಅಗ್ನಿಸ್ತೇನ ತನೂನಪಾತ್ ॥**
(ಬೃ. ದೇ ೨-೭೬ ರಿಂದ ೨೭)

**ತನೂನಪಾದಯಂ ತ್ವೇವ ನಾಮ್ನಾ ಯೆಚ್ಛತ್ವಸೌ ತನುಂ ।**
**ನಪಾದಿತಿ ಪ್ರಜಾ ಮಾಹುರಮುತೋಽಸ್ಯ ಚ ಸಂಭವಂ ।**
(ಬೃ ದೇ. ೩-೧)

ಈ ಪಾರ್ಥಿವಾಗ್ನಿಯು ದಿವ್ಯಲೋಕದ ಅಗ್ನಿಗೆ ನಪಾತ್ (ಪೌತ್ರನು) ಹೇಗೆಂದರೆ, ದಿವ್ಯಾಗ್ನಿಯು ಪ್ರಸರಣಶಕ್ತಿಯುತ (ತನನಾತ್) ನಾದುದರಿಂದ **ತನು**ವೆಂಬ ಪರ್ಯಾಯನಾಮದಿಂದ ಕರೆಯಲ್ಪಡುತ್ತಾನೆ. ಅತನಿಂದ ಅಂತರಿಕ್ಷಸ್ಥವಾದ ವಿದ್ಯುದ್ರೂಪವಾದ ಅಗ್ನಿಯೂ ಅವನಿಂದ ಈ ಪಾರ್ಥಿವಾಗ್ನಿಯೂ ಉತ್ಪನ್ನವಾಗುವುದರಿಂದ ಪಾರ್ಥಿವಾಗ್ನಿಗೆ **ತನೂನಪಾತ್** ಎಂಬ ಹೆಸರು ತನ್ನ ದೇಹದಿಂದ ತಾನೇ ಪ್ರಸರಿಸಿ ಈ ರೂಪದಲ್ಲಿ ಉತ್ಪನ್ನನಾದುದರಿಂದಲೂ ನಪ

**ತನೂನಪಾತ್** ಎಂಬ ಹೆಸರೆಂದು ವಿವರಿಸಿದೆ. ಈ ರೂಪದ ಅಗ್ನಿಗೂ ಮತ್ತು **ನರಾಶಂಸರೂಪದ** ಅಗ್ನಿಗೂ ಇರುವ ಸಂಬಂಧವನ್ನೂ ವ್ಯತ್ಯಾಸವನ್ನೂ ಮುಂದಿನ ಋಕ್ಕಿನ ವಿಶೇಷವಿಷಯಗಳಲ್ಲಿ ವಿವರಿಸಲಾಗುತ್ತದೆ.

**ಮಾಸಿ**—**ನಿರ್ಮಿಮೀಷೇ ಮಿತೋ ಭವಸಿ ವಾ | ಸಂಪೂರ್ತಿಪರ್ಯಂತಂ ತಿಷ್ಠಸೀತಿ ವಾ |** ಯಜ್ಞವು ಪೂರ್ಣವಾಗಿ ನೆರವೇರುವವರೆಗೂ ಇರು ಎಂದರ್ಥ.

**ವಿಪ್ರಸ್ಯ**—**ವಿಪ್ರ**ಶಬ್ದವು ಮೇಧಾವಿನಾಮಗಳಲ್ಲಿ ಪಠಿತವಾಗಿದೆ. (ನಿ. ೩-೧೫) ಮೇಧಾವಿಯೂ ಸ್ತುತಿಕಾರನೂ ಆದ ಯಜಮಾನನ.

**ಮಾವತಃ**—**ಮತ್ಸದೃಶಸ್ಯ ಯಜಮಾನಸ್ಯ |** ನನ್ನಂತೆಯೇ ಶ್ರದ್ಧೆಯಿಂದ ಕೂಡಿರುವ ಯಜಮಾನನ ಎಂದರ್ಥ.

ವ್ಯಾಕರಣಪ್ರಕ್ರಿಯಾ

**ಘೃತವಂತಮ್**—ಘೃತಮಸ್ಯಾಸ್ತಿ ಇತಿ ಘೃತವಾನ್. ತಮ್. **ತದಸ್ಯಾಸ್ತಿ**—ಸೂತ್ರದಿಂದ ಮತುಪ್ ಪ್ರತ್ಯಯ. ಪಿತ್ತಾದುದರಿಂದ ಅನುದಾತ್ತವಾಗುತ್ತದೆ.

**ಮಾಸಿ**—ಮಾ ಮಾನೇ. ಧಾತು. ಅದಾದಿ. ಲಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್ ಪ್ರತ್ಯಯ. **ಅದಿಪ್ರಭೃತಿಭ್ಯಃ ಶಪಃ** ಎಂಬುದುದರಿಂದ ಶಪಿಗೆ ಲುಕ್, ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ತನೂನಪಾತ್**—**ಆಮಂತ್ರಿತಸ್ಯ ಚ** (ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಯಜ್ಞಮ್**—ಯಜ ದೇವಪೂಜಾಸಂಗತಿಕರಣದಾನೇಷು. ಧಾತು. **ಯಜಯಾಚ**—(ಪಾ. ಸೂ. ೩-೩-೯೦) ಎಂಬುದರಿಂದ ನಙ್ ಪ್ರತ್ಯಯ ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ದ್ವಿತೀಯಾ ಏಕವಚನಾಂತರೂಪ.

**ಮಾವತಃ**—**ಯುಷ್ಮದಸ್ಮದೋಃ ಸಾದೃಶ್ಯೇ ವತುಪ್ ವಾಚ್ಯಃ** (ಪಾ. ಸೂ. ೫-೧-೬೫-೨) ಎಂಬುದರಿಂದ ಸಾದೃಶ್ಯಾರ್ಥತೋರುವಾಗ ಅಸ್ಮದ್ ಶಬ್ದಕ್ಕೆ ವತುಪ್ ಪ್ರತ್ಯಯ. **ಪ್ರತ್ಯಯೋತ್ತರಪದಯೋಶ್ಚ** (ಪಾ. ಸೂ. ೭-೨-೯೮) ಎಂಬುದರಿಂದ ಪ್ರಕೃತಿಗೆ ಮಾದೇಶ. **ಆ ಸರ್ವನಾಮ್ನಃ** (ಪಾ. ಸೂ. ೬-೩-೯೧) ಎಂಬುದರಿಂದ ವತುಪ್ ನಿಮಿತ್ತವಾಗಿ ಆತ್ವ. ವತುಪ್ ಪಿತ್ತಾದುದರಿಂದ ಅನುದಾತ್ತವಾಗುತ್ತದೆ.

**ಶಶಮಾನಸ್ಯ**—ಶಂಸಮಾನ ಎಂದಾಗುವಲ್ಲಿ ಶಶಮಾನ ಎಂದು ರೂಪವಾಗುತ್ತದೆ. ಚಿತ್ತಾದುದರಿಂದ **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ಷಷ್ಠೀ ಏಕವಚನಾಂತರೂಪ.

**ದಾಶುಷಃ**—ಹಿಂದಿನ ಮಂತ್ರದಲ್ಲಿ ವ್ಯಾಖ್ಯಾತವಾಗಿದೆ. ಷಷ್ಠೀ ಏಕವಚನಾಂತರೂಪ. ‖ ೨ ‖

———:o:———

ಸಂಹಿತಾಪಾಠಃ

ಶುಚಿಃ ಪಾವಕೋ ಅದ್ಭುತೋ ಮಧ್ವಾ ಯಜ್ಞಂ ಮಿಮಿಕ್ಷತಿ ।
ನರಾಶಂಸಸ್ತ್ರಿರಾ ದಿವೋ ದೇವೋ ದೇವೇಷು ಯಜ್ಞಿಯಃ ॥ ೩ ॥

ಪದಪಾಠಃ

ಶುಚಿಃ । ಪಾವಕಃ । ಅದ್ಭುತಃ । ಮಧ್ವಾ । ಯಜ್ಞಂ । ಮಿಮಿಕ್ಷತಿ ।
ನರಾಶಂಸಃ । ತ್ರಿಃ । ಆ । ದಿವಃ । ದೇವಃ । ದೇವೇಷು । ಯಜ್ಞಿಯಃ ॥ ೩ ॥

॥ ಸಾಯಣಭಾಷ್ಯಂ ॥

ದೇವೇಷು ಮಧ್ಯೇ ಶುಚಿಃ ಶುದ್ಧೋ ದೀಪ್ತೋ ವಾ ಪಾವಕೋಽನ್ನಸ್ಯಾಪೂತಸ್ಯ ಶೋಧಯಿತಾದ್ಭುತೋಽಭೂತ ಇವ ಅದ್ಯಕ್ಷಣೇ ಭವಿತಾ । ಆಶ್ಚರ್ಯಭೂತ ಇತ್ಯರ್ಥಃ । ದೇವೋ ದ್ಯೋತನಶೀಲೋ ಯಜ್ಞಿಯೋ ಯಜ್ಞಸಂಪಾದನಾರ್ಹಃ ಈದೃಶೋ ನರಾಶಂಸೋ ನರೈಃ ಕರ್ಮನೇತೃಭಿರ್ಋತ್ವಿಗ್ಭಿಃ ಶಂಸನೀಯೋಽಗ್ನಿರ್ದಿವೋ ದ್ಯುಲೋಕಾದಾಗತ್ಯ ಮಧ್ವಾ ಮಧುರೇಣ ರಸೇನ ಯಜ್ಞಮಸ್ಮದೀಯಂ ತ್ರಿರಾ ಮಿಮಿಕ್ಷತಿ । ತ್ರಿವಾರಂ ಸಮಂತಾತ್ಸಿಂಚತಿ । ಸ್ವದಯತೀತ್ಯರ್ಥಃ । ಯದ್ವಾ । ಮಧುರೇಣ ಫಲೇನ ತ್ರಿರಾ ಮಿಮಿಕ್ಷತಿ । ಯೋಜಯತೀತ್ಯರ್ಥಃ । ನರಾಶಂಸೋ ಯಜ್ಞ ಇತಿ ಕಾತ್ಥಕ್ಯಪಕ್ಷೇ ಯಜ್ಞಾಭಿಮಾನೀ ದೇವೋ ದ್ಯೋತಮಾನೋ ದ್ಯುಲೋಕಾದಾಗತ್ಯಾನುಷ್ಠೀಯಮಾನಂ ಯಜ್ಞಂ ತ್ರಿರಾ ಮಿಮಿಕ್ಷತಿ । ಅಯಂ ನರಾಶಂಸೋ ದೇವಸ್ತ್ರಿರಾ ॥ ಉಪಸರ್ಗವಶಾದ್ಯೋಗ್ಯಕ್ರಿಯಾಧ್ಯಾಹಾರಃ ॥ ತ್ರಿವಾರಮಾಗಚ್ಛತಿ । ತ್ರಿರಾಹರತಿ ವಾ ಫಲಂ । ಅವಶಿಷ್ಟಂ ಪೂರ್ವವನ್ನೇಯಂ ॥

ಪ್ರತಿಪದಾರ್ಥ

**ದೇವೇಷು**—ದೇವತೆಗಳ ನಡುವೆ । **ಶುಚಿಃ**—ಶುದ್ಧನಾದವನೂ । **ಪಾವಕಃ**—(ಅನ್ನವನ್ನು) ಶುದಿ ಮಾಡುವವನೂ । **ಅದ್ಭುತಃ**—ಅದ್ಭುತನೂ । **ದೇವಃ**—ಪ್ರಕಾಶಮಾನನೂ । **ಯಜ್ಞಿಯಃ**—ಯಜ್ಞ ಸಂಪಾದನೆಗೆ ಯೋಗ್ಯನೂ ಆದ । **ನರಾಶಂಸಃ**—(ಋತ್ವಿಕ್ಕುಗಳಿಂದ ಸ್ತುತನಾಗುವ) ನರಾಶಂಸನೆಂದು ಪ್ರಸಿದ್ಧನಾದ ಅಗ್ನಿಯು । **ದಿವಃ**—ದ್ಯುಲೋಕದಿಂದ ಬಂದು । **ಮಧ್ವಾ**—ಮಧುರವಾದ ರಸದಿಂದ ಅಥವಾ ಫಲದಿಂದ । **ಯಜ್ಞಂ**—ಯಜ್ಞವನ್ನು । **ತ್ರಿಃ**—ಮೂರು ಸಲ । **ಆ ಮಿಮಿಕ್ಷತಿ**—ಸುತ್ತಲೂ ಸೇರಿಸುತ್ತಾನೆ ಅಥವಾ ಮೂರು ಯಜ್ಞಕಾಲಗಳಲ್ಲೂ ಮೂರಾವರ್ತಿ ಫಲವನ್ನೂ ತರುತ್ತಾನೆ.

॥ ಭಾವಾರ್ಥ ॥

ದೇವತೆಗಳ ನಡುವೆ ಶುದ್ಧನಾದವನೂ, ಅನ್ನವನ್ನು ಶುದ್ಧಿಮಾಡುವವನೂ, ಅದ್ಭುತನೂ, ಪ್ರಕಾಶಮಾನನೂ ಯಜ್ಞಸಂಪಾದನೆಗೆ ಯೋಗ್ಯನೂ, ನರಾಶಂಸನೆಂದು ಪ್ರಸಿದ್ಧನಾದವನೂ ಆದ ಅಗ್ನಿಯು ದ್ಯುಲೋಕದಿಂದ ಬಂದು ನಮ್ಮ ಈ ಯಜ್ಞವನ್ನು ಮಧುರವಾದ ಫಲದೊಡನೆ ಮೂರು ಸಲ ಸೇರಿಸುತ್ತಾನೆ.

## English Translation

The pure, purifying, wonderful Narashansa, an adorable god among gods, (having come) from heaven, thrice mixes the sacrifice with the sweet (juice of the Soma).

### ವಿಶೇಷವಿಷಯಗಳು

**ನರಾಶಂಸಃ**—**ನರೈಃ ಶಂಸನೀಯಃ (ಅಗ್ನಿಃ)** । ನರರಿಂದ ಸ್ತುತಿಸಲ್ಪಡುವ ಅಗ್ನಿಯೆಂದು ಅಗ್ನಿಯ ಅನ್ವರ್ಥನಾಮವಾಗಿದೆ ಅಥವಾ **ನರಾಶಂಸೋಽಗ್ನಿರ್ಯಜ್ಞೋ ವಾ** । ನರಾಶಂಸನೆಂದರೆ ಅಗ್ನಿಯೆಂದಾಗಲಿ ಅಥವಾ ಯಜ್ಞವೆಂದಾಗಲಿ ಅರ್ಥವಾಗುವುದೆಂದು ಇನ್ನೊಂದು ಮತ ಈ ಎರಡು ಅಭಿಪ್ರಾಯಗಳನ್ನೂ ನಿರುಕ್ತ ವಾಕ್ಯವು ಸಮರ್ಥಿಸುತ್ತದೆ.

**ನರಾಶಂಸೋ ಯಜ್ಞ ಇತಿ ಕಾತ್ಥಕ್ಯಃ। ನರಾ ಅಸ್ಮಿನ್ನಾಸೀನಾಃ ಶಂಸಂತಿ । ಅಗ್ನಿರಿತಿ ಶಾಕಪೂಣಿಃ। ನರೈಃ ಪ್ರಶಸ್ಯೋ ಭವತಿ ।** (ನಿ. ೮-೭) ನರರು ಯಜ್ಞದಲ್ಲಿ ಕುಳಿತುಕೊಂಡು ಪ್ರಶಂಸೆಮಾಡುವುದರಿಂದ **ಯಜ್ಞಕ್ಕೆ ನರಾಶಂಸ**ನೆಂಬ ಹೆಸರೆಂದು ಕಾತ್ಥಕ್ಯರೂ, ನರರಿಂದ ಪ್ರಶಸ್ಯನಾದುದರಿಂದ **ಅಗ್ನಿಗೆ** ಈ ಹೆಸರೆಂದು ಶಾಕಪೂಣಿಯೂ ಹೇಳಿರುವುದಾಗಿ ನಿರುಕ್ತಕಾರರು ಈ ಎರಡು ಅಭಿಪ್ರಾಯಗಳನ್ನೂ ಸೂಚಿಸಿ ಅನಂತರ,

**ನರಾಶಂಸಸ್ಯ ಮಹಿಮಾನಮೇಷಾಮುಪ ಸ್ತೋಷಾಮ ಯಜತಸ್ಯ ಯಜ್ಞೈಃ ।**
**ಯೇ ಸುಕ್ರತವಃ ಶುಚಯೋ ಧಿಯಂಧಾಃ ಸ್ವದಂತಿ ದೇವಾ ಉಭಯಾನಿ ಹವ್ಯಾ ॥**
(ಋ. ಸಂ. ೭-೨-೨)

ಎಂಬ ಋಕ್ಕನ್ನು ಉದಹರಿಸಿದ್ದಾರೆ. ಈ ಋಕ್ಕಿನಲ್ಲಿ **ಅಗ್ನಿ**ಯೆಂಬ ಅರ್ಥವೇ ನ್ಯಾಯವಾಗಿದೆ. **ನಿಘಂಟು**ವಿನಲ್ಲಿ ಪರಿಗಣಿತವಾಗಿರುವ ದೇವತೆಗಳ ನಡುವೆ **ನರಾಶಂಸ**ದೇವತೆಯು ಅಗ್ನಿಯ ರೂಪಾಂತರಗಳಲ್ಲೊಂದು ಎಂದು ತಿಳಿಯುತ್ತದೆ. ಇದನ್ನೇ ಬೃಹದ್ದೇವತಾಕಾರರು

**ನರಾಶಂಸಸ್ತ್ರಿತಶ್ಚೈನಮೇನಮೇವಾಶ್ರಿತಸ್ತ್ರಿಳಃ ।**
**ಬಹಿರ್ದ್ವಾರಶ್ಚ ದೇವ್ಯೋಽಗ್ನಿಮೇನಮೇವ ತು ಸಂಶ್ರಿತಾಃ ॥**
(ಬೃ. ದೇ. ೧-೧೦೭)

ಎಂಬ ಶ್ಲೋಕದಲ್ಲಿ **ನರಾಶಂಸನು** ಇಲ್ಲಿ ಹೇಳಿರುವ ಇತರ ದೇವತೆಗಳಂತೆಯೇ ಅಗ್ನಿಯಲ್ಲಿ ಅಂತರ್ಗತನಾಗಿರುವನೆಂದು ಹೇಳಿದ್ದಾರೆ. ಮತ್ತು

**ಪೃಥಕ್ತ್ವೇನ ಸಮಾಸೈಸ್ತು ಯಜ್ಞೇ ಯಚ್ಛಸ್ಯತೇ ನೃಭಿಃ ।**
**ಸ್ತುವಂತ್ಯಾಪ್ರೀಷು ತೇನೇಮಂ ನರಾಶಂಸಂ ತು ಕಾರವಃ ॥**
(ಬೃ. ದೇ. ೨-೨೮)

ಯಜ್ಞದಲ್ಲಿ ಸೇರಿರತಕ್ಕ ಸಕಲ ನರರಿಂದಲೂ ಸಹ ಪ್ರತ್ಯೇಕವಾಗಿ ಪ್ರಶಂಸಿಸಲ್ಪಡುವುದರಿಂದ ಕೃತಿಕಾರರು ಇವನನ್ನು (ಅಗ್ನಿಯನ್ನು) **ನರಾಶಂಸ**ನೆಂಬ ಹೆಸರಿನಿಂದ ಆಪ್ರೀಸೂಕ್ತಗಳಲ್ಲಿ ಸ್ತುತಿಸಿದ್ದಾರೆ ಎಂದು ಹೇಳಿ, ನಿರುಕ್ತಕಾರರು ಹೇಳಿರುವ ಅಭಿಪ್ರಾಯವನ್ನು ಇವರೂ ತೋರಿಸಿದ್ದಾರೆ.

ನರಾಶಂಸಮಿಹೈಕೇ ತು ಅಗ್ನಿಮಾಹುರಥೇತರೇ ।
ನರಾಃ ಶಂಸಂತಿ ಸರ್ವೇಽಸ್ಮಿನ್ನಾಸೀನಾ ಇತಿ ವಾಧ್ವರೇ ॥
ಏತಮೇವಾಹುರನ್ಯೇಽಗ್ನಿಂ ನರಾಶಂಸೋಽಧ್ವರೇ ಹ್ಯಯಂ ।
ನರೈಃ ಪ್ರಶಸ್ಯ ಆಸೀನೈರಾಹುಶ್ಚೈವರ್ತ್ವಿಜೋ ನರಃ ॥

(ಬೃ. ದೇ ೩-೨ ರಿಂದ ೩)

ಕೆಲವರು ನರಾಶಂಸನನ್ನು ಅಗ್ನಿಯೆಂದು ಹೇಳುತ್ತಾರೆ. ಯಜ್ಞದಲ್ಲಿ ನರರು ಸೇರಿ ಪ್ರಶಂಸಿಸುವುದರಿಂದ ಯಜ್ಞವೆಂದೇ ಹೇಳುತ್ತಾರೆ. ಯಜ್ಞದಲ್ಲಿ ಸೇರಿರತಕ್ಕ ನರರಿಂದ ಪ್ರಶಂಸಿಸಲ್ಪಡುವುದರಿಂದ **ನರಾಶಂಸನೆಂದರೆ** ಅಗ್ನಿಯೇ ಎಂದು ಇನ್ನು ಕೆಲವರ ಮತ. ಮೂರನೆಯದು ಮೊದಲನೆಯ ಮತ್ತು ಎರಡನೆಯ ಮತಗಳ ಸಮನ್ವಯವಾಗಿದೆ. ಈ ಎರಡು ಅರ್ಥಗಳ ಜೊತೆಗೆ ಸಾಯಣರು ಮೂರನೆಯ ಅರ್ಥವನ್ನೂ ಹೇಳಿರುತ್ತಾರೆ. ಋ. ಸಂ. ೧-೧೮-೯ನೇ ಋಕ್ಕನ್ನು ಭಾಷ್ಯದಲ್ಲಿ ವಿವರಿಸುವಾಗ

**ನರಾಶಂಸಮೇತನ್ನಾಮಕಂ ದೇವವಿಶೇಷಂ ಯದ್ವಾ ಅವಯವಾರ್ಥವ್ಯುತ್ಪತ್ತ್ಯಾ ಸದಸಸ್ಪತಿ-ದೇವತಾಪರೋಽಯಂ ಶಬ್ದಃ । ಅತ್ರ ಅಗ್ನಿವತ್ ಸದಸಸ್ಪತೇರಪಿ ನರೈಃ ಶಸ್ಯಮಾನತ್ವಾತ್ ನರಾಶಂಸತ್ವಂ । ಏತಮೇವಾಭಿಪ್ರಾಯಂ ಹೃದಿ ನಿಧಾಯ ಬ್ರಾಹ್ಮಣಮೇವಮಾಮ್ನಾ-ಯತೇ—ಪ್ರಜಾ ವೈ ನರೋ ವಾಕ್ ಶಂಸಃ ।** (ಐ. ಬ್ರಾ. ೬-೨೭) **ಇತಿ ।**

**ನರಾಶಂಸನೆಂದರೆ** ಈ ಹೆಸರಿನ ದೇವತಾವಿಶೇಷನೆಂದಾಗಲಿ ಅಥವಾ **ಸದಸಸ್ಪತಿಯೆಂದಾಗಲಿ** ಅರ್ಥವಾಗಬಹುದು. **ಸದಸಸ್ಪತಿಯೂ** ನರರಿಂದ ಸ್ತುತಿಸಲ್ಪಡುವುದರಿಂದಲೂ ಈ ಭಾವವು **ಐತರೇಯಬ್ರಾಹ್ಮಣದಿಂದ** ಉದಾಹೃತವಾಗಿರುವ ವಾಕ್ಯವು ಸೂಚಿಸುವುದರಿಂದಲೂ ಸಹ ಈ ಅರ್ಥವಾಗಬಹುದು ಎಂದು ಮೂರನೆಯ ಅರ್ಥವನ್ನೂ ತೋರಿಸಿದ್ದಾರೆ. ಆದರೆ ಋಕ್ಸಂಹಿತೆಯಲ್ಲೆಲ್ಲಾ **ಅಗ್ನಿಪರ್ಯಾಯವಾಗಿಯೇ** ಇದೆಯೆಂದು ಹೇಳಿದರೆ ತಪ್ಪಾಗಲಾರದು.

**ನರಾಶಂಸಃ ಪ್ರತಿ ಧಾಮಾನ್ಯಂಜನ್ ತಿಸ್ರೋ ದಿವಃ ಪ್ರತಿ ಮಹ್ನಾ ಸ್ವರ್ಚಿಃ ।**
**ಘೃತಪ್ರುಷಾ ಮನಸಾ ಹವ್ಯಮುಂದನ್ಮೂರ್ಧನ್ಯಜ್ಞಸ್ಯ ಸಮನಕ್ತು ದೇವಾನ್ ॥**

(ಋ. ಸಂ. ೨-೩-೨)

ಇತ್ಯಾದಿ ಋಕ್ಕುಗಳಲ್ಲೂ ಪ್ರಕೃತವಾದ ಋಕ್ಕಿನಲ್ಲೂ **ಅಗ್ನಿಯೆಂದೇ** ಅರ್ಥವಾಗುತ್ತದೆ.

ಹತ್ತು **ಆಪ್ರೀ** ಸೂಕ್ತಗಳಲ್ಲೂ **ನರಾಶಂಸನು** ಆರು ಸಲವೂ, **ತನೂನಪಾತ್** ಎಂಬ ದೇವತೆಯು ಆರು ಸಲವೂ ಉದ್ದೇಶಿಸಲ್ಪಟ್ಟಿದ್ದಾರೆ. ಮೊದಲನೇ ಮಂಡಲದಲ್ಲಿ ಎರಡು ಸೂಕ್ತಗಳಲ್ಲೂ ಇಬ್ಬರನ್ನೂ ಒಟ್ಟಿಗೆ ಉದ್ದೇಶಿಸಿದೆ. ಈ ಎರಡು ದೇವತೆಗಳ ವಿಚಾರದಲ್ಲಿ ವಿಪ್ರತಿಪತ್ತಿಯು ಯಾವ ರೀತಿ ಬೆಳೆಯಿತು ಮತ್ತು ಶಾಸ್ತ್ರಜ್ಞರು ಹೇಗೆ ಈ ವಿಷಯವನ್ನು ಚರ್ಚಿಸಿದ್ದಾರೆ ಎಂಬುದು ವಿಮರ್ಶಾರ್ಹವಾದುದು.

**ಪ್ರಯಾಜ** ತತ್ವದ ನಿಯಮವನ್ನೇ ಮುಖ್ಯವಾಗಿ ಗಮನಿಸಿದರೆ ಈ ಎರಡು ದೇವತೆಗಳನ್ನು ಅಪ್ಪಾಸಿಸುವುದು ಅವಶ್ಯವಾಗುವುದಿಲ್ಲ. ಏಕೆಂದರೆ ಪ್ರತಿ ಋಕ್ಕಿನಲ್ಲಿಯೂ ಬೇರೆ ಬೇರೆ ದೇವತೆಗಳನ್ನುದ್ದೇಶಿಸಬೇಕು ಮತ್ತು

ಈ ಎರಡು ದೇವತೆಗಳೂ ಅಗ್ನಿಯ ಅಂಶಗಳು, ಮೊದಲನೇ ಋಕ್ಕಿನಲ್ಲಿ ಅಗ್ನಿಯನ್ನು ಆಹ್ವಾನಿಸಿದ್ದರಿಂದ ಇವರನ್ನೂ ಉಪ್ಪೇಕ್ಷಿಸಿದಂತೆಯೇ ಆಯಿತು. ಹಾಗ್ (Haug) ಎಂಬ ಪಂಡಿತನು (ಐತರೇಯಬ್ರಾಹ್ಮಣದ ಪರಿವರ್ತನಕಾರನು) ಇವರನ್ನು ಅಗ್ನಿಭಿನ್ನವಾದ ಎರಡು ದೇವತೆಗಳೆಂದು ಹೇಳಿದ್ದಾನೆ, ಆದರೆ ಆ ಅಭಿಪ್ರಾಯವು ಸಾಧುವಾಗಿಲ್ಲ. ಇಲ್ಲಿ ಗಮನಾರ್ಹವಾದ ಇನ್ನೊಂದಂಶವೇನೆಂದರೆ, **ತನೂನಪಾತ್** ಎಂಬ ಪದವು ಆಪ್ರೀಸೂಕ್ತಗಳಲ್ಲೆಲ್ಲಾ ಸಂಬೋಧನಾ ವಿಭಕ್ತಿಯಲ್ಲಿಯೂ **ನರಾಶಂಸ** ಪದವು ಭಿನ್ನವಿಭಕ್ತಿಗಳಲ್ಲಿಯೂ ಇರುವುದರಿಂದಲೂ ಮತ್ತು **ತನೂನಪಾತ್** ದೇವತೆಗೆ **ಕವಿ, ಸುಜಿಹ್ವ** ಈ ವಿಶೇಷಣಗಳು ಮಾತ್ರವಿದ್ದು **ನರಾಶಂಸನಿಗೆ ಪ್ರಿಯ, ಶುಚಿ, ದೇವ, ದೇವತಮ** ಇತ್ಯಾದಿ ವಿಶೇಷಣಗಳೆಲ್ಲಾ ಇರುವುದರಿಂದಲೂ ಸಹ **ನರಾಶಂಸನು** ಕವಿಗಳಿಗೆ ಪರಿಚಿತನಾದವನೂ, ಪಾರ್ಥಿವಾಗ್ನಿಯ ರೂಪವೇ ಆದ್ದರಿಂದ ಸಮ್ಮುಖನಾಗಿರುವವನೂ ಆಗಿ **ತನೂನಪಾತನು** ಅಷ್ಟು ಸನ್ನಿಹಿತವಾಗದವನೂ, ಸಾಕ್ಷಾತ್ಪ್ರತ್ಯಕ್ಷಕ್ಕೆ ಗೋಚರನಾಗದವನೂ, ಕೇವಲ ಯಜಮಾನರ ಪ್ರಾರ್ಥನೆಯನ್ನು ಮನ್ನಿಸಿ ದೇವತೆಗಳಿಗೆ ಹವಿಸ್ಸನು ವಹಿಸುವವನೂ ಆಗಿರಬೇಕೆಂದು ಕೆಲವು ಪಾಶ್ಚಾತ್ಯಪಂಡಿತರ ಅಭಿಪ್ರಾಯವಾಗಿರುತ್ತದೆ. ಈ ಅಭಿಪ್ರಾಯಗಳಲ್ಲಿ ಸತ್ಯಾಂಶದ ಜೊತೆಗೆ ಕಲ್ಪನೆಯೂ ಮಿಶ್ರಿತವಾಗಿರುವುದು.

ಮಧುವಿನ ಸಹಾಯದಿಂದ ಯಜ್ಞವನ್ನೇ ಮಧುಪೂರಿತವನ್ನಾಗಿ ಮಾಡುವುದೇ ಈ ಎರಡು ದೇವತೆಗಳ ಮುಖ್ಯ ಕರ್ತವ್ಯವಾಗಿರುವುದು. **ಪ್ರತಿಧಾಮಾನ್ಯಂಜನ್** (೨-೩-೨); ಇತ್ಯಾದಿ ವಿಶೇಷಣಗಳಿಂದ ನರಾಶಂಸನ ಯಜ್ಞಭೂಮಿಯನ್ನು ಬೆಳಗಿಸುವವನೆಂದೂ,

**ತನೂನಪಾತ್ಪಥ ಋತಸ್ಯ ಯಾನಾನ್ಮಧ್ವಾ ಸಮಂಜನ್ತ್ಸ್ವದಯಾ ಸುಜಿಹ್ವ ।**
**ಮನ್ಮಾನಿ ಧೀಭಿರುತ ಯಜ್ಞಮೃಂಧನ್ ದೇವತ್ರಾ ಚ ಕೃಣುಹ್ಯಧ್ವರಂ ನಃ ।**
(ಋ. ಸಂ ೧೦-೧೧೦-೨)

ಇತ್ಯಾದಿ ಋಕ್ಕುಗಳಲ್ಲಿ ವರ್ಣಿಸಿರುವಂತೆ **ತನೂನಪಾತನು ಋತದ** ಮಾರ್ಗವನ್ನು ಮಧುಕರವಾಗಿ ಮಾಡುವವನೆಂದೂ ಅವರವರ ಸ್ವರೂಪವನ್ನು ಹೇಳಿದೆ. ಈ ಸ್ವರೂಪವಿಶೇಷಗಳು **ಪ್ರೈಷಸೂಕ್ತದಲ್ಲಿ** ಈ ರೀತಿ ವರ್ಣಿತವಾಗಿವೆ

**ಹೋತಾ ಯಕ್ಷತ್ತನೂನಪಾತಮದಿತೇರ್ಗರ್ಭಂ ಭುವನಸ್ಯ ಗೋಪಾಂ। ಮಧ್ವಾದ್ಯ ದೇವೋ ದೇವೇಭ್ಯೋ ದೇವಯಾನಾನ್ಪಥೋ ಅನಕ್ತು ವೇತ್ವಾಜ್ಯಸ್ಯ ಹೋತರ್ಯಜ ।**
(ತೈ. ಬ್ರಾ. ೩-೬-೨-೨)

**ಹೋತಾ ಯಕ್ಷನ್ನರಾಶಗ್ಂಸಂ ನೃಶಸ್ತ್ರಂ ನೄಗ್ಃಪ್ರಣೇತ್ರಂ । ಗೋಭಿರ್ವಪಾವಾನ್ತ್ಸ್ಯಾದ್ವೀರೈಃ ಶಕ್ತೀವಾನ್ರಥೈಃ ಪ್ರಥಮಯಾವಾ ಹಿರಣ್ಯೈಶ್ಚಂದ್ರೀ ವೇತ್ವಾಜ್ಯಸ್ಯ ಹೋತರ್ಯಜ ।**
(ತೈ. ಬ್ರಾ. ೩-೬-೨-೨)

ಎಂಬ ವಾಕ್ಯಗಳಲ್ಲಿ ತನೂನಪಾತನು ಅದಿತಿಪುತ್ರನೆಂದೂ, ದೇವಪಥವನ್ನು ಬೆಳಗಿಸುವವನೆಂದೂ; ನರಾಶಂಸನು **ಪ್ರಥಮಯಾವನೆಂದೂ** (ಅಗ್ರಯಾವಾ ಋ. ಸಂ. ೧೦-೭೦-೨) ಎಂದರೆ ದೇವತೆಗಳ ಪ್ರತಿನಿಧಿಯಾಗಿ ಮಾನವರನ್ನು ಕುರಿತು ಪ್ರಥಮತಃ ಬರತಕ್ಕವನೆಂದೂ ಆದುದರಿಂದಲೇ ನರರ ನೇತೃವೆಂದೂ ವರ್ಣಿತವಾಗಿದೆ. ಐತರೇಯ ಬ್ರಾಹ್ಮಣದಲ್ಲಿ.

ತನೂನಪಾತಂ ಯಜತಿ ಪ್ರಾಣೋ ವೈ ತನೂನಪಾತ್ಸ ಹಿ ತನ್ವಃ ಪಾತಿ ಪ್ರಾಣಮೇವ ತತ್ಪ್ರೀಣಾತಿ ಪ್ರಾಣಂ ಯಜಮಾನೇ ದಧಾತಿ ।

(ಐ. ಬ್ರಾ. ೨-೪)

ಎಂಬ ವಾಕ್ಯದಿಂದ ತನೂನಪಾತಿಗೂ ಪ್ರಾಣಕ್ಕೂ ತಾದಾತ್ಮ್ಯವನ್ನು ಹೇಳಿದೆ. ಮತ್ತು,

ನರಾಶಂಸಂ ಯಜತಿ ಪ್ರಜಾ ವೈ ನರೋ ವಾಕ್ಶಂಸಃ ಪ್ರಜಾಂ ಚೈವ ತದ್ವಾಚಂ ಚ ಪ್ರೀಣಾತಿ ಪ್ರಜಾಂ ಚ ವಾಚಂ ಚ ಯಜಮಾನೇ ದಧಾತಿ ।

(ಐ. ಬ್ರಾ. ೨-೪)

ಎಂಬ ವಾಕ್ಯದಿಂದ ನರಾಶಂಸನಿಗೂ ಪ್ರಜೆಗೂ ತಾದಾತ್ಮ್ಯವನ್ನೂ ಹೇಳಿದೆ. ಈ ವಿಧವಾದ ಅಭಿಪ್ರಾಯಗಳ ವೈವಿಧ್ಯವನ್ನು ವಿಮರ್ಶಿಸುತ್ತಾ Haug ಎಂಬ ಪಂಡಿತನು ಈ ರೀತಿ ಹೇಳಿದ್ದಾನೆ.

"It clearly follows from this distinction between the invocation of these two deities. both representing a particular kind of Agni that certain gotras regarded Tanunapet as their tutelary deity or rather as one of their deified ancestors."

ವ್ಯಾಕರಣಪ್ರಕ್ರಿಯಾ

**ಪಾವಕಃ**—ಪಾವಯತಿ ಇತಿ ಪಾವಕಃ ಕರ್ತರಿಯಲ್ಲಿ ಣ್ವುಲ್ ಪ್ರತ್ಯಯ **ಅಚೋಞ್ಣಿತಿ** ಎಂಬುದರಿಂದ ಧಾತುವಿನ ಇಕಿಗೆ ವೃದ್ಧಿ. **ಯುವೋರನಾಕೌ** (ಪಾ. ಸೂ. ೭-೧-೧) ಎಂಬುದರಿಂದ ಪ್ರತ್ಯಯಕ್ಕೆ ಅಕಾದೇಶ. ಉಂಛಾದಿಯಲ್ಲಿ ಸೇರಿರುವುದರಿಂದ ಅಂತೋದಾತ್ತವಾಗುತ್ತದೆ.

**ಮಧ್ವಾ**—ಮಧು ಶಬ್ದ ಆದ್ಯುದಾತ್ತವಾಗಿರುತ್ತದೆ. ಇದಕ್ಕೆ ತೃತೀಯಾ ಏಕವಚನ ಪರವಾದಾಗ **ಆಗಮಾನುಶಾಸನಮನಿತ್ಯಮ್** ಎಂಬ ವಚನದಿಂದ ನುಮಾಗಮ ಬರುವುದಿಲ್ಲ. **ಜಸಾದಿಷು ಛಂದಸಿ ವಾ ವಚನಮ್** ಎಂಬ ವಚನದಿಂದ ನಾಭಾವವೂ ಬರುವುದಿಲ್ಲ. ಆಗ ಯಣಾದೇಶ.

**ಮಿಮಿಕ್ಷತಿ**—ಮಿಹ ಸೇಚನೇ ಧಾತು. **ಧಾತೋಃ ಕರ್ಮಣಃ ಸಮಾನ**—(ಪಾ. ಸೂ. ೩-೧-೭) ಎಂಬುದರಿಂದ ಸನ್. **ಸನ್ಯಙೋಃ** (ಪಾ. ಸೂ. ೬-೧-೯) ಎಂಬುದರಿಂದ ಧಾತುವಿಗೆ ದ್ವಿತ್ವ. ಅಭ್ಯಾಸದಲ್ಲಿ ಆದಿಹಲ್ ಶೇಷ. **ಹೋಢಃ** ಎಂಬುದರಿಂದ ಧಾತು ಹಕಾರಕ್ಕೆ ಢತ್ವ. **ಷಢೋಃ ಕಃ ಸಿ** (ಪಾ. ಸೂ. ೮-೨-೪೧) ಎಂಬುದರಿಂದ ಢಕಾರಕ್ಕೆ ಕತ್ವ. ಕಕಾರವನ್ನು ನಿಮಿತ್ತೀಕರಿಸಿ ಪ್ರತ್ಯಯಸಕಾರಕ್ಕೆ ಷತ್ವ. ಅತಿಙಂತದ ಪರದಲ್ಲಿ ಬಂದುದರಿಂದ ನಿಘಾತ ಸ್ವರ ಬರುತ್ತದೆ.

**ನರಾಶಂಸಮ್**—ನರ ಶಬ್ದವು ನೃ ನಯೇ ಧಾತುವಿಗೆ ಅಪ್ ಪ್ರತ್ಯಯ ಬಂದು ಸಿದ್ಧವಾಗಿದೆ. ಶಂಸಂತಿ ಅಸ್ಮಿನ್ ಇತಿ ಶಂಸಃ **ಹಲಶ್ಚ** (ಪಾ. ಸೂ. ೩-೩-೧೨೧) ಎಂಬುದರಿಂದ ಘಞ್ ಪ್ರತ್ಯಯ. ನರಾಣಾಂ ಶಂಸಃ ನರಾಶಂಸಃ ತಮ್. **ಉಭೇ ವನಸ್ಪತ್ಯಾದಿಷು ಯುಗಪತ್** (ಪಾ. ಸೂ. ೬-೨-೧೪೦) ಎಂಬುದರಿಂದ ಪೂರ್ವೋತ್ತರ ಪದಗಳಿಗೆ ಪ್ರಕೃತಿಸ್ವರ ಬರುತ್ತದೆ.

**ತ್ರಿಃ**—**ದ್ವಿತ್ರಿಚತುರ್ಭ್ಯಃ ಸುಚ್** (ಪಾ. ಸೂ. ೫-೪-೧೮) ಎಂಬುದರಿಂದ ಕ್ರಿಯಾಭ್ಯಾವೃತ್ತಿ ತೋರುವಾಗ ಸುಚ್ ಪ್ರತ್ಯಯ. ಸಕಾರಕ್ಕೆ ರುತ್ವ ವಿಸರ್ಗ.

ದಿವಃ—ಊಡಿದಂಪದಾದಿ—(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ

ಯಜ್ಞಿಯಃ—ಯಜ್ಞಾಯ ಅರ್ಹಃ ಯಜ್ಞಿಯಃ **ಯಜ್ಞರ್ತ್ವಿಗ್ಭ್ಯಾಂ ಘಖಞೌ** (ಪಾ. ಸೂ. ೫-೧-೭೧) ಎಂಬುದರಿಂದ ಘ ಪ್ರತ್ಯಯ. **ಆಯನೇಯೀನೀ**—(ಪಾ. ಸೂ. ೭-೧-೨) ಎಂಬುದರಿಂದ ಅದಕ್ಕೆ ಇಯಾದೇಶ. **ಯಸ್ಯೇತಿ ಚ** ಎಂಬುದರಿಂದ ಅಕಾರ ಲೋಪ. ಪ್ರತ್ಯಯದ ಆದ್ಯುದಾತ್ತಸ್ವರದಿಂದ ಇಕಾರ ಉದಾತ್ತವಾಗುತ್ತದೆ. ॥೩॥

———— :o: ————

ಸಂಹಿತಾಪಾಠಃ

ಈಳಿತೋ ಅಗ್ನ ಆ ವಹೇಂದ್ರಂ ಚಿತ್ರಮಿಹ ಪ್ರಿಯಂ ।
ಇಯಂ ಹಿ ತ್ವಾ ಮತಿರ್ಮಮಾಚ್ಛಾ ಸುಜಿಹ್ವ ವಚ್ಯತೇ ॥ ೪ ॥

ಪದಪಾಠಃ

ಈಳಿತಃ । ಅಗ್ನೇ । ಆ । ವಹ । ಇಂದ್ರಂ । ಚಿತ್ರಂ । ಇಹ । ಪ್ರಿಯಂ ।
ಇಯಂ । ಹಿ । ತ್ವಾ । ಮತಿಃ । ಮಮ । ಅಚ್ಛ । ಸುऽಜಿಹ್ವ । ವಚ್ಯತೇ ॥ ೪ ॥

ಸಾಯಣಭಾಷ್ಯಂ

ಹೇ ಅಗ್ನೇ ಈಳಿತಃ ಸರ್ವೈಃ ಸ್ತುತ್ಯ ಇತ್ಥಂಭೂತಸ್ತ್ವಮಿಹಾಸ್ಮಿನ್ಯಜ್ಞೇ ಚಿತ್ರಂ ಚಾಯನೀಯಂ ಪ್ರಿಯಂ ಪ್ರೀಣಯಿತಾರಮಸ್ಮಾನ್ ಹವಿಃ ಸ್ವೀಕರ್ತುಂ ವಾ ಪ್ರೀತಿಯುಕ್ತಮಿಂದ್ರಮಾ ವಹ । ಆಹ್ವಯ । ಹೇ ಸುಜಿಹ್ವ ಘೃತಪಾನೇನ ಶೋಭನಜ್ವಾಲ ಇಯಂ ಮಮ ಮತಿರ್ಮನನಸಾಧನಾ ಸ್ತುತಿರೂಪಾ ವಾಕ್ ತ್ವಾ ತ್ವಾಮಚ್ಛಾಭಿಮುಖ್ಯೇನ ಪ್ರಾಪ್ತುಂ ವಚ್ಯತೇ । ಮತಿರೇವಾಸ್ಮದೀಯೋಚ್ಯತೇ ॥ ಹಿಃ ಪೂರಣಾರ್ಥಃ । ವಚೇರ್ಯಕಿ ಸಂಪ್ರಸಾರಣಾಚ್ಚೇತಿ ಪೂರ್ವರೂಪಸ್ಯ ವಾ ಛಂದಸೀತಿ ವಿಕಲ್ಪಿತತ್ವಾದಭಾವೇ ಯಣ್ ॥ ಅತ್ರ ಪುರೋಡಾಶಾದೀಂದ್ರಭಿಮಾನಿಯಜ್ಞ ಪರತಯಾ ವಾ ವ್ಯಾಖ್ಯೇಯಂ । ಏವಮುತ್ತರತ್ರ ಯಜ್ಞಾಂಗೈರ್ಯಜ್ಞ-ಸಂಬಂಧಿದೇವತಾಭಿಶ್ಚ ಯಜ್ಞ ಏವೋಚ್ಯತ ಇತಿ ತತ್ಪರತ್ವೇನ ವ್ಯಾಖ್ಯೇಯಂ ॥

ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ । **ಈಳಿತಃ**—(ಸಕಲರಿಂದಲೂ ಸ್ತುತ್ಯನಾಗಿ) ಇಳನೆಂದು ಪ್ರಸಿದ್ಧನಾದ ನೀನು। **ಇಹ**— ಈ ಯಜ್ಞದಲ್ಲಿ । **ಚಿತ್ರಂ**— ವಿಸ್ಮಯಕರನಾದವನೂ । **ಪ್ರಿಯಂ**— ಪ್ರೀತಿಯುಕ್ತನಾದವನೂ ಆದ । **ಇಂದ್ರಂ**—ಇಂದ್ರನನ್ನು । **ಆ ವಹ**—ಕರೆದುಕೊಂಡು ಬಾ । **ಸುಜಿಹ್ವ**—(ಘೃತಪಾನದಿಂದ) ಶ್ರೇಷ್ಠವಾದ ಜ್ವಾಲೆಯುಳ್ಳ ಅಗ್ನಿಯೇ । **ಇಯಂ ಹಿ ಮಮ ಮತಿಃ**—ಧ್ಯಾನಪೂರ್ವಕವಾದ ಈ ನನ್ನ ಸ್ತೋತ್ರರೂಪವಾದ ವಾಕ್ಕು । **ತ್ವಾ ಅಚ್ಛ**—ನಿನ್ನ ಅಭಿಮುಖವಾಗಿ । **ವಚ್ಯತೇ**—ಪಠಿತವಾಗುತ್ತದೆ.

॥ ಭಾವಾರ್ಥ ॥

ಎಲೈ ಅಗ್ನಿಯೇ, ಸಕಲರಿಂದಲೂ ಸ್ತುತನಾಗಿ ಇಳನೆಂದು ಪ್ರಸಿದ್ಧನಾದ ನೀನು ನಮ್ಮ ಈ ಯಜ್ಞದಲ್ಲಿ ವಿಸ್ಮಯಕರನೂ, ಪ್ರೀತಿಯುಕ್ತನೂ ಆದ ಇಂದ್ರನನ್ನು ಕರೆದುಕೊಂಡು ಬಾ. ಘೃತಪಾನದಿಂದ ಪ್ರಜ್ವಲಿತವಾದ ಜ್ವಾಲೆಗಳುಳ್ಳ ಎಲೈ ಅಗ್ನಿಯೇ, ಧ್ಯಾನಪೂರ್ವಕವಾದ ಈ ನನ್ನ ಸ್ತುತಿರೂಪವಾದ ವಾಕ್ಕು ನಿನ್ನ ಅಭಿಮುಖವಾಗಿ ಪಠಿತವಾಗುತ್ತದೆ.

English Translation

Agni, who is Ilita, bring hither Indra, the wonderful, the beloved; this my praise is recited, bright-tongued, before you.

ವಿಶೇಷವಿಷಯಗಳು

**ಈಳಿತಃ—ಸರ್ವೈಃ ಸ್ತುತ್ಯಃ ಇಳ್ ನಾಮಕಃ ತ್ವಂ ।** ಸಕಲರಿಂದಲೂ ಸ್ತುತ್ಯನಾದವನೂ, ಈಳ್ ಎಂಬ ಹೆಸರಿನಿಂದ ಪ್ರಸಿದ್ಧನಾದವನೂ ಆದ ಅಗ್ನಿಯೆಂದು ಅರ್ಥಮಾಡಿದೆ. **ಈಳೆ ಈಟ್ಟೇಃ ಸ್ತುತಿಕರ್ಮಣಃ ; ಇಂಧತೇ ರ್ವಾ ।** ಸ್ತುತ್ಯರ್ಥಕವಾದ **ಈಡ್** ಧಾತುವಿನಿಂದಾಗಲಿ, ಜ್ವಲನಾರ್ಥಕವಾದ **ಇಂದ್** ಧಾತುವಿನಿಂದಾಗಲಿ ನಿಷ್ಪನ್ನವಾಗಬಹುದು. (ನಿ. ೮-೮) ಎಂದು ಈ ಪದದ ನಿರ್ವಚನವನ್ನು ತೋರಿಸಿ ನಿರುಕ್ತಕಾರರು ಋ. ಸಂ. ೧೦-೧೧೦-೩ನೇ ಋಕ್ಕನ್ನು ಉದಹರಿಸಿ ಈ ಪದದ ಸರಿಯಾದ ಅರ್ಥವನ್ನು ವಿವರಿಸಿದ್ದಾರೆ.

ಪ್ರಥಮತಃ, **ಸಮಿಧ್** ಎಂಬ ಪದದಂತೆ ಈ ಪದಕ್ಕೂ ಕೂಡ ಪ್ರತ್ಯೇಕವಾದ ದೇವತಾರೂಪವಾದ ನಿರ್ದೇಶವಿಲ್ಲದೆ **ಅಗ್ನಿಗೆ** ವಿಶೇಷಣವಾಗಿ ಮಾತ್ರ ಉಪಯೋಗವಿದ್ದಿರುವಂತೆ ತೋರುತ್ತದೆ. ಯಾಗನಿರ್ವಹಣಕಾಲದಲ್ಲಿ **ಅಗ್ನಿಯ** ಸಹಾಯವೂ ನೆರವೂ ಸಂಪೂರ್ಣವಾಗಿ ಆಗಬೇಕಾಗಿದ್ದುದರಿಂದ ಅವನು ಸ್ವಭಾವವಾಗಿಯೇ ಸ್ತುತ್ಯನಾದನು. ಪ್ರಾರಂಭದಲ್ಲಿ ಅಗ್ನಿಯು (೧) **ಸಮಿದ್ಧನಾಗಬೇಕು.** ಅನಂತರ (೨) **ತನೂನಪಾತ್** ಅಥವಾ **ನರಾಶಂಸ** ಎಂಬ ನಾಮಧೇಯದಿಂದ ಯಾಗದ ಹವಿಸ್ಸುಗಳನ್ನು ಮಧುಪೂರಿತಗಳಾಗುವಂತೆ ಮಾಡಬೇಕು. ಅನಂತರ ದೇವತೆಗಳನ್ನು ಅವನು ಯಾಗಕ್ಕೆ ಕರೆತರಬೇಕು. ಈ ಕಾರ್ಯಕ್ಕೆ ಅವನು **ಈಡ್ಯನಾಗಲೇಬೇಕು.** ಆದುದರಿಂದ ಈ ಸನ್ನಿವೇಶದಲ್ಲಿ ಅವನು ಯಜಮಾನರಿಂದ (೩) **ಈಳಿತನಾಗಿದ್ದಾನೆ.** (ಪ್ರಾರ್ಥಿಸಲ್ಪಡುತ್ತಾನೆ).

ಆಪ್ರೀಸೂಕ್ತಗಳಲ್ಲಿ **ಈಡ್** ಧಾತುನಿಷ್ಪನ್ನವಾದ ಈ ಪದವು ಎಂಟು ಕಡೆಗಳಲ್ಲಿ **ಸ್ತುತನಾದವನು** ಅಥವಾ **ಸ್ತುತ್ಯನಾದವನು** ಎಂದು ವಿಶೇಷಣವಾಗಿಯೂ, ಮತ್ತು ಒಂದುಕಡೆ ಅಗ್ನಿಯ ದೌತ್ಯವನ್ನು ತೋರಿಸತಕ್ಕ ವಿಶೇಷಣವಾಗಿಯೂ ಒಟ್ಟು ಒಂಭತ್ತು ಕಡೆಗಳಲ್ಲಿ ಅಗ್ನಿಪರವಾಗಿ ಉಪಯೋಗಿಸಲ್ಪಟ್ಟಿದೆ. ಮತ್ತು ವಿಶ್ವಾಮಿತ್ರಕೃತವಾದ,

**ಪ್ರ ದೀಧಿತಿರ್ವಿಶ್ವವಾರಾ ಜಿಗಾತಿ ಹೋತಾರಮಿಳಃ ಪ್ರಥಮಂ ಯಜಧ್ಯೈ ।**
**ಅಚ್ಛಾ ನಮೋಭಿರ್ವೃಷಭಂ ವಂದಧ್ಯೈ ಸ ದೇವಾನ್ಯಕ್ಷದಿಷಿತೋ ಯಜೀಯಾನ್ ।**
(ಋ. ಸಂ. ೩-೪-೩)

ಎಂಬ ಆಪ್ರೀಸೂಕ್ತದ ಋಕ್ಕಿನಲ್ಲಿ ಮಾತ್ರ ಹವಿಸ್ಸಿನ ರೂಪದ ಅನ್ನವೆಂದರ್ಥವಾಗುತ್ತದೆ. ಅದೂ ಸಹ ಆ ಋಕ್ಕಿನ ಮುಖ್ಯದೇವತೆಯಾದ ಅಗ್ನಿಯೊಂದಿಗೆ ಸಂಬಂಧವನ್ನು ಹೊಂದಿದೆ. ಈ ಅರ್ಥವು ಆಪ್ರೀಸೂಕ್ತದ ಸಂಪ್ರದಾಯದಿಂದ ಭಿನ್ನವಾಗಿದೆ. ಆದರೆ ಪ್ರೈಷಸೂಕ್ತದಲ್ಲಿ ಮಾತ್ರ ಅಗ್ನಿಪರ್ಯಾಯವಾಗಿಯೇ ಇದೆ.

**ಹೋತಾಯಕ್ಷದಗ್ನಿಮಿಡ ಈಡಿತೋ ದೇವೋ ದೇವಾಗ್ಂ ಆವಕ್ಷದ್ದೂತೋ ಹವ್ಯವಾಡಮೂರಃ ।**
**ಉಪೇಮಂ ಯಜ್ಞಮುಪೇಮಾಂ ದೇವೋ ದೇವಹೂತಿಮವತು ವೇತ್ವಾಜ್ಯಸ್ಯ ಹೋತರ್ಯಜ ।**
(ತೈ. ಬ್ರಾ. ೩-೬-೨-೧)

ಎಂಬ ವಾಕ್ಯಕ್ಕೆ ಭಾಷ್ಯಕಾರರು—**ಇಡೇತ್ಯೇತನ್ನಾಮಕಮಗ್ನಿಂ ತೃತೀಯಪ್ರಯಾಜದೇವಂ** ಎಂದು ಅಗ್ನಿ ಪರ್ಯಾಯನಾಮವೆಂದು ಹೇಳಿದ್ದಾರೆ. **ಐತರೇಯ ಬ್ರಾಹ್ಮಣದಲ್ಲಿ**—

**ಇಳೋ ಯಜತ್ಯನ್ನಂ ವಾ ಇಳೋಽನ್ನಮೇವ ತತ್ಪ್ರೀಣಾತ್ಯನ್ನಂ ಯಜಮಾನೇ ದಧಾತಿ ।**
(ಐ. ಬ್ರಾ. ೨-೪)

**ಇಳಃ** ಎಂದರೆ ಯಾಗದಲ್ಲಿ ಅರ್ಪಿಸತಕ್ಕ ಹವೀರೂಪದ **ಅನ್ನ**ವೆಂದೂ ಈ **ಅನ್ನದ** ಅರ್ಪಣೆಯ ಫಲವಾಗಿ ಯಜಮಾನನಿಗೂ ಅನ್ನಲಾಭವಾಗುವುದೆಂದೂ ಹೇಳಿದೆ.

ಮೇಲೆ ವಿವರಿಸಿರುವಂತೆ, ಯಾಸ್ಕರು ಈ ಪದಕ್ಕೂ **ಇಂಧ್** ಧಾತುವಿಗೂ ಸಂಬಂಧವನ್ನು **ತೋರಿಸಿರುವುದು** ಸರಿಯಾಗಿ ಅರ್ಥವಾಗುವುದಿಲ್ಲ. ಇಲ್ಲಿ ಕಾತ್ಥಕ್ಯರ ಅಭಿಪ್ರಾಯವನ್ನು ಯಾಸ್ಕರು ಹೇಳಿಲ್ಲ. **ಬೃಹದ್ದೇವತೆಯಲ್ಲಿ,**

**ಇಳಸ್ತ್ವೃಷಿಕೃತಂ ರೂಪಂ ಈಡೇಶ್ಚ ಸ್ತುತಿಕರ್ಮಣಃ ।**
**ಇಳಾವಾಂಸ್ತೇನ ವೋಕ್ತೋಽಗ್ನಿರಿಡಿನಾ ವೃದ್ಧಿಕರ್ಮಣಾ ॥**
(ಬೃ. ದೇ. ೩-೪)

ಎಂಬ ವಾಕ್ಯಗಳಿಂದ ಈ ಶಬ್ದವು ಆರ್ಷೇಯವೆಂದೂ, ಅಗ್ನಿಪರ್ಯಾಯನಾಮವೆಂದೂ ತೋರಿಸಿದೆ, ಮತ್ತು **ಇಳಾವಾನ್** ಎಂಬ ಪದವು ಅಗ್ನಿಗೆ ವಿಶೇಷಣವಾಗಿದೆ.

**ಗೋಮಾ ಅಗ್ನೇಽವಿಮಾ ಅಶ್ವೀ ಯಜ್ಞೋ ನೃವತ್ಸಖಾ ಸದಮಿದಪ್ರಮೃಷ್ಯಃ ।**
**ಇಳಾವಾ ಏಷೋ ಅಸುರ ಪ್ರಜಾವಾನ್ದೀರ್ಘೋ ರಯಿಃ ಪೃಥುಬುಧ್ನಃ ಸಭಾವಾನ್ ।**
(ಋ. ಸಂ. ೪-೨-೫)

ಎಂಬ ಋಕ್ಕಿನಲ್ಲಿ **ಇಳಾವಾನ್** ಎಂಬ ಪದವು **ಅಗ್ನಿಗೆ** ವಿಶೇಷಣವಾಗಿರುವುದರಿಂದ ಬೃಹದ್ದೇವತೆಯಲ್ಲಿ ಆ ಅಂಶವನ್ನು ಸೂಚಿಸಿದೆ.

ವಿವರಣೆಗಳಲ್ಲಿ ಈ ರೀತಿ ಸಂಪ್ರದಾಯಭೇದಗಳು ಕಂಡರೂ ಸಹ ಆಪ್ರೀಸೂಕ್ತದಲ್ಲಿ ನಾಲ್ಕನೇ ಸ್ಥಾನವನ್ನು ಹೊಂದಿರುವ **ಅಗ್ನಿದೇವತಾ** ಪರ್ಯಾಯನಾಮವೆಂದು ಒಟ್ಟಿನಲ್ಲಿ ಹೇಳಬಹುದು.

**ಮತಿಃ—ಮನನಸಾಧನಾ ಸ್ತುತಿರೂಪಾ ವಾಕ್ ।**

**ಧ್ಯಾನಾತ್ಮಕವಾದುದೂ, ಸ್ತುತಿರೂಪವಾದುದೂ** ಆದ **ವಾಕ್ಕೆಂದರ್ಥ.**

**ವ್ಯಾಕರಣಪ್ರಕ್ರಿಯಾ**

**ಈಳಿತಃ**—ಈಡ ಸ್ತುತೌ ಧಾತು. ಕರ್ಮಣಿಯಲ್ಲಿ **ನಿಷ್ಠಾ** ಎಂಬುದರಿಂದ ಕ್ತ ಪ್ರತ್ಯಯ. **ಆರ್ಧಧಾತುಕ-ಸ್ಯೇಡ್ವಲಾದೇಃ** ಎಂಬುದರಿಂದ ಇಡಾಗಮ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ವಹ**—ವಹ ಪ್ರಾಪಣೇ ಧಾತು. ಲೋಟ್ ಮಧ್ಯಮಪುರುಷ ಏಕವಚನದಲ್ಲಿ ವಹ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಚಿತ್ರಂ**—ಚಿಞ್ ಚಯನೇ. ಧಾತು. **ಅಮಿಚಿಮಿದಿಶಸಿಭ್ಯಃ ಕ್ತ್ರಃ** (ಉ. ಸೂ. ೪-೬೦೩) ಎಂಬುದರಿಂದ ಕ್ತ್ರ ಪ್ರತ್ಯಯ. ಕಿತ್ತಾದುದರಿಂದ ಗುಣ ನಿಷೇಧ ಬರುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಮತಿಃ**—ಮನು ಅವಬೋಧನೇ. ಧಾತು. **ಸ್ತ್ರಿಯಾಂ ಕ್ತಿನ್** (ಪಾ. ಸೂ. ೩-೩-೯೪) ಎಂಬುದರಿಂದ ಕ್ತಿನ್ ಪ್ರತ್ಯಯ. **ಮಂತ್ರೇವೃಷೇಷಪಚಮನ**-(ಪಾ.ಸೂ. ೩-೩-೯೬) ಎಂಬುದರಿಂದ ಕ್ತಿನ್ ಉದಾತ್ತವಾಗುತ್ತದೆ.

**ಅಚ್ಛಾ**—**ನಿಪಾತಸ್ಯ ಚ** (ಪಾ. ಸೂ ೬-೩-೧೩೬) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

**ಸುಜಿಹ್ವ**—ಶೋಭನಾಃ ಜಿಹ್ವಾಃ ಯಸ್ಯ ಸಃ ಸುಜಿಹ್ವಃ **ಗೋಸ್ತ್ರಿಯೋರುಪಸರ್ಜನಸ್ಯ** ಎಂಬುದರಿಂದ ಸಮಾಸದಲ್ಲಿ ಹ್ರಸ್ವ ಬರುತ್ತದೆ. ಸಂಬುದ್ಧಿಯಲ್ಲಿ **ಆಮಂತ್ರಿತಸ್ಯ ಚ** (ಪಾ. ಸೂ. ೮-೧-೧೯) ಎಂಬುದರಿಂದ ನಿಘಾತ ಸ್ವರ ಬರುತ್ತದೆ.

**ಹಿ**—ಪಾದಪೂರಣೇ ಚಸ್ಮೈತುಹಿ ಎಂಬುದರಿಂದ ಇಲ್ಲಿ ಹಿ ಎಂಬುದು ಪಾದಪೂರಣೆಯಲ್ಲಿ ಬಂದಿದೆ.

**ವಚ್ಯತೇ**—ವಚ ಪರಿಭಾಷಣೇ. ಧಾತು. ಕರ್ಮಣಿಯಲ್ಲಿ ಲಟ್ ಪ್ರಥಮಪುರುಷ ಏಕವಚನದಲ್ಲಿ ತಪ್ರತ್ಯಯ. ಟಿಗೆ ಏತ್ವ. **ಸಾರ್ವಧಾತುಕೇ ಯಕ್** (ಪಾ. ಸೂ. ೩-೧-೬೭) ಎಂಬುದರಿಂದ ಯಕ್. ಸಂಪ್ರಸಾರಣವು ಪ್ರಾಪ್ತವಾದರೆ **ವಾ ಛಂದಸಿ** ಎಂಬುದರಿಂದ ಸಂಪ್ರಸಾರಣವು ಬರುವುದಿಲ್ಲ. ಹಿ ಎಂಬುದರ ಸಂಬಂಧವಿರುವುದರಿಂದ **ಹಿಚ** (ಪಾ. ಸೂ. ೮-೧-೩೪) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ. ಅದುಪದೇಶದ ಪರದಲ್ಲಿ ಲಸಾರ್ವಧಾತುಕ ಬಂದುದರಿಂದ ಅದು ಅನುದಾತ್ತವಾಗುತ್ತದೆ ಆಗ ಯಕ್ ಸ್ವರ ಉಳಿಯುತ್ತದೆ. ॥ ೪ ॥



**ಸಂಹಿತಾಪಾಠಃ**

ಸ್ತೃಣಾನಾಸೋ ಯತಸ್ರುಚೋ ಬರ್ಹಿರ್ಯಜ್ಞೇ ಸ್ವಧ್ವರೇ ।
ವೃಂಜೇ ದೇವವ್ಯಚಸ್ತಮಮಿಂದ್ರಾಯ ಶರ್ಮ ಸಪ್ರಥಃ ॥ ೫ ॥

**ಪದಪಾಠಃ**

ಸ್ತೃಣಾನಾಸಃ । ಯತಽಸ್ರುಚಃ । ಬರ್ಹಿಃ । ಯಜ್ಞೇ । ಸುಽಅಧ್ವರೇ ।
ವೃಂಜೇ । ದೇವವ್ಯಚಃಽತಮಂ । ಇಂದ್ರಾಯ । ಶರ್ಮ । ಸಽಪ್ರಥಃ ॥ ೫ ॥

### ಸಾಯಣಭಾಷ್ಯಂ

ಸ್ವಧ್ವರೇ ಶೋಭನಪ್ರಾಯಣೀಯಾದ್ಯವಾಂತರಯಾಗವತಿ ಯಜ್ಞೇ ಸೋಮಯಾಗೇ ಬರ್ಹಿರ್ದರ್ಭಾನ್ ಸ್ತೃಣಾನಾಸ ಆಸ್ತರಂತೋ ಯತಸ್ರುಚೋ ನಿಯಮಿತಜುಹ್ವಾದಿಪಾತ್ರಾ ಋತ್ವಿಜೋ ದೇವವ್ಯಚಸ್ತಮಮತಿಶಯೇನ ದೇವಗಾಮಿನಂ ಸಪ್ರಥಃ ಸರ್ವತೋ ವಿಸ್ತೀರ್ಣಂ ಶರ್ಮ ಸುಖಸಾಧನಂ ಗೃಹಮಿಂದ್ರಾಯ ವೃಂಜೇ । ವಿವರ್ಜಯಂತಿ । ಸಂಪಾದಯಂತೀತ್ಯರ್ಥಃ ॥

### ಪ್ರತಿಪದಾರ್ಥ

**ಸ್ವಧ್ವರೇ**—ಶ್ರೇಷ್ಠವಾದವೂ, ಪೀಠಿಕಾರೂಪವಾದವೂ ಆದ ಪ್ರಾಯಣೀಯಾದಿ ಯಾಗಗಳಿಂದ ಕೂಡಿದ । **ಯಜ್ಞೇ**—ಈ ಸೋಮಯಾಗದಲ್ಲಿ । **ಬರ್ಹಿಃ**—ದರ್ಭಾಸನಗಳನ್ನು । **ಸ್ತೃಣಾನಾಸಃ** ಹರಡುತ್ತಲೂ । **ಯತಸ್ರುಚಃ**—ಯಜ್ಞಕ್ಕಾಗಿ ಜುಹ್ವಾದಿ ಪಾತ್ರೆಗಳನ್ನು ಹಿಡಿದವರಾಗಿಯೂ ಆದ ಋತ್ವಿಕ್ಕುಗಳು । **ದೇವವ್ಯಚಸ್ತಮಂ**—ದೇವತೆಗಳನ್ನು ಬರಮಾಡಿ ಅತಿಶಯುವಾಗಿ ಆರಾಧಿಸುವುದೂ । **ಸಪ್ರಥಃ**—ವಿಸ್ತೃತವಾದುದೂ । **ಶರ್ಮ**—ಸುಖ ಸಾಧನವಾದುದೂ ಆದ ಯಜ್ಞಗೃಹವನ್ನು । **ಇಂದ್ರಾಯ**—ಇಂದ್ರನಿಗಾಗಿ । **ವೃಂಜೇ**—ಸಿದ್ಧಪಡಿಸುತ್ತಾರೆ.

### ಭಾವಾರ್ಥ

ಶ್ರೇಷ್ಠವಾದವೂ, ಪೀಠಿಕಾರೂಪವುಳ್ಳವೂ ಆದ ಪ್ರಾಯಣೀಯಾದಿ ಯಾಗಗಳಿಂದ ಕೂಡಿದ ಈ ಸೋಮ ಯಾಗದಲ್ಲಿ ಋತ್ವಿಕ್ಕುಗಳು ದರ್ಭಾಸನಗಳನ್ನು ಹರಡಿ ಯಜ್ಞಕ್ಕಾಗಿ ಜುಹ್ವಾದಿ ಪಾತ್ರೆಗಳನ್ನು ಹಿಡಿದಿದ್ದಾರೆ. ಮತ್ತು ದೇವತೆಗಳನ್ನು ಬರಮಾಡಿ ಪದೇಪದೇ ಅವರನ್ನು ಅತಿಶಯವಾಗಿ ಆರಾಧಿಸುವುದೂ, ವಿಸ್ತೃತವಾದುದೂ, ಸುಖ ಸಾಧನವಾದುದೂ ಆದ ಯಜ್ಞಗೃಹವನ್ನು ಇಂದ್ರನಿಗಾಗಿ ಸಿದ್ಧಪಡಿಸುತ್ತಾರೆ.

### English Translation

The priests, bearing ladles, are strewing the sacred grass in this holy sacrifice, to prepare a god-frequented and well-spread abode for Indra.

### ವಿಶೇಷವಿಷಯಗಳು

**ಬರ್ಹಿಃ—ಇಧ್ಮ, ಈಳಃ** ಎಂಬ ಭಾವನೆಗಿಂತ ಈ ಸಾಧನವು ಹೆಚ್ಚು ಮೂರ್ತರೂಪವುಳ್ಳದ್ದಾಗಿದೆ. **ಬರ್ಹಿ** ಯೆಂದರೆ ದರ್ಭಾಸನವೆಂದೇ ಅರ್ಥ. **ದೇವೀಃ ದ್ವಾರಃ** ಎಂದು **ದ್ವಾರಗಳಿಗೆ** ಒಂದು ದೈವಿಕವಾದ ಅಂಶವನ್ನು ಆರೋಪಮಾಡುವಂತೆ **ಬರ್ಹಿಗೆ** ಮಾಡಿಲ್ಲ. ಕೇವಲ ದೇವತೆಗಳ ಆಸನವೆಂಬ ಅರ್ಥವು ಮಾತ್ರ ಸೂಚಿತವಾಗುತ್ತದೆ. ಅದೂ ಅಲ್ಲದೇ, ದೇವತೆಗಳ ಆಗಮನಕ್ಕಾಗಿ **ದ್ವಾರಗಳು** ಇತರ ಸಹಾಯವಿಲ್ಲದೇ ತಾವೇ ತೆರೆದುಕೊಂಡು ದಾರಿಯನ್ನು ಮಾಡಿಕೊಡಬೇಕೆಂದು ಪ್ರಾರ್ಥಿಸಿದೆ. ಅಚೇತನವಾದ ದ್ವಾರಗಳಿಗೆ ದೈವಿಕವಾದ ಶಕ್ತಿಯಿದ್ದ ಹೊರತು ತಮ್ಮಷ್ಟಕ್ಕೆ ತಾವೇ ತೆರೆದುಕೊಂಡು ವಿಶಾಲವಾದ ಮಾರ್ಗವನ್ನು ಮಾಡುವುದಕ್ಕಾಗುವುದಿಲ್ಲ. ಆದರೆ, **ಬರ್ಹಿಯ** ವಿಷಯದಲ್ಲಿ ಮಾತ್ರ ಈ ಶಕ್ತಿಯ ಆರೋಪವಿಲ್ಲ. ಋತ್ವಿಕ್ಕುಗಳು ಇದನ್ನು ಹರಡಬೇಕು. ಕೇವಲ ಈ ಋಕ್ಕಿನಲ್ಲೇ ಅಲ್ಲದೇ, ಆಪ್ರೀಸೂಕ್ತಗಳ ಇತರ ಋಕ್ಕುಗಳಲ್ಲೂ ಸಹ ಋತ್ವಿಗಾದಿಗಳ ಸಹಾಯದಿಂದಲೇ **ಬರ್ಹಿಯ** ಆಸ್ತರಣವಾಗಬೇಕೆಂದು ವಿಶದವಾಗಿ ಹೇಳಿದೆ. ಉದಾಹರಣೆಗೆ—

ಪ್ರಾಚೀನಂ ಬರ್ಹಿರೋಜಸಾ ಸಹಸ್ರವೀರಮಸ್ತೃಣನ್ । ಯತ್ರಾದಿತ್ಯಾ ವಿರಾಜಥ ।
(ಋ. ಸಂ. ೧-೧೮೮-೪)

ಎಂಬ ಋಕ್ಕಿನಲ್ಲಿಯೂ ಹೀಗೆಯೇ ಋ. ಸಂ. ೯-೫-೪ ರಲ್ಲಿ **ಬರ್ಹಿಃ ಪ್ರಾಚೀನಮೋಜಸಾ ಪವಮಾನಃ ಸ್ತೃಣನ್ ಹರಿಃ** । ಎಂದೂ, ಋತ್ವಿಕ್ಕುಗಳು ಬರ್ಹಿಯನ್ನು ಹರಡುತ್ತಾರೆ ಎಂಬ ವರ್ಣನೆಯಿದೆ. ಹೀಗೆಯೇ ಇತರ ಆಪ್ರೀಸೂಕ್ತಗಳ ಋಕ್ಕುಗಳಲ್ಲಿಯೂ ಸಹ ಬರ್ಹಿಯು ಪಾರ್ಥಿವವಾದುದೂ, ಅಚೇತನವಾದುದೂ, ಆದರೂ ದೇವತೆಗಳಿಗೆ ಪವಿತ್ರವಾದ ಸ್ಥಾನರೂಪವಾದುದೂ ಆದ ಸ್ಥಾನವೆಂದು ಹೇಳಿದೆ. **ಪ್ರೈಷ ಸೂಕ್ತದಲ್ಲಿ** ಮಾತ್ರ,

> **ಹೋತಾ ಯಕ್ಷದ್ಬರ್ಹಿಃ ಸುಷ್ಟರೀಮೋರ್ಣಮ್ರದಾ ಅಸ್ಮಿನ್ಯಜ್ಞೇ ವಿ ಚ ಪ್ರ ಚ ಪ್ರಥತಾಗ್ಂ ಸ್ವಾಸಸ್ಥಂ ದೇವೇಭ್ಯಃ । ಏಮೇನದದ್ಯ ವಸವೋ ರುದ್ರಾ ಆದಿತ್ಯಾಃ ಸದಂತು ಪ್ರಿಯ-ಮಿಂದ್ರಸ್ಯಾಸ್ತು ವೇತ್ವಾಜ್ಯಸ್ಯ ಹೋತರ್ಯಜ** ॥
> (ತೈ. ಬ್ರಾ. ೩-೬-೨-೧)

**ಬರ್ಹಿರ್ನಾಮಕಂ ಚತುರ್ಥಪ್ರಯಾಜದೇವಮಗ್ನಿಂ** ಎಂದು ಅಗ್ನಿ ಪರ್ಯಾಯವಾದುದೂ ದೇವತಾತ್ಮಕವಾದುದೂ ಆದ ಆಸನವೆಂದು ಹೇಳಿದೆ. **ಐತರೇಯಬ್ರಾಹ್ಮಣದಲ್ಲಿ,**

> ಬರ್ಹಿರ್ಯಜತಿ, ಪಶವೋ ವೈ ಬರ್ಹಿಃ **ಪಶೂನೇವ ತತ್ಪ್ರೀಣಾತಿ ಪಶೂನ್ಯಜಮಾನೇ ದಧಾತಿ** ।
> (ಐ ಬ್ರಾ. ೨-೪)

ಎಂದು ಹುಲ್ಲುಮೇಯತಕ್ಕದ್ದೂ, ಹುಲ್ಲಿನಿಂದ ಕೂಡಿದುದೂ ಆದ ಪಶುವೆಂದು ಅರ್ಥಮಾಡಿದೆ. ಆದರೆ ಈ ಅರ್ಥಕ್ಕೆ ಕೊಂಚವೂ ಅವಕಾಶವಿಲ್ಲವೆಂದು ತಿಳಿಯುತ್ತದೆ.

ನಿರುಕ್ತಕಾರರು ಬರ್ಹಿಃ **ಪರಿಬರ್ಹಣಾತ್** । ವೇಗವಾಗಿ ಬೆಳೆಯುವುದರಿಂದ ದರ್ಭಕ್ಕೆ ಬರ್ಹಿಯೆಂದು ಹೆಸರೆಂದು ಹೇಳಿದ್ದಾರೆ. (ನಿ. ೮-೮) ಬೃಹದ್ದೇವತೆಯಲ್ಲಿ,

> **ಬರ್ಹಿರೇವಾಯಮಗ್ನಿಸ್ತು ಸರ್ವಂ ಹಿ ಪರಿಬೃಂಹಿತಂ ।**
> **ಅನ್ನೇನ ಯದ್ದುತೋ ವಾ ಸನ್ನಿಧ್ಮೇನ ಪರಿಬೃಂಹಿತಃ ॥**
> (ಬೃ. ದೇ. ೩-೫)

ಸಮಸ್ತವಾದ ಅನ್ನವೂ ತದ್ಭಾಕ್ಷ್ಯವಾದುದರಿಂದಲೂ, ಆಹುತ್ಯನಂತರ ಇಧ್ಮದಿಂದ ಪೂರಿತವಾಗುವುದರಿಂದಲೂ **ಅಗ್ನಿಯೇ ಬರ್ಹಿ** ರೂಪದಲ್ಲಿದ್ದಾನೆ ಎಂದು ತಾದಾತ್ಮ್ಯವನ್ನು ಹೇಳಿದೆ.

ಅನೇಕ ವಿಷಯಗಳಲ್ಲಿ ಬೃಹದ್ದೇವತಾಕಾರರು ನಿರುಕ್ತವಾಕ್ಯಗಳನ್ನನುಸರಿಸಿದ್ದರೂ ಸಹ ಈ ಸಂದರ್ಭದಲ್ಲಿ ಕೊಂಚ ವ್ಯತ್ಯಾಸವನ್ನು ತೋರಿಸಿ, ನಿರುಕ್ತಕಾರರು ಕೇವಲ ದೇವತೆಗಳ ಆಸನವಾದ ಬರ್ಹಿಯೆಂದು ಹೇಳಿರುವುದನ್ನು ಇವರು ದೇವತಾತ್ಮಕವಾದುದೂ ಅಗ್ನಿ ಪರ್ಯಾಯವಾದುದೂ ಆದ ಆಸನವೆಂದು ಅರ್ಥಮಾಡಿದ್ದಾರೆ.

**ಸ್ತೃಣಾನಾಸಃ—ಆಸ್ತರಂತೆ** । ಹರಡುವವರಾಗಿ,

**ಸಪ್ರಥಃ—ಸಪ್ರಥಾಃ ಸರ್ವತಃ ಪೃಥುಃ** । ಸುತ್ತಲೂ ವಿಸ್ತೃತವಾಗಿ ಹರಡಿರುವುದೆಂದರ್ಥವೆಂದು ನಿರುಕ್ತಕಾರರು ವಿವರಿಸಿ (ನಿ ೬-೮).

ತ್ವಮಗ್ನೇ ಸಪ್ರಥಾ ಅಸಿ ಜುಷ್ಟೋ ಹೋತಾ ವರೇಣ್ಯಃ । ತ್ವಯಾ ಯಜ್ಞಂ ವಿತನ್ವತೇ ।
(ಋ. ಸಂ. ೫-೧೩-೪)

ಎಂಬ ಋಕ್ಕನ್ನು ವಿವರಿಸಿ ಅಲ್ಲಿ **ಸಪ್ರಥಾಃ** ಎಂಬ ಪದದ ಅರ್ಥವನ್ನು ತೋರಿಸಿದ್ದಾರೆ. ಅದರಂತೆ ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಎಲ್ಲಾ ಕಡೆಯೂ ವಿಶಾಲವಾಗಿ ಹರಡಿ ದೇವತೆಗಳಿಗೆ ಸುಖಸಾಧನವಾದ ಯಜ್ಞಗೃಹಕ್ಕೆ ವಿಶೇಷಣವಾಗಿದೆ.

**ಯತಸ್ರುಚಃ**—**ಭಾರತಾಃ, ವೃಕ್ತಬರ್ಹಿಷಃ, ಯತಸ್ರುಚಃ** ಇತ್ಯಾದಿ ಋತ್ವಿಜ್ನಾಮಗಳಲ್ಲಿ ಪಠಿತವಾಗಿವೆ. ಯಜ್ಞಕ್ಕಾಗಿ ಜುಹ್ವಾದಿಪಾತ್ರೆಗಳನ್ನು ಹಿಡಿದು ಆಹುತ್ಯರ್ಪಣಕ್ಕೆ ಸಿದ್ಧರಾಗಿರುವ ಋತ್ವಿಕ್ಕುಗಳೆಂದರ್ಥ.

ವ್ಯಾಕರಣಪ್ರಕ್ರಿಯಾ

**ಸ್ತೃಣಾನಾಸಃ**—ಸ್ತ್ರೃಞ್ ಆಚ್ಛಾದನೇ. ಧಾತು. ಕ್ರ್ಯಾದಿ. ಲಡರ್ಥದಲ್ಲಿ ಶಾನಚ್ ಪ್ರತ್ಯಯ. **ಕ್ರ್ಯಾದಿಭ್ಯಃ ಶ್ನಾ** (ಪಾ. ಸೂ ೩-೧-೮೧) ಎಂಬುದರಿಂದ ಶ್ನಾ ವಿಕರಣ. **ಪ್ವಾದೀನಾಂ ಹ್ರಸ್ವಃ** (ಪಾ. ಸೂ. ೭-೩-೮೦) ಎಂಬುದರಿಂದ ಧಾತುವಿಗೆ ಹ್ರಸ್ವ. ಋಕಾರದ ಪರದಲ್ಲಿರುವುದರಿಂದ ಣತ್ವ. ಪ್ರತ್ಯಯವು ಚಿತ್ತಾದುದರಿಂದ ಅಂತೋದಾತ್ತವಾಗುತ್ತದೆ. ಜಸ್ ಪರವಾದಾಗ **ಆಜ್ಜಸೇರಸುಕ್** (ಪಾ. ಸೂ. ೭-೧-೫೦) ಎಂಬುದರಿಂದ ಅದಕ್ಕೆ ಅಸುಕಾಮ. ಸಕಾರಕ್ಕೆ ರುತ್ವ ವಿಸರ್ಗ.

**ಯತಸ್ರುಚಃ**—ಯತಾಃ ಸ್ರುಚಃ ಯೈಸ್ತೇ ಯತಸ್ರುಚಃ **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್** (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ. ಪ್ರಥಮಾ ಬಹುವಚನಾಂತರೂಪ.

**ಸ್ವಧ್ವರೇ**—ಶೋಭನಃ ಅಧ್ವರಃ ಯಸ್ಮಿನ್ ಸಃ ಸ್ವಧ್ವರಃ. **ನಞ್ಸುಭ್ಯಾಮ್** (ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದ ಅಂತೋದಾತ್ತಸ್ವರ ಬರುತ್ತದೆ. ಸಪ್ತಮೀ ಏಕವಚನಾಂತರೂಪ

**ವೃಞ್ಜೇ**—ವೃಜೀ ವರ್ಜನೇ. ಧಾತು. ಅದಾದಿ. ಇದಿತ್ತಾದುದರಿಂದ ನುಮಾಗಮ. ಲಟ್ ಪ್ರಥಮಪುರುಷ ಬಹುವಚನದಲ್ಲಿ ವ್ಯತ್ಯಯದಿಂದ ಬಹುವಚನಕ್ಕೆ ಏಕವಚನ ತ ಪ್ರತ್ಯಯ. ಟಿಗೆ ಏತ್ವ. **ಲೋಪಸ್ತ ಆತ್ಮನೇಪದೇಷು** (ಪಾ. ಸೂ. ೭-೧-೪೧) ಎಂಬುದರಿಂದ ಪ್ರತ್ಯಯ ತಕಾರಕ್ಕೆ ಲೋಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಸಪ್ರಥಃ**—ಪ್ರಥ ಪ್ರಖ್ಯಾನೇ ಧಾತು. **ಸರ್ವಧಾತುಭ್ಯ ಅಸುನ್** ಎಂಬುದರಿಂದ ಅಸುನ್ ಪ್ರತ್ಯಯ. ಪ್ರಥಸಾ ಸಹ ವರ್ತತ ಇತಿ ಸಪ್ರಥಃ-**ತೇನ ಸಹೇತಿ ತುಲ್ಯಯೋಗೇ** (ಪಾ. ಸೂ. ೨-೨-೨೮) ಎಂಬುದರಿಂದ ಸಮಾಸ. **ವೋಪಸರ್ಜನಸ್ಯ** (ಪಾ. ಸೂ. ೬-೩-೮೨) ಎಂಬುದರಿಂದ ಸಹ ಎಂಬುದಕ್ಕೆ ಸಭಾವ- **ಗತಿಕಾರಕೋಪ**. **ಪದಾತ್ಕೃತ್** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ॥ ೫ ॥

—:o:—

ಸಂಹಿತಾಪಾಠಃ

ವಿ ಶ್ರಯಂತಾಮೃತಾವೃಧಃ ಪ್ರಯೈ ದೇವೇಭ್ಯೋ ಮಹೀಃ ।
ಪಾವಕಾಸಃ ಪುರುಸ್ಪೃಹೋ ದ್ವಾರೋ ದೇವೀರಸಶ್ಚತಃ ॥ ೬ ॥

ಪದಪಾಠಃ

ವಿ । ಶ್ರಯಂತಾಂ । ಋತಽವೃಧಃ । ಪ್ರಽಯೈ । ದೇವೇಭ್ಯಃ । ಮಹೀಃ ।
ಪಾವಕಾಸಃ । ಪುರುಽಸ್ಪೃಹಃ । ದ್ವಾರಃ । ದೇವೀಃ । ಅಸಶ್ಚತಃ ॥ ೬ ॥

॥ ಸಾಯಣಭಾಷ್ಯಂ ॥

ದ್ವಾರೋ ದೇವೀರ್ಯಜ್ಞಸ್ಯ ದ್ವಾರಾಭಿಮಾನಿನ್ಯೋ ದೇವತಾ ವಿ ಶ್ರಯಂತಾಂ । ವಿವಿಧಂ ಶ್ರಯಂತು । ವಿವೃತಾ ಭವಂತು । ಕಿಮರ್ಥಂ । ದೇವೇಭ್ಯಃ ಪ್ರಯೈ ಪ್ರಯಾತುಂ ದೇವಾನಾಂ ಪ್ರಾಪಣಾಯ ॥ ಪ್ರಯೈ ರೋಹಿಷ್ಯೈ ಅವ್ಯಥಿಷ್ಯೈ । ಪಾ. ೩-೪-೧೦ । ಇತಿ ನಿಪಾತಿತಃ ॥ ಕೀದೃಶ್ಯಸ್ತಾಃ । ಋತವೃಧೋ ಯಜ್ಞಸ್ಯ ವರ್ಧಯಿತ್ರ್ಯಃ ಪೂಜ್ಯಾಃ ಮಹೀರ್ಮಹತ್ಯಃ ಪಾವಕಾಸ ಶೋಧಯಿತ್ರ್ಯಃ ಪುರುಸ್ಪೃಹೋ ಬಹುಸ್ಪೃಹಣೀಯಾಃ ಅಸಶ್ಚತೋಽಸಜ್ಯಮಾನಾಃ ಪರಸ್ಪರವಿಪ್ರಕೃಷ್ಟಾ ಇತ್ಯರ್ಥಃ ॥

ಪ್ರತಿಪದಾರ್ಥ

**ಋತವೃಧಃ**—ಯಜ್ಞವು ವೃದ್ಧಿಯಾಗುವಂತೆ ಮಾಡುವವರೂ । **ಮಹೀ**—ಮಹತ್ತಾದ ಆಕಾರವುಳ್ಳವರೂ । **ಪಾವಕಾಸಃ**—ಶುದ್ಧಿ ಮಾಡುವಶಕ್ತಿಯುಳ್ಳವರೂ । **ಪುರುಸ್ಪೃಹಃ**—ಅನೇಕರಿಂದ ಅಪೇಕ್ಷಿತರಾದವರೂ । **ಅಸಶ್ಚತಃ**—ಅಂಟಿಕೊಳ್ಳದೇ ವಿವಿಕ್ತವಾಗಿರುವವರೂ (ಆದ) । **ದ್ವಾರೋದೇವೀಃ**-(ಯಜ್ಞಗೃಹದ) ದ್ವಾರಾಭಿಮಾನ ದೇವತೆಗಳು । **ದೇವೇಭ್ಯಃ**—ದೇವತೆಗಳಿಗೆ । **ಪ್ರಯೈ**—ಪ್ರವೇಶಕ್ಕಾಗಿ । **ವಿಶ್ರಯಂತಾಂ**—ಬೇರೆಬೇರೆಯಾಗಿ ದೂರ ಸರಿದು ದಾರಿಯನ್ನು ಮಾಡಿಕೊಡಲಿ ॥

ಭಾವಾರ್ಥ

ಯಜ್ಞದವೃದ್ಧಿಗೆ ಕಾರಣರಾದವರೂ, ಮಹತ್ತಾದ ಆಕಾರವುಳ್ಳವರೂ, ಶುದ್ಧಿಮಾಡುವ ಶಕ್ತಿಯುಳ್ಳವರೂ, ಅನೇಕರಿಂದ ಅಪೇಕ್ಷಿತರಾದವರೂ, ಪರಸ್ಪರವಾಗಿ ಅಂಟಿಕೊಳ್ಳದೇ ವಿವಿಕ್ತರಾಗಿರುವವರೂ ಆದ ಯಜ್ಞಗೃಹದ ದ್ವಾರಾಭಿಮಾನದೇವತೆಗಳು ದೇವತೆಗಳ ಪ್ರವೇಶಕ್ಕಾಗಿ ಬೇರೆಬೇರೆಯಾಗಿ ದೂರಸರಿದು ದಾರಿಯನ್ನು ಮಾಡಿಕೊಡಲಿ.

## English Tranlation

Let the bright, separable doors, the augmenters of sacrific, the purifiers of rites, the desired of many, be set open for the gods to enter.

### ವಿಶೇಷವಿಷಯಗಳು

**ದ್ವಾರೋ ದೇವೀಃ**—ಯಜ್ಞಗೃಹದ ದ್ವಾರಾಭಿಮಾನಿದೇವತೆಗಳೆಂದು ಸಾಯಣರು ವಿವರಿಸಿದ್ದಾರೆ. ಈ ದ್ವಾರಗಳು ಯಜ್ಞಗೃಹದ ದ್ವಾರಗಳೇ ಅಥವಾ ಇದು ಕೇವಲ ಅಲಂಕಾರಿಕವಾದ ಪ್ರಯೋಗವೇ ಎಂಬ ವಿಷಯದಲ್ಲಿ ವಿಪ್ರತಿಪತ್ತಿಯಿದೆ. ಒಂದುವೇಳೆ ಇಲ್ಲಿ ಈ ಶಬ್ದಕ್ಕೆ ಗೃಹದ್ವಾರಗಳೆಂದರ್ಥವಲ್ಲದಿದ್ದರೆ ಆಗ ಆಪ್ರೀಸೂಕ್ತಗಳ ದೇವತೆಗಳ ವಿಷಯದಲ್ಲೂ ಸಹ ಈಗ ಹೇಳಿರುವ ಅಂಶಗಳಿಗೆ ವ್ಯತ್ಯಾಸವಾದ ಅಂಶಗಳನ್ನು ಭಾವಿಸಬೇಕಾಗುತ್ತದೆ.

ಕಾರ್ಮಿಕವಾದ ಪ್ರಕ್ರಿಯಾದೃಷ್ಟಿಯಿಂದ ನೋಡಿದರೆ, **ಬರ್ಹಿ** ಮತ್ತು **ಸ್ವಾಹಾಕೃತಿ** ಈ ಎರಡು ವಸ್ತುಗಳಿಗೆ ಮಾತ್ರ ದೇವತ್ವಾರೋಪಣೆಯಿಲ್ಲದೆ ಕೇವಲ ಪಾರ್ಥಿವವಾದುದೂ ಆದರೂ ಯಾಗಸಂಬಂಧವಿರುವುದರಿಂದ ಅಲೌಕಿಕವಾದ ಶುದ್ಧಿಯುಳ್ಳದ್ದೂ ಆದ ಗುಣಗಳನ್ನು ಹೇಳಿದೆ. **ತಿಸ್ರೋ ದೇವೀಃ** ಎಂಬಲ್ಲಿ **ಸರಸ್ವತಿಯು** ಶುದ್ಧವಾದ ದೈವಿಕಾಂಶವನ್ನು ಹೊಂದಿರುವುದರಿಂದಲೂ, ಆ ನದಿಯ ಜತೆಯಲ್ಲಿ ಉಳಿದೆರಡು ನದಿಗಳನ್ನೂ ಸೇರಿಸಿ ಹೇಳಿರುವುದರಿಂದಲೂ ಒಟ್ಟಿಗೆ ಎಲ್ಲರನ್ನೂ ದೇವತೆಗಳೆಂದು ಕರೆದಿದೆ. ಇದರಂತೆಯೇ **ದೈವ್ಯಾ ಹೋತಾರಾ** ಎಂಬಲ್ಲಿಯೂ ಸಹ ದೇವಾತ್ಮನಾದ ಅಗ್ನಿಯೊಡನಿರುವುದರಿಂದ ಪಾರ್ಥಿವವಾದ ಹೋತೃವನ್ನೂ ದೇವತೆಯೆಂದೇ ಉದ್ದೇಶಿಸಿದೆ. ಆದರೆ **ದೇವೀ ದ್ವಾರಃ** ಎಂಬಲ್ಲಿ ಮಾತ್ರ ಇದಕ್ಕೆ ಅವಕಾಶವಿಲ್ಲವಾಗಿದೆ. ಈ ದ್ವಾರಗಳು ಯಜ್ಞಗೃಹದ ಬಾಗಿಲುಗಳೇ ಆಗಿದ್ದರೆ, **ಬರ್ಹಿ, ಸ್ವಾಹಾಕೃತಿ** ಇವುಗಳಿಲ್ಲದ ವಿಶೇಷವಾದ ಸ್ಥಾನವು ಇವಕ್ಕೇತಕ್ಕೆ ಎಂಬ ಒಂದು ಪ್ರಶ್ನೆಯು ಏಳುತ್ತದೆ. ಯಜ್ಞಾಂಗಗಳಾದ ಕೆಲವು ಉಪಕರಣಸಾಮಗ್ರಿಗಳನ್ನು ಮಾತ್ರ ದೇವತ್ವದೃಷ್ಟಿಯಿಂದ ನೋಡಬೇಕಾಗುತ್ತದೆ ಎಂದರೆ, ಎಲ್ಲಕ್ಕೂ ಮುಖ್ಯವಾದ ವೇದಿಯ ಹೆಸರೇ ಇಲ್ಲವಾಗಿದೆ.

ಇಷ್ಟೇ ಅಲ್ಲದೇ ಇಲ್ಲಿ ಗಮನಿಸಬೇಕಾದ ಇನ್ನೊಂದು ಅಂಶವೇನೆಂದರೆ ದ್ವಾರಗಳು ಎಂದು ಬಹುವಚನದಲ್ಲಿವೆ.

**ಸಪ್ತ ಹೋತ್ರಾಣಿ ಮನಸಾ ವೃಣಾನಾ ಇನ್ವಂತೋ ವಿಶ್ವಂ ಪ್ರತಿ ಯನ್ನೃತೇನ ।**
**ನೃಪೇಶಸೋ ವಿದಥೇಷು ಪ್ರ ಜಾತಾ ಅಭೀ೩ಮಂ ಯಜ್ಞಂ ವಿ ಚರಂತ ಪೂರ್ವೀಃ ॥**

(ಋ. ಸಂ. ೩-೪-೫)

ಎಂಬ ಆಪ್ರೀಸೂಕ್ತದ ಋಕ್ಕಿನಲ್ಲಿ **ಪೂರ್ವೀಃ** ಎಂಬ ವಿಶೇಷಣವೂ ಸಹ ಬಹುವಚನದಲ್ಲಿಯೇ ಇದೆ. ಮತ್ತು ಈ ದ್ವಾರದೇವತೆಗಳ ಕರ್ತವ್ಯವನ್ನು ಪರಿಶೀಲಿಸಿದರೆ,

೧) **ವಿ ಶ್ರಯಂತಾಂ ಋತಾವೃಧೋ ದ್ವಾರೋ ದೇವೀರಸಶ್ಚತಃ** ಯಜ್ಞಕಾರ್ಯದ ಅನುಕೂಲಕ್ಕಾಗಿ ಪ್ರತ್ಯೇಕವಾಗಿ ತೆಗೆದುಕೊಳ್ಳಿರಿ ಎಂದು ೧-೧೩-೬ ಎಂಬ ಋಕ್ಕಿನಲ್ಲಿಯೂ

೨) **ದುರೋ ಘೃತಾನ್ಯಕ್ಷರನ್ ।** ಉದಕಗಳನ್ನು ಸುರಿಸಿದರು ಎಂದು ೧-೧೮೮-೫ರಲ್ಲೂ

೩) **ಪ್ರ ಪ್ರ ಯಜ್ಞಂ ಪ್ರಣೀತ ನ ।** ಯಜ್ಞವನ್ನು ಫಲದಿಂದ ತುಂಬಿಸುತ್ತಾರೆ ಎಂದು ೫-೫-೫ ರಲ್ಲೂ

೪) **ಇನ್ವಂತೋ ವಿಶ್ವಂ ಪ್ರತಿ ಯನ್ನೃತೇನ ।** ಸಕಲವಿಶ್ವವನ್ನು ಉದಕದಿಂದ ಚೈತನ್ಯಯುಕ್ತವನ್ನಾಗಿ ಮಾಡುತ್ತಾರೆಂದು ೩-೪-೫ರಲ್ಲೂ

ಹೀಗೆ ಇನ್ನು ಅನೇಕವಿಧವಾಗಿ ಅವರ ಕರ್ತವ್ಯವನ್ನು ನಿರ್ದೇಶಿಸಿದೆ. ಈ ಕರ್ತವ್ಯಗಳಲ್ಲಿ ಅನೇಕ ಕ್ರಿಯೆಗಳು ಕೇವಲ ಆಲಂಕಾರಿಕವಾಗಿಯೂ ಔಪಚಾರಿಕವಾಗಿಯೂ ಅವುಗಳಿಗೆ ಆರೋಪಿತವಾದವೆಂದೂ ಅದರಲ್ಲಿ ಸತ್ಯಾಂಶವಿಲ್ಲನೆಂದೂ ಕೆಲವರ ಮತವಾಗಿದೆ ಅಲ್ಲದೆ,

**ಸಮಿದ್ಧೋ ಅದ್ಯ ಮನುಷೋ ದುರೋಣೇ ದೇವೋ ದೇವಾನ್ ಯಜಸಿ ಜಾತವೇದಃ ।**
**ಆ ಚ ವಹ ಮಿತ್ರಮಹಶ್ಚಿಕಿತ್ವಾನ್ತ್ವಂ ದೂತಃ ಕವಿರಸಿ ಪ್ರಚೇತಾಃ ॥**
(ಋ. ಸಂ. ೧೦-೧೧೦-೧)

ಎಂಬ ಋಕ್ಕಿನಲ್ಲಿ **ಮನುಷೋ ದುರೋಣೇ ।** ಮಾನವನ ಯಜ್ಞಗೃಹದಲ್ಲಿ ಎಂದಿರುವುದರಿಂದ ಕೇವಲ ಲೌಕಿಕವಾದ ಈ ಗೃಹದ್ವಾರಗಳಿಗೆ ಈ ಔಪಚಾರಿಕವಾದ ಭಾಷೆಯು ಅತ್ಯುತ್ಪ್ರೇಕ್ಷೆಯಾಗಿಯೂ ಕಾಣಬಹುದು. **ನೃಪೇಶಸಃ, ಋತಾವೃಧಃ, ಪಾವಕಾ** ಇತ್ಯಾದಿ ವಿಶೇಷಣಗಳೂ ಸಹ ಉಚಿತವಾಗಿರುವುದಿಲ್ಲವೆಂದು ಕೆಲವು ವಿಮರ್ಶಕರ ಮತವಾಗಿದೆ. ಪ್ರಕೃತದಲ್ಲಿ ಈ ಅಭಿಪ್ರಾಯಗಳ ಸಮರ್ಥನೆಗಾಗಲಿ ಅಥವಾ ಖಂಡಿಸುವುದಕ್ಕಾಗಲಿ ವೈದಿಕಸಂಪ್ರದಾಯ ಪಾಲನೆಗೆ ಮೂಲರಾದ ವೈದಿಕಪಂಡಿತರ ಅಭಿಪ್ರಾಯಗಳನ್ನು ತಿಳಿಯುವುದು ಒಳ್ಳೆಯದು.

**ಸ್ವಾಧ್ಯೋ೩ ವಿ ದುರೋ ದೇವಯಂತೋಽಶಿಶ್ರಯೂ ರಥಯುರ್ದೇವತಾತಾ ।**
**ಪೂರ್ವೀ ಶಿಶುಂ ನ ಮಾತರಾ ರಿಹಾಣೇ ಸಮಗ್ರುವೋ ನ ಸಮನೇಷ್ವಂಜನ್ ।**
(ಋ. ಸಂ. ೭-೨-೫)

ಎಂಬ ಆಪ್ರೀಸೂಕ್ತದ ಋಕ್ಕಿನಲ್ಲಿ **ಯಜ್ಞಗೃಹದ್ವಾರಾಣಿ ಇತ್ಯರ್ಥಃ ।** ಯಜ್ಞಗೃಹದ್ವಾರಗಳೆಂದರ್ಥವೆಂದು ವಿಶದವಾಗಿ ತಿಳಿಸುತ್ತಾರೆ. ಅದರಂತೆಯೇ ಇನ್ನೂ ಕೆಲವು ಪಂಡಿತರು **ವ್ಯಶಿಶ್ರಯುಃ** ಎಂಬ ಕ್ರಿಯಾಪದಕ್ಕೆ **ಯಜಮಾನಾಃ** ಎಂಬುದು ಕರ್ತೃವೆಂದೂ ಅವರು ಯಜ್ಞಗೃಹದ್ವಾರವನ್ನು ಆಶ್ರಯಿಸಿ ನಿಂತರೆಂದು ಅನ್ವಯವೆಂದೂ ವಿವರಿಸಿದ್ದಾರೆ. ಆಂಗ್ಲಪಂಡಿತರಾದ Oldenberg, Grassman ಮತ್ತು Ludwig ಎಂಬುವರೂ ಸಹ ಇದೇ ವಿವರಣೆಯನ್ನನುಮೋದಿಸುತ್ತಾರೆ,

**ವಿರಾಟ್ಸಂಮ್ರಾಡ್ವಿಭ್ವೀಃ ಪ್ರಭ್ವೀರ್ಬಹ್ವೀಶ್ಚ ಭೂಯಸೀಶ್ಚ ಯಾಃ । ದುರೋ ಘೃತಾನ್ಯಕ್ಷರನ್ ।**
(ಋ. ಸಂ. ೧-೧೮೮-೫)

ಎಂಬ ಋಕ್ಕಿನಲ್ಲಿ **ವಿರಾಟ್ ಸಂಮ್ರಾಟ್** ಎಂಬ ಪದಗಳು ಎರಡು ಕದಗಳ ಹೆಸರೆಂದೂ ಹೇಳಿದ್ದಾರೆ. Max Muller ಎಂಬ ಪಂಡಿತನು ಇವು ದೇವತೆಗಳು ಸ್ವರ್ಗದಿಂದ ಇಳಿದುಬರುವ ಸ್ವರ್ಗದ್ವಾರಗಳೆಂದಿದ್ದಾನೆ. (History of Ancient Sanskrit Literature. P, 245). ಪ್ರೈಷಸೂಕ್ತದಲ್ಲಿ,

**ಹೋತಾಯಕ್ಷದ್ದ್ವಾರ ಋಷ್ವಾಃ ಕವಷ್ಯೋಽಕೋಷಧಾವನೀರುದಾತಾಭಿರ್ಜಿಹತಾಂ ವಿ ಪಕ್ಷೋಭಿಃ ಶ್ರಯಂತಾಂ । ಸುಪ್ರಾಯಣಾ ಅಸ್ಮಿನ್ಯಜ್ಞೇ ವಿಶ್ರಯಂತಾಮೃತಾವೃಧೋ ವಿಯಂತ್ವಾಜ್ಯಸ್ಯ ಹೋತರ್ಯಜ ।**

(ತೈ. ಬ್ರಾ. ೩-೬-೨-೨)

ಎಂಬ ವಾಕ್ಯಗಳಿಂದ ಹೇಳಿರುವುದನ್ನು ಭಾಷ್ಯಕಾರರು **ದುರೋ ದ್ವಾರಸಂಜ್ಞಕಾಃ ಪಂಚಮಪ್ರಯೋಜದೇವತಾಸ್ತದ್ರೂಪಮಗ್ನಿಂ ದೈವ್ಯೋ ಹೋತಾ ಯಜತು ।** ಎಂದು ವಿವರಿಸಿರುವರು. ಈ ವಾಕ್ಯಗಳಲ್ಲಿ **ಅತಾಭಿಃ ಉಜ್ಜಿಹತಾಂ** ಎಂಬ ಪದಗಳು ಮುಖ್ಯವಾದವು ಇದು ಮೇಲಿನ ಅಭಿಪ್ರಾಯವನ್ನು ಕೊಂಚಮಟ್ಟಿಗೆ ವಿರೋಧಿಸುತ್ತದೆ. ಇದರಿಂದ ದ್ವಾರವೆಂದರೆ ಯಜ್ಞಗೃಹದ ಬಾಗಿಲುಗಳೆಂಬುದು ಆಲಂಕಾರಿಕವಾದುದು ಎಂದೆನ್ನಬಹುದೆಂದು ಒಂದು ಮತವಾಗಿದೆ. ಐತರೇಯ ಬ್ರಾಹ್ಮಣದಲ್ಲಿ,

**ದುರೋ ಯಜತಿ ವೃಷ್ಟಿರ್ವೈ ದುರೋ ವೃಷ್ಟಿಮೇವ ತತ್ಪ್ರೀಣಾತಿ ವೃಷ್ಟಿಮನ್ನಾದ್ಯಂ ಯಜಮಾನೇ ದಧಾತಿ ।**

(ಐ ಬ್ರಾ. ೨-೪)

ಎಂದು ದ್ವಾರವೆಂಬ ಅರ್ಥಕ್ಕೆ ಬದಲಾಗಿ ವೃಷ್ಟಿಯೆಂದರ್ಥಮಾಡಿದೆ. ಈ ಅರ್ಥವು ಹೇಗಾಗುವುದೆಂದು ವಿಶದಪಡಿಸಿಲ್ಲ. ನಿರುಕ್ತಕಾರರು,

ದ್ವಾರೋ ಜವತೇರ್ವಾ ದ್ರವತೇರ್ವಾ ವಾರಯತೇರ್ವಾ । ಮುಂದಕ್ಕೆ ಒತ್ತು ಎಂದರ್ಥವನ್ನು ಕೊಡುವ **ಜು** ಧಾತುವಿನಿಂದಾಗಲಿ, ಮುಂದುವರಿ ಎಂದರ್ಥವನ್ನು ಕೊಡುವ **ದ್ರು** ಧಾತುವಿನಿಂದಾಗಲಿ ಅಥವಾ ಪ್ರತ್ಯೇಕಿಸು ಎಂದರ್ಥವನ್ನು ಕೊಡುವ **ವೃ** ಧಾತುವಿನಿಂದಾಗಲಿ ನಿಷ್ಪನ್ನವಾಗಿದೆಯೆಂದು,

**ವ್ಯಚಸ್ವತೀರುರ್ವಿಯಾ ವಿ ಶ್ರಯಂತಾಂ ಪತಿಭ್ಯೋ ನ ಜನಯಃ ಶುಂಭಮಾನಾಃ ।**
**ದೇವೀರ್ದ್ವಾರೋ ಬೃಹತೀರ್ವಿಶ್ವಮಿನ್ವಾ ದೇವೇಭ್ಯೋ ಭವತ ಸುಪ್ರಾಯಣಾಃ ।**

(ಋ. ಸಂ. ೧೦-೧೧೦-೫)

ಎಂಬ ಋಕ್ಕನ್ನು ಉದಹರಿಸಿ ದ್ವಾರಶಬ್ದಕ್ಕೆ ಅರ್ಥವನ್ನು ವಿವರಿಸುತ್ತಾ, **ಗೃಹದ್ವಾರ ಇತಿ ಕಾತ್ಥಕ್ಯಃ ।** ಕಾತ್ಥಕ್ಯರ ಮತದಂತೆ ಗೃಹದ್ವಾರವೆಂದೂ, **ಅಗ್ನಿರಿತಿ ಶಾಕಪೂಣಿಃ ।** ಶಾಕಪೂಣಿಯ ಮತದಂತೆ ಅಗ್ನಿಯೆಂದೂ ಸಹ ಮತಭೇದವನ್ನು ತಿಳಿಸಿದ್ದಾರೆ. (ನಿ. ೮-೧೦) ಬೃಹದ್ದೇವತೆಯಲ್ಲಿ,

**ದ್ವಾರಸ್ತು ದೇವ್ಯೋ ಯಾಃ ಪ್ರೋಕ್ತಾ ವಿಶ್ವೇಷಾಂ ತಾಸ್ತು ಪತ್ನಯಃ ।**
**ಅಗ್ನಾಯೀಮನುವರ್ತಂತೇ ತಥಾಗ್ನಾಯ್ಯಗ್ನಿಮೇವ ಚ ॥**
**ಅಗ್ನೌ ಧ್ರುವಂ ಸ್ಥಿತಾಸ್ತಾಸ್ತು ಸಂಸ್ತೂಯಂತೇಽಗ್ನಿನಾ ಸಹ ।**
**ಪ್ರಾಧಾನ್ಯಂ ತಾಸು ಚೈವಾಗ್ನೇ ಸ್ತುತಿಷ್ವೇವ ಹವಿಷ್ಷು ಚ ॥**

( ಬೃ. ದೇ. ೩-೬ರಿಂದ ೭ )

ಈ ದ್ವಾರಗಳು ದೇವಪತ್ನಿಯರೆಂದೂ, ಅಗ್ನಿಯನ್ನು ಅನುಸರಿಸುವ ಅಗ್ನಾಯಿಯನ್ನು ಇವರು ಅನುಸರಿಸುವರೆಂದೂ, ಅಗ್ನಿಯಲ್ಲೇ ಸ್ಥಿರರಾಗಿ ನೆಲೆಸಿರುವುದರಿಂದ ಅಗ್ನಿಯೊಡನೆ ಸ್ತುತಿಸಲ್ಪಡುವರೆಂದೂ ಹೇಳಿದೆ. ಈ ವಿವರಣೆಯು ಸಯುಕ್ತಿಕವಾಗಿದೆ.

ಅಸಶ್ಚತಃ—ಅಸಜ್ಯಮಾನಾಃ ಪರಸ್ಪರಂ ವಿಪ್ರಕೃಷ್ಟಾಃ । ಪರಸ್ಪರವಾಗಿ ಅಂಟಿಕೊಳ್ಳದೇ ವಿವಿಕ್ತವಾಗಿರುವವರು ಎಂದರ್ಥ.

ವ್ಯಾಕರಣಪ್ರಕ್ರಿಯಾ

**ಶ್ರಯಂತಾಮ್**—ಶ್ರಿಞ್ ಸೇವಾಯಾಂ ಧಾತು. ಲೋಟ್ ಪ್ರಥಮಪುರುಷ ಬಹುವಚನಾಂತರೂಪ. ಅತಿಙಂತದ ಪದವಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಋತಾವೃಧಃ**—ಋತಂ ವರ್ಧಯಂತಿ ಇತಿ ಋತವೃಧಃ ವೃಧು ವೃದ್ಧೌ ಧಾತು. ಪ್ರಯೋಜಕವ್ಯಾಪಾರ ತೋರುವುದರಿಂದ ಅಂತರ್ಭಾವಿತಣ್ಯರ್ಥಕವಾದ ಧಾತು. **ಕ್ವಿಪ್ ಚ** (ಪಾ. ಸೂ. ೩-೨-೭೬) ಎಂಬುದರಿಂದ ಕ್ವಿಪ್ ಪ್ರತ್ಯಯ. ಉಪಪದ ಸಮಾಸ. **ಅನ್ಯೇಷಾಮಪಿ ದೃಶ್ಯತೇ** (ಪಾ. ಸೂ. ೬-೩-೧೩೭) ಎಂಬುದರಿಂದ ಪೂರ್ವಪದಕ್ಕೆ ಸಂಹಿತಾದಲ್ಲಿ ದೀರ್ಘ ಬರುತ್ತದೆ. **ಗತಿಕಾರಕೋಪಪದಾತ್ಕೃತ್** ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಪ್ರಯೈ**—ಯಾ ಪ್ರಾಪಣೇ. ಧಾತು. **ಪ್ರಯೈ ರೋಹಿಷ್ಯೈ ಅವ್ಯಥಿಷ್ಯೈ**—(ಪಾ. ಸೂ. ೩-೪-೧೦) ಎಂಬುದರಿಂದ ನಿಪಾತಿತವಾಗಿದೆ. **ಕೃನ್ಮೇಜಂತಃ** ಎಂಬುದರಿಂದ ಅವ್ಯಯಸಂಜ್ಞಾ ಬರುತ್ತದೆ.

**ಮಹೀಃ**—ಮಹತೀಃ ಎಂಬಲ್ಲಿ ಛಾಂದಸವಾಗಿ ಅತಿಗೆ ಲೋಪ. ವಿಭಕ್ತಿ ಪರವಾದಾಗ **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಪೂರ್ವಸವರ್ಣದೀರ್ಘ.

**ಪಾವಕಾಸಃ**—ಜಸ್ ಪರವಾದಾಗ **ಆಜ್ಜಸೇರಸುಕ್** (ಪಾ. ಸೂ. ೭-೧-೫೦) ಎಂಬುದರಿಂದ ಅದಕ್ಕೆ ಅಸುಕಾಗಮ.

**ಪುರುಸ್ಪೃಹಃ**—ಸ್ಪೃಹ ಈಪ್ಸಾಯಾಂ ಧಾತು. ಕ್ವಿಪ್ ಪ್ರತ್ಯಯ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಅಸಶ್ಚತಃ**—ಗ್ಲು ಞ್ಚು ಷಸ್ಜ ಗತೌ ಧಾತು. ಜಕಾರಕ್ಕೆ ವ್ಯತ್ಯಯದಿಂದ ಚಕಾರ. ಇದಕ್ಕೆ ಲಡರ್ಥದಲ್ಲಿ ಶತೃ ಪ್ರತ್ಯಯ. ನ ವಿದ್ಯಂತೇ ಸಶ್ಚಂತಃ ಗಚ್ಛಂತಃ ಯೇಷು ಅಸಶ್ಚತಃ **ನಞ್ಸುಭ್ಯಾಮ್** (ಪಾ. ೬-೨-೧೭೨) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ ॥ ೬ ॥



ಸಂಹಿತಾಪಾಠಃ

ಆ ಭಂದಮಾನೇ ಉಪಾಕೇ ನಕ್ತೋಷಾಸಾ ಸುಪೇಶಸಾ ।

ಯಹ್ವೀ ಋತಸ್ಯ ಮಾತರಾ ಸೀದತಾಂ ಬರ್ಹಿರಾ ಸುಮತ್ ॥ ೭ ॥

। ಪದಪಾಠಃ ।

ಆ । ಭಂದಮಾನೇ ಇತಿ । ಉಪಾಕೇ ಇತಿ । ನಕ್ತೋಷಸಾ । ಸುಽಪೇಶಸಾ ।

ಯಹ್ವೀ ಇತಿ । ಋತಸ್ಯ । ಮಾತರಾ । ಸೀದತಾಂ । ಬರ್ಹಿಃ । ಆ । ಸುಽಮತ್ ॥ ೭ ॥

ಸಾಯಣಭಾಷ್ಯಂ

ಭಂದಮಾನೇ ಸರ್ವೈಃ ಸ್ತೂಯಮಾನೇ ಉಪಾಕೇ ಪರಸ್ಪರಂ ಸನ್ನಿಹಿತೇ ಸುಪೇಶಸಾ ಶೋಭನರೂಪೇ । ಪೇಶ ಇತಿ ರೂಪನಾಮ । ಯಹ್ವೀ ಮಹತ್ಯೌ ಅಪತ್ಯರೂಪೇ ವಾ ಪ್ರತಿದಿನಂ ಜಾಯಮಾನತ್ವಾತ್ । ಯಹುರಿತ್ಯಪತ್ಯನಾಮ ಯಹುಃ ಸೂನುರಿತಿ ತನ್ನಾಮಸು ಪಾಠಾತ್ । ಋತಸ್ಯ ಮಾತರಾ ಯಜ್ಞಸ್ಯ ನಿರ್ಮಾತ್ರ್ಯೌ । ತಾಭ್ಯಾಮಾಗಮನಾದ್ಯಜ್ಞಸ್ಯ ಸಂಪೂರ್ತೇಃಯಜ್ಞಮಾತೃತ್ವಮುಪಚರ್ಯತೇ । ಯದ್ವಾ । ಅತಿರಾತ್ರಾದೀನಾಮಹೋರಾತ್ರಸಾಧ್ಯತ್ವಾತ್ । ನಕ್ತೋಷಾಸಾ ಉಕ್ತಗುಣವಿಶಿಷ್ಟೇ ಅಹೋರಾತ್ರದೇವತೇ ಸುಮತ್ ಸ್ವಯಮೇವ । ಅಸ್ಮಾಭಿರಪ್ರಾರ್ಥಿತೇ ಇತ್ಯರ್ಥಃ । ಯದ್ವಾ । ಸುಮದ್ಬರ್ಹಿರಾಸ್ತೃತಂ ದರ್ಭಮಾ ಸಮಂತಾದಾ ಸೀದತಾಂ । ಉಪವಿಶತಾಂ । ಯದ್ವಾ । ಋತಸ್ಯೇತಿ ಕರ್ಮಣಿ ಷಷ್ಠೀ । ಯಜ್ಞಮಾ ಸೀದತಾಂ । ಆಸಾದ್ಯ ಚ ಬರ್ಹಿರಾಸ್ತೃತಂ ದರ್ಭಂ ಸ್ವಯಮೇವಾ ಸೀದತಾಂ ॥

ಪ್ರತಿಪದಾರ್ಥ

ಆ ಭಂದಮಾನೇ—ಸಕಲರಿಂದಲೂ ಹೊಗಳಲ್ಪಡುವವರೂ, । ಉಪಾಕೇ—ಪರಸ್ಪರವಾಗಿ ಹತ್ತಿರದಲ್ಲೇ ಇರುವವರೂ, । ಸುಪೇಶಸಾ—ಮನೋಹರವಾದ ರೂಪವುಳ್ಳವರೂ । ಯಹ್ವೀ—ಮಹತ್ತಾದ ಆಕಾರವುಳ್ಳವರೂ । ಅಥವಾ (ನಿತ್ಯವೂ ಹುಟ್ಟುವುದರಿಂದ) ಅಪತ್ಯರೂಪವುಳ್ಳವರೂ । ಋತಸ್ಯ—ಯಜ್ಞಕ್ಕೆ । ಮಾತರಾ—ನಿರ್ಮಾಣಕಾರಣರೂ ಆದ । ನಕ್ತೋಷಾಸಾ—ರಾತ್ರಿಯ ಮತ್ತು ಅಹಸ್ಸಿನ ದೇವತೆಗಳೇ, । ಸುಮತ್—(ನಾವು ಪ್ರಾರ್ಥಿಸದಿದ್ದರೂ ಸಹ) ನೀವಾಗಿಯೇ । ಬರ್ಹಿಃ—ದರ್ಭಾಸನದ ಮೇಲೆ । ಆ ಸೀದತಾಂ—ಅಭಿಮುಖವಾಗಿ ಕುಳಿತುಕೊಳ್ಳಿ. । ಅಥವಾ ಸುಮತ್—ವಿಸ್ತಾರವಾಗಿ ಹರಡಿದ । ಬರ್ಹಿಃ—ದರ್ಭಾಸನದ ಮೇಲೆ । ಆ ಸೀದತಾಂ—ಅಭಿಮುಖವಾಗಿ ಕುಳಿತುಕೊಳ್ಳಿ

ಭಾವಾರ್ಥ

ಸಕಲರಿಂದಲೂ ಹೊಗಳಲ್ಪಡುವವರೂ, ಪರಸ್ಪರವಾಗಿ ಹತ್ತಿರದಲ್ಲೇ ಇರುವವರೂ ಮನೋಹರವಾದ ರೂಪವುಳ್ಳವರೂ, ಮಹತ್ತಾದ ಆಕಾರವುಳ್ಳವರೂ, ಯಜ್ಞಕ್ಕೆ ನಿರ್ಮಾಣಕಾರಣರೂ ಆದ ಎಲೈ ಅಹೋರಾತ್ರದೇವತೆಗಳೇ, ನಾವು ಪ್ರಾರ್ಥಿಸದಿದ್ದರೂ ಸಹ ನೀವಾಗಿಯೇ ಅಭಿಮಾನದಿಂದ ದಯಮಾಡಿ ವಿಸ್ತಾರವಾಗಿ ಹರಡಿರುವ ನಮ್ಮ ದರ್ಭಾಸನಗಳ ಮೇಲೆ ಕುಳಿತುಕೊಳ್ಳಿ.

English Translation

Beautiful night and morning, ever hymned, ever associated, progeny (of time), parents of sacrifice, sit down of your own good-will on the sacred grass.

॥ ವಿಶೇಷವಿಷಯಗಳು ॥

(ಅ) ಭಂದಮಾನೇ – ಸರ್ವೈಃ ಸ್ತೂಯಮಾನೇ । ಸಕಲರಿಂದಲೂ ಸ್ತುತಿಸಲ್ಪಡುವ ಎಂದು ನಕ್ತೋಷಾಸಾ ಎಂಬ ದೇವತೆಗಳಿಗೆ ವಿಶೇಷಣವಾಗಿದೆ. ಅರ್ಚತಿ, ಗಾಯತಿ ಇತ್ಯಾದಿ ಅರ್ಚತಿಕರ್ಮನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩-೧೪) ಭಂದಮಾನಾ ಎಂದರೆ ಪೂಜಾವಿಷಯನೆಂದಾಗುತ್ತದೆ. ಭಂದನಾಃ ।

**ಭಂದನಾ ಭಂದತೇಃ ಸ್ತುತಿಕರ್ಮಣಃ ।** (ನಿ. ೫-೨) **ಭಂದ್** ಧಾತುವಿನಿಂದ ನಿಷ್ಪನ್ನವಾಗಿ ಸ್ತುತಿಕರ್ಮವೆಂದರ್ಥವಾಗುತ್ತದೆಂದು ನಿರುಕ್ತಕಾರರು,

**ಆ ವಿವೇಶ ರೋದಸೀ ಭೂರಿವರ್ಪಸಾ ಪುರುಪ್ರಿಯೋ ಭಂದತೇ ಧಾಮಭಿಃ ಕವಿಃ ।**
(ಋ. ಸಂ. ೩-೩-೪)

**ಸ ಭಂದನಾ ಉದಿಯರ್ತಿ ಪ್ರಜಾವತೀರ್ವಿಶ್ವಾಯುರ್ವಿಶ್ವಾಃ ಸುಭರಾ ಅಹರ್ದಿವಿ ।**
(ಋ. ಸಂ. ೯-೮೬-೪೧)

ಎಂಬ ಎರಡು ಋಕ್ಕುಗಳನ್ನು ಉದಹರಿಸಿ ಉತ್ಕೃಷ್ಟವಾದ ಸ್ತೋತ್ರವನ್ನು ಮಾಡುವ ಸನ್ನಿವೇಶಗಳಲ್ಲಿ ಈ ಪದ ಪ್ರಯೋಗದ ಔಚಿತ್ಯವನ್ನು ತೋರಿಸಿದ್ದಾರೆ. (ನಿ. ೫-೨)

**ಸುಮತ್**—**ಸ್ವಯಮೇವ । ಅಸ್ಮಾಭಿರಪ್ರಾರ್ಥಿತೇ ಇತ್ಯರ್ಥಃ।** ನಾವು ಪ್ರಾರ್ಥಿಸದಿದ್ದರೂ ನೀವಾಗಿಯೇ ಎಂದು ಉಷಾಸಾನಕ್ತಗಳ ಔದಾರ್ಯವನ್ನೂ ಅಭಿಮಾನವನ್ನೂ ಸೂಚಿಸುತ್ತದೆ. **ಸುಮತ್ಸ್ವಯಮಿತ್ಯರ್ಥಃ** (ನಿ. ೬-೨೨) ಎಂದು ನಿರುಕ್ತಕಾರರು **ಸುಮತ್** ಶಬ್ದಕ್ಕೆ **ಸ್ವಯಂ** ಎಂದರೆ ತಾನಾಗಿಯೇ ಎಂದು ಅರ್ಥಮಾಡಿದ್ದಾರೆ. ಈ ಪದಕ್ಕೆ ಇದೊಂದೇ ಅರ್ಥವಲ್ಲದೇ **ಕಲ್ಯಾಣ, ಶೋಭನ** ಅಥವಾ **ಭದ್ರ** ಎಂಬ ಪದಗಳ ಪರ್ಯಾಯಪದವಾಗಿರುವುದೆಂದೂ ತಿಳಿಯುತ್ತದೆ. **ಸುಮದ್ರಥಃ ಸಮುದ್ಗಣಃ ಸುಮದಂಶುಃ** ಇತ್ಯಾದಿ ಅನೇಕ ಪದಗಳ ಪ್ರಯೋಗದಲ್ಲಿರುವುದರಿಂದ ಆ ಪದಗಳ ಅರ್ಥವನ್ನು ನೋಡಿದರೆ,

**ಅಮೇವ ನಃ ಸುಹವಾ ಆ ಹಿ ಗಂತನ ನಿ ಬರ್ಹಿಷಿ ಸದತನಾ ರಣಿಷ್ಟನ ।**
**ಅಥಾ ಮಂದಸ್ವ ಜುಜುಷಾಣೋ ಅಂಧಸಸ್ತ್ವಷ್ಟರ್ದೇವೇಭಿರ್ಜನಿಭಿಃ ಸುಮದ್ಗಣಃ ।**
(ಋ. ಸಂ. ೨-೩೬-೩)

ಎಂಬ ಋಕ್ಕಿನಲ್ಲಿ **ಸುಮದ್ಗಣಃ** ಎಂಬ ಪದಕ್ಕೆ **ಶೋಭನಗಣಃ** ಎಂದೂ,

**ವಿಭಾವಾ ದೇವಃ ಸುರಣಃ ಪರಿ ಕ್ಷಿತೀರಗ್ನಿರ್ಬಭೂವ ಶವಸಾ ಸುಮದ್ರಥಃ ।**
**ತಸ್ಯ ವ್ರತಾನಿ ಭೂರಿಪೋಷಿಣೋ ವಯಮುಪ ಭೂಷೇಮ ದಮ ಆ ಸುವೃಕ್ತಿಭಿಃ ।**
(ಋ. ಸಂ. ೩-೩-೯)

ಎಂಬಲ್ಲಿ **ಸುಮದ್ರಥಃ** ಎಂದರೆ **ಶೋಭನರಥಃ** ಎಂದೂ ಅರ್ಥಮಾಡಿವೆ. ಇಲ್ಲೆಲ್ಲಾ **ಸುಮತ್** ಪದವು **ಶೋಭನ, ಕಲ್ಯಾಣ** ಈ ಪದಗಳ ಪರ್ಯಾಯವಾಗಿದೆ. ಅದರಂತೆ ಇಲ್ಲಿಯೂ ಸಹ **ಉಷಾಸಾನಕ್ತಾ** ದೇವತೆಗಳ ಶ್ರೇಷ್ಠವಾದುದೂ ಕಲ್ಯಾಣಾತ್ಮಕವಾದುದೂ ಆದ ಆಗಮನವಿರುವುದರಿಂದ ಈ ಪದದ ಔಚಿತ್ಯವನ್ನು ತಿಳಿಯಬಹುದು.

**ಉಪಾಕೇ**—ಈ ಪದವು ಅಂಕಿತನಾಮಗಳಲ್ಲಿ ಪಠಿತವಾಗಿದೆ (ನಿ. ೩-೯) **ಪರಸ್ಪರಂ ಸನ್ನಿಹಿತೇ ।** ಪರಸ್ಪರವಾಗಿ ಹತ್ತಿರದಲ್ಲೇ ಇರುವವರು ಎಂದರ್ಥ.

**ಸುಪೇಶಸಾ**—**ಪೇಶ ಇತಿ ರೂಪನಾಮ । ಪಿಂಶತೇರ್ವಿಪಿಶಿತಂ ಭವತಿ ।** ಸಂಸ್ಕೃತವಾದುದು ಮತ್ತು ಪರಿಷ್ಕೃತವಾದದ್ದು ಎಂಬರ್ಥವನ್ನು ಕೊಡುವ **ಪಿಶ್** ಧಾತುವಿನಿಂದ ನಿಷ್ಪನ್ನವಾಗಿ **ಸೌಂದರ್ಯವುಳ್ಳ** ಎಂಬರ್ಥವನ್ನು ಕೊಡುತ್ತದೆಂದು ನಿರುಕ್ತಕಾರರು ಇದೇ ಋಕ್ಕನ್ನುದಹರಿಸಿ ತೋರಿಸಿದ್ದಾರೆ. (ನಿ. ೮-೧೧) ಅತ್ಯಂತ ಸುಂದರವಾದ ರೂಪವುಳ್ಳವರು ಎಂದು ತಾತ್ಪರ್ಯ.

**ಯಹ್ವೀ**—ಮಹತ್ಯೌ ಅಪತ್ಯರೂಪೇ ವಾ । ಅತಿ ಮಹತ್ತಾದ ಸ್ವರೂಪವುಳ್ಳವರು ಅಥವಾ ಶಿಶುರೂಪ ದವರು ಎಂದರ್ಥ. ಈ ಪದವು ನಿರುಕ್ತದಲ್ಲಿ ಮಹನ್ನಾಮಗಳಲ್ಲಿ ಪಠಿತವಾಗಿದೆ. (ನಿ. ೩-೧೩) ಮತ್ತು **ತುಕ್, ತೋಕಂ** ಇತ್ಯಾದ್ಯಪತ್ಯನಾಮಗಳಲ್ಲಿಯೂ ಪಠಿತವಾಗಿದೆ. (ನಿ. ೩-೧) ಈ ಎರಡು ವಿಧವಾದ ಸ್ವರೂಪಗಳನ್ನೂ ಉಷಸ್ಸಿನ ವರ್ಣನೆಯಲ್ಲಿ ನೋಡಬಹುದು. ಉದಾಹರಣೆಗೆ

**ಉಪ ವ ಏಷೇ ವಂದ್ಯೇಭಿಃ ಶೂಷೈಃ ಪ್ರ ಯಹ್ವೀ ದಿವಶ್ಚಿತಯದ್ಭಿರರ್ಕೈಃ ।**
**ಉಷಾಸಾನಕ್ತಾ ವಿದುಷೀವ ವಿಶ್ವಮಾ ಹಾ ವಹತೋ ಮರ್ತ್ಯಾಯ ಯಜ್ಞಂ ।**
(ಋ. ಸಂ. ೫-೪೧-೭)

**ಉತ ಯೋಷಣೇ ದಿವ್ಯೇ ಮಹೀ ನ ಉಷಾಸಾನಕ್ತಾ ಸುದುಘೇವ ಧೇನುಃ ।**
**ಬರ್ಹಿಷದಾ ಪುರುಹೂತೇ ಮಘೋನೀ ಆ ಯಜ್ಞಿಯೇ ಸುವಿತಾಯ ಶ್ರಯೇತಾಂ ।**
(ಋ. ಸಂ. ೭-೨-೬)

ಇತ್ಯಾದಿ ಋಕ್ಕುಗಳಲ್ಲಿ ಉಷಾಸಾನಕ್ತಾ ದೇವತೆಗಳ ಮಹತ್ತಾದ ಸ್ವರೂಪವು ವರ್ಣಿತವಾಗಿವೆ. ಮತ್ತು,

**ದ್ವೇ ವಿರೂಪೇ ಚರತಃ ಸ್ವರ್ಥೇ ಅನ್ಯಾನ್ಯಾ ವತ್ಸಮುಪ ಧಾಪಯೇತೇ ।**
**ಹರಿರನ್ಯಸ್ಯಾಂ ಭವತಿ ಸ್ವಧಾವಾಞ್ಛುಕ್ರೋ ಅನ್ಯಸ್ಯಾಂ ದದೃಶೇ ಸುವರ್ಚಾಃ ॥**
(ಋ. ಸಂ. ೧-೯೫-೧)

**ಪುನಃ ಪುನರ್ಜಾಯಮಾನಾ ಪುರಾಣೀ ಸಮಾನಂ ವರ್ಣಮಭಿಶುಂಭಮಾನಾ ।**
**ಶ್ವಘ್ನೀವ ಕೃತ್ನುರ್ವಿಜ ಆಮಿನಾನಾ ಮರ್ತಸ್ಯ ದೇವೀ ಜರಯಂತ್ಯಾಯುಃ ॥**
(ಋ. ಸಂ. ೧-೯೨-೧೦)

ಇತ್ಯಾದಿ ಋಕ್ಕುಗಳಲ್ಲಿ ರಾತ್ರಿಯೂ ಉಷಸ್ಸೂ ಸಹ ಪದೇ ಹುಟ್ಟುತ್ತಿರುವುವರಿಂದ ಶಿಶುರೂಪರಾಗಿರುವರೆಂಬ ಅಂಶವೂ ವರ್ಣಿತವಾಗಿವೆ. ಆದುದರಿಂದ **ಯಹ್ವೀ** ಎಂಬ ಪದಕ್ಕೆ ಮೇಲಿನ ಎರಡು ಅರ್ಥಗಳಲ್ಲಿ ಯಾವುದನ್ನು ಬೇಕಾದರೂ ಹೇಳಬಹುದು

**ನಕ್ತೋಷಸಾ**—ಈ ದೇವತೆಗಳ ಇತರ ವಿಶೇಷಣಗಳೊಡನೆ **ಋತಸ್ಯ ಮಾತರಾ** ಎಂಬ ವಿಶೇಷಣವು ಬಹು ಮುಖ್ಯವಾದುದು

**ದ್ರುವತಾಂ ತ ಉಷಸಾ ವಾಜಯಂತೀ ಅಗ್ನೇ ವಾತಸ್ಯ ಪಥ್ಯಾಭಿರಚ್ಛ ।**
**ಯತ್ಸೀಮಂಜಂತಿ ಪೂರ್ವ್ಯಂ ಹವಿರ್ಭಿರಾ ವಂಧುರೇವ ತಸ್ಥತುರ್ದುರೋಣೇ ॥**
(ಋ. ಸಂ. ೩-೧೪-೩)

ಎಂಬ ಋಕ್ಕಿನಲ್ಲಿ ಯಜ್ಞಕ್ಕೂ ಅವರಿಗೂ ಇರತಕ್ಕ ನಿತ್ಯಸಂಬಂಧವು ವರ್ಣಿತವಾಗಿದೆ. ಅವರನ್ನು ಆಹ್ವಾನಿಸಿರುವ ಋಕ್ಕುಗಳಲ್ಲೆಲ್ಲಾ (ಇಂತಹ ಋಕ್ಕುಗಳು ಸುಮಾರು ಇಪ್ಪತ್ತಿವೆ) ಇತರ ದೇವತೆಗಳೊಡನೆ ಬಂದು ದರ್ಭಾಸನದ ಮೇಲೆ ಕುಳಿತುಕೊಳ್ಳಬೇಕೆಂದು ಪ್ರಾರ್ಥಿಸಿವೆ. ಅದರಲ್ಲೂ ಉಷಃಕಾಲದಲ್ಲಿಯೂ ಸಾಯಂಕಾಲದಲ್ಲಿಯೂ ಪ್ರಜ್ವಲಿತ ನಾಗತಕ್ಕ ಅಗ್ನಿಯೊಡನೆ ಅತ್ಯಂತ ನಿಕಟವಾದ ಸಂಬಂಧವಿದೆ. ಆದುದರಿಂದಲೇ ಅವರು ತಮ್ಮ ನಡುವೆ ಅಗ್ನಿ ಯನ್ನು ಧರಿಸಿ ಹಿಡಿದಿರುವುದಾಗಿ ಅಲಂಕಾರಿತವಾದ ವರ್ಣನೆಯು,

ನಕ್ತೋಷಾಸಾ ವರ್ಣಮಾಮೇಮ್ಯಾನೇ ಧಾಪಯೇತೇ ಶಿಶುಮೇಕಂ ಸಮೀಚೀ ।
ದ್ಯಾವಾಕ್ಷಾಮಾ ರುಕ್ಮೋ ಅಂತರ್ವಿ ಭಾತಿ ದೇವಾ ಅಗ್ನಿಂ ಧಾರಯನ್ದ್ರವಿಣೋದಾಂ ॥
(ಋ. ಸಂ. ೧-೯೬-೫)

ಇತ್ಯಾದಿ ಋಕ್ಕುಗಳಲ್ಲಿ ಶಿಶು ರೂಪನಾದ ಅಗ್ನಿಗೆ ಸ್ತನ್ಯಪಾನಮಾಡಲು ಸಹಾಯಮಾಡುತ್ತಾರೆಂದು ತಿಳಿಸುತ್ತದೆ. ಈ ಸಂಬಂಧವಿರುವುದರಿಂದಲೇ ಇವರು ಯಜ್ಞಕರ್ತನ ಸಮೀಪವರ್ತಿನಿಯರೆಂದು ಹೇಳಲ್ಪಟ್ಟಿದ್ದಾರೆ. ಸಾಧಾರಣವಾಗಿ ಆಪ್ರೀಸೂಕ್ತಗಳಲ್ಲೂ ಸಹ ಈ ಅಂಶದ ವರ್ಣನೆಯು ಪುನರಾವರ್ತವಾಗಿದೆ. ಉದಾಹರಣೆಗೆ—

ಆ ಸುಷ್ವಯಂತೀ ಯಜತೇ ಉಪಾಕೇ ಉಷಾಸಾನಕ್ತಾ ಸದತಾಂ ನಿ ಯೋನೌ ।
ದಿವ್ಯೇ ಯೋಷಣೇ ಬೃಹತೀ ಸುರುಕ್ಮೇ ಅಧಿ ಶ್ರಿಯಂ ಶುಕ್ರಪಿಶಂ ದಧಾನೇ ॥
(ಋ. ಸಂ. ೧೦.೧೧೦-೬)

ಎಂಬ ಆಪ್ರೀ ಸೂಕ್ತದ ಋಕ್ಕಿನಲ್ಲಿಯೂ ಇದೇ ವಿಷಯವು ಹೇಳಲ್ಪಟ್ಟಿದೆ.

ಉಷಾಸಾನಕ್ತಾ ದೇವತೆಗಳಿಗೆ ಯಜ್ಞಕಾರ್ಯಗಳಲ್ಲಿ ಗೌಣವಾದ ಸ್ಥಾನವಿಲ್ಲದೇ ಅತಿಮುಖ್ಯವಾದ ಸ್ಥಾನ ಲಭಿಸುವುದೆಂದು ಈ ಅಂಶದಿಂದ ತಿಳಿಯುತ್ತದೆ. ಈ ಪ್ರಧಾನವಾದ ಸ್ಥಾನಲಾಭವು,

ಹೋತಾ ಯಕ್ಷದುಷಾಸಾನಕ್ತಾ ಬೃಹತೀ ಸುಪೇಶಸಾ ನೄಗ್ಂ ಪತಿಭ್ಯೋ ಯೋನಿಂ ಕೃಣ್ವಾನೇ ॥
ಸಗ್ಂಸ್ಮಯಮಾನೇ ಇಂದ್ರೇಣ ದೇವೈರೇದಂ ಬರ್ಹಿಃ ಸೀದತಾಂ ವೀತಾಮಾಜ್ಯಸ್ಯ ಹೋತರ್ಯಜ ॥
(ತೈ. ಬ್ರಾ. ೩-೬-೨-೧)

ಎಂಬ ಪ್ರೈಷಸೂಕ್ತದ ಮಂತ್ರದಲ್ಲಿ ಸೂಚಿತವಾಗಿ ಉಷಾನಕ್ತರು ಕೇವಲ ಅಗ್ನಿಯೊಡನೆ ಮಾತ್ರವಲ್ಲದೇ ಇಂದ್ರಾದಿ ಇತರ ದೇವತೆಗಳೊಡನೆಯೂ ದರ್ಭಾಸನದ ಮೇಲೆ ಕುಳಿತುಕೊಳ್ಳಬೇಕೆಂಬ ಪ್ರಾರ್ಥನೆಯಿದೆ. ಐತರೇಯಬ್ರಾಹ್ಮಣದಲ್ಲಿ ಇವರನ್ನು ಅಹೋರಾತ್ರೇ ಎಂದು ಸಂಬೋಧಿಸಿದೆ ನಿರುಕ್ತಕಾರರು ೮,೧೧ ರಲ್ಲು ಈ ದೇವತೆಗಳ ಸ್ವರೂಪವನ್ನು ವಿವರಿಸಿದ್ದಾರೆ. ಉಷಸ್ ಮತ್ತು ನಕ್ತ ಎಂಬ ಎರಡು ಪದಗಳ ನಿಷ್ಪತ್ತಿಯನ್ನೂ ಈ ದೇವತೆಗಳ ಸ್ವರೂಪವನ್ನೂ ನಿರುಕ್ತಕಾರರು ಹೇಳಿರುವುದನ್ನು ಹಿಂದೆಯೇ ತಿಳಿಸಿದೆ. ಬೃಹದ್ದೇವತೆಯಲ್ಲೂ ಸಹ, ಇವರನ್ನು ಈರೀತಿ ವರ್ಣಿಸಿದೆ.

ನಕ್ತೋಷಾಸೌ ಚ ಯೇ ದೇವ್ಯಾವಾಗ್ನೇಯ್ಯಾವೇವ ತೇ ಸ್ಮೃತೇ ।
ಶ್ಯಾವ್ಯಾಗ್ನೇಯೀ ಹಿ ಕಾಲಸ್ಯ ತಸ್ಯೈವೋಷಾಃ ಕಲೇವ ತು॥
(ಬೃ. ದೇ. ೩-೮)

ಉಷಸ್ಸು ಮತ್ತು ನಕ್ತ ಈ ಎರಡು ದೇವತೆಗಳೂ ಸಹ ಅಗ್ನಿ ಸಂಬಂಧಿಗಳೆಂದು ಪ್ರಸಿದ್ಧವಾಗಿವೆ. ಇವುಗಳಲ್ಲಿ ಶ್ಯಾವಿಯು (ರಾತ್ರಿದೇವತೆ ೧-೭೧-೧) ಅಗ್ನಿಯೊಂದಿಗೆ ನಿಕಟವಾದ ಸಂಬಂಧವನ್ನು ಹೊಂದಿರುವುದೂ, ಮತ್ತು ಉಷಃ ಕಸ್ಮಾದುಚ್ಛತೀತಿ ಸತ್ಯಾ ರಾತ್ರೇರಪರಃ ಕಾಲಃ (ನಿ ೨-೧೮) ಎಂಬ ನಿರುಕ್ತವಾಕ್ಯದಿಂದ ಉಷಸ್ಸು ಆ ರಾತ್ರಿಯ ಅಪರಕಾಲವೆಂದೂ ತಿಳಿದ ವಿಷಯವಾಗಿದೆ.

ತಮು ಉಚ್ಛತ್ಯುಷಾ ನಕ್ತಾನಕ್ತೀವಮಾಂ ಹಿಮಬಿಂದುಭಿಃ ।
ಅಪಿ ವಾವ್ಯಕ್ತವರ್ಣೇತಿ ನಇದ್ ಪ್ರಾವರ್ಣಜ್ಯೋರಿದಂ ಭವೇತ್ ॥
(ಬೃ. ದೇ. ೩-೯)

ಈ ಇಬ್ಬರಲ್ಲಿ ಉಷಸ್ಸು ಕತ್ತಲನ್ನು ಓಡಿಸುತ್ತಾಳೆ. ರಾತ್ರಿಯು ಹಿಮಬಿಂದುಗಳಿಂದ ಎಲ್ಲವನ್ನೂ ನೆನೆಯುವಂತೆಯೂ ವ್ಯಾಪ್ತವಾಗುವಂತೆಯೂ ಮಾಡುತ್ತಾಳೆ. ಅಥವಾ ನಿರ್ದಿಷ್ಟವಾದ ವರ್ಣವಿಲ್ಲದಿರುವುದರಿಂದ **ನಞ್** ಪದದೊಡನೆ **ಅಞ್ಜ್** ಧಾತುವು ಸೇರಿ ಅವ್ಯಕ್ತವರ್ಣರೆಂಬ ಅರ್ಥವನ್ನು ಕೊಡುತ್ತದೆ..

**ಸಾ ಹಿ ದೋಷಾ ಭವತ್ಯಾದೌ ನಿಶೀಥೇ ಸಾ ತಮಸ್ವತೀ ।**
**ನಾಮ್ನಾ ಭವತ್ಯುಷಾಶ್ಚೈವ ಸೈಷಾ ಪ್ರಾಗುದಯಾದ್ರವೇಃ ॥**
(ಬೃ. ದೇ. ೩-೧೦)

ಪ್ರಾರಂಭದಲ್ಲಿ ಈ ದೇವತೆಗೆ (ಪ್ರ)**ದೋಷಾ** ಎಂದೂ, ಮಧ್ಯರಾತ್ರಿಯಲ್ಲಿ **ತಮಸ್ವತೀ**ಯೆಂದೂ ಸೂರ್ಯೋದಯಕ್ಕೆ ಮೊದಲು **ಉಷಸ್ಸೆಂದೂ** ಹೆಸರು. **ದೋಷಾ, ತಮಸ್ವತೀ, ಶ್ಯಾವೀ, ನಕ್ತಾ** ಇವೆಲ್ಲಾ ರಾತ್ರಿ ನಾಮಗಳೆಂದು ನಿಘಂಟುವಿನಲ್ಲಿ ಪಠಿತವಾಗಿದೆ (ನಿಘಂಟು ೧-೭).

ಋಕ್ಸಂಹಿತೆಯ ಇತರ ಕಡೆಗಳಲ್ಲಿ **ತಂತುಂ ತತಂ ಸಂವಯಂತೀ** (೨.೩.೬) ಇತ್ಯಾದಿ ವಿಶೇಷಣಗಳಿಂದ ಯಜ್ಞದ ವಿಸ್ತರಣೆಗೆ **ಉಷಾಸಾನಕ್ತ**ಗಳ ಸಹಾಯವನ್ನು ವಿವರಿಸಿದೆ.

ವ್ಯಾಕರಣಪ್ರಕ್ರಿಯಾ

**ಭಂದಮಾನೇ**—ಭದಿ ಕಲ್ಯಾಣೇ. ಸುಖೇ ಚ. ಧಾತು. ಭ್ವಾದಿ. ಲಿಟಿ ಶಾನಚಾದೇಶ **ಇದಿತೋನುಮ್-ಧಾತೋಃ** ಎಂಬುದರಿಂದ ನುಮಾಗಮ. ಶಪ್ ವಿಕರಣ **ಆನೇಮುಕ್** (ಪಾ. ಸೂ. ೭-೨-೮೨) ಎಂಬುದರಿಂದ ಮುಕಾಗಮ. ಅದುಪದೇಶದ ಪರದಲ್ಲಿ ಲಸಾರ್ವಧಾತುಕ ಬಂದುದರಿಂದ **ತಾಸ್ಯನುದಾತ್ತೇತ್**—(ಪಾ. ಸೂ. ೬-೧-೧೮೬) ಎಂಬುದರಿಂದ ಅದು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ. ಸಪ್ತಮಾ ಏಕವಚನಾಂತರೂಪ.

**ಉಷಾಕೇ**—ಅಂತೋದಾತ್ತಸ್ವರ ಪ್ರಾಪ್ತವಾದರೆ ವ್ಯತ್ಯಯದಿಂದ ಆದ್ಯುದಾತ್ತವಾಗುತ್ತದೆ.

**ನಕ್ತೋಷಸಾ**—ನಕ್ತಂ ಚ ಉಷಾಶ್ಚ ನಕ್ತೋಷಸಾ. ದ್ವಿವಚನ ಔಕಾರ ವಿಭಕ್ತಿಗೆ **ಸುಪಾಂ ಸುಲುಕ್**—(ಪಾ.ಸೂ. ೭-೧-೩೯) ಎಂಬುದರಿಂದ ಆಕಾರಾದೇಶ. ಪೂರ್ವಪದದ ಮಕಾರಕ್ಕೆ ಲೋಪವೂ ಉತ್ತರಪದದಲ್ಲಿ ದೀರ್ಘವೂ ಛಾಂದಸವಾಗಿ ಬರುತ್ತವೆ.

**ಸುಪೇಶಸಾ**—ಶೋಭನಂ ಪೇಶಃ ರೂಪಂ ಯಯೋಸ್ತೇ । ಹಿಂದಿನಂತೆ ಆಕಾರಾದೇಶ. **ನಞ್ಸುಭ್ಯಾಮ್** (ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಪ್ರಾಪ್ತವಾದರೆ ಅದಕ್ಕೆ ಅಪವಾದವಾಗಿ **ಆದ್ಯುದಾತ್ತಂ ದ್ವ್ಯಚ್ಛಂದಸಿ** (ಪಾ. ಸೂ. ೬-೨-೧೧೯) ಎಂಬುದರಿಂದ ಉತ್ತರಪದ ಆದ್ಯುದಾತ್ತಸ್ವರವಾಗುತ್ತದೆ.

ಮಾತರಾ—**ಸುಪಾಂ ಸುಲುಕ್**—(ಪಾ. ಸೂ. ೭-೩೯) ಎಂಬುದರಿಂದ ವಿಭಕ್ತಿಗೆ ಆಕಾರಾದೇಶ.

**ಸೀದತಾಮ್**—ಷದ್ಲೃ ವಿಶರಣಗತ್ಯವಸಾದನೇಷು. ಲೋಟ್ ಪ್ರಥಮಪುರುಷ ದ್ವಿವಚನದಲ್ಲಿ ಲಸ್ಥಾನದಲ್ಲಿ ತಾಮಾದೇಶ. **ಪಾಘ್ರಾಧ್ಮಾ**—(ಪಾ. ಸೂ. ೭-೩-೭೮) ಎಂಬುದರಿಂದ ಸೀದಾದೇಶ. ಅದುಪದೇಶದ ಪರದಲ್ಲಿ ಪ್ರತ್ಯಯ ಬಂದುದರಿಂದ **ತಾಸ್ಯನುದಾತ್ತೇತ್**—ಸೂತ್ರದಿಂದ ಅದು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ. ಪಾದಾದಿಯಲ್ಲಿ ಬಂದುದರಿಂದ ನಿಘಾತಸ್ವರ ಬರುವುದಿಲ್ಲ. ॥ ೭ ॥



। ಸಂಹಿತಾಪಾಠಃ ।

ಮಂದ್ರಜಿಹ್ವಾ ಜುಗುರ್ವಣೀ ಹೋತಾರಾ ದೈವ್ಯಾ ಕವೀ ।
ಯಜ್ಞಂ ನೋ ಯಕ್ಷತಾಮಿಮಂ ಸಿಧ್ರಮದ್ಯ ದಿವಿಸ್ಪೃಶಂ ॥ ೮ ॥

ಪದಪಾಠಃ

ಮಂದ್ರಽಜಿಹ್ವಾ । ಜುಗುರ್ವಣೀ ಇತಿ । ಹೋತಾರಾ । ದೈವ್ಯಾ । ಕವೀ ಇತಿ ।
ಯಜ್ಞಂ । ನಃ । ಯಕ್ಷತಾಂ । ಇಮಂ । ಸಿಧ್ರಂ । ಅದ್ಯ । ದಿವಿಽಸ್ಪೃಶಂ ॥ ೮ ॥

ಸಾಯಣಭಾಷ್ಯಂ

ಮಂದ್ರಜಿಹ್ವಾ ದೇವಾನಾಂ ಮಾದನಜ್ವಾಲೌ ಜುಗುರ್ವಣೀ ಭೃಶಂ ಗೃಣತಾಂ ಸ್ತುವತಾಂ ಯಜ
ಮಾನಾನಾಂ ಸಂಭಕ್ತಾರೌ ॥ ಗೃಣತೇರ್ಯಙ್ಲುಗಂತಾತ್ ಕ್ವಿಪಿ ಚ್ಛಾಂದಸೀ ರೂಪಸಿದ್ಧಿಃ । ತಸ್ಮಿನ್ನುಪ
ಪದೇ ವನತೇಶ್ಛಂದಸಿ ವನಸನರಕ್ಷಿಮಥಾಮಿತೀನ್ಪ್ರತ್ಯಯಃ ॥ ಕವೀ ಮೇಧಾವಿನೌ ಕ್ರಾಂತದರ್ಶಿನ
ದೈವ್ಯಾ ಹೋತಾರಾ ದೇವಸಂಬಂಧಿನೌ ಹೋತಾರೌ ಅಯಂ ಚ ಮಧ್ಯಮಸ್ಥಾನಶ್ಚೇತ್ಯುಭೌ ಸಿಧ್ರಂ ಫ
ಸಾಧನಭೂತಂ ॥ ಸಿಧೇಃ ಸ್ಫಾಯಿತಂಚೀತ್ಯಾದಿನಾ ರಕ್ ॥ ದಿವಿಸ್ಪೃಶಂ ದ್ಯುಲೋಕವಾಸಿದೇವಾನ
ಸ್ಪೃಶಂತಂ । ತೈರ್ಹವಿಷಃ ಸ್ವೀಕ್ರಿಯಮಾಣತ್ವಾದಿತಿ ಭಾವಃ । ಈದೃಶಂ ನೋಽಸ್ಮದೀಯಮಿಮಂ ಯಜ್ಞ
ಮದ್ಯ ಯಕ್ಷತಾಂ । ಅನುತಿಷ್ಠತಾಂ ಪೂಜಯತಾಂ ವಾ । ಸಮ್ಯಙ್ನಿರ್ವಾಹಯತಾಮಿತ್ಯರ್ಥಃ ॥

ಪ್ರತಿಪದಾರ್ಥ

**ಮಂದ್ರಜಿಹ್ವಾ**—(ದೇವತೆಗಳಿಗೆ) ಹರ್ಷವನ್ನುಂಟುಮಾಡುವ ಜ್ವಾಲೆಗಳುಳ್ಳವರೂ । **ಜುಗುರ್ವಣೀ**—
ಸ್ತೋತ್ರಮಾಡತಕ್ಕ ಯಜಮಾನರನ್ನು ಅನುಗ್ರಹಿಸುವವರೂ । **ಕವೀ**—ಮೇಧಾವಿಗಳೂ । **ದೈವ್ಯಾ ಹೋತಾರಾ**—
ದೇವತೆಗಳನ್ನು (ಯಜ್ಞಕ್ಕೆ) ಕರೆಯುವವರೂ ಆದ ಅಗ್ನಿಯ ಎರಡು ರೂಪಗಳೂ । **ಸಿಧ್ರಂ**—ಫಲದಾಯ
ವಾದುದೂ । **ದಿವಿಸ್ಪೃಶಂ**—ದೇವಲೋಕದಲ್ಲಿ (ದೇವತೆಗಳನ್ನೂ) ಸೇರುವುದೂ ಆದ । **ನಃ ಇಮಂ ಯಜ್ಞಂ**—
ನಮ್ಮ ಈ ಯಜ್ಞವನ್ನು । **ಅದ್ಯ**—ಈಗ । **ಯಕ್ಷತಾಂ**—ನೆರವೇರಿಸಲಿ.

ಭಾವಾರ್ಥ

ದೇವತೆಗಳಿಗೆ ಹರ್ಷವನ್ನುಂಟುಮಾಡುವ ಜ್ವಾಲೆಗಳುಳ್ಳವರೂ, ಭಕ್ತರಾದ ಯಜಮಾನರನ್ನು ಅನುಗ್ರಹಿ
ವವರೂ ಆದ ಅಗ್ನಿಯ ಎರಡು ರೂಪಗಳೂ ಸಹ ಫಲದಾಯಕವಾದುದೂ, ದೇವಲೋಕದಲ್ಲಿ ದೇವತೆಗಳನ್ನು ಸೇ
ವುದೂ ಆದ ನಮ್ಮ ಈ ಯಜ್ಞವನ್ನು ಈಗ ನೆರವೇರಿಸಲಿ.

## English Translation

May the two pleasing-tongued receivers of praise, the divine and sage invokers (of the gods), officiate to-day at this our sacrifice, which confers (rewards) and attains heaven.

। ವಿಶೇಷವಿಷಯಗಳು ।

**ದೈವ್ಯಾ ಹೋತಾರಾ—ದೇವಸಂಬಂಧಿನೌ ಹೋತಾರೌ। ಅಯಂ ಚ ಮಧ್ಯಮಸ್ಥಾನಶ್ಚ ಇತ್ಯುಭೌ।** ದೇವಸಂಬಂಧಿಗಳೂ ಹೋತೃಗಳೂ ಆದ ಪಾರ್ಥಿವಾಗ್ನಿ ಮತ್ತು ಅಂತರಿಕ್ಷಸ್ಥವಾದ ಅಗ್ನಿ ಎಂಬ ಅಗ್ನಿಯ ಎರಡು ರೂಪಗಳೆಂದು ಸಾಯಣರು ಅರ್ಥಮಾಡಿದ್ದಾರೆ. ಆಧುನಿಕರಾದ ಕೆಲವು ಪಂಡಿತರು ಇದಕ್ಕೆ ಭಿನ್ನವಾದ ಅರ್ಥವನ್ನು ಹೇಳಿ ತಮ್ಮಲ್ಲೇ ಅಭಿಪ್ರಾಯಭೇದವನ್ನೂ ತೋರಿದ್ದಾರೆ. Geldner ಎಂಬ ಪಂಡಿತನು ಯಜ್ಞಕರ್ತನಾದ **ಹೋತೃ** ಮತ್ತು ಅವನ **ಅಗ್ನಿ**ಯೆಂದೂ, Haug ಎಂಬುವನು **ಹೋತೃ** ಮತ್ತು **ಅಧ್ವರ್ಯು**ವೆಂದೂ, Oldenberg ಎಂಬುವನು ಹೋತೃ ಮತ್ತು ಅವನ ಸಹಾಯಕನಾದ ಮೈತ್ರಾವರುಣನೆಂದೂ ಅರ್ಥಮಾಡಿದ್ದಾರೆ. ಇವೊಂದೂ ಸಮಂಜಸವಾಗಿಲ್ಲ.

ಯಜ್ಞವನ್ನು ನೆರವೇರಿಸುವುದೇ ಈ ಹೋತೃಗಳ ಮುಖ್ಯ ಕರ್ತವ್ಯವೆಂದು **ಯಜ್ಞಂ ನೋ ಯಕ್ಷತಾಮಿಮಂ ।** ಎಂದು ೧-೧೩-೮ ; ೧-೧೮೮-೭ನೇ ಋಕ್ಕುಗಳಲ್ಲೂ, **ದೇವಾನ್ಯಜಂತಾವೃತುಥಾ ।** ಎಂದು ೨-೩-೭ ನೇ ಋಕ್ಕಿನಲ್ಲೂ ಹೇಳಿದೆ. ಈ ಕರ್ತವ್ಯಜ್ಞಾಪನವು ಮಾನವನಾದ ಹೋತೃವಿಗೆ ಅನ್ವಯಿಸತಕ್ಕದ್ದು ಮತ್ತು ಅಗ್ನಿಯನ್ನು ಕುರಿತು ಆಲಂಕಾರಿಕವಾಗಿ ಸಂಬೋಧಿಸಿದೆ. ಇದೇ ರೀತಿಯಲ್ಲಿ—

**ದೇವ್ಯಾ ಹೋತಾರಾ ಪ್ರಥಮಾ ಸುವಾಚಾ ಮಿಮಾನಾ ಯಜ್ಞಂ ಮನುಷೋ ಯಜಧ್ಯೈ ।**
**ಪ್ರಚೋದಯಂತಾ ವಿದಥೇಷು ಕಾರೂ ಪ್ರಾಚೀನಂ ಜ್ಯೋತಿಃ ಪ್ರದಿಶಾ ದಿಶಂತಾ ।**

(ಋ. ಸಂ. ೧೦-೧೧೦-೭)

ಎಂಬ ಋಕ್ಕಿನಲ್ಲಿ ಯಜ್ಞೋತ್ಪಾದಕರು ಅಥವಾ ಯಜ್ಞವನ್ನು ಮಾನವಾಡುವವರು (ಅಳೆಯುವವರು) ಎಂದಿರುವುದೂ ಇದೇ ಭಾವವನ್ನು ಸೂಚಿಸುತ್ತದೆಯೆಂದು ಕೆಲವು ಪಂಡಿತರ ಮತವಾಗಿದೆ.

ಹೀಗೆ ಕೆಲವು ವಿಶೇಷಣಗಳು ಎರಡು ಹೋತೃಗಳಿಗೂ ಸಮಾನವಾಗಿದ್ದರೂ, ಮಾನವನಾದ ಹೋತೃವಿನ ಕರ್ತವ್ಯವನ್ನೇ ಸೂಚಿಸುವಂತೆ, ಇನ್ನು ಕೆಲವು ವಿಶೇಷಣಗಳೂ ಸಹ ಇಬ್ಬರಿಗೂ ಸಾಧಾರಣವಾಗಿದ್ದರೂ ಅವು ದೇವ-ಹೋತೃವಾದ ಅಗ್ನಿಯ ಕರ್ತವ್ಯಗಳನ್ನೇ ವರ್ಣಿಸುತ್ತವೆ. ಉದಾಹರಣೆಗೆ—

**ದೇವ್ಯಾ ಹೋತಾರಾ ಪ್ರಥಮಾ ನ್ಯೃಂಜೇ ಸಪ್ತ ಪೃಕ್ಷಾಸಃ ಸ್ವಧಯಾ ಮದಂತಿ ।**
**ಋತಂ ಶಸಂತ ಋತಮಿತ್ತ ಆಹುರನು ವ್ರತಂ ವ್ರತಪಾ ದೀಧ್ಯಾನಾಃ ॥**

(ಋ. ಸಂ. ೩-೪-೭)

ಎಂಬ ಋಕ್ಕಿನಲ್ಲಿ **ಪ್ರಥಮಾ** ಎಂಬ ವಿಶೇಷಣವು ದೇವಹೋತೃವಾದ ಅಗ್ನಿಪರವೇ ಆಗಿದೆ ಎಂಬುದರಲ್ಲಿ ಸಂದೇಹವಿಲ್ಲ.

೧-೧೩-೪ ರಲ್ಲು ಹೋತಾ ಮನುರ್ಹಿತಃ ಎಂದು ಅಗ್ನಿಯು ವಿಶೇಷಣವಾಗಿದೆ. ಈ ಎರಡು ಹೋತೃಗಳಿಗೂ ಇರತಕ್ಕ ನಿಷ್ಕರ್ಷವಾದ ವ್ಯತ್ಯಾಸವನ್ನು ಪ್ರೈಷಸೂಕ್ತದಲ್ಲಿ ಈ ರೀತಿಯಾಗಿ ಹೇಳಿದೆ.

ಹೋತಾ ಯಕ್ಷದ್ದೈವ್ಯಾ ಹೋತಾರಾ ಮಂದ್ರಾ ಪೋತಾರಾ ಕವೀ ಪ್ರಚೇತಸಾ । ಸ್ವಿಷ್ಟ-ಮಿದ್ಯಾನ್ಯಃ ಕರದಿಷಾ ಸ್ವಭಿಗೂರ್ತಮನ್ಯ ಊರ್ಜಾ ಸತವಸೇಮಂ ಯಜ್ಞಂ ದಿವಿ ದೇವೇಷು ಧತ್ತಾಂ ವೀತಾಮಾಜ್ಯಸ್ಯ ಹೋತರ್ಯಜ ।

(ತೈ. ಬ್ರಾ. ೩-೬-೨-೨)

ಎಂಬ ವಾಕ್ಯದಲ್ಲಿ ಒಬ್ಬ ಹೋತೃವು ಅನ್ನರೂಪವಾದ ಹವಿಸ್ಸಿನಿಂದ ಯಜ್ಞವನ್ನು ಸ್ವೀಕಾರಾರ್ಹವನ್ನಾಗಿಮಾಡಲೆಂದೂ, ಇನ್ನೊಬ್ಬನು ಈ ಯಜ್ಞವನ್ನು ಸ್ವರ್ಗದಲ್ಲಿ ದೇವತೆಗಳ ನಡುವೆ ಸ್ಥಾಪಿಸಲೆಂದೂ ಸೂಚಿಸಿದೆ. ಈ ಕಾರ್ಯ ವಿನಿಮಯವು ಮಾನವನಾದ ಹೋತೃವಿಗೂ ದೇವಹೋತೃವಾದ ಅಗ್ನಿಗೂ ಇರುವ ವ್ಯತ್ಯಾಸವನ್ನು ತಿಳಿಸುತ್ತದೆ ಐತ-ರೇಯಬ್ರಾಹ್ಮಣದಲ್ಲಿ,

ದೈವ್ಯಾ ಹೋತಾರಾ ಯಜತಿ ಪ್ರಾಣಾಪಾನೌ ವೈ ದೈವ್ಯಾ ಹೋತಾರಾ ಪ್ರಾಣಾಪಾನಾವೇವ ತತ್ಪ್ರೀಣಾತಿ ಪ್ರಾಣಾಪಾನೌ ಯಜಮಾನೇ ದಧಾತಿ ।

(ಐ. ಬ್ರಾ. ೨-೪)

ಎಂದು ಈ ಹೋತೃಗಳಿಗೂ ಪ್ರಾಣಾಪಾನಗಳಿಗೂ ತಾದಾತ್ಮ್ಯವನ್ನು ಹೇಳಿ, ಈ ಮಂತ್ರವನ್ನು ಪಠಿಸತಕ್ಕವನು ಯಜ್ಞಕರ್ತನಿಗೆ ಪ್ರಾಣಾಪಾನಗಳ ಸುಸ್ಥಿತಿಯನ್ನು ಸಂಪಾದಿಸಿ ಕೊಡುತ್ತಾನೆಂದು ಹೇಳಿದೆ. ನಿರುಕ್ತದಲ್ಲಿ,

ದೈವ್ಯಾ ಹೋತಾರಾ ದೈವ್ಯೌ ಹೋತಾರಾವಯಂ ಚಾಗ್ನಿರಸೌ ಚ ಮಧ್ಯಮಃ ।

(ನಿ. ೮-೧೨)

ಎಂದು ಸಾಯಣರ ಅರ್ಥವನ್ನು ಸಮರ್ಥಿಸುವ ಆಧಾರವಾಕ್ಯಗಳಿಂದ ಪಾರ್ಥಿವವಾದ ಅಗ್ನಿ ಮತ್ತು ಅಂತರಿಕ್ಷಸ್ಥನಾದ ಅಗ್ನಿಯೆಂದು ಹೇಳಿದೆ. ಬೃಹದ್ದೇವತೆಯಲ್ಲಿಯೂ ಇದೇ ಅಭಿಪ್ರಾಯವನ್ನನುಮೋದಿಸುತ್ತಾ,

ದೈವ್ಯಾವಿತಿ ತು ಹೋತಾರಾವಗ್ನೀ ಪಾರ್ಥಿವಮಧ್ಯಮೌ ।
ದಿವ್ಯಾದಗ್ನೇರ್ಹಿ ಜಜ್ಞಾತೇ ದೈವ್ಯೌ ತೇನೇಹ ಜನ್ಮನಾ ॥

(ಬೃ. ದೇ. ೩-೧೧)

ಈ ಇಬ್ಬರೂ ಹೋತೃಗಳೂ ಪಾರ್ಥಿವ ಮತ್ತು ಮಧ್ಯಮರಾದ (ಅಂತರಿಕ್ಷಸ್ಥರಾದ) ಅಗ್ನಿಗಳೆಂದು ಹೇಳಿದ್ದಾರೆ.

ಜುಗರ್ವಣೀ—ಭೃಶಂ ಗೃಣತಾಂ ಯಜಮಾನಾನಾಂ ಸಂಭಕ್ತಾರೌ । ಸ್ತೋತ್ರಮಾಡತಕ್ಕ ಯಜಮಾನರನ್ನನುಗ್ರಹಿಸುವವರೆಂದರ್ಥ.

ಸಿಧ್ರಂ—ಫಲಸಾಧನಭೂತಂ । ಫಲದಾಯಕವಾದುದೆಂದರ್ಥ. ನಿರುಕ್ತಕಾರರು—

ದ್ಯಾವಾ ನಃ ಪೃಥಿವೀ ಇಮಂ ಸಿಧ್ರಮದ್ಯ ದಿವಿಸ್ಪೃಶಂ । ಯಜ್ಞಂ ದೇವೇಷು ಯಚ್ಛತಾಂ ।

(ಋ. ಸಂ. ೨-೪೧-೨೦)

ಎಂಬ ಋಕ್ಕನ್ನುದಹರಿಸಿ ಸಿಧ್ರಶಬ್ದಕ್ಕೆ ಸಾಧನವೆಂಬರ್ಥವನ್ನು ಮಾಡಿದ್ದಾರೆ. ಪ್ರಕೃತವಾದ ಋಕ್ಕಿನಲ್ಲಿ ಫಲ ಸಾಧಕವಾದ ಯಜ್ಞವೆಂದರ್ಥ.

**ಮಂದ್ರಜಿಹ್ವಾ**—**ದೇವಾನಾಂ ಮಾದನಜ್ವಾಲೌ ।** ದೇವತೆಗಳಿಗೆ ಹರ್ಷವನ್ನುಂಟುಮಾಡುವ ಜ್ವಾಲೆಗಳುಳ್ಳವರು ಎಂದರ್ಥ. **ಮಂದ್ರ, ಮಂದ್ರಜಿಹ್ವ** ಎಂಬ ಪದಗಳನ್ನು ಇದೇ ಭಾಗದ ೧-೧೪೧-೧೨ ನೇ ಋಕ್ಕಿನ ವಿಶೇಷವಿಷಯಗಳಲ್ಲಿ ವಿವರಿಸಿದೆ. **ಮಂದ್ರಜಿಹ್ವಾ** ಎಂಬ ಪದವು ಮಾನವನಾದ ಹೋತೃವಿಗೆ ವಿಶೇಷಣವಾಗಿರುವುದು ಅಸಂಭವವಾದ್ದರಿಂದ **ದೈವ್ಯಾ ಹೋತಾರೌ ।** ಎಂದರೆ ಅಗ್ನಿಯ ಎರಡು ರೂಪಗಳೇ ಆಗಿರಬೇಕೆಂದು ತಿಳಿಸುತ್ತವೆ. ಆಗ ಮಾತ್ರ ಈ ವಿಶೇಷಣವು ಸಮಂಜಸವಾಗಿರುವುದು.

### ವ್ಯಾಕರಣಪ್ರಕ್ರಿಯಾ

**ಮಂದ್ರಜಿಹ್ವಾ**—ಮದೀ ಹರ್ಷೇ ಧಾತು. **ಸ್ಫಾಯಿತಞ್ಚಿ**—(ಉ. ಸೂ. ೨-೧೬೦) ಎಂಬುದರಿಂದ ರಕ್ ಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಮಂದ್ರಾ ಜಿಹ್ವಾ ಯಯೋಸ್ತೌ ಮಂದ್ರಜಿಹ್ವಾ **ಬಹುವ್ರೀಹೌ**—(ಪಾ.ಸೂ. ೬-೨-೧) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ. **ಸುಪಾಂ ಸುಲುಕ್**—ಸೂತ್ರದಿಂದ ವಿಭಕ್ತಿಗೆ ಆಕಾರಾದೇಶ.

**ಜುಗುರ್ವಣೀ**—ಗೄ ಶಬ್ದೇ ಧಾತು. ಭೃಶಾರ್ಥತೋರುವಾಗ **ಧಾತೋರೇಕಾಚಃ**—(ಪಾ. ಸೂ. ೩-೧-೨೨) ಎಂಬುದರಿಂದ ಯಙ್ ಬಂದಾಗ **ಯಙೋಽಚಿಚ** (ಪಾ. ಸೂ. ೨-೪-೭೪) ಎಂಬುದರಿಂದ ಅದಕ್ಕೆ ಅನೈಮಿತ್ತಿಕವಾಗಿ ಲುಕ್ ಬಂದಾಗ ಛಾಂದಸವಾಗಿ ಜುಗುರ್ ಎಂದು ರೂಪವಾಗುತ್ತದೆ. ವನ ಸಂಭಕ್ತೌ ಧಾತು. ಜುಗುರ್ ಎಂಬುದು ಉಪಪದವಾಗಿರುವಾಗ **ಛಂದಸಿವನಸನರಕ್ಷಿಮಥಾಮ್** (ಪಾ. ಸೂ. ೩-೨-೨೭) ಎಂಬುದರಿಂದ ಇನ್ ಪ್ರತ್ಯಯ. ಜುಗುರ್ವಣಿ ಎಂದು ರೂಪವಾಗುತ್ತದೆ. **ಅಟ್‌ಕುಪ್ವಾಙ್**—ಎಂಬುದರಿಂದ ಧಾತು ನಕಾರಕ್ಕೆ ಣತ್ವ. ದ್ವಿವಚನಾಂತರೂಪ.

**ಹೋತಾರಾ**—ಹು ದಾನಾದನಯೋಃ ಧಾತು. ಕರ್ತರಿಯಲ್ಲಿ ತೃನ್ ಪ್ರತ್ಯಯ. ನಿತ್ತ್ವಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ದ್ವಿವಚನಕ್ಕೆ **ಸುಪಾಂ ಸುಲುಕ್**—ಎಂಬುದರಿಂದ ಆಕಾರಾದೇಶ.

**ದೈವ್ಯಾ**—ದೇವ ಶಬ್ದದ ಮೇಲೆ ಸಂಬಂಧಾರ್ಥದಲ್ಲಿ ಷ್ಯಞ್ ಪ್ರತ್ಯಯ. ಞಿತ್ತ್ವಾದುದರಿಂದ **ತದ್ಧಿತೇಷ್ವಚಾಮಾದೇಃ** ಎಂಬುದರಿಂದ ಆದಿವೃದ್ಧಿ. **ಯಸ್ಯೇತಿ ಚ** ಎಂಬುದರಿಂದ ಅಕಾರ ಲೋಪ. ಆದ್ಯುದಾತ್ತಸ್ವರ ಬರುತ್ತದೆ. ಹಿಂದಿನಂತೆ ವಿಭಕ್ತಿಗೆ ಆಕಾರಾದೇಶ.

**ಯಕ್ಷತಾಮ್**—ಯಜ ದೇವಪೂಜಾಸಂಗತಿಕರಣದಾನೇಷು. ಧಾತು. ಲೋಟ್ ಪ್ರಥಮಪುರುಷ ದ್ವಿವಚನದಲ್ಲಿ ಲಙ್ವದ್ಭಾವವಿರುವುದರಿಂದ ತಾಮಾದೇಶ. ಶಪ್ ವಿಕರಣ. **ಸಿಬ್ಬಹುಲಂ ಲೇಟಿ** (ಪಾ. ಸೂ. ೩-೧-೩೪) ಎಂಬಲ್ಲಿ ಬಹುಲಗ್ರಹಣಸಾಮರ್ಥ್ಯದಿಂದ ಇಲ್ಲಿಯೂ ಸಿಪ್ ಬರುತ್ತದೆ. **ಚೋಃಕುಃ** ಎಂಬುದರಿಂದ ಜಕಾರಕ್ಕೆ ಕುತ್ವ. **ಖರಿಚ** ಎಂಬುದರಿಂದ ಅದಕ್ಕೆ ಚರ್ತ್ವ. **ಆದೇಶ ಪ್ರತ್ಯಯಯೋಃ** ಎಂಬುದರಿಂದ ಸಿಪಿನ ಸಕಾರಕ್ಕೆ ಷತ್ವ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

ಸಿಧ್ರಮ್—ಷಿಧ ಗತ್ಯಾಮ್. ಧಾತು. ಸ್ಫಾಯಿತಂಚಿವಂ—(ಉ. ಸೂ ೨-೧೩) ಎಂಬುದರಿಂದ ರಕ್ ಪ್ರತ್ಯಯ. ಧಾತ್ವಾದೇಃ ಷಃ ಸಃ (ಪಾ. ಸೂ. ೬-೧-೬೪) ಎಂಬುದರಿಂದ ಆದಿಗೆ ಸತ್ವ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

ದಿವಿಸ್ಪೃಶಮ್—ದಿವಿ ಸ್ಪೃಶತಿ ಇತಿ ದಿವಿಸ್ಪೃಕ್. ಕ್ವಿಪ್ ಚ ಎಂಬುದರಿಂದ ಕ್ವಿಪ್ ಪ್ರತ್ಯಯ. ತತ್ಪುರುಷೇ ಕೃತಿ ಬಹುಲಮ್ (ಪಾ. ಸೂ. ೬-೩-೧೪)ಎಂಬುದರಿಂದ ವಿಭಕ್ತಿಗೆ ಅಲುಕ್ ಗತಿಕಾರಕೋಪಪದಾತ್ ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ॥ ೮ ॥



ಸಂಹಿತಾಪಾಠಃ

ಶುಚಿರ್ದೇವೇಷ್ವರ್ಪಿತಾ ಹೋತ್ರಾ ಮರುತ್ಸು ಭಾರತೀ ।

ಇಳಾ ಸರಸ್ವತೀ ಮಹೀ ಬರ್ಹಿಃ ಸೀದಂತು ಯಜ್ಞಿಯಾಃ ॥ ೯ ॥

ಪದಪಾಠಃ

ಶುಚಿಃ । ದೇವೇಷು । ಅರ್ಪಿತಾ । ಹೋತ್ರಾ । ಮರುತ್ಽಸು । ಭಾರತೀ ।

ಇಳಾ । ಸರಸ್ವತೀ । ಮಹೀ । ಬರ್ಹಿಃ । ಸೀದಂತು । ಯಜ್ಞಿಯಾಃ ॥ ೯ ॥

ಸಾಯಣಭಾಷ್ಯಂ

ಶುಚಿಃ ಶುದ್ಧಾ ಮರುತ್ಸು ವಿರುದ್ಧಲಕ್ಷಣಯೋಮರಣೇಷು ದೇವೇಷು ದ್ಯೋತನಶೀಲೇಷು ಸ್ತೋತೃಷು ಮರುತ್ಸು ಋತ್ವಿಕ್ಷು ವಾರ್ಪಿತಾ ನಿಯತಾ ಹೋತ್ರಾ ಹೋಮನಿಷ್ಪಾದಿಕಾ ಭಾರತೀ ಭರತಸ್ಯಾದಿತ್ಯಸ್ಯ ಸಂಬಂಧಿನೀ ದ್ಯುಸ್ಥಾನಾ ವಾಕ್ ತಥೇಳಾ ಪಾರ್ಥಿವೀ ಪ್ರೈಷಾದಿರೂಪಾ ಮಹೀ ಮಹತೀ ಸರಸ್ವತೀ । ಸರ ಇತ್ಯುದಕನಾಮ । ತದ್ವತೀ ಸ್ತನಿತಾದಿರೂಪಾ ಮಾಧ್ಯಮಿಕಾ ಚ ವಾಕ್ ಏತಾಸ್ತಿಸ್ರಸ್ತ್ರಿಸ್ಥಾನವಾಗಭಿಮಾನಿದೇವತಾ ಯಜ್ಞಿಯಾ ಯಜ್ಞಾರ್ಹಾಃ ಸತ್ಯೋ ಬರ್ಹಿಃ ಸ್ತೀರ್ಣಂ ಸೀದಂತು । ಉಪವಿಶಂತು ॥

### ಪ್ರತಿಪದಾರ್ಥ

**ಮರುತ್ಸು**—ಅಮರರಾದವರೂ । **ದೇವೇಷು**—ಪ್ರಕಾಶಮಾನರಾದವರೂ ಆದ ಸ್ತೋತೃಗಳಲ್ಲಾಗಲಿ, ಅಥವಾ ಮರುತ್ತುಗಳಲ್ಲಾಗಲಿ, ಅಥವಾ ಋತ್ವಿಕ್ಕುಗಳಲ್ಲಾಗಲಿ । **ಅರ್ಪಿತಾ**—ನಿಯತವಾಗಿರುವವಳೂ, । **ಶುಚಿಃ**—ಶುದ್ಧಾತ್ಮಳೂ । **ಹೋತ್ರಾ**—ಹೋಮಸಂಪಾದಿಕೆಯೂ ಆದ । **ಭಾರತೀ**—ದ್ಯುಲೋಕಸ್ಥಳೂ, ಆದಿತ್ಯಸಂಬಂಧಿನಿಯೂ ಆದ ವಾಗ್ದೇವತೆಯೂ । **ಇಳಾ**—ಪಾರ್ಥಿವಸ್ಥಳಾದ ವಾಗ್ದೇವತೆಯೂ । **ಮಹೀ**—ಮಹತ್ತಾದ ಸ್ವರೂಪವುಳ್ಳ । **ಸರಸ್ವತೀ**—ಮಾಧ್ಯಮಿಕವಾದ ಎಂದರೆ ಅಂತರಿಕ್ಷ ಲೋಕಸ್ಥಳಾದ ವಾಗ್ದೇವತೆಯೂ ಸಹ । **ಯಜ್ಞಿಯಾಃ**—ಯಜ್ಞಕ್ಕೆ ಯೋಗ್ಯರಾಗಿ । **ಬರ್ಹಿಃ**—ದರ್ಭಾಸನದ ಮೇಲೆ ! **ಸೀದಂತು**—ಕುಳಿತುಕೊಳ್ಳಲಿ.

### ಭಾವಾರ್ಥ

ಅಮರರಾದವರೂ, ಪ್ರಕಾಶಮಾನರಾದವರೂ ಆದ ಸ್ತೋತೃಗಳಲ್ಲಾಗಲಿ, ಮರುತ್ತುಗಳಲ್ಲಾಗಲಿ ಅಥವಾ ಋತ್ವಿಕ್ಕುಗಳಲ್ಲಾಗಲಿ ನಿಯತವಾಗಿರುವವಳೂ, ಹೋಮಸಂಪಾದಿಕೆಯಾದವಳೂ ಆದ ದ್ಯುಲೋಕಸ್ಥಳೂ, ಆದಿತ್ಯಸಂಬಂಧಿನಿಯೂ ಆದ ವಾಗ್ದೇವತೆಯೂ, ಪಾರ್ಥಿವಸ್ಥಳಾದ ವಾಗ್ದೇವತೆಯೂ ಮತ್ತು ಮಹತ್ತಾದ ಸ್ವರೂಪವುಳ್ಳವಳೂ ಮಾಧ್ಯಮಿಕವಾಕ್ಕೂ ಈ ಮೂರು ಸ್ಥಾನಗಳ ವಾಗಭಿಮಾನದೇವತೆಗಳೂ ಸಹ ಯಜ್ಞಕ್ಕೆ ಯೋಗ್ಯರಾಗಿ ಬಂದು ನಮ್ಮ ಯಜ್ಞಗೃಹದ ದರ್ಭಾಸನದಮೇಲೆ ಕುಳಿತುಕೊಳ್ಳಲಿ.

## English Translation

May the pure Hotra, placed among the gods, and Bharati, among the Maruts, and may the adorable Ila, Saraswati, and Mahi, sit down upon the sacred grass.

### ವಿಶೇಷ ವಿಷಯಗಳು

ಈ ಋಕ್ಕಿನಲ್ಲಿ ಮೂರು ದೇವತೆಗಳ ಗುಂಪನ್ನು ಉದ್ದೇಶಿಸಿ ಅವರನ್ನು ಯಜ್ಞಕ್ಕೆ ದಯಮಾಡಿಸಬೇಕೆಂದು ಪ್ರಾರ್ಥಿಸಿದೆ. ಪ್ರಕೃತವಾದ ಸೂಕ್ತವನ್ನು ಮತ್ತು ೧-೧೮೮ನೇ ಸೂಕ್ತವನ್ನೂ ಬಿಟ್ಟು ಉಳಿದ ಎಲ್ಲಾ ಆಪ್ರೀ ಸೂಕ್ತಗಳಲ್ಲೂ ಸಹ ಈ ದೇವತೆಗಳನ್ನು ಒಟ್ಟಿಗೆ ಸೇರಿಸಿ ತಿಸ್ರೋ ದೇವೀಃ ಎಂದು ಸಾಮೂಹಿಕವಾಗಿ ನಿರ್ದೇಶಿಸಿದೆ. **ಇಳಾ, ಸರಸ್ವತೀ, ಭಾರತೀ** ಎಂಬುವರೇ ಈ ಮೂವರು. ಈ ದೇವತೆಗಳ ಸ್ವರೂಪವೇನು ಎಂಬ ವಿಷಯದಲ್ಲಿ ಬಹಳವಾದ ವಿಪ್ರತಿಪತ್ತಿಯಿದೆ. ಈ ಸೂಕ್ತದಲ್ಲಿ **ಭಾರತೀ** ಎಂಬ ದೇವತೆಗೆ ಹೋತ್ರಾ, ಶುಚಿಃ, (ಮರುತ್ಸು, ದೇವೇಷು) ಅರ್ಪಿತಾ ಎಂಬ ವಿಶೇಷಣಗಳೂ, **ಸರಸ್ವತೀ** ಎಂಬ ದೇವತೆಗೆ ಮಹೀ ಎಂಬ ವಿಶೇಷಣವೂ ಇರುತ್ತದೆ. ಕೆಲವು ಸೂಕ್ತಗಳಲ್ಲಿ **ಮಹೀ** ಎಂಬ ಪದವು ವಿಶೇಷಣವಾಗಿರದೆ **ಭಾರತೀ** ದೇವತೆಯ ಪರ್ಯಾಯಪರವಾಗಿ ಉಪಯೋಗಿಸಲ್ಪಟ್ಟಿದೆ. ಪ್ರಕೃತದಲ್ಲಿ ಈ ದೇವತೆಗಳ ಸ್ವರೂಪವನ್ನು ನಿಷ್ಕರ್ಷವಾಗಿ ತಿಳಿಯಲು ಸಾಧ್ಯವೇ ಎಂಬುದನ್ನು ಶ್ರುತ್ಯಾದಿವಾಕ್ಯಗಳನ್ನು ಪ್ರಮಾಣವಾಗಿಟ್ಟುಕೊಂಡು ವಿಮರ್ಶಿಸಬಹುದು. ಆಪ್ರೀ ಸೂಕ್ತಗಳ ಮುಖ್ಯಾಂಶಗಳನ್ನು ಸಂಗ್ರಹಿಸಿರುವ ಪ್ರೈಷಸೂಕ್ತದಲ್ಲಿ ಈ ದೇವತೆಗಳನ್ನು ನಿರ್ದೇಶಿಸಿರುವ ಮಂತ್ರವನ್ನು ಪರಿಶೀಲಿಸಿದರೆ ;—

ಹೋತಾಯಕ್ಷತ್ತಿಸ್ರೋ ದೇವೀರಪಸಾಮಪಸ್ತಮಾ ಅಚ್ಛಿದ್ರಮದ್ಯೇದಮಪಸ್ತನ್ವತಾಂ। ದೇವೇ-
ಭ್ಯೋ ದೇವೀರ್ದೇವಮಪೋ ವಿಯಂತ್ವಾಜ್ಯಸ್ಯ ಹೋತರ್ಯಜ ॥

(ತೈ. ಬ್ರಾ. ೩-೬-೨-೨)

ಎಂದು ಮೂಲದಲ್ಲಿ ಕೇವಲ ತಿಸ್ರೋ ದೇವೀಃ ಎಂದು ಮಾತ್ರವಿದೆ. ಭಾಷ್ಯದಲ್ಲಿ ಇದನ್ನು ವಿವರಿಸುತ್ತಾ ಇಡಾ, ಸರಸ್ವತೀ, ಭಾರತೀತ್ಯೇವಂರೂಪಾಸ್ತಿಸ್ರೋಽಷ್ಟಮಪ್ರಯಾಜದೇವ್ಯಸ್ತದ್ರೂಪಮಗ್ನಿಂ ದೈವ್ಯೋ ಹೋತಾ ಯಜತು। ಇಡಾ, ಸರಸ್ವತೀ ಮತ್ತು ಭಾರತೀ ಎಂಬ ಮೂವರು ಅಷ್ಟಮಪ್ರಯಾಜದೇವತೆಗಳು ಅಗ್ನಿಯನ್ನು ಪ್ರತಿಬಿಂಬಿಸುವ ದೇವತೆಗಳೆಂದು ಹೇಳಿದೆ. ಅಲ್ಲದೆ, ಅಪಸಾಂ ಅಪಸ್ತಮಾಃ। ಕರ್ಮವತೀನಾಂ ಮಧ್ಯೇಽತಿಶಯೇನ ಕರ್ಮವತ್ಯಃ। ಅತ್ಯಂತ ಶ್ರೇಷ್ಠವಾದ ಕರ್ಮವತಿಯರೆಂದೂ ವಿಶೇಷಣದಿಂದ ತಿಳಿಸಿದೆ. ಐತರೇಯ ಬ್ರಾಹ್ಮಣದಲ್ಲಿ,

ತಿಸ್ರೋ ದೇವೀರ್ಯಜತಿ ಪ್ರಾಣೋ ವಾ ಅಪಾನೋ ವ್ಯಾನಸ್ತಿಸ್ರೋ ದೇವ್ಯಸ್ತಾ ಏವ ತತ್ಪ್ರೀಣಾತಿ ತಾ ಯಜಮಾನೇ ದಧಾತಿ।

(ಐ. ಬ್ರಾ. ೨-೪)

ಎಂದು ಈ ಮೂರು ದೇವತೆಗಳಿಗೂ, ಪ್ರಾಣ ಅಪಾನ ಮತ್ತು ವ್ಯಾನ ಎಂಬ ಜೀವತತ್ತ್ವಗಳಿಗೂ ತಾದಾತ್ಮ್ಯವನ್ನು ಹೇಳಿದೆ. ನಿರುಕ್ತಕಾರರು ಆ ನೋ ಯಜ್ಞಂ ಎಂಬ ೧೦-೧೧೦-೮ನೇ ಋಕ್ಕನ್ನುದಹರಿಸಿ ಅದಕ್ಕೆ ವಿವರಣೆಯನ್ನು ಈ ರೀತಿ ಕೊಟ್ಟಿರುತ್ತಾರೆ. ಏತು ನೋ ಯಜ್ಞಂ ಭಾರತೀ ಕ್ಷಿಪ್ರಂ। ಭರತ ಆದಿತ್ಯಸ್ತಸ್ಯ ಭಾ ಇಳಾ ಚ ಮನುಷ್ಯವದಿಹ ಚೇತಯಮಾನಾ ತಿಸ್ರೋ ದೇವ್ಯಃ ಬರ್ಹಿರಿದಂ ಸುಖಂ ಸರಸ್ವತೀ ಚ ಸುಕರ್ಮಾಣ ಆಸೀದಂತು। (ನಿ. ೮-೧೩) ಭರತನ (ಸೂರ್ಯನ) ಪ್ರಭಾರೂಪವಾದ ದೇವತೆಯೂ, ಇಳೆಯೂ, ಸರಸ್ವತಿಯೂ ಬರ್ಹಿಯನ್ನಲಂಕರಿಸಲಿ. ಬೃಹದ್ದೇವತೆಯಲ್ಲಿ,

ತಿಸ್ರಸ್ತು ದೇವ್ಯೋ ಯಾಃ ಪ್ರೋಕ್ತಾಸ್ತಿಸ್ರಸ್ಥಾನೈವೇಹ ಸಾ ತು ವಾಕ್।
ತ್ರಿವಿಧೇನೋಚ್ಯತೇ ನಾಮ್ನಾ ಜ್ಯೋತಿಃಷು ತ್ರಿಷು ವರ್ತಿನೀ ॥
ಅಗ್ನಿಮೇವಾನುಗೇಳಾ ತು ಮಧ್ಯಂ ಪ್ರಾಪ್ತಾ ಸರಸ್ವತೀ।
ಅಮೂ ಸ್ಥಿತಾಧಿ ಲೋಕಂ ತು ಭಾರತೀ ಭವತಿ ಹ್ಯಸೌ ॥
ಸೈಷಾ ತು ತ್ರಿವಿಧಾ ವಾಗ್ಸ್ಯೈ ದಿವಿ ಚ ವ್ಯೋಮ್ನಿ ಚೇಹ ಚ
ವ್ಯಸ್ತಾ ಚೈವ ಸಮಸ್ತಾ ಚ ಭಜತ್ಯಗ್ನೀನಿಮಾನಪಿ ॥

(ಬೃ. ದೇ. ೩-೧೨ರಿಂದ ೧೪)

ತ್ರಿಸ್ರೋ ದೇವ್ಯಃ ಎಂದರೆ ಮೂರು ಲೋಕಗಳಲ್ಲೂ ಇರುವ ವಾಗಧಿದೇವತೆಗಳು. [ವಾಕ್ಕಿನ ಮೂರು ರೂಪಗಳನ್ನು ಬೃ ದೇ- ೨-೭೨ರಿಂದ ೮೨ನೇ ಶ್ಲೋಕಗಳಲ್ಲಿ ವಿವರಿಸಿದೆ].

ಅಯಂ ಪ್ರಯೋಗಸ್ತ್ರೀತೇಷಾಂ ಜ್ಯೋತಿಷಾಂ ತ್ರಿಷು ವರ್ತತಾಂ।

(ಬೃ. ದೇ. ೧-೯೧)

ಎಂದು ಹೇಳಿರುವಂತೆ ಮೂರು ಲೋಕಗಳಲ್ಲಿಯೂ ಇರುವ ಬೇರೆಬೇರೆ ದೇವತೆಗಳು ಒಂದೇ ವಾಗಧಿದೇವತೆಯ ರೂಪಾಂತರಗಳು. ಇವರಲ್ಲಿ **ಇಳೆಯು** ಪಾರ್ಥಿವಾಗ್ನಿಯನ್ನನುಸರಿಸಿದಳು. **ಸರಸ್ವತಿಯು** ಮಧ್ಯಲೋಕವನ್ನಾಕ್ರಮಿಸಿದಳು ಮತ್ತು **ಭಾರತಿಯು** ದ್ಯುಲೋಕಸ್ಥಳಾದಳು. ಆದರೂ ಸಹ,

**ದೇವ್ಯಸ್ತಿಸ್ರಃ ಶ್ರಿತಾಶ್ಚೈನಂ ತ್ವಷ್ಟಾ ಚೈವೈತದಾಶ್ರಯಃ ।**

(ಬೃ. ದೇ. ೧-೧೦೮)

ಎಂಬ ವಾಕ್ಯದಲ್ಲಿ ಹೇಳಿರುವಂತೆ ಈ ಮೂರು ಲೋಕದ ದೇವತೆಗಳೂ ಸಹ ಪಾರ್ಥಿವಾಗ್ನಿಯನ್ನೇ ಸೇವಿಸುತ್ತಾರೆಂದು ಎಲ್ಲವನ್ನೂ ಕೊನೆಯಲ್ಲಿ ಅಗ್ನಿಪರವಾಗಿಯೇ ಮುಕ್ತಾಯಮಾಡಿದೆ.

**ಮಹೀ**—ಮಹತೀ ಮಹತ್ತಾದ ರೂಪವುಳ್ಳ ಎಂದು **ಸರಸ್ವತಿಗೆ** ವಿಶೇಷಣವಾಗಿದೆ. ಕೆಲವು ಕಡೆಗಳಲ್ಲಿ **ಮಹೀ** ಎಂಬ ಪ್ರತ್ಯೇಕವಾದ ದೇವತೆಯೆಂದೇ ಅರ್ಥಮಾಡಿದ್ದಾರೆ. ಮೂರು ದೇವತೆಗಳಿಗೂ ಸಾಧಾರಣವಾದ ವಿಶೇಷಣವೆಂದೂ ಇನ್ನು ಕೆಲವರ ಮತ. ಋ. ಸಂ ೭-೩-೬ ಮತ್ತು ೯-೫-೬ನೇ ಆಪ್ರೀಸೂಕ್ತಗಳ ಋಕ್ಕುಗಳಲ್ಲಿ **ಉಷಾಸಾನಕ್ತಾ** ಎಂಬುದಕ್ಕೆ ವಿಶೇಷಣವಾಗಿದೆ. ಅಲ್ಲದೇ,

**ಇಳಾ ಸರಸ್ವತೀ ಮಹೀ ತಿಸ್ರೋ ದೇವೀರ್ಮಯೋಭುವಃ । ಬರ್ಹಿಃ ಸೀದನ್ತ್ವಸ್ರಿಧಃ ॥**

(ಋ. ಸಂ. ೧-೧೩-೯)

ಎಂಬ ಋಕ್ಕಿನಲ್ಲಿಯೂ ಇದೇ ಆನುಪೂರ್ವಿಯಿರುವ ಋ. ಸಂ. ೫-೫-೮ ನೇ ಋಕ್ಕಿನಲ್ಲಿಯೂ ಸಹ **ಭಾರತೀ** ಎಂಬ ನಿರ್ದೇಶವಿಲ್ಲದಿರುವುದರಿಂದ **ಮಹೀ** ಎಂಬುದು **ಭಾರತೀ** ದೇವತೆಯ ಪರ್ಯಾಯಪದವೆಂದು ಸಾಯಣರು ಹೇಳಿದ್ದಾರೆ. ಪ್ರಕೃತವಾದ ಋಕ್ಕಿನಲ್ಲಿಯೂ ಮತ್ತು,

**ಭಾರತೀ ಪವಮಾನಸ್ಯ ಸರಸ್ವತೀಳಾ ಮಹೀ ।**
**ಇಮಂ ನೋ ಯಜ್ಞಮಾ ಗಮನ್ತ್ರಿಸ್ರೋ ದೇವೀಃ ಸುಪೇಶಸಃ ॥**

(ಋಂ. ಸಂ. ೯-೫-೮)

ಎಂಬ ಋಕ್ಕಿನಲ್ಲಿಯೂ ಸಹ ವಿಶೇಷಣವಾಗಿದೆ.

**ಇಳಾ**—ಬೃಹದ್ದೇವತೆಯಲ್ಲಿ **ಅಗ್ನಿಮೇವಾನುಗೇಳಾ** (೩-೧೩) **ಇಳೆಯು** ಪಾರ್ಥಿವಾಗ್ನಿಯನ್ನನುಸರಿಸಿದಳು ಎಂದು ಹೇಳಿರುವುದರಿಂದಲೂ,

**ಪ್ರ ದೀಧಿತಿರ್ವಿಶ್ವವಾರಾ ಜಿಗಾತಿ ಹೋತಾರಮಿಳಃ ಪ್ರಥಮಂ ಯಜಧ್ಯೈ ।**
**ಅಚ್ಛಾ ನಮೋಭಿರ್ವೃಷಭಂ ವಂದಧ್ಯೈ ಸ ದೇವಾನ್ಯಕ್ಷದಿಷಿತೋ ಯಜೀಯಾನ್ ।**

(ಋ. ಸಂ. ೩-೪-೨)

ಎಂಬ ಋಕ್ಕಿನಲ್ಲಿ ಇಳೆ ಶಬ್ದಕ್ಕೆ ಹವೀರೂಪವಾದ ಅನ್ನವೆಂದು ಅರ್ಥಮಾಡಿರುವುದರಿಂದಲೂ, ಮತ್ತು ೭-೧೬-೮ ನೇ ಋಕ್ಕಿನಲ್ಲಿ **ಘೃತಹಸ್ತಾ** ಎಂಬ ವಿಶೇಷಣವೂ, ೧೦-೭೦-೮ ರಲ್ಲಿ **ಘೃತಪದೀ** ಎಂಬ ವಿಶೇಷಣವೂ ಇರುವುದರಿಂದಲೂ **ಇಳಾ** ಎಂಬುದಕ್ಕೆ ಹವಿಸ್ಸೆಂದರ್ಥಮಾಡಬಹುದಾಗಿ ತೋರುತ್ತದೆ. ಬಹುಶಃ ಈ ಕಾರಣದಿಂದಲೇ,

**ಉತ್ತಾನಾಯಾಮವ ಭರಾ ಚಿಕಿತ್ವಾನ್ತ್ಸದ್ಯಃ ಪ್ರವೀತಾ ವೃಷಣಂ ಜಜಾನ ।**
**ಅರುಷಸ್ತೂಪೋ ರುಶದಸ್ಯ ಪಾಜ ಇಳಾಯಾಸ್ಪುತ್ರೋ ವಯುನೇಽಜನಿಷ್ಟ ॥**
(ಋ. ಸಂ ೩-೨೯-೩)

ಎಂಬ ಋಕ್ಕಿನಲ್ಲಿ **ಅಗ್ನಿಯನ್ನು ಇಳೆಯ ಪುತ್ರನೆಂದೂ** ಹೇಳಿದೆ.

ಭಾರತೀ—ನಿರುಕ್ತದಲ್ಲಿ ಆದಿತ್ಯನ ಪ್ರಭೆಯೆಂದು ಹೇಳಿದೆ. (ಭರತಃ ಆದಿತ್ಯಃ ತಸ್ಯ ಭಾಃ) Macdonell ಎಂಬ ಪಂಡಿತನು ತನ್ನ Vedic Mythology ಎಂಬ ಗ್ರಂಥದಲ್ಲಿ ಭರತವಂಶದವರಿಂದ ಅರ್ಪಿಸಲ್ಪಟ್ಟ ಹವಿಸು ಎಂದೂ, (P. 87) Grassmann ಎಂಬುವನು ವಾಗ್ದೇವತೆಯೆಂದೂ ಅರ್ಥಮಾಡಿದ್ದಾರೆ. ಅಥವಾ ಅಗ್ನಿ ಸಂಬಂಧಿಯೆಂದೂ ಅರ್ಥಮಾಡಬಹುದು.

**ತಸ್ಮಾ ಅಗ್ನಿರ್ಭಾರತಃ ಶರ್ಮ ಯಂಸಜ್ಜ್ಯೋಕ್ಪಶ್ಯಾತ್ಸೂರ್ಯಮುಚ್ಚರಂತಂ ।**
**ಯ ಇಂದ್ರಾಯ ಸುನವಾಮೇತ್ಯಾಹ ನರೇ ನರ್ಯಾಯ ನೃತಮಾಯ ನೃಣಾಂ ।**
(ಋಂ ಸಂ. ೪-೨೫-೪)

ಎಂಬ ಋಕ್ಕಿನಲ್ಲಿ ಭಾರತಃ ಎಂದು ಅಗ್ನಿಗೆ ವಿಶೇಷಣವಾದುದರಿಂದ ತತ್ಸಂಬಂಧಿಯಾದ ದೇವತೆಗೆ ಭಾರತೀ ಎಂದು ಹೆಸರಿಡಬಹುದೆಂದು ಇನ್ನು ಕೆಲವರ ಮತ.

**ಸರಸ್ವತೀ—ಸರ ಇತ್ಯುದಕನಾಮ । ತದ್ವತೀ ಸ್ತನಿತಾದಿರೂಪಾ ಮಾಧ್ಯಮಿಕಾ ಚ ವಾಕ್ ।** ಸರ ಶಬ್ದಕ್ಕೆ ಉದಕವೆಂದರ್ಥ. ಉದಕವನ್ನುಳ್ಳವಳೂ ಮತ್ತು ಗುಡುಗು ಮುಂತಾದ ಶಬ್ದವುಳ್ಳವಳೂ ಆದ ಅಂತರಿಕ್ಷಸ್ಥ ವಾದ ವಾಗ್ದೇವತೆಯು ರೂಪಾಂತರವೆಂದು ಸಾಯಣರು ವಿವರಿಸಿದ್ದಾರೆ. **ಸರಸ್ವತಿಯು** ದೇವತಾತ್ಮಕಳಾದ **ನದಿ ಯೆಂದು** ಕೆಲವರ ಮತ. ಅಥವಾ **ದೇವ್ಯಸ್ತಿಸ್ರಃ ಶ್ರಿತಾಶ್ಚೈನಂ** (ಬೃ. ದೇ. ೧-೧೦೮) ಈ ಮೂವರೂ ಅಗ್ನಿ ಯನ್ನಾಶ್ರಯಿಸಿದ್ದಾರೆ ಎಂದು ಹೇಳಿರುವುದರಿಂದಲೂ ಅಗ್ನಿಯು ಪೃಥ್ವೀ, ಅಂತರಿಕ್ಷ ಮತ್ತು ದ್ಯುಲೋಕಗಳಲ್ಲಿ ಮೂರು ರೂಪಗಳಲ್ಲಿರುವುದರಿಂದಲೂ, **ಭಾರತಿಯು** ಸೂರ್ಯನ ಪ್ರಭೆಯೆಂದು ಹೇಳಿರುವುದರಿಂದಲೂ, **ಸರಸ್ವತಿಯು** ಸಿಡಿಲುಮಿಂಚುಗಳಿಗೆ ದೇವತೆಯೆಂದೂ ಹೇಳಿರುವುದರಿಂದಲೂ, ಇಳೆಯೂ ಅಗ್ನಿಗೆ ಸಾಕ್ಷಾತ್ಸಂಬಂಧವನ್ನು ಹೊಂದಿರು ವುದರಿಂದಲೂ, ಈ ಮೂವರೂ ಅಗ್ನಿಯ ರೂಪಾಂತರಗಳೆಂದೂ ಕೆಲವರ ಮತ. **ಪ್ರೈಷಸೂಕ್ತ**ದ ವಿವರಣೆಯಲ್ಲಿ **ತದ್ರೂಪಮಗ್ನಿಂ** ಎಂದಿರುವುದನ್ನು ಮೇಲೆಯೇ ಹೇಳಿದೆ.

॥ **ವ್ಯಾಕರಣಪ್ರಕ್ರಿಯಾ** ॥

**ಅರ್ಪಿತಾ—ಉಂಛಾದೀನಾಂ ಚ** (ಪಾ. ಸೂ. ೬-೧-೧೬೦) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ

ಇಳಾ—ಈಡ ಸ್ತುತೌ ಧಾತು. ಛಾಂದಸವಾಗಿ ಧಾತುವಿಗೆ ಹ್ರಸ್ವ ಬರುತ್ತದೆ. **ಕ್ವಿಪ್ ಚ** ಎಂಬುದರಿಂದ ಕ್ವಿಪ್ ಪ್ರತ್ಯಯ. ಧಾತುಸ್ವರ ಬರುತ್ತದೆ. ಟಾಪಂಚೈವ ಹಲಂತಾನಾಂ ಯಥಾ ವಾಚಾ ದಿಶಾ ನಿಶಾ (ಕೌ. ೨-೪-೨೩) ಎಂಬುದರಿಂದ ಹಲಂತವಾದರೂ ಟಾಪ್ ಬರುತ್ತದೆ.

**ಸರಸ್ವತೀ**— ಸೃ ಗತೌ ಧಾತು. ಅಸುನ್ ಪ್ರತ್ಯಯ- ಸರಸ್‌ಶಬ್ದ ನಿತ್ ಪ್ರತ್ಯಯಾಂತವಾದ್ದರಿಂದ ಆದ್ಯುದಾತ್ತವಾಗುತ್ತದೆ. ಸರಃ ಅಸ್ಯಾ ಅಸ್ತಿ ಇತಿ. **ತದಸ್ಯಾಸ್ತಿ**—ಎಂಬುದರಿಂದ ಮತುಪ್ ಪ್ರತ್ಯಯ. ತಸೌ ಮ-

ತ್ವರ್ಥೇ (ಪಾ. ಸೂ. ೧-೪-೧೯) ಎಂಬುದರಿಂದ ಭಸಂಜ್ಞಾ ಇರುವುದರಿಂದ ರುತ್ವಾದಿಗಳು ಬರುವುದಿಲ್ಲ. ಉಗಿತಶ್ಚ (ಪಾ. ಸೂ. ೪-೧-೬) ಎಂಬುದರಿಂದ ಸ್ತ್ರೀತ್ವವಿವಕ್ಷಾಮಾಡಿದಾಗ ಙೀಪ್- ಮತುಪ್, ಙೀಪ್ ಸಿತ್ವಾದುದರಿಂದ ಅನುದಾತ್ತವಾಗುತ್ತದೆ.

ಮಹೀ— ಮಹತೀ ಎಂಬಲ್ಲಿ ಛಾಂದಸವಾಗಿ ತಕಾರಲೋಪ ಬರುತ್ತದೆ. ಯಸ್ಯೇತಿ ಚ—(ಪಾ. ಸೂ. ೬-೪-೧೪೮) ಎಂಬುದರಿಂದ ಅಕಾರ ಲೋಪ. ಉದಾತ್ತನಿವೃತ್ತಿಸ್ವರದಿಂದ ಙೀಪ್ ಉದಾತ್ತವಾಗುತ್ತದೆ.

ಸೀದಂತು—ಷದಲ್ಲ ವಿಶರಣಗತ್ಯವಸಾದನೇಷು ಧಾತು. ಲೋಟ್ ಪ್ರಥಮಪುರುಷಬಹುವಚನದಲ್ಲಿ ಝಿ ಪ್ರತ್ಯಯ. ಏರುಃ ಎಂಬುದರಿಂದ ಉತ್ವ. ಅಂತಾದೇಶ. ಪಾಘ್ರಾಧ್ಮಾ—(ಪಾ. ಸೂ. ೩-೩-೭೮) ಎಂಬುದರಿಂದ ಧಾತುವಿಗೆ ಸೀದಾದೇಶ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

ಯಜ್ಞಿಯಾಃ—ಯಜ್ಞರ್ತ್ವಿಗ್ಭ್ಯಾಂ ಘಖಞೌ (ಪಾ.ಸೂ. ೫-೧-೭೧) ಎಂಬುದರಿಂದ ಅರ್ಹಾರ್ಥದಲ್ಲಿ ಘ ಪ್ರತ್ಯಯ. ಆಯನೇಯೀ-(ಪಾ. ಸೂ. ೭-೧-೨) ಎಂಬುದರಿಂದ ಅದಕ್ಕೆ ಇಯಾದೇಶ. ಯಸ್ಯೇತಿ ಚ ಎಂಬುದರಿಂದ ಅಕಾರ ಲೋಪ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ. ॥ ೯ ॥

———:o:———

ಸಂಹಿತಾಪಾಠಃ

ತನ್ನಸ್ತುರೀಪಮದ್ಭುತಂ ಪುರು ವಾರಂ ಪುರು ತ್ಮನಾ ।
ತ್ವಷ್ಟಾ ಪೋಷಾಯ ವಿ ಷ್ಯತು ರಾಯೇ ನಾಭಾ ನೋ ಅಸ್ಮಯುಃ ॥ ೧೦ ॥

ಪದಪಾಠಃ

ತತ್ । ನಃ । ತುರೀಪಂ । ಅದ್ಭುತಂ । ಪುರು । ವಾ । ಅರಂ । ಪುರು । ತ್ಮನಾ ।
ತ್ವಷ್ಟಾ । ಪೋಷಾಯ । ವಿ । ಸ್ಯತು । ರಾಯೇ । ನಾಭಾ । ನಃ । ಅಸ್ಮಯುಃ ॥ ೧೦ ॥

॥ ಸಾಯಣಭಾಷ್ಯಂ ॥

ನೋಽಸ್ಮದರ್ಥಂ ತತ್ತಾದೃಶಂ ತುರೀಪಂ ತೂರ್ಣಂ ವ್ಯಾಪ್ಯದ್ಭುತಂ ಸದ್ಯ ಆವಿರ್ಭವದಭೂತಮಿವ ಸತ್ । ಯದ್ವಾ । ಮಹನ್ನಾಮೈತತ್ । ಸಾರತೋ ಮಹತ್ । ಪುರು ವಾರಂ ಬಹೂನಾಂ ಪ್ರಾಣಿನಾಮರ್ಥಾಯೈಪಾರಮಲಂ ಸಮರ್ಥಂ । ಯದ್ವಾ । ಪುರು ವಾರಂ ಬಹು ಪ್ರಭೂತಂ ಚ । ವಾಶಬ್ದಶ್ಚಾರ್ಥೇ ।

ಅರಂ ಅಲಂ । ತ್ಮನಾತ್ಮನಾ ಪುರು । ಬಹುಕ್ರಿಯಾವಿಶೇಷಣಮೇತತ್ । ಈದೃಶಮುದಕಂ ತ್ವಷ್ಟಾ ತ್ವಷ್ಟ್ರಾದೇಃ ಕರ್ತಾ । ತ್ವಷ್ಟೃಶಬ್ದೋ ಯಾಸ್ಕೇನೈವಂ ವ್ಯಾಖ್ಯಾತಃ । ತ್ವಷ್ಟಾ ತೂರ್ಣಮಶ್ನುತ ಇತಿ ನೈರುಕ್ತಾಸ್ತ್ವಿಷೇರ್ವಾ ಸ್ಯಾದ್ದೀಪ್ತಿಕರ್ಮಣಸ್ತ್ವಕ್ಷತೇರ್ವಾ ಸ್ಯಾತ್ಕರೋತಿಕರ್ಮಣಃ । ನಿ. ೮-೧೩ । ಇತಿ । ತನ್ನಾಮಕೋ ವೈದ್ಯುತೋಽಗ್ನಿರಸ್ಮಯುರಸ್ಮಾನ್ಕಾಮಯಮಾನೋ ದೇವೋ ನಃ ಪೋಷಾಯಾಸ್ಮತ್ಪುಷ್ಟಯೇ ರಾಯೇ ಸಮೃದ್ಧಯೇ ಚ ನಾಭಾ ನಾಭೌ ವೃಷ್ಟೇರ್ಬಂಧಕೇ ಮೇಘಸ್ಯ ನಾಭಿಸ್ಥಾನೇಽವಸ್ಥಿತಮುಕ್ತಲಕ್ಷಣಮುದಕಂ ವಿ ಷ್ಯತು । ವಿವಿಧಂ ಗಮಯತು ॥ ಷೋಽಂತಕರ್ಮಣಿ । ಓತಃ ಶ್ಯನೀತ್ಯೋಕಾರಲೋಪಃ । ಉಪಸರ್ಗಾತ್ಸುನೋತೀತಿ ಷತ್ವಂ ॥ ಯದ್ವಾ । ನೋ ನಾಭಾಸ್ಮತ್ಸಂಬಂಧಿಯಜ್ಞನಾಭಾವುತ್ತರವೇದ್ಯಾಂ ರಾಯೇ ॥ ಷಷ್ಠ್ಯರ್ಥೇ ಚತುರ್ಥೀ ॥ ರಾಯೋ ಗವಾದಿಧನಸ್ಯ ಪೋಷಾಯ ಪುಷ್ಟಯೇ ॥ ಸ್ಯತಿರುಪಸೃಷ್ಟೋ ವಿಮೋಚನಾರ್ಥಃ ॥ ಉಕ್ತಲಕ್ಷಣಾಂ ವೃಷ್ಟಿಂ ಮುಂಚತು ॥

### ಪ್ರತಿಪದಾರ್ಥ

**ತ್ವಷ್ಟಾ**—ವಿದ್ಯುದ್ರೂಪದಲ್ಲಿರುವ ವೃಷ್ಟಿ ನಿರ್ಮಾಪಕನಾದ ಅಗ್ನಿಯು । **ಅಸ್ಮಯುಃ**—ನಮ್ಮಲ್ಲಿ ಅಭಿಮಾನವುಳ್ಳವನಾಗಿ । **ನಃ**—ನಮ್ಮ । **ಪೋಷಾಯ**—ಪುಷ್ಟಿಗಾಗಿಯೂ । **ರಾಯೇ**—ಅಭ್ಯುದಯಕ್ಕಾಗಿಯೂ । **ನಾಭಾ**—ಮೇಘದ ಮಧ್ಯಭಾಗದಿಂದ । [(ಅಥವಾ) **ನಃ**-ನಮ್ಮ । **ನಾಭಾ**-ಯಜ್ಞನಾಭಿಯಾದ ಉತ್ತರ ವೇದಿಕೆಯಲ್ಲಿ। **ರಾಯೇ**--ಗವಾದಿ ಧನಕ್ಕಾಗಿಯೂ । **ಪೋಷಾಯ**—ರಕ್ಷಣೆಗಾಗಿಯೂ ] । **ನಃ**—ನಮಗಾಗಿ । **ತತ್**—ಪ್ರಸಿದ್ಧವಾದುದೂ । **ತುರೀಪಂ**—ವೇಗವಾಗಿ ಬೀಳುವುದೂ । **ಅದ್ಭುತಂ**—ವಿಸ್ಮಯಕರವಾದುದೂ । **ಪುರುವಾರಂ**—ಅನೇಕ ಪ್ರಾಣಿಗಳಿಗೆ ಸಾಕಾಗಬಹುದಾದುದೂ ಅಥವಾ ಅತ್ಯಂತ ಪ್ರಭೂತವಾದುದೂ । **ತ್ಮನಾ ಪುರು**—ತಾನಾಗಿಯೇ ಅಧಿಕವಾಗಿ ಒಳ್ಳೆಯದನ್ನು ಮಾಡುವುದೂ ಆದ ಮಳೆಯನ್ನು । **ವಿ ಷ್ಯತು**—ವಿಧವಿಧವಾಗಿ ಸುರಿಸಲಿ.

### ॥ ಭಾವಾರ್ಥ ॥

ವಿದ್ಯುದ್ರೂಪದಲ್ಲಿರುವ ಅಗ್ನಿಯು ನಮ್ಮಲ್ಲಿ ಅಭಿಮಾನವುಳ್ಳವನಾಗಿ ನಮ್ಮ ಪುಷ್ಟಿಗಾಗಿಯೂ, ಅಭ್ಯುದಯಕ್ಕಾಗಿಯೂ ಸಹ ಮೇಘದ ಮಧ್ಯಭಾಗದಿಂದ ಪ್ರಸಿದ್ಧವಾದುದೂ, ವೇಗವಾಗಿ ಬೀಳುವುದೂ, ವಿಸ್ಮಯಕರವಾದುದೂ, ಅನೇಕ ಪ್ರಾಣಿಗಳಿಗೆ ಸಾಕಾಗಬಹುದಾದುದೂ, ಅತ್ಯಂತ ಪ್ರಭೂತವಾದುದೂ ಆದ ವೃಷ್ಟಿಯನ್ನು ಅಧಿಕವಾಗಿ ಸುರಿಸಲಿ.

## English Translation

May Twashtri, favourably disposed towards us, send to us, for our nourishment and prosperity, the quick (falling) wonderful, abundant (water), in the centre (of the cloud, effecting) of itself much (good).

### ವಿಶೇಷವಿಷಯಗಳು

**ತ್ವಷ್ಟಾ**—ತ್ವಷ್ಟಾ ನವಮಪ್ರಯಾಜದೇವಃ ಎಂದು ಪ್ರೈಷಸೂಕ್ತದ ವಿವರಣೆಯಿದೆ ಪ್ರೈಷಸೂಕ್ತದಲ್ಲಿ ನಾಲ್ಕೈದು ವಿಶೇಷಣಗಳಿಂದ ಈ ದೇವತೆಯ ಸ್ವರೂಪವನ್ನು ತಿಳಿಸಿದೆ.

ತ್ವಷ್ಟೃದೇವತೆಯ ವಿಷಯದಲ್ಲಿ ವೈಯಕ್ತಿಕವಾದ ಅಭಿಪ್ರಾಯಗಳನ್ನು ತಿಳಿಸುವ ಶ್ರುತಿವಾಕ್ಯಗಳಲ್ಲಿ ಈ ಕೆಳಗೆ ಉದಾಹೃತವಾಗಿರುವುವು. ಆಪ್ರೀಸೂಕ್ತಸಂಬಂಧವಾದ ದೇವತೆಯನ್ನು ಮಾತ್ರ ನಿರ್ದೇಶಿಸುವುವಾಗಿವೆ

> **ಹೋತಾಯಕ್ಷತ್ತ್ವಷ್ಟಾರಮಚಿಷ್ಟುಮಪಾಕಗ್ಂ ರೇತೋಧಾಂ ವಿಶ್ರವಸಂ ಯಶೋಧಾಂ । ಪುರುರೂಪಮಕಾಮಕರ್ಶನಗ್ಂ ಸುಪೋಷಃ ಪೋಷೈಃ ಸ್ಯಾತ್ಸುವೀರೋ ವೀರೈರ್ವೇತ್ವಾಜ್ಯಸ್ಯ ಹೋತರ್ಯಜ ।**
>
> (ತೈ. ಬ್ರಾ. ೩-೬-೨-೨)

ಎಂಬ ಮಂತ್ರದಲ್ಲಿ **ಅಚಿಷ್ಟುಂ, ಅಪಾಕಂ, ರೇತೋಧಾಂ, ವಿಶ್ರವಸಂ, ಯಶೋಧಾಂ, ಪುರುರೂಪಂ, ಅಕಾಮಕರ್ಶನಂ** ಎಂಬ ವಿಶೇಷಣಗಳಿವೆ. ಇವುಗಳಲ್ಲಿ—

**ಅಚಿಷ್ಟುಂ**--ಎಂದರೆ **ಚೇಷ್ಟನರಹಿತಂ. ಚಾಂಚಲ್ಯರಹಿತಂ, ಸ್ಥಿರಂ,** ಚಂಚಲವಲ್ಲದೇ ಸ್ಥಿರವಾಗಿರತಕ್ಕವನೆಂದೂ,

**ಅಪಾಕಂ**—ಎಂದರೆ **ಅಬಾಲಂ, ಪ್ರಾಜ್ಞಂ ।** ಬಾಲನಲ್ಲದೆ ಪ್ರಾಜ್ಞನೆಂದೂ,

**ರೇತೋಧಾಂ**—ಎನ್ನುವುದಕ್ಕೆ **ಪುತ್ರಾದಿಬೀಜಸ್ಯ ಯಜಮಾನೇ ಧಾರಯಿತಾರಂ ।** ಯಜ್ಞಕರ್ತನಲ್ಲಿ ಪುತ್ರಾದಿ ಬೀಜವನ್ನು ಬಿತ್ತುವವನೆಂದೂ,

**ವಿಶ್ರವಸಂ**—ಎಂಬುವಕ್ಕೆ **ವಿವಿಧಕೀರ್ತಿಯುಕ್ತಂ ।** ಬಗೆಬಗೆಯ ಕೀರ್ತಿಯುಕ್ತನೆಂದೂ,

**ಯಶೋಧಾಂ**—ಎಂದರೆ **ಯಜಮಾನೇ ಯಶಸಃ ಧಾರಯಿತಾರಂ ।** ಯಜ್ಞಕರ್ತನು ಯಶೋಭಾಗಿಯಾಗುವಂತೆ ಮಾಡುವವನೆಂದೂ,

**ಪುರುರೂಪಂ**—ಎನ್ನುವುದಕ್ಕೆ **ಬಹುರೂಪಂ** ವಿಧವಿಧವಾದ ರೂಪವುಳ್ಳವನೆಂದೂ,

**ಅಕಾಮಕರ್ಶನಂ**—ಎಂದರೆ **ಕಾಮಾನಾಂ ಅನಾಶಯಿತಾರಂ ।** ಯಜಮಾನನ ಇಷ್ಟಾರ್ಥಗಳನ್ನು ಸಾರ್ಥಕಗೊಳಿಸುವವನೆಂದೂ ವಿವರಿಸಿದೆ.

ಈ ವಿಶೇಷಣಗಳು **ತ್ವಷ್ಟೃವಿನ** ವೈಯಕ್ತಿಕವಾದ ಸ್ವರೂಪವನ್ನು ತಿಳಿಸುತ್ತವೆ. ನಿರುಕ್ತಕಾರರು **ತ್ವಷ್ಟೃ** ಶಬ್ದದ ನಿಷ್ಪತ್ತಿಯನ್ನು ತೋರಿಸುತ್ತಾ (೮-೧೪) **ತ್ವಷ್ಟಾ ತೂರ್ಣಮಶ್ನುತ ಇತಿ ನೈರುಕ್ತಾಃ । ತ್ವಿಷೇರ್ವಾ ಸ್ಯಾದ್ದೀಪ್ತಿಕರ್ಮಣಸ್ತ್ವಕ್ಷತೇರ್ವಾ ಸ್ಯಾತ್ ಕರೋತಿಕರ್ಮಣಃ ।** ವೇಗವಾಗಿ ವ್ಯಾಪಿಸುವುದರಿಂದ ಈ ಹೆಸರೆಂದು ನೈರುಕ್ತಕಾರರ ಮತ. ಅಥವಾ ಪ್ರಕಾಶಿಸು ಎಂಬರ್ಥವುಳ್ಳ **ತ್ವಿಷ್** ಧಾತುವಿನಿಂದಾಗಲಿ, ಕರ್ತ್ರರ್ಥಕವಾದ **ತ್ವಕ್ಷ್** ಧಾತುವಿನಿಂದಾಗಲಿ ನಿಷ್ಪನ್ನವಾಗಬಹುದೆಂದು ಹೇಳಿದ್ದಾರೆ. ಈ ನಿರ್ವಚನಗಳಿಂದ **ತ್ವಷ್ಟೃವು** ವೇಗವಾಗಿ ವ್ಯಾಪಿಸುವವನೆಂದೂ, ಪ್ರಕಾಶಿಸುವವನೆಂದೂ, ಮತ್ತು ನಿರ್ಮಾತನೆಂದೂ ಅರ್ಥವಾಗುವುದು. ಈ ದೇವತೆಯು ಯಾವ ಲೋಕಕ್ಕೆ ಸೇರಿದವನೆಂದು ತೋರಿಸಲು **ಮಾಧ್ಯಮಿಕಸ್ತ್ವಷ್ಟೇತ್ಯಾಹುರ್ಮಧ್ಯಮೇ ಚ ಸ್ಥಾನೇ ಸಮಾಮ್ನಾತಃ । ಅಗ್ನಿರಿತಿ ಶಾಕಪೂಣಿಃ ।** ಅಂತರಿಕ್ಷಸ್ಥವಾದ ದೇವತೆಗಳ ಗುಂಪಿಗೆ ಸೇರಿದವನೆಂದು ಕೆಲವರೂ, ಅಗ್ನಿಯೆಂದು ಶಾಕಪೂಣಿಯೂ ಹೇಳಿರುವ ಮತಗಳನ್ನು ತಿಳಿಸಿದ್ದಾರೆ. ಬೃಹದ್ದೇವತೆಯಲ್ಲಿ ಮೊದಲನೆಯ ಮತವನ್ನನುಮೋದಿಸುತ್ತಾ,

ತ್ವಷ್ಟಾ ರೂಪವಿಕರ್ತಾ ಚ ಯೋಽಸೌ ಮಾಧ್ಯಮಿಕೇ ಗಣೇ ।
ಸ್ತುತಃ ಸ ಚ ನಿಪಾತೇನ ಸೂಕ್ತಂ ತಸ್ಯ ನ ವಿದ್ಯತೇ ॥
(ಬೃ. ದೇ. ೩-೫)

ಎಂಬ ಶ್ಲೋಕದಲ್ಲಿ ಮಧ್ಯಮಲೋಕದ ದೇವತೆಗಳ ಗುಂಪಿನಲ್ಲಿ ಸೇರಿರತಕ್ಕವನೆಂದು ಹೇಳಿದೆ. ಇದಕ್ಕೆ ಮೊದಲು,

ತ್ವಷ್ಟಾ ತು ಯಸ್ತ್ವಯಮೇವ ಪಾರ್ಥಿವೋಽಗ್ನಿರಿತಿ ಸ್ತುತಿಃ ।
ಪಾರ್ಥಿವಸ್ಯಾಸ್ಯ ವರ್ಚಃ ಸ್ಯುಃ ಕಸ್ಯಾಪ್ಯೃಕ್ ಚಾರ್ತವೇಷು ಚ ॥
ತ್ವಿಷಿತಸ್ತ್ವಕ್ಷತೇರ್ವಾ ಸ್ಯಾತ್ ತೂರ್ಣಮಶ್ನುತ ಏವ ವಾ ।
ಕರ್ಮಸೂತ್ತಾರಣೋ ವೇತಿ ತೇನ ನಾನ್ಯೈತದಶ್ನುತೇ ॥
ಯಃ ಸಹಸ್ರತನೋ ರಶ್ಮೀ ರವೇಶ್ಚಂದ್ರಮುಪಾಶ್ರಿತಃ ।
ಸೋಽಪಿ ತ್ವಷ್ಟಾರಮೇವಾಗ್ನಿಂ ಪರಂ ಚೇಹ ಚ ಯನ್ಮಧು ॥
(ಬೃ. ದೇ. ೩-೧೫ ರಿಂದ ೧೭)

ಪಾರ್ಥಿವಾಗ್ನಿಗೆ ಪಾವ ಸ್ತುತಿಯೋ ಅದೇ ತ್ವಷ್ಟೃವನ್ನೂ ಉದ್ದೇಶಿಸಿದೆ, ಪೃಥ್ವಿಗೆ ಸಂಬಂಧಪಟ್ಟ ದೇವತೆಯೆಂಬ ಸೂಚನೆಯೂ ಕೆಲವೆಡೆಗಳಲ್ಲಿವೆ. ಋತುಪರವಾದ ಸೂಕ್ತಗಳಲ್ಲೂ ಇವನನ್ನು ಅಗ್ನಿಯ ಅಂಶವೆಂದೇ ವರ್ಣಿಸಿದೆ, ಎಂದು ಅನಂತರ **ತ್ವಷ್ಟೃ** ಪದಕ್ಕೆ ನಿರುಕ್ತದಲ್ಲಿರುವ ನಿರ್ವಚನವನ್ನೇ ಹೇಳಿದೆ. **ಚಂದ್ರವ್ಯಾಪ್ತವಾದ** ಸೂರ್ಯನ ಸಹಸ್ರರಶ್ಮಿಯು ಮಧುವಿನಲ್ಲಿಯೂ ಪರಲೋಕದಲ್ಲಿಯೂ ಪೃಥ್ವಿಯಲ್ಲಿಯೂ ವ್ಯಾಪಿಸಿರುವಂತೆ ತ್ವಷ್ಟೃವಿನಲ್ಲಿಯೂ ಇದೆ ಎಂದೂ ಸಹ ವರ್ಣಿಸಿದೆ ಮುಖ್ಯವಾಗಿ **ಬೃಹದ್ದೇವತಾಕಾರರು** ನಿರುಕ್ತೋಕ್ತವಾದ **ಶಾಕಪೂಣಿಯ** ಮತವನ್ನು ಈ ವಿಷಯದಲ್ಲಿ ಅನುಮೋದಿಸಿರುತ್ತಾರೆ. **ನಿಘಂಟುವಿನಲ್ಲಿ** ತ್ವಷ್ಟೃವನ್ನು ಮೊದಲು **ಆಪ್ರೀದೇವತೆ**ಗಳೊಡನೆಯೂ, (೫-೨) ಅನಂತರ **ಅಂತರಿಕ್ಷಸ್ಥ**ವಾದ ದೇವತೆಗಳೊಡನೆಯೂ (೫-೫) ಮೊದಲನೆಯದಾಗಿ **ದ್ಯುಲೋಕಸ್ಥ**ವಾದ ದೇವತೆಗಳೊಡನೆಯೂ (೫-೬) ಸೇರಿಸಿದೆ.

ತ್ವಷ್ಟೃ ಮತ್ತು ದಧೀಚಿಋಷಿಯ ಕಥೆಯನ್ನು ಕುರಿತು ೧-೧೩೯ ನೇ ಸೂಕ್ತದ ವಿಶೇಷವಿಷಯಗಳಲ್ಲಿ ತಿಳಿಸಿದೆ. ಐತರೇಯಬ್ರಾಹ್ಮಣದಲ್ಲಿ,

ತ್ವಷ್ಟಾರಂ ಯಜತಿ ವಾಗ್ವೈ ತ್ವಷ್ಟಾ ವಾಗ್ಘೀದಂ ಸರ್ವಂ । ತ್ವಾಷ್ಟೀಂ ವಾಚಮೇವ
ತತ್ಪ್ರೀಣಾತಿ ವಾಚಂ ಯಜಮಾನೇ ದಧಾತಿ ।
(ಐ. ಬ್ರಾ. ೨-೪)

ಎಂಬ ವಾಕ್ಯದಿಂದ ತ್ವಷ್ಟೃವಿಗೂ ವಾಕ್ಕಿಗೂ ತಾದಾತ್ಮ್ಯವನ್ನು ಹೇಳಿರುವುದೂ ಒಂದು ಮತವಾಗಿದೆ.

ಯ ಇಮೇ ದ್ಯಾವಾಪೃಥಿವೀ ಜನಿತ್ರೀ ರೂಪೈರಪಿಂಶದ್ಭುವನಾನಿ ವಿಶ್ವಾ ।
ತಮದ್ಯ ಹೋತರಿಷಿತೋ ಯಜೀಯಾನ್ ದೇವಂ ತ್ವಷ್ಟಾರಮಿಹ ಯಕ್ಷಿ ವಿದ್ವಾನ್ ।
(ಋ. ಸಂ. ೧೦-೧೧೦-೯)

ಎಂಬ ಋಕ್ಕಿನಲ್ಲಿ ಈ ದೇವತೆಗೆ ದಿವ್ಯಜನ್ಮವಿದೆಯೆಂದೂ, ಆದುದರಿಂದಲೇ ಸೃಷ್ಟಿಕಾಲಗಳಲ್ಲಿಯೂ ಸಹ ಇವನು ತನ್ನ ಪ್ರಾಕ್ತನತ್ವವನ್ನು ತೋರಿಸುತ್ತಾನೆಂದೂ ಸ್ತುತಿಸಿದೆ. ತ್ವಷ್ಟೃವು ಅತ್ಯಂತ ಪ್ರಾಚೀನನು ಎಂಬ ಅಭಿಪ್ರಾಯವು

**ಇಹ ತ್ವಷ್ಟಾರಮಗ್ರಿಯಂ ವಿಶ್ವರೂಪಮುಪಹ್ವಯೇ । ಅಸ್ಮಾಕಮಸ್ತು ಕೇವಲಃ ॥**

(ಋ. ಸಂ. ೧-೧೩-೧೦)

**ತ್ವಷ್ಟಾರಮಗ್ರಜಾಂ ಗೋಪಾಂ ಪುರೋಯಾವಾನಮಾ ಹುವೇ ।**
**ಇಂದುರಿಂದ್ರೋ ವೃಷಾ ಹರಿಃ ಪವಮಾನಃ ಪ್ರಜಾಪತಿಃ ॥**

(ಋ. ಸಂ. ೯-೫೯)

ಇತ್ಯಾದಿ ಋಕ್ಕುಗಳಲ್ಲಿ **ಅಗ್ರಿಯ, ಅಗ್ರಜ** ಎಂಬ ವಿಶೇಷಣಗಳಿಂದ ತಿಳಿಯುತ್ತವೆ.

**ತ್ವಷ್ಟಾ ರೂಪಾಣಿ ಹಿ ಪ್ರಭುಃ ಪಶೂನ್ವಿಶ್ವಾನ್ತ್ಸಮಾನಜೇ । ತೇಷಾಂ ನಃ ಸ್ಫಾತಿಮಾ ಯಜ ।**

(ಋ. ಸಂ. ೧-೧೮೮-೯)

**ತ್ವಷ್ಟಾ ರೂಪಾಣಿ ವಿಕರೋತಿ ।**

(ತೈ. ಸಂ. ೧-೫-೯-೨)

ಇತ್ಯಾದಿ ವಾಕ್ಯಗಳು **ತ್ವಷ್ಟೃ**ವಿನ ನಿರ್ಮಾಣಕಾರ್ಯವನ್ನು ಸ್ತುತಿಸುತ್ತವೆ. ಅಲ್ಲದೇ ಅವನಿಗೆ **ವಿಶ್ವರೂಪನೆಂಬ** ವಿಶೇಷಣವೂ ಇದೆ. (ಋ. ಸಂ. ೧-೧೩-೧೦).

**ತುರೀಪಂ—ತುರೀಪ** ಶಬ್ದಕ್ಕೆ ಕೇವಲ ಶಬ್ದವ್ಯುತ್ಪತ್ತಿಯನ್ನು ಮಾತ್ರ ಪರಿಶೀಲಿಸಿದರೆ, **ತೂರ್ಣಂ ವ್ಯಾಪಿ ।** ವೇಗವಾಗಿ ವ್ಯಾಪಿಸತಕ್ಕದ್ದು ಎಂದರ್ಥವಾಗುತ್ತದೆ. ವೇಗವಾಗಿ ಬೀಳುವುದು ಅಥವಾ ವ್ಯಾಪಿಸುವುದು. ಭಾಷ್ಯಕಾರರ ಮತದಂತೆ ಮಳೆಯಾಗಬಹುದು ಅಥವಾ ರೇತಸ್ಸಾಗಬಹುದು ಈ ಋಕ್ಕಿನಲ್ಲಿ ಭಾಷ್ಯಕಾರರು ಈ ಪದವನ್ನು ವೃಷ್ಟಿಗೆ ವಿಶೇಷಣವನ್ನಾಗಿ ಮಾಡಿದ್ದಾರೆ. ಆದರೆ,

**ತನ್ನಸ್ತುರೀಪಮಧ ಪೋಷಯಿತ್ನು ದೇವ ತ್ವಷ್ಟರ್ವಿ ರರಾಣಃ ಸ್ಯಸ್ವ ।**
**ಯತೋ ವೀರಃ ಕರ್ಮಣ್ಯಃ ಸುದಕ್ಷೋ ಯುಕ್ತಗ್ರಾವಾ ಜಾಯತೇ ದೇವಕಾಮಃ ॥**

(ಋ. ಸಂ. ೩-೪-೯)

ಎಂಬ ಋಕ್ಕಿನಲ್ಲಿ **ತುರೀಪ** ಶಬ್ದಕ್ಕೆ ತಾರಕವಾದ ರೇತಸ್ಸೆಂದರ್ಥಮಾಡಿದ್ದಾರೆ. ಪ್ರೈಷಸೂಕ್ತದಲ್ಲಿ **ರೇತೋಧಾಃ** ಎಂಬ ವಿಶೇಷಣವು ತ್ವಷ್ಟೃವಿನ ಒಂದು ವಿಶೇಷಗುಣವನ್ನು ಹೇಳುವುದರಿಂದ ಈ ಅರ್ಥವು ಸಾಧುವಾಗಿ ಕಾಣುವುದು ಇದೂ ಅಲ್ಲದೇ,

**ತ್ವಷ್ಟ್ರೇ ಸ್ವಾಹಾ, ತ್ವಷ್ಟ್ರೇ ತುರೀಪಾಯ ಸ್ವಾಹಾ. ತ್ವಷ್ಟ್ರೇ ಪುರುರೂಪಾಯ ಸ್ವಾಹಾ ।**

(ತೈ. ಸಂ. ೭-೩-೧೫)

ಎಂಬ ಸಂಹಿತಾವಾಕ್ಯದಲ್ಲಿಯೂ ಸಹ **ತ್ವಷ್ಟೃವಿಗೂ ತುರೀಪಕ್ಕೂ** ತಾದಾತ್ಮ್ಯವನ್ನು ಹೇಳುವಾಗ **ತುರೀಪ** ಪದಕ್ಕೆ ರೇತಸ್ಸೆಂದೇ ಅರ್ಥಮಾಡಿದೆ. Keith ಎಂಬ ಪಂಡಿತನು ಈ ಮಂತ್ರಕ್ಕೆ To Tvashtra, the Seminal ಎಂದೇ ಅರ್ಥಮಾಡಿದ್ದಾನೆ ಅಥವಾ ಮಧ್ಯಲೋಕದ ದೇವತೆಯಾದ್ದರಿಂದ ವೃಷ್ಟಿಪತನಕ್ಕೆ ಕಾರಣನೆಂದೂ ಹೇಳಬಹುದು.

ವ್ಯಾಕರಣಪ್ರಕ್ರಿಯಾ

**ಅರಮ್—ವಾಲಮೂಲ**—(ಪಾ. ಸೂ. ೮-೨-೧೮) ಎಂಬುದರಿಂದ ಲಕಾರಕ್ಕೆ ರೇಫಾದೇಶ. ಅಲಂ ಎಂಬುದು ಸ್ವರೂಪ.

**ತ್ಮನಾ**—ಆತ್ಮನಾ ಎಂದು ರೂಪವಾದಾಗ **ಮಂತ್ರೇಷ್ವಾಙ್ಯಾದೇರಾತ್ಮನಃ** (ಪಾ. ಸೂ. ೬-೪-೧೪೧) ಎಂಬುದರಿಂದ ಅದರ ಆಕಾರಕ್ಕೆ ಲೋಪ ಬರುತ್ತದೆ.

**ತ್ವಿಷ್ವಾ**—ತ್ವಿಷ ದೀಪ್ತೌ ಧಾತು. ಅಥವಾ ತ್ವಕ್ಷೂ ತನೂಕರಣೇ ಧಾತು. ಅದಕ್ಕೆ ಕರ್ತರಿಯಲ್ಲಿ ಕ್ವನ್ ಪ್ರತ್ಯಯ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. **ಸ್ಕೋಃಸಂಯೋಗಾದ್ಯೋರಂತೇಚ** ಎಂಬುದರಿಂದ ಕಕಾರಕ್ಕೆ ಲೋಪ. ಪ್ರಥಮಾಏಕವಚನಾಂತರೂಪ.

**ಪೋಷಾಯ**—ಪುಷ ಪುಷ್ಟೌ ಧಾತು. **ಹಲಶ್ಚ** (ಪಾ. ಸೂ. ೩-೩-೧೨೧) ಎಂಬುದರಿಂದ ಘಞ್ ಪ್ರತ್ಯಯ. **ಪುಗಂತಲಘೂಪಧಸ್ಯ ಚ** (ಪಾ. ಸೂ. ೭-೩-೮೬) ಎಂಬುದರಿಂದ ಧಾತುವಿನ ಲಘೂಪಧೆಗೆ ಗುಣ. ಪ್ರತ್ಯಯ ಞಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಚತುರ್ಥೀಏಕವಚನಾಂತರೂಪ.

**ವಿ ಷ್ಯತು**—ಷೋಽಂತಕರ್ಮಣಿ ಧಾತು. ಲೋಟ್ ಪ್ರಥಮಪುರುಷಏಕವಚನದಲ್ಲಿ ತಿ ಪ್ರತ್ಯಯ. **ಏರುಃ** ಎಂಬುದರಿಂದ ಉತ್ವ. **ದಿವಾದಿಭ್ಯಃಶ್ಯನ್** ಎಂಬುದರಿಂದ ಶ್ಯನ್ ವಿಕರಣ. **ಓತಃ ಶ್ಯನಿ** (ಪಾ. ಸೂ. ೭-೩-೭೧) ಎಂಬುದರಿಂದ ಧಾತುವಿನ ಓಕಾರಕ್ಕೆ ಲೋಪ. **ಧಾತ್ವಾದೇಃ ಷಃ ಸಃ** (ಪಾ. ಸೂ. ೬-೧-೬೪) ಎಂಬುದರಿಂದ ಆದಿಗೆ ಸತ್ವ ಸ್ಯತು ಎಂದು ರೂಪವಾಗುತ್ತದೆ. ವಿ ಎಂಬ ಉಪಸರ್ಗದಲ್ಲಿ ನಿಮಿತ್ತವಿರುವುದರಿಂದ **ಉಪಸರ್ಗಾತ್ ಸುನೋತಿ**—(ಪಾ. ಸೂ. ೮-೩-೬೫) ಎಂಬುದರಿಂದ ಧಾತುಸಕಾರಕ್ಕೆ ಷತ್ವ. ಅತಿಙಂತದ ಪರದಲ್ಲಿರುವುದರಿಂದ ತಿಙಂತನಿಘಾತಸ್ವರ ಬರುತ್ತದೆ. ಎರಡನೇ ವ್ಯಾಖ್ಯಾನದಲ್ಲಿ **ಉಪಸರ್ಗೇಣ ಧಾತ್ವರ್ಥಃ ಬಲಾದನ್ಯಃ ಪ್ರತೀಯತೇ** ಎಂಬ ವಚನದಿಂದ ವಿ ಉಪಸರ್ಗ ಸೇರಿದಾಗ ವಿಮೋಚನಾರ್ಥ ಕೊಡುತ್ತದೆ.

**ರಾಯೇ**—ರೈ ಶಬ್ದ. ಚತುರ್ಥೀಏಕವಚನಾಂತರೂಪ. **ಊಡಿದಂ ಪದಾದಿ**—(ಪಾ. ಸೂ ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ. ಎರಡನೇ ವ್ಯಾಖ್ಯಾನದಲ್ಲಿ ಷಷ್ಠ್ಯರ್ಥದಲ್ಲಿ ಚತುರ್ಥೀ ಬಂದಿದೆ

**ನಾಭಾ ಸುಪಾಂ ಸುಲುಕ್** (ಪಾ. ಸೂ. ೭-೧-೩೯) ಎಂಬುದರಿಂದ ವಿಭಕ್ತಿಗೆ ಡಾದೇಶ. ಡಿತ್ತಾದುದರಿಂದ ಟಿ ಲೋಪ

**ಅಸ್ಮಯುಃ**—ಅಸ್ಮಾನ್ ಆತ್ಮನಃ ಇಚ್ಛತಿ ಎಂದು ಅರ್ಥವಿವಕ್ಷೆಮಾಡಿದಾಗ **ಸುಪ ಆತ್ಮನಃ ಕ್ಯಚ್** (ಪಾ. ಸೂ. ೩-೧-೮) ಎಂಬುದರಿಂದ ಇಚ್ಛಾರ್ಥದಲ್ಲಿ ಕ್ಯಚ್. **ಕ್ಯಾಚ್ಛಂದಸಿ** (ಪಾ. ಸೂ. ೩-೨-೧೭೦) ಎಂಬುದರಿಂದ ಕ್ಯಜಂತದ ಮೇಲೆ ಉ ಪ್ರತ್ಯಯ. **ಅತೋ ಲೋಪಃ** (ಪಾ. ಸೂ. ೬-೪-೪೮) ಸೂತ್ರದಿಂದ ಅಕಾರ ಲೋಪ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ॥ ೧೦ ॥

———— :C: ————

ಸಂಹಿತಾಪಾಠಃ

ಅವಸೃಜನ್ನುಪ ತ್ಮನಾ ದೇವಾನ್ಯಕ್ಷಿ ವನಸ್ಪತೇ ।
ಅಗ್ನಿರ್ಹವ್ಯಾ ಸುಷೂದತಿ ದೇವೋ ದೇವೇಷು ಮೇಧಿರಃ ॥ ೧೧ ॥

ಪದಪಾಠಃ

ಅವऽಸೃಜನ್ । ಉಪ । ತ್ಮನಾ । ದೇವಾನ್ । ಯಕ್ಷಿ । ವನಸ್ಪತೇ ।
ಅಗ್ನಿಃ । ಹವ್ಯಾ । ಸುಸೂದತಿ । ದೇವಃ । ದೇವೇಷು । ಮೇಧಿರಃ ॥ ೧೧ ॥

ಸಾಯಣಭಾಷ್ಯಂ

ಹೇ ವನಸ್ಪತೇ ವನಾನಾಂ ಪಾಲಕ ಯೂಪಾಭಿಮಾನಿದೇವಾಗ್ನೇ ಅವಸೃಜನ್ ಸ್ವೈರಂ ವರ್ತಯನ್ನೃತ್ವಿಜಃ ಸ್ವಸ್ವಕರ್ಮಸು ವ್ಯಾಪಾರಯನ್ ತ್ಮನಾತ್ಮನಾ ದೇವಾನ್ಹವಿರ್ಭುಜ ಉಪ ಯಕ್ಷಿ । ಉಪೇತ್ಯ ಯಜ ॥ ಬಹುಲಂ ಛಂದಸೀತಿ ಶಪೋ ಲುಕ್ ॥ ದೇವೋ ದ್ಯೋತಮಾನೋ ಮೇಧಿರೋ ಮೇಧಾವಾನಗ್ನಿರಾಹವನೀಯೋ ದೇವೇಷೂಭಯೇಷಾಂ ಮಧ್ಯೇ ಹವ್ಯಾ ಹವೀಂಷಿ ಸುಸೂದತಿ । ಪ್ರೇರಯತಿ । ಸ್ವೀಕರೋತಿ ॥ ಷೂದ ಕ್ಷರಣೇ । ಬಹುಲಂ ಛಂದಸೀತಿ ಶಪಃ ಶ್ಲುಃ । ಲೇಟೋऽಡಾಟಾವಿತ್ಯಡಾಗಮಃ ॥ ಯದ್ವಾ । ಯೂಪಾಗ್ನಿರೇವ ಪರೋಕ್ಷೇಣೋಚ್ಯತೇ । ಸೋऽಗ್ನಿರ್ಹವೀಂಷಿ ಸುಷ್ಠು ಸ್ವೀಕರೋತಿ ॥

ಪ್ರತಿಪದಾರ್ಥ

**ವನಸ್ಪತೇ**—ಯೂಪಾಭಿಮಾನದೇವನಾದ ಅಗ್ನಿಯೇ । **ಅವಸೃಜನ್**—(ಋತ್ವಿಕ್ಕುಗಳನ್ನು) ಅವರವರ ಕರ್ತವ್ಯದಲ್ಲಿರಿಸುತ್ತಾ । **ತ್ಮನಾ**—ನೀನಾಗಿಯೇ (ಬಂದು) । **ದೇವಾನ್**—ದೇವತೆಗಳನ್ನು । **ಉಪ**—ಸಮೀಪಿಸಿ । **ಯಕ್ಷಿ**—ಯಾಗಮಾಡು । **ದೇವಃ**—ಪ್ರಕಾಶಮಾನನೂ । **ಮೇಧಿರಃ**—ಮೇಧಾವಂತನೂ ಆದ । **ಅಗ್ನಿಃ**—ಅಗ್ನಿಯು । **ದೇವೇಷು**—ದೇವತೆಗಳನಡುವೆ । **ಹವ್ಯಾ**—ಹವಿಸ್ಸುಗಳನ್ನು । **ಸುಸೂದತಿ**—ಸ್ವೀಕರಿಸುತ್ತಾನೆ । **ಅಥವಾ** (ದೇವತೆಗಳನಡುವೆ ಹವಿಸ್ಸುಗಳನ್ನು ಹಂಚುತ್ತಾನೆ).

ಭಾವಾರ್ಥ

ಯೂಪಾಭಿಮಾನ ದೇವತೆಯಾದ ಎಲೈ ಅಗ್ನಿಯೇ, ಋತ್ವಿಕ್ಕುಗಳನ್ನು ಅವರವರ ಕರ್ತವ್ಯದಲ್ಲಿರಿಸುತ್ತಾ ನೀನಾಗಿಯೇ ಯಜ್ಞಗೃಹಕ್ಕೆ ಬಂದು ದೇವತೆಗಳನ್ನುದ್ದೇಶಿಸಿ ಯಾಗವನ್ನು ಮಾಡು. ಪ್ರಕಾಶಮಾನನೂ, ಮೇಧಾವಂತನೂ ಆದ ಅಗ್ನಿಯು ದೇವತೆಗಳಿಗೆ ಹಂಚಲು ಹವಿಸ್ಸನ್ನು ಸ್ವೀಕರಿಸುತ್ತಾನೆ.

## English Tranlation

Vanaspati, here present of your own accord, convey our offerings to the gods: the divine and intelligent Agni accepts (the oblations) for the deities.

॥ ವಿಶೇಷವಿಷಯಗಳು ॥

**ವನಸ್ಪತೇ**—ವನಸ್ಪತಿಯ ಸ್ವರೂಪವೇನೆಂಬುದನ್ನು ಬಹಳ ವಿಮರ್ಶೆಮಾಡಿ ತಿಳಿಯಬೇಕು. ಈ ಪದದ ಆಧಾರದ ಮೇಲೆ ಕೆಲವು ಆಧುನಿಕರಾದ ಪಾಶ್ಚಾತ್ಯ ವಿದ್ವಾಂಸರು ವೇದಕಾಲದಲ್ಲಿ ಹಿಂಸಾತ್ಮಕವಾದ ಪಶುಯಾಗವು ಪ್ರಬಲವಾಗಿದ್ದು **ಆಪ್ರೀಸೂಕ್ತ**ಗಳು ಅಂತಹ ಯಾಗಕ್ಕೆ ಸಂಬಂಧಿಸಿದ ಪ್ರಯಾಜಮಂತ್ರಗಳೆಂದು ತೀರ್ಮಾನಕ್ಕೆ ಬಂದಿದ್ದಾರೆ

ಸ್ಥೂಲವಾದ ದೃಷ್ಟಿಯಿಂದ ನೋಡಿದರೆ **ವನಸ್ಪತಿ**ಯೆಂದರೆ ಯಾಗಪಶುವನ್ನು ಕಟ್ಟತಕ್ಕ ಯೂಪಸ್ತಂಭವೆಂದಾಗುತ್ತದೆ. ಆದರೆ ಇದು ಯಜ್ಞಪಶುವನ್ನು ಕಟ್ಟುವ ಸ್ತಂಭವೇ ಅಲ್ಲವೇ ಎಂಬ ವಿಷಯದಲ್ಲಿ ಶ್ರುತಿವಾಕ್ಯಗಳನ್ನು ಗಮನಿಸಿ ಅನಂತರ ಅವುಗಳ ಆಧಾರದ ಮೇಲೆ **ವನಸ್ಪತಿ**ಯ ಸ್ವರೂಪವನ್ನು ನಿಷ್ಕರ್ಷಿಸಬಹುದು. **ಪ್ರೈಷಸೂಕ್ತ**ದಲ್ಲಿ,

> **ಹೋತಾ ಯಕ್ಷದ್ವನಸ್ಪತಿಮಭಿಸಾವಸ್ರಕ್ಷದ್ಧಿಯೋ ಜೋಷ್ಟಾರಗ್ಂ ಶಶಮಂ ನರಃ। ಸ್ವದಾತ್ಸ್ವಧಿತಿ-**
> **ರ್ಋತುಥಾದ್ಯ ದೇವೋ ದೇವೇಭ್ಯೋ ಹವ್ಯಾವಾಡ್ವೇತ್ವಾಜ್ಯಸ್ಯ ಹೋತರ್ಯಜ ।**
> (ತೈ. ಬ್ರಾ. ೩ ೬-೨-೨)

ಎಂಬ ಮಂತ್ರಕ್ಕೆ ಭಾಷ್ಯವು ಈ ರೀತಿಯಿದೆ. **ವನಸ್ಪತಿಂ ಯೂಪಾಧಾರಭೂತಂ ದಶಮಪ್ರಯಾಜದೇವತಾತ್ಮಕಮಗ್ನಿಂ ದೈವ್ಯೋ ಹೋತಾ ಯಜತು** ವನಸ್ಪತಿಯು ಯೂಪಕ್ಕೆ ಆಧಾರಭೂತವಾದದ್ದು ಮತ್ತು ಹತ್ತನೇ ಪ್ರಯಾಜದೇವತಾತ್ಮಕನಾದ ಅಗ್ನಿ. ಇವನನ್ನುದ್ದೇಶಿಸಿ ಹೋತೃವು ಯಾಗವಮಾಡಲಿ ಎಂದು **ವನಸ್ಪತಿ**ಗೆ **ಧಿಯೋ ಜೋಷ್ಟಾ, ಸ್ವದಾತ್ ಸ್ವಧಿತಿಃ, ದೇವೇಭ್ಯಃ ಋತುಥಾ ಹವ್ಯವಾಹ್, ಯಜ್ಞಸ್ಯ ಆಯುಃ ಕಲ್ಪಮಾನಃ ।** ಎಂಬ ವಿಶೇಷಣಗಳಿವೆ. ಈ ವಿಶೇಷಣಗಳಲ್ಲಿ **ಧಿಯೋ ಜೋಷ್ಟಾ** ಎಂಬುದಕ್ಕೆ **ಬುದ್ಧೇಃ ಪ್ರೀಣಯಿತಾರಂ ।** ಬುದ್ಧಿಗೆ ಹರ್ಷದಾಯಕನೆಂದೂ, **ಸ್ವಧಿತಿಃ**—ಸ್ವಧಿತಿಯಿಂದ (ವಜ್ರಾಯುಧ ಅಥವಾ) ದಿವ್ಯಶಸ್ತ್ರದಿಂದ ಸಂಸ್ಕೃತವಾದದ್ದೆಂದೂ, **ಋತುಥಾ—ಋತೌ ವಿಹಿತೇ ಕಾಲವಿಶೇಷೇ ಅದ್ಯ ಅಸ್ಮಿನ್ಕರ್ಮಣಿ ಸ್ವದಾದಸ್ಮಾಭಿರ್ದೀಯಮಾನಂ ಹವಿಃ ಸ್ವದಯತು । ಕಿಂಚ ದೇವೋ ವನಸ್ಪತಿರ್ದೇವೇಭ್ಯೋ ದೇವಾರ್ಥಂ ಹವ್ಯಾಹವೀಂಷ್ಯವಾಡ್ವಹತು ।** ಈ ಯಾಗಕಾಲದಲ್ಲಿ ನಮ್ಮಿಂದ ಅರ್ಪಿತಗಳಾದ ಹವಿಸ್ಸುಗಳನ್ನು ದೇವತೆಗಳಿಗೆ ಅರ್ಪಿಸಲಿ ಎಂದು ಮಂತ್ರಾರ್ಥ. ಮತ್ತು **ಯಜ್ಞಸ್ಯ ಆಯುಃ ಕಲ್ಪಮಾನಃ** ಎಂಬ ವಿಶೇಷಣದಿಂದ ಯಜ್ಞದ ಆಯಸ್ಸನ್ನು ಬೆಳೆಸುವವನು ಎಂದರ್ಥ. ಈ ವಿಧವಾದ ವಿಶೇಷಣಗಳಿಂದ **ಪ್ರೈಷಸೂಕ್ತ**ದಲ್ಲಿ **ಅಗ್ನಿ**ಗೂ **ವನಸ್ಪತಿ**ಗೂ ತಾದಾತ್ಮ್ಯವನ್ನು ಹೇಳಿದೆ. ಐತರೇಯ ಬ್ರಾಹ್ಮಣದಲ್ಲಿ **ಪ್ರಾಣೋ ವೈ ವನಸ್ಪತಿಃ** (೨-೪) ಎಂಬ ವಾಕ್ಯದಿಂದ ನಿರ್ದೇಶಿಸಿದೆ. ನಿರುಕ್ತಕಾರರು ಮೊದಲು ವನಸ್ಪತಿಶಬ್ದದ ನಿರ್ವಚನವನ್ನು ಹೇಳಿ ಅನಂತರ ಆಪ್ರೀಸೂಕ್ತದಲ್ಲಿ

ವನಸ್ಪತಿಯ ಸ್ವರೂಪವೇನೆಂಬುದನ್ನು ತಿಳಿಸಿದ್ದಾರೆ ಋ. ಸಂ ೨-೩೭-೩ ನೇ ಋಕ್ಕನ್ನು ವಿವರಿಸುವಾಗ ಅದರಲ್ಲಿರುವ ವನಸ್ಪತಿಶಬ್ದದ ನಿರ್ವಚನವನ್ನು ತೋರಿಸುತ್ತಾ (ನಿ. ೮-೩) **ವನಾನಾಂ ಪಾತಾ ವಾ ಪಾಲಯಿತಾ ವಾ । ವನಂ ವನೋತೇಃ ।** ವನಗಳಿಗೆ ಪ್ರಭುವಾಗಿರುವುದರಿಂದಾಗಲಿ, ಅಥವಾ ಪಾಲಕನಾದುದರಿಂದಾಗಲಿ **ವನಸ್ಪತಿಯೆಂದು** (ಅಗ್ನಿಯು) ಪ್ರಸಿದ್ಧನಾಗಿದ್ದಾನೆ. ಮತ್ತು **ಪಡೆ** ಎಂಬರ್ಥವನ್ನು ಕೊಡತಕ್ಕ **ವನ್** ಧಾತುವಿನಿಂದ ನಿಷ್ಪನ್ನವಾಗಿದೆ ಎಂದು ಹೇಳಿ ಅನಂತರ ಆಪ್ರೀಸೂಕ್ತದ ದೇವತೆಗಳ ಸ್ವರೂಪವನ್ನು ಚರ್ಚಿಸುವಾಗ (೮-೧೮) **ತತ್ ಕೋ ವನಸ್ಪತಿಃ, ಯೂಪ ಇತಿ ಕಾತ್ಥಕ್ಯಃ ಅಗ್ನಿರಿತಿ ಶಾಕಪೂಣಿಃ ।** ಎಂದು ಎರಡು ಅಭಿಪ್ರಾಯಗಳನ್ನು ತಿಳಿಸಿ ಕಾತ್ಥಕ್ಯರ ಮತವನ್ನು ಸಮರ್ಥಿಸುವುದಕೆ,

**ಅಂಜಂತಿ ತ್ವಾಮಧ್ವರೇ ದೇವಯಂತೋ ವನಸ್ಪತೇ ಮಧುನಾ ದೈವ್ಯೇನ ।**
**ಯದೂರ್ಧ್ವಸ್ತಿಷ್ಠಾ ದ್ರವಿಣೇಹ ಧತ್ತಾದ್ಯದ್ವಾ ಕ್ಷಯೋ ಮಾತುರಸ್ಯಾ ಉಪಸ್ಥೇ ।**

(ಋ. ಸಂ. ೩-೮-೧)

ಎಂಬ ಋಕ್ಕನ್ನುದಹರಿಸಿದ್ದಾರೆ. ಈ ಋಕ್ಕಿನಲ್ಲಿ ಸಾಯಣರು ವನಸ್ಪತಿಪದಕ್ಕೆ **ಯೂಪನೆಂದೇ** ಸಂಬೋಧಿಸಿದ್ದಾರೆ. ಅನಂತರ ನಿರುಕ್ತಕಾರರು **ಶಾಕಪೂಣಿಯ** ಮತವನ್ನು ಸಮರ್ಥಿಸಲು

**ವನಸ್ಪತೇ ರಶನಯಾ ನಿಯೂಯಾ ದೇವಾನಾಂ ಪಾಥ ಉಪ ವಕ್ಷಿ ವಿದ್ವಾನ್ ।**
**ಸ್ವದಾತಿ ದೇವಃ ಕೃಣವದ್ಧವೀಂಷ್ಯವತಾಂ ದ್ಯಾವಾಪೃಥಿವೀ ಹವಂ ಮೇ ॥**

(೧೦-೭೦-೧೦)

ಎಂಬ ಋಕ್ಕನ್ನುದಹರಿಸಿದ್ದಾರೆ. ಇದಕ್ಕೂ ಸಾಯಣರು **ಯೂಪನೆಂದೇ** ಅರ್ಥಮಾಡಿದ್ದಾರೆ ಆದರೆ ಯೂಪಾಂತರ್ಗತವಾದ **ಅಗ್ನಿಯೆಂದು** ನಿರುಕ್ತಕಾರರ ಮತ. **ದುರ್ಗಾಚಾರ್ಯರು** ನಿರುಕ್ತದಲ್ಲಿ ಈ ಋಕ್ಕನ್ನು ವಿವರಿಸುತ್ತಾ **ಏವಮಗ್ನಿರ್ವನಸ್ಪತಿಃ । ಯತ್ ಪುನರೇತದುಕ್ತಂ ಯೂಪಾಂಜನೀಯಾಯಾಂ ‘ಯೂಪೇ ವನಸ್ಪತಿಶಬ್ದಃ’ ಇತಿ । ಅತ್ರ ಬ್ರೂಮಃ—ಅಗ್ನಿರೇವಾಸೌ ಯೂಪಾಂತರ್ಗತೋ ಯೂಪಾತ್ಮನಾ ವರ್ತಮಾನೋ ಯೂಪಾಂಜನೀಯಾಯಾಂ ವನಸ್ಪತಿಶಬ್ದೇನೋಚ್ಯತೇ ।** ಇಲ್ಲಿ ವನಸ್ಪತಿಯೆಂದರೆ **ಯೂಪಾಂತರ್ಗತನಾದ ಅಗ್ನಿಯೇ** ಹೊರತು ಬೇರೆಯಲ್ಲ ಎಂಬುದನ್ನು ಸ್ಥಿರಪಡಿಸಿದ್ದಾರೆ. ಬೃಹದ್ದೇವತಾಕಾರರು,

**ವನಸ್ಪತಿಂ ತು ಯಂ ಪ್ರಾಹುರಯಂ ಸೋಽಗ್ನಿರ್ವನಸ್ಪತಿಃ ।**
**ಅಯಂ ವನಾನಾಂ ಹಿ ಪತಿಃ ಪಾತಾ ಪಾಲಯತೀತಿ ವಾ ॥**
**ಅಗ್ನಿರ್ಗೃತ್ಸಮದೇನಾಯಂ ವನಸ್ಪತಿರಿತೀಳಿತಃ ।**
**ಮಂದಸ್ವೇತ್ಯಸ್ಯ ಸೂಕ್ತಸ್ಯ ಷಳೃಚಸ್ಯ ತೃತೀಯಯಾ ॥**
**ಯೂಪವತ್ತರುವಚ್ಚೈವ ಸ್ತುತಿರ್ಯಾಸ್ಯ ಪ್ರಸಂಗಜಾ ।**
**ಸರ್ವೇಣಾಂಜತಿ ಸೂಕ್ತೇನ ತೃತೀಯೇ ಸಾ ತು ಮಂಡಲೇ ॥**

(ಬೃ. ದೇ. ೩-೨೬ರಿಂದ ೨೮)

ಎಂಬ ವಾಕ್ಯಗಳಿಂದ ಋ. ಸಂ. ೧-೧೩-೧೧ನೇ ಋಕ್ಕಿನಲ್ಲಿ ಉದ್ದೇಶಿಸಿರುವ ಆಪ್ರೀದೇವತೆಯ ಸ್ವರೂಪವನ್ನು ಚರ್ಚಿಸಿ, ಇಲ್ಲಿ ವನಸ್ಪತಿಯೆಂದರೆ **ಪಾರ್ಥಿವಾಗ್ನಿಯೆಂದೂ** ಮತ್ತು ಋ. ಸಂ. ೨-೩೭-೩ನೇ ಋಕ್ಕಿನಲ್ಲಿ **ಗೃತ್ಸಮದನೂ** ವನಸ್ಪತಿಶಬ್ದದಿಂದ ಈ ಪಾರ್ಥಿವಾಗ್ನಿಯನ್ನೇ ಉದ್ದೇಶಿಸಿದ್ದಾನೆಂದೂ, ಮೂರನೆಯ ಮಂಡಲದಲ್ಲಿ ಮಾತ್ರ ಕೆಲವು ಋಕ್ಕುಗಳಲ್ಲಿ **ಯೂಪ** ಅಥವಾ **ವೃಕ್ಷವೆಂದರ್ಥವೆಂದೂ** ಅದೂ ಸಹ **ಪ್ರಸಂಗಜವೆಂದೂ** ತಿಳಿಸಿದ್ದಾರೆ. ಇದೇ ಅಲ್ಲದೆ,

**ಇಹೈಷ ಪವಮಾನೋಽಗ್ನಿರ್ಮಧ್ಯಮೋಽಗ್ನಿರ್ವನಸ್ಪತಿಃ ।**
**ಅಮುಷ್ಮಿನ್ನೇವ ವಿಪ್ರೈಸ್ತು ಲೋಕೇಽಗ್ನಿಶ್ಶುಚಿರುಚ್ಯತೇ ॥**

(ಬೃ. ದೇ. ೧-೬೬)

ಎಂಬಲ್ಲಿ **ವನಸ್ಪತಿಯೆಂದರೆ** ಮಧ್ಯಮಲೋಕದ **ಅಗ್ನಿಯೆಂದೂ** ತೋರಿಸಿ, ಋಕ್ಸಂಹಿತೆಯಲ್ಲಿ ಕೆಲವೆಡೆಗಳಲ್ಲಿ ಬಿಟ್ಟು ಉಳಿದ ನಾನಾ ಕಡೆಗಳಲ್ಲಿ ಈ ಪದವು **ಅಗ್ನಿಯನ್ನೇ** ನಿರ್ದೇಶಿಸಿರುವುದರಲ್ಲಿ ಸಂಶಯವೇ ಇಲ್ಲವೆಂಬುದನ್ನು ಸುಸ್ಪಷ್ಟವಾಗಿ ಹೇಳಿದ್ದಾರೆ.

ಮೇಲೆ ಉದಹರಿಸಿರುವ ೧೦-೭೦-೧೦ನೇ ಋಕ್ಕಿನಲ್ಲಿ **ರಶನಯಾ ನಿಯೂಯ ದೇವಾನಾಂ ಉಪವಕ್ಷಿ।** ಎಂಬುದರಿಂದ ಹವಿಸ್ಸನ್ನು ಭದ್ರವಾಗಿ ಕಟ್ಟಿಕೊಂಡು ಹೋಗಿ ದೇವತೆಗಳಿಗೆ ತಲುಪಿಸು ಎಂಬ ಪ್ರಾರ್ಥನೆಯು **ಯೂಪವನ್ನು** ಕುರಿತು ಮಾಡಿರಲು ಸಾಧ್ಯವೇ ಇಲ್ಲ, ಇಲ್ಲಿ ಯಜ್ಞಪಶುವನ್ನು ಕಟ್ಟು ಮತ್ತು ಬಿಚ್ಚು ಎಂದರ್ಥ ಮಾಡುವುದಕ್ಕೂ ಅವಕಾಶವೇ ಇಲ್ಲ. ಅದೇ ಅಲ್ಲದೇ ಆಪ್ರೀ ಸೂಕ್ತಗಳನ್ನೆಲ್ಲಾ ಸೂಕ್ಷ್ಮವಾಗಿ ಪರಿಶೀಲಿಸಿದರೂ ಸಹ ಯಾವ ಋಕ್ಕಿನಲ್ಲಿಯೂ ಯಜ್ಞಪಶುವನ್ನು ನಿರ್ದೇಶಿಸಿಲ್ಲ. ಮತ್ತು ೧-೧೩-೧೧ ; ೨-೩-೧೦ ; ೨-೩-೪ ; ೭-೨-೧೦ ಈ ಋಕ್ಕುಗಳಲ್ಲಿ ಯಜ್ಞಾಹುತಿಗೆ **ಹವಿಸ್ಸೆಂದೂ,** ಪ್ರಕೃತವಾದ ಸೂಕ್ತದಲ್ಲಿ **ಹವ್ಯವೆಂದೂ,** ೧-೧೮೮-೧೦ ; ೫-೫-೧೦ ರಲ್ಲಿ **ಹವ್ಯಾನಿ** ಎಂದೂ, ೧೦-೭೦-೧೦ ; ಮತ್ತು ೧೦-೧೧೦-೧೦ನೇ ಋಕ್ಕುಗಳಲ್ಲಿ **ಹವೀಂಷಿಯೆಂದೂ,** ಆಜ್ಯಾದ್ಯಾಹುತಿಗಳಿಗೆ ಪ್ರಯೋಗಿಸತಕ್ಕ ಸಾಧಾರಣವಾದ ಪದದಿಂದ ಸೂಚಿತವಾಗಿದೆಯೇ ವಿನಹ ಪಶ್ವಾದ್ಯಾಹುತಿಗಳಿಗೆ ಸಂಬಂಧಿಸಿದ ಪದದಿಂದ ಆಹುತಿಯನ್ನು ನಿರ್ದೇಶಿಸಿಲ್ಲ.

**ವನಸ್ಪತಿಪದಕ್ಕೆ ಯೂಪವೆಂದರ್ಥವನ್ನು** ಮಾಡಲು **ಶಮಿತಾ** ಎಂಬ ಪದದ ಪ್ರಯೋಗವು ಈ ಪದಕ್ಕೆ ಲೌಕಿಕವಾದ ಪ್ರಯೋಗದಲ್ಲಿ ಕೊಲ್ಲುವುದು, ನಾಶಮಾಡುವುದು ಎಂದರ್ಥವಾಗುತ್ತದೆ. **ಆಪ್ರೀ ಸೂಕ್ತ**ಗಳಲ್ಲದೆ ಋಕ್ಸಂಹಿತೆಯ ಇತರ ಕಡೆಗಳಲ್ಲಿ **ನಾಲ್ಕು** ಋಕ್ಕುಗಳಲ್ಲಿ ಈ ಪದವು ಉಪಯೋಗಿಸಲ್ಪಟ್ಟಿದೆ. ೧-೧೬೨-೯ ಮತ್ತು ೧೦ನೇ ಋಕ್ಕುಗಳಲ್ಲಿ ಛೇದಮಾಡುವುದು ಎಂಬ ಸಾಧಾರಣವಾದ ಅರ್ಥವಿದೆ. ೫-೪೩-೪ನೇ ಋಕ್ಕಿನಲ್ಲಿ ಸೋಮಲತೆಯನ್ನು ಕತ್ತರಿಸುವುದೆಂದೂ, ೫-೮೫-೧ರಲ್ಲಿ **ಚರ್ಮವನ್ನು ಕತ್ತರಿಸುವ ಚಮ್ಮಾರನೆಂದು** ಕೇವಲ ಉಪಮಾವಾಚಕವಾಗಿಯೂ ಆಗಿರುತ್ತದೆ. ಪಶುಚ್ಛೇದನವೃತ್ತಿಯನ್ನೇ ಅವಲಂಬಿಸಿರುವ ಪಶುಮಾರಕನಿಗೆ ಪರ್ಯಾಯವಾಗಿ ಈ ಪದದ ಪ್ರಯೋಗವು ಎಲ್ಲೂ ಇಲ್ಲ. ಇದಲ್ಲದೆ, ಈ ಪದವನ್ನುಪಯೋಗಿಸಿರುವ ಆಪ್ರೀಸೂಕ್ತದ ಉದಾಹರಣೆಗಳನ್ನೇ ತೆಗೆದುಕೊಂಡರೆ,

ವನಸ್ಪತಿರವಸೃಜನ್ನುಪಸ್ಥಾದಗ್ನಿರ್ಹವಿಃ **ಸೂದಯಾತಿ** ಪ್ರ ಧೀಭಿಃ ।
ತ್ರಿಧಾ ಸಮಕ್ತಂ ನಯತು ಪ್ರಜಾನನ್ದೇವೇಭ್ಯೋ ದೈವ್ಯಃ ಶಮಿತೋಪ ಹವ್ಯಂ ।

(ಋ. ಸಂ. ೨-೩-೧೦)

ಎಂಬ ಋಕ್ಕಿನಲ್ಲಿ ಶಮಿತಾ ಎಂದರೆ **ಹವಿಷಃ ಸಂಸ್ಕರ್ತಾ, ಯದ್ವಾ ದೈವ್ಯಃ ಶಮಿತ್ರೈತನ್ನಾಮಕೋಽಗ್ನಿಃ । ಅಗ್ನಿರ್ವೈ ದೇವಾನಾಂ ಶಮಿತಾ ಇತಿ ಶ್ರೂಯತೇ ।** ಎಂದು ಅಗ್ನಿ ಪರ್ಯಾಯವಾದ ಪದವೆಂದೂ,

> **ಉಪಾವಸೃಜ ತ್ಮನ್ಯಾ ಸಮಂಜನ್ ದೇವಾನಾಂ ಪಾಥ ಋತುಥಾ ಹವೀಂಷಿ ।**
> **ವನಸ್ಪತಿಃ ಶಮಿತಾ ದೇವೋ ಅಗ್ನಿಃ ಸ್ವದಂತು ಹವ್ಯಂ ಮಧುನಾ ಘೃತೇನ ॥**
> (ಋ. ಸಂ. ೧೦-೧೧೦-೧೦)

ಎಂಬ ಋಕ್ಕಿನಲ್ಲಿ **ಶಮಿತಾ ಏತನ್ನಾಮಕಃ ದೇವಃ ಯದ್ವಾ ಶಾಮಿತ್ರಃ ಅಗ್ನಿಃ** ಎಂದೂ ಸಾಯಣರು ವಿವರಿಸಿರುವುದರಿಂದ ಇಲ್ಲಿ **ಶಮಿತಾ** ಎಂಬುದಕ್ಕೆ ಪಶುಮಾರಕನೆಂದರ್ಥವಾಗಿ **ವನಸ್ಪತಿ**ಯೆಂಬ ಪದಕ್ಕೆ ಪಶುವನ್ನು ಕಟ್ಟತಕ್ಕ ಯೂಪಸ್ತಂಭವೆಂದರ್ಥಮಾಡಲು ಅವಕಾಶವೇ ಇಲ್ಲ.

ಅವಸೃಜನ್—**ಸ್ವೈರಂ ವರ್ತಯನ್ ಋತ್ವಿಜಃ ಸ್ವಸ್ವಕರ್ಮಸು ವ್ಯಾಪಾರಯನ್।** ಋತ್ವಿಕ್ಕುಗಳನ್ನು ಅವರವರ ಕರ್ತವ್ಯಗಳಲ್ಲಿರಿಸುತ್ತಾ ಎಂದರ್ಥ.

ವ್ಯಾಕರಣಪ್ರಕ್ರಿಯಾ

**ಅವಸೃಜನ್**—ಸೃಜ ವಿಸರ್ಗೇ ಧಾತು. ಲಡರ್ಥದಲ್ಲಿ ಶತೃಪ್ರತ್ಯಯ. **ತುದಾದಿಭ್ಯಃ ಶಃ** ಎಂಬುದರಿಂದ ಶ ವಿಕರಣ. ಇದು ಙಿತ್ತಾದುದರಿಂದ ಗುಣ ಬರುವುದಿಲ್ಲ. **ತಿಙಿ ಚೋದಾತ್ತವತಿ** (ಪಾ. ಸೂ. ೮-೧-೭೧) ಎಂಬುದರಿಂದ ಗತಿಗೆ (ಅವ) ನಿಘಾತಸ್ವರ ಬರುತ್ತದೆ.

**ತ್ಮನಾ**—ಆತ್ಮನಾ ಎಂಬಲ್ಲಿ **ಮಂತ್ರೇಷ್ವಾಙ್ಯಾದೇರಾತ್ಮನಃ** (ಪಾ. ಸೂ. ೬-೪-೧೪೧) ಎಂಬುದರಿಂದ ಆಕಾರಕ್ಕೆ ಲೋಪ.

**ಯಕ್ಷಿ**—ಯಜ ದೇವಪೂಜಾಸಂಗತಿಕರಣದಾನೇಷು. ಧಾತು. ಭ್ವಾದಿ. ಲಟ್ ಮಧ್ಯಮಪುರುಷಏಕವಚನದಲ್ಲಿ ಸಿಪ್. **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ (ಶಪ್) ಲುಕ್. **ವ್ರಶ್ಚಭ್ರಸ್ಜ** (ಪಾ. ಸೂ. ೮-೨-೩೬) ಎಂಬುದರಿಂದ ಜಕಾರಕ್ಕೆ ಷತ್ವ. **ಷಢೋಃ ಕಃ ಸಿ** (ಪಾ. ಸೂ. ೮-೨-೪೧) ಎಂಬುದರಿಂದ ಅದಕ್ಕೆ ಕತ್ವ. **ಆದೇಶಪ್ರತ್ಯಯಯೋಃ** (ಪಾ. ಸೂ. ೮-೩-೫೯) ಎಂಬುದರಿಂದ ಪ್ರತ್ಯಯಸಕಾರಕ್ಕೆ ಷತ್ವ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ವನಸ್ಪತೇ**--**ಪಾರಸ್ಕರ ಪ್ರಭೃತೀನಿ ಚ ಸಂಜ್ಞಾಯಾಮ್** (ಪಾ. ಸೂ. ೬-೧-೧೫೭) ಎಂಬುದರಿಂದ ಸುಟ್ ಸಹಿತವಾಗಿ ನಿಪಾತಿತವಾಗಿದೆ. ಸಂಬುದ್ಧಿಯಲ್ಲಿ **ಆಮಂತ್ರಿತಸ್ಯ ಚ** (ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಹವ್ಯಾ**—ಹವ್ಯಾನಿ ಎಂದು ರೂಪವಾದಾಗ **ಶೇಶ್ಛಂದಸಿ ಬಹುಲಮ್** (ಪಾ. ಸೂ. ೬-೧-೭೦) ಎಂಬುದರಿಂದ ಶಿಗೆ ಲೋಪ.

**ಸುಷೂದತಿ**—ಷೂದ ಕ್ಷರಣೇ. ಧಾತು. ಲೇಟ್ ಪ್ರಥಮಪುರುಷಏಕವಚನದಲ್ಲಿ ತಿಪ್ ಪ್ರತ್ಯಯ. **ಬಹುಲಂ ಛಂದಸಿ** (ಪಾ. ಸೂ. ೩-೪-೭೩) ಎಂಬುದರಿಂದ ವಿಕರಣಕ್ಕೆ (ಶಪ್) ಶ್ಲು ಆದೇಶ. ಶ್ಲೌ ಎಂಬುದರಿಂದ ಧಾತು

ವಿಗೆ ದ್ವಿತ್ವ. ಹ್ರಸ್ವಃ ಎಂಬುದರಿಂದ ಅಭ್ಯಾಸಕ್ಕೆ ಹ್ರಸ್ವ. ಲೇಟೋಽಡಾಟೌ (ಪಾ. ಸೂ. ೩-೪-೯೪) ಎಂಬುದರಿಂದ ಪ್ರತ್ಯಯಕ್ಕೆ ಅಡಾಗಮ. ತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

ಮೇಧಿರಃ—ಮೇಧೃ ಮೇಧಾಹಿಂಸನಯೋಃ ಧಾತು. ಇದಕ್ಕೆ ಔಣಾದಿಕವಾದ ಇರನ್ ಪ್ರತ್ಯಯ. ಞ್ನಿತ್ಯಾದಿರ್ನಿತ್ಯಮ್ (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ ॥ ೧೧ ॥



ಸಂಹಿತಾಪಾಠಃ

ಪೂ॒ಷ॒ಣ್ವತೇ॑ ಮ॒ರುತ್ವ॑ತೇ ವಿ॒ಶ್ವದೇ॑ವಾಯ ವಾ॒ಯವೇ॑ ।
ಸ್ವಾಹಾ॑ ಗಾ॒ಯತ್ರವೇ॑ಪಸೇ ಹ॒ವ್ಯಮಿಂದ್ರಾ॑ಯ ಕರ್ತನ ॥ ೧೨ ॥

। ಪದಪಾಠಃ ।

ಪೂ॒ಷ॒ಣ್ಽವ॑ತೇ । ಮ॒ರುತ್ವ॑ತೇ । ವಿ॒ಶ್ವಽದೇ॑ವಾಯ । ವಾ॒ಯವೇ॑ ।
ಸ್ವಾಹಾ॑ । ಗಾ॒ಯ॒ತ್ರಽವೇ॑ಪಸೇ । ಹ॒ವ್ಯಂ । ಇಂದ್ರಾ॑ಯ । ಕ॒ರ್ತ॒ನ॒ ॥ ೧೨ ॥

॥ ಸಾಯಣಭಾಷ್ಯಂ ॥

ಪೂಷಣ್ವತೇ ಪೂಷ್ಣಾ ತದ್ವತೇ ॥ ಅನೋ ನುಡಿತಿ ನುಟ್ । ಹ್ರಸ್ವನುಡ್ಭ್ಯಾಂ ಮತುಬಿತಿ ಮತುಪ ಉದಾತ್ತತ್ವಂ ॥ ಮರುತ್ವತೇ ಮರುದ್ಭಿಸ್ತದ್ವತೇ ವಿಶ್ವದೇವಾಯ ಸರ್ವದೇವಸಂಘಾಯ ವಾಯವೇ ಗಮನಶೀಲಾಯ ವಾಯುದೇವಾಯ ಚ ತಥಾ ಗಾಯತ್ರವೇಪಸೇ । ವೇಪ ಇತಿ ರೂಪನಾಮ । ಗಾಯತ್ರಶಬ್ದ ಇತರಸಾಮೋಪಲಕ್ಷಣಃ । ಗಾಯತ್ರಂ ವೇಪೋ ರೂಪಂ ಯಸ್ಯ ತಾದೃಶಾಯೇಂದ್ರಾಯ ಹವ್ಯಂ ಹವಿಃ ಪ್ರದಾತುಂ ಸ್ವಾಹಾ ಕರ್ತನ । ಸ್ವಾಹಾಕಾರಂ ಕುರುತ ಋತ್ವಿಜಃ ॥ ಕರೋತೇರ್ಲೋಟಿ ತಪ್ತನಪ್ತನಥನಾಶ್ಚೇತಿ ತನಬಾದೇಶಃ ॥

ಪ್ರತಿಪದಾರ್ಥ

ಪೂಷಣ್ವತೇ—ಪೂಷದೇವನೊಡನೆ ಕೂಡಿದುದೂ । ಮರುತ್ವತೇ—ಮರುದ್ದೇವತೆಗಳೊಡಿದುದೂ ಆದ । ವಿಶ್ವದೇವಾಯ—ಸಕಲದೇವತೆಗಳ ಸಂಘಕ್ಕೂ । ವಾಯವೇ—ವಾಯುದೇವನಿಗೂ । ಗಾಯತ್ರವೇಪಸೇ—ಗಾಯತ್ರರೂಪದಲ್ಲಿರುವ । ಇಂದ್ರಾಯ—ಇಂದ್ರನಿಗೂ । ಹವ್ಯಂ—ಹವಿಸ್ಸನ್ನು ಅರ್ಪಿಸಲು । ಸ್ವಾಹಾಕರ್ತನ—ಸ್ವಾಹಾಕಾರವನ್ನು ಮಾಡಿರಿ.

॥ ಭಾವಾರ್ಥ ॥

ಪೂಷದೇವನೊಡನೊಡಗೂಡಿದುದೂ, ಮರುದ್ದೇವತೆಗಳೊಡನೆ ಕೂಡಿದುದೂ ಆದ ಸರ್ವದೇವತೆಗಳ ಸಂಘಕ್ಕೂ, ವಾಯುದೇವನಿಗೂ, ಗಾಯತ್ರರೂಪದಲ್ಲಿರುವ ಇಂದ್ರನಿಗೂ ಸಹ ಹವಿಸ್ಸನ್ನು ಅರ್ಪಿಸಲು ಸ್ವಾಹಾಕಾರ ವನ್ನು ಮಾಡಿರಿ.

## English Translation

(Priests), present the oblation with Swaha to Indra, in the form of the Gayatra, along with Pushan and the Maruts; also the assembled gods, and to Vayu.

ವಿಶೇಷವಿಷಯಗಳು

**ಗಾಯತ್ರವೇಪಸೇ—ವೇಪ ಇತಿ ರೂಪನಾಮ । ಗಾಯತ್ರಶಬ್ದಃ ಇತರಸಾಮೋಪಲಕ್ಷಣಃ । ಗಾಯತ್ರಂ ವೇಪಃ ರೂಪಂ ಯಸ್ಯ ತಾದೃಶಾಯ ಇಂದ್ರಾಯ ।** ಗಾಯತ್ರರೂಪದಲ್ಲಿರುವ ಇಂದ್ರನಿಗೆ ಎಂದು ಸಾಯಣರು ವಿವರಿಸಿದ್ದಾರೆ. ಗಾನದಿಂದ ತೃಪ್ತಿಪಡತಕ್ಕವನು, ಗಾನದಿಂದ ಶ್ರೇಷ್ಠವಾದ ರೂಪವನ್ನು ಹೊಂದು ವವನು ಎಂದು ತಾತ್ಪರ್ಯವಾಗುತ್ತದೆ. ಇದೇ ವಿಶೇಷಣವು,

**ಆ ತ್ವಾಽದ್ಯ ಸಬರ್ದುಘಾಂ ಹುವೇ ಗಾಯತ್ರವೇಪಸಂ ।**
**ಇಂದ್ರಂ ಧೇನುಂ ಸುದುಘಾಮನ್ಯಾಮಿಷಮುರುಧಾರಾಮರಂಕೃತಂ ॥**
(ಋ. ಸಂ. ೮-೧-೧೦)

ಎಂಬ ಋಕ್ಕಿನಲ್ಲೂ ಇಂದ್ರನ ಸ್ವರೂಪವನ್ನು ತಿಳಿಸುತ್ತದೆ. ಆದರೆ ಅಲ್ಲಿ ಸಾಯಣರು **ಗಾಯತ್ರವೇಪಸಂ** ಎಂಬ ಪದವನ್ನು **ಧೇನುಂ** ಎಂಬ ಪದಕ್ಕೆ ವಿಶೇಷಣವನ್ನಾಗಿ ಮಾಡಿ **ಪ್ರಶಸ್ಯವೇಗಾಂ** ಅತಿಶಯವಾದ ವೇಗವುಳ್ಳದ್ದೆಂದು ಅರ್ಥಮಾಡಿದ್ದಾರೆ. ಇಲ್ಲಿ ಇಂದ್ರನಿಗೆ ವಿಶೇಷಣವಾಗಿರುವುದೇ ಸಾಧುವೆಂದು ಕೆಲವರ ಮತ. ಋ. ಸಂ. ೮-೨ ೩೮ ನೇ ಋಕ್ಕಿನಲ್ಲಿ **ಗಾಥಶ್ರವಸಂ** ಎಂಬ ಪದವೂ ಸಹ ಇಂದ್ರನಿಗೆ ವಿಶೇಷಣವಾಗಿ **ಗಾತವ್ಯಯಶಸಂ** ಎಂಬರ್ಥವನ್ನು ಕೊಡುವಂತೆ ಇಲ್ಲಿಯೂ **ಗಾಯತ್ರವೇಪಸೇ** ಎಂಬ ಪದವೂ ಅದೇ ತಾತ್ಪರ್ಯವನ್ನು ಕೊಡುತ್ತಾ ಇಂದ್ರನಿಗೆ ವಿಶೇಷಣವಾಗಿದೆ.

**ಸ್ವಾಹಾ ಕರ್ತನ—ಸ್ವಾಹಾಕಾರಂ ಕುರುತ ।** ಇದರ ವಿಶೇಷ ವಿಷಯಗಳನ್ನು ಮುಂದಿನ ಋಕ್ಕಿನಲ್ಲಿ ವಿವರಿಸಿದೆ.

ವ್ಯಾಕರಣಪ್ರಕ್ರಿಯಾ

**ಪೂಷಣ್ವತೇ—**ಪೂಷಾ ಅಸ್ಯ ಅಸ್ತಿ ಇತಿ ಪೂಷಣ್ವಾನ್ **ತದಸ್ಯಾಸ್ತಿ—** ಎಂಬುದರಿಂದ ಮತುಪ್ ಪ್ರತ್ಯಯ **ಅನೋನುಟ್** ಎಂಬುದರಿಂದ ಮತುಪ್ ಪರವಾದಾಗ ನುಟಾಗಮ. **ಹ್ರಸ್ವನುಡ್ಭ್ಯಾಂ ಮತುಪ್** (ಪಾ. ಸೂ. ೬-೧-೧೭೬) ಎಂಬುದರಿಂದ ಮತುಪಿಗೆ ಉದಾತ್ತಸ್ವರ ಬರುತ್ತದೆ. ಚತುರ್ಥೀಏಕವಚನಾಂತರೂಪ.

**ವಿಶ್ವದೇವಾಯ—**ವಿಶ್ವೇ ದೇವಾಃ ಯಸ್ಯ ಸಃ ವಿಶ್ವದೇವಃ **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್** (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

ಗಾಯತ್ರವೇಪಸೇ—ಗಾಯತ್ರಂ ವೇಪಃ ಯಸ್ಯ ಸಃ ಗಾಯತ್ರವೇಪಾಃ ತಸ್ಮೈ ಗಾಯತ್ರವೇಪಸೇ. ಹಿಂದಿನಂತೆ ಪೂರ್ವಪದಪ್ರಕೃತಿಸ್ವರ ಬರುತ್ತದೆ. ಚತುರ್ಥ್ಯೇಕವಚನಾಂತರೂಪ.

ಕರ್ತನ—ಡುಕೃಞ್ ಕರಣೇ ಧಾತು. ಲೋಟ್ ಮಧ್ಯಮಪುರುಷಬಹುವಚನದಲ್ಲಿ ಥ ಪ್ರತ್ಯಯ. ಬಹುಲಂ ಛಂದಸಿ ಎಂಬುದರಿಂದ ವಿಕರಣಕ್ಕೆ ಲುಕ್. ತಪ್ತನಪ್ತನಥನಾಶ್ಚ (ಪಾ. ಸೂ. ೭-೧-೪೫) ಎಂಬುದರಿಂದ ಪ್ರತ್ಯಯಕ್ಕೆ ತನಬಾದೇಶ. ಇದು ಪಿತ್ತಾದುದರಿಂದ ಸಾರ್ವಧಾತುಕಾರ್ಧಧಾತುಕಯೋಃ ಎಂಬುದರಿಂದ ಧಾತುವಿನ ಇಕಿಗೆ ಗುಣ. ಅತಿಙಂತದ ಪರದಲ್ಲಿ ಬಂದುದರಿಂದ ನಿಘಾತಸ್ವರ ಬರುತ್ತದೆ. ॥ ೧೨ ॥



ಸಂಹಿತಾಪಾಠಃ

ಸ್ವಾಹಾಕೃತಾನ್ಯಾ ಗಹ್ಯುಪ ಹವ್ಯಾನಿ ವೀತಯೇ ।
ಇಂದ್ರಾ ಗಹಿ ಶ್ರುಧೀ ಹವಂ ತ್ವಾಂ ಹವಂತೇ ಅಧ್ವರೇ ॥ ೧೩ ॥

ಪದಪಾಠಃ

ಸ್ವಾಹಾऽಕೃತಾನಿ । ಆ । ಗಹಿ । ಉಪ । ಹವ್ಯಾನಿ । ವೀತಯೇ ।
ಇಂದ್ರ । ಆ । ಗಹಿ । ಶ್ರುಧಿ । ಹವಂ । ತ್ವಾಂ । ಹವಂತೇ । ಅಧ್ವರೇ ॥ ೧೩ ॥

ಸಾಯಣಭಾಷ್ಯಂ

ಹೇ ಇಂದ್ರ ಸ್ವಾಹಾಕೃತಾನಿ । ಸ್ವಾಹೇತ್ಯೇವಂಪೂರ್ವಾ ಕೃತಿಃ ಕರಣಮುಚ್ಚಾರಣಂ ಯಕ್ಷ್ಯಮಾಣದೇವತಾನಾಂ ತಾಃ ಸ್ವಾಹಾಕೃತಯಃ । ತದ್ವಂತಿ ಹವ್ಯಾನಿ ಹವೀಂಷಿ । ಅತ್ರ ಪ್ರಯಾಜೇಷು ವಷಟ್ಕಾರಪ್ರದಾನಾತ್ಸ್ವಾಹಾಕೃತಂ ಹವಿರಿತ್ಯರ್ಥಃ । ತದ್ಧವಿರುಪೇತ್ಯ ವೀತಯೇ ಭಕ್ಷಣಾಯಾ ಗಹಿ । ಆಗಚ್ಛ ॥ ಗಮೇಶ್ಛಾಂದಸಃ ಶಪೋ ಲುಕ್ । ಅನುದಾತ್ತೋಪದೇಶೇತ್ಯಾದಿನಾನುನಾಸಿಕಲೋಪಃ ॥ ತಥಾ ಹೇ ಇಂದ್ರ ಆ ಗಹಿ । ಸ್ತೋತ್ರಾಣ್ಯಭಿಲಕ್ಷ್ಯಾಗಚ್ಛ । ಆಗತ್ಯ ಹವಮಸ್ಮದೀಯಮಾಹ್ವಾನಂ ಶ್ರುಧಿ । ಶೃಣು । ಯತಸ್ತ್ವಾಮಧ್ವರೇಽಹಿಂಸಾತ್ಮಕೇ ಯಾಗೇ ಹವಂತೇ ಆಹ್ವಯಂತಿ ಋತ್ವಿಜಃ ಅತಃ ಶ್ರುಧಿ ॥ ಹ್ವಯತೇರ್ಬಹುಲಂ ಛಂದಸೀತಿ ಸಂಪ್ರಸಾರಣಂ ॥

ಪ್ರತಿಪದಾರ್ಥ

**ಇಂದ್ರ**—ಎಲೈ ಇಂದ್ರನೇ । **ಸ್ವಾಹಾಕೃತಾನಿ**—ಸ್ವಾಹಾಕಾರಗಳೊಡನೆ ಅರ್ಪಿಸಿದ । **ಹವ್ಯಾನಿ**—ಹವಿಸ್ಸುಗಳನ್ನು । **ವೀತಯೇ**—ಭಕ್ಷಿಸುವುದಕ್ಕಾಗಿ । **ಉಪ**—ಸಮಾಪಕ್ಕೆ । **ಆ ಗಹಿ**—ದಯಮಾಡು । **ತ್ವಾಂ**—ನಿನ್ನನ್ನು । **ಅಧ್ವರೇ**—ಅಹಿಂಸಾತ್ಮಕವಾದ ಯಾಗದಲ್ಲಿ । **ಹವಂತೇ**—(ಋತ್ವಿಕ್ಕುಗಳು) ಕರೆಯುತ್ತಾರೆ । (ಆದುದರಿಂದ) । **ಆ ಗಹಿ**—ದಯಮಾಡು (ಮತ್ತು) । **ಹವಂ**—ನಮ್ಮ ಆಹ್ವಾನವನ್ನು । **ಶ್ರುಧಿ**—ಕೇಳು.

ಭಾವಾರ್ಥ

ಎಲೈ ಇಂದ್ರನೇ, ಸ್ವಾಹಾಕಾರಗಳೊಡನೆ ಅರ್ಪಿಸಿದ ಹವಿಸ್ಸುಗಳನ್ನು ಭಕ್ಷಿಸುವುದಕ್ಕಾಗಿ ನಮ್ಮ ಸಮಾಪಕ್ಕೆ ದಯಮಾಡು. ನಿನ್ನನ್ನು ಅಹಿಂಸಾತ್ಮಕವಾದ ಯಾಗದಲ್ಲಿ ಋತ್ವಿಕ್ಕುಗಳು ಕರೆಯುತ್ತಾರೆ ಆದುದರಿಂದ ದಯಮಾಡಿ ಬಂದು ನಮ್ಮ ಆಹ್ವಾನವನ್ನು ಕೇಳು.

English Translation

Approach, Indra, to partake of the oblations consecrated with Swaha ; approach and hear the invocation, as they invoke you to the sacrifice.

ವಿಶೇಷವಿಷಯಗಳು

**ಸ್ವಾಹಾಕೃತಾನಿ—ಸ್ವಾಹಾ ಇತ್ಯೇವಂಪೂರ್ವಾ ಕೃತಿಃ ಕರಣಮುಚ್ಚಾರಣಂ ಯಕ್ಷ್ಯಮಾಣ-ದೇವತಾನಾಂ ತಾಃ ಸ್ವಾಹಾಕೃತಯಃ । ತದ್ವಂತಿ ಹವ್ಯಾನಿ ।** ಆಹುತ್ಯರ್ಪಣಕ್ಕೆ ಹರಿಸತಕ್ಕ **ಸ್ವಾಹಾ** ಎಂಬ ಮಂತ್ರದೊಡನೆ ಕೂಡಿದ ಹವ್ಯಗಳೆಂದು **ಹವ್ಯಾನಿ** ಎಂಬ ಪದಕ್ಕೆ ವಿಶೇಷಣವಾಗಿದೆ. ಆಪ್ರೀಸೂಕ್ತಗಳ ಕೊನೆಯ ಋಕ್ಕುಗಳಲ್ಲಿ ಮುಖ್ಯವಾಗಿ ಹರಿಸಿರತಕ್ಕ ಪದವಾಗಿದೆ. ಕೆಲವು ಋಕ್ಕುಗಳಲ್ಲಿ ಕ್ರಿಯಾವಿಶೇಷಣವಾಗಿಯೂ ಎಂದರೆ; ೧-೧೩-೧೨ರಲ್ಲು **ಸ್ವಾಹಾ ಕೃಣೋತನ** ಎಂದೂ, ೧-೧೪೨-೧೨ ರಲ್ಲು **ಸ್ವಾಹಾ ಕರ್ತನ** ಎಂದೂ ೩-೪-೧೧, ೭-೨-೧೧ ಮತ್ತು ೧೦-೭೦-೧೧ನೇ ಋಕ್ಕುಗಳಲ್ಲಿ ಕರಣಾರ್ಥಕದಲ್ಲಿಯೂ ೨-೩-೧೧ ರಲ್ಲಿ ಹವ್ಯಕ್ಕೆ ವಿಶೇಷಣವಾಗಿಯೂ; ೧೦-೧೧೦-೧೧ರಲ್ಲು **ಹವಿಃ** ಎಂಬುದಕ್ಕೆ ವಿಶೇಷಣವಾಗಿಯೂ ಪ್ರಕೃತವಾದ ಋಕ್ಕಿನಲ್ಲಿ **ಹವ್ಯಾನಿ** ಎಂಬುದಕ್ಕೆ ವಿಶೇಷಣವಾಗಿಯೂ ಇದೆ.

ಈ ಪದದ ವಿವರಣೆಯನ್ನು ಹೇಳುವಾಗ ಈ ಪದದಿಂದ ದೇವತಾತ್ಮಕವಾದ **ಸ್ವಾಹಾಕೃತಿಯನ್ನು** ನಿರ್ದೇಶಿಸಿದೆಯೆಂದು ಕೆಲವರೂ ಈ ಪದದಿಂದ **ಅಗ್ನಿಯು** ನಿರ್ದೇಶಿಸಲ್ಪಟ್ಟಿದ್ದಾನೆ ಎಂದು ಕೆಲವರೂ ಅಭಿಪ್ರಾಯ ಪಟ್ಟಿದ್ದಾರೆ. **ಪ್ರೈಷಸೂಕ್ತದಲ್ಲಿ,**

**ಹೋತಾ ಯಕ್ಷದಗ್ನಿಗ್ಂ ಸ್ವಾಹಾಜ್ಯಸ್ಯ............ವಿಯಂತು ಹೋತರ್ಯಜ ।**

(ತೈ. ಬ್ರಾ. ೩-೬-೨-೨)

ಎಂದು ಹಠಿಸಿದೆ. ಇದಕ್ಕೆ ಸಾಯಣರು **ಯೋಽಯಂ ಸ್ವಾಹಾಶಬ್ದೋದಿತಃ ಉತ್ತಮಪ್ರಯಾಜದೇವಃ ಅಗ್ನಿಃ ತಂ ದೈವ್ಯೋ ಹೋತಾ ಯಜತು ।** ಸ್ವಾಹಾ ಶಬ್ದದಿಂದ ಹನ್ನೊಂದನೆಯ ಪ್ರಯಾಜದೇವತೆಯಾದ ಅಗ್ನಿಯನ್ನು ಉದ್ದೇಶಿಸಿದೆ ಎಂದು ವಿವರಿಸಿದ್ದಾರೆ. ನಿರುಕ್ತಕಾರರು,

**ಸ್ವಾಹಾಕೃತಯಃ । ಸ್ವಾಹೇತ್ಯೇತತ್ ಸು ಆಹೇತಿ ವಾ, ಸ್ವಾ ವಾಗಾಹೇತಿ ವಾ, ಸ್ವಂ ಪ್ರಾಹೇತಿ ವಾ, ಸ್ವಾಹುತಂ ಹವಿರ್ಜುಹೋತೀತಿ ವಾ ।**

(ನಿ. ೮-೨೧)

ಸುಷ್ಠುವಾಗಿ ಪಠಿಸಿದನೆಂದಾಗಲಿ, ಸುಷ್ಠುವಾಗಿದೆಯೆಂದು ವಾಕ್ಕೇ ಹೇಳಿದುದರಿಂದಾಗಲಿ ಅಥವಾ **ಸ್ವಾಹಾ** ಎಂಬ ಮಂತ್ರದಿಂದ ಪ್ರೋತವಾದ ಹವಿಸ್ಸನ್ನರ್ಪಿಸುವುದರಿಂದಾಗಲಿ **ಸ್ವಾಹಾಕೃತಿ**ಯೆಂದು ಪ್ರಸಿದ್ಧವಾಗಿದೆಯೆಂದು ನಿರು. ೧೦-೧೧೦-೧೧ನೇ ಋಕ್ಕನ್ನುದಹರಿಸಿ ಈ ಭಾವವನ್ನು ವಿಶದಪಡಿಸಿದ್ದಾರೆ. ಐತರೇಯಬ್ರಾಹ್ಮಣದಲ್ಲಿ,

**ಸ್ವಾಹಾಕೃತೀರ್ಯಜತಿ ಪ್ರತಿಷ್ಠಾ ವೈ ಸ್ವಾಹಾಕೃತಯಃ ಪ್ರತಿಷ್ಠಾಯಾಮೇವ ತದ್ಯಜ್ಞಮಂತತಃ ಪ್ರತಿಷ್ಠಾಪಯತಿ ।**

( ಐ. ಬ್ರಾ. ೨-೪ )

ಸ್ವಾಹಾಕೃತಿಯಿಂದ ಆಹುತಿಯು ಸಮಾಪ್ತವಾಗುವುದರಿಂದ ಯಾಗಕ್ಕೆಲ್ಲಾ ಅದೇ ಉಪಷ್ಟಂಭಕವಾಗಿರುವುದು ಮತ್ತು ಯಜ್ಞವನ್ನು ಸರಿಯಾದ ಆಧಾರದಮೇಲೆ ನಿಲ್ಲಿಸುವುದು ಎಂದು ವಿವರಿಸಿದೆ. ಬೃಹದ್ದೇವತೆಯಲ್ಲಿ,

**ಸ್ವಾಹಾಕೃತಯೋಽನೇಕಾಶ್ಚ ವಿದುಷಾಂ ಮತಯೋಽಭವನ್ ।**
**ತತ್ಸರ್ವಂ ತ್ವಯಮೇವಾಗ್ನಿರ್ಭವತೀತಿ ವಿನಿಶ್ಚಯಃ ॥**
**ಅಯಂ ಹಿ ಕರ್ತಾ ಸ್ವಾಹಾನಾಂ ಕೃತಿಸ್ತಾಸಾಮಿಹೈಕಜಾ ।**
**ಅಯಂ ಪ್ರಸೂತಿರ್ಭೂತಾನಾಂ ಸರ್ವೇಷಾಮಯಮವ್ಯಯಃ ॥**

(ಬೃ. ದೇ. ೩-೨೯ರಿಂದ ೩೦)

ಸ್ವಾಹಾಕೃತಿಯ ವಿಷಯದಲ್ಲಿ ಪ್ರಾಜ್ಞರ ಅಭಿಪ್ರಾಯಗಳು ಒಂದೇ ವಿಧವಾಗಿಲ್ಲ. ಆದರೂ ಸಹ ಈ ಪದದಿಂದ ನಿರ್ದೇಶಿಸಲ್ಪಟ್ಟ ಸಕಲವಾದ ಭಾವವೂ ಸಹ ಈ ಪಾರ್ಥಿವಾಗ್ನಿಯನ್ನೇ ಉದ್ದೇಶಿಸಿದೆ. ಈ ಅಗ್ನಿಯೇ ಸ್ವಾಹಾಕರ್ತನಾದುದರಿಂದಲೂ, ಇವನೇ ಇದರ ಕೃತಿಯೂ ಆದುದರಿಂದಲೂ ಪಾರ್ಥಿವಾಗ್ನಿಯು ಈರೀತಿ ಕರೆಯಲ್ಪಟ್ಟಿದ್ದಾನೆ, ಎಂದು **ಆಗ್ನೇಯೀ ಇತಿ ತು ಸ್ಥಿತಿಃ** (ನಿ. ೮-೨೨) ಎಂಬ ನಿರುಕ್ತಕಾರರ ಮತವನ್ನನುಸರಿಸಿ ಬೃಹದ್ದೇವತಾಕಾರರು ತಮ್ಮ ಅಭಿಪ್ರಾಯವನ್ನು ತಿಳಿಸಿದ್ದಾರೆ.

ಸ್ವಾಹಾಕಾರಾತ್ಮಕವಾದ ಈ ಆಪ್ರೀಸೂಕ್ತಗಳ ಕೊನೆಯ ಋಕ್ಕುಗಳಲ್ಲಿ ಪೂಷ, ಮರುತ್ತುಗಳು, ವಾಯು ಸೂರ್ಯ, ಇಂದ್ರ, ವರುಣ ಇತ್ಯಾದಿ ದೇವತೆಗಳೆಲ್ಲಾ ಉದ್ದೇಶಿಸಲ್ಪಟ್ಟಿದ್ದಾರೆ, ಎಲ್ಲರಿಗಿಂತಲೂ ಅಧಿಕವಾಗಿ,

**ಪುರೋಗಾ ಅಗ್ನಿರ್ದೇವಾನಾಂ ಗಾಯತ್ರೇಣ ಸಮಜ್ಯತೇ । ಸ್ವಾಹಾಕೃತೀಷು ರೋಚತೇ ।**

(ಋ. ಸಂ ೧-೧೮೮-೧೧)

**ಸದ್ಯೋ ಜಾತೋ ವ್ಯಮಿಮೀತ ಯಜ್ಞಮಗ್ನಿರ್ದೇವಾನಾಮಭವತ್ಪುರೋಗಾಃ ।**
**ಅಸ್ಯ ಹೋತುಃ ಪ್ರದಿಶ್ಯೃತಸ್ಯ ವಾಚಿ ಸ್ವಾಹಾಕೃತಂ ಹವಿರದಂತು ದೇವಾಃ ॥**

(ಋ. ಸಂ. ೧೦-೧೧೦-೧೧)

ಎಂಬ ಋಕ್ಕುಗಳಲ್ಲಿ ಉತ್ಪನ್ನನಾದ ಕಾಲದಿಂದಲೂ ಅಗ್ನಿಯು ದೇವತೆಗಳ **ಪುರೋಗನೆಂದು** ಸ್ತುತಿಸಿದೆ. ಮತ್ತು ಸ್ವಾಹಾಕೃತಿಯ ಪ್ರಭಾವವನ್ನು ವಿವರಿಸುತ್ತಾ,

**ಆ ಯಾಹ್ಯಗ್ನೇ ಸಮಿಧಾನೋ ಅರ್ವಾಙಿಂದ್ರೇಣ ದೇವ್ಯೈಃ ಸರಥಂ ತುರೇಭಿಃ ।**
**ಬರ್ಹಿರ್ನ ಆಸ್ತಾಮದಿತಿಃ ಸುಪುತ್ರಾ ಸ್ವಾಹಾ ದೇವಾ ಅಮೃತಾ ಮಾದಯಂತಾಂ ॥**

(ಋ. ಸಂ. ೩-೪-೧೧)

**ಅಗ್ನೇ ವಹ ವರುಣಮಿಷ್ಟಯೇ ನ ಇಂದ್ರ ದಿವೋ ಮರುತೋ ಅಂತರಿಕ್ಷಾತ್ ।**
**ಸೀದಂತು ಬರ್ಹಿರ್ವಿಶ್ವ ಆ ಯಜತ್ರಾಃ ಸ್ವಾಹಾ ದೇವಾ ಅಮೃತಾ ಮಾದಯಂತಾಂ ॥**

(ಋ. ಸಂ. ೧೦-೭೦-೧೧)

ಎಂಬ ಋಕ್ಕುಗಳಲ್ಲಿ **ಸ್ವಾಹಾ** ಎಂಬ ಮಂತ್ರದಿಂದ ದೇವತೆಗಳು ಹರ್ಷಗೊಳ್ಳುವುದರಿಂದ ಯಜ್ಞದಲ್ಲಿ **ಸ್ವಾಹಾ** ಶಬ್ದಕ್ಕೆ ಇಷ್ಟು ದಿವ್ಯವಾದ ಸ್ಥಾನವಿದೆಯೆಂದು ಸೂಚಿಸಿದೆ.

## (ಆಪ್ರೀಸೂಕ್ತಗಳ)

### ಉಪಸಂಹಾರ

---

ಆಪ್ರೀಸೂಕ್ತಗಳ ಆವಶ್ಯಕತೆ ಮತ್ತು ಉದ್ದಿಶ್ಯಗಳನ್ನು ಕುರಿತು Max Muller ಎಂಬ ಪಂಡಿತನು ಮೊದಲು ಅವು ದೇವತೆಗಳನ್ನಾಗಲಿ ಅಥವಾ ಬಂಧುಗಳನ್ನಾಗಲಿ ಸಮಾಧಾನಗೊಳಿಸುವ ಸಾಧನವೆಂದು ಹೇಳಿ ಅನಂತರ ಅವುಗಳ ರಹಸ್ಯಾರ್ಥಗಳನ್ನು ಪೂರ್ಣವಾಗಿ ಅರ್ಥಮಾಡಿಕೊಳ್ಳುವುದೇ ಶ್ರಮವೆಂದು ಹೀಗೆ ಹೇಳಿದ್ದಾನೆ.

" It is possible that Apri hymns may have been the songs of reconciliation and that they were called Apri, i.e., appeasing hymns, not because of their appeasing the anger of Gods but the enmities of the members of the same or different families. However it may be, they indeed prove an active intercourse between the ancient families of India long before the final collection of the ten books..............................The original purpose of the Apri hymns and the motive for allowing the priests to choose, are difficult to discover "

(Ancient Sanskrit Literature P. 246-7)

ಯಾಗಾದಿಕರ್ಮಗಳಲ್ಲಿ ಆಪ್ರೀಸೂಕ್ತಗಳಿಗಿರುವ ಸ್ಥಾನಮಾನಗಳ ವಿಷಯದಲ್ಲಿಯೂ, ದೇವತೆಗಳ ವಿಷಯದಲ್ಲಿಯೂ ಪ್ರಾಚೀನವೈದಿಕ ಪಂಡಿತರಲ್ಲಿಯೇ ವಿಪ್ರತಿಪತ್ತಿಯಿದ್ದರೂ ಸಹ ಆಪ್ರೀಸೂಕ್ತಗಳೆಲ್ಲವರಲ್ಲೂ ಅನೇಕ ಸಮಾನಧರ್ಮಗಳಿರುವುದು ಅವುಗಳ ರಚನೆಯಲ್ಲಿಯೂ ವಿಷಯಗಳಲ್ಲಿಯೂ ಒಂದು ನಿರ್ದಿಷ್ಟವಾದ ಮಾದರಿಯೂ ಸಂಸ್ಕಾರವೂ ಇರುವುದರಿಂದ ಎಲ್ಲವೂ ಒಟ್ಟಿಗೆ ರಚಿಸಲ್ಪಟ್ಟವೆಂದಾಗಲಿ ಅಥವಾ ಒಂದಕ್ಕೊಂದಕ್ಕೆ ಸಂಬಂಧವಿಲ್ಲವೆಂದಾಗಲಿ ಹೇಳುವುದಕ್ಕಾಗುವುದಿಲ್ಲ. ನಾಲ್ಕನೆಯ ಮತ್ತು ಆರನೇ ಮಂಡಲಗಳ ಋಷಿಗಳನ್ನು ಬಿಟ್ಟು ಉಳಿದ

ಮಂಡಲಗಳ ಋಷಿಗಳೆಲ್ಲರೂ ತಮ್ಮ ತಮ್ಮ ಮನೆತನದ ಸಾಂಪ್ರದಾಯಿಕವಾದ ಆಪ್ರೀಸೂಕ್ತಗಳನ್ನು ಹೊಂದಿದ್ದಾರೆ ಎಂಟನೇ ಮಂಡಲದ **ಕಾಣ್ವ**ಸಂತತಿಯವರಿಗೆ ಪ್ರತ್ಯೇಕವಾದ ಆಪ್ರಿಸೂಕ್ತವಿಲ್ಲದಿದ್ದರೂ ಸಹ ಅವರು ೧-೧೩ ನೇ ಸೂಕ್ತವನ್ನೇ ಉಪಯೋಗಿಸಿಕೊಳ್ಳುವುದು ಪ್ರಸಿದ್ಧವಾಗಿದೆ. ಆದರೆ ನಾಲ್ಕು ಮತ್ತು ಆರನೇ ಮಂಡಲದ ದ್ರಷ್ಟಾರ ಗಳಾದ ಋಷಿಗಳಿಗೆ ಇದರ ಆವಶ್ಯಕತೆಯು ಇಲ್ಲದಿರುವುದಕ್ಕೆ ಕಾರಣವನ್ನು ಹೇಳುವುದಕ್ಕಾಗುವುದಿಲ್ಲ. ಅಥವಾ **ವಾಮದೇವ** ಮತ್ತು **ಭಾರದ್ವಾಜ** ಸಂತತಿಯವರು ಈ ಸ್ಥಾನದಲ್ಲಿ ಬೇರೆ ಇನ್ನಾವ ಮಂತ್ರಗಳನ್ನಾಗಲಿ (ಭಾರದ್ವಾಜನು ಆಂಗಿರಸಗೋತ್ರೋತ್ಪನ್ನನಾದುದರಿಂದ ಪ್ರಸಕ್ತವಾದ ಸೂಕ್ತವನ್ನೇ) ಪಠಿಸುತ್ತಿದ್ದಿರಬಹುದು.

**ಆಪ್ರೀ ಮತ್ತು ಆಪ್ರ ಎಂಬ ಸಂಜ್ಞೆಯಿಂದ ಸೂಚಿತವಾಗುವ ಮಂತ್ರಗಳು—**

ಕಾತ್ಯಾಯನರು ಸರ್ವಾನುಕ್ರಮಣಿಯಲ್ಲಿ **ಏತದಾಪ್ರಿಸೂಕ್ತಂ ಏತೇನಾನ್ಯಾನ್ಯುಕ್ತದೈವತಾನಿ ಏಕಾದಶಕಾನಿ ತು ನಾರಾಶಂಸಾನಿ ಆಪ್ರಶಬ್ದೋಕ್ತಾನಿ ಅತನೂನಪಾತ್ವಂತಿ।** ನರಾಶಂಸ ದೇವತೆಯನ್ನುದ್ದೇಶಿಸಿ ಪಠಿಸುವಮಂತ್ರಗಳು ಆಪ್ರವೆಂಬ ಹೆಸರಿನಿಂದಲೂ, **ತನೂನಪಾತ್** ದೇವತೆಯನ್ನುದ್ದೇಶಿಸಿ ಪಠಿಸುವ ಮಂತ್ರಗಳು **ಆಪ್ರೀ** ಎಂಬ ಹೆಸರಿನಿಂದಲೂ ಪ್ರಸಿದ್ಧವಾಗಿವೆಯೆಂದು ಹೇಳಿದ್ದಾರೆ. ಆದರೆ ನಿರುಕ್ತಾದಿಗಳಲ್ಲಿ ಈ ವ್ಯತ್ಯಾಸವನ್ನು ತೋರಿಸುವ ವಾಕ್ಯಗಳೇ ಇಲ್ಲ.

ಆಪ್ರೀ ಎಂಬ ಹೆಸರು ದೇವತಾಪರವಾದುದೇ ಅಥವಾ **ಸೂಕ್ತ** ಪರವಾದುದೇ ಎಂಬ ಪ್ರಶ್ನೆಯೂ ಸಹಜವಾದುದಾಗಿದೆ. ಸೂಕ್ಷ್ಮವಾಗಿ ನೋಡಿದರೆ ಮೊದಲು **ಸೂಕ್ತ**ಪರವಾಗಿದ್ದು ಅನಂತರ ದೇವತಾನಿರ್ದೇಶಕವಾದ ಮಂತ್ರಗಳಾಗಿದ್ದಿರಬಹುದೆಂದು ಹೇಳಬಹುದು.

**ಕರ್ಮದ ಸ್ವರೂಪ**— ಆಪ್ರೀ ಸೂಕ್ತದಿಂದ ನಿರ್ದಿಷ್ಟವಾದ ಯಜ್ಞಕರ್ಮವು ಬ್ರಾಹ್ಮಣಾದಿಗಳಿಂದ ಸೂಚಿತವಾಗುವಂತೆ ಗೌಣವಾದ ಸ್ಥಾನವನ್ನು ಹೊಂದಿರಲಿಲ್ಲವೆಂದೂ, ಮುಖ್ಯವಾಗದ ಸ್ಥಾನವನ್ನೇ ಹೊಂದಿದ್ದಿತೆಂದೂ ಹೇಳಬಹುದು. **ಪ್ರಯಾಜಾಹುತಿ**ಗಳಿಗೂ ಈ ಕರ್ಮದಲ್ಲಿ ನಿರ್ದಿಷ್ಟವಾದ ಆಹುತಿಗಳಿಗೂ ಇರುವ ವ್ಯತ್ಯಾಸವು ಅನೇಕ ಕಡೆಗಳಲ್ಲಿ ತಿಳಿಯುತ್ತದೆ. ೧-೧೩-೮ ; ೧-೧೮೮ ೭ ; ೧-೧೪೨-೮ ; ೩-೪-೮ : ೫-೫-೭ : ೯-೫-೮ ಈ ಋಕ್ಕುಗಳಲ್ಲಿ **ಇಮಂ ಯಜ್ಞಂ** ಎಂಬ ಮಂತ್ರವೂ, ೫-೫-೨ ; ೩-೪-೫ ನೇ ಋಕ್ಕುಗಳಲ್ಲಿ **ನಃ ಯಜ್ಞಂ** ಎಂಬುದೂ, ೧-೧೩-೨ ; ೭-೨-೭ : ೧೦-೧೧೦-೮ ನೇ ಋಕ್ಕುಗಳಲ್ಲಿ **ಅಸ್ಮಿನ್ ಯಜ್ಞೇ** ಎಂಬುದೂ ಸಹ ಯಜ್ಞಕರ್ಮದಲ್ಲಾಗಲಿ ಅಥವಾ ಆಹುತ್ಯರ್ಪಣದಲ್ಲಾಗಲಿ ಪ್ರಧಾನವಾದ ಸ್ಥಾನವನ್ನು ತೋರಿಸುವುದೇ ಹೊರತು **ಪ್ರಯಾಜಾಹುತಿ**ಗಳಂತೆ ಗೌಣವಾದ ಸ್ಥಾನವನ್ನು ತೋರಿಸುವುದಿಲ್ಲ.

**ತ್ರಿರ್ದಿವಾ ಅಭಿಮಿಕ್ಷತಿ** (೧-೧೪೨-೩) ; ತ್ರಿರಹನ್ನಾಯಜಂತೇ (೩-೪-೨) ಎಂಬ ಮಂತ್ರಗಳಿಂದ ಈ ಕರ್ಮವು ದಿನದಲ್ಲಿ ಮೂರು ಕಾಲಗಳಲ್ಲಿ ನೆರವೇರಿಸಲ್ಪಡತಕ್ಕದ್ದೆಂದೂ ; **ಸಮಿದ್ಧೋ ಅದ್ಯ ಮನುಷೋ ದುರೋಣೇ** (೧೦-೧೧೦-೧) ಎಂಬುದರಿಂದ ಇವಕ್ಕಾಗಿ ಪ್ರತ್ಯೇಕವಾದ ಯಜ್ಞಗೃಹವಿಲ್ಲವೆಂದೂ, ಸಾಧಾರಣವಾದ ಮನೆಯಲ್ಲಿಯೇ ಅಗ್ನಿಯನ್ನು ಸ್ಥಾಪಿಸಬಹುದೆಂದೂ, ತಿಳಿಯುತ್ತದೆ.

**ಸಮಿತ್ಸಮಿತ್ಸುಮನಾ ಬೋಧ್ಯಸ್ಮೇ ಶುಚಾಶುಚಾ ಸುಮತಿಂ ರಾಸಿ ವಸ್ವಃ ।**
**ಆ ದೇವ ದೇವಾನ್ಯಜಥಾಯ ವಕ್ಷಿ ಸಖಾ ಸಖೀನ್ತ್ಸುಮನಾ ಯಕ್ಷ್ಯಗ್ನೇ ॥**
(ಋ. ಸಂ ೩-೪-೧)

ಎಂಬ ಋಕ್ಕನ್ನು ವಿಶ್ವಾಮಿತ್ರಋಷಿಯು ಕಾವ್ಯರೂಪವಲ್ಲಿ ವರ್ಣಿಸುವ ಅಗ್ನಿಯ ಪ್ರಜ್ವಲನವೂ ಮತ್ತು

**ಜುಷಸ್ವ ನಃ ಸಮಿಧಮಗ್ನೇ ಅದ್ಯ ಶೋಚಾ ಬೃಹದ್ಯಜತಂ ಧೂಮಮೃಣ್ವನ್ ।**
**ಉಪ ಸ್ಪೃಶ ದಿವ್ಯಂ ಸಾನು ಸ್ತೂಪೈಃ ಸಂ ರಶ್ಮಿಭಿಸ್ತತನಃ ಸೂರ್ಯಸ್ಯ ॥**

(ಋ. ಸಂ. ೭-೨-೧)

ಎಂಬ ಋಕ್ಕಿನಲ್ಲಿ ಅಗ್ನಿಕಿರಣವೂ ಸೂರ್ಯಕಿರಣವೂ ಒಟ್ಟಿಗೆ ಸೇರಿಕೊಂಡು ಪ್ರಸರಿಸುವ ವರ್ಣನವೂ ಸಹ ಮಂತ್ರಗಳ ಕಾವ್ಯಾತ್ಮಕಸ್ವರೂಪವನ್ನು ತಿಳಿಸುತ್ತವೆ. ಇದೇ ವರ್ಣನೆಗಳು ಈ ಯಾಗವು ಪ್ರಾತಃಕಾಲದಲ್ಲಿ ಪ್ರಾರಂಭಿಸಲ್ಪಡ ತಕ್ಕದ್ದು ಎಂಬುದನ್ನು ತಿಳಿಸುತ್ತವೆ.

**ಪೂರ್ವ್ಯಂ ತಂತುಂ ತನುಷ್ವ** (೧-೧೪೨-೧) ಎಂಬ ಮಂತ್ರವು ಈ ಯಾಗವು ಪ್ರಾಚೀನವಾದುದೆಂದು ತಿಳಿಸುತ್ತದೆ. ಈ ಯಜ್ಞವು ನಿರ್ವಿಘ್ನವಾಗಿ ನೆರವೇರಲು **ದೇವಹೋತೃವಾದ ಅಗ್ನಿಯ** ಸಹಾಯದ ಆವಶ್ಯಕತೆ ಯಿರುವುದರಿಂದ ಅಗ್ನಿಗೆ ಆಜ್ಯಾಹುತಿಯನ್ನು ಮೊದಲು ಅರ್ಪಿಸಬೇಕು. ಇದರಿಂದ ಅಗ್ನಿತೃಪ್ತಿಯಾದ ನಂತರ ಅಗ್ನಿಯು ಅಂತರಿಕ್ಷದ ಕಡೆಗೆ ಪ್ರಸರಿಸುತ್ತಾನೆ. (೭-೨-೧) ಅನಂತರ ದೇವತೆಗಳನ್ನು ಕರೆತರುತ್ತಾನೆ. ಅಗ್ನಿಯು ಮಾನವರ ಸಖನಾದುದರಿಂದ (೩-೪-೧) ಈ ಉಪಕಾರವನ್ನು ಮಾಡುತ್ತಾನೆ.

**ಕೃತಿಕೌಶಲ್ಯ**—ಆಪ್ರೀಸೂಕ್ತಗಳು ಒಂದಕ್ಕಿಂತ ಒಂದು ಬೇರೆಯಾಗಿ, ಬೇರೆ ಬೇರೆ ಕಾಲಗಳಲ್ಲಿ ನಿರ್ಮಿತ ವಾಗಿದ್ದರೂ ಮತ್ತು ಬೇರೆ ಬೇರೆ ಋಷಿಸಂತತಿಗಳಿಗೆ ಸಂಬಂಧಿಸಿದ್ದರೂ ಸಹ ಈ ಎಲ್ಲಾ ಸೂಕ್ತಗಳಲ್ಲಿಯೂ ಒಂದೇ ವಿಧವಾದ ವಾಕ್ಸರಣಿಯೂ ಧ್ಯೇಯವೂ ಇರುವುದರಿಂದ ಉಳಿದ ಎಲ್ಲಾ ವಿಧವಾದ ಸೂಕ್ತಗಳಿಗಿಂತಲೂ ಒಂದು ವಿಧ ವಾಗಿ ಅಧಿಕವಾದ ಸಾಮರಸ್ಯವೂ ಸ್ವಾರಸ್ಯವೂ ಇವುಗಳ ವೈಶಿಷ್ಟ್ಯವನ್ನು ತೋರಿಸುತ್ತವೆ.

(ಎರಡು ಸೂಕ್ತಗಳನ್ನುಳಿದು ಉಳಿದ) ಎಲ್ಲಾ ಸೂಕ್ತಗಳಲ್ಲೂ ಸಹ ಋಕ್ಕುಗಳ ಸಂಖ್ಯೆಯು ಹನ್ನೊಂದಿರು ವುದೂ ಮತ್ತು **ಸಮಿದ್** ಎಂಬ ಪದದಿಂದ ಸೂಕ್ತವು ಪ್ರಾರಂಭವಾಗಿ **ಸ್ವಾಹಾ** ಎಂಬುದರೊಂದಿಗೆ ಮುಕ್ತಾಯ ವಾಗುವುದೂ ಕಾವ್ಯದೃಷ್ಟಿಯಿಂದಲೂ ಕಲಾದೃಷ್ಟಿಯಿಂದಲೂ ಒಂದು ನಿಯತವಾದ ನಿಯಮವನ್ನು ತೋರಿಸುತ್ತದೆ.

ಛಂದಸ್ಸಿನ ವಿಷಯದಲ್ಲಿ ಅಂತಹ ನಿರ್ಬಂಧವಿಲ್ಲ. ೧-೧೩; ೧-೧೮೮; ೫-೫; ೯-೫ ಈ ಸೂಕ್ತಗಳು **ಗಾಯತ್ರೀಛಂದಸ್ಸಿನಲ್ಲೂ**, ೧-೧೪೨ ನೇ ಸೂಕ್ತವು **ಅನುಷ್ಟುಪ್‌ಛಂದಸ್ಸಿನಲ್ಲೂ**, ೨-೩; ೩-೪; ೭-೨; ೧೦-೭೦. ಮತ್ತು ೧೦-೧೧೦ ಈ ಸೂಕ್ತಗಳು **ತ್ರಿಷ್ಟುಪ್‌ಛಂದಸ್ಸಿನಲ್ಲೂ** ರಚಿತವಾಗಿವೆ.

**ದೇವಾನ್ ಆವಹ, ದೇವಾನ್ ವಕ್ಷಿ, ವಿಪ್ರಾ ಯಜ್ಞೇಷು ಮಾನುಷೇಷು ಕಾರುಃ**, ಇತ್ಯಾದ್ಯನೇಕ ಮಂತ್ರಭಾಗಗಳು ಪುನರಾವರ್ತವಾಗಿವೆ.

### ವ್ಯಾಕರಣಪ್ರಕ್ರಿಯಾ

**ಗಹಿ**—ಗಮ್ಲೃ ಗತೌ ಧಾತು. ಲೋಟ್‌ಮಧ್ಯಮಪುರುಷಏಕವಚನದಲ್ಲಿ ಸಿಪಿಗೆ ಹಿ ಆದೇಶ. **ಬಹುಲಂ ಛಂದಸಿ** ಎಂಬುದರಿಂದ ಶಪಿಗೆ ಲುಕ್. **ಅನುದಾತ್ತೋಪದೇಶ**—(ಪಾ. ಸೂ. ೬-೪-೩೭) ಎಂಬುದರಿಂದ ಹಿಗೆ ಜಿತ್ತ್ವವಿರುವುದರಿಂದ ಅದನ್ನು ನಿಮಿತ್ತೀಕರಿಸಿ ಧಾತುವಿನ ಅನುನಾಸಿಕವಾದ ಮಕಾರಕ್ಕೆ ಲೋಪ. **ಅಸಿದ್ಧವದತ್ರಾ-**

**ಭಾತ್** ಎಂಬುದರಿಂದ ಇದು ಅಸಿದ್ಧವಾದುದರಿಂದ **ಅತೋ ಹೇಃ** ಎಂಬುದರಿಂದ ಹಿಗೆ ಲುಕ್ ಬರುವುದಿಲ್ಲ. ತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ

ವೀತಯೇ—ವೀ ಗತಿಪ್ರಜನಕಾಂತ್ಯಸನಖಾದನೇಷು. ಧಾತು. **ಮಂತ್ರೇವೃಷೇಷಪಚ**—(ಪಾ. ಸೂ. ೬.೧.೨೦೯) ಎಂಬುದರಿಂದ ಕ್ತಿನ್ನಿಗೆ ಉದಾತ್ತಸ್ವರ ಬರುತ್ತದೆ. ಚತುರ್ಥೀಏಕವಚನಾಂತರೂಪ.

**ಇಂದ್ರ**—ಪಾದಾದಿಯಲ್ಲಿರುವುದರಿಂದ ಆಮಂತ್ರಿತನಿಘಾತಸ್ವರ ಬರುವುದಿಲ್ಲ. **ಆಮಂತ್ರಿತಸ್ಯ** (ಪಾ. ಸೂ. ೬-೧-೧೯೮) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಶ್ರುಧಿ**—ಶ್ರು ಶ್ರವಣೇ ಧಾತು. ಲೋಟ್ ಮಧ್ಯಮಪುರುಷಏಕವಚನದಲ್ಲಿ ಸಿಪ್. **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಲುಕ್. **ಶ್ರುಶೃಣು**—(ಪಾ. ಸೂ. ೬ ೪-೧೦೨) ಎಂಬುದರಿಂದ ಹಿಗೆ ಧಿಭಾವ ಬರುತ್ತದೆ. ಅದಕ್ಕೆ ಙಿತ್ವವಿರುವುದರಿಂದ ಗುಣ ಬರುವುದಿಲ್ಲ. ತಿಙಂತದ ಪರದಲ್ಲಿರುವುದರಿಂದ **ಅತಿಙಃ** ಎಂದು ನಿಷೇಧಮಾಡಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯಕ್ಕೆ ಅಪಿತ್ವ ವಿಧಾನಮಾಡಿರುವುದರಿಂದ ಅದಕ್ಕೆ ಉದಾತ್ತ ಬರುವುದರಿಂದ ಅಂತೋದಾತ್ತವಾಗುತ್ತದೆ.

**ಹವವ್**—ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ ಧಾತು. ಭಾವಾರ್ಥದಲ್ಲಿ ಅಪ್ ಪ್ರತ್ಯಯ. ಧಾತುವಿಗೆ ಸಂಪ್ರಸಾರಣ. ಪೂರ್ವರೂಪ. ಪ್ರತ್ಯಯನಿಮಿತ್ತಕವಾಗಿ ಧಾತುವಿನ ಇಕಿಗೆ ಗುಣ. ಅವಾದೇಶ. ಪ್ರತ್ಯಯ ಪಿತ್ತಾದುದರಿಂದ ಧಾತುಸ್ವರ ಉಳಿಯುತ್ತದೆ.

**ಹವಂತೇ**—ಪೂರ್ವೋಕ್ತವಾದ ಧಾತುವಿಗೆ ಲಟ್ ಪ್ರಥಮಪುರುಷಬಹುವಚನದಲ್ಲಿ ಝ ಪ್ರತ್ಯಯ. ಟಿಗೆ ಏತ್ವ. **ಝೋಂತಃ** ಎಂಬುದರಿಂದ ಅಂತಾದೇಶ. **ಬಹುಲಂ ಛಂದಸಿ** ಎಂಬುದರಿಂದ ಧಾತುವಿಗೆ ಸಂಪ್ರಸಾರಣ. ಪೂರ್ವರೂಪ. ಶಪ್ ವಿಕರಣ. ಅದನ್ನು ನಿಮಿತ್ತೀಕರಿಸಿ ಉಕಾರಕ್ಕೆ ಗುಣ. ಅವಾದೇಶ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಅಧ್ವರೇ**—ನ ವಿದ್ಯತೇ ಧ್ವರಃ ಹಿಂಸಾ ಯತ್ರ ಅಧ್ವರಃ. ತಸ್ಮಿನ್. **ನಞ್ಸುಭ್ಯಾಮ್** (ಪಾ. ಸೂ ೬-೨-೧೭೨) ಎಂಬುದರಿಂದ ಉತ್ತರಪದ ಅಂತೋದಾತ್ತಸ್ವರ ಬರುತ್ತದೆ. ಸಪ್ತಮೀಏಕವಚನಾಂತರೂಪ. || ೧೩ ||

ಇಲ್ಲಿಗೆ ನೂರನಲವತ್ತೆರಡನೆಯ ಸೂಕ್ತವು ಮುಗಿದುದು.



# ನೂರನಲವತ್ತಮೂರನೆಯ ಸೂಕ್ತವು

—— :o: ——

**ಪ್ರ ತವ್ಯಸೀಮಿತ್ಯಷ್ಟರ್ಚಂ ಚತುರ್ಥಂ ಸೂಕ್ತಂ ದೈರ್ಘತಮಸಂ । ತಥಾ ಚಾನುಕ್ರಾಂತಂ । ಪ್ರ ತವ್ಯಸೀಮಷ್ಟಾವಾಗ್ನೇಯಂ ತು ತತ್ತ್ರಿಷ್ಟುಬಂತಮಿತಿ । ತು ತದಿತ್ಯುಕ್ತತ್ವಾದಿದಮಾದಿಸೂಕ್ತಾಷ್ಟಕಸ್ಯಾಗ್ನಿ- ರ್ದೇವತಾ । ಅಂತ್ಯಾ ತ್ರಿಷ್ಟುಪ್ ಶಿಷ್ಟಾಸ್ತ್ರಿಷ್ಟುಬಂತಪರಿಭಾಷಯಾ ಜಗತ್ಯಃ ॥ ಪ್ರಾತರನುವಾಕಾಶ್ವಿನ- ಶಸ್ತ್ರಯೋರುಕ್ತೋ ವಿನಿಯೋಗಃ ॥ ಅಗ್ನಿಷ್ಟೋಮ ಅಗ್ನಿಮಾರುತೇ ಶಸ್ತ್ರ ಇದಂ ಸೂಕ್ತಂ ಜಾತವೇದಸ್ಯ- ನಿವಿದ್ಧಾನೀಯಂ । ಅಥ ಯಥೇತಮಿತಿ ಖಂಡೇ ಸೂತ್ರಿತಂ । ಪ್ರ ತವ್ಯಸೀಂ ನವ್ಯಸೀಮಾಪೋ ಹಿ ಷ್ಠೇತಿ ತಿಸ್ರಃ । ಆ. ೫-೨೦ । ಇತಿ ॥ ದಶರಾತ್ರಸ್ಯ ಪ್ರಥಮೇಽಹನಿ ಜಾತವೇದಸ್ಯನಿವಿದ್ಧಾನಂ ಆಶ್ವಮೇಧಿಕೇ ಮಧ್ಯಮೇಽಹನಿ ಚ ನಿವಿದ್ಧಾನಂ । ತಥಾ ಚಾಚಾರ್ಯಾತಿದೇಶಃ । ಐಕಾಹಿಕಾನ್ಯುಪಸಂಶಸ್ಯ ತೇಷು ನಿವಿದೋ ದಧ್ಯಾದೇವಮೇವಾಗ್ನಿಮಾರುತೇ । ಆ ೧೦-೧೦ । ಇತಿ ॥**

ಅನುವಾದವು—**ಪ್ರ ತವ್ಯಸೀಂ** ಎಂಬ ಈ ಸೂಕ್ತವು ಇಪ್ಪತ್ತೊಂದನೆಯ ಅನುವಾಕದಲ್ಲಿ ನಾಲ್ಕನೆಯ ಸೂಕ್ತವು. ಇದರಲ್ಲಿ ಎಂಟು ಋಕ್ಕುಗಳಿರುವವು. ಈ ಸೂಕ್ತಕ್ಕೆ ದೀರ್ಘತಮಸ್ ಎಂಬುವನೇ ಋಷಿಯು. ಅನುಕ್ರಮಣಿಕೆಯಲ್ಲಿ—**ಪ್ರ ತವ್ಯಸೀಮಷ್ಟಾವಾಗ್ನೇಯಂ ತು ತತ್ತ್ರಿಷ್ಟುಬಂತಂ** ಎಂದು ಹೇಳಿರುವುದು. ಇಲ್ಲಿ **ತು ತತ್** ಎಂಬ ಶಬ್ದಗಳ ಪ್ರಯೋಗವಿರುವುದರಿಂದ ಈ ಸೂಕ್ತ ಮೊದಲುಗೊಂಡು ಮುಂದಿನ ಎಂಟು ಸೂಕ್ತಗಳು ಅಗ್ನಿದೇವತಾಕವಾಗಿರುವುವೆಂದು ತಿಳಿಯಬೇಕು. ಈ ಸೂಕ್ತದ ಕೊನೆಯ ಋಕ್ಕು ತ್ರಿಷ್ಟುಪ್ ಛಂದಸ್ಕವು-ಉಳಿದ ಋಕ್ಕುಗಳು ಜಗತೀಛಂದಸ್ಸಿನವು. ಪ್ರಾತರನುವಾಕ ಮತ್ತು ಆಶ್ವಿನಶಸ್ತ್ರಮಂತ್ರಗಳಿಗಾಗಿ ಈ ಸೂಕ್ತಗಳ ವಿನಿಯೋಗವಿರುವುದು. ಮತ್ತು ಅಗ್ನಿಷ್ಟೋಮಯಾಗದಲ್ಲಿ ಅಗ್ನಿಮಾರುತಶಸ್ತ್ರಮಂತ್ರಗಳನ್ನು ಪಠಿಸುವಾಗ ಜಾತವೇದಸ್ಸಂಬಂಧವಾದ ನಿವಿದ್ ಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನ ಶ್ರೌತಸೂತ್ರದ **ಯಥೇತಂ** ಎಂಬ ಖಂಡದ **ಪ್ರ ತವ್ಯಸೀಂ ನವ್ಯಸೀಮಾಪೋ ಹಿ ಷ್ಠೇತಿ ತಿಸ್ರಃ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೫-೨೦) ಇದಲ್ಲದೆ ದಶರಾತ್ರವೆಂಬ ಹತ್ತುದಿನಪರ್ಯಂತವಾಗಿ ಮಾಡುವ ಯಾಗವಿಶೇಷದಲ್ಲಿ ಮೊದಲನೆಯ ದಿವಸ ಜಾತವೇದಸ್ಸಂಬಂಧವಾದ ನಿವಿದ್ ಮಂತ್ರಗಳಿಗಾಗಿಯೂ ಅಶ್ವಮೇಧ ಯಜ್ಞದಲ್ಲಿ ಮಧ್ಯಮದಿವಸದಲ್ಲಿ ನಿವಿದ್ ಮಂತ್ರಗಳಿಗಾಗಿಯೂ ಉಪಯೋಗಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದಲ್ಲಿ ಆಚಾರ್ಯಾತಿದೇಶ ವಿವರಣೆಮಾಡುವಾಗ—**ಐಕಾಹಿಕಾನ್ಯುಪಸಂಶಸ್ಯ ತೇಷು ನಿವಿದೋ ದಧ್ಯಾದೇವಮೇವಾಗ್ನಿಮಾರುತೇ** ಎಂಬ ವಾಕ್ಯದಿಂದ ನಿರ್ದಿಷ್ಟವಾಗಿರುವುದು. (ಆ. ೧೦-೧೦).

———

॥ ಓಂ ॥

## ಸೂಕ್ತ—೧೪೩

॥ ಮಂಡಲ—೧ ॥ ಅನುವಾಕ—೨೧ ॥ ಸೂಕ್ತ—೧೪೩ ॥

॥ ಅಷ್ಟಕ— ೨ ॥ ಅಧ್ಯಾಯ— ೨ ॥ ವರ್ಗ— ೧೨ ॥

ಸೂಕ್ತದಲ್ಲಿರುವ ಋಕ್ಸಂಖ್ಯೆ-೮ ॥

॥ ಋಷಿಃ—ದೀರ್ಘತಮಾ ಔಚಥ್ಯಃ ॥

॥ ದೇವತಾ—ಅಗ್ನಿಃ ॥

॥ ಛಂದಃ—೧-೭. ಜಗತೀ । ೮. ತ್ರಿಷ್ಟುಪ್ ॥

ಸಂಹಿತಾಪಾಠಃ

ಪ್ರ ತವ್ಯಸೀಂ ನವ್ಯಸೀಂ ಧೀತಿಮಗ್ನಯೇ ವಾಚೋ ಮತಿಂ ಸಹಸಃ
ಸೂನವೇ ಭರೇ ।
ಅಪಾಂ ನಪಾದ್ಯೋ ವಸುಭಿಃ ಸಹ ಪ್ರಿಯೋ ಹೋತಾ ಪೃಥಿವ್ಯಾಂ
ನ್ಯಸೀದದೃತ್ವಿಯಃ ॥ ೧ ॥

। ಪದಪಾಠಃ ।

ಪ್ರ । ತವ್ಯಸೀಂ । ನವ್ಯಸೀಂ । ಧೀತಿಂ । ಅಗ್ನಯೇ । ವಾಚಃ । ಮತಿಂ । ಸಹಸಃ । ಸೂನವೇ । ಭರೇ ।
ಅಪಾಂ । ನಪಾತ್ । ಯಃ । ವಸುಽಭಿಃ । ಸಹ । ಪ್ರಿಯಃ । ಹೋತಾ । ಪೃಥಿವ್ಯಾಂ । ನಿ । ಅಸೀದತ್ ।
ಋತ್ವಿಯಃ ॥ ೧ ॥

ಸಾಯಣಭಾಷ್ಯಂ

ಅಹಮಗ್ನಯೇ ತವ್ಯಸೀಂ ತವೀಯಸೀಮತಿಶಯೇನ ವರ್ಧಯಿತ್ರೀಂ ॥ ತವತಿರ್ವೃದ್ಧ್ಯರ್ಥಃ ಸೌತ್ರೋ ಧಾತುಃ । ಅಸ್ಮಾತ್ತೃಜಂತಾತ್ತುಶ್ಛಂದಸೀತೀಯಸುನ್ । ತುರಿಷ್ಠೇಮೇಯಃಸ್ವಿತಿ ತೃಲೋಪಃ । ಛಾಂದಸ ಈಕಾರಲೋಪಃ ॥ ನವ್ಯಸೀಂ ನವತರಾಮಪೂರ್ವಾಂ ಧೀತಿಂ ಯಾಗಲಕ್ಷಣಾಮುಕ್ತಗುಣಕಂ ಕರ್ಮ ಪ್ರ ಭರೇ । ಪ್ರಕರ್ಷೇಣ ಕರೋಮಿ । ತಥೋಕ್ತಲಕ್ಷಣಾಂ ವಾಚೋ ಮತಿಂ ಸ್ತುತಿರೂಪಂ ಕರ್ಮ

ಭರೇ । ಕೀದೃಶಾಯಾಗ್ನಯೇ । ಸಹಸೋ ಬಲಸ್ಯ ಸೂನವೇ ಪುತ್ರಾಯ । ಕಿಂಚ ಯೋಽಗ್ನಿರಪಾಂ ನಪಾತ್ ತಾಸಾಂ ನಪ್ತಾ । ಅದ್ಭ್ಯ ಓಷಧಯಃ ಓಷಧೀಭ್ಯೋಽಗ್ನಿರಿತ್ಯಗ್ನೇರ್ನಪ್ತೃತ್ವಂ । ಅಥವಾ । ಅಪಾಂ ನ ಪಾತಯಿತಾ ವೈದ್ಯುತಾಗ್ನಿರೂಪೇಣ ಪ್ರವರ್ತಕತ್ವಾದಿತಿ ಭಾವಃ । ತಥಾ ಪ್ರಿಯೋ ಯಜಮಾನಸ್ಯ ಪ್ರೀಣಯಿತಾ ಪ್ರಿಯತಮೋ ವಾ ತಸ್ಯ ಹೋತಾ ಹೋಮನಿಷ್ಪಾದಕಃ ಸೋಽಗ್ನಿರ್ಋತ್ವಿಯಃ ಪ್ರಾಪ್ತಕಾಲಃ ಪ್ರಾಪ್ತಪ್ರದಾನಸಮಯಃ ಸನ್।ಪೃಥಿವ್ಯಾಂ ವೇದಿಲಕ್ಷಣಾಯಾಂ ವಸುಭಿರ್ನಿವಾಸಯೋಗ್ಯೈರ್ಗವಾದಿಧನೈಃ ಸಹಿತೋ ನ್ಯಸೀದತ್ । ನಿತರಾಂ ಸೀದತಿ ॥

### ಪ್ರತಿಪದಾರ್ಥ

( **ಅಹಂ**—ನಾನು ) । **ಸಹಸಃ**—ಬಲದ । **ಸೂನವೇ**—ಪುತ್ರನಾದ । **ಅಗ್ನಯೇ**—ಅಗ್ನಿಗೆ (ಅಗ್ನಿಯನ್ನು ಉದ್ದೇಶಿಸಿ) । **ತವ್ಯಸೀಮ್**—ಅತ್ಯಂತ ವೀರ್ಯದಾಯಕವಾದುದೂ । **ನವ್ಯಸೀಮ್**—ಅತ್ಯಂತ ನೂತನವಾದುದೂ ಆದ । **ಧೀತಿಮ್**—ಯಾಗರೂಪವಾದ ಕರ್ಮವನ್ನೂ । **ವಾಚಃಮತಿಂ**—ಸ್ತೋತ್ರರೂಪವಾದ ಕರ್ಮವನ್ನೂ । **ಪ್ರಭರೇ**—ಅತಿಶಯವಾಗಿ ನೆರವೇರಿಸುತ್ತೇನೆ. (ಮತ್ತು) । **ಯಃ**—ಯಾವ ಅಗ್ನಿಯು । **ಅಪಾಂ ನಪಾತ್**—ನೀರುಗಳ ಪೌತ್ರನೂ, । **ಪ್ರಿಯಃ**—(ಯಜಮಾನನಿಗೆ) ಸಂತೋಷದಾಯಕನೂ ಅಥವಾ ಪ್ರಿಯತಮನೂ । **ಹೋತಾ**—ಹೋಮಸಂಪಾದಕನಾಗಿಯೂ ಆಗಿರುವನೋ (ಆ ಅಗ್ನಿಯು) । **ಋತ್ವಿಯಃ**—ಸಕಾಲಕ್ಕೆ ಸರಿಯಾಗಿ ಇದ್ದುಕೊಂಡು । **ಪೃಥಿವ್ಯಾಂ**—ವೇದಿರೂಪವಾದ ನೆಲದಮೇಲೆ । **ವಸುಭಿಃ**—ವಾಸಸ್ಥಾನಾದಿ ಧನಗಳೊಡನೆ । **ನ್ಯಸೀದತ್**—ಕುಳಿತುಕೊಳ್ಳುತ್ತಾನೆ. ।

### ಭಾವಾರ್ಥ

ಶಕ್ತಿಪುತ್ರನಾದ ಅಗ್ನಿಯನ್ನು ಉದ್ದೇಶಿಸಿ ಅತ್ಯಂತ ವೀರ್ಯದಾಯಕವಾದುದೂ, ನೂತನವಾದುದೂ ಆದ ಯಾಗರೂಪವಾದ ಕರ್ಮವನ್ನೂ ಸ್ತೋತ್ರರೂಪವಾದ ವಾಕ್ಕಿನೊಡನೆ ಅತಿಶಯವಾಗಿ ನೆರವೇರಿಸುತ್ತೇನೆ. ನೀರುಗಳ ಪೌತ್ರನೂ, ಯಜಮಾನನಿಗೆ ಸಂತೋಷದಾಯಕನೂ, ಹೋಮಸಂಪಾದಕನೂ ಆದ ಅಗ್ನಿಯು ಯಜ್ಞದಲ್ಲಿ ಸಕಾಲಕ್ಕೆ ಸರಿಯಾಗಿ ವೇದಿಕೆಯಲ್ಲಿ ಗವಾದಿಧನಗಳೊಡನೆ ಬಂದು ಕುಳಿತುಕೊಳ್ಳುತ್ತಾನೆ.

### English Translation

I offer devoutly to Agni, the son of strength, an invigorating and most new sacrifice, with words of adoration ; ( that Agni ), the grandson of the waters, who, (present) in due season, the friend and ministering priest (to the sacrificer) sits upon the alter with (many) good things.

### ವಿಶೇಷವಿಷಯಗಳು

ಅಗ್ನಿಷ್ಟೋಮೇ ಆಗ್ನಿಮಾರುತೇ ಶಸ್ತ್ರೇ ಇದಂ ಸೂಕ್ತಂ ಜಾತವೇದಸ್ಯನಿವಿದ್ಧಾನೀಯಂ । ಅಗ್ನಿಷ್ಟೋಮಯಾಗಕಾಲದಲ್ಲಿ ಪಠಿಸತಕ್ಕದ್ದೂ, ಆಗ್ನಿಮಾರುತಶಸ್ತ್ರರೂಪವಾದದ್ದೂ ಆದ ಸೂಕ್ತವೆಂದು ಸಾಯಣರು ಉಪೋದ್ಘಾತದಲ್ಲಿ ತಿಳಿಸಿದ್ದಾರೆ. ಪ್ರ ತವ್ಯಸೀಂ ನವ್ಯಸೀಂ ಆಪೋ ಹಿ ಷ್ಠೇತಿ ತಿಸ್ರಃ । ಎಂದಿರುವ

ಆಶ್ವಲಾಯನ ಶ್ರೌತಸೂತ್ರದ (೫-೨೦) ಆಧಾರವನ್ನೂ ಉದಹರಿಸಿದ್ದಾರೆ. ಇದು ಜಾತವೇದಸ್ಯನಿವಿದ್ ಮಂತ್ರ ವೆಂದು ಪ್ರಸಿದ್ಧವಾಗಿದೆ. ಆಗ್ನಿಮಾರುತಶಸ್ತ್ರದಲ್ಲಿ ವೈಶ್ವಾನರನಿವಿದ್ ಮಂತ್ರವೂ ಒಂದು ಭಾಗವಾದುದರಿಂದ ಅದಕ್ಕೆ ವ್ಯತ್ಯಾಸವನ್ನು ತೋರಿಸಲು ಜಾತವೇದಸ್ಯನಿವಿದ್ಧಾನೀಯಂ । ಎಂದು ಸ್ಪಷ್ಟವಾಗಿ ಹೇಳಿದೆ. ಇವುಗಳಲ್ಲಿ,

ವೈಶ್ವಾನರಾಯ ಪೃಥುಪಾಜಸೇ ವಿಪೋ ರತ್ನಾ ವಿಧಂತ ಧರುಣೇಷು ಗಾತವೇ ।
ಅಗ್ನಿರ್ಹಿ ದೇವಾँ ಅಮೃತೋ ದುವಸ್ಯತ್ಯಥಾ ಧರ್ಮಾಣಿ ಸನತಾ ನ ದೂದುಷತ್ ॥
(ಋ. ಸಂ. ೩-೩-೧)

ಎಂಬ ಋಕ್ಕಿನಿಂದ ಪ್ರಾರಂಭವಾಗುವ ಸೂಕ್ತವು ವೈಶ್ವಾನರಾಗ್ನಿಗೆ ಸಂಬಂಧಿಸಿದವು. ಪ್ರಕೃತವಾದ ಸೂಕ್ತವೂ ಮತ್ತು

ಆಪೋ ಹಿ ಷ್ಠಾ ಮಯೋಭುವಸ್ತಾ ನ ಊರ್ಜೇ ದಧಾತನ । ಮಹೇ ರಣಾಯ ಚಕ್ಷಸೇ ।
(ಋ. ಸಂ. ೧೦-೯-೧)

ಎಂಬ ಋಕ್ಕಿನಿಂದ ಪ್ರಾರಂಭವಾಗುವ ಸೂಕ್ತ ಮತ್ತು ಅದರ ಮುಂದಿನ ಎರಡು ಸೂಕ್ತಗಳೂ ಜಾತವೇದಸ್ಸೆಂಬ ಅಗ್ನಿಗೆ ಸಂಬಂಧಿಸಿದವು.

ಈ ಆಗ್ನಿಮಾರುತಕ್ಕೆ ಸಂಬಂಧಪಟ್ಟಿದೂ, ಇದಕ್ಕೆ ಹೇತುಭೂತವಾದುದೂ ಆದ ಪೂರ್ವಕಥೆಯು ಐತರೇಯಬ್ರಾಹ್ಮಣದಲ್ಲೂ, ಶತಪಥಬ್ರಾಹ್ಮಣದಲ್ಲೂ ಉಕ್ತವಾಗಿದೆ. ಎರಡು ಕಡೆಗಳಲ್ಲಿಯೂ ಕಥಾವಿವರಣೆಯಲ್ಲಿ ಕೊಂಚ ವ್ಯತ್ಯಾಸವಿರುವುದರಿಂದ ಎರಡನ್ನೂ ಬೇರೆಬೇರೆಯಾಗಿ ಇಲ್ಲಿ ವಿವರಿಸಿದೆ. ಇವುಗಳಲ್ಲಿ ವೈಶ್ವಾನರಾಗ್ನಿಗೆ ಸಂಬಂಧಿಸಿದ ಆಗ್ನಿಮಾರುತಸ್ತೋತ್ರದ ಮೂಲಕಥೆಯು ಐತರೇಯ ಬ್ರಾಹ್ಮಣದಲ್ಲಿ ಈರೀತಿಯಿದೆ—

ವೈಶ್ವಾನರೀಯೇಣಾಗ್ನಿಮಾರುತಂ ಪ್ರತಿಪದ್ಯತೇ ವೈಶ್ವಾನರೋ ವಾ ಏತದ್ರೇತಃ ಸಿಕ್ತಂ ಪ್ರಾಚ್ಯಾವಯತ್ತಸ್ಮಾದ್ವೈಶ್ವಾನರೀಯೇಣಾಗ್ನಿಮಾರುತಂ ಪ್ರತಿಪದ್ಯತೇ ।
(ಐ. ಬ್ರಾ. ೩-೩೪)

ವೈಶ್ವಾನರನು ಕೆಳಕ್ಕೆ ಚೆಲ್ಲಿದ ರೇತಸ್ಸನ್ನು ಚಲಿಸುವಂತೆ ಮಾಡಿದನು. ಆದುದರಿಂದ ಅವನ ಸ್ತುತಿಯಿಂದು ಅದರ ಹಿಂದಿನ ಸನ್ನಿವೇಶವನ್ನು ಸೂಚಿಸಿದೆ. ಆ ಸನ್ನಿವೇಶವೇನೆಂದರೆ,

ಪ್ರಜಾಪತಿರ್ವೈ ಸ್ವಾಂ ದುಹಿತರಮಭ್ಯಧ್ಯಾಯದ್ದಿವಮಿತ್ಯನ್ಯ ಆಹುರುಷಸಮಿತ್ಯನ್ಯೇ ತಾಮೃಶ್ಯೋ ಭೂತ್ವಾ ರೋಹಿತಂ ಭೂತಾಮಭ್ಯೈತ್ತಂ ದೇವಾ ಅಪಶ್ಯನ್ನಕೃತಂ ವೈ ಪ್ರಜಾಪತಿಃ ಕರೋತೀತಿ ತೇ ತಮೈಚ್ಛನ್ಯ ಏನಮಾರಿಷ್ಯತ್ಯೇತಮನ್ಯೋನ್ಯಸ್ಮಿನ್ನಾವಿಂದಂಸ್ತೇಷಾಂ ಯಾ ಏವ ಘೋರತಮಾಸ್ತನ್ವ ಆಸಂಸ್ತಾ ಏಕಧಾ ಸಮಭರಂಸ್ತಾಃ ಸಂಭೃತಾ ಏಷ ದೇವೋಽಭವತ್ತದಸ್ಯೈತದ್ಭೂತವನ್ನಾಮ ।

ಒಂದು ಸಲ ಪ್ರಜಾಪತಿಯು ತನ್ನ ದುಹಿತೃವನ್ನೇ ನೋಡಿ ಮೋಹಿಸಿ ಹೆಣ್ಣುಜಿಂಕೆಯಾಗಿ ಪರಿವರ್ತಿತಳಾದ ಅವಳನ್ನು ತಾನು ಗಂಡುಜಿಂಕೆಯಾಗಿ ಅವಳನ್ನು ಹಿಂಬಾಲಿಸಿದನು. ಆಗ ದೇವತೆಗಳು ಇವನ್ನು ಎಂದೂ ನಡೆಯದ

ಅಕೃತ್ಯವೆಂದು ತಿಳಿದು ಅವನನ್ನು ಶಿಕ್ಷಿಸಬೇಕೆಂದು ಪ್ರಯತ್ನಿಸಿ ಘೋರರೂಪಗಳ ಸಂಘಟನಾತ್ಮಕವಾದ ಈ ಭೂತವನ್ನು ನಿರ್ಮಿಸಿದರು. ಇವನು ಭೂತಪತಿಯಾದನು,

**ತಂ ದೇವಾ ಅಬ್ರುವನ್ನಯಂ ವೈ ಪ್ರಜಾಪತಿರಕೃತಮಕರಿಮಂ ವಿಧ್ಯೇತಿ ಸ ತಥೇತ್ಯಬ್ರವೀತ್ಸ ವೈ ವೋ ವರಂ ವೃಣಾ ಇತಿ ವೃಣೀಷ್ವೇತಿ ಸ ಏತಮೇವ ವರಮವೃಣೀತ ಪಶೂನಾಮಾಧಿಪತ್ಯಂ ತದಸ್ಯೈತತ್ಪಶುಮನ್ನಾಮ ॥**

ಆಗ ದೇವತೆಗಳು ಅವನಿಗೆ ಪ್ರಜಾಪತಿಯು ಮಾಡುತ್ತಿರುವ ಅಕೃತ್ಯವನ್ನು ತಿಳಿಸಿ ಅವನನ್ನು ಶಿಕ್ಷಿಸಬೇಕೆಂದರು. ಅವನು ಆಗಲೆಂದೊಪ್ಪಿ ಅದಕ್ಕೆ ಪ್ರತಿಯಾಗಿ ತನಗೆ **ಪಶುಪತಿ**ಯಾಗುವ ಅಧಿಕಾರವನ್ನು ವರದ ರೂಪದಲ್ಲಿ ಕೊಡಬೇಕೆನ್ನಲು ಅದಕ್ಕೆ ಅವರ ಒಪ್ಪಿಗೆಯು ದೊರೆಯಿತು.

**ತಮಭ್ಯಾಯತ್ಯಾವಿಧ್ಯತ್ಸ ವಿದ್ಧ ಊರ್ಧ್ವ ಉದಪ್ರಪತತ್ತಮೇತಂ ಮೃಗ ಇತ್ಯಾಚಕ್ಷತೇ ಯ ಉ ಏವ ಮೃಗವ್ಯಾಧಃ ಸ ಉ ಏವ ಸ ಯಾ ರೋಹಿತ್ಸಾ ರೋಹಿಣೀ ಯೋ ಏವೇಷುಸ್ತ್ರಿಕಾಂಡಾ ಸೋ ಏವೇಷುಸ್ತ್ರಿಕಾಂಡಾ ।**

ಆಗ ಭೂತಪತಿಯು **ತ್ರಿಕಾಂಡರೂಪ**ದಲ್ಲಿರುವ (three pointed arrow) ತನ್ನ ಶೂಲದಿಂದ ಪ್ರಜಾಪತಿಯನ್ನು ಚುಚ್ಚಿದನು. ಒಡನೆಯೇ,

**ತದ್ವಾ ಇದಂ ಪ್ರಜಾಪತೇ ರೇತಃ ಸಿಕ್ತಮಧಾವತ್ತತ್ಸರೋಽಭವತ್ತೇ ದೇವಾ ಅಬ್ರುವನ್ಮೇದಂ ಪ್ರಜಾಪತೇ ರೇತೋ ದುಷದಿತಿ ಯದಬ್ರುವನ್ಮೇದಂ ಪ್ರಜಾಪತೇ ರೇತೋ ದುಷದಿತಿ ತನ್ಮಾದುಷಮಭವತ್ತನ್ಮಾದುಷಸ್ಯ ಮಾದುಷತ್ವಂ ಮಾದುಷಂ ಹ ವೈ ನಾಮೈತದ್ಯನ್ಮಾನುಷಂ ಸನ್ಮಾನುಷಮಿತ್ಯಾಚಕ್ಷತೇ ಪರೋಕ್ಷೇಣ ಪರೋಕ್ಷಪ್ರಿಯಾ ಇವ ಹಿ ದೇವಾಃ ।** (ಐ.ಬ್ರಾ.೩-೩೩)

ಆ ಒಡನೆಯೇ ಪ್ರಜಾಪತಿಯ ರೇತಸ್ಸು ಹರಿಯಲಾರಂಭಿಸಿತು. ಅದು ಒಂದು ಸರಸ್ಸೇ ಆಯಿತು. ಆಗ ದೇವತೆಗಳು ಆ ರೇತಸ್ಸನ್ನು ವ್ಯರ್ಥಪಡಿಸಲಿಲ್ಲ. ಆದುದರಿಂದ,

**ತದಗ್ನಿನಾ ಪರ್ಯಾದಧುಸ್ತನ್ಮರುತೋಽಧೂನ್ವಂಸ್ತದಗ್ನಿರ್ನ ಪ್ರಾಚ್ಯಾವಯತ್ತದಗ್ನಿನಾ ವೈಶ್ವಾನರೇಣ ಪರ್ಯಾದಧುಸ್ತನ್ಮರುತೋಽದೂನ್ವಂಸ್ತದಗ್ನಿರ್ವೈಶ್ವಾನರಃ ಪ್ರಾಚ್ಯಾವಯತ್ತಸ್ಯ ತದ್ರೇತಸಃ ಪ್ರಥಮಮುದದೀಪ್ಯತ ತದಸಾವಾದಿತ್ಯೋಽಭವತ್..........**

(ಐ. ಬ್ರಾ. ೩-೩೩)

ಆಗ ದೇವತೆಗಳು ಅಗ್ನಿಯನ್ನು ಆ ರೇತಸ್ಸಿನಿಂದ ಪೂರಿತವಾದ ಆ ಸರಸ್ಸನ್ನು ಸುತ್ತುವರಿಯುವಂತೆಯೂ ಮರುತ್ತನ್ನು ಅದನ್ನು ಊದುವಂತೆಯೂ ಮಾಡಿದರು. ಅಗ್ನಿಯು ಅದನ್ನು ಚಲಿಸುವಂತೆ ಮಾಡಲಾಗಲಿಲ್ಲ. ಆಗ ಅಗ್ನಿಯು **ವೈಶ್ವಾನರ**ನ ಸಹಾಯದಿಂದ ಮರುತ್ತು ಚಲಿಸುವಂತೆ ಮಾಡಲು ಸಾಧ್ಯವಾಯಿತು ಎಂದು ಸನ್ನಿವೇಶವು ಉಕ್ತವಾಗಿದೆ. ಆದುದರಿಂದ **ವೈಶ್ವಾನರಾಯ ಪೃಥುಪಾಜಸೇ** (ಋ. ಸಂ. ೩-೩-೧) ಎಂಬ ಮಂತ್ರದಿಂದ ಪ್ರಾರಂಭವಾಗುವ **ವೈಶ್ವಾನರ ನಿವಿದ್ ಮಂತ್ರ**ದಿಂದ ವೈಶ್ವಾನರಾಗ್ನಿಯು ಸ್ತುತನಾಗಿದ್ದಾನೆ. ಮತ್ತು,

ಜಾತವೇದಸ್ಯಂ ಶಂಸತಿ। ಪ್ರಜಾಪತಿಃ ಪ್ರಜಾ ಅಸೃಜತ ತಾಃ ಸೃಷ್ಟಾಃ ಪರಾಚ್ಯ ಏವಾಯನ್ನ ವ್ಯಾವರ್ತಂತ ತಾ ಅಗ್ನಿನಾ ಪರ್ಯಗಚ್ಛತ್ತಾ ಅಗ್ನಿಮುಪಾವರ್ತಂತ ತಮೇವಾ ದ್ಯಾಪ್ಯುಪಾವೃತ್ತಾಃ ಸೋಽಬ್ರವೀಜ್ಜಾತಾ ವೈ ಪ್ರಜಾ ಅನೇನಾವಿದಮಿತಿ ತಜ್ಜಾತವೇದಸ್ಯಮಭವತ್ತಜ್ಜಾತವೇದಸೋ ಜಾತವೇದಸ್ತ್ವಂ॥

(ಐ. ಬ್ರಾ. ೩-೩೬)

ಪ್ರಜಾಪತಿಯು ಪ್ರಜೆಗಳನ್ನು ಸೃಷ್ಟಿಸಿದನು. ಅನಂತರ ಸೃಷ್ಟರಾದವರೆಲ್ಲರೂ ತಪ್ಪಿಸಿಕೊಂಡು ಹೋಗಿ ಪುನಃ ಬರಲೇ ಇಲ್ಲ. ಆಗ ಅಗ್ನಿಯಿಂದ ಸುತ್ತುವರಿಯಲ್ಪಟ್ಟಾಗ ಅವರೆಲ್ಲರೂ ಅಗ್ನಿಯನ್ನು ಸಮೀಪಿಸಿದರು. ಪ್ರಜಾಪತಿಯಿಂದ ಸೃಷ್ಟರಾದ ಪ್ರಜೆಗಳನ್ನು ಅಗ್ನಿಯು ತಿಳಿದುದರಿಂದ ಇವನಿಗೆ **ಜಾತವೇದಾಃ** ಎಂದು ಹೆಸರು. ಆದುದರಿಂದ **ಪ್ರ ತವ್ಯಸೀಂ** ಎಂಬ ಋಕ್ಕಿನಿಂದ ಪ್ರಾರಂಭವಾಗುವ ಸೂಕ್ತದಿಂದ ಈ ಅಗ್ನಿಯು ಸ್ತುತನಾಗಿದ್ದಾನೆ ಎಂದು ಈ ಆಗ್ನಿಮಾರುತ ನಿವಿದ್ ಮಂತ್ರದ ಉದ್ದಿಶ್ಯವನ್ನು ಹೇಳಿದೆ. ಇದೇ ಅಂಶವನ್ನು ಶತಪಥಬ್ರಾಹ್ಮಣದಲ್ಲಿ ಈ ಕ್ರಮದಲ್ಲಿ ಹೇಳಿದೆ.

ಪ್ರಜಾಪತಿರ್ಹ ವೈ ಸ್ವಾಂ ದುಹಿತರಮಭಿದಧ್ಯೌ। ದಿವಂ ವೋಷಸಂ ವಾ ಮಿಥುನ್ಯೇನಯಾ ಸ್ಯಾಮಿತಿ ತಾಗ್ಂ ಸಂಬಭೂವ। ತದ್ವೈ ದೇವಾನಾಮಾಗ ಆಸ। ಯ ಇತ್ಥಗ್ಂ ಸ್ವಾಂ ದುಹಿತರಮಸ್ಮಾಕಗ್ಂ ಸ್ವಸಾರಂ ಕರೋತೀತಿ। ತೇ ಹ ದೇವಾ ಊಚುಃ। ಯೋಽಯಂ ದೇವಃ ಪಶೂನಾಮೀಷ್ಟೇಽತಿಸಂಧಂ ವಾ ಅಯಂ ಚರತಿ ಯ ಇತ್ಥಗ್ಂಸ್ವಾಂ ದುಹಿತರಮಸ್ಮಾಗ್ಂ ಸ್ವಸಾರಂ ಕರೋತಿ ವಿಧ್ಯೇಮಮಿತಿ ತಗ್ಂ ರುದ್ರೋಽಭ್ಯಾಯತ್ಯ ವಿವ್ಯಾಧ ತಸ್ಯ ಸಾಮಿ ರೇತಃ ಪ್ರಚಸ್ಕಂದ ತಥೇನ್ನೂನಂ ತದಾಸ। ತಸ್ಮಾದೇತದೃಷಿಣಾಭ್ಯನೂಕ್ತಂ। ಪಿತಾ ಯಸ್ತ್ವಾಂ ದುಹಿತರಮಧಿಷ್ಕನ್ ಕ್ಷ್ಮಯಾ ರೇತಃ ಸಂಜಗ್ಮಾನೋ ನಿಷಿಂಚದಿತಿ ತದಾಗ್ನಿಮಾರುತಮಿತ್ಯುಕ್ಥಂ ತಸ್ಮಿಂಸ್ತದ್ವ್ಯಾಖ್ಯಾಯತೇ॥

(ಶ. ಬ್ರಾ. ೧-೭-೪-೧ ರಿಂದ ೪)

ಪ್ರಜಾಪತಿಯು ತನ್ನ ಮಗಳಲ್ಲಿಯೇ ಕಾಮ.ಮೋಹಿತನಾಗಲು ದೇವತೆಗಳು ಇದನ್ನು ಪಾಪವೆಂದು ತಿಳಿದು ರುದ್ರನನ್ನು ಕುರಿತು ಪ್ರಜಾಪತಿಯನ್ನು ಶಿಕ್ಷಿಸಬೇಕೆಂದರು. ಆಗ ರುದ್ರನು ಪ್ರಜಾಪತಿಯನ್ನು ಚುಚ್ಚಲು ಅವನ ಬೀಜವು ಕೆಳಗೆ ಬಿದ್ದುಹೋಯಿತು. ಇದೇ ವಿಷಯವನ್ನು

ಪಿತಾ ಯತ್ಸ್ವಾಂ ದುಹಿತರಮಧಿಷ್ಕನ್ ಕ್ಷ್ಮಯಾ ರೇತಃ ಸಂಜಗ್ಮಾನೋ ನಿ ಷಿಂಚತ್।
ಸ್ವಾಧ್ಯೋಽಜನಯನ್ ಬ್ರಹ್ಮ ದೇವಾ ವಾಸ್ತೋಷ್ಪತಿಂ ವ್ರತಪಾಂ ನಿರತಕ್ಷನ್।

(ಋ. ಸಂ. ೧೦-೬೧-೭)

ಎಂಬ ಋಕ್ಕಿನಲ್ಲಿ "ತಂದೆಯಾದವನು ತನ್ನ ಮಗಳೊಂದಿಗೆ ಸಂಭೋಗಿಸಲು ಆಲಿಂಗಿಸಿದಾಗ ಅವನು ತನ್ನ ಬೀಜವನ್ನು ಕೆಳಗೆ ಬೀಳಿಸಿಕೊಂಡನು" ಎಂಬುದಾಗಿ ಹೇಳಿದೆ. ಈ ಮಂತ್ರವು ಅಗ್ನಿಮಾರುತವೆಂಬ ಹೆಸರಿನಿಂದ ಪ್ರಸಿದ್ಧವಾಯಿತು. ಐತರೇಯಬ್ರಾಹ್ಮಣದಲ್ಲಿ **ಜಾತವೇದಸ್ಸಿಗೆ** ಸಂಬಂಧಿಸಿದುದೂ, ಪ್ರಸಕ್ತವಾದ ಸೂಕ್ತವನ್ನು ನಿರ್ದೇಶಿಸಿದುದೂ ಆದ ಅಗ್ನಿಮಾರುತಶಸ್ತ್ರದ ಪ್ರಭಾವವನ್ನು ವಿವರಿಸುತ್ತಾ,

**ಜಾತವೇದಸೇ ಸುನವಾಮ ಸೋಮಮಿತಿ ಜಾತವೇದಸ್ಯಾಂ ಪುರಸ್ತಾತ್ಸೂಕ್ತಸ್ಯ ಶಂಸತಿ ಸ್ವಸ್ತ್ಯ-ಯನಂ ವೈ ಜಾತವೇದಸ್ಯಾಃ ಸ್ವಸ್ತಿತಾಯೈ । ಸ್ವಸ್ತ್ಯಯನಮೇವ ತತ್ಕುರುತೇ ಸ್ವಸ್ತಿ ಸಂವ-ತ್ಸರಸ್ಯ ಪಾರಮಶ್ನುತೇ ಯ ಏವಂ ವೇದ ।**

**ಪ್ರ ತವ್ಯಸೀಂ ನವ್ಯಸೀಂ ಧೀತಿಮಗ್ನಯ ಇತಿ ಜಾತವೇದಸ್ಯಂ ಪ್ರೇತಿ ಪ್ರಥಮೇಽಹನಿ ಪ್ರಥಮಸ್ಯಾ-ಹ್ನೋ ರೂಪಂ । ಸಮಾನಮಾಗ್ನಿಮಾರುತಂ ಭವತಿ ಯಚ್ಚಾಗ್ನಿಷ್ಟೋಮೇ ಯದ್ವೈ ಯಜ್ಞೇ ಸಮಾನಂ ಕ್ರಿಯತೇ ತತ್ಪ್ರಜಾ ಅನು ಸಮನಂತಿ ತಸ್ಮಾತ್ಸಮಾನಮಾಗ್ನಿಮಾರುತಂ ಭವತಿ ।**

ಜಾತವೇದಸ್ಸನ್ನುದ್ದೇಶಿಸಿದ ಆಗ್ನಿಮಾರುತಶಸ್ತ್ರವು ಮಂಗಳಾತ್ಮಕವಾದುದು, ಕ್ಷೇಮಕಾರಿಯಾದುದು, ಇತ್ಯಾದಿಯಾಗಿ ಹೇಳಿದೆ. ಆದುದರಿಂದ ಪ್ರಸಕ್ತವಾದ ಸೂಕ್ತದ ಮಹಿಮೆಯು ಅಧಿಕವಾದುದು.

**ಅಪಾಂ ನಪಾತ್**—'**ಅದ್ಭ್ಯ ಓಷಧಯಃ, ಓಷಧೀಭ್ಯೋಽಗ್ನಿಃ**' **ಇತ್ಯಗ್ನೇಃ ನಪ್ತೃತ್ವಂ ।** ಉದಕಗಳಿಂದ ಓಷಧಿಗಳೂ, ಓಷಧಿಗಳಿಂದ ಅಗ್ನಿಯೂ ಉತ್ಪನ್ನವಾಗುವುದರಿಂದ ಅಗ್ನಿಯು ಉದಕಗಳಿಗೆ ನಪ್ತೃವಾ (ಪೌತ್ರನಾ) ದನು. ಅಥವಾ **ಅಪಾಂ ನ ಪಾತಯಿತಾ ವೈದ್ಯುತಾಗ್ನಿರೂಪೇಣ ಪ್ರವರ್ಷಕತ್ವಾದಿತಿ ಭಾವಃ** ಎಂಬ ವ್ಯುತ್ಪತ್ತಿಯನ್ನು ತೋರಿಸಿ ವೈದ್ಯುತಾಗ್ನಿಗೆ ಈ ಹೆಸರೆಂದು ಸಾಯಣರು ವಿವರಿಸಿದ್ದಾರೆ. ನಿರುಕ್ತಕಾರರು **ಅಪಾಂ ನಪಾತ್** ಎಂಬುದರ ವಿವರಣೆಯು **ತನೂನಪಾತ್** ಎಂಬುದರ ವಿವರಣೆಯಂತೆಯೇ ಆಗುತ್ತದೆಂದು ಹೇಳಿದ್ದಾರೆ.

**ತನೂನಪಾದಯಂ ತ್ವೇವ ನಾಮ್ನಾ ಯಚ್ಛತ್ಯಸೌ ತನುಂ ।**
**ನಪಾದಿತಿ ಪ್ರಜಾ ಮಾಹುರಮುತೋಽಸ್ಯ ಚ ಸಂಭವಾತ್ ॥**
(ಬೃ. ದೇ. ೩-೧)

ತನ್ನಿಂದ ತಾನೇ ಹುಟ್ಟಿದುದರಿಂದ ತನ್ನ ಪುತ್ರನೇ ಆಗಿ **ತನೂನಪಾತ್** ಎಂಬ ಹೆಸರು ಪ್ರಸಿದ್ಧವಾಗಿದೆಯೆಂದು ಅನೇಕ ಕಡೆ ಹೇಳಿರುವಂತೆ **ಅಪಾಂನಪಾತ್** ಎಂಬುವಕ್ಕೂ ಇದೇ ವಿವರಣೆಯು. ಈ ವಿಷಯವನ್ನು **ಋಗ್ವೇದ ಸಂಹಿತೆಯ** ೧೦ ನೇ ಭಾಗದ ಋ. ಸಂ. ೧-೧೨೨-೪ ನೇ **ಋಕ್ಕಿನಲ್ಲಿ** ಸೂಕ್ಷ್ಮವಾಗಿ ತಿಳಿಸಿದೆ. ಈಗ **ಅಪಾಂ-ನಪಾತ್** ಎಂಬ ದೇವತೆಯು ಅಗ್ನಿಗಿಂತ ಬೇರೆಯೇ ಅಥವಾ ಕೇವಲ ಅಗ್ನಿಯ ಅಂಶವೇ ಎಂಬ ವಿಷಯದಲ್ಲಿ ವಿಪ್ರತಿಪತ್ತಿಯಿದೆ. ಹಿಂದಿನ ಸೂಕ್ತದಲ್ಲಿ ಆಪ್ರೀದೇವತೆಯಾದ **ತನೂನಪಾತ್** ಎಂಬ ದೇವತೆಯ ವಿಷಯವನ್ನು ವಿಮರ್ಶಿಸುತ್ತಾ ಈ ದೇವತೆಯು **ಅಗ್ನಿಯ** ರೂಪಾಂತರವೆಂದು ಹೇಳಿರುವ ಬೃಹದ್ದೇವತಾದಿಗಳನ್ನು ಉದಹರಿಸಿ ಇದೊಂದು ಪ್ರತ್ಯೇಕವಾದ ದೇವತೆಯಲ್ಲವೆಂದು ತಿಳಿಸಿದೆ. **ಋಕ್ಸಂಹಿತೆಯಲ್ಲಿಯೇ** ಇರುವ ಇನ್ನು ಕೆಲವು ಆಧಾರಗಳಿಂದ ಪ್ರಾರಂಭದ ದೆಸೆಯಲ್ಲಿ ಇದೊಂದು ಪ್ರತ್ಯೇಕವಾದ ದೇವತೆಯಂತೆ ಪರಿಗಣಿಸಲ್ಪಟ್ಟು ಅನಂತರ ಅಗ್ನಿಯೊಂದಿಗೆ ಐಕ್ಯವಾಗಿ ಅಗ್ನಿಯ ಅಂಶವೆಂದು ಪರಿಗಣಿತವಾಗಿರಬೇಕೆಂದೂ ಹೇಳಲೂ ಅವಕಾಶವಿದೆ. ನಿರುಕ್ತಕಾರರ ಮತದಂತೆ **ಅಪಾಂ ನಪಾತ್** ದೇವತೆಯೂ **ತನೂನಪಾತ್** ದೇವತೆಯೂ ಒಂದೇ ಆದುದರಿಂದ ಒಂದೇ ವಿಧವಾದ ವಿವರಣೆಯು ಎರಡು ದೇವತೆಗಳ ಸ್ವರೂಪವನ್ನೂ ತಿಳಿಸುತ್ತದೆ. ಪ್ರಕೃತದಲ್ಲಿ **ಅಪಾಂ ನಪಾತ್** ಎಂಬ ದೇವತೆಗೆ ಋಕ್ಸಂಹಿತೆಯಲ್ಲಿ ಯಾವ ಸ್ಥಾನವಿದೆಯೆಂಬುದನ್ನು ಪರಿಶೀಲಿಸಿದರೆ, ವಿಶ್ವೇದೇವತೆಗಳನ್ನುದ್ದೇಶಿಸಿರುವ ಸೂಕ್ತಗಳಲ್ಲಿ **ಅಪಾಂನಪಾತ್** ದೇವತೆಯು ಅನೇಕ ಸಲ ಉಪಾಸಿತನಾಗಿದ್ದಾನೆ ಎಂಬ ಅಂಶವು ತಿಳಿದುಬರುವುದು.

ಪ್ರ ನಃ ಪೂಷಾ ಚರಥಂ ವಿಶ್ವದೇವ್ಯೋಽಪಾಂ ನಪಾದವತು ವಾಯುರಿಷ್ಟಯೇ ।
ಆತ್ಮಾನಂ ವಸ್ಯೋ ಅಭಿ ವಾತಮರ್ಚತ ತದಶ್ವಿನಾ ಸುಹವಾ ಯಾಮನಿ ಶ್ರುತಂ ॥

(ಋ. ಸಂ. ೧೦-೯೨-೧೩)

ಎಂಬ ಋಕ್ಕಿನಲ್ಲಿ ವಿಶ್ವೇದೇವತೆಗಳೊಂದಿಗೆ **ಪೂಷನೂ** ಅನಂತರ **ಅಪಾಂನಪಾತನೂ** ಪ್ರಾರ್ಥಿತರಾಗಿದ್ದಾರೆ. ಈ ಸೂಕ್ತದ ೨ನೇ ಋಕ್ಕಿನಲ್ಲಿ (೧೦-೯೨-೨) ಅಗ್ನಿಯು ಯಜ್ಞದ ವರ್ಧಕನೆಂದು ಸ್ತುತನಾಗಿದ್ದಾನೆ. ೭ನೇ ಮಂಡಲದ ೩೫ನೇ ಸೂಕ್ತದ ೧೩ನೇ ಋಕ್ಕಿನಲ್ಲಿ **ಅಜಏಕಪಾತ್, ಅಹಿರ್ಬುಧ್ನ್ಯ, ಸಮುದ್ರ, ಅಪಾಂನಪಾತ್** ಮತ್ತು **ಪೃಶ್ನಿ** ಈ ದೇವತೆಗಳು ಒಟ್ಟಿಗೂ, **ಇಂದ್ರಾಗ್ನಿಗಳು** ಮೊದಲನೇ ಋಕ್ಕಿನಲ್ಲಿಯೂ, ನಾಲ್ಕನೇ ಋಕ್ಕಿನಲ್ಲಿ ಅಗ್ನಿಯು ಮಾತ್ರವೂ ಆಹ್ವಾನಿತರಾಗಿದ್ದಾರೆ. ಇದರ ಹಿಂದಿನ ಸೂಕ್ತದ (೭-೩೪) ೮ ಮತ್ತು ೧೪ ನೇ ಋಕ್ಕುಗಳಲ್ಲಿ ಅಗ್ನಿಯೂ, ೧೫ ನೆಯದರಲ್ಲಿ **ಅಪಾಂನಪಾತನೂ** ರಕ್ಷಕರಾಗಿಯೂ ಮಿತ್ರರಾಗಿಯೂ ಇರುವಂತೆ ಪ್ರಾರ್ಥಿಸಲ್ಪಟ್ಟಿದ್ದಾರೆ. ೬ನೇ ಮಂಡಲದ ೫೨ನೇ ಸೂಕ್ತದಲ್ಲಿ ೧೪ ನೇ ಋಕ್ಕಿನಲ್ಲಿ ಅಪಾಂನಪಾತನೊಂದಿಗೆ ಇತರ ದೇವತೆಗಳು ಆಹ್ವಾನಿತರಾಗಿದ್ದಾರೆ. ೬ ಮತ್ತು ೧೨ ನೆಯದರಲ್ಲಿ ಅಗ್ನಿಯು ಪ್ರಾರ್ಥಿತನಾಗಿದ್ದಾನೆ. ಹೀಗೆಯೇ ೨ ನೇ ಮಂಡಲದ ೩೧ ನೇ ಸೂಕ್ತದಲ್ಲೂ ೬ ನೇ ಮಂಡಲದ ೫೦ ನೇ ಸೂಕ್ತದಲ್ಲೂ **ಅಗ್ನಿಯನ್ನೂ ಅಪಾಂನಪಾತನನ್ನೂ** ಬೇರೆ ಬೇರೆ ನಿರ್ದೇಶಮಾಡಿದೆ. ಇವುಗಳಲ್ಲಿ ಯಾವ ಋಕ್ಕಿನಲ್ಲಿಯೂ ಸಹ **ಅಗ್ನಿಯೂ ಅಪಾಂನಪಾತನೂ** ಒಂದೇ ದೇವತೆಯೆಂದು ತಾದಾತ್ಮ್ಯವನ್ನು ಹೇಳುವುದಕ್ಕಾಗುವುದಿಲ್ಲ.

೨ನೇ ಮಂಡಲದ ೩೫ನೇ ಸೂಕ್ತವು ಕೇವಲ **ಅಪಾಂನಪಾದ್ದೇವತಾಕವೇ** ಆಗಿದೆ. ೧೫ ನೇ ಋಕ್ಕಿನಲ್ಲಿ ಮಾತ್ರ **ಅಗ್ನಿಯನ್ನು** ಉದ್ದೇಶಿಸಿದೆಯೇ ಹೊರತು ಉಳಿದ ಋಕ್ಕುಗಳಲ್ಲಿ ಕೊನೆಯವರೆಗೆ ಅಗ್ನಿಯ ಹೆಸರೇ ಇಲ್ಲ. ಆದರೂ ಸಹ ಅಗ್ನಿಪರವಾಗಿ ಅರ್ಥಮಾಡಬಹುದಾದರೆ ೧೧ ಮತ್ತು ೧೨ ನೇ ಋಕ್ಕುಗಳು ಮಾತ್ರವಾಗಿವೆ; ಆದರೆ ಅಲ್ಲಿಯ ವರ್ಣನೆಯೂ ಸಹ ಸಾಕ್ಷಾದಗ್ನಿಗನ್ವಯಿಸುವುದಿಲ್ಲ. ಈ ಉದಾಹರಣೆಗಳನ್ನು ತೆಗೆದುಕೊಂಡು Bloomfield ಎಂಬ ಪಂಡಿತನು ಈ ರೀತಿ ತನ್ನ ಅಭಿಪ್ರಾಯವನ್ನು ಕೊಟ್ಟಿರುತ್ತಾನೆ.

"While Agni became more and more conspicuous, Apam Napat seems to have waned in popularity, until he was so for forgotten that a confusion arose concerning the two uses of the expression (ಅಪಾಃ ನಪಾತ್)and Apam Napat, "the son of the waters" was swallowed up in Agni, a 'son of the waters as he was occasionally (twice in the Rik) called, since he too, because of his original lightning nature, was supposed to have been born of the rain—clouds. To the same source is to be traced the myth of his hiding in the waters, for this myth probably had no connection originally with Apam Napat, beyond the mere fact that both he and Agni were forms of lightning which, appearing when the thunderstorm was at its height, seemed to disappear in the clouds from which they came.

The conclusion seems to be warranted, therefore, that Agni and Apam Napat were once distinct Gods—Gods, of the lightning, who were, however, associated with each other and

were much alike in certain particulars, and that this association, and resemblance ultimately resulted, possibly at the close of the Vedic Period, in a confusion and Union of the two, as a result of which Apam Napat was absorbed by Agni."

( Journal of American Orintal Society. Vol. XIX. (2) p. 144. )

**ತವ್ಯಸೀಂ—ತವೀಯಸೀಂ ಅತಿಶಯೇನ ವರ್ಧಯಿತ್ರೀಂ । ತವತಿರ್ವೃದ್ಧ್ಯರ್ಥಃ ।** ವೀರ್ಯದಾಯಕವೆಂದಾಗಲಿ, ವೃದ್ಧಿಕಾರಕವೆಂದಾಗಲಿ ಅರ್ಥವಾಗಿ **ಧೀತಿಂ, ಮತಿಂ** ಎಂಬುದಕ್ಕೆ ವಿಶೇಷಣವಾಗಿದೆ.

**ಸ ಶೇವೃಧಮಧಿ ಧಾ ದ್ಯುಮ್ನಮಸ್ಮೇ ಮಹಿ ಕ್ಷತ್ರಂ ಜನಾಷಾಳಿಂದ್ರ ತವ್ಯಂ ।**
**ರಕ್ಷಾ ಚ ನೋ ಮಘೋನಃ ಪಾಹಿ ಸೂರೀನ್ರಾಯೇ ಚ ನಃ ಸ್ವಪತ್ಯಾ ಇಷೇ ಧಾಃ ॥**

(ಋ. ಸಂ. ೧-೫೪-೧೧)

ಎಂಬ ಋಕ್ಕಿನಲ್ಲಿ ತವ್ಯಂ ಕ್ಷತ್ರಂ । ಪ್ರವೃದ್ಧಂ ಬಲಂ । ಪ್ರವೃದ್ಧ ಮತ್ತು ಶಕ್ತಿಯುತ ಎಂಬ ಎರಡರ್ಥವನ್ನು ಸೂಚಿಸುತ್ತದೆ.

**ಧೀತಿಂ—ಯಾಗಕ್ಷಲಣಾಂ ಉಕ್ತಗುಣಕಂ ಕರ್ಮ ।** ಉಕ್ತವಾದುದೂ ಯಾಗರೂಪವಾದುದೂ ಆದ ಕರ್ಮವನ್ನು ಎಂದು ಇಲ್ಲಿ ಅರ್ಥವಾಗುತ್ತದೆ. ಧೀತಿ ಶಬ್ದಕ್ಕೆ **ಕರ್ಮ, ಪ್ರಜ್ಞಾ** ಎಂಬ ಎರಡು ಅರ್ಥವೂ ಉಂಟು. [ನಿರುಕ್ತದಲ್ಲಿ (ನಿ. ೩-೮) ಅಂಗುಳಿ ನಾಮಗಳಲ್ಲೂ ಪಠಿತವಾಗಿದೆ] ನಿರುಕ್ತಕಾರರು, **ಕರ್ಮ, ಪ್ರಜ್ಞೆ** ಎಂಬೆರಡು ಅರ್ಥಗಳೂ ಇರತಕ್ಕ ಎರಡು ಋಕ್ಕುಗಳನ್ನು ಉದಹರಿಸಿದ್ದಾರೆ

**ಇಯಂ ಶುಷ್ಮೇಭಿರ್ಬಿಸಖಾ ಇವಾರುಜತ್ಸಾನು ಗಿರೀಣಾಂ ತವಿಷೇಭಿರೂರ್ಮಿಭಿಃ ।**
**ಪಾರಾವತಘ್ನೀಮವಸೇ ಸುವೃಕ್ತಿಭಿಃ ಸರಸ್ವತೀಮಾ ವಿವಾಸೇಮ ಧೀತಿಭಿಃ ॥**

( ಋ. ಸಂ. ೬-೬೧-೨ )

ಎಂಬ ಋಕ್ಕಿನಲ್ಲಿ ಧೀತಿಭಿಃ ಎಂದರೆ **ಕರ್ಮಭಿಃ** ಎಂದೂ,

**ಋತಸ್ಯ ಹಿ ಶುರುಧಃ ಸಂತಿ ಪೂರ್ವೀರ್ಋತಸ್ಯ ಧೀತಿರ್ವೃಜಿನಾನಿ ಹಂತಿ ।**
**ಋತಸ್ಯ ಶ್ಲೋಕೋ ಬಧಿರಾ ತತರ್ದ ಕರ್ಣಾ ಬುಧಾನಃ ಶುಚಮಾನ ಆಯೋಃ ।**

(ಋ. ಸಂ. ೪-೨೩-೮)

ಎಂಬ ಋಕ್ಕಿನಲ್ಲಿ **ಪ್ರಜ್ಞಾ** ಎಂದೂ ಅರ್ಥಮಾಡಿದ್ದಾರೆ. ಸ್ತುತಿಯೆಂಬ ಅರ್ಥದಲ್ಲೂ ಕೆಲವೆಡೆಗಳಲ್ಲಿ ಈ ಪದದ ಪ್ರಯೋಗವಿದೆ. ಪ್ರಕೃತವಾದ ಋಕ್ಕಿನಲ್ಲಿ ಯಾಗರೂಪವಾದ **ಕರ್ಮ**ವೆಂದರ್ಥ.

॥ ವ್ಯಾಕರಣಪ್ರಕ್ರಿಯಾ ॥

**ತವ್ಯಸೀಮ್**— ಸೂತ್ರಮಾತ್ರನಿರ್ದಿಷ್ಟವಾದ ತವಧಾತುವು ವೃದ್ಧ್ಯರ್ಥದಲ್ಲಿ ಪ್ರಯುಕ್ತವಾಗಿದೆ. ಇದಕ್ಕೆ **ಣ್ವುಲ್ ತೃಚೌ** (ಪಾ. ಸೂ. ೩-೧-೧೩೩) ಎಂಬುದರಿಂದ ತೃಚ್ ಪ್ರತ್ಯಯ. **ತುಶ್ಛಂದಸಿ** (ಪಾ. ಸೂ. ೫-೩-೫೯) ಎಂಬುದರಿಂದ ತೃಜಂತದ ಮೇಲೆ ಈಯಸುನ್ ಪ್ರತ್ಯಯ. **ತುರಿಷ್ಠೇಮೇಯಸ್ಸು** (ಪಾ. ಸೂ. ೬-೪-೧೫೪) ಎಂಬುದರಿಂದ ಈಯಸುನ್ ಪರವಾದಾಗ ತೃಚಿಗೆ ಲೋಪ. **ಯಸ್ಯೇತಿ ಚ** ಎಂಬುದರಿಂದ ಅಕಾರಕ್ಕೆ ಲೋಪ. ಛಾಂದಸ

ವಾಗಿ ಪ್ರತ್ಯಯದ ಈಕಾರಕ್ಕೆ ಲೋಪ. ಈಯಸುನ್ ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ನವ್ಯಸೀಮ್**— ಅತಿಶಯಾರ್ಥದಲ್ಲಿ ಈಯಸುನ್ ಬಂದಾಗ ಹಿಂದಿನಂತೆ ಅಕಾರಲೋಪ. ಹಿಂದಿನಂತೆ ಸ್ವರಬರುತ್ತದೆ.

**ಮತಿಮ್—ಮಂತ್ರೇ ವೃಷೇಷ**—(ಪಾ. ಸೂ. ೩-೩-೯೬) ಎಂಬುದರಿಂದ ಕ್ತಿನ್ ಉದಾತ್ತವಾಗುತ್ತದೆ. ದ್ವಿತೀಯಾ ಏಕವಚನಾಂತರೂಪ.

**ಭರೇ**— ಭೃಞ್ ಭರಣೇ ಧಾತು. ಲಟ್ ಉತ್ತಮಪುರುಷ ಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ಅಪಾಮ್—ಊಡಿದಂ ಪದಾದಿ**— (ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ನಪಾತ್**— ಪಾ ರಕ್ಷಣೇ ಧಾತು. ಇದಕ್ಕೆ ಶತೃಬಂದರೆ ಪಾತ್ ಎಂದು ರೂಪವಾಗುತ್ತದೆ. ಇದಕ್ಕೆ ನಞೊಡನೆ ಸಮಾಸವಾದಾಗ **ನಭ್ರಾಣ್ನಪಾತ್**— (ಪಾ. ಸೂ. ೬-೩-೭೫) ಎಂಬುದರಿಂದ ನಲೋಪಾಭಾವದೊಡನೆ ನಿಪಾತಿತವಾಗಿದೆ.

**ಪೃಥಿವ್ಯಾಮ್**—ಪೃಥಿವೀ ಶಬ್ದ ಙೀಷಂತವಾದುದರಿಂದ ಅಂತೋದಾತ್ತ ವಿಭಕ್ತಿಪರವಾದಾಗ ಅದಕ್ಕೆ ಯಣಾದೇಶ ಬಂದು ಅದರ ಪರದಲ್ಲಿ ವಿಭಕ್ತಿ ಅನುದಾತ್ತ ಬಂದುದರಿಂದ **ಉದಾತ್ತಯಣೋ**— (ಪಾ. ಸೂ. ೬-೧-೧೭೪) ಎಂಬುದರಿಂದ ಅದಕ್ಕೆ ಉದಾತ್ತಸ್ವರ ಬರುತ್ತದೆ.

**ಅಸೀದತ್**— ಷದ್ಲೃ ವಿಶರಣಗತ್ಯವಸಾದನೇಷು ಧಾತು. **ಛಂದಸಿ ಲುಙ್ಲಙ್ಲಿಟಃ**— (ಪಾ. ಸೂ. ೩-೪-೬) ಎಂಬುದರಿಂದ ವರ್ತಮಾನಾರ್ಥದಲ್ಲಿ ಲಙ್ ಬರುತ್ತದೆ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. ಇತಶ್ಚ ಎಂಬುದರಿಂದ ಇಕಾರಲೋಪ. ಶಪ್ ವಿಕರಣ. **ಪಾಘ್ರಾಧ್ಮಾ**— (ಪಾ. ಸೂ. ೭-೩-೭೮) ಎಂಬುದರಿಂದ ಧಾತುವಿಗೆ ಸೀದಾದೇಶ. ಯಃ ಎಂದು ಯಚ್ಛಬ್ದಸಂಬಂಧವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ.

**ಋತ್ವಿಯಃ**— ಋತು ಶಬ್ದ. **ಯಜ್ಞರ್ತ್ವಿಗ್ಭ್ಯಾಂಘಖಞೌ** (ಪಾ. ಸೂ. ೫-೧-೭೧) ಎಂಬುದರಿಂದ ಘ ಪ್ರತ್ಯಯ. **ಆಯನೇಯೀ**—(ಪಾ. ಸೂ. ೭-೧-೨) ಎಂಬುದರಿಂದ ಅದಕ್ಕೆ ಇಯಾದೇಶ. ಯಣಾದೇಶ ಪ್ರತ್ಯಯದ ಆದ್ಯುದಾತ್ತಸ್ವರದಿಂದ ಇಕಾರ ಉದಾತ್ತವಾಗುತ್ತದೆ. ॥ ೧ ॥

ಸಂಹಿತಾಪಾಠಃ

ಸ ಜಾಯಮಾನಃ ಪರಮೇ ವ್ಯೋಮನ್ಯಾವಿರಗ್ನಿರಭವನ್ಮಾತರಿಶ್ವನೇ ।
ಅಸ್ಯ ಕ್ರತ್ವಾ ಸಮಿಧಾನಸ್ಯ ಮಜ್ಮನಾ ಪ್ರ ದ್ಯಾವಾ ಶೋಚಿಃ ಪೃಥಿವೀ
ಅರೋಚಯತ್ ॥ ೨ ॥

ಪದಪಾಠಃ

ಸಃ । ಜಾಯಮಾನಃ । ಪರಮೇ । ವಿಽಓಮನಿ । ಆವಿಃ । ಅಗ್ನಿಃ । ಅಭವತ್ । ಮಾತರಿಶ್ವನೇ ।
ಅಸ್ಯ । ಕ್ರತ್ವಾ । ಸಂಽಇಧಾನಸ್ಯ । ಮಜ್ಮನಾ । ಪ್ರ । ದ್ಯಾವಾ । ಶೋಚಿಃ । ಪೃಥಿವೀ ಇತಿ ।
ಅರೋಚಯತ್ ॥ ೨ ॥

॥ ಸಾಯಣಭಾಷ್ಯಂ ॥

ಸ ಪೂರ್ವೋಕ್ತೋಽಗ್ನಿರ್ಜಾಯಮಾನೋಽರಣೀಭ್ಯಾಮುತ್ಪದ್ಯಮಾನಃ ಕಾಷ್ಠೇಷು ವಾ ಪ್ರಾದುರ್ಭೂತಃ ಸನ್ ತದಾನೀಮೇವ ಪರಮ ಉತ್ಕೃಷ್ಟೇ ವ್ಯೋಮನಿ ವಿವಿಧರಕ್ಷಣವತಿ ವೇದಿದೇಶೇ ಮಾತರಿಶ್ವನೇಽಂತರಿಕ್ಷಸಂಚಾರಿಣೇ ವಾಯವೇ ಪ್ರಥಮಮಾವಿರಭವತ್ । ಪ್ರತ್ಯಕ್ಷೋಽಭೂತ್ । ತ್ವಮಗ್ನೇ ಪ್ರಥಮೋ ಮಾತರಿಶ್ವನ ಆವಿರ್ಭವ । ಋ. ೧-೩೧-೩। ಇತ್ಯಾದಿಶ್ರುತ್ಯಂತರಪ್ರಸಿದ್ಧೇಃ । ವಾಯುಸಂಯೋಗಾತ್ಪ್ರಜ್ವಲಿತ ಇತ್ಯರ್ಥಃ । ಅಥವಾ ಮಾತರಿ ಫಲಸ್ಯ ನಿರ್ಮಾತರಿ ಯಜ್ಞೇ ಶ್ವಸಿತಿ ಚೇಷ್ಟತ ಇತಿ ಮಾತರಿಶ್ವಾ ಯಜಮಾನಃ । ತದರ್ಥಂ । ಕಿಂಚ ಸಮಿಧಾನಸ್ಯೇಂಧನೈಃ ಸಮ್ಯಗ್ವರ್ಧಮಾನಸ್ಯಾಗ್ನೇರ್ಮಜ್ಮನಾ । ಬಲನಾಮೈತತ್ । ಬಲವತಾ ಕ್ರತ್ವಾ ಕ್ರತುನಾ ಕರ್ಮಣಾ ಜ್ವಾಲನಾದಿವ್ಯಾಪಾರೇಣ ಶೋಚಿರ್ದ್ಯಾವಾ ಪೃಥಿವೀ ದ್ಯಾಂ ಚ ಪೃಥಿವೀಂ ಚ ಪ್ರಾರೋಚಯತ್ । ಪ್ರಕರ್ಷೇಣಾದೀಪಯತ್ ॥ ಮಧ್ಯೇ ಶೋಚಿಃಶಬ್ದಶ್ಛಾಂದಸಃ ॥ ಮಜ್ಮನಾ ಕ್ರತ್ವಾ ಸಮಿಧಾನಸ್ಯೇತಿ ವಾ ಯೋಜ್ಯಂ । ಪ್ರಬಲೇನ ಸಮಿಂಧನಾದಿವ್ಯಾಪಾರೇಣ ಸಮಿಧ್ಯಮಾನಸ್ಯೇತ್ಯರ್ಥಃ ॥

ಪ್ರತಿಪದಾರ್ಥ

ಸಃ—ಹಿಂದೆ ವರ್ಣಿತನಾದ । ಅಗ್ನಿಃ—ಅಗ್ನಿಯು । ಜಾಯಮಾನಃ—ಉತ್ಪನ್ನನಾಮೊಡನೆಯೇ, ಪರಮೇ—ಉತ್ಕೃಷ್ಟವಾದ । ವ್ಯೋಮನಿ—ಅಂತರಿಕ್ಷದಲ್ಲಿ । ಮಾತರಿಶ್ವನೇ—ವಾಯುವಿಗೆ ಎದುರಾಗಿ । ಆವಿಃ ಅಭವತ್—ಪ್ರತ್ಯಕ್ಷನಾದನು । [ಅಥವಾ ವ್ಯೋಮನಿ—ವೇದಿಕೆಯಲ್ಲಿ । ಮಾತರಿಶ್ವನೇ—ಯಜಮಾನನಿಗೆ ಎದುರಾಗಿ । ಆವಿಃ ಅಭವತ್—ಪ್ರತ್ಯಕ್ಷನಾದನು । ] (ಮತ್ತು) ಮಜ್ಮನಾ—ಶಕ್ತಿಯುತವಾದ । ಕ್ರತ್ವಾ—ಜ್ವಾಲನಾದಿ ಕಾರ್ಯದಿಂದ । ಸಮಿಧಾನಸ್ಯ ಅಸ್ಯ—ಇಂಧನಗಳಿಂದ ಪ್ರಜ್ವಲಿತನಾದ ಅಗ್ನಿಯ । ಕ್ರತ್ವಾ—ಜ್ವಾಲನಾದಿಕಾರ್ಯದಿಂದ । ದ್ಯಾವಾ—ದ್ಯುಲೋಕವನ್ನೂ । ಪೃಥಿವೀ—ಪೃಥಿವಿಯನ್ನೂ । ಪ್ರ ಅರೋಚಯತ್—ಬೆಳಗಿಸಿತು ।

### ಭಾವಾರ್ಥ

ಅಗ್ನಿಯು ಉತ್ಪನ್ನನಾದೊಡನೆಯೇ ಉತ್ಕೃಷ್ಟವಾದ ಅಂತರಿಕ್ಷದಲ್ಲಿ ವಾಯುವಿಗೆ ಎದುರಾಗಿ ಪ್ರತ್ಯಕ್ಷನಾದನು. ಇಂಧನಗಳಿಂದ ಪ್ರಜ್ವಲಿತನಾದ ಅಗ್ನಿಯ ತೇಜಸ್ಸು ಶಕ್ತಿಯುತವಾದ ಜ್ವಾಲನಾದಿವ್ಯಾಪಾರಗಳಿಂದ ದ್ಯುಲೋಕವನ್ನೂ ಮತ್ತು ಪೃಥಿವಿಯನ್ನೂ ಬೆಳಗಿಸಿತು.

## English Translation

As soon as born, was that (Agni) manifested to Matarishwan in the highest atmosphere, and his radiance, kindled by vigorous effort, spread through heaven and earth.

### ವಿಶೇಷ ವಿಷಯಗಳು

ಈ ಋಕ್ಕಿನಲ್ಲಿ ಅಗ್ನಿಯು ಉತ್ಪನ್ನನಾದೊಡನೆಯೇ **ವ್ಯೋಮದಲ್ಲಿ ಮಾತರಿಶ್ವನೆದುರಿಗೆ** ಆವಿರ್ಭೂತನಾದುದೂ, ಅನಂತರ ಪ್ರಜ್ವಲಿತನಾದ ಇವನ ತೇಜಸ್ಸು ದ್ಯಾವಾಪೃಥಿವಿಗಳನ್ನು ಬೆಳಗಿದುದೂ ವರ್ಣಿತವಾಗಿದೆ.

ಇಲ್ಲಿ ಪೂರ್ವಾರ್ಧಕ್ಕೆ ಎರಡು ವಿಧವಾದ ಅನ್ವಯಗಳು ಸಾಧ್ಯವಾಗುತ್ತವೆ ಮೊದಲನೆಯದಾಗಿ **ವ್ಯೋಮನಿ**—ಅಂತರಿಕ್ಷದಲ್ಲಿ, **ಮಾತರಿಶ್ವನೇ**—ಮಾತರಿಶ್ವನೆದುರಿಗೆ **ಆವಿರಭವತ್** ಎಂದೂ, ಎರಡನೆಯದಾಗಿ **ವ್ಯೋಮನಿ**—ಯಜ್ಞವೇದಿಕೆಯಲ್ಲಿ, **ಮಾತರಿಶ್ವನೇ**—ಯಜಮಾನನಿಗೆ ಎದುರಾಗಿ, **ಆವಿರಭವತ್** ಎಂದೂ ಅರ್ಥಮಾಡಬೇಕು.

(೧) ವ್ಯೋಮದಲ್ಲಿ ಅಗ್ನಿಯು ಮಾತರಿಶ್ವನಿಗೆ ಪ್ರತ್ಯಕ್ಷನಾದುದು ಪ್ರಸಿದ್ಧವಾಗಿದೆ. **ವ್ಯೋಮ**ಶಬ್ದವು **ಅಂತರಿಕ್ಷನಾಮಗಳಲ್ಲಿ** ಪಠಿತವಾಗಿದೆ. (ನಿ. ೨-೧೦) **ವ್ಯಾಪಿಸು, ಅಚ್ಛಾದಿಸು** ಎಂಬರ್ಥವುಳ್ಳ **ವ್ಯೇಞ್** ಧಾತುವಿನಿಂದ ನಿಷ್ಪನ್ನವಾಗಿದೆ. ವ್ಯಾಪಕವಾದ ಅಂತರಿಕ್ಷವೆಂದರ್ಥ.

> **ತ್ವಮಗ್ನೇ ಪ್ರಥಮೋ ಮಾತರಿಶ್ವನ ಆವಿರ್ಭವ ಸುಕ್ರತೂ ಯಾ ವಿವಸ್ವತೇ ।**
> **ಅರೇಜೇತಾಂ ರೋದಸೀ ಹೋತೃವೂರ್ಯೇಽಸಘ್ನೋರ್ಭಾರಮಯಜೋ ಮಹೋ ವಸೋ ॥**
> (ಋ. ಸಂ. ೧-೩೧-೩)

ಇತ್ಯಾದಿ ಋಕ್ಕುಗಳಲ್ಲಿ ಅಗ್ನಿಯ ಆವಿರ್ಭಾವವು ವಿದ್ಯುದ್ರೂಪದಲ್ಲಿ ಮೊದಲು ವಾಯುವಿಗಾಯಿತೆಂದು ಹೇಳಿರುವುದು ಪ್ರಸಿದ್ಧವಾಗಿದೆ. ಅಲ್ಲದೆ,

> **ವಹ್ನಿಂ ಯಶಸಂ ವಿದಥಸ್ಯ ಕೇತುಂ ಸುಪ್ರಾವ್ಯಂ ದೂತಂ ಸದ್ಯೋಅರ್ಥಂ ।**
> **ದ್ವಿಜನ್ಮಾನಂ ರಯಿಮಿವ ಪ್ರಶಸ್ತಂ ರಾತಿಂ ಭರದ್ಭೃಗವೇ ಮಾತರಿಶ್ವಾ ॥**
> (ಋ. ಸಂ. ೧-೬೦-೧)

ಇತ್ಯಾದಿ ಋಕ್ಕುಗಳಲ್ಲಿ ಮಾತರಿಶ್ವನು ಯಜ್ಞಕರ್ತರಾದ ಭೃಗು ಮತ್ತು ಮನು ಇವರ ಪ್ರಯೋಜನಕ್ಕಾಗಿ ದೂರದೇಶದಲ್ಲಿ ಗುಪ್ತವಾಗಿದ್ದ ಅಗ್ನಿಯನ್ನು ಪೃಥ್ವಿಗೆ ಕರೆತಂದು ಪೃಥ್ವಿಯಲ್ಲಿ ಎಲ್ಲಾ ಪ್ರಜೆಗಳಿಗೂ ಉಪಕಾರ

ಮಾಡಿರುವೂ ಅನೇಕ ಕಡೆಗಳಲ್ಲಿ ಹೇಳಿದೆ. ಆದುದರಿಂದ ಮೊದಲನೆಯ ಅರ್ಥವನ್ನು ಹೇಳುವುದಕ್ಕೆ ಸರಿಯಾದ ಆಧಾರಗಳಿವೆ.

(೨) ಎರಡನೆಯ ಅರ್ಥವನ್ನು ಹೇಳುವುದರಲ್ಲಿ ಯಾವ ಔಚಿತ್ಯವಿದೆ, ಅದಕ್ಕೆ ಸರಿಯಾದ ಆಧಾರಗಳ ಸಮರ್ಥನೆಯಿದೆಯೇ ಎಂಬುದನ್ನೂ ಪರಿಶೀಲಿಸಿದರೆ ;

ವ್ಯೋಮನಿ—ಈ ಸಂದರ್ಭದಲ್ಲಿ ವ್ಯೋಮನಿ ಎಂಬ ಪದಕ್ಕೆ **ವೇದಿದೇಶೇ** ಎಂದರ್ಥಮಾಡಿದ್ದಾರೆ. ಇಲ್ಲಿ **ರಕ್ಷಣಾರ್ಥಕವಾದ ಅವ** ಧಾತುವಿಗೆ ವಿ ಎಂಬ ಉಪಸರ್ಗವು ಸೇರಿ ಈ ರೂಪವು ನಿಷ್ಪನ್ನವಾಗಿದೆ. **ವಿವಿಧರಕ್ಷಣ-ವತಿ ವೇದಿದೇಶೇ** । ನಾನಾವಿಧವಾದ ರಕ್ಷಣೆಗಳಿಂದ ಕೂಡಿದ ವೇದಿಪ್ರದೇಶವೆಂದು ಈ ಶಬ್ದಕ್ಕೆ ನಿರ್ವಚನವನ್ನು ತೋರಿಸಿದ್ದಾರೆ. ಇದೇ ಅರ್ಥದಲ್ಲಿ ಈ ಪದದ ಪ್ರಯೋಗವು ಋಕ್ಸಂಹಿತೆಯಲ್ಲಿ ಅನೇಕ ಕಡೆ ಇರುವುದು. ಉದಾಹರಣೆಗೆ—

**ಇಯಂ ವೇದಿಃ ಪರೋ ಅಂತಃ ಪೃಥಿವ್ಯಾ ಅಯಂ ಯಜ್ಞೋ ಭುವನಸ್ಯ ನಾಭಿಃ ।**
**ಅಯಂ ಸೋಮೋ ವೃಷ್ಣೋ ಅಶ್ವಸ್ಯ ರೇತೋ ಬ್ರಹ್ಮಾಯಂ ವಾಚಃ ಪರಮಂ ವ್ಯೋಮ ।**
(ಋ. ಸಂ. ೧-೧೬೪-೩೫)

ಎಂಬ ಋಕ್ಕಿನಲ್ಲಿ ವ್ಯೋಮಶಬ್ದಕ್ಕೆ **ಉತ್ಕೃಷ್ಟಂ ರಕ್ಷಕಂ ಸ್ಥಾನಂ** ಎಂಬರ್ಥವನ್ನೂ,

**ಋತೇನ ಋತಂ ಧರುಣಂ ಧಾರಯಂತ ಯಜ್ಞಸ್ಯ ಶೋಕೇ ಪರಮೇ ವ್ಯೋಮನ್ ।**
**ದಿವೋ ಧರ್ಮನ್ ಧರುಣೇ ಸೇದುಷೋ ನೄಂಜಾತೈರಜಾತಾಁ ಅಭಿ ಯೇ ನನಕ್ಷುಃ ॥**
(ಋ. ಸಂ. ೫-೧೫-೨)

ಎಂಬ ಋಕ್ಕಿನಲ್ಲಿ **ಉತ್ಕೃಷ್ಟೇ ಸ್ಥಾನೇ ಉತ್ತರವೇದ್ಯಾಂ ।** ಉತ್ಕೃಷ್ಟವಾದ **ಉತ್ತರವೇದಿಯಲ್ಲಿ** ಎಂದೂ ಅರ್ಥ ಮಾಡಿದ್ದಾರೆ. ಅದರಂತೆ ಪ್ರಕೃತವಾದ ಋಕ್ಕಿನಲ್ಲಿಯೂ **ವ್ಯೋಮ** ಶಬ್ದಕ್ಕೆ **ವೇದಿ**ಯೆಂದು ಅರ್ಥಮಾಡಿದರೆ ಆಗ **ಮಾತರಿಶ್ವ ಶಬ್ದಕ್ಕೆ ಮಾತರಿ ಫಲಸ್ಯ ನಿರ್ಮಾತರಿ ಯಜ್ಞೇ ಶ್ವಸಿತಿ ಚೇಷ್ಟತೇ ಇತಿ ಮಾತರಿಶ್ವಾ ಯಜಮಾನಃ।** ಸಕಲ ವಿಧವಾದ ಫಲಕ್ಕೂ ಉತ್ಪತ್ತಿಸ್ಥಾನವಾದ ಯಜ್ಞದಲ್ಲಿ ವ್ಯವಹರಿಸುತ್ತಾನಾದ್ದರಿಂದ ಮಾತರಿಶ್ವಾ ಎಂದರೆ ಯಜಮಾನನೆಂದರ್ಥವಾಗುತ್ತದೆ. ಆದುದರಿಂದ ಪ್ರಜ್ವಲಿತನಾದೊಡನೆಯೇ ಅಗ್ನಿಯು ವೇದಿಕೆಯಲ್ಲಿ ಯಜಮಾನನಿಗೆ ಅಭಿಮುಖವಾಗಿ ಆವಿರ್ಭವಿಸಿದನೆಂದು ಅರ್ಥಮಾಡಬಹುದು.

**ವ್ಯೋಮಸದಿತ್ಯೇಷ ವೈ ವ್ಯೋಮಸದ್ವ್ಯೋಮ ವಾ ಏತತ್ಸದ್ಮನಾಂ ಯಸ್ಮಿನ್ನೇಷ ಆಸನ್ನಸ್ತಪತಿ ।**
(ಐ ಬ್ರಾ. ೧೮-೨೦)

ಎಂಬ ಬ್ರಾಹ್ಮಣವಾಕ್ಯವೂ ಈ ಅರ್ಥವನ್ನು ಸಮರ್ಥಿಸುತ್ತದೆ.

ಮೊದಲನೆಯ ಅನ್ವಯದಂತೆ **ಮಾತರಿಶ್ವ**ಶಬ್ದಕ್ಕೆ ವಾಯುವೆಂದರ್ಥವಾದರೆ, **ಅಗ್ನಿಗೂ** ಈ **ಮಾತರಿಶ್ವ**ನಿಗೂ ಇರತಕ್ಕ ಸಂಬಂಧವೇನೆಂಬುದನ್ನು ವಿಮರ್ಶಿಸಬೇಕು. **ಅಗ್ನಿಯು** ಇವನ ಅಭಿಮುಖವಾಗಿ ಆವಿರ್ಭವಿಸಿದನೆಂದರೆ, ಇಬ್ಬರೂ ಬೇರೆ ಬೇರೆ ವ್ಯಕ್ತಿಗಳೆಂದು ಅರ್ಥವಾಗುತ್ತದೆ. ಆದರೆ ಇಲ್ಲಿ ಉಕ್ತವಾಗಿರುವ ಇತಿಹಾಸವನ್ನೇ ಕೊಂಚ ಸೂಕ್ಷ್ಮವಾಗಿ ಪರಿಶೀಲಿಸಿದರೆ, ಇಬ್ಬರಿಗೂ ತಾದಾತ್ಮ್ಯವಿರುವುದಾಗಿಯೂ ಕೆಲವು ಆಧಾರಗಳಿಂದ ತಿಳಿಯುತ್ತದೆ.

ಉದು ಷ್ಟುತಃ ಸಮಿಧಾ ಯಹ್ವೋ ಅದ್ಯೌದ್ವರ್ಷ್ಮನ್ದಿವೋ ಅಧಿ ನಾಭಾ ಪೃಥಿವ್ಯಾಃ ।
ಮಿತ್ರೋ ಅಗ್ನಿರೀಡ್ಯೋ ಮಾತರಿಶ್ವಾದೂತೋ ವಕ್ಷದ್ಯಜಥಾಯ ದೇವಾನ್ ।
(ಋ. ಸಂ. ೩-೫-೯)

ಎಂಬ ಋಕ್ಕಿನಲ್ಲಿ ಮಾತರಿಶ್ವಾ ಎಂಬ ಪದಕ್ಕೆ ಸಾಯಣರು **ಮಾತರ್ಯಂತರಿಕ್ಷೇ ಶ್ವಸಿತಿ ಪ್ರಾಣಿತಿ ಸೂರ್ಯರೂಪೇಣ ಚೇಷ್ಟತ ಇತಿ ಮಾತರಿಶ್ವಾ ಅಥವಾ ಮಾತರ್ಯರಣ್ಯಾಂ ಶ್ವಸಿತಿ ನಿವಸತೀತಿ ಮಾತರಿಶ್ವಾ** । ಸೂರ್ಯರೂಪದಿಂದ ಅಂತರಿಕ್ಷದಲ್ಲಿ, ಸಂಚರಿಸುವುದರಿಂದಾಗಲಿ ಅಥವಾ ಮಾತೃರೂಪವಾದ ಅರಣಿಗಳಲ್ಲಿರುವುದರಿಂದಾಗಲಿ ಅಗ್ನಿಗೆ ಈ ಹೆಸರೆಂದು ಹೇಳಿದ್ದಾರೆ. ನಿರುಕ್ತಕಾರರೂ ಸಹ ಇದೇ ನಿರ್ವಚನವನ್ನು ತೋರಿಸಿ ಅಗ್ನಿಯೆಂದರ್ಥಮಾಡಿದ್ದಾರೆ ಎಂಬುದಾಗಿ ಸಾಯಣರು ತಮ್ಮ ನಿರ್ವಚನಕ್ಕೆ ಆಧಾರವನ್ನು ತೋರಿಸಿದ್ದಾರೆ. ಇದರಂತೆಯೇ,

**ತಂ ಶುಭ್ರಮಗ್ನಿಮವಸೇ ಹವಾಮಹೇ ವೈಶ್ವಾನರಂ ಮಾತರಿಶ್ವಾನಮುಕ್ಥ್ಯಂ ।**
**ಬೃಹಸ್ಪತಿಂ ಮನುಷೋ ದೇವತಾತಯೇ ವಿಪ್ರಂ ಶ್ರೋತಾರಮತಿಥಿಂ ರಘುಷ್ಯದಂ ॥**

(ಋ. ಸಂ. ೩–೨೬–೨)

ಎಂಬ ಋಕ್ಕಿನಲ್ಲಿಯೂ, **ಸ ಮಾತರಿಶ್ವಾ ಪುರುವಾರಪುಷ್ಟಿಃ** । ಎಂದು ಋ. ಸಂ. ೧–೯೬–೪ ನೇ ಋಕ್ಕಿನಲ್ಲಿಯೂ ಸಹ **ಅಗ್ನಿಗೂ ಮಾತರಿಶ್ವನಿಗೂ** ತಾದಾತ್ಮ್ಯವನ್ನು ಹೇಳಿದೆ. ಮತ್ತು ಪ್ರಕೃತವಾದ (೧–೧೪೩–೨) ಋಕ್ಕಿನಲ್ಲಿ ಹೇಳಿರುವಂತೆ,

**ಉದಸ್ತಂಭೀತ್ಸಮಿಧಾ ನಾಕಮೃಷ್ವೋಽಗ್ನಿರ್ಭವನ್ನುತ್ತಮೋ ರೋಚನಾನಾಂ ।**
**ಯದೀ ಭೃಗುಭ್ಯಃ ಪರಿ ಮಾತರಿಶ್ವಾ ಗುಹಾ ಸಂತಂ ಹವ್ಯವಾಹಂ ಸಮೀಧೇ ॥**

(ಋ. ಸಂ. ೩–೫–೧೦)

ಎಂಬ ಋಕ್ಕಿನಲ್ಲಿ ಇಬ್ಬರೂ ಬೇರೆಬೇರೆಯೆಂದು ಹೇಳಿರುವುದು ವಿಶದವಾಗಿದೆ. [ಆದರೆ ಇದು ಮೇಲೆ **ಅಗ್ನಿಮಾತರಿಶ್ವರಿಗೆ** ತಾದಾತ್ಮ್ಯವನ್ನು ಹೇಳುವ ಅಥವಾ **ಮಾತರಿಶ್ವಾ** ಎಂಬ ಪದವು ಅಗ್ನಿಗೆ ವಿಶೇಷಣವಾಗಿದೆಯೆಂದು ಹೇಳುವ ೩-೫-೯ನೇ ಋಕ್ಕಿನ ವಾಕ್ಯವೇ ಆಗಿದೆ.]

**ಮಾತರಿಶ್ವನ** ಇತರ ಗುಣಗಳನ್ನೂ, ಪ್ರಭಾವವನ್ನೂ ಮುಂದೆ ಅದಕ್ಕೆ ಉಚಿತವಾದ ಸಂದರ್ಭಗಳಲ್ಲಿ ತಿಳಿಸಲಾಗುವುದು.

### ವ್ಯಾಕರಣಪ್ರಕ್ರಿಯಾ

**ಜಾಯಮಾನಃ**— ಜನೀ ಪ್ರಾದುರ್ಭಾವೇ ಧಾತು- ಲಡರ್ಥದಲ್ಲಿ ಶಾನಚ್ ಪ್ರತ್ಯಯ. ಶ್ಯನ್ ವಿಕರಣ **ಜ್ಞಾಜನೋರ್ಜಾ**—(ಪಾ.ಸೂ. ೭-೩-೭೯) ಎಂಬುದರಿಂದ ಜಾದೇಶ. **ಆನೇ ಮುಕ್**(ಪಾ.ಸೂ. ೭-೨-೮೨) ಸೂತ್ರದಿಂದ ಅದಂತಕ್ಕೆ ಮುಕಾಗಮ. ಅದುಪದೇಶದ ಪರದಲ್ಲಿ ಲಸಾರ್ವಧಾತುಕ ಬಂದುದರಿಂದ **ತಾಸ್ಯನುದಾತ್ತೇತ್** (ಪಾ. ಸೂ. ೬-೧-೧೮೬) ಎಂಬುದರಿಂದ ಅದು ಅನುದಾತ್ತವಾಗುತ್ತದೆ. ಶ್ಯನ್ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಮಾತರಿಶ್ವನೇ**—ಮಾತರಿ ಶ್ವಯತೀತಿ ಮಾತರಿಶ್ವಾ. **ಶ್ವನ್ನುಕ್ಷನ್** (ಉ. ಸೂ. ೧–೧೫೬) ಎಂಬುದರಿಂದ ಕನಿ ಪ್ರತ್ಯಯಾಂತವಾಗಿ ನಿಪಾತಿತವಾಗಿದೆ. ಚತುರ್ಥೀ ಏಕವಚನಾಂತರೂಪ. ಪ್ರತ್ಯಯಸ್ವರದಿಂದ ಇಕಾರ ಉದಾತ್ತವಾಗುತ್ತದೆ.

**ಕ್ರತ್ವಾ**–ಕ್ರತು+ಆ ಎಂದಿರುವಾಗ **ಜಸಾದಿಷು ಛಂದಸಿ ವಾಚನಮ್** ಎಂಬ ವಚನದಿಂದ ನಾಭಾವ ಬರುವುದಿಲ್ಲ ಯಣಾದೇಶ.

**ಸಮಿಧಾನಸ್ಯ**—ಞಿಇಂಧೀ ದಿಪ್ತೌ ಧಾತು, ಲಡರ್ಥದಲ್ಲಿ ಶಾನಚ್ ಪ್ರತ್ಯಯ. **ಬಹುಲಂಛಂದಸಿ** ಎಂಬುದರಿಂದ ವಿಕರಣಕ್ಕೆ ಲುಕ್. ಪ್ರತ್ಯಯಕ್ಕೆ ಙಿತ್ವವಿರುವುದರಿಂದ **ಅನಿದಿತಾಂ** ಎಂಬುದರಿಂದ ಉಪಧಾನಕಾರ ಲೋಪ. ಶಾನಚ್ ಚಿತ್ತಾದುದರಿಂದ **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ಷಷ್ಠ್ಯೇಕವಚನಾಂತರೂಪ.

**ಮಜ್ಮನಾ**—ಟುಮಸ್ಜೋ ಶುದ್ಧೌ ಧಾತು. ಇದಕ್ಕೆ ಔಣಾದಿಕವಾದ ಮನಿ ಪ್ರತ್ಯಯ ಪ್ರತ್ಯಯಸ್ವರದಿಂದ ಮಧ್ಯೋದಾತ್ತವಾಗುತ್ತದೆ.

**ದ್ಯಾವಾಪೃಥಿವೀ**—ದ್ಯೌಶ್ಚ ಪೃಥಿವೀ ಚ ದ್ಯಾವಾಪೃಥಿವ್ಯೌ **ದಿವೋದ್ಯಾವಾ** (ಪಾ. ಸೂ. ೬-೩-೨೯) ಎಂಬುದರಿಂದ ಪೂರ್ವಪದಕ್ಕೆ ದ್ಯಾವಾದೇಶ ಛಾಂದಸವಾಗಿ ಮಧ್ಯದಲ್ಲಿ ಶೋಚಿಃ ಎಂಬ ಶಬ್ದ ಬಂದಿದೆ. **ಸುಪಾಂ ಸುಲುಕ್** (ಪಾ. ಸೂ. ೭-೩-೩೯) ಎಂಬುದರಿಂದ ದ್ವಿತೀಯಾ ವಿಭಕ್ತಿಗೆ ಪೂರ್ವಸವರ್ಣದೀರ್ಘ ಬರುತ್ತದೆ.

**ಅರೋಚಯತ್**— ರುಚ ದೀಪ್ತೌ ಧಾತು. **ಹೇತುಮತಿ ಚ** (ಪಾ. ಸೂ. ೬-೧-೩೯) ಎಂಬುದರಿಂದ ಪ್ರಯೋಜಕವ್ಯಾಪಾರ ತೋರುವಾಗ ಣಿಚ್. **ಪುಗಂತಲಘೂಪಧಸ್ಯ ಚ** ಎಂಬುದರಿಂದ ಲಘೂಪಧ ಗುಣ. ಲಙ್ ಪ್ರಥಮಪುರುಷ ಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ. ॥ ೨ ॥

———— :O: ————

ಸಂಹಿತಾಪಾಠಃ

ಅಸ್ಯ ತ್ವೇಷಾ ಅಜರಾ ಅಸ್ಯ ಭಾನವಃ ಸುಸಂದೃಶಃ ಸುಪ್ರತೀಕಸ್ಯ ಸುದ್ಯುತಃ।
ಭಾತ್ವಕ್ಷಸೋ ಅತ್ಯಕ್ತುರ್ನ ಸಿಂಧವೋಽಗ್ನೇ ರೇಜಂತೇ ಅಸಸಂತೋ
ಅಜರಾಃ ॥ ೩ ॥

ಪದಪಾಠಃ

ಅಸ್ಯ । ತ್ವೇಷಾಃ। ಅಜರಾಃ। ಅಸ್ಯ । ಭಾನವಃ । ಸುಽಸಂದೃಶಃ । ಸುಽಪ್ರತೀಕಸ್ಯ । ಸುಽದ್ಯುತಃ ।
ಭಾಽತ್ವಕ್ಷಸಃ । ಅತಿ । ಅಕ್ತುಃ । ನ । ಸಿಂಧವಃ । ಅಗ್ನೇ । ರೇಜಂತೇ । ಅಸಸಂತಃ । ಅಜರಾಃ ॥ ೩ ॥

ಸಾಯಣಭಾಷ್ಯಃ

ಅಸ್ಯ ಸ್ತೂಯಮಾನಸ್ಯಾಗ್ನೇಸ್ತ್ವೇಷಾ ದೀಪ್ತಯೋಽಜರಾ ಜರಾರಹಿತಾ ಅಜೀರ್ಣಾಃ। ಅವಿರತಾ ಇತ್ಯರ್ಥಃ॥ ನಞೋ ಜರಮರೇತ್ಯಾದಿನೋತ್ತರಪದಾದ್ಯುದಾತ್ತತ್ವಂ॥ ತಥಾ ಸುಪ್ರತೀಕಸ್ಯ ಶೋಭನಮುಖಸ್ಯಾಸ್ಯಾಗ್ನೇರ್ಭಾನವೋ ರಶ್ಮಯಃ। ದೀಪ್ತೇರುಕ್ತತ್ವಾದತ್ರ ವಿಸ್ಫುಲಿಂಗಾ ಅವಗಂತವ್ಯಾಃ। ತೇ ಚ ಸುಸಂದೃಶಃ ಸುಷ್ಠು ಸಮ್ಯಗ್ದ್ರಷ್ಟಾರಃ। ಸರ್ವತೋ ವ್ಯಾಪ್ತಾ ಇತ್ಯರ್ಥಃ। ಸುದ್ಯುತಃ ಸುಷ್ಠು ಸರ್ವತೋ ದ್ಯೋತಮಾನಾಃ। ತಥಾಸ್ಯಾಗ್ನೇರ್ಭಾತ್ವಕ್ಷಸಃ। ತ್ವಕ್ಷ ಇತಿ ಬಲನಾಮ ತ್ವಕ್ಷಃ ಶರ್ಧ ಇತಿ ಬಲನಾಮಸು ಪಾಠಾತ್। ಭಾಸಮಾನಬಲಾಃ। ಅಕ್ತುರಿತಿ ರಾತ್ರಿನಾಮೈತತ್ ಅಕ್ತುರೂರ್ಮ್ಯೇತಿ ತನ್ನಾಮಸೂಕ್ತತ್ವಾತ್। ದ್ವಿತೀಯಾರ್ಥೇ ಪ್ರಥಮಾ। ಅಕ್ತುಂ ಜಗದಂಜಕಂ ನೈಶಂ ತಮೋಽತ್ಯತಿಕ್ರಮ್ಯ ಸಿಂಧವಃ ಸ್ಯಂದಮಾನಾಃ ಸರ್ವತ್ರ ವ್ಯಾಪ್ನುವಂತೋಽಸಸಂತಃ ಸ್ವವ್ಯಾಪಾರೇಷ್ವಸ್ವಪಂತೋಽವಿರತಾಃ ಅತ ಏವಾಜರಾ ನ ರೇಜಂತೇ। ನ ಕಂಪಂತೇ। ದಾಹಪಾಕಾದಿಷು ನ ಚಲಂತಿ ನ ಚಾಲ್ಯಂತೇ ವಾನ್ಯೈಃ। ಯದ್ವಾ। ನಶಬ್ದೋ ದೃಷ್ಟಾಂತವಚನಃ। ಭಾತ್ವಕ್ಷಸೋ ಭಾ ಏವ ತ್ವಕ್ಷೋ ಬಲಂ ಯಸ್ಯ ತಾದೃಶಸ್ಯಾದಿತ್ಯಸ್ಯ ಸಿಂಧವೋ ನ ರಶ್ಮಯ ಇವ। ತೇ ಯಥಾ ಸ್ಯಂದನಶೀಲಾ ವ್ಯಾಪ್ತಿಮಂತೋಽಕ್ತುರತಿ ಅಂಜಕಂ ತಮೋಽತಿಕ್ರಮ್ಯಾಸಸಂತೋ ರೇಜಂತೇ ತದ್ವದ್ಭಾತ್ವಕ್ಷಸೋಽಸ್ಯಾಗ್ನೇರುಕ್ತಲಕ್ಷಣಾ ದೀಪ್ತಯೋಽಪಿ ಸರ್ವತ್ರ ರೇಜಂತೇ। ಕಂಪಂತೇ। ವ್ಯಾಪ್ನುವಂತೀತ್ಯರ್ಥಃ॥

ಪ್ರತಿಪದಾರ್ಥ

**ಅಸ್ಯ**—ಈ ಅಗ್ನಿಯ। **ತ್ವೇಷಾಃ**—ದೀಪ್ತಿಗಳು। **ಅಜರಾಃ**—ಕ್ಷಯರಹಿತವಾದುವು! **ಸುಪ್ರತೀಕಸ್ಯ**—ಶ್ರೇಷ್ಠವಾದ ಮುಖವುಳ್ಳ। **ಅಸ್ಯ**—ಈ ಅಗ್ನಿಯ। **ಭಾನವಃ**—ಕಿರಣಗಳು (ಕಿಡಿಗಳು)। **ಸುಸಂದೃಶಃ**— ಎಲ್ಲರಿಗೂ ಗೋಚರವಾಗುವಂತೆ ವ್ಯಾಪಿಸುವುವೂ। **ಸುದ್ಯುತಃ**—ಅತ್ಯಂತ ಪ್ರಕಾಶಮಾನವಾದವೂ ಆಗಿವೆ। **ಅಗ್ನೇಃ**—ಅಗ್ನಿಯ। [**ಭಾತ್ವಕ್ಷಸಃ**—ತೇಜೋರೂಪವಾದ ಶಕ್ತಿಗಳು। **ಅಕ್ತುಃ**—(ಜಗತ್ತನ್ನು) ವ್ಯಾಪಿಸುವ ತಮಸ್ಸನ್ನು। **ಅತಿ**—ದೂಡಿಕೊಂಡು (ಭೇದಿಸಿಕೊಂಡು)। **ಸಿಂಧವಃ**—ಪ್ರವಹಿಸತಕ್ಕವೂ। **ಅಸಸಂತಃ**—(ತಮ್ಮ ವ್ಯಾಪಾರಗಳಲ್ಲಿ) ವಿಚ್ಛಿತ್ತಿಯಿಲ್ಲದವೂ। **ಅಜರಾಃ**— ಕ್ಷೀಣವಾಗದಿರುವುವೂ ಆಗಿ। **ನ ರೇಜಂತೇ**— ( ತಮ್ಮ ಕೆಲಸಗಳಲ್ಲಿ ) ಹಿಂಜರಿಯುವುದಿಲ್ಲ। [(ಅಥವಾ) **ಭಾತ್ವಕ್ಷಸಃ**—ತೇಜೋರೂಪವಾದ ಬಲವುಳ್ಳ ಸೂರ್ಯನ। **ಸಿಂಧವೋ ನ**—ರಶ್ಮಿಗಳಂತೆ। **ಅಕ್ತುಃಅತಿ**—ತಮಸ್ಸನ್ನು ಭೇದಿಸಿಕೊಂಡು। **ಅಸಸಂತಃ**—ಕೊಂಚವೂ (ತಮ್ಮ ಕರ್ತವ್ಯಗಳಲ್ಲಿ) ವಿಚ್ಛಿತ್ತಿಯಿಲ್ಲದೆ। **ರೇಜಂತೇ**—ಕಂಪನರೂಪದಿಂದ ವ್ಯಾಪಿಸುತ್ತವೆ॥]

ಭಾವಾರ್ಥ

ಅಗ್ನಿಯ ದೀಪ್ತಿಗಳು ಕ್ಷಯರಹಿತವಾದುವು. ಶ್ರೇಷ್ಠವಾದ ಮುಖವುಳ್ಳ ಈ ಅಗ್ನಿಯ ಕಿಡಿರೂಪವಾದ ಕಿರಣಗಳು ಎಲ್ಲರಿಗೂ ಗೋಚರಿಸುವಂತೆ ವ್ಯಾಪಿಸುವುವೂ ಅತ್ಯಂತ ಪ್ರಕಾಶಮಾನವಾದವೂ ಆಗಿವೆ. ಈ ಅಗ್ನಿಯ ತೇಜಸ್ಸು, ತೇಜೋರೂಪವಾದ ಬಲವುಳ್ಳ ಸೂರ್ಯನ ರಶ್ಮಿಗಳಂತೆ ಜಗತ್ತನ್ನು ವ್ಯಾಪಿಸುವ ತಮಸ್ಸನ್ನು ಭೇದಿಸಿಕೊಂಡು ವಿಚ್ಛಿತ್ತಿಯಿಲ್ಲದೆ ತಮ್ಮ ಕಾರ್ಯಗಳಿಂದ ಅಕ್ಷೀಣವಾಗಿ ಜಗತ್ತನ್ನು ವ್ಯಾಪಿಸುತ್ತದೆ

English Translation

His radiance is undecaying ; the rays of him who is of pleasing aspect, are everywhere visible and bright : the intensely shining, all-pervading, unceasing, undecaying (rays) of Agni, desist not (from their functions).

। ವಿಶೇಷವಿಷಯಗಳು ।

ಈ ಋಕ್ಕಿನಲ್ಲಿ ಅಗ್ನಿಯ ತೇಜಸ್ಸೂ, ತೇಜೋರೂಪವಾದ ಅವನ ಶಕ್ತಿಯು ಶತ್ರುಗಳನ್ನು ನಾಶ ಮಾಡುತ್ತಾ ಸತತವಾಗಿ ಕರ್ತವ್ಯೋನ್ಮುಖವಾಗಿರುವುದೂ ವರ್ಣಿತವಾಗಿದೆ.

**ಸುಪ್ರತೀಕಸ್ಯ— ಪ್ರತೀಕಂ ಮುಖಂ ಪ್ರಕಾಶಾಖ್ಯಂ ದರ್ಶನಂ ವಾ ।** ಪ್ರತೀಕಶಬ್ದಕ್ಕೆ ಮುಖ ವೆಂದಾಗಲಿ, ಕಾಂತಿಯುತವಾದ ಆವಿರ್ಭಾವವೆಂದಾಗಲಿ ಅರ್ಥವಾಗುತ್ತದೆ. ನಿರುಕ್ತಕಾರರು

**ಯಾವನ್ಮಾತ್ರಮುಷಸೋ ನ ಪ್ರತೀಕಂ ಸುಪರ್ಣ್ಯೋ೩ವಸತೇ ಮಾತರಿಶ್ವಃ ।**
**ತಾವದ್ದಧಾತ್ಯುಪ ಯಜ್ಞಮಾಯನ್ ಬ್ರಾಹ್ಮಣೋ ಹೋತುರವರೋ ನಿಷೀದನ್ ॥**

(ಋ. ಸಂ. ೧೦-೮೮-೧೯)

ಎಂಬ ಋಕ್ಕನ್ನುದಹರಿಸಿ ಕಾಂತಿಯುತವಾದ ಆವಿರ್ಭಾವವೆಂಬರ್ಥವನ್ನು ಮಾಡಿದ್ದಾರೆ. ಇಲ್ಲಿ ಆವಿರ್ಭೂತನಾದ ಅಗ್ನಿಯ ಪ್ರಕಾಶಮಾನವಾದ ಮುಖವೆಂದು ಎರಡರ್ಥಗಳನ್ನೂ ಒಳಗೊಂಡ ಪದವಾಗಿ ಉಪಯೋಗಿಸಲ್ಪಟ್ಟಿದೆ.

**ಭಾನವಃ—** ಭಾನುಶಬ್ದಕ್ಕೆ ಸೂರ್ಯನೆಂದೂ, ಕಿರಣಗಳೆಂದೂ ಎರಡರ್ಥವೂ ಆಗುತ್ತದೆ.

**ಉದಪಪ್ತನ್ನರುಣಾ ಭಾನವೋ ವೃಥಾ ಸ್ವಾಯುಜೋ ಅರುಷೀರ್ಗಾ ಅಯುಕ್ಷತ ।**
**ಅಕ್ರನ್ನುಷಾಸೋ ವಯುನಾನಿ ಪೂರ್ವಥಾ ರುಶಂತಂ ಭಾನುಮರುಷೀ ರಶಿಶ್ರಯುಃ ।**

(ಋ.ಸಂ. ೧-೯೨-೨)

ಎಂಬ ಋಕ್ಕಿನಲ್ಲಿ **ಉಷೋ** ದೇವತೆಗಳ ಹೊಂಬಣ್ಣದ **ಪ್ರಭೆಗಳು** ಊರ್ಧ್ವಮುಖವಾಗಿ ಹೊರಚಿಮ್ಮಿದವು .... .... .... .... ಅನಂತರ ಅವರು ತಮ್ಮ ಕಾಂತಿಯಿಂದ ಕೂಡಿಕೊಂಡು ಶುಭ್ರವರ್ಣವುಳ್ಳ **ಸೂರ್ಯನೊಡನೆ** ಒಂದಾದರು, ಎಂಬುದಾಗಿ **ಭಾನು**ಶಬ್ದಕ್ಕೆ ಎರಡರ್ಥವೂ ಒಂದೇ ಋಕ್ಕಿನಲ್ಲಿ ಕಾಣುತ್ತದೆ. ಐತರೇಯ ಬ್ರಾಹ್ಮಣದಲ್ಲಿ

**ಕವಿಶಸ್ತೋ ಬೃಹತಾ ಭಾನುನಾಽಗಾ ಹವ್ಯಾ ಜುಷಸ್ವ ।**

(ಐ. ಬ್ರಾ. ೨-೧೨)

ಮಹತ್ತಾದ ನಿನ್ನ ತೇಜಸ್ಸಿನೊಡನೆ ಕೂಡಿಕೊಂಡು ದಯಮಾಡು ಎಂದು ಅಗ್ನಿಯನ್ನು ಪ್ರಾರ್ಥಿಸಿದೆ. ಅದೇ ರೀತಿ ಇಲ್ಲಿಯೂ ಸಹ ಅಗ್ನಿಯ ಪ್ರಭಾಯುತವಾದ ಕಿರಣಗಳೆಂದರ್ಥ.

**ಸುಸಂದೃಶಃ— ಸುಷ್ಠು ಸಮ್ಯಗ್ವ್ಯಾಪ್ತಾರಃ । ಸರ್ವತೋ ವ್ಯಾಪ್ತಾ ಇತ್ಯರ್ಥಃ ।** ಎಲ್ಲರಿಗೂ ಗೋಚರ ವಾಗುವಂತೆ ವ್ಯಾಪಿಸುವುವು ಎಂದರ್ಥ.

ಅಕ್ತುಃ—ಈ ಪದವು ಶ್ಯಾವೀ, ಕ್ಷಪಾ, ಶರ್ವರೀ ಇತ್ಯಾದಿ ೨೩ ರಾತ್ರಿನಾಮಗಳಲ್ಲಿ ಪಠಿತವಾಗಿದೆ. (ನಿ. ೧-೧೭) ಅನೇಕ ಕಡೆಗಳಲ್ಲಿ ಅಕ್ತುಶಬ್ದಕ್ಕೆ ರಾತ್ರಿಯೆಂದೇ ಅರ್ಥವಾಗುತ್ತದೆ. ಕತ್ತಲು, ಕಿರಣ, ಆಯುಧ ಇತ್ಯಾದ್ಯರ್ಥಗಳಲ್ಲೂ ಈ ಪದದ ಪ್ರಯೋಗವಿದೆ. ಅಂಜ್ ಧಾತುವಿಗೆ ಆವರಿಸು, ಮುಚ್ಚು, ಬಳಿ ಇತ್ಯಾದ್ಯರ್ಥಗಳಿರುವುದರಿಂದ ಛಾಯೆಯಿಂದ ಮುಚ್ಚುವ ಕತ್ತಲೆಯೆಂದೂ, ಸುತ್ತಲೂ ಆವರಿಸತಕ್ಕ ಕಿರಣವೆಂದೂ, ದೇಹವನ್ನು ಆವರಿಸುವ ಆಯುಧವೆಂದೂ ಅರ್ಥಗಳಾಗುತ್ತವೆ. ಉದಾಹರಣೆಗೆ—

ಘನೇವ ವಿಷ್ವಗ್ವಿ ಜಹ್ಯರಾವ್ಣಸ್ತಪುರ್ಜಂಭ ಯೋ ಅಸ್ಮಧ್ರುಕ್ ।
ಯೋ ಮರ್ತ್ಯಃ ಶಿಶೀತೇ ಅತ್ಯಕ್ತುಭಿರ್ಮಾ ನಃ ಸ ರಿಪುರೀಶತ ॥

(ಋ ಸಂ. ೧-೩೬-೧೬)

ಎಂಬ ಋಕ್ಕಿನಲ್ಲಿ ಅಕ್ತುಭಿಃ ಎಂಬ ಪದಕ್ಕೆ ಆವರಕೈರಾಯುಧೈಃ ಎಂಬರ್ಥವನ್ನು ಮಾಡಿದ್ದಾರೆ. ಆದರೆ ಈ ಅರ್ಥದಲ್ಲಿ ಈ ಪದವು ಅಪರೂಪವಾಗಿ ಉಪಯೋಗಿಸಲ್ಪಟ್ಟಿದೆ. ಕತ್ತಲು, ಕತ್ತಲಿನಿಂದ ವ್ಯಾಪ್ತವಾದ ರಾತ್ರಿ ಈ ಅರ್ಥಗಳಲ್ಲಿಯೇ ಈ ಪದದ ಪ್ರಯೋಗವು ಹೆಚ್ಚಾಗಿದೆ.

ಉತ್ತಾನಾಯಾಮಜನಯನ್ತ್ಸುಷೂತಂ ಭುವದಗ್ನಿಃ ಪುರುಪೇಶಾಸು ಗರ್ಭಃ ।
ಶಿರಿಣಾಯಾಂ ಚಿದಕ್ತುನಾ ಮಹೋಭಿರಪರೀವೃತೋ ವಸತಿ ಪ್ರಚೇತಾಃ ॥

(ಋ. ಸಂ. ೨-೧೦-೩)

ಇತ್ಯಾದಿ ಋಕ್ಕುಗಳಲ್ಲಿ ಅಕ್ತುನಾ, ಅಂಜನಾದಕ್ತುಸ್ತಮಃ । ವ್ಯಾಪಿಸುವುದರಿಂದ ತಮಸ್ಸಿಗೆ ಅಕ್ತುವೆಂದು ಅರ್ಥಮಾಡಿರುವಂತೆ ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಜಗತ್ತನ್ನು ವ್ಯಾಪಿಸುವ ಕತ್ತಲೆಂದರ್ಥ. ಇಂತಹ ಕಗ್ಗತ್ತಲೆಯನ್ನು ಅಗ್ನಿಯ ಪ್ರಭೆಯು ಹೊರದೂಡುತ್ತದೆ.

ಅಸಸಂತಃ—ಸ್ವವ್ಯಾಪಾರೇಷು ಅಸ್ವಪಂತಃ ಅವಿರತಾಃ । ತಮ್ಮ ತಮ್ಮ ವ್ಯಾಪಾರಗಳಲ್ಲಿ ಆಲಸ್ಯವಿಲ್ಲದೆ ಅವಿಚ್ಛಿನ್ನವಾದ ಕಾರ್ಯತತ್ಪರತೆಯಿಂದ ಕೂಡಿ ಎಂದರ್ಥ. ನಿರುಕ್ತಕಾರರು,

ಅತಿ ವಾಯೋ ಸಸತೋ ಯಾಹಿ ಶಶ್ವತೋ ಯತ್ರ ಗ್ರಾವಾ ವದತಿ ತತ್ರ ಗಚ್ಛತಂ ಗೃಹಮಿಂದ್ರಶ್ಚ ಗಚ್ಛತಂ ।
ವಿ ಸೂನೃತಾ ದದೃಶೇ ರೀಯತೇ ಘೃತಮಾ ಪೂರ್ಣಯಾ ನಿಯುತಾ ಯಾಥೋ ಅಧ್ವರಮಿಂದ್ರಶ್ಚ ಯಾಥೋ ಅಧ್ವರಂ ॥

(ಋ. ಸಂ. ೧-೧೩೫-೭)

ಎಂಬ ಋಕ್ಕನ್ನುದಹರಿಸಿ ಸಸತಃ ಎಂಬ ಪದಕ್ಕೆ ಅಲಸ್ಯಾದಿನಾ ನಿದ್ರಾಂ ಕುರ್ವತಃ ಎಂದರ್ಥಮಾಡಿದ್ದಾರೆ. ಅಂತಹ ಆಲಸ್ಯವೂ ನಿದ್ರೆಯೂ ಇಲ್ಲದೆ ಸತತವಾಗಿ ತಮ್ಮ ವ್ಯಾಪಾರಗಳಲ್ಲಿರುವುದೆಂದರ್ಥ.

ಭಾತ್ವಕ್ಷಸಃ—ತ್ವಕ್ಷ ಇತಿ ಬಲನಾಮ, 'ತ್ವಕ್ಷಃ, ಶರ್ಧಃ' ಇತಿ ಬಲನಾಮಸು (ನಿ೨-೯) ಪಾಠಾತ್। ಭಾಸಮಾನಬಲಾಃ । ತ್ವಕ್ಷ ಶಬ್ದವು ಬಲನಾಮಗಳಲ್ಲಿ ಪಠಿತವಾಗಿದೆ. ತೇಜೋರೂಪವಾದ ಶಕ್ತಿಗಳೆಂದರ್ಥ,

**ಇಂದ್ರಿಯಂ ವೀರ್ಯಮಾತ್ಮನ್ನತ್ತೇ ತೇಜೋ ವಾ ಅಗ್ನಿರಿಂದ್ರಿಯಂ ವೀರ್ಯಮಿಂದ್ರ ಉಭೇ ವೀರ್ಯೇ।**

(ಶ. ಬ್ರಾ. ೫-೨-೩-೯)

ಇತ್ಯಾದಿವಾಕ್ಯಗಳಲ್ಲಿ ವರ್ಣಿಸಿರುವಂತೆ ಅಗ್ನಿಯ ತೇಜೋರೂಪವಾದ ಶಕ್ತಿಗಳು ಇಲ್ಲೂ ವರ್ಣಿತವಾಗಿವೆ.

ಈ ಋಕ್ಕಿನಲ್ಲಿ ಉತ್ತರಾರ್ಧಕ್ಕೆ ಎರಡು ವಿಧವಾದ ಅನ್ವಯವು ಸಾಧ್ಯವೆಂದು ಸಾಯಣರು ತೋರಿಸಿದ್ದಾರೆ. ಮೊದಲನೆಯದಾಗಿ,

**ಸಿಂಧವಃ, ಅಸಸಂತಃ, ಅಜರಾಃ,** ಎಂಬ ಪದಗಳು **ಭಾತ್ವಕ್ಷಸಃ** ಎಂಬ ಪದಕ್ಕೆ ವಿಶೇಷಣಗಳಾಗಿ, ಪ್ರವಹಿಸತಕ್ಕವೂ, ತಮ್ಮ ವ್ಯಾಪಾರಗಳಲ್ಲಿ ವಿಚ್ಛಿತ್ತಿಯಿಲ್ಲದವೂ, ಕ್ಷೀಣವಾಗದೇ ಇರುವುವೂ ಆದ ತೇಜೋರೂಪವಾದ ಶಕ್ತಿಗಳು, **ನ ರೇಜಂತೇ**—ತಮ್ಮ ಕಾರ್ಯಗಳಿಂದ ಹಿಂಜರಿಯುವುದಿಲ್ಲ ಎಂದು ನಿಷೇಧರೂಪದಲ್ಲಿಯೂ, ಎರಡನೆಯದಾಗಿ ;

**ನ ಶಬ್ದೋ ದೃಷ್ಟಾಂತವಚನಃ। ಭಾತ್ವಕ್ಷಸೋ ಭಾ ಏವ ತ್ವಕ್ಷೋ ಬಲಂ ಯಸ್ಯ ತಾದೃಶಸ್ಯಾದಿತ್ಯಸ್ಯ ಸಿಂಧವೋ ನ ರಶ್ಮಯ ಇವ। ತೇ ಯಥಾ ಸ್ಯಂದನಶೀಲಾ ವ್ಯಾಪ್ತಿಮಂತಃ ಅಕ್ತುರತಿ ಅಂಜಕಂ ತಮಃ ಅತಿಕ್ರಮ್ಯ ಅಸಸಂತೋ ರೇಜಂತೇ ತದ್ವತ್ ಭಾತ್ವಕ್ಷಸೋಽಸ್ಯಾಗ್ನೇರುಕ್ತಲಕ್ಷಣಾ ದೀಪ್ತಯೋಽಪಿ ಸರ್ವತ್ರ ರೇಜಂತೇ ಕಂಪಂತೇ ವ್ಯಾಪ್ನುವಂತೀತ್ಯರ್ಥಃ।**

ಇಲ್ಲಿ ನ ಶಬ್ದವು ದೃಷ್ಟಾಂತವಚನವು. ತೇಜೋರೂಪವಾದ ಬಲವುಳ್ಳ ಸೂರ್ಯನ ರಶ್ಮಿಗಳು ಯಾವ ರೀತಿ ತಮಸ್ಸನ್ನು ಭೇದಿಸಿಕೊಂಡು ಕೊಂಚವೂ ತಮ್ಮ ಕರ್ತವ್ಯಗಳಲ್ಲಿ ವಿಚ್ಛಿತ್ತಿಯಿಲ್ಲದೇ ಕಂಪನರೂಪದಿಂದ ಜಗತ್ತನ್ನು ವ್ಯಾಪಿಸುವುವೋ ಅದರಂತೆ ಅಗ್ನಿಯ **ಕಿರಣಗಳೂ** ವ್ಯಾಪಿಸುವುವೆಂದರ್ಥವೆಂದು ಸಾಯಣರು ವಿವರಿಸಿದ್ದಾರೆ.

### ವ್ಯಾಕರಣಪ್ರಕ್ರಿಯಾ

**ತ್ವೇಷಾಃ**—ತ್ವಿಷ ದೀಪ್ತೌ ಧಾತು. ಪಚಾದಿಯಲ್ಲಿ ಸೇರಿರುವುದರಿಂದ ಅಚ್ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿನ ಲಘೂಪಧೆಗೆ ಗುಣ. ಚಿತ್ತಾದುದರಿಂದ ಅಂತೋದಾತ್ತ ಸ್ವರ ಬರುತ್ತದೆ.

**ಅಜರಾಃ**—ನ ವಿದ್ಯತೇ ಜರಾ ಯೇಷಾಂ ತೇ ಅಜರಾಃ ನಞ್ಸ್ವರ ಬಾಧಕವಾಗಿ **ನಞೋಜರಮರ**—(ಪಾ. ಸೂ. ೬-೨-೧೧೬) ಎಂಬುದರಿಂದ ಉತ್ತರಪದ ಆದ್ಯುದಾತ್ತ ಸ್ವರಬರುತ್ತದೆ.

**ಅಸ್ಯ—ಊಡಿದಂಪದಾದಿ**—(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಭಾನವಃ**—ಭಾ ದೀಪ್ತೌ ಧಾತು. **ದಾಭಾಭ್ಯಾಂನುಃ** (ಉ. ಸೂ. ೨-೩೦-೨) ಎಂಬುದರಿಂದ ನು ಪ್ರತ್ಯಯ ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಸುಸಂದೃಶಃ**—ದೃಶಿರ್ ಪ್ರೇಕ್ಷಣೇ ಧಾತು. ಕ್ವಿಪ್ ಪ್ರತ್ಯಯ. **ಗತಿಕಾರಕೋಪಪದಾತ್ಕೃತ್** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. ಪ್ರಥಮಾ ಬಹುವಚನಾಂತರೂಪ.

**ಸುಪ್ರತೀಕಸ್ಯ**—ಶೋಭನಂ ಪ್ರತೀಕಂ ಯಸ್ಯ ಸಃ ಸುಪ್ರತೀಕಃ ತಸ್ಯ. **ಕ್ರತ್ವಾದಯಶ್ಚ** (ಪಾ. ಸೂ. ೬-೨-೧೧೮) ಎಂಬುದರಿಂದ ಉತ್ತರಪದದ ಆದ್ಯುದಾತ್ತಸ್ವರ ಬರುತ್ತದೆ.

**ಭಾತ್ವಕ್ಷಸಃ**— ಭಾ ಏವ ತ್ವಕ್ಷೋ ಬಲಂ ಯಸ್ಯ ಸಃ ಭಾತ್ವಕ್ಷಾಃ । **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್** (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ರೇಜಂತೇ**— ರೇಜೃ ಕಂಪನೇ ಧಾತು. ಲಟ್ ಪ್ರಥಮಪುರುಷ ಬಹುವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಅಸಸಂತಃ**— ನ ಸಸಂತಃ ಅಸಸಂತಃ. ಷಸ ಸ್ವಪ್ನೇ ಧಾತು. ಲಡರ್ಥದಲ್ಲಿ ಶತೃ ಪ್ರತ್ಯಯ. ಪ್ರಥಮಾ ಬಹುವಚನಾಂತರೂಪ. **ತತ್ಪುರುಷೇ ತುಲ್ಯಾರ್ಥ**— (ಪಾ. ಸೂ. ೬-೨-೨) ಎಂಬುದರಿಂದ ನಙ್ಪ್ರಕೃತಿಸ್ವರ ಬರುತ್ತದೆ. ॥ ೩ ॥

———:o:———

ಸಂಹಿತಾಪಾಠಃ

ಯಮೇರಿರೇ ಭೃಗವೋ ವಿಶ್ವವೇದಸಂ ನಾಭಾ ಪೃಥಿವ್ಯಾ ಭುವನಸ್ಯ
ಮಜ್ಮನಾ ।
ಅಗ್ನಿಂ ತಂ ಗೀರ್ಭಿರ್ಹಿನುಹಿ ಸ್ವ ಆ ದಮೇ ಯ ಏಕೋ ವಸ್ವೋ
ವರುಣೋ ನ ರಾಜತಿ ॥ ೪ ॥

। ಪದಪಾಠಃ ।

ಯಂ । ಆಽಈರಿರೇ । ಭೃಗವಃ । ವಿಶ್ವಽವೇದಸಂ । ನಾಭಾ । ಪೃಥಿವ್ಯಾಃ । ಭುವನಸ್ಯ । ಮಜ್ಮನಾ ।
ಅಗ್ನಿಂ । ತಂ । ಗೀಃಽಭಿಃ । ಹಿನುಹಿ । ಸ್ವೇ । ಆ । ದಮೇ । ಯಃ । ಏಕಃ । ವಸ್ವಃ । ವರುಣಃ । ನ ।
ರಾಜತಿ ॥ ೪ ॥

। ಸಾಯಣಭಾಷ್ಯಂ ॥

ವಿಶ್ವವೇದಸಂ ಸರ್ವಧನಂ । ವೇದ ಇತಿ ಧನನಾಮ ವೇದೋ ವರಿವ ಇತಿ ತನ್ನಾಮಸು ಪಾಠಾತ್ । ತಾದೃಶಂ ಯಮಗ್ನಿಂ ಭೃಗವೋ ಭೃಗುಗೋತ್ರೋತ್ಪನ್ನಾಃ ಪಾಪಸ್ಯ ಭರ್ಜಕಾಃ ಪೃಥಿವ್ಯಾ ವೇದ್ಯಾಃ । ಏಕದೇಶೇ ಕೃತ್ಸ್ನಶಬ್ದಃ । ಯದ್ವಾ । ಏತಾವತೀ ವೈ ಪೃಥಿವೀತ್ಯಾದಿಶ್ರುತೇರ್ವೇದ್ಯಾಃ

ಪೃಥಿವೀತ್ಯೇಂ। ತಸ್ಯಾ ನಾಭಾವುತ್ತರವೇದ್ಯಾಂ ಭುವನಸ್ಯ ಭೂತಜಾತಸ್ಯ ಮಜ್ಮನಾ ಬಲೇನ ನಿಮಿತ್ತೇನಾ ಅಭಿಮುಖ್ಯೇನೇರಿರೇ ಈರಿತವಂತಃ ಸ್ಥಾಪಿತವಂತಃ ತಮಗ್ನಿಂ ಸ್ವೇ ಸ್ವಕೀಯೇ ದಮೇ ಗೃಹ ಉತ್ತರವೇದ್ಯಾಂ ಗೀರ್ಭಿಃ ಸ್ತುತಿಭಿರಾ ಹಿನುಹಿ। ಪ್ರಾಪ್ನುಹಿ॥ ಹಿ ಗತೌ ವೃದ್ಧೌ ಚ। ಉತಶ್ಚ ಪ್ರತ್ಯಯಾಚ್ಛಂದಸಿ ವಾವಚನಮಿತಿ ಹೇರ್ಲುಗಭಾವಃ॥ ಯೋಽಗ್ನಿರೇಕೋ ಮುಖ್ಯಃ ಸನ್ ಏಕ ಏವ ವಾ ವಸ್ವೋ ವಸುನೋ ಗವಾದಿಧನಸ್ಯ ರಾಜತಿ ಈಶ್ವರೋ ಭವತಿ। ಪ್ರದಾತುಮಿತಿ ಶೇಷಃ। ರಾಜತೀತ್ಯೈಶ್ವರ್ಯಕರ್ಮಾ ಕ್ಷಯತಿ ರಾಜತೀತಿ ತನ್ನಾಮಸು ಪಾಠಾತ್। ತತ್ರ ದೃಷ್ಟಾಂತಃ। ವರುಣೋ ನ ವಾರಕ ಆದಿತ್ಯ ಇವ। ಸ ಯಥಾ ಸರ್ವಸ್ಯೇಷ್ಟೇ ತದ್ವತ್॥

ಪ್ರತಿಪದಾರ್ಥ

**ಯಃ**—ಯಾವ ಅಗ್ನಿಯು। **ವರುಣೋ ನ**—ಆದಿತ್ಯನಂತೆ। **ಏಕಃ**—ಏಕಮಾತ್ರ ಪ್ರಭುವಾಗಿದ್ದುಕೊಂಡು। **ವಸ್ವಃ**—ಗವಾದಿ ಧನಕ್ಕೆಲ್ಲಾ। **ರಾಜತಿ**—ಒಡೆಯನಾಗಿದ್ದಾನೆಯೋ, ।(ಮತ್ತು) **ವಿಶ್ವವೇದಸಂ**—ಸಕಲ ಧನವನ್ನೂ ಹೊಂದಿರುವ। **ಯಂ**—ಯಾವ ಅಗ್ನಿಯನ್ನು। **ಭೃಗವಃ**—ಭೃಗುವಿನ ವಂಶದಲ್ಲಿ ಹುಟ್ಟಿದ ಋಷಿಗಳೆಲ್ಲಾ। **ಪೃಥಿವ್ಯಾಃ**—ವೇದಿಕೆಯ। **ನಾಭಾ**—ಉತ್ತರ ಭಾಗದಲ್ಲಿ। **ಭುವನಸ್ಯ**—ಸಕಲ ಭೂತಜಾತಗಳ। **ಮಜ್ಮನಾ**—ಶಕ್ತಿಯಿಂದ। **ಆ**—ಅಭಿಮುಖವಾಗಿ। **ಈರಿರೇ**—ಸ್ಥಾಪಿಸಿದ್ದಾರೋ। **ತಂ ಅಗ್ನಿಂ**—ಆ ಅಗ್ನಿಯನ್ನು ।**ಸ್ವೇ ದಮೇ**—ನಿನ್ನ(ಅಗ್ನಿಯ) ಸ್ವಗೃಹದಲ್ಲಿ(ಉತ್ತರವೇದಿಕೆಯಲ್ಲಿ)। **ಗೀರ್ಭಿಃ**-ಸ್ತುತಿಗಳೊಡನೆ। **ಆ ಹಿನುಹಿ**—ಬರಮಾಡಿ ಸ್ಥಾಪಿಸು.

॥ ಭಾವಾರ್ಥ ॥

ಯಾವ ಅಗ್ನಿಯು ಆದಿತ್ಯನಂತೆ ಏಕಮಾತ್ರಪ್ರಭುವಾಗಿದ್ದುಕೊಂಡು ಗವಾದಿಧನಕ್ಕೆಲ್ಲಾ ಒಡೆಯನಾಗಿದ್ದಾನೆಯೋ, ಮತ್ತು ಸಕಲ ಧನವನ್ನೂ ಹೊಂದಿರುವ ಯಾವ ಅಗ್ನಿಯನ್ನು ಭೃಗುವಿನ ವಂಶದಲ್ಲಿ ಹುಟ್ಟಿದ ಋಷಿಗಳೆಲ್ಲಾ ವೇದಿಕೆಯ ಉತ್ತರ ಭಾಗದಲ್ಲಿ ಸಕಲ ಶಕ್ತಿಯಿಂದಲೂ ಸ್ಥಾಪಿಸಿದ್ದಾರೋ, ಆ ಅಗ್ನಿಯನ್ನು ನಿನ್ನ ಸ್ವಗೃಹದ ಉತ್ತರವೇದಿಕೆಯಲ್ಲಿ ಸ್ತುತಿಗಳೊಡನೆ ಬರಮಾಡಿ ಸ್ಥಾಪಿಸು.

English Tranlation

Bring to his own abode with hymns that Agni, the possessor of all riches, whom the descendants of Bhrigu placed by the strength of all beings upon the navel of the earth : for, like Veruna, he reigns sole (monarch) over (all) treasure.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಅಗ್ನಿಯು ಏಕಮಾತ್ರಪ್ರಭುವಾಗಿರುವುದನ್ನೂ, ಸಕಲ ಧನಕ್ಕೂ ಒಡೆಯನಾಗಿರುವುದನ್ನೂ ಸ್ತುತಿಸಿ ಅನಂತರ ಇಂತಹ ವಿಶ್ವವೇದಸ್ಸಾದವನೂ, ವೇದಿಕೆಯ ಉತ್ತರಭಾಗದಲ್ಲಿ ಸ್ಥಾಪಿತನಾದವನೂ ಆದ ಅಗ್ನಿಯನ್ನು ಬರಮಾಡು ಎಂದು ಯಜ್ಞಕರ್ತನಿಗೆ ಸೂಚಿಸಿದೆ.

ವರುಣೋ ನ—ವರುಣಶಬ್ದಕ್ಕೆ ಇಲ್ಲಿ ವಾರಕನಾದ ಆದಿತ್ಯನೆಂದರ್ಥಮಾಡಿದ್ದಾರೆ. ಅಗ್ನಿಯ ಪ್ರಭುತ್ವವು ಆದಿತ್ಯನ ಏಕಮಾತ್ರ ಪ್ರಭುತ್ವಕ್ಕೆ ಹೋಲಿಸಲ್ಪಟ್ಟಿದೆ.

ರಾಜತಿ—ಕ್ಷಯತಿ, ರಾಜತಿ ಇತ್ಯಾದಿ ಐಶ್ವರ್ಯಕರ್ಮನಾಮಗಳಲ್ಲಿ ಪಠಿತವಾಗಿದೆ. (ನಿ. ೨-೨೧) ಈಶ್ವರಃ ಭವತಿ—ಎಲ್ಲಾ ಧನಕ್ಕೂ ಈಶ್ವರನಾಗಿದ್ದಾನೆ.

ಸಪ್ತ ಕ್ಷರಂತಿ ಶಿಶವೇ ಮರುತ್ವತೇ ಪಿತ್ರೇ ಪುತ್ರಾಸೋ ಅಪ್ಯವೀವತನ್ನೃತಂ ।
ಉಭೇ ಇದಸ್ಯೋಭಯಸ್ಯ ರಾಜತ ಉಭೇ ಯತೇತೇ ಉಭಯಸ್ಯ ಪುಷ್ಯತಃ ।

(ಋ. ಸಂ. ೧೦-೧೩-೫)

ಎಂಬ ಋಕ್ಕಿನಲ್ಲಿ ರಾಜತಃ ಎಂಬ ಪದವು ಈಶಾತೇ ಎಂಬರ್ಥವನ್ನು ಕೊಡುವುದೆಂಬ ಉದಾಹರಣೆಯನ್ನು ನಿರುಕ್ತಕಾರರು ತೋರಿಸಿರುವಂತೆ ಇಲ್ಲಿಯೂ ಅದೇ ಅರ್ಥವಾಗುತ್ತದೆ.

ಭೃಗವಃ ಈರಿರೇ—ಭೃಗುಗೋತ್ರೋತ್ಪನ್ನಾಃ ಸ್ಥಾಪಿತವಂತಃ ಭೃಗುವಂಶೋತ್ಪನ್ನರಾದ ಋಷಿಗಳು ಅಗ್ನಿಯನ್ನು ಪ್ರಥಮತಃ ಯಜ್ಞಗೃಹದಲ್ಲಿ ಸ್ಥಾಪಿಸಿದರೆಂಬ ಹಿಂದಿನ ಕಥೆಯನ್ನು ಸೂಚಿಸಿದೆ.

ಅಯಮಿಹ ಪ್ರಥಮೋ ಧಾಯಿ ಧಾತೃಭಿರ್ಹೋತಾ ಯಜಿಷ್ಠೋ ಅಧ್ವರೇಷ್ವೀಡ್ಯಃ । ಯಮಪ್ನವಾನೋ ಭೃಗವೋ ವಿರುರುಚುರ್ವನೇಷು ಚಿತ್ರಂ ವಿಭುವಂ ವಿಶೇವಿಶೇ ॥

(ತೈ. ಸಂ. ೧-೫-೫-೧)

ಇತ್ಯಾದಿ ತೈತ್ತಿರೀಯಸಂಹಿತಾವಾಕ್ಯಗಳಲ್ಲಿ ಭೃಗುಗಳು ಹೋತೃವಾದ ಅಗ್ನಿಯನ್ನು ಮೊದಲು ಸ್ಥಾಪಿಸಿದ ವಿಷಯವನ್ನು ತಿಳಿಸಿದೆ. ಋಕ್ಸಂಹಿತೆಯಲ್ಲಿಯೂ ಸಹ,

ದಧುಷ್ಟ್ವಾ ಭೃಗವಃ ಮಾನುಷೇಷ್ವಾ ರಯಿಂ ನ ಚಾರುಂ ಸುಹವಂ ಜನೇಭ್ಯಃ ।
ಹೋತಾರಮಗ್ನೇ ಅತಿಥಿಂ ವರೇಣ್ಯಂ ಮಿತ್ರಂ ನ ಶೇವಂ ದಿವ್ಯಾಯ ಜನ್ಮನೇ ।

(ಋ. ಸಂ. ೧-೫೮-೬)

ದ್ವಿತಾ ಯದೀಂ ಕೀಸ್ತಾಸೋ ಅಭಿದ್ಯವೋ ನಮಸ್ಯಂತ ಉಪವೋಚಂತ ಭೃಗವೋ ಮಥ್ನಂತೋ ದಾಶಾ ಭೃಗವಃ ।
ಅಗ್ನಿರೀಶೇ ವಸೂನಾಂ ಶುಚಿರ್ಯೋ ಧರ್ಣಿರೇಷಾಂ ।
ಪ್ರಿಯಾँ ಅಪಿಧೀँರ್ವನಿಷೀಷ್ಟ ಮೇಧಿರ ಆ ವನಿಷೀಷ್ಟ ಮೇಧಿರಃ ॥

(ಋ ಸಂ. ೧-೧೨೭-೭)

ಇತ್ಯಾದಿ ಋಕ್ಕುಗಳಲ್ಲಿ ಭೃಗುಗಳು ಮಥನವನ್ನು ಮಾಡಿ ಅಗ್ನಿಯನ್ನು ಯಜ್ಞಗೃಹದಲ್ಲಿ ಸ್ಥಾಪಿಸಿದುದೂ ಮತ್ತು ಈ ಭೃಗುಗಳಿಗಾಗಿ ಮಾತರಿಶ್ವನು ಅಗ್ನಿಯನ್ನು ದೂರದೇಶದಿಂದ ಕರೆತಂದುದೂ ಅನೇಕ ಕಡೆಗಳಲ್ಲಿ ಸ್ತುತವಾಗಿದೆ. ಆ ಸನ್ನಿವೇಶವನ್ನು ಪ್ರಕೃತವಾದ ಋಕ್ಕಿನಲ್ಲಿಯೂ ಸೂಚಿಸಿದೆ.

**ಭೃಗವಃ—ಭೃಷ್ಟಾರೋ ಹವಿಷಾಂ ಪಾಪಾನಾಂ ಭರ್ಜಕಾ ವಾ ।** ಹವಿಸ್ಸುಗಳನ್ನು ಅರ್ಜಿಸುವವರು ಎಂದಾಗಲಿ ಅಥವಾ ಪಾಪವನ್ನು ನಾಶಮಾಡುವವರು ಎಂದಾಗಲಿ ಅರ್ಥವಾಗುವುದರಿಂದಲೂ ಈ ಋಷಿಗಳಿಗೆ ಈ ಎರಡು ವಿಧವಾದ ಶಕ್ತಿಗಳೂ ಇದ್ದುದರಿಂದಲೂ ಇವರಿಗೆ ಈ ಹೆಸರೆಂದು ಸಾಯಣರು ವಿವರಿಸಿದ್ದಾರೆ. ನಿರುಕ್ತಕಾರರು,

**“ ಅರ್ಚಿಷಿ ಭೃಗುಃ ಸಂಬಭೂವ ಭೃಗುರ್ಭೃಜ್ಯಮಾನೋ ನ ದೇಹೇ ”**

(ನಿರುಕ್ತ. ೩-೧೭)

ಜ್ವಾಲೋತ್ಪನ್ನನಾದ ಭೃಗುವು ಅಗ್ನಿಯಲ್ಲಿ ಅಂತರ್ಗತನಾಗಿದ್ದರೂ ದಗ್ಧನಾಗಲಿಲ್ಲ. ಆದ್ದರಿಂದ ಈ ಹೆಸರು ಎಂದು ಭೃಗುಶಬ್ದದ ನಿರ್ವಚನವನ್ನು ತೋರಿಸಿದ್ದಾರೆ. ಈ ಅದ್ಭುತವಾದ ಶಕ್ತಿಯು ಮಹತ್ತಾದ ಯಜ್ಞಕರ್ಮಕ್ಕೆ ಸಹಾಯವಾಡುವಂತೆಯೇ ಪಾಪನಾಶಕ್ಕೂ ಸಹಾಯಮಾಡುತ್ತದೆ. ಶತಪಥಬ್ರಾಹ್ಮಣದಲ್ಲಿ,

**ಅಥಾಂಗಾರೈರಭ್ಯೂಹತಿ । ಭೃಗೂಣಾಮಂಗಿರಸಾಂ ತಪಸಾ ತಪ್ಯಧ್ವಮಿತ್ಯೇತದ್ವೈ ತೇಜಿಷ್ಠಂ ತೇಜೋ ಯದ್ಭೃಗ್ವಂಗಿರಸಾಗ್ಂ ಸುತಪ್ತಾನ್ಯಸನ್ನಿತಿ ತಸ್ಮಾದೇನಮಭ್ಯೂಹತಿ ।**

(ಶ. ಬ್ರಾ. ೧-೨-೧-೧೩)

ಇತ್ಯಾದಿ ವಾಕ್ಯಗಳಲ್ಲಿ ಭೃಗುಗೋತ್ರೋತ್ಪನ್ನರು ಅಗ್ನಿಯ ಸಾಕ್ಷಾತ್ಸಂಬಂಧಿಗಳಾದುದರಿಂದ ಅತ್ಯಂತ ಪ್ರಭಾಯುತವಾದ ತೇಜಸ್ಸುಳ್ಳವರೆಂದೂ ಮತ್ತು,

**ಅಯಮಿಹ ಪ್ರಥಮೋ ಧಾಯಿ ಧಾತೃಭಿರ್ಹೋತಾ ಯಜಿಷ್ಠೋ ಅಧ್ವರೇಷ್ವೀಡ್ಯಃ ।** ಇತ್ಯಾದಿ ತೈತ್ತಿರೀಯ ಸಂಹಿತಾವಾಕ್ಯಗಳನ್ನುದಹರಿಸಿ (ಶ. ಬ್ರಾ. ೨-೩-೪-೧೪) ಮತ್ತು ತೈ. ಸಂ. (೧-೫-೫-೧).

**ದ್ವೇ ಅಗ್ನೇರ್ಜುಹೋತಿ । ದ್ವಿಪಾದ್ಯಜಮಾನೋ ಯಜಮಾನೋಽಗ್ನಿರ್ಯಾವಾನಗ್ನಿರ್ಯಾವತ್ಯಸ್ಯ ಮಾತ್ರಾ ತಾವತೈವೈತದ್ಯಜ್ಞಗ್ಂ ಸಗ್ಂಸ್ಥಾಪಯತೀಷ್ಟೋ ಯಜ್ಞೋ ಭೃಗುಭಿರಿಷ್ಟೋಽಗ್ನಿರಾಹುತಃ ಪಿಪರ್ತು ನ ಇತಿ ।**

(ಶ. ಬ್ರಾ. ೯-೫-೧-೩೧)

ಇತ್ಯಾದಿ ವಾಕ್ಯಗಳಿಂದ ಭೃಗುಗಳು ಅಗ್ನಿಯನ್ನು ಪೂಜಿಸಿ ಯಾಗಮಾಡಿದ ಕ್ರಮವೂ ವಿವರಿಸಲ್ಪಟ್ಟಿದೆ.

**ಪೃಥಿವ್ಯಾ ನಾಭಾ ಭುವನಸ್ಯ ಮಜ್ಮನಾ ಈರಿರೇ**—ಎಂಬ ಮಂತ್ರದಿಂದ ಭೃಗುಗಳು ಅಗ್ನಿಯನ್ನು ಸ್ಥಾಪಿಸಿದ ಕ್ರಮವು ಹೇಳಲ್ಪಟ್ಟಿದೆ. ಇಲ್ಲಿ ಪೃಥಿವ್ಯಾ ನಾಭಾ ಎಂಬುದಕ್ಕೆ ಉತ್ತರವೇದಿಯೆಂಬರ್ಥವನ್ನು ಮಾಡಿದೆ.

**ಉತ್ತರಂ ಪರಿಗ್ರಾಹಂ ಪರಿ ಗೃಹ್ಣಾತ್ಯೇತಾವತೀ ವೈ ಪೃಥಿವೀ ಯಾವತೀ ವೇದಿಸ್ತಸ್ಯಾ ಏತಾವತ ಏವ ।**

(ತೈ. ಸಂ. ೨-೬-೪-೩)

ಇತ್ಯಾದಿ ಸಂಹಿತಾವಾಕ್ಯಗಳಲ್ಲಿ ಪೃಥ್ವಿಯೇ ವೇದಿಯೆಂದು ಹೇಳಿರುವಂತೆ ಇಲ್ಲಿಯೂ ಅದೇ ರೀತಿ ಅರ್ಥಮಾಡಿದೆ. ಇಂತಹ ಪೃಥ್ವೀರೂಪವಾದ ವೇದಿಯಲ್ಲಿ ಸಕಲ ಭೂತಜಾತಗಳ ಶಕ್ತಿಯನ್ನೆಲ್ಲಾ ಕೂಡಿಸಿ ಭೃಗುಗಳು ಅಗ್ನಿಯನ್ನು ಸ್ಥಾಪಿಸಿದರು.

ಯದ್ವೇಽಸ್ಯೈತಮುತ್ರಾಹರಂತಿ । ಯಾನ್ವೈ ತಾನ್ತ್ಸಪ್ತ ಪುರುಷಾನೇಕಂ ಪುರುಷಮಕುರ್ವನ್ನಯ-
ಮೇವ ಸ ಯೋಽಯಮಗ್ನಿಶ್ಚೀಯತೇಽಥ ಯಾಮೇಷಾಂ ತಾಮೂರ್ಧ್ವಾಗ್ಂ ಶ್ರಿಯಗ್ಂ
ರಸಗ್ಂ ಸಮುದೌಹನ್ನೇಷ ಸ ಯಮೇತಮತ್ರಾಗ್ನಿಮಾಹರಂತಿ ತದ್ಯದೇತಮತ್ರಾಹರಂತಿ
ಯೈವೈತೇಷಾಗ್ಂ ಸಪ್ತಾನಾಂ ಪುರುಷಾಣಾಂ ಶ್ರೀರ್ಯೋ ರಸಸ್ತಮೇತದೂರ್ಧ್ವಗ್ಂ ಸಮುದ್ವ-
ಹಂತಿ ತದಸ್ಯೈತಚ್ಛಿರ ಆತ್ಮಾಯಮಗ್ನಿಶ್ಚಿತ ಆತ್ಮಾನಮೇವಾಸ್ಯೈತತ್ಸಂಸ್ಕೃತ್ಯ ಶಿರಃ ಪ್ರತಿ
ದಧಾತಿ ॥

(ಶ. ಬ್ರಾ. ೯-೨-೩-೫೧)

ಇತ್ಯಾದಿ ಮಂತ್ರಗಳಿಂದ ವೇದಿಯಲ್ಲಿ ಪ್ರತಿಷ್ಠಾಪಿತನಾದ ಅಗ್ನಿಯು ಸಮಸ್ತ ಭೂತಗಳನ್ನೂ ಪ್ರತಿಬಿಂಬಿಸತಕ್ಕ ಸಪ್ತ ಪುರುಷರ ಸತ್ತ್ವವೆಂದು ವಿವರಿಸಿರುವ ವಿಷಯವನ್ನು ಇಲ್ಲಿಯೂ ಸೂಚಿಸಿದೆ.

ವ್ಯಾಕರಣಪ್ರಕ್ರಿಯಾ

**ಈರಿರೇ**—ಈರ ಗತೌ ಪ್ರೇರಣೇ ಚ ಧಾತು. ಲಿಟ್ ಪ್ರಥಮಪುರುಷ ಬಹುವಚನದಲ್ಲಿ **ಲಿಟಸ್ತಝಯೋರೇಶಿರೇಚ್** ಎಂಬುದರಿಂದ ಇರೇ ಆದೇಶ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ವಿಶ್ವವೇದಸಮ್**—ವಿಶ್ವಂ ವೇದಃ ಯಸ್ಯ ಸಃ ವಿಶ್ವವೇದಾಃ ತಮ್ ವಿಶ್ವವೇದಸಮ್. ಬಹುವ್ರೀಹಿಯಲ್ಲಿ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ನಾಭಾ**—**ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ವಿಭಕ್ತಿಗೆ ಆಕಾರಾದೇಶ.

**ಮಜ್ಮನಾ**—ಟುಮಸ್ಜೋ ಶುದ್ಧೌ ಧಾತು. ಔಣಾದಿಕ ಮನಿ ಪ್ರತ್ಯಯ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ. ತೃತೀಯಾ ಏಕವಚನಾಂತರೂಪ.

**ಗೀರ್ಭಿಃ**—ಗೄ ಶಬ್ದೇ ಧಾತು. **ಕ್ವಿಪ್ ಚ** ಎಂಬುದರಿಂದ ಕ್ವಿಪ್ ಪ್ರತ್ಯಯ. **ೠತ ಇದ್ಧಾತೋಃ** (ಪಾ. ಸೂ. ೭-೧-೧೦೦) ಎಂಬುದರಿಂದ ಧಾತುವಿಗೆ ಇತ್ವ, ಗಿರ್ ಶಬ್ದವಾಗುತ್ತದೆ. ಭಿಸ್ ಪರವಾದಾಗ **ಹಲಿ ಚ** ಎಂಬುದರಿಂದ ಧಾತುವಿನ ಉಪಧೆಗೆ ದೀರ್ಘ.

**ಹಿನುಹಿ**—ಹಿ ಗತೌ ವೃದ್ಧೌ ಚ ಧಾತು. ಲೋಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪಿಗೆ ಹಿ ಆದೇಶ. **ಸ್ವಾದಿಭ್ಯ ಶ್ನುಃ** ಎಂಬುದರಿಂದ ಶ್ನು ವಿಕರಣ, **ಉತಶ್ಚ ಪ್ರತ್ಯಯಾಚ್ಛಂದಸಿ ವಾ ವಚನಮ್** (ಪಾ. ಸೂ. ೬-೪-೧೦೬-೧) ಎಂಬುದರಿಂದ ಹಿಗೆ ಲುಕ್ ಬರುವುದಿಲ್ಲ. ವಿಕರಣವು **ಸಾರ್ವಧಾತುಕಮಪಿತ್** ಎಂಬುದರಿಂದ ಙಿತ್ತಾಗುವುದರಿಂದ ಅದನ್ನು ನಿಮಿತ್ತೀಕರಿಸಿ ಧಾತುವಿಗೆ ಗುಣ ಬರುವುದಿಲ್ಲ. ಅತಿಙಂತದ ಪರದಲ್ಲಿರುವುದರಿಂದ ತಿಙಂತ ನಿಘಾತಸ್ವರ ಬರುತ್ತದೆ.

**ವಸ್ವಃ**— ವಸು ಶಬ್ದ. ಇದಕ್ಕೆ ಷಷ್ಠೀ ವಿಭಕ್ತಿ ಪರವಾದಾಗ **ಜಸಾದಿಷು ಛಂದಸಿ ವಾ ವಚನಮ್** ಎಂಬ ವಚನದಿಂದ ನುಮ್. ಗುಣಾದಿಗಳು ಬರುವುದಿಲ್ಲ. ಯಣಾದೇಶ.

**ರಾಜತಿ**—ರಾಜ ಧಾತುವು ಐಶ್ವರ್ಯ ಕ್ರಿಯಾವಾಚಿಯಾಗಿದೆ. ಕ್ಷಯತಿ ರಾಜತಿ (ನಿರು. ೨-೨೧-೪) ಎಂದು ಪಠಿತವಾಗಿದೆ. ಲಟ್ ಪ್ರಥಮಪುರುಷ ಏಕವಚನಾಂತರೂಪ. ಯಃ ಎಂದು ಯಚ್ಛಬ್ದಸಂಬಂಧವಿರುವುದರಿಂದ **ಯದ್ವೃತ್ತಾನ್ನಿತ್ಯಮ್** (ಪಾ. ಸೂ. ೮-೧-೬೬) ಎಂಬುದರಿಂದ ನಿಘಾತ ಪ್ರತಿಷೇಧ ಬರುತ್ತದೆ. ಶಪ್, ತಿಪ್ ಪಿತ್ತಾದುದರಿಂದ ಧಾತುಸ್ವರ ಉಳಿಯುತ್ತದೆ. ॥ ೪ ॥



ಸಂಹಿತಾಪಾಠಃ

ನ ಯೋ ವರಾಯ ಮರುತಾಮಿವ ಸ್ವನಃ ಸೇನೇವ ಸೃಷ್ಟಾ ದಿವ್ಯಾ ಯಥಾಶನಿಃ ।
ಅಗ್ನಿರ್ಜಂಭೈಸ್ತಿಗಿತೈರತ್ತಿ ಭರ್ವತಿ ಯೋಧೋ ನ ಶತ್ರೂನ್ತ್ಸ ವನಾ ನ್ಯೃಂಜತೇ ॥ ೫ ॥

ಪದಪಾಠಃ

ನ । ಯಃ । ವರಾಯ । ಮರುತಾಂಽಇವ । ಸ್ವನಃ । ಸೇನಾಽಇವ । ಸೃಷ್ಟಾ । ದಿವ್ಯಾ । ಯಥಾ । ಅಶನಿಃ । ಅಗ್ನಿಃ । ಜಂಭೈಃ । ತಿಗಿತೈಃ । ಅತ್ತಿ । ಭರ್ವತಿ । ಯೋಧಃ । ನ ಶತ್ರೂನ್ । ಸಃ । ವನಾ । ನಿ । ಋಂಜತೇ । ॥ ೫ ॥

ಸಾಯಣಭಾಷ್ಯಂ

ಯೋಽಗ್ನಿರ್ವರಾಯ ವರಣಾಯ ನಿಗ್ರಹಾಯ ನ ಶಕ್ಯೋ ನ ಭವತಿ । ತತ್ರ ದೃಷ್ಟಾಂತತ್ರಯ-ಮುಚ್ಯತೇ । ಮರುತಾಂ ಸ್ವನ ಇವ । ಸ ಯಥಾಗ್ರಾಹ್ಯಸ್ತದ್ವತ್ । ತಥಾ ಸೃಷ್ಟಾ ವೈರಿಕ್ಷಯಾರ್ಥಂ ಪ್ರಬಲೇನಾತಿಸೃಷ್ಟಾ ಸೇನೇವ । ಸಾ ಯಥಾನ್ಯೈರನಿರೋಧ್ಯಾ ತದ್ವತ್ । ತಥಾ ದಿವ್ಯಾ ದಿವಿ ಭವಾಶನಿ-ರ್ಯಥಾ ಪತಂತ್ಯೇವ ನ ನಿವಾರ್ಯತೇ ತದ್ವತ್ । ಈದೃಕ್ ಸಾಮರ್ಥ್ಯಮಸ್ತೀತಿ ದರ್ಶಯತಿ । ಅಯ-ಮಗ್ನಿಸ್ತಿಗಿತೈರ್ನಿಶಿತೈಸ್ತೀಕ್ಷ್ಣೀಭೂತೈಃ ॥ ಅಂತ್ಯವಿಕಾರಶ್ಛಾಂದಸಃ ॥ ಜಂಭೈರ್ದಂತೈರ್ದಂತಸ್ಥಾನೀಯಾಭಿ-ರ್ಜ್ವಾಲಾಭಿರತ್ತಿ । ಅಸ್ಮದ್ವಿರೋಧಿನೋ ಭಕ್ಷಯತಿ । ತಥಾ ಭರ್ವತಿ । ಹಿನಸ್ತಿ ॥ ಭರ್ವ ಹಿಂಸಾಯಾಂ ॥ ಯಾಸ್ಕಸ್ತ್ವಾಹ ಭರ್ವತಿರತ್ತಿಕರ್ಮೇತಿ । ನಿ ೯-೨೩ । ಯದ್ಯಪ್ಯತ್ತಿಭರ್ವತ್ಯೋರದನಮೇವಾರ್ಥಃ ತಥಾಪಿ ತದವಾಂತರಭೇದೋಽವಗಂತವ್ಯಃ । ತತ್ರ ದೃಷ್ಟಾಂತಃ । ಯೋಧೋ ನ ಸಂಪ್ರಹರ್ತಾ ಶೂರ

**ಇವ । ಸ ಯಥಾ ಶತ್ರೂನ್ಭರ್ವತಿ ಭಕ್ಷಯತಿ ತದ್ವತ್ । ಕಿಂಚ ಸೋಽಗ್ನಿರ್ವನಾ ವನಾನಿ ವೃಕ್ಷಾದಿಸಮೂಹಾನ್ ನ್ಯೃಂಜತೇ । ನಿತರಾಂ ಪ್ರಸಾಧಯತಿ । ದಹತೀತ್ಯರ್ಥಃ । ಋಂಜತಿಃ ಪ್ರಸಾಧನಕರ್ಮೇತಿ ಯಾಸ್ಕಃ ॥**

ಪ್ರತಿಪದಾರ್ಥ

**ಯಃ**—ಯಾವ ಅದೇ ಅಗ್ನಿಯು । **ಮರುತಾಂ**—ಮರುತ್ತುಗಳ । **ಸ್ವನಃ ಇವ**—ನಿರೋಧಿಸಲಸಾಧ್ಯವಾದ ಗರ್ಜನೆಯಂತೆಯೂ । **ಸೃಷ್ಟಾ**—(ಶತ್ರು ನಾಶಕ್ಕಾಗಿ) ಸಿದ್ಧವಾದ । **ಸೇನಾ ಇವ**—ಪ್ರಬಲವಾದ ಸೇನೆಯಂತೆಯೂ । **ದಿವ್ಯಾ**—ದ್ಯುಲೋಕದಲ್ಲಿ ಉತ್ಪನ್ನವಾಗುವ । **ಅಶನಿಃ ಯಥಾ**—ತಡೆಯಲಸಾಧ್ಯವಾದ ಸಿಡಿಲಿನಂತೆಯೂ । **ವರಾಯ ನ**—ನಿರೋಧಿಸಲಸಾಧ್ಯವಾದುದು. (ಅಪ್ರತಿಹತವಾದ ಪ್ರಸಾರವುಳ್ಳದ್ದು) । **ಅಗ್ನಿಃ**—ಈ ಅಗ್ನಿಯು । **ತಿಗಿತೈಃ**—ತೀಕ್ಷ್ಣವಾದ । **ಜಂಭೈಃ**—ದಂತಗಳಂತಿರುವ ಜ್ವಾಲೆಗಳಿಂದ । **ಯೋಧಃ**—ಪರಾಕ್ರಮಿಯಾದ ಯೋಧನು । **ಶತ್ರೂನ್ ನ**—ಶತ್ರುಗಳನ್ನು ಹಿಂಸಿಸಿ ನಾಶಪಡಿಸುವಂತೆ । **ಅತ್ತಿ**—(ನಮ್ಮ ವಿರೋಧಿಗಳನ್ನು) ಭಕ್ಷಿಸುತ್ತದೆ । **ಭರ್ವತಿ**—ಹಿಂಸಿಸಿ ನಾಶಪಡಿಸುತ್ತದೆ. । (ಮತ್ತು) **ಸಃ**—ಅದೇ ಅಗ್ನಿಯು । **ವನಾ**—ವನದ ವೃಕ್ಷಾದಿಗಳನ್ನು । **ನ್ಯೃಂಜತೇ**—ಸಂಪೂರ್ಣವಾಗಿ ದಹಿಸುತ್ತದೆ

ಭಾವಾರ್ಥ

ಮರುತ್ತುಗಳ ಗರ್ಜನೆಯು ಯಾವ ರೀತಿ ನಿರೋಧಿಸಲಸಾಧ್ಯವೋ, ಶತ್ರುನಾಶಕ್ಕಾಗಿ ಸಿದ್ಧವಾಗಿರುವ ಪ್ರಬಲವಾದ ಸೇನೆಯು ಹೇಗೆ ದುರ್ದಮ್ಯವೋ, ಮತ್ತು ದ್ಯುಲೋಕದಲ್ಲಿ ಉತ್ಪನ್ನವಾಗುವ ಸಿಡಿಲು ಯಾವ ರೀತಿ ತಡೆಯಲಸಾಧ್ಯವೋ ಅದರಂತೆ ಈ ಅಗ್ನಿಯ ಪ್ರಸರಣವೂ ಸಹ ಅಪ್ರತಿಹತವಾದುದು. ಪರಾಕ್ರಮಿಯಾದ ಯೋಧನು ಶತ್ರುಗಳನ್ನು ಹಿಂಸಿಸಿ ನಾಶಪಡಿಸುವಂತೆ ಈ ಅಗ್ನಿಯು ತನ್ನ ತೀಕ್ಷ್ಣವಾದ ದಂತಗಳಂತಿರುವ ಜ್ವಾಲೆಗಳಿಂದ ನಮ್ಮ ವಿರೋಧಿಗಳನ್ನು ಹಿಂಸಿಸಿ ನಾಶಪಡಿಸುತ್ತಾನೆ. ಮತ್ತು ವನದ ವೃಕ್ಷಾದಿಗಳನ್ನು ಸಂಪೂರ್ಣವಾಗಿ ದಹಿಸುತ್ತಾನೆ.

English Translation

Agni, who, like the roaring of the winds, like a victorious host, like the thunderbolt in heaven, is not to be arrested, devours and destroys (our foes) with sharpened teeth, and, as a warrior (annihilates his enemies) he, (Agni), lays waste the woods.

ವಿಶೇಷವಿಷಯಗಳು

ಈ ಋಕ್ಕಿನಲ್ಲಿ, ಅಪ್ರತಿಹತವಾಗಿ ಪ್ರಸರಿಸುತ್ತಿರುವ ಅಗ್ನಿಜ್ವಾಲೆಯನ್ನು ಮರುತ್ತುಗಳ ಗರ್ಜನೆಗೂ ಪ್ರಬಲವಾದ ಸೇನೆಯ ವೇಗಕ್ಕೂ, ನಿರೋಧಿಸಲಶಕ್ಯವಾದ ಸಿಡಿಲಿಗೂ ಹೋಲಿಸಿದೆ. ಮತ್ತು ಪರಾಕ್ರಮಿಯಾದ ಯೋಧನು ಶತ್ರುಗಳನ್ನು ಹಿಂಸಿಸಿ ನಾಶಪಡಿಸುವಂತೆ ಅಗ್ನಿಯೂ ವೃಕ್ಷಾದಿಗಳನ್ನು ಭಕ್ಷಿಸುತ್ತದೆ. ಇದು ಒಂದು ವಿಧದಲ್ಲಿ ಭಯಂಕರವಾದುದೂ, ಇನ್ನೊಂದು ವಿಧದಲ್ಲಿ ಆಕರ್ಷಕವೂ ಆದ ವರ್ಣನೆಯಾಗಿದೆ. ಇದೇ ವರ್ಣನೆಯನ್ನು ತೈತ್ತಿರೀಯ ಸಂಹಿತೆಯಲ್ಲಿಯೂ ಆಕರ್ಷಕವಾಗಿರುವಂತೆ ಹೇಳಿರುವುದನ್ನು ಗಮನಿಸಬಹುದು.

ತವ ಭ್ರಮಾಸ ಆಶುಯಾಪತಂತ್ಯನು ಸ್ಪೃಶ ಧೃಷತಾ ಶೋಶುಚಾನಃ । ತಪೂಗ್ಂಷ್ಯಗ್ನೇ ಜುಹ್ವಾ ಪತಂಗಾನಸಂದಿತೋ ವಿಸೃಜ ವಿಷ್ವಗುಲ್ಕಾಃ ।

(ತೈ. ಸಂ. ೧-೨-೧೩)

ಋತಾವಾ ಧರ್ತಾ ಕೃಷ್ಟೀನಾಮುತ ಮಧ್ಯ ಇದ್ಧಃ । ಸಾಧ್ವೀಮಕರ್ದೇವವೀತಿಂ ನೋ ಅದ್ಯ ಯಜ್ಞಸ್ಯ ಜಿಹ್ವಾಮವಿದಾಮ ಗುಹ್ಯಾಂ । ಸ ಆಯುರಾಗಾತ್ಸುರಭಿರ್ವಸಾನೋ ಭದ್ರಾಮಕರ್ದೇವಹೂತಿಂ ನೋ ಅದ್ಯ । ಅಕ್ರಂದದಗ್ನಿ ಸ್ತನಯನ್ನಿವ ದ್ಯೌಃ ಕ್ಷಾಮಾ ರೇರಿಹದ್ವೀರುಧಸ್ಸಮಂಜನ್ । ಸದ್ಯೋ ಜಜ್ಞಾನೋ ವಿ ಹೀಮಿದ್ಧೋ ಅಖ್ಯದಾ ರೋದಸೀ ಭಾನುನಾ ಭಾತ್ಯಂತಃ ।

(ತೈ. ಸಂ. ೧-೩-೧೪-೨)

ಸಶ್ವಿತಾನಸ್ತನ್ಯತೂರೋಚನಸ್ಥಾ ಅಜರೇಭಿರ್ನಾನದದ್ಭಿರ್ಯವಿಷ್ಠಃ । ಯಃ ಪಾವಕಃ ಪುರುತಮಃ ಪುರೂಣಿ ಪೃಥೂನ್ಯಗ್ನಿರನುಯಾತಿ ಭರ್ವನ್ ।

(ತೈ. ಸಂ. ೧-೩-೧೪-೪)

ಇತ್ಯಾದಿ ವಾಕ್ಯಗಳಲ್ಲಿ ಅಗ್ನಿಯು ಅಂತರಿಕ್ಷದ ಮೇಘದ ಗರ್ಜನೆಯಂತೆ ಶಬ್ದಮಾಡುತ್ತಲೂ, ಶುಭ್ರವಾದ ವಸ್ತ್ರದಂತಿರುವ ಜ್ವಾಲೆಯನ್ನು ಪ್ರಸರಿಸುತ್ತಲೂ, ದಾರಿಯಲ್ಲಿ ಸಿಕ್ಕಿದ ವೃಕ್ಷಗಳನ್ನೂ, ಲತೆಗಳನ್ನೂ ಭಕ್ಷಿಸುತ್ತಲೂ, ಅಂತರಿಕ್ಷವನ್ನೆಲ್ಲಾ ತನ್ನ ಕಂಪನರೂಪವಾದ ಜ್ವಾಲೆಗಳಿಂದ ವ್ಯಾಪಿಸುತ್ತಲೂ ಪ್ರಸರಿಸುತ್ತಾನೆಂಬ ವರ್ಣನೆಯು ಪ್ರಕೃತವಾದ ಋಕ್ಕಿನಲ್ಲಿ ವರ್ಣಿಸಿರುವಂತೆಯೇ ಆಕರ್ಷಕವೂ ಅದೇ ಕಾಲದಲ್ಲಿ ಭಯಂಕರವೂ ಆದ ಅಗ್ನಿಯ ಸ್ವರೂಪ ಪವನ್ನು ತಿಳಿಸುತ್ತದೆ.

**ವರಾಯ— ವರಣಾಯ, ನಿಗ್ರಹಾಯ** (ನ) ತಡೆಯಲು, ನಿರೋಧಿಸಲು ಎಂದರ್ಥ. ಅಪೇಕ್ಷಪಟ್ಟು, ಅರಿಸು ಎಂದರ್ಥವನ್ನು ಕೊಡುವ **ವೃಞ್** (ವರಣೇ) ಧಾತುವಿನಿಂದಲೂ, ತಡೆಗಟ್ಟು, ಮರೆಮಾಡು, ಎಂಬರ್ಥವನ್ನು ಕೊಡುವ **ವೃಞ್** (ಆವರಣೇ) ಎಂಬ ಧಾತುವಿನಿಂದಲೂ ಈ ಪದವು ನಿಷ್ಪನ್ನವಾಗಿ ಎರಡು ಅರ್ಥಗಳಲ್ಲಿಯೂ ಸಹ ಉಪಯೋಗಿಸಲ್ಪಟ್ಟಿದೆ.

ಯಸ್ಮಾ ಚಕಾರ ಸ ಕುಹ ಸ್ವಿದಿಂದ್ರಃ ಕಮಾ ಜನಂ ಚರತಿ ಕಾಸು ವಿಕ್ಷು ।
ಕಸ್ತೇ ಯಜ್ಞೋ ಮನಸೇ ಶಂ ವರಾಯ ಕೋ ಅರ್ಕ ಇಂದ್ರ ಕತಮಃ ಸ ಹೋತಾ ॥

(ಋ. ಸಂ. ೬-೨೧-೪)

ಎಂಬ ಋಕ್ಕಿನಲ್ಲಿ **ವರಾಯ ತವ ವರಣಾಯ ಕಃ ಕೀದೃಶಃ ಅರ್ಕಃ ಮಂತ್ರಃ ಸಮರ್ಥೋ ಭವತಿ** । ನಿನ್ನನ್ನು ವರಿಸಿ ನೀನು ಒಲಿಯುವಂತೆ ಮಾಡುವುದಕ್ಕೆ ಯಾವ ಮಂತ್ರವು ಸಮರ್ಥವಾದುದು ಎಂದು **ವೃಞ್** ಧಾತುವು ಅರಿಸು, ವರಿಸು ಎಂಬರ್ಥವನ್ನು ಕೊಡುತ್ತದೆ. ಇದರಂತೆಯೇ ೬-೪೪-೨೧ನೇ ಋಕ್ಕಿನಲ್ಲಿ ವರಾಯ ಎಂದರೆ ಶ್ರೇಷ್ಠಾಯ ಶ್ರೇಷ್ಠವಾದ, ಅತ್ಯುತ್ತಮವಾದ ಎಂದರ್ಥವಾಗುತ್ತದೆ.

ಇಷಾ ಮಂದಸ್ವಾದು ತೇಽರಂ ವರಾಯ ಮನ್ಯವೇ । ಭುವತ್ತ ಇಂದ್ರ ಶಂ ಹೃದೇ ॥

(ಋ. ಸಂ. ೮-೮೨-೩)

ಇತ್ಯಾದಿ ಋಕ್ಕುಗಳಲ್ಲಿ ವರಾಯ ಶತ್ರುನಿವಾರಕಾಯ ಮನ್ಯವೇ ಕ್ರೋಧಾಯ ಎಂದು ನಿವಾರಕವಾದ, ತಡೆಗಟ್ಟುವ ಎಂಬರ್ಥವನ್ನು ಕೊಡುತ್ತದೆ. ಅದರಂತೆ ಪ್ರಕೃತವಾದ ಋಕ್ಕಿನಲ್ಲಿಯೂ ಸಹ ನಿವಾರಿಸಲು, ತಡೆಗಟ್ಟಲು (ಅಸಾಧ್ಯವಾದುದು) ಎಂಬರ್ಥವನ್ನು ಕೊಡುತ್ತದೆ, **ಅಶನಿಃ ಯಥಾ**—ಸಿಡಲಿನ ವೇಗವು ತಡೆಯಲು ಯಾರಿಂದಲೂ ಹೇಗೆ ಸಾಧ್ಯವಿಲ್ಲವೋ, ಹೇಗೆ ಸಿಡಿಲು ಹೊಡೆದೇ ತೀರಬೇಕೋ ಅದರಂತೆ ಅಗ್ನಿಯ ಪ್ರಸರವೆಂದು ಅವರ ಶಕ್ತಿಯನ್ನು ತೋರಿಸಿದೆ.

ತಿಗಿತೈಃ—ನಿಶಿತೈಸ್ತೀಕ್ಷ್ಣೈಃ। ಬಹಳ ಹರಿತವಾದ ಎಂದರ್ಥ. ಸಾಧಾರಣವಾಗಿ ಈ ಪದವು ಆಯುಧಕ್ಕೆ ವಿಶೇಷಣವಾಗಿರುತ್ತದೆ. ಉದಾಹರಣೆಗೆ—

**ಯೋ ನಃ ಸನುತ್ಯ ಉತ ವಾ ಜಿಘತ್ನುರಭಿಖ್ಯಾಯ ತಂ ತಿಗಿತೇನ ವಿಧ್ಯ।**
**ಬೃಹಸ್ಪತ ಆಯುಧೈರ್ಜೇಷಿ ಶತ್ರೂನ್ದ್ರುಹೇ ರೀಷಂತಂ ಪರಿ ಧೇಹಿ ರಾಜನ್ ॥**
(ಋ. ಸಂ. ೨-೩೦-೯)

ಎಂಬ ಋಕ್ಕಿನಲ್ಲಿ ತೀಕ್ಷ್ಣೇನ ಆಯುಧೇನ ಎಂದು ಆಯುಧದ ಸ್ವರೂಪವನ್ನು ತಿಳಿಸುತ್ತದೆ. ಪ್ರಕೃತವಾದ ಋಕ್ಕಿನಲ್ಲಿಯೂ **ಜಂಭೈಃ** ಎಂಬ ಪದಕ್ಕೆ ವಿಶೇಷಣವಾಗಿರುವುದರಿಂದಲೂ, ಕೋರೆ ಹಲ್ಲು ಆಯುಧದಂತೆ ತೀಕ್ಷ್ಣವಾಗಿರುವುದರಿಂದಲೇ ಇಂತಹ ಕೋರೆ ಹಲ್ಲುಗಳಂತೆ ತೀಕ್ಷ್ಣವಾಗಿರುವುದೆಂದು ಅಗ್ನಿಯ ಜ್ವಾಲೆಗಳನ್ನು ಇವಕ್ಕೆ ಹೋಲಿಸಿರುವುದರಿಂದಲೂ ಈ ವಿಶೇಷಣವು ಉಚಿತವಾಗಿದೆ.

**ಭರ್ವತಿ**—ಆವಯತಿ, ಭರ್ವತಿ ಇತ್ಯಾದಿ ಅತ್ತಿಕರ್ಮನಾಮಗಳಲ್ಲಿ ಪಠಿತವಾಗಿದೆ. (ನಿ. ೩-೯). ಭಕ್ಷಿಸು ಎಂದರ್ಥವಾಗುತ್ತದೆ. ಇದೇ ಅರ್ಥವನ್ನು ಕೊಡುವಂತೆ **ಪೃಥೂನ್ಯಗ್ನಿರನುಯಾತಿ ಭರ್ವನ್** ಎಂದು ಮೇಲೆ ಉದಹರಿಸಿರುವ ತೈತ್ತಿರೀಯಸಂಹಿತಾವಾಕ್ಯದಲ್ಲೂ ಸಹ (೧-೩-೧೪-೪) **ಭರ್ವನ್** ಎಂಬ ಪದವನ್ನು ಪ್ರಯೋಗಿಸಿದೆ. ಸಕಲವಾದ ಲತೆಗಳನ್ನು, ವೃಕ್ಷಗಳನ್ನು ಅಗ್ನಿಯ ಜ್ವಾಲೆಯು ಭಕ್ಷಿಸುತ್ತದೆ ಎಂದು ತಾತ್ಪರ್ಯ.

ವ್ಯಾಕರಣಪ್ರಕ್ರಿಯಾ

**ವರಾಯ**—ವ್ರಿಯತೇ ಇತಿ ವರಃ ವೃಞ್ ವರಣೇ ಧಾತು. **ಗ್ರಹವೃದೃನಿಶ್ಚಿಗಮಶ್ಚ** (ಪಾ. ಸೂ. ೩-೩-೫೮) ಎಂಬುದರಿಂದ ಅಪ್ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿನ ಇಕಿಗೆ ಗುಣ. ರಪರವಾಗಿ ಬರುತ್ತದೆ ಪ್ರತ್ಯಯ ಪಿತ್ತಾದುದರಿಂದ ಧಾತುಸ್ವರ ಉಳಿಯುತ್ತದೆ. ಚತುರ್ಥೀ ಏಕವಚನಾಂತರೂಪ.

**ಸೃಷ್ಟಾ**—ಸೃಜ ವಿಸರ್ಗೇ ಧಾತು. ಕರ್ಮಣಿಯಲ್ಲಿ **ನಿಷ್ಠಾ** ಎಂಬುದರಿಂದ ಕ್ತ ಪ್ರತ್ಯಯ. **ವ್ರಶ್ಚಭ್ರಸ್ಜ**— ಎಂಬುದರಿಂದ ಧಾತು ಜಕಾರಕ್ಕೆ ಷತ್ವ. ಷ್ಟುತ್ವದಿಂದ ಪ್ರತ್ಯಯ ತಕಾರಕ್ಕೆ ಟತ್ವ. ಸ್ತ್ರೀತ್ವ ವಿವಕ್ಷಾಮಾಡಿದಾಗ ಅದಂತನಿಬಂಧನವಾಗಿ ಟಾಪ್.

ದಿವ್ಯಾ—ದಿವಿ ಭವಾ ದಿವ್ಯಾ. ದಂಡಾದಿಗಣಪಠಿತವಾದುದರಿಂದ (ಪಾ. ಸೂ. ೫-೧-೬೬) ಯ ಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಸ್ತ್ರೀತ್ವದಲ್ಲಿ ಅದಂತನಿಬಂಧನವಾಗಿ ಟಾಪ್.

ಅಶನಿಃ—ಅಶ ಭೋಜನೇ ಧಾತು. **ಅರ್ತಿಸೃಧೃ**—(ಉ. ಸೂ. ೨–೨೧೯) ಎಂಬುದರಿಂದ ಅನಿ ಪ್ರತ್ಯಯ. ಪ್ರತ್ಯಯದ ಆದ್ಯುದಾತ್ತಸ್ವರದಿಂದ ಮಧ್ಯೋದಾತ್ತವಾದ ಪದವಾಗುತ್ತದೆ.

**ತಿಗಿತೈಃ**—ತಿಜ ನಿಶಾನೇ (ತೀಕ್ಷ್ಣೀಕರಣ)ಧಾತು. ಕ್ತ ಪ್ರತ್ಯಯ. ಛಾಂದಸವಾಗಿ ಧಾತುವಿನ ಅಂತ್ಯಕ್ಕೆ ಕುತ್ವ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ತೃತೀಯಾ ಬಹುವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಅತ್ತಿ**—ಅದ ಭಕ್ಷಣೇ ಧಾತು. ಲಟ್ ಪ್ರಥಮಪುರುಷ ಏಕವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಭರ್ವತಿ**—ಭರ್ವ ಹಿಂಸಾಯಾಂ ಧಾತು. ಯಾಸ್ಕರೂ— ಭರ್ವತಿರತ್ತಿಕರ್ಮಾ (ನಿರು. ೯–೨೩) ಎಂದು ಹೇಳಿರುತ್ತಾರೆ. ಲಟ್ ಪ್ರಥಮಪುರುಷ ಏಕವಚನಾಂತರೂಪ. ತಿಙಂತದ ಪರದಲ್ಲಿ ಬಂದುದರಿಂದ ನಿಘಾತಸ್ವರ ಬರುವುದಿಲ್ಲ. ಶಪ್ ತಿಪ್ ಪಿತ್ತಾದುದರಿಂದ ಧಾತುಸ್ವರ ಉಳಿಯುತ್ತದೆ.

**ಯೋಧಃ**—ಯುಧ ಸಂಪ್ರಹಾರೇ ಧಾತು. **ನಂದಿಗ್ರಹಪಚಾದಿ**—(ಪಾ. ಸೂ. ೩–೧-೧೩೪) ಎಂಬುದರಿಂದ ಕರ್ತರಿಯಲ್ಲಿ ಅಚ್ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿನ ಲಘೂಪಧೆಗೆ ಗುಣ. ಚಿತಃ ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ವನಾ**—ಶಸಿಗೆ ಶಿ ಆದೇಶ ಬಂದು ರೂಪವಾದಾಗ **ಶೇಶ್ಛಂದಸಿ ಬಹುಲಮ್**— (ಪಾ. ಸೂ. ೬–೧–೭೦) ಎಂಬುದರಿಂದ ಶಿಗೆ ಲೋಪ.

**ಋಞ್ಜತೇ**— ಋಞ್ಜ ಧಾತುವು ಪ್ರಸಾಧನಕ್ರಿಯಾವಾಚಿಯಾಗಿ ಪ್ರಯುಕ್ತವಾಗಿದೆ. ಲಟ್ ಪ್ರಥಮಪುರುಷಏಕವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೫ ॥

———:o:———

ಸಂಹಿತಾಪಾಠಃ

ಕುವಿನ್ನೋ ಅಗ್ನಿರುಚಥಸ್ಯ ವೀರಸದ್ವಸುಷ್ಕುವಿದ್ವಸುಭಿಃ ಕಾಮಮಾವರತ್ ।
ಚೋದಃ ಕುವಿತ್ತುತುಜ್ಯಾತ್ಸಾತಯೇ ಧಿಯಃ ಶುಚಿಪ್ರತೀಕಂ ತಮಯಾ
ಧಿಯಾ ಗೃಣೇ ॥ ೬ ॥

ಪದಪಾಠಃ

ಕುವಿತ್ । ನಃ । ಅಗ್ನಿಃ । ಉಚಥಸ್ಯ । ವೀಃ । ಅಸತ್ । ವಸುಃ । ಕುವಿತ್ । ವಸುಽಭಿಃ । ಕಾಮಂ ।
ಆಽವರತ್ ।

ಚೋದಃ । ಕುವಿತ್ । ತುತುಜ್ಯಾತ್ । ಸಾತಯೇ । ಧಿಯಃ । ಶುಚಿऽಪ್ರತೀಕಂ । ತಂ । ಅಯಾ । ಧಿಯಾ ।
ಗೃಣೇ ॥ ೬ ॥

ಸಾಯಣಭಾಷ್ಯಂ

ಅಯಮಗ್ನಿರ್ನೋಽಸ್ಮಾಕಮುಚಥಸ್ಯೋಕ್ಥಸ್ಯ ಸ್ತೋತ್ರಸ್ಯ ಕುವಿದ್ಬಹುವಾರಂ ವೇಃ ಕಾಮಯಿತಾಸತ್ । ಭವತು ॥ ಅಸ್ತೇರ್ಲೇಟ್ಯಡಾಗಮಃ ॥ ಯದ್ವಾ । ಉಚಥಸ್ಯೈತನ್ನಾಮಕಸ್ಯ ಮಹರ್ಷೇರ್ಗೋತ್ರಪ್ರಭವಸ್ಯ ನ ಇತಿ ಸಂಬಂಧಃ । ತಥಾ ವಸುರ್ವಾಸಯಿತಾ ಸರ್ವೇಷಾಂ ವಸುಸ್ಥಾನೀಯೋ ವಾ ವಸುಭಿರ್ವಾಸಯಿತೃಭಿರ್ಧನೈಃ ಕಾಮಮತ್ಯರ್ಥಮಭಿಮತಂ ವಾ ಕುವಿದತಿಪ್ರಭೂತಮಾವರತ್ । ಆವೃಣೋತು । ಅಭಿಮತಪ್ರದಾನೇನ ಕಾಮಂ ನಿವರ್ತಯತ್ವಿತ್ಯರ್ಥಃ ॥ ವೃಣೋತೇರ್ಲೇಟ್ಯಡಾಗಮಃ । ಛಾಂದಸೋ ವಿಕರಣಸ್ಯ ಲುಕ್ ॥ ಅಯಮಗ್ನಿಶ್ಚೋದೋಽಸ್ಮಾಕಂ ಕರ್ಮಸು ಪ್ರೇರಕಃ ಸನ್ ಧಿಯಃ ಕರ್ಮಾಣಿ ಸಾತಯೇ ಲಾಭಾಯ ಕುವಿದ್ಬಹು ತುತುಜ್ಯಾತ್ । ತ್ವರಯತು । ಪ್ರೇರಯತ್ವಿತ್ಯರ್ಥಃ ॥ ತುಜಿಃ ಪ್ರೇರಣಾರ್ಥಃ । ಛಾಂದಸಃ ಶಪಃ ಶ್ಲುಃ ॥ ಶುಚಿಪ್ರತೀಕಂ ಶೋಭನಾವಯವಂ ಶೋಭನಜ್ವಾಲಂ ತಮಗ್ನಿಮಯಾ ಧಿಯಾನಯಾ ಸ್ತುತಿರೂಪಯಾ ಪ್ರಜ್ಞಯಾ ಗೃಣೇ । ಉಚ್ಚಾರಯಾಮಿ । ಸ್ತೌಮೀತ್ಯರ್ಥಃ ॥

ಪ್ರತಿಪದಾರ್ಥ

**ಅಗ್ನಿಃ**—ಅಗ್ನಿಯು । **ನಃ** – ನಮ್ಮ । **ಉಚಥಸ್ಯ**—ಸ್ತೋತ್ರವನ್ನು । **ಕುವಿತ್**—ಯಾವಾಗಲೂ । **ವೇಃ**—ಅಪೇಕ್ಷಿಸುವವನಾಗಿ । **ಅಸತ್**—ಆಗಲಿ । **ವಸುಃ**— ಧನದಾತನಾದ ಅಥವಾ (ಸಕಲರಿಗೂ) ವಾಸಸ್ಥಾನವಾಗಿರುವ ಅಗ್ನಿಯು । **ವಸುಭಿಃ**—ಧನಗಳಿಂದ । **ಕಾಮಂ**—ನಮ್ಮ ಇಷ್ಟಾರ್ಥವನ್ನು । **ಕುವಿತ್**—ಅತ್ಯಧಿಕವಾಗಿ । **ಆವರತ್**— ತುಂಬಿಸಿ ತೃಪ್ತಿಪಡಿಸಲಿ । **ಚೋದಃ**— (ನಮ್ಮ ಕರ್ಮಗಳಲ್ಲಿ ನಮಗೆ) ಪ್ರೇರಕನಾಗಿ । **ಧಿಯಃ**—ನಮ್ಮ ಯಜ್ಞಕರ್ಮಗಳನ್ನು (ನೆರವೇರಿಸು)। **ಸಾತಯೇ**—ಫಲಲಾಭಕ್ಕಾಗಿ । **ಕುವಿತ್**—ಅತ್ಯಧಿಕವಾಗಿ । **ತುತುಜ್ಯಾತ್**—ಪ್ರೇರಿಸಿ ನೆರವೇರುವಂತೆ ಮಾಡಲಿ । **ಶುಚಿಪ್ರತೀಕಂ**— ಪ್ರಕಾಶಮಾನವಾದ ಜ್ವಾಲೆಗಳುಳ್ಳ । **ತಂ**—ಅಗ್ನಿಯನ್ನು । **ಅಯಾ ಧಿಯಾ**—ಈ ಸ್ತುತಿರೂಪವಾದ(ಧ್ಯಾನದಿಂದ)ಪ್ರಜ್ಞೆಯಿಂದ । **ಗೃಣೇ**—ಸ್ತುತಿಸುತ್ತೇನೆ.

ಭಾವಾರ್ಥ

ಅಗ್ನಿಯು ನಮ್ಮ ಸ್ತೋತ್ರಗಳನ್ನು ಯಾವಾಗಲೂ ಅಪೇಕ್ಷಿಸಲಿ. ಧನದಾತನಾದ ಅಗ್ನಿಯು ಸಕಲಧನಗಳಿಂದಲೂ ನಮ್ಮ ಇಷ್ಟಾರ್ಥವನ್ನು ಅತ್ಯಧಿಕವಾಗಿ ತುಂಬಿಸಿ ತೃಪ್ತಿಪಡಿಸಲಿ. ನಮ್ಮ ಕರ್ಮಗಳಲ್ಲಿ ನಮಗೆ ಪ್ರೇರಕನಾಗಿ ಯಜ್ಞಫಲಕ್ಕಾಗಿ ನಮಗೆ ಯಜ್ಞವನ್ನು ನೆರವೇರಿಸುವಂತೆ ಪ್ರೇರಿಸಲಿ. ಪ್ರಕಾಶಮಾನವಾದ ಜ್ವಾಲೆಗಳುಳ್ಳ ಅಗ್ನಿಯನ್ನು ಈ ಸ್ತುತಿರೂಪವಾದ ಧ್ಯಾನದಿಂದ ನಾನು ಸ್ತುತಿಸುತ್ತೇನೆ.

## English Translation

May Agni be ever desirous of our praise ; may the giver of wealth satisfy our utmost expectation with riches ; may the inspirer (of our devotion)

hasten our rites fruition. I glorify him, the radiant-limbed (Agni), with this laudation.

ವಿಶೇಷವಿಷಯಗಳು

**ಉಚಥಸ್ಯ—ಉಕ್ಥಸ್ಯ ಸ್ತೋತ್ರಸ್ಯ। ಯದ್ವಾ ಏತನ್ನಾಮಕಸ್ಯ ಮಹರ್ಷೇರ್ಗೋತ್ರಪ್ರಭವಸ್ಯ ನಃ।** ಸ್ತೋತ್ರದ ಎಂದಾಗಲಿ ಅಥವಾ **ಉಚಥ**ನೆಂಬ ಮಹರ್ಷಿಯ ವಂಶದಲ್ಲಿ ಹುಟ್ಟಿದ ನಮ್ಮ ಎಂದಾಗಲಿ ಅರ್ಥವಾಗುವುದೆಂದು ಸಾಯಣರು ವಿವರಿಸಿದ್ದಾರೆ. ಇಲ್ಲಿ ಮೊದಲನೆಯ ಅರ್ಥವೇ ಹೆಚ್ಚು ಹೊಂದಿಕೊಳ್ಳುವುದು.

**ಕುವಿತ್**—ಈ ಪದವು ಈ ಋಕ್ಕಿನಲ್ಲಿಯೇ ಪುನರಾವರ್ತಿತವಾಗಿ ಎರಡು ಅರ್ಥಗಳಲ್ಲಿ ಉಪಯೋಗಿಸಲ್ಪಟ್ಟಿದೆ. ಮೊದಲನೆಯ ಪದಕ್ಕೆ **ಬಹುವಾರಂ** ಅನೇಕವೇಳೆ ಎಂದರೆ ಯಾವಾಗಲೂ ಎಂದೂ, ಎರಡನೆಯ ಪದಕ್ಕೆ ಅತಿಪ್ರಭೂತಂ ಎಂದೂ ಅರ್ಥಮಾಡಿದ್ದಾರೆ. ಮೂರನೆಯ ಪದಕ್ಕೂ ಪ್ರಭೂತವೆಂದೇ ಅರ್ಥವಾಗುತ್ತದೆ.

ನಿರುಕ್ತಕಾರರು **ಕುವಿತ್** ಪದವನ್ನು **ಬಹು**ನಾಮಗಳಲ್ಲಿ ಪಠಿಸಿದ್ದಾರೆ. (ನಿ. ೩-೧೩)

**ಉಪೇಮಸೃಕ್ಷಿ ವಾಜಯುರ್ವಚಸ್ಯಾಂ ಚನೋ ದಧೀತ ನಾದ್ಯೋ ಗಿರೋ ಮೇ ।**
**ಅಪಾಂ ನಪಾದಾಶುಹೇಮಾ ಕುವಿತ್ಸ ಸುಪೇಶಸಸ್ಕರತಿ ಜೋಷಿಷದ್ಧಿ ॥**
(ಋ. ಸಂ. ೨-೩೫-೫)

ಇತ್ಯಾದಿ ಋಕ್ಕುಗಳಲ್ಲಿ **ಬಹುಲಂ** ಪ್ರಭೂತವಾಗಿ ಎಂದರ್ಥವೂ, ಮತ್ತು ನಿರುಕ್ತಕಾರರು ಉದಹರಿಸಿರುವ—

**ತಾಁ ಆ ರುದ್ರಸ್ಯ ಮೀಳ್ಹುಷೋ ವಿವಾಸೇ ಕುವಿನ್ನಂಸಂತೇ ಮರುತಃ ಪುನರ್ನಃ।**
**ಯತ್ಸಸ್ವರ್ತಾ ಜಿಹೀಳಿರೇ ಯದಾವಿರವ ತದೇನ ಈಮಹೇ ತುರಾಣಾಂ ॥**
(ಋ. ಸಂ. ೭-೫೮-೫)

ಇತ್ಯಾದಿ ಋಕ್ಕುಗಳಲ್ಲಿ **ಬಹುಕೃತ್ವಃ, ಪುನಃಪುನಃ** ಎಂದೂ ಅರ್ಥವಾಗುತ್ತದೆ.

**ಧಿಯಃ—ಕರ್ಮಾಣಿ** । ನಮ್ಮ ಯಜ್ಞಕರ್ಮಗಳನ್ನು (ನೆರವೇರಿಸಲು) ಎಂದರ್ಥ. ಈ ಪದವು ನಿರುಕ್ತದಲ್ಲಿ **ಕರ್ಮನಾಮ**ಗಳಲ್ಲಿಯೂ (ನಿ. ೩-೧) **ಪ್ರಜ್ಞಾನಾಮ**ಗಳಲ್ಲಿಯೂ ಪಠಿತವಾಗಿದೆ. ನಿರುಕ್ತಕಾರರು,

**ಮಹೋ ಅರ್ಣಃ ಸರಸ್ವತೀ ಪ್ರಚೇತಯತಿ ಕೇತುನಾ । ಧಿಯೋ ವಿಶ್ವಾ ವಿರಾಜತಿ ॥**
(ಋ. ಸಂ. ೧-೩-೧೨)

ಎಂಬ ಋಕ್ಕನ್ನುದಹರಿಸಿ **ಸರ್ವಾಣಿ ಪ್ರಜ್ಞಾನಾನಿ** । (ನಿ. ೧೧-೨೭) ನಮ್ಮ ಸಕಲವಾದ ಪ್ರಜ್ಞಾಯುತವಾದ ಧ್ಯಾನಗಳೆಂಬ ಅರ್ಥವನ್ನೂ,

**ಪಥಸ್ಪಥಃ ಪರಿಪತಿಂ ವಚಸ್ಯಾ ಕಾಮೇನ ಕೃತೋ ಅಭ್ಯಾನಳರ್ಕಂ ।**
**ಸ ನೋ ರಾಸಚ್ಛುರುಧಶ್ಚಂದ್ರಾಗ್ರಾ ಧಿಯಂಧಿಯಂ ಸೀಷಧಾತಿ ಪ್ರ ಪೂಷಾ ॥**
(ಋ. ಸಂ. ೬-೪೯-೮)

**ಪಾವೀರವೀ ತನ್ಯತುರೇಕಪಾದಜೋ ದಿವೋ ಧರ್ತಾ ಸಿಂಧುರಾಪಃ ಸಮುದ್ರಿಯಃ ।**
**ವಿಶ್ವೇ ದೇವಾಸಃ ಶೃಣವನ್ ವಚಾಂಸಿ ಮೇ ಸರಸ್ವತೀ ಸಹ ಧೀಭಿಃ ಪುರಂಧ್ಯಾ ।**
(ಋ. ಸಂ. ೧೦-೬೫-೧೩)

ಎಂಬ ಋಕ್ಕುಗಳಲ್ಲಿ ಯಜ್ಞಯಾಗಾದಿ ಕರ್ಮಗಳೆಂದೂ ಅರ್ಥಮಾಡಿದ್ದಾರೆ.

**ಶುಚಿಪ್ರತೀಕಂ**—**ಶೋಭನಜ್ವಾಲಂ ಶೋಭನಾವಯವಂ** । ರಮ್ಯವಾದುದೂ ಶ್ರೇಷ್ಠವಾದುದೂ ಆದ ಅಗ್ನಿಯೆಂದರ್ಥ. ಅಗ್ನಿಗೆ ಇರತಕ್ಕ ವಿಶೇಷಣಗಳಲ್ಲಿ ಇದೊಂದು ಮುಖ್ಯವಾದುದು.

**ತುತುಜ್ಯಾತ್**—**ತ್ವರಯತು, ಪ್ರೇರಯತು** । ಪ್ರೇರಿಸಿ ನಮ್ಮ ಕರ್ಮವು ನೆರವೇರುವಂತೆ ಮಾಡಲಿ ಎಂದು ತಾತ್ಪರ್ಯ.

ವ್ಯಾಕರಣಪ್ರಕ್ರಿಯಾ

ವೀಃ—ವೀ ಗತ್ಯಾದಿಷು ಧಾತು ಕರ್ತರಿಯಲ್ಲಿ **ಕ್ವಿಪ್ ಚ** ಎಂಬುದರಿಂದ ಕ್ವಿಪ್ ಪ್ರತ್ಯಯ. ಧಾತುಸ್ವರದಿಂದ ಉದಾತ್ತವಾಗುತ್ತದೆ.

**ಅಸತ್**—ಅಸ ಭುವಿ ಧಾತು. ಲೇಟ್ ಪ್ರಥಮಪುರುಷಏಕವಚನದಲ್ಲಿ ತಿಪ್ ಪ್ರತ್ಯಯ. **ಇತಶ್ಚ ಲೋಪಃ** (ಪಾ. ಸೂ. ೩-೪-೯೭) ಎಂಬುದರಿಂದ ಇಕಾರ ಲೋಪ, **ಲೇಟೋಽಡಾಟೌ** (ಪಾ. ಸೂ. ೩-೪-೯೪) ಎಂಬುದರಿಂದ ಅದಕ್ಕೆ ಅಡಾಗಮ. ಅಸತ್ ಎಂದು ರೂಪವಾಗುತ್ತದೆ.

**ವಸುಃ**—ವಸ ನಿವಾಸೇ ಧಾತು. **ಶೃಸ್ವೃಸ್ನಿಹಿ** (ಉ. ಸೂ. ೧-೧೦) ಎಂಬುದರಿಂದ ಉ ಪ್ರತ್ಯಯ. ವ್ಯತ್ಯಯದಿಂದ ಆದ್ಯುದಾತ್ತಸ್ವರ ಬರುತ್ತದೆ.

**ಆ ವರತ್**—ವೃಞ್ ವರಣೇ ಧಾತು. ಆಙ್ ಉಪಸರ್ಗ. ಲೇಟ್ ಪ್ರಥಮಪುರುಷಏಕವಚನದಲ್ಲಿ ಹಿಂದಿನಂತೆ ಇಕಾರ ಲೋಪ ಅದಕ್ಕೆ ಅಡಾಗಮ. **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಲುಕ್. ಪ್ರತ್ಯಯ ನಿಮಿತ್ತವಾಗಿ ಧಾತುವಿನ ಇಕಿಗೆ ಗುಣ. ರಪರವಾಗಿ ಬರುತ್ತದೆ. ವರತ್ ಎಂದು ರೂಪವಾಗುತ್ತದೆ. **ನಿಪಾತೈರ್ಯದ್ಯದಿ**—(ಪಾ. ಸೂ. ೮-೧-೩೦) ಎಂಬುದರಿಂದ ಇಲ್ಲಿ ಕುವಿತ್ ಎಂಬುದರ ಸಂಬಂಧವಿರುವುದರಿಂದ ನಿಘಾತಪ್ರತಿಷೇಧ ಬರುತ್ತದೆ. ಪ್ರತ್ಯಯ ಪಿತ್ತಾದುದರಿಂದ ಧಾತುಸ್ವರ ಉಳಿಯುತ್ತದೆ. ಅಸತ್ ಎಂಬಲ್ಲಿಯೂ ಹೀಗೆಯೇ ಸ್ವರ ಬರುತ್ತದೆ. **ತಿಙಿ ಚೋದಾತ್ತವತಿ** ಎಂಬುದರಿಂದ ಗತಿಗೆ (ಆ) ಅನುದಾತ್ತಸ್ವರ ಬರುತ್ತದೆ.

**ಚೋದಃ**— ಚುದ ಪ್ರೇರಣೇ ಧಾತು. **ನಂದಿಗ್ರಹಪಚಾ**—ಎಂಬುದರಿಂದ ಅಚ್ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿನ ಲಘೂಪಧೆಗೆ ಗುಣ. **ಚಿತಃ** ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ತುತುಜ್ಯಾತ್**—ತುಜ ಪ್ರೇರಣೇ ಧಾತು. ಲಿಙ್ ಪ್ರಥಮಪುರುಷಏಕವಚನದಲ್ಲಿ ತಿ ಪ್ರತ್ಯಯ. **ಇತಶ್ಚ** ಎಂಬುದರಿಂದ ಇಕಾರ ಲೋಪ **ಯಾಸುಟ್ ಪರ**—ಎಂಬುದರಿಂದ ಅದಕ್ಕೆ ಯಾಸುಟಾಗಮ. **ಬಹುಲಂ ಛಂದಸಿ** ಎಂಬುದರಿಂದ ಶ್ಲು ವಿಕರಣ. ಅದನ್ನು ನಿಮಿತ್ತೀಕರಿಸಿ ಧಾತುವಿಗೆ ದ್ವಿತ್ವಾದಿ. ಹಿಂದಿನಂತೆ ಕುವಿತ್ ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯದ ಅಕಾರ ಉದಾತ್ತವಾಗುತ್ತದೆ.

**ಸಾತಯೇ**—**ಊತಿಜೂತಿ**—ಎಂಬುದರಿಂದ ಉದಾತ್ತವಾದ ಕ್ತಿನ್ ಪ್ರತ್ಯಯದಿಂದ ನಿಪಾತಿತವಾಗಿದೆ.

**ಶುಚಿಪ್ರತೀಕಮ್**—ಶುಚಿ ಪ್ರತೀಕಮ್ ಯಸ್ಯ ಸಃ **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್** (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ. ದ್ವಿತೀಯಾಏಕವಚನಾಂತರೂಪ.

ಧಿಯಾ—ತೃತೀಯಾಏಕವಚನಾಂತರೂಪ. ಸಾವೇಕಾಚಸ್ತೃತೀಯಾದಿಃ ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ. ॥ ೬ ॥

———:೦:———

ಸಂಹಿತಾಪಾಠಃ

ಘೃತಪ್ರತೀಕಂ ವ ಋತಸ್ಯ ಧೂರ್ಷದಮಗ್ನಿಂ ಮಿತ್ರಂ ನ ಸಮಿಧಾನ
ಋಂಜತೇ ।
ಇಂಧಾನೋ ಅಕ್ರೋ ವಿದಥೇಷು ದೀದ್ಯಚ್ಛುಕ್ರವರ್ಣಾಮುದು ನೋ
ಯಂಸತೇ ಧಿಯಂ ॥ ೭ ॥

ಪದಪಾಠಃ

ಘೃತಽಪ್ರತೀಕಂ । ವಃ । ಋತಸ್ಯ । ಧೂಃಽಸದಂ । ಅಗ್ನಿಂ । ಮಿತ್ರಂ । ನ । ಸಂಽಇಧಾನಃ । ಋಂಜತೇ ।
ಇಂಧಾನಃ । ಅಕ್ರಃ । ವಿದಥೇಷು । ದೀದ್ಯತ್ । ಶುಕ್ರಽವರ್ಣಾಂ । ಉತ್ । ಊಂ ಇತಿ । ನಃ । ಯಂ-
ಸತೇ । ಧಿಯಂ ॥ ೭ ॥

ಸಾಯಣಭಾಷ್ಯಂ

ಘೃತಪ್ರತೀಕಂ ಘೃತೋಪಕ್ರಮಂ ಪ್ರಯಾಜಾದಿಷ್ವಾಜ್ಯೈರ್ಹೂಯಮಾನತ್ವಾತ್ । ಯದ್ವಾ । ಪ್ರತೀಕಮಂಗಂ । ದೀಪ್ತಜ್ವಾಲಮಿತ್ಯರ್ಥಃ । ಕಿಂಚ ವೋ ಯುಷ್ಮತ್ಸಂಬಂಧಿನ ಋತಸ್ಯ ಯಜ್ಞಸ್ಯ ಧೂರ್ಷದಂ ಧುರಿ ನಿರ್ವಹಣೇ ಸೀದಂತಂ ಯಜ್ಞನಿರ್ವಾಹಕಮಗ್ನಿಂ ಮಿತ್ರಂ ನ ಮಿತ್ರಮಿವ ಸಮಿಧಾನ ಇಧ್ಮೈರ್ದೀಪಯಮಾನ ಋಂಜತೇ । ಪ್ರಸಾಧಯತಿ । ಋಂಜತಿಃ ಪ್ರಸಾಧನಕರ್ಮಾ । ಇಂಧಾನಃ ಸಮ್ಯಗ್ದೀಪ್ಯಮಾನೋಽಕ್ರೋ ಜ್ವಾಲಾಸಮಿದಾದಿಭಿರಾಕ್ರಾಂತೋಽನ್ಯೈರನಾಕ್ರಾಂತೋ ವಾ ॥ ಕ್ರಮೇ-ಶ್ಛಾಂದಸೋ ಡಃ ॥ ವಿದಥೇಷು ಯಜ್ಞೇಷು ವೇದಯಿತವ್ಯೇಷು ಸ್ತೋತ್ರೇಷು ನಿಮಿತ್ತಭೂತೇಷು ದೀದ್ಯತ್ ಸ್ವಯಂ ದೀಪ್ಯಮಾನೋಽಸ್ಮದೀಯಾಂ ಧಿಯಂ ಪ್ರಜ್ಞಾಂ ಯಾಗಾದಿವಿಷಯಾಂ ಶುಕ್ರವರ್ಣಾಂ ಶುಭ್ರ-ವರ್ಣಾಂ ನಿರ್ಮಲಾಂ ಜ್ಯೋತಿಷ್ಟೋಮಾದಿ ಕರ್ಮ ವೋದು ಯಂಸತೇ । ಉದ್ಯೋಜಯತ್ಯೇವ ॥ ಯಮೇರ್ಲೇಟ್ಯಡಾಗಮಃ । ಸಿಪ್ ॥ ಉಶಬ್ದೋಽವಧಾರಣೇ । ಧೀರಿತಿ ಕರ್ಮನಾಮ । ಧೀಃ ಶಮೀತಿ ತನ್ನಾಮಸು ಪಾಠಾತ್ ॥

ಪ್ರತಿಪದಾರ್ಥ

**ಸಮಿಧಾನಃ**—(ಇಧ್ಮಗಳಿಂದ) ಅಗ್ನಿಯನ್ನು ಪ್ರಜ್ವಲಿಸುವಂತೆ ಮಾಡುವ ಋತ್ವಿಕ್ಕು । **ಘೃತಪ್ರತೀಕಂ**—ಘೃತೋಪಹಾರದಿಂದ ಮಿನುಗುತ್ತಿರುವವನೂ (ಮತ್ತು) । **ವಃ**—ನಿಮ್ಮ । **ಋತಸ್ಯ**—ಯಜ್ಞದ । **ಧೂರ್ಷದಂ**—ಅಗ್ರಸ್ಥಾನವನ್ನು ವಹಿಸಿ ನಿರ್ವಹಿಸುವವನೂ ಆದ । **ಅಗ್ನಿಂ**—ಅಗ್ನಿಯನ್ನು । **ಮಿತ್ರಂ ನ**—ಮಿತ್ರನಂತೆ । **ಋಂಜತೆ**—ಅಲಂಕರಿಸಿ ಪೂಜಿಸುತ್ತಾನೆ । **ಇಂಧಾನಃ**—ಪ್ರಜ್ವಲಿತನಾದವನೂ । **ಅಕ್ರಃ**—(ಸಮಿದಾದಿಗಳಿಂದ) ತುಂಬಿದವನೂ (ಮತ್ತು) । **ವಿದಥೇಷು**—ಯಜ್ಞಗಳಲ್ಲಿ । **ದೀದ್ಯತ್**—(ತಾನಾಗಿಯೇ) ಪ್ರಕಾಶಿಸುತ್ತಿರುವವನೂ ಆದ ಅಗ್ನಿಯು । **ಧಿಯಂ**— (ಯಾಗವಿಷಯಕವಾದ) ಪ್ರಜ್ಞೆಯನ್ನೂ । **ಶುಕ್ರವರ್ಣಾಂ**—ಶುದ್ಧವಾದ ಜ್ಯೋತಿಷ್ಟೋಮಾದಿಕರ್ಮವನ್ನು । **ಉದು ಯಂಸತೇ**—ಖಂಡಿತವಾಗಿಯೂ ನೆರವೇರುವಂತೆ ಮಾಡಿ ಬೆಳಗಿಸುತ್ತಾನೆ ॥

ಪ್ರತಿಪದಾರ್ಥ

ಘೃತೋಪಹಾರದಿಂದ ಮಿನುಗುತ್ತಿರುವವನೂ, ಯಜ್ಞದ ಭಾರವನ್ನು ವಹಿಸಿ ನಿರ್ವಹಿಸುವವನೂ ಆದ ಅಗ್ನಿಯನ್ನು ಋತ್ವಿಕ್ಕು ಮಿತ್ರನಂತೆ ಅಲಂಕರಿಸಿ ಪೂಜಿಸುತ್ತಾನೆ. ಪ್ರಜ್ವಲಿತನಾದವನೂ, ಸಮಿದಾದಿಗಳಿಂದ ತುಂಬಿದವನೂ ಮತ್ತು ಯಜ್ಞಗಳಲ್ಲಿ ಪ್ರಕಾಶಿಸುತ್ತಿರುವವನೂ ಆದ ಅಗ್ನಿಯು ಯಾಗವಿಷಯಕವಾದ ನಮ್ಮ ಪ್ರಜ್ಞೆಯನ್ನೂ ಮತ್ತು ಶುದ್ಧವಾದ ಜ್ಯೋತಿಷ್ಟೋಮಾದಿಕರ್ಮವನ್ನೂ ಸಹ ಖಂಡಿತವಾಗಿಯೂ ನೆರವೇರುವಂತೆ ಮಾಡಿ ಬೆಳಗಿಸುತ್ತಾನೆ.

English Translation

The kindler (of the sacrificial fire) propitiates Agni, of glistening form; the upholder of your ceremony, like a friend; well kindled and well supplied (with fuel); blazing brightly at holy rites, he illumines our pure and pious observances.

ವಿಶೇಷವಿಷಯಗಳು

**ಸಮಿಧಾನಃ**— **ಇಧ್ಮೈರ್ದೀಪಯಮಾನಃ** । ಇಧ್ಮಗಳಿಂದ ಪ್ರಕಾಶಿಸುವಂತೆ ಮಾಡುವ ಎಂದು ಋತ್ವಿಕ್ಕಿಗೆ ವಿಶೇಷಣವಾಗಿದೆ. ಸಾಧಾರಣವಾಗಿ ಈ ಪದವು ಉಳಿದೆಡೆಗಳಲ್ಲೆಲ್ಲಾ ಅಗ್ನಿಗೆ ವಿಶೇಷಣವಾಗಿ ಕರ್ಮಣಿಯ ಅರ್ಥವನ್ನೇ ಕೊಡುತ್ತದೆ. ಉದಾಹರಣೆಗೆ—

**ಸ ನೋ ರೇವತ್ಸಮಿಧಾನಃ ಸ್ವಸ್ತಯೇ ಸಂದದಸ್ವಾನ್ರಯಿಮಸ್ಮಾಸು ದೀದಿಹಿ ।**
**ಆ ನಃ ಕೃಣುಷ್ವ ಸುವಿತಾಯ ರೋದಸೀ ಅಗ್ನೇ ಹವ್ಯಾ ಮನುಷೋ ದೇವ ವೀತಯೇ ॥**
(ಋ. ಸಂ. ೨-೨-೬)

ಎಂಬ ಋಕ್ಕಿನಲ್ಲಿಯೂ ಹೀಗೆಯೇ ೩-೪-೧೧ ; ೫-೮-೪ ; ೫-೮-೬ ಇತ್ಯಾದಿ ಋಕ್ಕುಗಳಲ್ಲೂ ಸಹ **ಅಸ್ಮಾಭಿಃ ಸಮ್ಯಗಿಧ್ಯಮಾನಃ ಸನ್** । ಋತ್ವಿಕ್ಕುಗಳಾದ ನಮ್ಮಿಂದ ಪ್ರಜ್ವಲಿತನಾಗಿ ಎಂದು ಅಗ್ನಿವಿಶೇಷಣವಾಗಿದೆ. ಆದರೆ ಪ್ರಕೃತವಾದ ಋಕ್ಕಿನಲ್ಲಿ ಮಾತ್ರ ಕರ್ತರಿಯ ಅರ್ಥವನ್ನೇ ಕೊಡುತ್ತಾ ಋತ್ವಿಕ್ಕಿಗೆ ವಿಶೇಷಣವಾಗಿದೆ.

**ಧೂರ್ಷದಂ**—**ಧುರಿ ನಿರ್ವಹಣೇ। ಸೀದಂತಂ ಯಜ್ಞನಿರ್ವಾಹಕಂ ಅಗ್ನಿಂ ।** ಯಜ್ಞನಿರ್ವಾಹ ಕಾರ್ಯದಲ್ಲಿ ಸಾಮರ್ಥ್ಯವುಳ್ಳವನೆಂದು ಅಗ್ನಿಯ ಶಕ್ತಿಯನ್ನೂ ಯಜ್ಞಕಾರ್ಯದಲ್ಲಿ ಮುಖ್ಯಪಾತ್ರವನ್ನೂ ತಿಳಿಸಿದೆ. ಈ ವಿಶೇಷಣವು ಒಂದೊಂದು ಸನ್ನಿವೇಶದಲ್ಲೂ ಆಯಾ ಸಂದರ್ಭಕ್ಕನುಗುಣವಾದ ಅರ್ಥವನ್ನು ಕೊಡುತ್ತದೆ.

**ಯಜ್ಞೇನ ವರ್ಧತ ಜಾತವೇದಸಮಗ್ನಿಂ ಯಜಧ್ವಂ ಹವಿಷಾ ತನಾ ಗಿರಾ ।**
**ಸಮಿಧಾನಂ ಸುಪ್ರಯಸಂ ಸ್ವರ್ಣರಂ ದ್ಯುಕ್ಷಂ ಹೋತಾರಂ ವೃಜನೇಷು ಧೂರ್ಷದಂ ॥**

(ಋ. ಸಂ. ೨-೨-೧)

ಎಂಬ ಋಕ್ಕಿನಲ್ಲಿ **ಬಲಸ್ಯ ಕರ್ತಾರಮಿತ್ಯರ್ಥಃ । ಅಗ್ನಿಪಾಟವೇ ಸತಿ ಶಾರೀರಂ ಬಲಂ ಭವತೀತಿ ಪ್ರಸಿದ್ಧಂ ।** ಶಕ್ತ್ಯುತ್ಪಾದಕನೆಂದು ಅಗ್ನಿಯ ಶಕ್ತಿಯನ್ನು ತಿಳಿಸುತ್ತದೆ. ಋ. ಸಂ. ೧೦-೧೩೨-೭ನೇ ಋಕ್ಕಿನಲ್ಲಿ **ಧೂರ್ಷದಂ ಧುರ್ಯಶ್ವಯೋರ್ವಹನದೇಶೇ ಸೀದಂತಂ ।** ಅಶ್ವಗಳ ವಹನಪ್ರದೇಶವಾದ ಕತ್ತುಗಳನ್ನಾಶ್ರಯಿಸಿರುವುದೆಂದು ರಥಕ್ಕೆ ವಿಶೇಷಣವಾಗಿದೆ. ಪ್ರಕೃತವಾದ ಋಕ್ಕಿನಲ್ಲಿ ನಿರ್ವಹಣಸಾಮರ್ಥ್ಯವುಳ್ಳವನೆಂದರ್ಥ.

**ಘೃತಪ್ರತೀಕಂ**—ಪ್ರತೀಕ ಶಬ್ದವು ಸಾಧಾರಣವಾಗಿ **ಮುಖ**ಪರ್ಯಾಯವಾಗಿದ್ದರೂ ಇಲ್ಲಿ ಅಂಗವೆಂದರ್ಥ ವಾಗುತ್ತದೆ. **ಪ್ರತೀಕಮಂಗಂ ದೀಪ್ತಜ್ವಾಲಮಿತ್ಯರ್ಥಃ** ಪ್ರಕಾಶಮಾನವಾದ ಜ್ವಾಲೆಯುಳ್ಳ ಅಗ್ನಿಯೆಂದರ್ಥ. ಆಜ್ಯಾಹುತಿಯಿಂದ ಬೆಳಗುವದರಿಂದ ಈ ವಿಶೇಷಣವಿದೆ.

**ಘೃತ**ಶಬ್ದವು ಉದಕನಾಮಗಳಲ್ಲಿ ಪಠಿತವಾಗಿದ್ದು (ನಿ. ೨-೨೪) ಉದಕವೆಂಬರ್ಥದಲ್ಲಿ ಈ ಪದವನ್ನು ಪ್ರಯೋಗಿಸಿರುವ ಋಕ್ಕುಗಳನ್ನು ನಿರುಕ್ತಕಾರರು ಉದಹರಿಸಿರುವುದನ್ನು ಆಯಾ ಸಂದರ್ಭಗಳಲ್ಲಿ ತಿಳಿಸಲಾಗುತ್ತದೆ.

**ಅಕ್ರಃ**—**ಜ್ವಾಲಾಸಮಿದಾದಿಭಿರಾಕ್ರಾಂತಃ, ಅನ್ಯೈಃ ಅನಾಕ್ರಾಂತಃ ।** ಜ್ವಾಲಾಸಮಿದಾದಿಗಳಿಂದ ವ್ಯಾಪಿಸಿರುವವನು ಅಥವಾ ಅಪ್ರತಿಹತವಾದ ಪ್ರಸರವುಳ್ಳವನಾದುದರಿಂದ ಇತರ ವಸ್ತುಗಳ ಆಕ್ರಮಣಕ್ಕೆ ಒಳಗಾಗದವನು ಎಂದರ್ಥ. ನಿರುಕ್ತಕಾರರು ಅಕ್ರ **ಆಕ್ರಮಣಾತ್** (ನಿ. ೬-೧೭) ಶತ್ರುಗಳು ಬಂದು ಆಕ್ರಮಿಸುವುದ ರಿಂದ ಪ್ರಾಕಾರಕ್ಕೆ ಅಕ್ರವೆಂಬ ಹೆಸರೆಂದು ಹೇಳಿ,

**ಅಕ್ರೋ ನ ಬಭ್ರಿಃ ಸಮಿಥೇ ಮಹೀನಾಂ ದಿದೃಕ್ಷೇಯಃ ಸೂನವೇ ಭಾಋಜೀಕಃ ।**
**ಉದುಸ್ರಿಯಾ ಜನಿತಾ ಯೋ ಜಜಾನಾಪಾಂ ಗರ್ಭೋ ನೃತಮೋ ಯಹ್ವೋ ಅಗ್ನಿಃ ॥**

(ಋ. ಸಂ. ೩-೧-೧೨)

ಎಂಬ ಋಕ್ಕನ್ನು ಉದಹರಿಸಿ ಅಗ್ನಿಶಕ್ತಿಯನ್ನು ಪ್ರಾಕಾರದ ಶಕ್ತಿಗೆ ಹೋಲಿಸಿದ್ದಾರೆ.

ಅಥವಾ ಸಾಯಣರು ವಿವರಿಸುವಂತೆ ಅನ್ಯರು ಆಕ್ರಮಿಸಲು ಸಾಧ್ಯವಿಲ್ಲದಿರುವುದರಿಂದ ಪ್ರಾಕಾರಕ್ಕೆ **ಅಕ್ರ** ವೆಂಬ ಹೆಸರಾದರೆ, ಮೇಲೆ ಹೇಳಿರುವಂತೆ ಅಗ್ನಿಯ ಅಪ್ರತಿಹತವಾದ ಶಕ್ತಿಯಿಂದ ಕೂಡಿದ ಪ್ರಸರಣವೆಂದು ತಾತ್ಪರ್ಯವಾಗುತ್ತದೆ.

**ವಿದಥೇಷು**—**ಯಜ್ಞೇಷು ।** ಯಜ್ಞಗಳಲ್ಲಿ ಎಂದರೆ ಯಜ್ಞಸ್ಥಾನಗಳಲ್ಲಿ ಎಂದರ್ಥ. **ವೇದಯತ್ಸು ಸ್ತೋತ್ರೇಷು ನಿಮಿತ್ತಭೂತೇಷು** ಎಂಬುದರಿಂದ ವಿದಥ ಶಬ್ದದ ನಿರ್ವಚನವನ್ನು ತೋರಿಸಿದೆ. ಇಲ್ಲಿ ನಿರುಕ್ತಕಾರರ

ನಿರ್ವಚನಗಳಲ್ಲಿ ಒಂದನ್ನು ಮಾತ್ರ ಅನುಸರಿಸಿದೆ. ಯಜ್ಞ।, ವೇನಃ ಇತ್ಯಾದಿ ಯಜ್ಞನಾಮಗಳಲ್ಲಿ ಪಠಿತವಾಗಿದೆ. (ನಿ. ೩-೧೭), ಮತ್ತು ವಿದಥಾನಿ ವೇದನಾನಿ। ವಿದಥ ಶಬ್ದಕ್ಕೆ ಜ್ಞಾನವೆಂದರ್ಥವೆಂಬುದನ್ನು ತೋರಿಸಲು (ನಿ. ೬-೭).

**ಹೋತಾ ದೇವೋ ಅಮರ್ತ್ಯಃ ಪುರಸ್ತಾದೇತಿ ಮಾಯಯಾ। ವಿದಥಾನಿ ಪ್ರಚೋದಯನ್ ॥**

(ಋ. ಸಂ. ೩-೨೭-೭)

ಎಂಬ ಋಕ್ಕನ್ನುದಹರಿಸಿ ಅಲ್ಲಿ ಜ್ಞಾನಾರ್ಥಕವಾದ ವಿದ್‌ಧಾತುವಿನಿಂದ ನಿಷ್ಪನ್ನವಾಗಿದೆಯೆಂದು ತಿಳಿಸಿದ್ದಾರೆ. ಇಲ್ಲಿ ಸಾಯಣರು **ವಿದಥಾನಿ ವೇದಿತವ್ಯಾನಿ ಕರ್ಮಾಣಿ**। ಅರಿಯಲ್ಪಡಬೇಕಾದ ಕರ್ಮಗಳು ಎಂದರ್ಥಮಾಡಿದ್ದಾರೆ ಈ ಪದಕ್ಕೆ ನಿಷ್ಕರ್ಷವಾದ ಅರ್ಥವನ್ನು ಹೇಳಬೇಕೆಂದು ಕೆಲವು ಪಂಡಿತರು ಪ್ರಯತ್ನಿಸಿ ಎಲ್ಲರೂ ತಮ್ಮ ವೈಯಕ್ತಿಕವಾದ ಅಭಿಪ್ರಾಯವನ್ನು ತಿಳಿಸಿರುವರು. ಒಬ್ಬೊಬ್ಬರೂ ಒಂದೊಂದು ವಿಧವಾದ ಈ ಪದದ ನಿರ್ವಚನವನ್ನು ತೋರಿಸಿ ಬೇರೆಬೇರೆ ಅರ್ಥಮಾಡಿರುವುದರಿಂದ ಆ ಎಲ್ಲಾ ಅರ್ಥಗಳೂ ಸಂದರ್ಭಾನುಸಾರವಾಗಿ ಹೊಂದಿಕೊಳ್ಳುವುವು ಎಂದು ತಿಳಿಯುತ್ತದೆ. Max Muller ಎಂಬ ಪಂಡಿತನು,

**ಅಮಾದೇಷಾಂ ಭಿಯಸಾ ಭೂಮಿರೇಜತಿ ನೌರ್ನ ಪೂರ್ಣಾ ಕ್ಷರತಿ ವ್ಯಥಿರ್ಯತೀ।**
**ದೂರೇದೃಶೋ ಯೇ ಚಿತಯಂತ ಏಮಭಿರಂತರ್ಮಹೇ ವಿದಥೇ ಯೇತಿರೇ ನರಃ।**

(ಋ. ಸಂ. ೫-೫೯-೨)

ಎಂಬ ಋಕ್ಕನ್ನು ವಿವರಿಸುವಾಗ **ವಿದಥೇ** ಎಂಬ ಪದಕ್ಕೆ (ಯಜ್ಞ) ಸಭೆ (the great sacrificial assembly) ಯೆಂದು ಅರ್ಥಮಾಡಿದ್ದಾನೆ. ಮತ್ತು ಇದರ ವಿವರಣೆಯನ್ನು ಕೊಡುತ್ತಾ ಇತರ **ಜರ್ಮನ್** ಪಂಡಿತರು ಈ ಪದಕ್ಕೆ ಹೇಳಿರುವ ಅರ್ಥವನ್ನೂ ಇದರ ಮೂಲಧಾತುವಿನ ವಿಷಯದಲ್ಲಿ ಅವರ **ಅಭಿಪ್ರಾಯಗಳನ್ನೂ** ಕೊನೆಗೆ Vidatha may have been the name of a sacred act, as Veda is of sacred knowledge. But the fact remains that it is best translated by assembly, particularly an assembly for sacrificial purposes.

(Sacred Books of the East. Vol. 32 P. 349-50).

ಪವಿತ್ರವಾದ ಜ್ಞಾನವೆಂಬುದು ವೇದಶಬ್ದಾರ್ಥವಾಗುವಂತೆ ಪವಿತ್ರವಾದ ಕ್ರಿಯೆಯೆಂಬುದು ವಿದಥಶಬ್ದಾರ್ಥವೆಂದು ಕೆಲವರು ಹೇಳಿರುವರು. ಆದರೆ **ಯಜ್ಞಸಭೆಯೆಂಬುದೇ** ಈ ಪದದ ಮುಖ್ಯಾರ್ಥವೆಂಬುದರಲ್ಲಿ ಸಂಶಯವಿಲ್ಲವೆಂದು ನಿಷ್ಕರ್ಷಿಸಿದ್ದಾನೆ.

Hermann oldenberg ಎಂಬ ಪಂಡಿತನು Vedic Hymns ಎಂಬ ಗ್ರಂಥದಲ್ಲಿ ಋ. ಸಂ. [illegible]-೬ನೇ ಋಕ್ಕಿನಲ್ಲಿರುವ **ವಿಧಥೇ** ಎಂಬ ಪದಕ್ಕೆ ಅರ್ಥವನ್ನು ವಿವರಿಸುವಾಗ ತನ್ನ ಅಭಿಪ್ರಾಯವನ್ನು ಈರೀತಿ ತಿಳಿಸಿದ್ದಾನೆ. ಅವನ ವಾಕ್ಯಗಳನ್ನು ಉದಹರಿಸಿ ಅನಂತರ ಅವನ ಅಭಿಪ್ರಾಯಗಳನ್ನು ತಿಳಿಸಲಾಗುತ್ತದೆ.

On the derivation and meaning of ವಿದಥ Various opinions have been pronounced in the last years which have been collected by prof. Max Muller in his note on R. V. V. 59'2 (S. B.

E. Vol. 32 P. 349 sq.) without traying to discuss here all different theories, I proceed to state my own opinion ;

I propose to derive ವಿದಥ from ವಿ+ಧಾ ; The Verb ವಿ+ಧಾ means 'to distribute, to arrange, to Ordain ;' thus the original meaning of ವಿದಥ must be like the meaning of ವಿಧಾನ, 'distribution, disposition, ordinance ; In V. 3-6, we read ವಿದಥೇಷು ಅಹ್ನಾಂ : this phrase receives its explanation by VII. 66-11 we may call attention also to VI. 51-2 within the sphere of the Vedic poets' thoughts, the most prominent example of something most artificially ವಿಹಿತ was the sacrifice. ಯಜ್ಞ and ವಿದಥ, 'Sacrifice' and 'ordinance' became nearly synonymous. (III 3-3) .... .... .... .... .... .... finally ವಿದಥ seems to mean 'the act of disposing of any business' or the like ; this meaning appears, I believe, in some passages like the well-known phrase, ಬೃಹದ್ವದೇಮ ವಿದಥೇ ಸುವೀರಾಃ—may we with Valiant men mightily raise our voice a the determining of ordinances. Thus the word ವಿದಥ and ಸಭಾ approach each other in thei meaning ; a person influential in council is called both ವಿದಥ್ಯ and ಸಭೇಯ ".

(Sacred Books of the East. Vol. 46. P. 27).

ಈ ಲೇಖನದ ಮುಖ್ಯಸಾರಾಂಶವೇನೆಂದರೆ,

ವಿದಥ ಶಬ್ದವು ಧಾ ಧಾತುವಿಗೆ ವಿ ಎಂಬ ಉಪಸರ್ಗವನ್ನು ಸೇರಿಸುವುದರಿಂದ ನಿಷ್ಪನ್ನವಾಗಿದೆ. ವಿಧಾ ಎಂದರೆ ಹಂಚು, ನಿಯಮಿಸು ಎಂದರ್ಥವಾಗುತ್ತದೆ. ನಿಯಮಪಾಲನೆಯೆಂದೂ ಅರ್ಥವಾಗಬಹುದು. ವಿದಥ ಮತ್ತು ವಿಧಾ ಈ ಎರಡು ಪದಗಳ ಅರ್ಥಗಳೂ ಒಂದೇ ಎಂಬ ಅಂಶವನ್ನು,

ವಯಮಗ್ನೇ ವನುಯಾಮ ತ್ವೋತಾ ವಸೂಯವೋ ಹವಿಷಾ ಬುಧ್ಯಮಾನಾಃ ।
ವಯಂ ಸಮರ್ಯೇ ವಿದಥೇಷ್ವಹ್ನಾಂ ವಯಂ ರಾಯಾ ಸಹಸಸ್ಪುತ್ರ ಮರ್ತಾನ್ ॥

(ಋ. ಸಂ. ೫-೩-೬)

ಎಂಬ ಋಕ್ಕಿನಲ್ಲಿರುವ ವಿದಥೇಷ್ವಹ್ನಾಂ ಎಂಬ ಪದಗಳಿಗೂ,

ವಿ ಯೇ ದಧುಃ ಶರದಂ ಮಾಸಮಾದಹರ್ಯಜ್ಞಮಕ್ತುಂ ಚಾದೃಚಂ ।
ಅನಾಪ್ಯಂ ವರುಣೋ ಮಿತ್ರೋ ಅರ್ಯಮಾ ಕ್ಷತ್ರಂ ರಾಜಾನ ಆಶತ ।

(ಋ. ಸಂ. ೭-೬೬-೧೧)

ಎಂಬ ಋಕ್ಕಿನಲ್ಲಿರುವ ವಿ—ದಧುಃ ಎಂಬ ಪದಗಳಿಗೂ ಇರತಕ್ಕ ಸಮಾನಾರ್ಥದಿಂದ ತಿಳಿಯುತ್ತದೆ. ಮತ್ತು, ವಿಹಿತ ವಿದಥ ಎಂಬ ಪದಗಳ ಅರ್ಥಗಳೂ ಒಂದೇ ಆಗಿ, ಶಾಸ್ತ್ರವಿಹಿತವಾದ ಯಜ್ಞವೇ ವಿದಥವೆಂಬ ಹೆಸರಿನಿಂದ ಕರೆಯಲ್ಪಟ್ಟಿತು. ಯಜ್ಞ ಅಥವಾ ಯಜ್ಞಸಭೆ ಎಂಬ ಅರ್ಥವು ಕೊನೆಯಲ್ಲಿ ಉಳಿಯಿತು ಎಂದು ಈ ಪಂಡಿತನು ವಿವರಿಸಿದ್ದಾನೆ.

ವಿದಥವೆಂದರೆ ಸಭೆಯೆಂದಾಗುವುದೇ ಇಲ್ಲ. ಸ್ವೈಯಕ್ತಿಕವಾದ ಗೃಹ ಎಂಬರ್ಥವೇ ಸರಿಯಾದುದು ಎಂದು Bloomfield ಎಂಬ ಪಂಡಿತನು Max Muller ಮತ್ತು Oldenberg ಎಂಬಿಬ್ಬರೂ ಹೇಳಿದುದ ಅರ್ಥದಲ್ಲಿರುವ ದೋಷಗಳನ್ನು ತೋರಿಸಿದ್ದಾನೆ. ಅವನ ಅಭಿಪ್ರಾಯವು ಈ ರೀತಿಯಿದೆ—

The word ವಿದಥ contains the root ವಿದ್ in its ordinary sense of 'get, acquire'. Instead of this, the radical idea underlying the word was generally felt to be 'come to-gether,' 'assemble'. Again, the false start from the notion of 'assemblage' resulted in an approximation of the word to other words for assemblage, especially to ಸಭಾ with which ವಿದಥ was almost identified. We shall see that there are decided points of contact between the words ವಿದಥ and, ಸಭಾ but the contact is that of extreme opposites in a way. ವಿದಥ refers to home matters ; ಸಭಾ generally to public matters.

In the interpretation of a term that figures prominently in the mystic—hieratic sphere of the Veda it is peculiarly necessary to search for its uses outside of that sphere, if there be such uses In X—85-26, the bride after the wedding ceremony proper, as the newly married couple are about to travel to their new home is addressed with the words "May Pushan taking thee by the hand leed thee home, may the Asvins lead thee forth on their car. Go to your house in order that thou mayst be mistress of the house".

Now ವಿದಥ here, can but have one meaning, 'household' or something very like it. It certainly cannot refer to anything in the nature of a public gathering similar to the ಸಭಾ. In the phrase ಬೃಹದ್ವದೇಮ ವಿದಥೇ ಸುವೀರಾಃ (R. V. 2-1-16), the word ಸುವೀರಾಃ refers to family relations not to public life.

Thus far, it may not be doubted, the word appears in the language of ordinary life. But it is found to a very much greater extent in the sacerdotal sphere ; indeed, as all interpreters from Yaska on, have agreed, it often has a meaning very close to Yagna 'Sacrifice' itself. This is as it should be. In as much as the sacrifice is a private, home affair, it is very natural ವಿದಥ the house the premises the establishment, should figure prominently in connection with the sacrifice. ಈ ಲೇಖನದ ಸಾರಾಂಶವೇನೆಂದರೆ ವಿದಥ ಶಬ್ದಕ್ಕೆ ಸಭಾ ಎಂಬ ಅರ್ಥವನ್ನು ಕೆಲವರು ಹೇಳಿರುವುದು ಸರಿಯಲ್ಲ. ಈ ಶಬ್ದಕ್ಕೆ ಪ್ರಯುಕ್ತವಾದ ಗೃಹವೆಂದರ್ಥ. ಈ ಅರ್ಥದಲ್ಲಿಯೇ ಈ ಪದದ ಪ್ರಯೋಗವಿರುವುದನ್ನು ಅನೇಕಕಡೆಗಳಲ್ಲಿ ಗಮನಿಸಬಹುದು. ಉದಾಹರಣೆಗೆ—

ಪೂಷಾ ತ್ವೇತೋ ನಯತು ಹಸ್ತಗೃಹ್ಯಾಶ್ವಿನಾ ತ್ವಾ ಪ್ರವಹತಾಂ ರಥೇನ ।
ಗೃಹಾನ್ ಗಚ್ಛ ಗೃಹಪತ್ನೀ ಯಥಾಸೋ ವಶಿನೀ ತ್ವಂ ವಿದಥಮಾ ವದಾಸಿ ॥

(ಋ. ಸಂ. ೧೦-೮೫-೨೬)

ಎಂಬ ಋಕ್ಕಿನಲ್ಲಿ ಪೂಷನೂ, ಅಶ್ವಿನೀದೇವತೆಗಳೂ ನಿನ್ನನ್ನು ಪತಿಗೃಹಕ್ಕೆ ಕ್ಷೇಮದಿಂದ ಕರೆದೊಯ್ಯಲಿ ಎಂಬರ್ಥವಿರುವುದು ವಿಶದವಾಗಿದೆ. ಅಲ್ಲದೆ,

ಯೇ ಸ್ತೋತೃಭ್ಯೋ ಗೋಅಗ್ರಾಮಶ್ವಪೇಶಸಮಗ್ನೇ ರಾತಿಮುಪಸೃಜಂತಿ ಸೂರಯಃ ।
ಅಸ್ಮಾಂಚ ತಾಂಶ್ಚ ಪ್ರ ಹಿ ನೇಷಿ ವಸ್ಯ ಆ ಬೃಹದ್ವದೇಮ ವಿದಥೇ ಸುವೀರಾಃ ॥
(ಋ. ಸಂ. ೨-೧-೧೬)

ಎಂಬ ಋಕ್ಕಿನಲ್ಲಿಯೂ ಸಹ **ಸುವೀರಾಃ** ಎಂದರೆ **ಶೋಭನಪುತ್ರಾದಿಸಹಿತಾಃ** ಎಂದರ್ಥಮಾಡಿರುವುದರಿಂದ ಗೃಹವೆಂದರ್ಥ. ಆದರೆ ಗೃಹದಲ್ಲಿ ಯಜ್ಞಕಾರ್ಯವು ನಡೆಯುವುದರಿಂದ ಪ್ರಕೃತದಲ್ಲಿ **ಯಜ್ಞಗೃಹ**ವೆಂದಾಗುತ್ತದೆ. ಯಾಸ್ಕಾದಿಗಳು **ಯಜ್ಞ**ಪರ್ಯಾಯಶಬ್ದವೆಂದು ಹೇಳಿರುವುದರಲ್ಲಿಯೂ ಇದೇ ಅರ್ಥವಿದೆ. ಹೀಗೆಂಬುದಾಗಿ ಪಾಶ್ಚಾತ್ಯರಲ್ಲಿ ಅನೇಕ ಪಂಡಿತರು ತಮ್ಮ ತಮ್ಮ ವೈಯಕ್ತಿಕವಾದ ಅಭಿಪ್ರಾಯಗಳನ್ನು ಕೊಟ್ಟಿದ್ದಾರೆ.

ಹೀಗೆ **ಗೃಹ, ಯಜ್ಞ, ಸಭಾ** ಎಂಬ ಬೇರೆ ಬೇರೆ ಅರ್ಥಗಳೆಲ್ಲವೂ ಹೊಂದಿಕೊಳ್ಳುವುದರಿಂದ ಇವುಗಳಲ್ಲಿ ಯಾವುದೂ ತಪ್ಪೆಂದು ಹೇಳುವುದಕ್ಕಾಗುವುದಿಲ್ಲ. ಸಾಯಣಭಾಷ್ಯದಲ್ಲಿಯೇ ಈ ಅರ್ಥಗಳೆಲ್ಲವೂ ಇವೆ. ಉದಾಹರಣೆಗೆ ೧೦-೮೫-೨೬ ಮತ್ತು ೨೭; ೭-೮೪-೩ ಇತ್ಯಾದಿಋಕ್ಕುಗಳಲ್ಲಿ ಗೃಹವೆಂದೂ, ೧೦-೧೦೦-೬, ೧೦-೧೧೦-೭ ಇತ್ಯಾದ್ಯನೇಕ ಋಕ್ಕುಗಳಲ್ಲಿ ಯಜ್ಞವೆಂದೂ ಅರ್ಥಮಾಡಿದ್ದಾರೆ. ಯಜ್ಞಗೃಹವೆಂದೂ ಮತ್ತು ಯಜ್ಞಸಭಾ ಎಂದೂ ಸಹ ಅರ್ಥವಾಗುತ್ತದೆ.

### ವ್ಯಾಕರಣಪ್ರಕ್ರಿಯಾ

**ಘೃತಪ್ರತೀಕಮ್**—ಘೃತಾತ್ ಪ್ರತೀಕಾಃ ಯಸ್ಯ ಸಃ ತಮ್. ಬಹುವ್ರೀಹಿಯಲ್ಲಿ ಪೂರ್ವಪದ ಪ್ರಕೃತಿಸ್ವರ ಬರುತ್ತದೆ. ದ್ವಿತಿಯಾ ಏಕವಚನಾಂತರೂಪ.

**ಧೂರ್ಷದಮ್**—ಧುರಿ ಸೀದತಿ ಇತಿ ಧೂರ್ಷದ್. ಷದ್ಲೃ ವಿಶರಣ ಗತ್ಯವಸಾದನೇಷು ಧಾತು. **ಸತ್ಸೂದ್ವಿಷದ್ರುಹ**— (ಪಾ. ಸೂ. ೩-೨-೬೧) ಎಂಬುದರಿಂದ ಸುಬಂತ ಉಪಪದವಾಗಿರುವಾಗ ಕ್ವಿಪ್ ಪ್ರತ್ಯಯ. **ಗತಿಕಾರಕೋಪಪದಾತ್ಕೃತ್**— (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಸಂ ಇಧಾನಃ**— ಞಿಇಂಧೀ ದೀಪ್ತೌ ಧಾತು. ತಾಚ್ಛೀಲ್ಯದಲ್ಲಿ ಚಾನಶ್ ಪ್ರತ್ಯಯ. **ಅನಿದಿತಾಂಹಲ**— ಎಂಬುದರಿಂದ ಉಪಧಾನಕಾರಲೋಪ. **ಚಿತಃ** (ಪಾ. ಸೂ ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ಸಮಾಸದಲ್ಲಿ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಋಞ್ಜತೇ**—ಋಂಜ ಭೂಷಣೇ ಧಾತು. ಲಟ್ ಪ್ರಥಮಪುರುಷ ಏಕವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ.

**ಇಂಧಾನಃ**—ಞಿಇಂಧೀ ದೀಪ್ತೌ ಧಾತು. ರುಧಾದಿ ಲಡರ್ಥದಲ್ಲಿ ಶಾನಚ್ ಪ್ರತ್ಯಯ. **ರುಧಾದಿಭ್ಯಃ ಶ್ನಮ್**—(ಪಾ. ಸೂ. ೩-೧-೭೮) ಎಂಬುದರಿಂದ ಶ್ನಮ್ ವಿಕರಣ. ಅನುದಾತ್ತೇತ್ತಾದ ಧಾತುವಿನ ಪರದಲ್ಲಿ ಲಸಾರ್ವಧಾತುಕ ಬಂದುದರಿಂದ **ತಾಸ್ಯನುದಾತ್ತೇತ್** (ಪಾ. ಸೂ. ೬-೧-೧೮೬) ಎಂಬುದರಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಬರುತ್ತದೆ.

**ಅಕ್ರಃ**—ಕ್ರಮು ಪಾದವಿಕ್ಷೇಪೇ ಧಾತು. **ಅನ್ಯತ್ರಾಪಿದೃಶ್ಯತೇ** ಎಂಬ ವಚನದಿಂದ ಡಪ್ರತ್ಯಯ (ಛಾಂದಸವಾಗಿ ಡ ಪ್ರತ್ಯಯ) ಡಿತ್ತ್ವ ಸಾಮರ್ಥ್ಯದಿಂದ ಧಾತುವಿನ ಟಿಗೆ ಲೋಪ. ನಕ್ರಃ ಅಕ್ರಃ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ವಿದಥೇಷು**—ವಿದ ಜ್ಞಾನೇ ಧಾತು. ಇದಕ್ಕೆ ಔಣಾದಿಕ ಅಥ ಪ್ರತ್ಯಯ. ಙಿತ್ತ್ವ ವಿಧಾನವಾಗಿರುವುದರಿಂದ ಲಘೂಪಧಗುಣ ಬರುವುದಿಲ್ಲ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ. ಸಪ್ತಮೀ ಬಹುವಚನಾಂತ ರೂಪ.

**ಶುಕ್ರವರ್ಣಾಮ್**—ಶುಕ್ರಃ ವರ್ಣಃ ಯಸ್ಯಾಃ ಸಾ. ತಾಮ್ ಬಹುವ್ರೀಹಿಯಲ್ಲಿ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಯಂಸತೇ**—ಯಮು ಉಪರಮೇ ಧಾತು. ಲೇಟ್ ಪ್ರಥಮಪುರುಷ ಏಕವಚನದಲ್ಲಿ ತ ಪ್ರತ್ಯಯ. **ಟಿತ-ಆತ್ಮನೇಪದಾನಾಂ** ಎಂಬುದರಿಂದ ಏತ್ವ. **ಲೇಟೋಽಡಾಟೌ** (ಪಾ. ಸೂ. ೩-೪-೯೪) ಎಂಬುದರಿಂದ ಅದಕ್ಕೆ ಅಡಾಗಮ. **ಸಿಬ್ಬಹುಲಂ ಲೇಟಿ** (ಪಾ ಸೂ. ೩-೧-೩೪) ಎಂಬುದರಿಂದ ಸಿಪ್. ಧಾತು ಮಕಾರಕ್ಕೆ ಅನುಸ್ವಾರ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೭ ॥



ಸಂಹಿತಾಪಾಠಃ

**ಅಪ್ರಯುಚ್ಛನ್ನಪ್ರಯುಚ್ಛದ್ಭಿರಗ್ನೇ ಶಿವೇಭಿರ್ನಃ ಪಾಯುಭಿಃ ಪಾಹಿ ಶಗ್ಮೈಃ ।**

**ಅದಬ್ಧೇಭಿರದೃಪಿತೇಭಿರಿಷ್ಟೇಽನಿಮಿಷದ್ಭಿಃ ಪರಿ ಪಾಹಿ ನೋ ಜಾಃ ॥ ೮ ॥**

। ಪದಪಾಠಃ ।

ಅಪ್ರಽಯುಚ್ಛನ್ । ಅಪ್ರಯುಚ್ಛತ್ಽಭಿಃ ! ಅಗ್ನೇ । ಶಿವೇಭಿಃ । ನಃ । ಪಾಯುಽಭಿಃ । ಪಾಹಿ । ಶಗ್ಮೈಃ ।

ಅದಬ್ಧೇಭಿಃ । ಅದೃಪಿತೇಭಿಃ । ಇಷ್ಟೇ । ಅನಿಮಿಷತ್ಽಭಿಃ । ಪರಿ । ಪಾಹಿ । ನಃ । ಜಾಃ ॥ ೮ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ಅಪ್ರಯುಚ್ಛನ್ನಸ್ಮಾಸ್ವಪ್ರಮಾದ್ಯನ್ ॥ ಯುಚ್ಛ ಪ್ರಮಾದೇ ॥ ಅವಿಚ್ಛಿನ್ನಪ್ರವೃತ್ತಿಃ ಸನ್ನಪ್ರಯುಚ್ಛದ್ಭಿರಪ್ರಮಾದ್ಯದ್ಭಿರನವಧಾನರಹಿತೈಃ ಶಿವೇಭಿರ್ಮಂತ್ರಕಲ್ಯಾಣೈಃ ಶಗ್ಮೈಃ ಸುಖಕರೈಃ ಪಾಯುಭೀ ರಕ್ಷಣಪ್ರಕಾರೈರ್ನೋಽಸ್ಮಾನ್ಪಾಹಿ । ರಕ್ಷ । ಕಿಂಚ ಹೇ ಇಷ್ಟೇ ಸರ್ವೈರೇಷಣೀಯಾಗ್ನೇ ಜಾ ಜಾಯಮಾನೋಽಸ್ಮಾಭಿರ್ದೀಪ್ಯಮಾನಃ ಸನ್ನದಬ್ಧೇಭಿರಹಿಂಸಿತೈರದೃಪಿತೇಭಿಃ ಕೇನಚಿದಪ್ಯಪರಿಭೂತೈಃ ॥

ವೃಷ ವೃಷ್ಣ ಉತ್ಕ್ಲೇಶೇ ತೌದಾದಿಕಃ ॥ ಅನಿಮಿಷದ್ಭಿರ್ನಿಮೇಷರಹಿತೈರನಲಸಸ್ವಭಾವೈಃ ಈದೃಶೈರ್ಲಕ್ಷಣೈ-ರ್ನೋಽಸ್ಮಾನ್ಪರಿ ಪರಿತಃ ಪಾಹಿ । ಪಾಲಯ । ಯದ್ವಾ । ಉಪರ್ಯುಪರಿ ಜಾಯಂತ ಇತಿ ಜಾಃ । ನೋ ಜಾ ಅಸ್ಮತ್ಸಂಬಂಧಿನೀಃ ಪುತ್ರಪೌತ್ರಾದಿರೂಪಾಃ ಪ್ರಜಾಃ ಪರಿ ಪಾಹಿ । ಪರಿತೋ ರಕ್ಷ । ನ ಕೇವಲಮ-ಸ್ಮಾನ್ ಕಿಂತ್ವಸ್ಮತ್ಪುತ್ರಪೌತ್ರಾದೀನಪಿ ರಕ್ಷ ॥

### ಪ್ರತಿಪದಾರ್ಥ

**ಅಗ್ನೇ**—ಎಲೈ ಅಗ್ನಿಯೇ। **ಅಪ್ರಯುಚ್ಛನ್**--(ನಮ್ಮ ವಿಷಯದಲ್ಲಿ) ಅಜಾಗರೂಕನಾಗಿರದೆ । **ಅಪ್ರ-ಯುಚ್ಛದ್ಭಿಃ**—ಅಜಾಗರೂಕವಲ್ಲದವೂ । **ಶಿವೇಭಿಃ**—ಕಲ್ಯಾಣಕರವಾದವೂ । **ಶಗ್ಮೈಃ**—ಸುಖಕರವಾದವೂ ಆದ । **ಪಾಯುಭಿಃ**—ರಕ್ಷಣಾಪ್ರಕಾರಗಳಿಂದ । **ನಃ**—ನಮ್ಮನ್ನು । **ಪಾಹಿ**—ಕಾಪಾಡು । **ಇಷ್ಟೇ**—ಸಕಲರಿಂದಲೂ ಅಪೇಕ್ಷಿತನಾದ ಎಲೈ ಅಗ್ನಿಯೇ । **ಜಾಃ**—ನಮ್ಮಿಂದ ಉತ್ಪನ್ನನಾಗಿ। **ಅದಬ್ಧೇಭಿಃ**—ಅಪ್ರತಿಹತವಾದವೂ। **ಅದೃಪಿ-ತೇಭಿಃ**—ಪರವಶವಾಗದಿರುವುವೂ । **ಅನಿಮಿಷದ್ಭಿಃ**—ಜಡಸ್ವಭಾವವಿಲ್ಲದವೂ ಆದ ರಕ್ಷಣೆಗಳಿಂದ । **ನಃ**—ನಮ್ಮನ್ನು । **ಪರಿ**--ಸುತ್ತಲೂ । **ಪಾಹಿ**—ರಕ್ಷಿಸು । [**ಅಥವಾ ನಃ**—ನಮಗೆ ಸೇರಿದ। **ಜಾಃ**—ನಮ್ಮ ಪುತ್ರಪೌತ್ರಾದಿಗಳನ್ನು । **ಪರಿ ಪಾಹಿ**—ಸುತ್ತಲೂ ರಕ್ಷಿಸು.]

### ಭಾವಾರ್ಥ

ಎಲೈ ಅಗ್ನಿಯೇ, ನಮ್ಮ ವಿಷಯದಲ್ಲಿ ಬಹಳ ಜಾಗರೂಕನಾಗಿದ್ದು ಅಜಾಗರೂಕವಲ್ಲದವೂ, ಕಲ್ಯಾಣಕರವಾದವೂ, ಸುಖಕರವಾದವೂ ಆದ ರಕ್ಷಣೆಗಳಿಂದ ನಮ್ಮನ್ನು ಕಾಪಾಡು. ಸಕಲರಿಂದಲೂ ಅಪೇಕ್ಷಿತನಾದ ಅಗ್ನಿಯೇ, ನಮ್ಮಿಂದ ಉತ್ಪನ್ನನಾದೊಡನೆ, ಅಪ್ರತಿಹತವಾದವೂ. ಪರವಶವಾಗದಿರುವುವೂ, ಜಡಸ್ವಭಾವವಲ್ಲದವೂ ಆದ ರಕ್ಷಣೆಗಳಿಂದ ನಮ್ಮನ್ನೂ ನಮ್ಮ ಪುತ್ರಪೌತ್ರಾದಿಗಳನ್ನೂ ಸಹ ಸುತ್ತಲೂ ರಕ್ಷಿಸು.

### English Translation

Agni, never heedless (of us), guard us with never heedless, auspicious, and joy-bestowing cares : do you, who are desired (by all), protect us, and those born of us, with unobstructed, unovercome, and never-slumbering (vigilance).

### ವಿಶೇಷ ವಿಷಯಗಳು

ಈ ಋಕ್ಕಿನಲ್ಲಿ ಅಗ್ನಿಯ ರಕ್ಷಣೆಯನ್ನು ಪ್ರಾರ್ಥಿಸಿದೆ. ಆ ರಕ್ಷಣಾಕ್ರಮವನ್ನು **ಅಪ್ರಯುಚ್ಛನ್** ಇತ್ಯಾದಿ ವಿಶೇಷಣಗಳಿಂದ ತಿಳಿಸಿದೆ.

ಅಪ್ರಯುಚ್ಛನ್—ಯುಚ್ಛ ಪ್ರಮಾದೇ । ಅಪ್ರಯುಚ್ಛನ್ । ಅಸ್ಮದ್ರಕ್ಷಣೇ ಜಾಗರೂಕಸ್ಸನ್ । ಪ್ರಮಾದ, ಅಜಾಗರೂಕನಾಗಿರುವುದು ಎಂಬರ್ಥವನ್ನು ಕೊಡುವ **ಯುಚ್ಛ** ಧಾತುವಿನಿಂದ ನಿಷ್ಪನ್ನವಾಗಿ ಉಪಸರ್ಗಗಳೊಡನೆ ಕೂಡಿ ಅಜಾಗರೂಕನಾಗಿಲ್ಲದಿರುವುದು ಎಂದಭಿಪ್ರಾಯವನ್ನು ಕೊಡುತ್ತದೆ.

**ತ್ವಂ ದೂತಸ್ತ್ವಮು ನಃ ಪರಸ್ಪಾಸ್ತ್ವಂ ವಸ್ಯ ಆ ವೃಷಭ ಪ್ರಣೇತಾ ।**
**ಅಗ್ನೇ ತೋಕಸ್ಯ ನಸ್ತನೇ ತನೂನಾಮಪ್ರಯುಚ್ಛನ್ದೀದ್ಯದ್ಬೋಧಿ ಗೋಪಾಃ ।**
(ಋ. ಸಂ. ೨-೯-೨)

ಇತ್ಯಾದಿ ಋಕ್ಕುಗಳಲ್ಲಿ ಜಾಗರೂಕತೆಯಿಂದ ರಕ್ಷಿಸಬೇಕೆಂದು ಅಗ್ನಿಯನ್ನು ಪ್ರಾರ್ಥಿಸುವಂತೆ ಇಲ್ಲಿಯೂ ತಿಳಿಸಿದೆ.

**ಶರ್ಮ್ಯಃ**—ಶರ್ಮ ಶಬ್ದವು **ಸುಖ** ನಾಮಗಳಲ್ಲಿ ಪಠಿತವಾಗಿದೆ. (ನಿ. ೩-೧೬) ಸಾಯಣರು ಸಾಧಾರಣವಾಗಿ ಎಲ್ಲಾ ಕಡೆಗಳಲ್ಲಿಯೂ ಈ ಪದಕ್ಕೆ **ಸುಖ** ಅಥವಾ **ಸುಖಕರ**ವೆಂಬ ಅರ್ಥವನ್ನೇ ಮಾಡಿದ್ದಾರೆ. ಆದರೆ,

**ತಂ ಶರ್ಮಾಸೋ ಅರುಷಾಸೋ ಅಶ್ವಾ ಬೃಹಸ್ಪತಿಂ ಸಹವಾಹೋ ವಹಂತಿ ।**
**ಸಹಶ್ಚಿದ್ಯಸ್ಯ ನೀಲವತ್ಸಧಸ್ಥಂ ನಭೋ ನ ರೂಪಮರುಷಂ ವಸಾನಾಃ ।**
(ಋ. ಸಂ. ೭-೯೭-೬)

ಎಂಬ ಋಕ್ಕಿನಲ್ಲಿಯೂ ಮತ್ತು

**ಏಹ ಹರೀ ಬ್ರಹ್ಮಯುಜಾ ಶರ್ಮಾ ವಕ್ಷತಃ ಸಖಾಯಂ । ಗೀರ್ಭಿಃ ಶ್ರುತಂ ಗಿರ್ವಣಸಂ ॥**
(ಋ. ಸಂ. ೮-೨-೨೭)

ಎಂಬ ಋಕ್ಕಿನಲ್ಲಿಯೂ **ಸುಖಕರ** ಅಥವಾ **ಶಕ್ತ** ಎಂಬರ್ಥವನ್ನು ಮಾಡಿದ್ದಾರೆ. ಭಟ್ಟಭಾಸ್ಕರರು,

**ಪರ್ವತಾವಾ ಸರಸ್ವತೀ ಯಜತಾ ಗಂತು ಯಜ್ಞಂ । ಹವಂ ದೇವೀ ಜುಜುಷಾಣಾ ಘೃತಾಚೀ ಶರ್ಮಾಂ ನೋ ವಾಚಮುಶತೀ ಶೃಣೋತು ॥**
(ತೈ. ಸಂ. ೧-೮-೨೨-೨)

ಎಂಬ ತೈತ್ತಿರೀಯ ಸಂಹಿತಾವಾಕ್ಯದಲ್ಲೂ ಮತ್ತು

**ತಪಸಾಸ್ಮಾನುವರ್ತಯೇ । ಶಿವೇನಾಸ್ಯೋಪವರ್ತಯೇ । ಶರ್ಮೇನಾಸ್ಮಾಭಿವರ್ತಯೇ ।**
(ತೈ. ಬ್ರಾ. ೧-೫-೫-೨)

ಎಂಬ ತೈತ್ತಿರೀಯ ಬ್ರಾಹ್ಮಣ ವಾಕ್ಯದಲ್ಲಿಯೂ ಪ್ರಯೋಗಿಸಿರತಕ್ಕ **ಶರ್ಮ** ಪದಕ್ಕೆ **ಸಮರ್ಥ** ಅಥವಾ **ಶಕ್ತಿವಿಶೇಷ** ಎಂಬರ್ಥವಿದೆಯೆಂದು ತೋರಿಸಿದ್ದಾರೆ. ಈ ವಿವರಣೆಗಳಿಂದ ಈ ಪದವು ಶಕ್ತ್ಯರ್ಥಕವಾದ **ಶಕ್** ಧಾತುವಿನಿಂದ ನಿಷ್ಪನ್ನವಾಗಿದೆಯೆಂದು ಹೇಳಬಹುದು. ಶಕ್ತವಾದ ಅಥವಾ ಸಮರ್ಥವಾದ ಎಂಬರ್ಥವನ್ನು ಕೊಡುತ್ತದೆ. ಆದರೆ,

**ರಥವಾಹನಂ ಹವಿರಸ್ಯ ನಾಮ ಯತ್ರಾಯುಧಂ ನಿಹಿತಮಸ್ಯ ವರ್ಮ ।**
**ತತ್ರಾ ರಥಮುಪ ಶರ್ಮಂ ಸದೇಮ ವಿಶ್ವಾಹಾ ವಯಂ ಸುಮನಸ್ಯಮಾನಾಃ ॥**
(ಋ. ಸಂ. ೬-೭೫-೮)

ಇತ್ಯಾದಿ ಋಕ್ಕುಗಳಲ್ಲಿ ಮಾತ್ರ ಸುಖಕರವೆಂದೇ ಅರ್ಥವಾಗಬೇಕು. ಪ್ರಕೃತವಾದ ಋಕ್ಕಿನಲ್ಲಿ ಸುಖಕರ ಅಥವಾ ಸಮರ್ಥ ಎಂಬ ಎರಡರ್ಥಗಳೂ ಹೊಂದಿಕೊಳ್ಳುತ್ತವೆ.

**ಇಷ್ಟೋ**—**ಸರ್ವೈಃ ಏಷಣೀಯೋಗ್ನೇ** । ಎಲ್ಲರಿಂದಲೂ, ಎಂದರೆ ದೇವಮಾನವಾದಿ ಸಕಲರಿಂದಲೂ ಅಪೇಕ್ಷಿತನಾದವನೇ ಎಂದು ಅಗ್ನಿಯನ್ನು ಸಂಬೋಧಿಸಿದೆ.

ಅದಬ್ಧೇಭಿಃ—ಅಹಿಂಸಿತೈಃ ಯಾರಿಂದಲೂ ಹಿಂಸಿಸಲ್ಪಡದಿರುವ ಎಂದು ಪಾಯುಭಿಃ ಎಂಬ ಪದಕ್ಕೆ ವಿಶೇಷಣವಾಗಿದೆ. ಹಿಂಸಿಸು, ನಾಶಪಡಿಸು ಎಂದರ್ಥವಾಗುವ **ದಭ್** ಧಾತುವಿನಿಂದ ನಿಷ್ಪನ್ನವಾದ ಪದಗಳ ಪ್ರಯೋಗಗಳು ಅಧಿಕವಾಗಿ ಛಾಂದಸವಾಗಿಯೇ ಇವೆ. ಅಹಿಂಸಿತವಾದುದು, ನಾಶಮಾಡಲ್ಪಡದಿರುವುದು ಎಂದರ್ಥವನ್ನು ಕೊಡುವ ಅದಬ್ಧ ಶಬ್ದದ ಪ್ರಯೋಗವೂ ಹೆಚ್ಚಾಗಿ ಛಾಂದಸವೇ ಆಗಿದೆ. ಸಾಧಾರಣವಾಗಿ ಅಗ್ನಿಯನ್ನು ರಕ್ಷಣೆಗಾಗಿ ಪ್ರಾರ್ಥಿಸುವಾಗ **ಅದಬ್ಧೇಭಿಃ ಪಾಯುಭಿಃ** ಅಥವಾ ಅದಬ್ಧೇಭಿಃ **ಗೋಪಾಭಿಃ** ಎಂಬ ವಿಶೇಷಣ ವಿಶೇಷ್ಯಗಳು ಜೊತೆಯಲ್ಲಿಯೇ ಉಪಯೋಗಿಸಲ್ಪಟ್ಟಿವೆ.

**ಅದಬ್ಧೇಭಿಸ್ತವ ಗೋಪಾಭಿರಿಷ್ಟೇಽಸ್ಮಾಕಂ ಪಾಹಿ ತ್ರಿಷಧಸ್ಥ ಸೂರೀನ್ ।**
**ರಕ್ಷಾ ಚ ನೋ ದದುಷಾಂ ಶರ್ಧೋ ಅಗ್ನೇ ವೈಶ್ವಾನರ ಪ್ರ ಚ ತಾರೀಃ ಸ್ತವಾನಃ ।**

(ಋ. ಸಂ. ೬-೮-೭)

ಇತ್ಯಾದಿ ಋಕ್ಕುಗಳಲ್ಲಿ **ಗೋಪಾಭಿಃ** ಎಂಬುದರ ವಿಶೇಷಣವಾಗಿಯೂ ಮತ್ತು ಪ್ರಕೃತವಾದ ಋಕ್ಕಿನಲ್ಲಿರುವಂತೆ

**ಅದಬ್ಧೇಭಿಃ ಸವಿತಃ ಪಾಯುಭಿಷ್ಟ್ವಂ ಶಿವೇಭಿರದ್ಯ ಪರಿ ಪಾಹಿ ನೋ ಗಯಂ ।**
**ಹಿರಣ್ಯಜಿಹ್ವಃ ಸುವಿತಾಯ ನವ್ಯಸೇ ರಕ್ಷಾ ಮಾಕಿರ್ನೋ ಅಘಶಂಸ ಈಶತ ।**

(ಋ. ಸಂ. ೬-೭೧-೩)

ಇತ್ಯಾದಿ ಋಕ್ಕುಗಳಲ್ಲಿ ಪಾಯುಭಿಃ ಎಂಬ ಪದಕ್ಕೂ ವಿಶೇಷಣವಾಗಿದೆ.

**ಅದೃಪಿತೇಭಿಃ — ಕೇನಚಿದಪ್ಯಪರಿಭೂತೈಃ —** ಯಾರಿಂದಲೂ ತಡೆಯಲ್ಪಡದಿರುವುದೂ ಅಥವಾ ಯಾರಿಗೂ ಪರವಶವಾಗದಿರುವುದೂ ಆದ ಎಂದು ರಕ್ಷಣಾ ಸ್ವರೂಪವನ್ನು ತಿಳಿಸಿದೆ.

**ಅನಿಮಿಷದ್ಭಿಃ—ನಿಮೇಷರಹಿತೈಃ ಈದೃಶೈಃ ಲಕ್ಷಣೈಃ।** ಜಡಸ್ವಭಾವವಿಲ್ಲದವೂ, ಶೀಘ್ರವಾಗಿ ಫಲಕಾರಿಯಾಗತಕ್ಕವೂ ಆದ ಎಂದರ್ಥ.

ವ್ಯಾಕರಣಪ್ರಕ್ರಿಯಾ

**ಅಪ್ರಯುಚ್ಛನ್**—ಯುಚ್ಛ ಪ್ರಮಾದೇ ಧಾತು ಲಡರ್ಥದಲ್ಲಿ ಶತೃ ಪ್ರತ್ಯಯ. ಪ್ರ ಉಪಸರ್ಗ. ನ ಪ್ರಯುಚ್ಛನ್ ಅಪ್ರಯುಚ್ಛನ್. **ತತ್ಪುರುಷೇತುಲ್ಯಾರ್ಥ**—(ಪಾ. ಸೂ. ೬-೨-೨) ಎಂಬುದರಿಂದ ಅವ್ಯಯ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಶಿವೇಭಿಃ—ಬಹುಲಂ ಛಂದಸಿ** ಎಂಬುದರಿಂದ ಭಿಸಿಗೆ ಐಸ್‌ಭಾವ ವಿಕಲ್ಪವಾಗಿ ವಿಧಿಸಿರುವುದರಿಂದ ಬರುವುದಿಲ್ಲ. **ಬಹುವಚನೇಝಲ್ಯೇತ್** ಎಂಬುದರಿಂದ ಏತ್ವ.

**ಪಾಯುಭಿಃ**—ಪಾ ರಕ್ಷಣೇ ಧಾತು. **ಕೃವಾಪಾಜಿಮಿ**—(ಉ.ಸೂ. ೧-೧) ಎಂಬುದರಿಂದ ಉಣ್ ಪ್ರತ್ಯಯ. **ಆತೋಯುಕ್‌ಚಿಣ್‌ಕೃತೋಃ** (ಪಾ. ಸೂ. ೭-೩-೩೩) ಎಂಬುದರಿಂದ ಧಾತುವಿಗೆ ಯುಕಾಗಮ. ಕಿತ್ತಾದುದರಿಂದ ಅಂತಾವಯವವಾಗಿ ಬರುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಪಾಹಿ**—ಪಾ ರಕ್ಷಣೇ ಧಾತು. ಲೋಟ್ ಮಧ್ಯಮಪುರುಷಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ಅದಬ್ಧೇಭಿಃ**—ದಂಭು ದಂಭನೇ ಧಾತು. ಕ್ತಪ್ರತ್ಯಯ. **ಅನಿದಿತಾಂಹಲ**—ಎಂಬುದರಿಂದ ಉಪಧಾ ನಕಾರಲೋಪ. **ಝುಷಸ್ತಥೋ**—ಎಂಬುದರಿಂದ ಪ್ರತ್ಯಯಕ್ಕೆ ಧತ್ವ. ಪೂರ್ವಕ್ಕೆ ಜಶ್ತ್ವ. ನಞ್ ಪೂರ್ವಪದ ಪ್ರಕೃತಿಸ್ವರ ಬರುತ್ತದೆ. ಹಿಂದಿನಂತೆ ಭಿಸಿಗೆ ಐಸ್‌ಭಾವ ವಿಕಲ್ಪವಾದುದರಿಂದ ಏತ್ವ.

**ಅದೃಪಿತೇಭಿಃ**— ದೃಪ. ದೃಂಫ ಉತ್ಕ್ಲೇಶೇ ಧಾತು ತುದಾದಿ **ನಿಷ್ಠಾ** ಎಂಬುದರಿಂದ ಕ್ತಪ್ರತ್ಯಯ, **ಆರ್ಧಧಾತುಕಸ್ಯೇಡ್ವಲಾದೇಃ** ಎಂಬುದರಿಂದ ಅದಕ್ಕೆ ಇಡಾಗಮ ನ ದೃಪಿತಾಃ ಅದೃಪಿತಾಃ ಹಿಂದಿನಂತೆ ಅವ್ಯಯ ಪೂರ್ವಪದಪ್ರಕೃತಿಸ್ವರ. ಐಸ್‌ಭಾವ ಬಾರದಿರುವುದರಿಂದ ಏತ್ವ.

**ಇಷ್ಟೇ**—ಇಷು ಇಚ್ಛಾಯಾಂ ಧಾತು ಕ್ತಿಚ್ ಪ್ರತ್ಯಯ. ಷ್ಟುತ್ವದಿಂದ ಪ್ರತ್ಯಯತಕಾರಕ್ಕೆ ಟತ್ವ. ಸಂಬುದ್ಧಿಯಲ್ಲಿ **ಹ್ರಸ್ವಸ್ಯ ಗುಣಃ** ಎಂಬುದರಿಂದ ಗುಣ. **ಏಙ್‌ಹ್ರಸ್ವಾತ್‌ಸಂಬುದ್ಧೇಃ** ಎಂಬುದರಿಂದ ಸುಲೋಪ. **ಆಮಂತ್ರಿತಸ್ಯಚ** (ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಜಾಃ**—ಜನೀ ಪ್ರಾದುರ್ಭಾವೇ ಧಾತು. ದೃಶಿ ಗ್ರಹಣದಿಂದ ಉಪಪದವಿಲ್ಲದಿದ್ದರೂ ಇದಕ್ಕೆ ಡ ಪ್ರತ್ಯಯ. ಡಿತ್ವಸಾಮರ್ಥ್ಯದಿಂದ ಧಾತುವಿನ ಟಿಗೆ ಲೋಪ. ಪ್ರತ್ಯಯಸ್ವರದಿಂದ ಉದಾತ್ತವಾಗುತ್ತದೆ. ॥ ೮ ॥

ಇಲ್ಲಿಗೆ ನೂರನಲವತ್ತಮೂರನೆಯ ಸೂಕ್ತವು ಮುಗಿದುದು.



## ನೂರನಲವತ್ತನಾಲ್ಕನೆಯ ಸೂಕ್ತವು

---

**ಏತಿ ಪ್ರ ಹೋತೇತಿ ಸಪ್ತರ್ಚಂ ಪಂಚಮಂ ಸೂಕ್ತಂ ದೈರ್ಘತಮಸಂ ಜಾಗತಂ। ಪೂರ್ವತ್ರಾಗ್ನೇಯಂ ತು ತದಿತ್ಯುಕ್ತತ್ವಾದಿದಮಪ್ಯಾಗ್ನೇಯಂ। ತಥಾ ಚಾನುಕ್ರಮಣಿಕಾ। ಏತಿ ಪ್ರ ಸಪ್ತ ಜಾಗತಮಿತಿ॥ ಪ್ರಾತರನುವಾಕಾಶ್ವಿನಶಸ್ತ್ರಯೋರ್ವಿನಿಯೋಗ ಉಕ್ತಃ॥**

ಅನುವಾದವು—**ಏತಿ ಪ್ರ ಹೋತಾ** ಎಂಬ ಸೂಕ್ತವು ಇಪ್ಪತ್ತೊಂದನೆಯ ಅನುವಾಕದಲ್ಲಿ ಐದನೆಯ ಸೂಕ್ತವು. ಇದರಲ್ಲಿ ಏಳು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಉಚಥ್ಯಪುತ್ರನಾದ ದೀರ್ಘತಮಸೇ ಋಷಿಯು. ಜಗತೀಛಂದಸ್ಸು. ಹಿಂದೆಯೇ ಹೇಳಿರುವಂತೆ ಈ ಸೂಕ್ತಕ್ಕೆ ಅಗ್ನಿಯೇ ದೇವತೆಯು. ಅನುಕ್ರಮಣಿಕೆಯಲ್ಲಿ—**ಏತಿ ಪ್ರ ಸಪ್ತ ಜಾಗತಂ** ಎಂದು ಹೇಳಿರುವುದು. ಪ್ರಾತರನುವಾಕಮಂತ್ರಪಠನಕಾಲದಲ್ಲಿ ಅಶ್ವಿನಶಸ್ತ್ರಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದು.



॥ ಓಂ ॥

## ಸೂಕ್ತ—೧೪೪

॥ ಮಂಡಲ—೧ ॥ ಅನುವಾಕ—೨೧ ॥ ಸೂಕ್ತ—೧೪೪ ॥

॥ ಅಷ್ಟಕ— ೨ ॥ ಅಧ್ಯಾಯ— ೨ ॥ ವರ್ಗ— ೧೩ ॥

ಸೂಕ್ತದಲ್ಲಿರುವ ಋಕ್ಸಂಖ್ಯೆ-೭ ॥

॥ ಋಷಿಃ—ದೀರ್ಘತಮಾ ಔಚಥ್ಯಃ ॥

॥ ದೇವತಾ—ಅಗ್ನಿಃ ॥

॥ ಛಂದಃ—ಜಗತೀ ॥

ಸಂಹಿತಾಪಾಠಃ

ಏತಿ ಪ್ರ ಹೋತಾ ವ್ರತಮಸ್ಯ ಮಾಯಯೋರ್ಧ್ವಾಂ ದಧಾನಃ ಶುಚಿ-
ಪೇಶಸಂ ಧಿಯಂ ।
ಅಭಿ ಸ್ರುಚಃ ಕ್ರಮತೇ ದಕ್ಷಿಣಾವೃತೋ ಯಾ ಅಸ್ಯ ಧಾಮ ಪ್ರಥಮಂ ಹ
ನಿಂಸತೇ ॥ ೧ ॥

ಪದಪಾಠಃ

ಏತಿ । ಪ್ರ । ಹೋತಾ । ವ್ರತಂ । ಅಸ್ಯ । ಮಾಯಯಾ । ಊರ್ಧ್ವಾಂ । ದಧಾನಃ । ಶುಚಿಽಪೇಶಸಂ ।
ಧಿಯಂ ।
ಅಭಿ । ಸ್ರುಚಃ । ಕ್ರಮತೇ । ದಕ್ಷಿಣಾಽಆವೃತಃ । ಯಾಃ । ಅಸ್ಯ । ಧಾಮ । ಪ್ರಥಮಂ । ಹ ।
ನಿಂಸತೇ ॥ ೧ ॥

ಸಾಯಣಭಾಷ್ಯಂ

ಅಯಂ ಹೋತಾ ಹೋಮನಿಷ್ಪಾದಕೋಽಧ್ವರ್ಯುರಸ್ಯಾಗ್ನೇರ್ವ್ರತಂ ಹವಿಷ್ಪ್ರದಾನಾದಿರೂಪಂ ಕರ್ಮ ಕರ್ತುಂ ಮಾಯಯಾ ಕರ್ತವ್ಯವಿಶೇಷಪ್ರಜ್ಞಯಾ ಯುಕ್ತಃ ಸನ್ ಪ್ರೈತಿ । ಪ್ರಕರ್ಷೇಣ ಗಚ್ಛತಿ

ಹೋತುಂ । ಮಾಯೇತಿ ಪ್ರಜ್ಞಾನಾಮ ಮಾಯಾ ವಯುನಮಿತಿ ತನ್ನಾಮಸು ಪಾಠಾತ್ । ಕೀದೃಶೋಽ-ಯಂ । ಊರ್ಧ್ವಾಮುಪರ್ಯಾರೂಢಾಂ ಶುಚಿಪೇಶಸಂ ಶೋಭನರೂಪೋಪೇತಾಂ । ಪೇಶ ಇತಿ ರೂಪ-ನಾಮ । ಧಿಯಂ ಪ್ರಜ್ಞಾಂ ದಧಾನಃ । ಆ ಚತುರ್ಥಾತ್ಕರ್ಮಣೋಽಭಿಸಮೀಕ್ಷ್ಯೇತೇದಂ ಕರಿಷ್ಯತೀತ್ಯುಕ್ತ-ತ್ವಾತ್ । ಆಗತ್ಯ ಚ ದಕ್ಷಿಣಾವೃತಃ ಪ್ರಾದಕ್ಷಿಣ್ಯೇನ ವರ್ತಮಾನಾಃ ಸ್ರುಚೋ ಜುಹ್ವಾದೀಃ ಕ್ರಮತೇ । ಗೃಹ್ಣಾತಿ । ಕೀದೃಶ್ಯಃ ಸ್ರುಚಃ । ಯಾಃ ಪ್ರಥಮಂ ಪಾತ್ರಾಸಾದನಕಾಲೇಽಸ್ಯಾಗ್ನೇರ್ಧಾಮ ಸ್ಥಾನಂ ನಿಂಸತೇ ॥ ನಿಂಸ ಚುಂಬನ ಇತಿ ಧಾತುಃ ॥ ಚುಂಬಂತಿ । ಭಜಂತ ಇತ್ಯರ್ಥಃ । ಪ್ರಥಮಮನುಷ್ಠೇಯ-ಕ್ರಮಂ ಬುದ್ಧ್ವಾ ಪ್ರೈತಿ ಪಶ್ಚಾತ್ಸ್ರುಚಃ ಕ್ರಮತ ಇತ್ಯರ್ಥಃ । ಹಶಬ್ದಃ ಪ್ರಸಿದ್ಧೌ । ಯದ್ವಾ । ಹೋತಾ ದೇವಾನಾಮಾಹ್ವಾತಾಯಮಗ್ನಿರಸ್ಯ ಯಜಮಾನಸ್ಯ ವ್ರತಂ ಕರ್ಮ ಜ್ಯೋತಿಷ್ಟೋಮಾದಿ ಪ್ರಜ್ಞಾ-ವಿಶೇಷೇಣ ಯುಕ್ತಃ ಸನ್ನೇತಿ । ಯಜ್ಞದೇಶಂ ಪ್ರತ್ಯಾಗಚ್ಛತಿ । ಕೀದೃಶೋಽಯಂ । ಊರ್ಧ್ವಾಮೂರ್ಧ್ವ-ವರ್ತಿ ಶುಚಿಪೇಶಸಂ ಶೋಭನರೂಪೋಪೇತಂ ಧಿಯಂ ಜ್ವಾಲಾಚಲನಾದಿರೂಪಂ ಕರ್ಮ ದಧಾನೋ ಧಾರಯಮಾಣಃ । ಆಗತ್ಯ ಚ ದಕ್ಷಿಣಾವೃತ ಉಕ್ತಲಕ್ಷಣಾಃ ಸ್ರುಚೋ ಘೃತಪೂರ್ಣಾ ಜುಹೂಪಭೃದಾ-ದಿಕಾ ಅಭಿಕ್ರಮತೇ । ಆಕ್ರಮತೇ । ಘೃತಂ ಸ್ವೀಕರ್ತುಂ ಜ್ವಾಲಾಃ ಪ್ರಸರ್ಪತೀತ್ಯರ್ಥಃ । ಯಾಃ ಸ್ರುಚಃ ಪ್ರಥಮಂ ಪೂರ್ವಂ ಹವಿರಾಸಾದನಕಾಲೇಽಸ್ಯಾಗ್ನೇರ್ಧಾಮ ಸ್ಥಾನಂ ವೇದಿಲಕ್ಷಣಂ ನಿಂಸತೇ ಚುಂಬಂತಿ ಪ್ರಾಪ್ತಾಃ । ಹಶಬ್ದಃ ಪ್ರಸಿದ್ಧೌ ॥ ಣಿಸಿ ಚುಂಬನೇ । ಅದಾದಿತ್ವಾಚ್ಛಪೋ ಲುಕ್ । ಇದಿತ್ವಾನ್ನುಮ್ ॥

### ಪ್ರತಿಪದಾರ್ಥ

**ಊರ್ಧ್ವಾಂ**— ಔನ್ನತ್ಯವನ್ನು ಪಡೆದುದೂ । **ಶುಚಿಪೇಶಸಂ**—ಗಂಭೀರವಾದ ರೂಪವುಳ್ಳದ್ದೂ ಆದ । **ಧಿಯಂ** — ಪ್ರಜ್ಞೆಯನ್ನು । **ದಧಾನಃ** — ಹೊಂದಿರುವ । **ಹೋತಾ** — ಹೋಮಸಂಪಾದಕನಾದ ಅಧ್ವರ್ಯುವು । **ಅಸ್ಯ**— ಅಗ್ನಿಯನ್ನು ಉದ್ದೇಶಿಸಿದ । **ವ್ರತಂ**— ಹವಿಷ್ಪ್ರದಾನಾದಿ ಕರ್ಮಗಳನ್ನು (ನೆರವೇರಿಸಲು)। **ಮಾಯಯಾ**— (ತನ್ನ ಕರ್ತವ್ಯದಲ್ಲಿ) ವಿಶೇಷವಾದ ಅನುಭವವುಳ್ಳ ಪ್ರಜ್ಞೆಯಿಂದ ಕೂಡಿಕೊಂಡು । **ಪ್ರ ಏತಿ**— ಮುಂದುವರಿಯುತ್ತಾನೆ । **(ಮತ್ತು) ಯಾಃ**—ಯಾವ ಜುಹ್ವಾದಿ ಪಾತ್ರೆಗಳು । **ಪ್ರಥಮಂ**—ಪಾತ್ರೆಗಳನ್ನು ಇಡುವ ಕಾಲದಲ್ಲಿ (ಅಥವಾ ಹವಿಸ್ಸನ್ನು ಅರ್ಪಿಸುವಾಗ ಎಲ್ಲಕ್ಕಿಂತಲೂ ಮೊದಲು) । **ಅಸ್ಯ**— ಈ ಅಗ್ನಿಯ । **ಧಾಮ**— ಸ್ಥಾನವನ್ನು । **ನಿಂಸತೇ** — ಮುಟ್ಟುತ್ತವೆಯೋ । (ಅಂತಹ) **ದಕ್ಷಿಣಾವೃತಃ** — ಪ್ರದಕ್ಷಿಣವಾಗಿ ಇರತಕ್ಕ । **ಸ್ರುಚಃ**—ಜುಹ್ವಾದಿಗಳನ್ನು । **ಕ್ರಮತೇ**—ತೆಗೆದುಕೊಳ್ಳುತ್ತಾನೆ । [**ಅಥವಾ ಊರ್ಧ್ವಾಂ**— ಉನ್ನತವಾಗಿ ಮೇಲಕ್ಕೆದ್ದಿರುವುದೂ । **ಶುಚಿಪೇಶಸಂ**—ಮನೋಹರವಾದ ರೂಪವುಳ್ಳದ್ದೂ ಆದ । **ಧಿಯಂ**— ಜ್ವಾಲೆಯನ್ನು ಹೊಂದಿರುವವನೂ । **ಹೋತಾ**—(ದೇವತೆಗಳಿಗೆ) ಆಹ್ವಾನವನ್ನು ಕೊಡುವವನೂ ಆದ ಅಗ್ನಿಯು । **ಅಸ್ಯ**— ಈ ಯಜಮಾನನ । **ವ್ರತಂ**—ಜ್ಯೋತಿಷ್ಟೋಮಾದಿ ಕರ್ಮಗಳನ್ನು । **ಮಾಯಯಾ**—ತನ್ನ ವಿಶೇಷವಾದ ಪ್ರಜ್ಞೆಯಿಂದ ತಿಳಿದುಕೊಂಡು । **ಪ್ರ ಏತಿ**— ಮುಂದುವರಿದು ಬರುತ್ತಾನೆ । (ಅನಂತರ) **ಯಾಃ**— ಯಾವ ಜುಹ್ವಾದಿ ಪಾತ್ರೆಗಳು। **ಪ್ರಥಮಂ**— ಮೊದಲು (ಹವಿಸ್ಸನ್ನು ಇಡುವ ಕಾಲದಲ್ಲಿ) । **ಅಸ್ಯ**— ಅಗ್ನಿಯ । **ಧಾಮ**— ಸ್ಥಾನವನ್ನು । **ನಿಂಸತೇ**— ಮುಟ್ಟುತ್ತವೆಯೋ (ಅಂತಹ) **ದಕ್ಷಿಣಾವೃತಃ**— ಪ್ರದಕ್ಷಿಣವಾಗಿ ಇರತಕ್ಕ । **ಸ್ರುಚಃ**—(ಘೃತಪೂರ್ಣಗಳಾದ) ಜುಹ್ವಾದಿಗಳನ್ನು । **ಅಭಿ ಕ್ರಮತೇ**— ಆಕ್ರಮಿಸುತ್ತಾನೆ (ಹವಿಸ್ಸನ್ನು ಸ್ವೀಕರಿಸಲು ಜ್ವಾಲೆಯನ್ನು ಹರಡುತ್ತಾನೆ).]

॥ ಭಾವಾರ್ಥ ॥

ಹೋಮ ಸಂಪಾದಕನಾದ ಅಧ್ವರ್ಯುವು ಔನ್ನತ್ಯವನ್ನು ಪಡೆದಿರುವ ಪ್ರಜ್ಞೆಯಿಂದ ಕೂಡಿರುವುದೂ ಗಂಭೀರವಾದ ರೂಪವುಳ್ಳದ್ದೂ ಆದ ಪ್ರಜ್ಞೆಯಿಂದಲೂ, ಹವಿಷ್ಪ್ರದಾನಾದಿ ಕರ್ಮಗಳನ್ನು ನೆರವೇರಿಸಲು ಬೇಕಾದ ವಿಶೇಷ ಅನುಭವಗಳಿಂದ ಕೂಡಿಕೊಂಡು ಯಜ್ಞಾಚರಣೆಗಾಗಿ ಮುಂದುವರಿಯುತ್ತಾನೆ. ಹವಿಸ್ಸನ್ನು ಅರ್ಪಿಸುವಾಗ ಎಲ್ಲಕ್ಕಿಂತಲೂ ಮೊದಲು ಅಗ್ನಿವೇದಿಕೆಯನ್ನು ಮುಟ್ಟುವುದೂ ಮತ್ತು ಪ್ರದಕ್ಷಿಣವಾಗಿ ಇಟ್ಟಿರುವುದೂ ಆದ ಜುಹ್ವಾದಿಗಳನ್ನು ತೆಗೆದುಕೊಳ್ಳುತ್ತಾನೆ.

## English Translation

The ministering priest, (qualified) by experience, and possessing) exalted and graceful devotion, proceeds (to celebrate) his, (Agni's) worship. having cumambulated (the alter), he takes up the ladles which are first to present the oblations.

### ವಿಶೇಷವಿಷಯಗಳು

**ಇತಿ ಪ್ರ ಸಪ್ತ ಜಾಗತಂ । ( ಅನುಕ್ರಮಣಿಕಾ ) ಪ್ರಾತರನುವಾಕಾಶ್ವಿನಶಸ್ತ್ರಯೋರ್ವಿನಿಯೋಗ ಉಕ್ತಃ ।** (ಸಾ. ಭಾ. ಪೀಠಿಕಾ)

ಆಶ್ವಿನ ಶಸ್ತ್ರದಲ್ಲಿ ಈ ಸೂಕ್ತದ ವಿನಿಯೋಗವೆಂದು ಸಾಯಣರು ತಮ್ಮ ಭಾಷ್ಯದ ಪೀಠಿಕೆಯಲ್ಲಿ ತಿಳಿಸಿದ್ದಾರೆ. **ಆಶ್ವಿನಶಸ್ತ್ರಕ್ಕೂ ಅಗ್ನಿಸೂಕ್ತಕ್ಕೂ** ಇರತಕ್ಕ ಸಂಬಂಧವನ್ನು ಸೂಚಿಸುವ ಕಥಾಸಂದರ್ಭವು ಐತರೇಯ ಬ್ರಾಹ್ಮಣದಲ್ಲಿ ಈರೀತಿ ಉಕ್ತವಾಗಿದೆ.

**ಪ್ರಜಾಪತಿರ್ವೈ ಸೋಮಾಯ ರಾಜ್ಞೇ ದುಹಿತರಂ ಪ್ರಾಯಚ್ಛತ್ಸೂರ್ಯಾಂ ಸಾವಿತ್ರೀಂ ತಸ್ಯೈ ಸರ್ವೇ ದೇವಾ ವರಾ ಆಗಚ್ಛಂಸ್ತಸ್ಯಾ ಏತತ್ಸಹಸ್ರಂ ವಹತುಮನ್ವಾಕರೋದ್ಯದೇತದಾಶ್ವಿನಮಿತ್ಯಾಚಕ್ಷತೇಽನಾಶ್ವಿನಂ ಹೈವ ತದ್ಯದರ್ವಾಕ್ಸಹಸ್ರಂ ತಸ್ಮಾತ್ತತ್ಸಹಸ್ರಂ ವೈವ ಶಂಸೇದ್ಭೂಯೋ ವಾ ಪ್ರಾಶ್ಯ ಘೃತಂ ಶಂಸೇದ್ಯಥಾ ಹ ವಾ ಇದಮನೋ ವಾ ರಥೋ ವಾಕ್ತೋ ವರ್ತತ ಏವಂ ಹೈವಾಕ್ತೋ ವರ್ತತೇ । ಶಕುನಿರಿವೋತ್ಪತಿಷ್ಯನ್ನಾಹ್ವಯೀತ ।**

ಪೂರ್ವದಲ್ಲಿ ಪ್ರಜಾಪತಿಯು ತನ್ನ ಮಗಳಾದ ಸೂರ್ಯೆಯನ್ನು ಸೋಮನಿಗೆ ವಿವಾಹಾರ್ಥವಾಗಿ ಕೊಡಲು ನಿಶ್ಚಯಿಸಿದಾಗ ಸಕಲದೇವತೆಗಳೂ ಅವಳನ್ನು ತಾವು ವರಿಸಬೇಕೆಂದು ಅಪೇಕ್ಷೆಯಿಂದ ಬಂದರು. ಆಗ ಪ್ರಜಾಪತಿಯು **ಆಶ್ವಿನ ಶಸ್ತ್ರವೆಂದು** ಪ್ರಸಿದ್ಧವಾದ ಸಹಸ್ರಮಂತ್ರಗಳನ್ನು ಪಠಿಸಬೇಕೆಂದೂ, ಅದಕ್ಕೆ ಕಡಿಮೆಯಾಗಬಾರದೆಂದೂ ಒಂದು ನಿರ್ಬಂಧವನ್ನು ಗೊತ್ತುಮಾಡಿದನು. ಲೋಕದಲ್ಲಿ ರಥಚಕ್ರವು ತೈಲಸಿಂಚಿತವಾದನಂತರ ಹೇಗೆ ಸುಲಭವಾಗಿ ಚಲಿಸಬಲ್ಲದೋ ಹಾಗೆ ಘೃತಪಾನಾನಂತರ ಸುಲಭವಾಗಿ ಮಂತ್ರಗಳನ್ನು ಪಠಿಸುವುದಾದುದರಿಂದ

ಮೊದಲು ಘೃತಪಾನವನ್ನು ಮಾಡಿ ಅನಂತರ ಪಠಿಸಬೇಕು. ಮತ್ತು ಪಕ್ಷಿಯು ಹಾರುವುದಕ್ಕೆ ಸಿದ್ಧವಾದಾಗ ತನ್ನ ದೇಹವನ್ನು ಲಘುವಾಗಿ ಮಾಡಿಕೊಳ್ಳುವಂತೆ ಇವಳನ್ನು ಮೋಹಿಸುವ ವರನೂ ಆ ಗುಣವನ್ನು ಹೊಂದಿರಬೇಕೆಂದನು.

> ತಸ್ಮಿನ್ದೇವಾ ನ ಸಮಜಾನತ ಮಮೇದಮಸ್ತು ಮಮೇದಮಸ್ತ್ವಿತಿ ತೇ ಸಂಜಾನಾನಾ ಅಬ್ರುವನ್ನಾಜಿಮಸ್ಯಾಽಯಾಮಹೇ ಸ ಯೋ ನ ಉಜ್ಜೇಷ್ಯತಿ ತಸ್ಯೇದಂ ಭವಿಷ್ಯತೀತಿ ತೇಽಗ್ನೇರೇವಾಧಿ ಗೃಹಪತೇರಾದಿತ್ಯಂ ಕಾಷ್ಠಾಮಕುರ್ವತ ತಸ್ಮಾದಾಗ್ನೇಯೀ ಪ್ರತಿಪದ್ಭವತ್ಯಾಶ್ವಿನಸ್ಯಾಗ್ನಿರ್ಹೋತಾ ಗೃಹಪತಿಃ ಸ ರಾಜೇತಿ ।

ಆಗ ದೇವತೆಗಳು ಪರಸ್ಪರವಾಗಿ ಹೋರಾಟಮಾಡಲಿಷ್ಟಪಡದೆ ಎಲ್ಲರೂ ಸೇರಿ ಒಂದು ಪಂದ್ಯದಲ್ಲಿ ಭಾಗವಹಿಸಬೇಕೆಂದೂ ಆ ಓಟದಲ್ಲಿ ಯಾರು ಜಯಿಸುತ್ತಾರೋ ಅವರು ಇವಳನ್ನು ವರಿಸಲು ಅರ್ಹನೆಂದೂ ಒಟ್ಟಿಗೆ ಒಂದು ತೀರ್ಮಾನಕ್ಕೆ ಬಂದರು. ಆಗ ಗೃಹಪತಿಯೊದ ಅಗ್ನಿಯಿಂದ ಪ್ರಾರಂಭಿಸಿ ಸೂರ್ಯನವರಿಗೆ ಓಡಿದರು. ಅದುದರಿಂದಲೇ ಪ್ರಥಮಮಂತ್ರ.

> ಸ ತ್ವಂ ದಕ್ಷಸ್ಯಾವೃಕೋ ವೃಧೋ ಭೂರರ್ಯಃ ಪರಸ್ಯಾಂತರಸ್ಯ ತರುಷಃ ।
> ರಾಯಃ ಸೂನೋ ಸಹಸೋ ಮರ್ತ್ಯೇಷ್ವಾ ಛರ್ದಿರ್ಯಚ್ಛ ವೀತಹವ್ಯಾಯ ಸಪ್ರಥೋ
> ಭರದ್ವಾಜಾಯ ಸಪ್ರಥಃ ॥
>
> (ಋ. ಸಂ. ೬-೧೫-೩)

ಎಂಬ ಋಕ್ಕು ಅಗ್ನಿಪರವಾಗಿರುವುದೆಂದು ಒಂದು ಮತವೂ, ಅಲ್ಲದೇ

> ಅಗ್ನಿಂ ಮನ್ಯೇ ಪಿತರಮಗ್ನಿಮಾಪಿಮಗ್ನಿಂ ಭ್ರಾತರಂ ಸದಮಿತ್ಸಖಾಯಂ ।
> ಅಗ್ನೇರನೀಕಂ ಬೃಹತಃ ಸಪರ್ಯಂ ದಿವಿ ಶುಕ್ರಂ ಯಜತಂ ಸೂರ್ಯಸ್ಯ ॥
>
> (ಋ- ಸಂ. ೧೦-೭-೩)

ಎಂಬ ಮಂತ್ರದಿಂದ ಪ್ರಾರಂಭಿಸಬೇಕೆಂದು ಇನ್ನು ಕೆಲವರ ಮತ. ಆದರೆ ಇದು ಗ್ರಾಹ್ಯವಲ್ಲ.

> ತತ್ತನ್ನಾದೃತ್ಯಂ .... .... .... ತಸ್ಮಾದಗ್ನಿರ್ಹೋತಾ ಗೃಹಪತಿಃ ಸ ರಾಜೇತ್ಯೇತಯೈವ ಪ್ರತಿಪದ್ಯೇತ ಗೃಹಪತಿವತೀ ಪ್ರಜಾತಿಮತೀ ಶಾಂತಾ ಸರ್ವಾಯುಃ ಸರ್ವಾಯುತ್ವಾಯ । ಸರ್ವಮಾಯುರೇತಿ ಯ ಏವಂ ವೇದ ।

ಅಗ್ನಿರ್ಹೋತಾ ಗೃಹಪತಿಃ ಇತ್ಯಾದಿ ಮಂತ್ರಗಳಿಂದ ಪ್ರಾರಂಭಿಸುವುದೇ ನ್ಯಾಯವಾಗಿದೆ. ಈ ತತ್ತ್ವವನ್ನು ತಿಳಿದವರು ಸಕಲಸಂಪತ್ತನ್ನೂ ಪಡೆದು ದೀರ್ಘಾಯುಗಳಾಗುತ್ತಾರೆಂದಿದೆ. ಇಷ್ಟೇ ಅಲ್ಲದೇ,

> ತಾಸಾಂ ವೈ ದೇವತಾನಾಮಾಜಿಂ ಧಾವಂತೀನಾಮಭಿಸೃಷ್ಟಾನಾಮಗ್ನಿರ್ಮುಖಂ ಪ್ರಥಮಃ ಪ್ರತ್ಯಪದ್ಯತ ತಮಶ್ವಿನಾವನ್ವಾಗಚ್ಛತಾಂ ತಮಬ್ರೂತಾಮಪೋದಿಹ್ಯಾವಾಂ ವಾ ಇದಂ ಜೇಷ್ಯಾವ ಇತಿ ಸ ತಥೇತ್ಯಬ್ರವೀತ್ತಸ್ಯ ವೈ ಮಮೇಹಾಪ್ಯಸ್ತ್ವಿತಿ ತಥೇತಿ ತಸ್ಮಾ ಅಪ್ಯತ್ರಾಕುರುತಾಂ ತಸ್ಮಾದಾಗ್ನೇಯಮಾಶ್ವಿನೇ ಶಸ್ಯತೇ ।

ಸಕಲ ದೇವತೆಗಳೂ ಈ ಪಂದ್ಯದಲ್ಲಿ ಭಾಗವಹಿಸಿ ಓಡುತ್ತಿದ್ದಾಗ ಅಗ್ನಿಯು ಎಲ್ಲರಿಗಿಂತಲೂ ಮುಂದಾದನು. ಆಗ ಅಶ್ವಿನೀದೇವತೆಗಳು ಅಗ್ನಿಯನ್ನು ಸಮೀಪಿಸಿ ನಮಗೆ ದಾರಿಯನ್ನು ಬಿಡು. ಇದರಲ್ಲಿ ನಾವು ಜಯಿಸಲು ಸಹಾಯ ಮಾಡು ಎಂದು ಕೇಳಿಕೊಂಡರು. ಆಗ ಅಗ್ನಿಯು ಅದಕ್ಕೆ ಒಪ್ಪಿದನು. ಆದರೆ ಆ ಜಯದಲ್ಲಿ ತನಗೂ ಒಂದು ಭಾಗವನ್ನು ಕೊಡಬೇಕೆಂದು ಕೇಳಿಕೊಂಡನು. ಆದುದರಿಂದಲೇ ಆಶ್ವಿನಶಸ್ತ್ರದಲ್ಲಿ ಅವನಿಗೂ ಒಂದು ಭಾಗವಿದೆ. (ಇದರಂತೆಯೇ ಉಷಸ್ಸಿಗೂ ಲಭಿಸಿದ ಭಾಗದ ವಿಷಯದಲ್ಲಿಯೂ, ಉಷೋದೇವತಾಕವಾದ ಸೂಕ್ತಕ್ಕೂ ಆಶ್ವಿನಶಸ್ತ್ರಕ್ಕೂ ಇರತಕ್ಕ ಸಂಬಂಧವನ್ನು ಋಗ್ವೇದ ಸಂಹಿತೆಯ ೧೦ನೇ ಭಾಗದಲ್ಲಿ ಋ. ಸಂ. ೧-೧೧೩ನೇ ಸೂಕ್ತದ ಪೀಠಿಕೆಯಲ್ಲಿ ತಿಳಿಸಿದೆ.)

ಈ ಸಂದರ್ಭದಲ್ಲಿ ಇನ್ನೊಂದು ಆಕ್ಷೇಪವನ್ನು ಹೇಳಿ ಅದಕ್ಕೆ ಸಮಾಧಾನವನ್ನೂ ಹೇಳಿದೆ.

**ತದಾಹುರ್ಯಚ್ಛಸ್ಯತ ಆಗ್ನೇಯಂ ಶಸ್ಯತ ಉಷಸ್ಯಂ ಶಸ್ಯತ ಐಂದ್ರಮಥ ತಸ್ಮಾದೇತದಾಶ್ವಿನ-ಮಿತ್ಯಾಚಕ್ಷತ ಇತ್ಯಶ್ವಿನೌ ಹಿ ತದುದಜಯತಾಮಶ್ವಿನಾವಾಶ್ನುವಾತಾಂ ಯದಶ್ವಿನಾ ವಾಶ್ನು ವಾತಾಂ ತಸ್ಮಾದೇತದಾಶ್ವಿನಮಿತ್ಯಾಚಕ್ಷತೇ ।**

(ಐ. ಬ್ರಾ. ೪-೭ ರಿಂದ ೮)

ಈ ಸಂದರ್ಭದಲ್ಲಿ ಅಗ್ನಿಯನ್ನೂ ಇಂದ್ರನನ್ನೂ ಉಷಸ್ಸನ್ನೂ ಉದ್ದೇಶಿಸಿ ಮಂತ್ರಗಳನ್ನು ಪಠಿಸಬೇಕಾಗಿರುವುದರಿಂದ ಇದಕ್ಕೆಲ್ಲಾ ಆಶ್ವಿನಶಸ್ತ್ರವೆಂದು ಹೆಸರು ಹೇಗೆ ಬಂದಿತು ಎಂಬ ಆಕ್ಷೇಪಣೆ ಬಂದರೆ ಇದು ಮುಖ್ಯವಾಗಿ ಅಶ್ವಿನೀ ದೇವತೆಗಳ ಜಯವನ್ನು ಕುರಿತು ಪಠಿತವಾಗಿರುವುದರಿಂದ ಈ ಮಂತ್ರಗಳಿಗೆಲ್ಲಾ ಈ ಹೆಸರು ಎಂಬುದೇ ಸಮಾಧಾನ.

**ಶುಚಿಪೇಶಸಂ**—**ಪೇಶ ಇತಿ ರೂಪನಾಮ** (ನಿ. ೩-೧೩) **ಶೋಭನರೂಪೋಪೇತಾ**—ಗಂಭೀರವಾದ ರೂಪವುಳ್ಳ ಎಂದು **ಧಿಯಂ** ಎಂಬುದಕ್ಕೆ ವಿಶೇಷಣವಾಗಿದೆ ನಿರುಕ್ತಕಾರರೂ,

**ಆ ಸುಷ್ವಯಂತೀ ಯಜತೇ ಉಪಾಕೇ ಉಷಾಸಾನಕ್ತಾ ಸದತಾಂ ನಿ ಯೋನೌ ।**
**ದಿವ್ಯೇ ಯೋಷಣೇ ಬೃಹತೀ ಸುರುಕ್ಮೇ ಅಧಿ ಶ್ರಿಯಂ ಶುಕ್ರಪಿಶಂ ದಧಾನೇ ॥**

(ಋ ಸಂ. ೧೦-೧೧೦-೬)

ಎಂಬ ಋಕ್ಕನ್ನುದಹರಿಸಿ **ಶುಕ್ರಪೇಶಸಂ ಶ್ರಿಯಂ ಶೋಚತೇರ್ಜ್ವಲತಿಕರ್ಮಣಃ । ಪೇಶ ಇತಿ ರೂಪನಾಮ** ಎಂದು ವಿವರಿಸಿ ಪ್ರಕಾಶಮಾನವಾದ ರೂಪವೆಂದರ್ಥಮಾಡಿದ್ದಾರೆ. (ನಿ. ೮-೧೧)

**ಧಿಯಂ—ಪ್ರಜ್ಞಾಂ ।** ಪ್ರಜ್ಞೆಯನ್ನು. ಈ ಪದವು **ಕರ್ಮ**ನಾಮಗಳಲ್ಲಿಯೂ (೩-೧.) **ಪ್ರಜ್ಞಾ**ನಾಮ ಗಳಲ್ಲಿಯೂ (ನಿ. ೧೧-೨೭) ಪಠಿತವಾಗಿರುವುದನ್ನೂ ನಿರುಕ್ತಕಾರರು ಈ ಅರ್ಥಗಳನ್ನೂ ತೋರಿಸುವ ಋಕ್ಕುಗಳನ್ನು ಉದಹರಿಸಿ ವಿವರಿಸಿರುವುದನ್ನೂ ಹಿಂದೆ ತಿಳಿಸಿದೆ.

**ಮಾಯಯಾ—ಮಾಯೇತಿ** ಪ್ರಜ್ಞಾನಾಮ । **ಮಾಯಾ, ವಯುನಂ ಇತಿ ತನ್ನಾಮಸು ಪಾಠಾತ್** (ನಿ. ೩-೧೩), ನಿರುಕ್ತಕಾರರು

**ಮೂರ್ಧಾ ಭುವೋ ಭವತಿ ನಕ್ತಮಗ್ನಿಸ್ತತಃ ಸೂರ್ಯೋ ಜಾಯತೇ ಪ್ರಾತರುದ್ಯನ್ ।**
**ಮಾಯಾಮೂ ತು ಯಜ್ಞಿಯಾನಾಮೇತಾಮಪೋ ಯತ್ತೂರ್ಣಿಶ್ಚರತಿ ಪ್ರಜಾನನ್ ॥**

(ಋ. ಸಂ ೧೦-೮೮-೬)

ಎಂಬ ಋಕ್ಕನ್ನುದಹರಿಸಿ **ಸ ಏವ ಪ್ರಜ್ಞಾಂ ತ್ರೇತಾಂ ಮನ್ಯಂತೇ ।** ಎಂದು ವಿವರಿಸಿ **ಮಾಯಾ** ಎಂಬ ಶಬ್ದಕ್ಕೆ ಪ್ರಜ್ಞೆಯೆಂಬರ್ಥವನ್ನು ತಿಳಿಸಿದ್ದಾರೆ. (ನಿ ೭-೨೭). ಅಲ್ಲದೆ—

**ಶುಕ್ರಂ ತೇ ಅನ್ಯದ್ಯಜತಂ ತೇ ಅನ್ಯದ್ವಿಷುರೂಪೇ ಅಹನೀ ದ್ಯೌರಿವಾಸಿ ।**
**ವಿಶ್ವಾ ಹಿ ಮಾಯಾ ಅವಸಿ ಸ್ವಧಾವೋ ಭದ್ರಾ ತೇ ಪೂಷನ್ನಿಹ ರಾತಿರಸ್ತು ॥**
(ಋ. ಸಂ. ೬-೫೮-೧)

ಎಂಬ ಋಕ್ಕನ್ನು ಉದಹರಿಸಿ (ನಿ. ೧೨-೧೭) ಇಲ್ಲಿಯೂ ಸಹ **ಮಾಯಾ** ಶಬ್ದಕ್ಕೆ ಪ್ರಜ್ಞೆಯೆಂಬರ್ಥವಿದೆಯೆಂದು ತೋರಿಸಿದ್ದಾರೆ. ಈ ಪದಕ್ಕೆ **ವಂಚನೆ, ಮೋಸ** ಎಂಬ ಅರ್ಥವೂ ಉಂಟು.

**ಅರೋರವೀದ್ವೃಷ್ಣೋ ಅಸ್ಯ ವಜ್ರೋಽಮಾನುಷಂ ಯನ್ಮಾನುಷೋ ನಿಜೂರ್ವಾತ್ ।**
**ನಿ ಮಾಯಿನೋ ದಾನವಸ್ಯ ಮಾಯಾ ಅಪಾದಯತ್ಪಪಿವಾನ್ತ್ಸುತಸ್ಯ ॥**
(ಋ. ಸಂ. ೨-೧೧-೧೦)

ಇತ್ಯಾದಿ ಋಕ್ಕುಗಳಲ್ಲಿ **ಮಾಯಾವಿನಃ ದಾನವಸ್ಯ ವಂಚನಾನಿ ।** ಮಾಯಾವಿಯಾದ ದಾನವನ ಮೋಸ ಕೃತ್ಯಗಳೆಂದರ್ಥವಾಗುತ್ತದೆ.

### ॥ ವ್ಯಾಕರಣಪ್ರಕ್ರಿಯಾ ॥

**ಏತಿ**—ಇಣ್ ಗತೌ ಧಾತು. ಲಟ್ ಪ್ರಥಮಪುರುಷಏಕವಚನಾಂತರೂಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ತಿಪ್ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಮಾಯಯಾ**—ಮಾ ಮಾನೇ ಧಾತು. **ಮಾಛಾಸಸಿಭ್ಯೋ ಯಃ** (ಉ. ಸೂ. ೪-೫೪೯) ಎಂಬುದರಿಂದ ಯ ಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ತೃತೀಯಾಏಕವಚನಾಂತರೂಪ.

**ದಧಾನಃ**—ಡುಧಾಞ್ ಧಾರಣಪೋಷಣಯೋಃ ಧಾತು. ಲಡರ್ಥದಲ್ಲಿ ಶಾನಚ್ ಪ್ರತ್ಯಯ. ಶ್ಲುವಿಕರಣ. **ಅಭ್ಯಸ್ತಾನಾಮಾದಿಃ** (ಪಾ. ಸೂ. ೬-೧-೧೮೯) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಶುಚಿಪೇಶಸಮ್**—ಶುಚಿ ಪೇಶಃ ಯಸ್ಯ ಸಃ ಶುಚಿಪೇಶಾಃ ತಮ್. **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್** ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ. ದ್ವಿತೀಯಾಏಕವಚನಾಂತರೂಪ.

**ಸ್ರುಚಃ**—ಸ್ರು ಗತೌ ಧಾತು. **ಚಿಕ್ ಚ** (ಉ. ಸೂ. ೨-೨೨೦) ಎಂಬುದರಿಂದ ಚಿಕ್ ಪ್ರತ್ಯಯ. ಇಕಾರ ಕಕಾರ ಇತ್ ಸಂಜ್ಞೆಯನ್ನು ಹೊಂದುವುದರಿಂದ ಲೋಪವಾಗುತ್ತದೆ. ಸ್ರುಚ್ ಶಬ್ದವಾಗುತ್ತದೆ.

**ಕ್ರಮತೇ**— ಕ್ರಮು ಪಾದವಿಕ್ಷೇಪೇ ಧಾತು. ಲಟ್ ಪ್ರಥಮಪುರುಷಏಕವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ.

**ದಕ್ಷಿಣಾವೃತಃ**—ದಕ್ಷಿಣಾ ಎಂಬುದು ಆಜಂತ ಅವ್ಯಯ. ಆಙ್ ಉಪಸರ್ಗ. ವೃಞ್ ವರಣೇ ಧಾತು. ಕ್ತ ಪ್ರತ್ಯಯ. ಸಮಾಸದಲ್ಲಿ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

ನಿಂಸತೇಃ—ಣಿಸಿ ಚುಂಬನೇ ಧಾತು. ಇದಿತೋ ನುಮ್‌ಧಾತೋಃ ಎಂಬುದರಿಂದ ನುಮಾಗಮ. ಲಙ್ ಪ್ರಥಮಪುರುಷಬಹುವಚನದಲ್ಲಿ ಝ ಪ್ರತ್ಯಯ. ಅದಿಪ್ರಭೃತಿಭ್ಯಃಶಪಃ ಎಂಬುದರಿಂದ ಶಪಿಗೆ ಲುಕ್. ಆತ್ಮನೇಪದೇಷ್ವನತಃ (ಪಾ. ಸೂ. ೭-೧-೫) ಎಂಬುದರಿಂದ ಝ ಪ್ರತ್ಯಯಕ್ಕೆ ಅತಾದೇಶ. ಟಿಗೆ ಏತ್ವ. ಯೆ ಎಂಬುದರ ಸಂಬಂಧವಿರುವುದರಿಂದಲೂ, ಯದ್ಯೋಗವಿರುವುದರಿಂದಲೂ ನಿಘಾತಸ್ವರ ಬರುವುದಿಲ್ಲ. ಅನುದಾತ್ತೇತ್ತಿನ ಪರದಲ್ಲಿ ಲಸಾರ್ವಧಾತುಕ ಬಂದುದರಿಂದ ಅದು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ. ॥ ೧ ॥



ಸಂಹಿತಾಪಾಠಃ

ಅಭೀಮೃತಸ್ಯ ದೋಹನಾ ಅನೂಷತ ಯೋನೌ ದೇವಸ್ಯ ಸದನೇ ಪರೀವೃತಾಃ ।
ಅಪಾಮುಪಸ್ಥೇ ವಿಭೃತೋ ಯದಾವಸದಧ ಸ್ವಧಾ ಅಧಯದ್ಯಾಭಿರೀಯತೇ ॥ ೨ ॥

ಪದಪಾಠಃ

ಅಭಿ । ಈಂ । ಋತಸ್ಯ । ದೋಹನಾಃ । ಅನೂಷತ । ಯೋನೌ । ದೇವಸ್ಯ । ಸದನೇ । ಪರಿಽವೃತಾಃ । ಅಪಾಂ । ಉಪಽಸ್ಥೇ । ವಿಽಭೃತಃ । ಯತ್ । ಆ । ಅವಸತ್ । ಅಧ । ಸ್ವಧಾಃ । ಅಧಯತ್ । ಯಾಭಿಃ । ಈಯತೇ ॥ ೨ ॥

ಸಾಯಣಭಾಷ್ಯಂ

ಋತಸ್ಯೋದಕಸ್ಯ ದೋಹನಾ ಧಾರಾ ಯೋನಾವುತ್ಪತ್ತಿಸ್ಥಾನೇ ದೇವಸ್ಯ ಸದನೇ ದ್ಯೋತಮಾನಸ್ಯಾದಿತ್ಯಸ್ಯ ಸ್ಥಾನೇ ಪರೀವೃತಾಸ್ತದ್ರಶ್ಮಿಭಿಃ ಪರಿತೋ ವ್ಯಾಪ್ತಾಃ ಸತ್ಯೋಽಭ್ಯನೂಷತ । ಆಭಿನವಾ ಭವಂತಿ । ಅಭವುತ್ಯೇವ ಸ್ತೂಯಂತೇ ವಾ । ಕದೇತ್ಯತ ಆಹ । ಯದ್ಯದಾಸಾಮುಪಸ್ಥ ಉದಕಾನಾಮುತ್ಸಂಗೇಽಂತರ್ವಿಭೃತೋ ವಿಶೇಷೇಣ ತಾಭಿರ್ಧಾರ್ಯಮಾಣಃ ಸನ್ನಾವಸತ್ ಆಕ್ರಮ್ಯ ನಿವಸತ್ಯಯಮಗ್ನಿಃ ಕದಾನೀಮಿತ್ಯರ್ಥಃ । ಅಧಾಧುನಾ ಸ್ವಧಾ ಅಮೃತೋಪಮಾ ಅಪೋಽಧಯತ್ । ಪಿಬತಿ ಸರ್ವೋ ಲೋಕಃ । ತಾ ವಿಶೇಷ್ಯಂತೇ । ಯಾಭಿಃ ಸಹೇಯತೇಽಯಮಗ್ನಿಃ ಸಂಗಚ್ಛತೇ ವಾ ಭೂಮಿಂ ತಾ ಅಧಯತ್ । ವಿದ್ಯುದಾತ್ಮನೋದಕಾನಿ ಜಗತ್ಪಾಯಯತ ಇತ್ಯಗ್ನೇಃ ಸ್ತುತಿಃ ॥

॥ ವಿಶೇಷವಿಷಯಗಳು ॥

(ಅಗ್ನಿಃ—ಅಗ್ನಿಯು) । **ಯತ್**—ಯಾವಾಗ । **ಅಪಾಂ ಉಪಸ್ಥೇ**— ನೀರುಗಳ ಮಧ್ಯಭಾಗದಲ್ಲಿ । **ವಿಭೃತಃ**—(ಅವುಗಳಿಂದ) ವಿಶೇಷವಾದ ಆದರದಿಂದ ಧರಿಸಲ್ಪಟ್ಟವನಾಗಿ । **ಆ ಅವಸತ್**—(ಅವುಗಳನ್ನು) ಆಕ್ರಮಿಸಿ ಕೊಂಡು ಇರುತ್ತಾನೆಯೋ (ಆಗ) । **ಋತಸ್ಯ**— ನೀರಿನ । **ದೋಹನಾಃ** ಧಾರೆಗಳು । **ಯೋನೌ**—(ತಮ್ಮ) ಉತ್ಪತ್ತಿಸ್ಥಾನವಾದ । **ದೇವಸ್ಯ**— ಪ್ರಕಾಶಿಸುವ ಆದಿತ್ಯನ । **ಸದನೇ**— ನಿವಾಸಸ್ಥಾನದಲ್ಲಿ । **ಪರೀವೃತಾಃ**— (ಅವನ ಕಿರಣಗಳಿಂದ) ವ್ಯಾಪ್ತವಾಗಿ । **ಅಭಿ ಈಂ ಅನೂಷತ**—ನೂತನವಾಗಿ ಪರಿಷ್ಕೃತಗಳಾಗಿಯೇ ಆಗುತ್ತವೆ । **ಅಥ**—ಅನಂತರ । **ಯಾಭಿಃ**—ಯಾವ ನೀರುಗಳೊಡನೆ । **ಈಯತೇ**—(ವಿದ್ಯುದ್ರೂಪದಲ್ಲಿ ಅಗ್ನಿಯು) ಒಂದಾಗಿ ಸೇರಿಕೊಳ್ಳುತ್ತಾನೆಯೋ । **ಸ್ವಧಾಃ**—(ಅಂತಹ) ಅಮೃತೋಪಮವಾದ ವೃಷ್ಟಿಯ ನೀರುಗಳನ್ನು । **ಅಧಯತ್**— (ಸಕಲ ಲೋಕವೂ) ಕುಡಿಯುತ್ತದೆ ॥

ಭಾವಾರ್ಥ

ಅಗ್ನಿಯು ನೀರುಗಳಿಂದ ವಿಶೇಷವಾದ ಆದರದಿಂದ ಧರಿಸಲ್ಪಟ್ಟವನಾಗಿ ಯಾವಾಗ ಅವುಗಳನ್ನು ಆಕ್ರಮಿಸಿ ಕೊಂಡು ಇರುತ್ತಾನೆಯೋ, ಆಗ ನೀರಿನ ಧಾರೆಗಳು ತಮ್ಮ ಉತ್ಪತ್ತಿಸ್ಥಾನವಾದ ಆದಿತ್ಯನ ನಿವಾಸಸ್ಥಾನದಲ್ಲಿ ಅವನ ಕಿರಣಗಳಿಂದ ವ್ಯಾಪ್ತವಾಗಿ ನೂತನವಾದ ಪರಿಷ್ಕಾರವನ್ನು ಹೊಂದಿಯೇಹೊಂದುತ್ತವೆ. ಅನಂತರ ವಿದ್ಯುದ್ರೂಪ ದಲ್ಲಿರುವ ಅಗ್ನಿಯು ನೀರುಗಳೊಡನೆ ಒಂದಾಗಿ ಸೇರಿಕೊಳ್ಳುತ್ತಾನೆ. ಒಡನೆಯೇ ಸಕಲ ಲೋಕವೂ ಅಮೃತೋಪಮ ವಾದ ವೃಷ್ಟಿಯ ನೀರನ್ನು ಕುಡಿಯುತ್ತದೆ.

## English Translation

The drops of rain, enveloped (by the solar rays), are renewed in the dwelling of the divine (sun), their birth-place: when he, (Agni), abides cherished on the lap of the waters, then (the world) drinks the nectareous (rain), with which he, (as the lightning), associates.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಆದಿತ್ಯನ ಕಿರಣಗಳಿಂದ ಪರಿಷ್ಕೃತಗಳಾಗುವ ಉದಕಗಳ ಸ್ವರೂಪವನ್ನೂ, ಮೇಘರೂಪದಲ್ಲಿ ರುವ ಈ ಉದಕಾಂತರ್ಗತನೂ, ವಿದ್ಯುದ್ರೂಪದಲ್ಲಿರುವವನೂ ಆದ ಅಗ್ನಿಯ ಸ್ವರೂಪವನ್ನೂ ವಿವರಿಸಿದೆ.

**ಅಪಾಂ ಉಪಸ್ಥೇ—ಉದಕಾನಾಮುತ್ಸಂಗೇ ಅಂತಃ** । ಉದಕಗಳ ನಡುವೆ ಅಂತರ್ಗತನಾದ ಎಂದರ್ಥ. ನಿರುಕ್ತಕಾರರು,

ಅಪಾಮುಪಸ್ಥೇ ಮಹಿಷಾ ಅಗೃಭ್ಣತ ವಿಶೋ ರಾಜಾನಮುಪ ತಸ್ಥುರ್ಋಗ್ಮಿಯಂ ।
ಆ ದೂತೋ ಅಗ್ನಿಮಭರದ್ವಿವಸ್ವತೋ ವೈಶ್ವಾನರಂ ಮಾತರಿಶ್ವಾ ಪರಾವತಃ ॥

(ಋ. ಸಂ. ೬-೮-೪)

ಎಂಬ ಋಕ್ಕನ್ನುದಹರಿಸಿ **ಅಪಾಮುಪಸ್ಥೇ** ಎಂಬುದಕ್ಕೆ **ಮಹತ್ಯಂತರಿಕ್ಷಲೋಕ ಆಸೀನಾ** । ಅಂತರಿಕ್ಷದ ಮಧ್ಯಭಾಗದಲ್ಲಿರತಕ್ಕ ಎಂದರ್ಥಮಾಡಿದ್ದಾರೆ. ದುರ್ಗಾಚಾರ್ಯರು ಇದನ್ನು ವಿವರಿಸುತ್ತಾ **ಯತ್ರೋಪಗಮ್ಯ ತಿಷ್ಠಂತ್ಯಾಪಃ ಸೋಽಪಾಮುಪಸ್ಥಃ । ಅಂತರಿಕ್ಷಲೋಕಃ ತಸ್ಮಿನ್ನಪಾಮುಪಸ್ಥೇ** । ಉದಕಗಳೆಲ್ಲಾ ಎಲ್ಲಿ ಸೇರಿಕೊಂಡು ನಿಲ್ಲುತ್ತವೆಯೋ ಅಂತಹ ಅಂತರಿಕ್ಷದ ನಾಭಿಯಲ್ಲಿ ಎಂದು ತಾತ್ಪರ್ಯವೆಂದು ತೋರಿಸಿದ್ದಾರೆ.

**ಋತಸ್ಯ—ಉದಕಸ್ಯ** । ಉದಕದ. **ಋತ**ಶಬ್ದಕ್ಕೆ ಹಿಂದೆ ಹೇಳಿರುವ ಸತ್ಯ, ಯಜ್ಞ ಇತ್ಯಾದ್ಯರ್ಥಗಳಲ್ಲದೆ **ಉದಕ**ವೆಂಬರ್ಥವೂ ಇರುವುದರಿಂದ ಇಲ್ಲಿ ಸಂದರ್ಭಕ್ಕನುಗುಣವಾಗಿ ಈ ಅರ್ಥವನ್ನು ಹೇಳಬೇಕು, ನಿರುಕ್ತಕಾರರು **ಅರ್ಣಃ, ಕ್ಷೋದಃ** ಇತ್ಯಾದ್ಯುದಕನಾಮಗಳಲ್ಲಿ ಈ ಪದವನ್ನು ಸೇರಿಸಿ (ನಿ. ೨-೨೪) ಅನಂತರ,

**ರಮಧ್ವಂ ಮೇ ವಚಸೇ ಸೋಮ್ಯಾಯ ಋತಾವರೀರುಪ ಮುಹೂರ್ತಮೇವೈಃ ।**
**ಪ್ರ ಸಿಂಧುಮಚ್ಛಾ ಬೃಹತೀ ಮನೀಷಾವಸ್ಯುರಹ್ವೇ ಕುಶಿಕಸ್ಯ ಸೂನುಃ ॥**
(ಋ. ಸಂ. ೩-೩೩-೫)

ಎಂಬ ಋಕ್ಕನ್ನುದಹರಿಸಿ **ಋತಾವರೀಃ** ಎಂಬ ಪದಕ್ಕೆ **ಋತದಿಂದ** ಎಂದರೆ ಉದಕದಿಂದ ಪೂರ್ಣವಾಗಿರುವುದರಿಂದ **ನದಿಗೆ** ಈ ಹೆಸರೆಂದು ತಿಳಿಸಿದ್ದಾರೆ.

**ಸ್ವಧಾಃ—ಉದಕನಾಮ**ಗಳಲ್ಲಿಯೂ (ನಿ ೨-೨೪) **ಅನ್ನನಾಮ**ಗಳಲ್ಲಿಯೂ (ನಿ ೩-೯) ಪಠಿತವಾಗಿದೆ. ಇಲ್ಲಿ ಅಮೃತೋಪಮವಾದ ಉದಕಗಳೆಂದರ್ಥಮಾಡಿದ್ದಾರೆ.

ವ್ಯಾಕರಣಪ್ರಕ್ರಿಯಾ

**ದೋಹನಾಃ—**ದುಹ ಪ್ರಪೂರಣೇ ಧಾತು. ಲ್ಯುಟ್ ಪ್ರತ್ಯಯ. **ಯುವೋರನಾಕೌ** (ಪಾ. ಸೂ. ೭-೧-೧) ಎಂಬುದರಿಂದ ಅದಕ್ಕೆ ಅನಾದೇಶ. ಅದನ್ನು ನಿಮಿತ್ತೀಕರಿಸಿ ಧಾತುವಿನ ಲಘೂಪಧೆಗೆ **ಪುಗಂತಲಘೂಪಧಸ್ಯ ಚ** ಎಂಬುದರಿಂದ ಗುಣ. ವ್ಯತ್ಯಯದಿಂದ ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

**ಅನೂಷತ—**ಣು ಸ್ತುತೌ ಧಾತು. **ವ್ಯತ್ಯಯೋ ಬಹುಲಂ** ಎಂಬುದರಿಂದ ಆತ್ಮನೇಪದಿಯಾಗುತ್ತದೆ. ಛಾಂದಸವಾಗಿ ಲುಙ್. **ಆತ್ಮನೇಪದೇಷ್ವನತಃ** ಎಂಬುದರಿಂದ ಝ ಪ್ರತ್ಯಯಕ್ಕೆ ಅತಾದೇಶ. ಚ್ಲಿಗೆ ಸಿಚಾದೇಶ. ಕುಟಾದಿಯಲ್ಲಿ ಸೇರಿರುವುದರಿಂದ **ಗಾಙ್ಕುಟಾದಿಭ್ಯಃ** (ಪಾ. ಸೂ. ೧-೨-೧) ಎಂಬುದರಿಂದ ಸಿಚಿಗೆ ಙಿದ್ವದ್ಭಾವವಿರುವುದರಿಂದ ಧಾತುವಿನ ಇಕಿಗೆ ಗುಣ ಬರುವುದಿಲ್ಲ. ಛಾಂದಸವಾಗಿ ಸಿಚಿಗೆ ಇಡಭಾವವೂ ಧಾತುವಿನ ಉಕಾರಕ್ಕೆ ದೀರ್ಘವೂ ಬರುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಸದನೇ—**ಷದ್ಲೃ ವಿಶರಣಗತ್ಯವಸಾದನೇಷು. ಧಾತು. ಅಧಿಕರಣಾರ್ಥದಲ್ಲಿ ಲ್ಯುಟ್ ಪ್ರತ್ಯಯ. ಹಿಂದಿನಂತೆ ಅದಕ್ಕೆ ಅನಾದೇಶ. **ಲಿತಿ** (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ.

**ಪರೀವೃತಾಃ—**ವೃಙ್ ವರಣೇ ಧಾತು. ಕರ್ಮಣಿಯಲ್ಲಿ ನಿಷ್ಠಾ ಎಂಬುದರಿಂದ ಕ್ತ ಪ್ರತ್ಯಯ. **ಗತಿರನಂತರಃ** (ಪಾ. ಸೂ. ೬-೨-೪೯) ಎಂಬುದರಿಂದ ಗತಿಗೆ (ಪರಿ) ಪ್ರಕೃತಿಸ್ವರ ಬರುತ್ತದೆ. **ಅನ್ಯೇಷಾಮಪಿ ದೃಶ್ಯತೇ** (ಪಾ. ಸೂ. ೬-೩-೧೩೭) ಎಂಬುದರಿಂದ ಪೂರ್ವಪದಕ್ಕೆ ದೀರ್ಘ.

**ಆಸಾಂ**—ಷಷ್ಠೀಬಹುವಚನಾಂತರೂಪ. **ಊಡಿದಂಪದಾ**— (ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಉಪಸ್ಥೇ**—ಷ್ಠಾ ಗತಿನಿವೃತ್ತೌ ಧಾತು. **ಆತಶ್ಚೋಪಸರ್ಗೇ**—(ಪಾ. ಸೂ. ೩-೧-೧೩೬) ಎಂಬುದರಿಂದ ಕ ಪ್ರತ್ಯಯ. **ಆತೋ ಲೋಪ ಇಟಿ ಚ** (ಪಾ. ಸೂ. ೬-೪-೬೪) ಎಂಬುದರಿಂದ ಆಕಾರಲೋಪ. ಸಪ್ತಮೀಏಕವಚನಾಂತರೂಪ.

**ವಿಭೃತಃ**—ಭೃಞ್ ಭರಣೇ ಧಾತು. ಕರ್ಮಣಿಯಲ್ಲಿ ಕ್ತ ಪ್ರತ್ಯಯ. **ಗತಿರನಂತರಃ** (ಪಾ. ಸೂ. ೬-೪-೪೯) ಎಂಬುದರಿಂದ ಗತಿಗೆ (ವಿ) ಪ್ರಕೃತಿಸ್ವರ ಬರುತ್ತದೆ.

**ಅವಸತ್**—ವಸ ನಿವಾಸೇ ಧಾತು. ಛಾಂದಸವಾಗಿ ವರ್ತಮಾನಾರ್ಥದಲ್ಲಿ ಲಙ್. ಪ್ರಥಮಪುರುಷಏಕವಚನಾಂತರೂಪ. ಯದ್ವೃತ್ತಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ.

**ಅಧಯತ್**— ಧೇಟ್ ಪಾನೇ ಧಾತು. ಲಙ್ ಪ್ರಥಮಪುರುಷಏಕವಚನದಲ್ಲಿ ತಿಪ್ ಪ್ರತ್ಯಯ. **ಇತಶ್ಚ** ಎಂಬುದರಿಂದ ಇಕಾರಲೋಪ. ಶಪ್ ವಿಕರಣ. **ಏಚೋಽಯವಾ**—ಎಂಬುದರಿಂದ ಅಯಾದೇಶ. ಅಂಗಕ್ಕೆ ಅಡಾಗಮ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಈಯತೇ**—ಈಙ್ ಗತೌ ಧಾತು ದಿವಾದಿ ಶ್ಯನ್ ವಿಕರಣ ಲಟ್ ಪ್ರಥಮಪುರುಷಏಕವಚನಾಂತರೂಪ. **ಯದ್ವೃತ್ತಾನ್ನಿತ್ಯಮ್** ಎಂಬುದರಿಂದ ನಿಘಾತಪ್ರತಿಷೇಧ ಬರುತ್ತದೆ. ಶ್ಯನ್ ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ॥ ೨ ॥

———— :೦: ————

ಸಂಹಿತಾಪಾಠಃ

ಯುಯೂಷತಃ ಸವಯಸಾ ತದಿದ್ವಪುಃ ಸಮಾನಮರ್ಥಂ ವಿತರಿತ್ರತಾ ಮಿಥಃ ।

ಆದೀಂ ಭಗೋ ನ ಹವ್ಯಃ ಸಮಸ್ಮದಾ ವೋಳ್ಹುರ್ನ ರಶ್ಮೀನ್ತ್ಸಮಯಂಸ್ತ ಸಾರಥಿಃ ॥ ೩ ॥

ಪದಪಾಠಃ

ಯುಯೂಷತಃ । ಸಽವಯಸಾ । ತತ್ । ಇತ್ । ವಪುಃ । ಸಮಾನಂ । ಅರ್ಥಂ । ವಿಽತರಿತ್ರತಾ । ಮಿಥಃ ।

ಆತ್ । ಈಂ । ಭಗಃ । ನ । ಹವ್ಯಃ । ಸಂ । ಅಸ್ಮತ್ । ಆ । ವೋಳ್ಹುಃ । ನ । ರಶ್ಮೀನ್ । ಸಂ । ಅಯಂಸ್ತ ।
ಸಾರಥಿಃ ॥ ೩ ॥

ಸಾಯಣಭಾಷ್ಯಂ

ಸವಯಸಾ ಸಮಾನವಯಸ್ಕೌ । ವಯಃಶಬ್ದೇನ ಸಾಮರ್ಥ್ಯಂ ಲಕ್ಷ್ಯತೇ । ಸಮಾನಸಾಮರ್ಥ್ಯೌ ತದಿತ್ತದಾನೀಮೇವ ಯದಾ ಪ್ರವೃದ್ಧೋ ಭವತಿ ತದಾನೀಮೇವ ಸಮಾನಮರ್ಥಂ ಸಮಾನಪ್ರಯೋಜನಂ ನಿಷ್ಪತ್ತಿಂ ಮಿಥಃ ಪ್ರತ್ಯೇಕಂ ವಿತರಿತ್ರತಾ ಭೃಶಂ ತರಂತೌ ಹೋತ್ರಧ್ವರ್ಯೂ ವಪುರಗ್ನೇಃ ಶರೀರಂ ಯುಯೂಷತಃ । ಸ್ವಸ್ವವ್ಯಾಪಾರೇಣ ಮಿಶ್ರಯಿತುಮಿಚ್ಛತಃ । ಪ್ರೈಷಾನಂತರಂ ಯಾಜ್ಯಾದಿಪಾಠೋ ಹೋತುರ್ವ್ಯಾಪಾರಃ ವಷಟ್ಕಾರಾನಂತರಂ ಹೋಮೋಽಧ್ವರ್ಯೋರಿತಿ ವಿಭಾಗಃ । ಅತ್ರೇದಮನುಸಂಧೇಯಂ । ಸವಯಸಾ ಸಮಾನವಯಸ್ಕೌ ಮಿಥಃ ಪ್ರತ್ಯೇಕಂ ಸಮಾನಪ್ರಯೋಜನಂ ಸುಖಪ್ರಾಪ್ತಿಂ ವಿತರಿತ್ರತಾ ವಿಶೇಷೇಣ ತರಿತುಮಿಚ್ಛಂತೌ ॥ ತರತೇರ್ಯಙ್ಲುಗಂತಾಚ್ಛತರಿ ದಾಧರ್ತ್ಯಾದೌ ನಿಪಾತ್ಯತೇ । ದ್ವಿವಚನಸ್ಯಾಕಾರಃ ॥ ಜಾಯಾಪತೀ ತದ್ವಪುಸ್ತದೇವ ಪರಸ್ಪರಂ ಶರೀರಂ ಯುಯೂಷತಃ ಮಿಶ್ರಯಿತುಮಿಚ್ಛತಃ ಪರಸ್ಪರಮಾಲಿಂಗತಃ । ತದ್ವದಗ್ನಿಂ ಸಾಕಂ ಹೋತ್ರಧ್ವರ್ಯೂ ಯುಯೂಷತಃ । ಆದೀಮನಂತರಮೇವ ಹವ್ಯ ಆಹವನೀಯೋಽಗ್ನಿಃ ಸಾರಥಿಃ ಸರಣಶೀಲಃ ಸಾರಥಿವದ್ಯಜ್ಞಾತ್ಮಕಸ್ಯ ರಥಸ್ಯ ನಿರ್ವಾಹಕೋ ವಾ ಸನ್ನಸ್ಮದಸ್ಮಾಕಂ ಸಂಬಂಧಿನೋ ರಶ್ಮೀನ್ ರಶ್ಮಿವದಾಯತಾ ಘೃತಧಾರಾ ಆ ಸರ್ವತಃ ಸಮಯಂಸ್ತ । ಸಮ್ಯಕ್ ಸ್ವೀಕರೋತಿ । ತತ್ರ ದೃಷ್ಟಾಂತದ್ವಯಮುಚ್ಯತೇ । ಭಗೋ ನ ಸರ್ವೈಃ ಸೇವನೀಯ ಆದಿತ್ಯಃ ಸ ಯಥಾ ಸರ್ವತಃ ಪೂಜಾಮಾದತ್ತೇ ತದ್ವತ್ । ಸಾರಥೀ ರಥಸ್ಯ ಯಂತಾ ವೋಢುರ್ವಾಹಕಸ್ಯಾಶ್ವಾದೇ ರಶ್ಮೀನ್ನ ಪ್ರತಿಗ್ರಹಾನಿವ । ತಾನ್ಯಥಾ ಸ್ವೀಕರೋತಿ ತದ್ವದಯಮಗ್ನಿರಪಿ ಹವೀಂಷಿ ಸಮಯಂಸ್ತ ॥

ಪ್ರತಿಪದಾರ್ಥ

**ತದಿತ್**—ಅಗ್ನಿಯು ಪ್ರಜ್ವಲಿತನಾದೊಡನೆಯೇ । **ಸವಯಸಾ**—ಸಮಾನವಾದ ಸಾಮರ್ಥ್ಯವುಳ್ಳವರೂ । (**ಮತ್ತು**) **ಸಮಾನಂ ಅರ್ಥಂ**—ಇಬ್ಬರಿಗೂ ಸಾಧಾರಣವಾದ ಒಂದೇ ಪ್ರಯೋಜನವನ್ನು । **ಮಿಥಃ**—ಪರಸ್ಪರವಾಗಿ ಒಬ್ಬೊಬ್ಬರೂ । **ವಿತರಿತ್ರತಾ**—ಶ್ರದ್ಧಾಶ್ರಮಗಳಿಂದ ಸಾಧಿಸುವವರೂ ಆದ ಹೋತೃ ಮತ್ತು ಅಧ್ವರ್ಯುಗಳು । [(ಅಥವಾ) **ಸವಯಸಾ**—ಒಂದೇ ವಯಸ್ಸಿನವರೂ । **ಸಮಾನಂ ಅರ್ಥಂ**—ಇಬ್ಬರಿಗೂ ಸಾಧಾರಣವಾದ ಒಂದೇ ಸುಖವನ್ನು । **ಮಿಥಃ**—ಪರಸ್ಪರವಾಗಿ ಒಬ್ಬೊಬ್ಬರೂ । **ವಿತರಿತ್ರತಾ**—ಪ್ರೇಮ ಕಾರ್ಯಗಳಿಂದ ಸಾಧಿಸಿಕೊಳ್ಳುವವರೂ ಆದ ದಂಪತಿಗಳು] । **ವಪುಃ**—ತಮ್ಮ ಶರೀರಗಳನ್ನು । **ಯುಯೂಷತಃ**—(ಆಲಿಂಗನದಿಂದ) ಒಂದುಗೂಡಸಲಿಚ್ಛಿಸುವಂತೆ । **ವಪುಃ**—ಅಗ್ನಿಯ ಶರೀರವನ್ನು । **ಯುಯೂಷತಃ**—(ತಮ್ಮ ತಮ್ಮ ಕರ್ಮಗಳಿಂದ) ಒಂದುಗೂಡಿಸಲು ಇಷ್ಟಪಡುತ್ತಾರೆ । **ಆದೀಂ**—ಒಡನೆಯೇ । **ಹವ್ಯಃ**—ಹವಿಸ್ಸಿಗೆ ಯೋಗ್ಯನಾದ ಅಗ್ನಿಯು । **ಅಸ್ಮತ್**—ನಮ್ಮಿಂದ ಅರ್ಪಿತವಾದುದೂ । **ರಶ್ಮೀನ್**—ಕಿರಣಗಳಂತೆ ವಿಸ್ತಾರವಾಗಿ ಹರಡಿದುದೂ ಆದ ಘೃತದ ಧಾರೆಗಳನ್ನು । **ಭಗೋ ನ ಸಂ**—ಆದಿತ್ಯನು (ಎಲ್ಲರ ಪೂಜೆಯನ್ನೂ) ಸಂಗ್ರಹಿಸಿ ಸ್ವೀಕರಿಸುವಂತೆಯೂ । **ಸಾರಥಿಃ**—ರಥದ ಸಾರಥಿಯು ।

ವೋಳ್ಹುಃ ನ (ರಥ) ವಾಹಕಗಳಾದ ಕುದುರೆಗಳ (ಲಗಾಮುಗಳನ್ನು ಸಂಗ್ರಹಿಸಿ ಒಟ್ಟಿಗೆ) ಹಿಡಿದುಕೊಳ್ಳು ವಂತೆಯೂ ಸಹ । ಆ ಸಮುಯೆಂಸ್ತೆ—ಒಟ್ಟಿಗೆ ಸಂಗ್ರಹಿಸಿ ಸ್ವೀಕರಿಸುತ್ತಾನೆ.

॥ ಭಾವಾರ್ಥ ॥

ಅಗ್ನಿಯು ಪ್ರಜ್ವಲಿತನಾದೊಡನೆಯೇ, ಸಮಾನವಾದ ಸಾಮರ್ಥ್ಯವುಳ್ಳವರೂ ಇಬ್ಬರಿಗೂ ಸಾಧಾರಣವಾದ ಒಂದೇ ಪ್ರಯೋಜನವನ್ನು ಪರಸ್ಪರವಾಗಿ ಒಬ್ಬೊಬ್ಬರೂ ಶ್ರದ್ಧಾಶ್ರಮಗಳಿಂದ ಸಾಧಿಸುವವರೂ ಆದ ಹೋತೃ ಮತ್ತು ಅಧ್ವರ್ಯುಗಳು ಅಗ್ನಿಯ ಶರೀರವನ್ನು ತಮ್ಮ ತಮ್ಮ ಕರ್ಮಗಳಿಂದ ಒಂದುಗೂಡಿಸಲು ಇಷ್ಟಪಡುತ್ತಾರೆ. ಒಡನೆಯೇ, ಸಕಲರ ಪೂಜೆಯನ್ನು ಆದಿತ್ಯನು ಸಂಗ್ರಹಿಸಿ ಸ್ವೀಕರಿಸುವಂತೆಯೂ, ಸಾರಥಿಯು ರಥವಾಹಕಗಳಾದ ಕುದುರೆಗಳ ಲಗಾಮುಗಳನ್ನು ಒಟ್ಟಿಗೆ ಸೇರಿಸಿ ಹಿಡಿದುಕೊಳ್ಳುವಂತೆಯೂ, ಹವಿಸ್ಸಿಗೆ ಯೋಗ್ಯನಾದ ಅಗ್ನಿಯು ನಮ್ಮಿಂದ ಅರ್ಪಿತವಾದವೂ, ಕಿರಣಗಳಂತೆ ವಿಸ್ತಾರವಾಗಿ ಹರಡಿದವೂ ಆದ ಘೃತದ ಧಾರೆಗಳನ್ನು ಒಟ್ಟಿಗೆ ಸಂಗ್ರಹಿಸಿ ಸ್ವೀಕರಿಸುತ್ತಾನೆ.

English Tranlation

The two (priests, the Hotri and Adhwaryu), of equal honour, and alike assiduous, labouring mutually for a common object, combine the form of Agni ( with their respective functions ); whereupon he to whom the oblation is to be offered, collects the drops (of clarified butter), as Bhaga (accepts the worship of all), or as a charioteer (gathers the reins of the horses) that draw (the car).

ವಿಶೇಷವಿಷಯಗಳು

ಈ ಋಕ್ಕಿನಲ್ಲಿ ಕರ್ಮತತ್ಪರತೆಯ ಸ್ವರೂಪವನ್ನು ಹೇಳಿದೆ. ಇಲ್ಲಿ ಪೂರ್ವಾರ್ಧಕ್ಕೆ ಎರಡು ವಿಧವಾದ ಅರ್ಥವು ಸಾಧ್ಯವೆಂದು ಸಾಯಣರು ತಿಳಿಸಿದ್ದಾರೆ. ಮೊದಲನೆಯದಾಗಿ—ಸಮಯಸಾ, ಸಮಾನಂ ಅರ್ಥಂ ವಿಥ ವಿತರಿತ್ರತಾ (ಹೋತ್ರಧ್ವರ್ಯೂ)ವಪುಃ ಯುಯೂಷತಃ । ಹೋತ್ರಧ್ವರ್ಯುಗಳು ತಮ್ಮ ತಮ್ಮ ಕರ್ಮಗಳಿಂದ ಅಗ್ನಿಯನ್ನು ಐಕ್ಯಮಾಡಿಸಲು ಎಂದರೆ ಸೇವಿಸಲು ಇಚ್ಛಿಪಡುತ್ತಾರೆ ಎಂದೂ, ಎರಡನೆಯದಾಗಿ ದಂಪತಿಗಳು ತಮ್ಮ ಶರೀರಗಳನ್ನು ಆಲಿಂಗನದಿಂದ ಒಂದುಗೂಡಿಸಲಿಚ್ಛಿಸುವಂತೆ ಹೋತ್ರಧ್ವರ್ಯುಗಳು ತಮ್ಮ ಕ್ರಿಯೆಗಳನ್ನು ಅಗ್ನಿಯೊಂದಿಗೆ ಐಕ್ಯ ಮಾಡುವರೆಂದೂ ಅರ್ಥವಾಗುತ್ತದೆ

ಸನಯಸಾ—ಹೋತ್ರಧ್ವರ್ಯುಗಳಿಗೆ ವಿಶೇಷಣವಾದರೆ ಇಲ್ಲಿ ವಯಃ ಶಬ್ದಕ್ಕೆ ಸಾಮರ್ಥ್ಯವೆಂದರ್ಥವಾಗ ಬೇಕು. ಇಬ್ಬರಿಗೂ ಸಮಾನವಾದ ಸಾಮರ್ಥ್ಯವಾವುದೆಂದರೆ, ಪ್ರೈಷಾನಂತರ ಯಾಜ್ಯಾದಿಪಾಠದ ಪಠಣವು ಹೋತೃವಿನ ವ್ಯಾಪಾರವು: ಮತ್ತು ವಷಟ್ಕಾರ ಪಠಣಾನಂತರ ಹೋಮ ಮಾಡತಕ್ಕದ್ದು ಅಧ್ವರ್ಯುವಿನ ವ್ಯಾಪಾರ. ದಂಪತಿಗಳಿಗೆ ವಿಶೇಷಣವಾದರೆ ಸಮಾನವಯಸ್ಕರೆಂದರ್ಥ.

ವ್ಯಾಕರಣಪ್ರಕ್ರಿಯಾ

**ಯುಯೂಷತಃ**—ಯು ಮಿಶ್ರಣಾಮಿಶ್ರಣಯೋಃ ಧಾತು **ಧಾತೋಃ ಕರ್ಮಣಃ** (ಪಾ. ಸೂ. ೩-೧-೭) ಎಂಬುದರಿಂದ ಇಚ್ಛಾರ್ಥದಲ್ಲಿ ಸನ್. **ಸನ್ಯಙೋಃ** (ಪಾ. ಸೂ. ೬-೧-೯) ಎಂಬುದರಿಂದ ದ್ವಿತ್ವ. **ಅಜ್ಝನಗಮಾಂಸನಿ** (ಪಾ. ಸೂ. ೬-೪-೧೬) ಎಂಬುದರಿಂದ ಧಾತುವಿಗೆ ದೀರ್ಘ ಸನ್ನಂತದ ಮೇಲೆ ಲಟ್ ಪ್ರಥಮ ಪುರುಷದ್ವಿವಚನಾಂತರೂಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. **ಅಭ್ಯಸ್ತಾನಾಮಾದಿಃ** (ಪಾ.ಸೂ. ೬-೧-೧೮೯) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಸವಯಸಾ**—ಸಮಾನಂ ವಯಃ ಯಯೋಸ್ತೌ. ಸವಯಸೌ. **ಸುಪಾಂ ಸುಲುಕ್** (ಪಾ. ಸೂ. ೭-೧-೩೯) ಎಂಬುದರಿಂದ ವಿಭಕ್ತಿಗೆ (ಔ) ಆಕಾರಾದೇಶ. ಬಹುವ್ರೀಹಿಯಲ್ಲಿ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ವಿತರಿತ್ರತಾ**—ವಿ ಉಪಸರ್ಗ. ತೄ ಪ್ಲವನತರಣಯೋಃ ಧಾತು ಅತಿಶಯಾರ್ಥ ತೋರುವಾಗ **ಧಾತೋರೇಕಾಚ** (ಪಾ. ಸೂ. ೩-೧-೨೨) ಎಂಬುದರಿಂದ ಯಙ್. **ಯಙೋಚಿಚ** (ಪಾ ಸೂ. ೨-೪-೬) ಎಂಬುದರಿಂದ ಅದಕ್ಕೆ ಅನ್ನೈಮಿತ್ತಿಕವಾಗಿ ಲುಕ್. ಯಙ್‌ನಿಮಿತ್ತಿಕವಾಗಿ ಧಾತುವಿಗೆ ದ್ವಿತ್ವ. **ರುಗ್ರಿಕೌ ಚ ಲುಕಿ** (ಪಾ. ಸೂ. ೬-೪-೯೧) ಎಂಬುದರಿಂದ ಅಭ್ಯಾಸಕ್ಕೆ ರಿಕಾಗಮ ಯಙ್ ಲುಗಂತದ ಮೇಲೆ ಲಡರ್ಥದಲ್ಲಿ ಶತೃಪ್ರತ್ಯಯ. **ಸುಪಾಂ ಸುಲುಕ್** ಎಂಬುದರಿಂದ ವಿಭಕ್ತಿಗೆ ಆಕಾರಾದೇಶ. **ಅಭ್ಯಸ್ತಾನಾಮಾದಿಃ** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಪ್ರಾದಿಸಮಾಸದಲ್ಲಿ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

**ಹವ್ಯಃ**—ಹು ದಾನಾದನಯೋಃ ಧಾತು. **ಅಚೋಯತ್** (ಪಾ. ಸೂ. ೩-೧-೯೭) ಎಂಬುದರಿಂದ ಯತ್ ಪ್ರತ್ಯಯ. **ಸಾರ್ವಧಾತುಕಾರ್ಧಧಾತುಕಯೋಃ** ಎಂಬುದರಿಂದ ಧಾತುವಿನ ಇಕಿಗೆ ಗುಣ. **ವಾಂತೋಯಿಪ್ರತ್ಯಯೇ** (ಪಾ. ಸೂ. ೬ ೧ ೭೯) ಎಂಬುದರಿಂದ ಅವಾದೇಶ. **ಯತೋನಾವಃ** (ಪಾ. ಸೂ. ೬-೧-೨೧೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಅಸ್ಮತ್** – **ಸುಪಾಂ ಸುಲುಕ್** (ಪಾ. ಸೂ. ೭-೧-೩೯) ಎಂಬುದರಿಂದ ವಿಭಕ್ತಿಗೆ (ಅಮ್) ಲುಕ್.

**ವೋಳ್ಹುಃ**—ವಹ ಪ್ರಾಪಣೇ ಧಾತು. ಕರ್ತರಿಯಲ್ಲಿ ತೃಸ್ ಪ್ರತ್ಯಯ. **ಹೋಢಃ** ಎಂಬುದರಿಂದ ಧಾತು ಹಕಾರಕ್ಕೆ ಢತ್ವ. **ಝಷಸ್ತಥೋ**-ಎಂಬುದರಿಂದ ಪ್ರತ್ಯಯತಕಾರಕ್ಕೆ ಧತ್ವ. ಷ್ಟುತ್ವದಿಂದ ಢತ್ವ. **ಢೋಢೇಲೋಪಃ** ಎಂಬುದರಿಂದ ಪೂರ್ವಢಕಾರಕ್ಕೆ ಲೋಪ **ಸಹಿವಹೋರೋದವರ್ಣಸ್ಯ** (ಪಾ. ಸೂ. ೬-೩-೧೧೨ ಎಂಬುದರಿಂದ ಧಾತುವಿನ ಅಕಾರಕ್ಕೆ ಓತ್ವ. ಷಷ್ಠ್ಯೇಕವಚನಾಂತರೂಪ.

**ಧಾಧರ್ತಿ**—**ದರ್ಧರ್ತಿ** (ಪಾ. ಸೂ. ೭-೪-೬೫) ಎಂಬುದರಿಂದ ಇದು ನಿಪಾತಿತವಾಗಿದೆ.

**ಅಯಂಸ್ತ**—ಯಮ ಉಪರಮೇ ಧಾತು. **ಛಂದಸಿ ಲುಙ್‌ಲಙ್‌ಲಿಟಃ** ಎಂಬುದರಿಂದ ವರ್ತಮಾನಾರ್ಥದಲ್ಲಿ ಲುಙ್ ಪ್ರಥಮಪುರುಷಏಕವಚನದಲ್ಲಿ ತ ಪ್ರತ್ಯಯ. ಚ್ಲಿಗೆ ಸಿಜಾದೇಶ. ಧಾತು ಮಕಾರಕ್ಕೆ ಅನುಸ್ವಾರ. ಅಂಗಕ್ಕೆ ಅಡಾಗಮ, ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೩ ॥

———:೦:———

ಸಂಹಿತಾಪಾಠಃ

ಯಮೀಂ ದ್ವಾ ಸವಯಸಾ ಸಪರ್ಯತಃ ಸಮಾನೇ ಯೋನಾ ಮಿಥುನಾ
ಸಮೋಕಸಾ ।
ದಿವಾ ನ ನಕ್ತಂ ಪಲಿತೋ ಯುವಾಜನಿ ಪುರೂ ಚರನ್ನಜರೋ ಮಾನುಷಾ
ಯುಗಾ ॥ ೪ ॥

। ಪದಪಾಠಃ ।

ಯಂ । ಈಂ । ದ್ವಾ । ಸಽವಯಸಾ । ಸಪರ್ಯತಃ । ಸಮಾನೇ । ಯೋನಾ । ಮಿಥುನಾ । ಸಂಽಓಕಸಾ । ದಿವಾ । ನ । ನಕ್ತಂ । ಪಲಿತಃ । ಯುವಾ । ಅಜನಿ । ಪುರು । ಚರನ್ । ಅಜರಃ । ಮಾನುಷಾ । ಯುಗಾ । ॥ ೪ ॥

ಸಾಯಣಭಾಷ್ಯಂ

ಯಮೀಮೇನಮಗ್ನಿಂ ದ್ವಾ ದ್ವೌ ಸವಯಸಾ ಸಮಾನವಯಸ್ಕೌ ಸಮಾನಸಾಮರ್ಥ್ಯೌ ವಾ ಸಮಾನೇ ಯೋನಾ ಯೋನೌ ಫಲಸ್ಯೋತ್ಪತ್ತಿಸ್ಥಾನೇ ಯಜ್ಞೇ ವರ್ತಮಾನೌ ಮಿಥುನಾ ದಂಪತೀ ಇವೈಕಕಾರ್ಯೋದ್ಯುಕ್ತೌ ಸಮೋಕಸಾ ಸಮಾನನಿವಾಸೌ ದೇವಯಜನಸ್ಥಾನೌ ಈದೃಶೌ ಹೋತ್ರಧ್ವರ್ಯೂ ಸಪರ್ಯತಃ । ಪೂಜಯತಃ ಸ್ತುತ್ಯಾ ಹವಿಷ್ಪ್ರದಾನೇನ ಚ ಪ್ರೀಣಯತಃ । ಕದೇತ್ಯಾಹ । ದಿವಾ ನಾಹನೀವ ನಕ್ತಂ ರಾತ್ರಾವಪಿ । ಸರ್ವದೇತ್ಯರ್ಥಃ । ಏವಂ ಪೂಜ್ಯಮಾನೋಽಗ್ನಿಃ ಪಲಿತಃ ಪೂರ್ವಮಂಗಾರಾವಸ್ಥಾಯಾಂ ಜೀರ್ಣೋಽಪಿ ಸಮಿಂಧನಾನಂತರಂ ಯುವಾ ತರುಣಸ್ತೇಜಸಾ ಸರ್ವಸ್ಯ ಮಿಶ್ರಯಿತಾ ವಾಜನಿ । ಜಾಯತೇ । ಏವಂ ಜಾತೋಽಯಂ ಮಾನುಷಾ ಯುಗಾ ಮನೋಃ ಸಂಬಂಧೀನಿ ಯುಗಾನಿ ಜಾಯಾಪತಿರೂಪಾಣಿ ಹೋತ್ರಧ್ವರ್ಯುರೂಪಾಣಿ ಪ್ರೋದ್ದಿಶ್ಯ ಪುರು ಚರನ್ ಬಹ್ವಾಜ್ಯಾದಿಕಂ ಭಕ್ಷಯನ್ ಅಜರೋಽಜೀರ್ಣೋ ಜರಾರಹಿತೋ ವರ್ತತೇ ॥

ಪ್ರತಿಪದಾರ್ಥ

**ಸವಯಸಾ**—ಒಂದೇ ವಯಸ್ಸುಳ್ಳವರೂ ಅಥವಾ ಸಾಮರ್ಥ್ಯವುಳ್ಳವರೂ । **ಸಮಾನೇ ಯೋನಾ**—ಸಮಾನವಾದ ಫಲವನ್ನು ಕೊಡತಕ್ಕ ಯಜ್ಞಸ್ಥಾನದಲ್ಲಿರುವವರೂ । **ಮಿಥುನಾ**—ಒಟ್ಟಿಗೆ ಕೂಡಿಕೊಂಡು (ಒಂದೇ ಕರ್ಮವನ್ನು) ನೆರವೇರಿಸುವವರೂ । **ಸಮೋಕಸಾ**—ಸಮಾನವಾದ ವಾಸಸ್ಥಾನವುಳ್ಳವರೂ ಆದ । **ದ್ವಾ**—(ದಂಪತಿಗಳಂತಿರುವ) ಹೋತೃ ಮತ್ತು ಅಧ್ವರ್ಯುಗಳಿಬ್ಬರೂ ಸಹ । **ಯಮೀಂ**—ಯಾವ ಇದೇ ಅಗ್ನಿಯನ್ನು । **ದಿವಾ ನ**—ಹಗಲಿನಲ್ಲಿ ಪೂಜಿಸುವಂತೆಯೇ । **ನಕ್ತಂ**—ರಾತ್ರಿಕಾಲದಲ್ಲೂ ಸಹ (ಸದಾ ಕಾಲದಲ್ಲಿಯೂ) । **ಸಪರ್ಯತಃ**—

ಹವಿಸ್ಪ್ರದಾನಾದಿಗಳಿಂದ) ಪೂಜಿಸುತ್ತಾರೆ । **ಪಲಿತಃ**—(ಪ್ರಾರಂಭದ ಅಂಗಾರಾವಸ್ಥೆಯ ದೃಷ್ಟಿಯಿಂದ) ಜೀರ್ಣನಾಗಿದ್ದರೂ ಸಹ । **ಯುವಾ**—(ಇಧ್ಮಗಳನ್ನು ಅರ್ಪಿಸಿದನಂತರ) ತರುಣನಾಗಿ । **ಅಜನಿ**—ಉತ್ಪನ್ನನಾಗುತ್ತಾನೆ । (ಮತ್ತು) **ಮಾನುಷಾ ಯುಗಾ**—ಮಾನವರಾದ ದಂಪತಿಗಳನ್ನು ಅಥವಾ ಹೋತ್ರಧ್ವರ್ಯುಗಳನ್ನು ಉದ್ದೇಶಿಸಿ । **ಪುರು**—ಪ್ರಭೂತವಾದ ಆಜ್ಯಾದಿಗಳನ್ನು । **ಚರನ್**—ಭಕ್ಷಿಸುತ್ತಾ । **ಅಜರಃ**—ಜರಾರಹಿತನಾಗಿ (ಬೆಳೆಯುತ್ತಾನೆ).

ಭಾವಾರ್ಥ

ಒಂದೇ ಸಾಮರ್ಥ್ಯವುಳ್ಳವರೂ, ಸಮಾನವಾದ ಫಲವನ್ನು ಕೊಡತಕ್ಕ ಯಜ್ಞಸ್ಥಾನದಲ್ಲಿರುವವರೂ, ಒಟ್ಟಿಗೆ ಕೂಡಿಕೊಂಡು ಒಂದೇ ಕರ್ಮವನ್ನು ನೆರವೇರಿಸುವವರೂ ಸಮಾನವಾದ ವಾಸಸ್ಥಾನವುಳ್ಳವರೂ ಆದ ದಂಪತಿಗಳಂತಿರುವ ಹೋತೃ ಮತ್ತು ಅಧ್ವರ್ಯುಗಳಿಬ್ಬರೂ ಸಹ ಈ ಅಗ್ನಿಯನ್ನು ಹಗಲು ಮತ್ತು ರಾತ್ರಿಕಾಲಗಳಲ್ಲೆಲ್ಲಾ ಒಟ್ಟಿಗೆ ಪೂಜಿಸುತ್ತಾರೆ. ಈ ಅಗ್ನಿಯು ಪ್ರಾರಂಭದ ದೆಸೆಯಲ್ಲಿ ಇದ್ದ ಅಂಗಾರಾವಸ್ಥೆಯ ದೃಷ್ಟಿಯಿಂದ ಜೀರ್ಣನಾಗಿದ್ದರೂ ಸಹ ಇಧ್ಮಗಳನ್ನು ಅರ್ಪಿಸಿದನಂತರ ತರುಣನಾಗುತ್ತಾನೆ. ಮತ್ತು ಮಾನವರಾದ ದಂಪತಿಗಳನ್ನು ಅಥವಾ ಹೋತ್ರಧ್ವರ್ಯುಗಳನ್ನು ಉದ್ದೇಶಿಸಿ ಪ್ರಭೂತವಾದ ಆಜ್ಯಾದಿಗಳನ್ನು ಭಕ್ಷಿಸುತ್ತಾ ಚೆನ್ನಾಗಿ ಬೆಳೆಯುತ್ತಾನೆ.

English Translation

He, whom the two, a pair of equal power, dwelling in the same place, and engaged in the same ceremony, worship night and day: he, whether old or young, has been engendered for the sake of mortal couples, accepting many (oblation), and exempt from decay.

ವಿಶೇಷವಿಷಯಗಳು

**ಯೋನಾ**—ಯೋನಿ ಶಬ್ದವು **ಉದಕನಾಮ**ಗಳಲ್ಲಿಯೂ (ನಿ-೨೪) **ಗೃಹ** ನಾಮಗಳಲ್ಲಿಯೂ (ನಿ-೧೩) ಪಠಿತವಾಗಿದೆ ಇಲ್ಲಿ ಯಜ್ಞಸ್ಥಾನವೆಂದರ್ಥ. **ಫಲಸ್ಯ ಉತ್ಪತ್ತಿಸ್ಥಾನೇ ಯಜ್ಞೇ** । ಫಲಕ್ಕೆ ಉತ್ಪತ್ತಿಸ್ಥಾನವಾದ ಯಜ್ಞವೆಂದು ಸಾಯಣರು ವಿವರಿಸಿದ್ದಾರೆ. ಐತರೇಯಬ್ರಾಹ್ಮಣದಲ್ಲಿ,

> ಜನಿಷ್ಠಾ ಉಗ್ರಃ ಸಹಸೇ ತುರಾಯೇತಿ **ಸೂಕ್ತಂ** ಶಂಸತಿ ತದ್ವಾ ಏತದ್ಯಜಮಾನಜನನಮೇವ
> **ಸೂಕ್ತಂ ಯಜಮಾನಂ ಹ ವಾ ಏತೇನ ಯಜ್ಞಾದ್ದೇವಯೋನ್ಯೈ ಪ್ರಜನಯತಿ** ।
> (ಐ. ಬ್ರಾ. ೩-೧೯)

ಎಂಬ ವಾಕ್ಯಕ್ಕೆ ಸಾಯಣರು **ದೇವಲೋಕಸ್ಥಾನಾರ್ಥಂ ಯಜಮಾನಂ ಪ್ರಜನಯತಿ । ತಸ್ಮಾದ್ಯಜಮಾನಜನನತ್ವಂ** । ದೇವಲೋಕವಾಸಾರ್ಥವಾಗಿ ಯಜ್ಞಕರ್ತನನ್ನು ಸಿದ್ಧಪಡಿಸುವುದರಿಂದ ಅವನು ಆ ಸ್ಥಾನಕ್ಕೆ ಹೊಸದಾಗಿ ಉತ್ಪನ್ನನಾದಂತಾಯಿತು. ಆದುದರಿಂದ ಅವನ ಈ ಹೊಸ ಉತ್ಪತ್ತಿಗೆ ಯಜ್ಞವು ಯೋನಿಭೂತವಾಯಿತು. ಎಂದು ವಿವರಿಸಿದ್ದಾರೆ. ಈ ಅರ್ಥವಲ್ಲದೆ ಇತರ ಅರ್ಥಗಳಿಂದಲೂ ಈ ಶಬ್ದದ ನಿಷ್ಪತ್ತಿಯನ್ನು ತೋರಿಸಬಹುದು. ನಿರುಕ್ತಕಾರರು,

> **ಯೋನಿರಂತರಿಕ್ಷಂ ಮಹಾನವಯವಃ ಪರಿವೀತೋ ವಾಯುನಾ । ಅಯಮಪೀತರೋ ಯೋನಿ-**
> **ರೇತಸ್ಮಾದೇವ ಪರಿಯುತೋ ಭವತಿ ॥**
> (ನಿ ೨.೮)

ವಾಯುವಿನಿಂದ ವ್ಯಾಪ್ತವಾದುದೂ ಮಹತ್ತಾದುದೂ ಆದ ಅವಯವವಾದ್ದರಿಂದ ಅಂತರಿಕ್ಷಕ್ಕೆ **ಯೋನಿ**ಯೆಂದು ಹೆಸರು. ಪ್ರಜೋತ್ಪತ್ತಿಗೆ ಕಾರಣವಾದ ಯೋನಿ ಶಬ್ದಕ್ಕೂ ಇದೇ ನಿಷ್ಪತ್ತಿಯನ್ನು ಹೇಳಬೇಕು ಎಂದಿದ್ದಾರೆ.

ಋಕ್ಸಂಹಿತೆಯಲ್ಲಿ—

**ಋತಸ್ಯ ದೇವಾ ಅನುವ್ರತಾ ಗುರ್ಭುವತ್ಪರಿಷ್ಟಿರ್ದ್ಯೌರ್ನ ಭೂಮ ।**
**ವರ್ಧಂತೀಮಾಪಃ ಪನ್ವಾ ಸುಶಿಶ್ವಿಮೃತಸ್ಯ ಯೋನಾ ಗರ್ಭೇ ಸುಜಾತಂ ।**

(ಋ. ಸಂ. ೧-೬೫-೪)

ಎಂಬ ಋಕ್ಕಿನಲ್ಲಿ **ಋತಸ್ಯ ಯೋನಾ** ಎನ್ನುವುದಕ್ಕೆ **ಯೋನಿರಿತ್ಯುದಕನಾಮ । ಋತಸ್ಯ ಯಜ್ಞಸ್ಯಾನ್ನಸ್ಯ ವಾ ಕಾರಣಭೂತೇ ಜಲೇ ।** ಯಜ್ಞಕ್ಕಾಗಲಿ ಅಥವಾ ಅನ್ನಕ್ಕಾಗಲಿ ಕಾರಣಭೂತವಾದುದರಿಂದ ಜಲಕ್ಕೆ **ಯೋನಿ** ಯೆಂಬ ಹೆಸರೆಂದೂ,

**ದೇವಂ ವೋ ದೇವಯಜ್ಯಯಾಗ್ನಿಮೀಳೀತ ಮರ್ತ್ಯಃ ।**
**ಸಮಿದ್ಧಃ ಶುಕ್ರ ದೀದಿಹ್ಯೃತಸ್ಯ ಯೋನಿಮಾಸದಃ ಸಸಸ್ಯ ಯೋನಿಮಾಸದಃ ॥**

(ಋ. ಸಂ. ೫-೨೧-೪)

ಎಂಬ ಋಕ್ಕಿನಲ್ಲಿ **ಯೋನಿಂ ಕಾರಣಂ**, ಸ್ವರ್ಗಸಾಧನವೆಂದೂ,

**ದುರೋಕಶೋಚಿಃ ಕ್ರತುರ್ನ ನಿತ್ಯೋ ಜಾಯೇವ ಯೋನಾವರಂ ವಿಶ್ವಸ್ಮೈ ।**
**ಚಿತ್ರೋ ಯದಭ್ರಾಟ್ ಚ್ಛ್ವೇತೋ ನ ವಿಕ್ಷು ರಥೋ ನ ರುಕ್ಮೀ ತ್ವೇಷಃ ಸಮತ್ಸು ।**

(ಋ. ಸಂ. ೧-೬೬-೩)

ಇತ್ಯಾದಿ ಋಕ್ಕುಗಳಲ್ಲಿ **ಗೃಹವೆಂದೂ** ಅರ್ಥವಾಗುತ್ತದೆ, ಋ. ಸಂ. ೧-೧೪೦-೧. ಇತ್ಯಾದಿ ಋಕ್ಕುಗಳಲ್ಲಿಯೂ ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಯಜ್ಞಸ್ಥಾನವೆಂದರ್ಥ. **ಹೋತೃ ಮತ್ತು ಅಧ್ವರ್ಯು** ಇಬ್ಬರಿಗೂ ಸಮಾನವಾದ ಸ್ಥಾನವಾದುದರಿಂದ **ಸಮಾನೇ ಯೋನಾ** ಎಂದಿದೆ.

**ಸನೋಕಸಾ—ಸಮಾನನಿವಾಸೌ ದೇವಯಜನಸ್ಥಾನೌ ।** ಇಬ್ಬರಿಗೂ ಸಮಾನವಾದ ಯಜ್ಞಸ್ಥಾನವುಳ್ಳ ಹೋತೃ ಮತ್ತು ಅಧ್ವರ್ಯು **ಓಕ ಇತಿ ನಿವಾಸನಾಮೋಚ್ಯತೇ ।** (ನಿ. ೨-೩-೩) ನಿವಾಸಸ್ಥಾನಕ್ಕೆ **ಓಕ**ವೆಂಬುದಾಗಿ ಹೆಸರು. ಆದರೆ ಎಲ್ಲಾ ನಿವಾಸಸ್ಥಾನಗಳಿಗೂ ಈ ಪದವನ್ನು ಉಪಯೋಗಿಸುವುದಿಲ್ಲ. ಮಾನವನಿಗೆ ಸ್ವಗೃಹದಲ್ಲಿಯೇ ಸಂಪೂರ್ಣವಾದ ಅಭಿಮಾನವಿರುವುದು ಎಂಬುದನ್ನು ತೋರಿಸಲು ನಿರುಕ್ತಕಾರರು ಸ್ವಾರಸ್ಯವಾದ ಉದಾಹರಣೆಯನ್ನು ಕೊಡುತ್ತಾರೆ

ನಹಿ ಗ್ರಭಾಯಾರಣಃ ಸುಶೇವೋಽನ್ಯೋದರ್ಯೋ ಮನಸಾ ಮಂತವಾ ಉ ।
ಅಧಾ ಚಿದೋಕಃ ಪುನರಿತ್ಸ ಏತ್ಯಾ ನೋ ವಾಜ್ಯಭೀಷಾಳೇತು ನವ್ಯಃ ।

(ಋ. ಸಂ. ೭-೪-೮)

ಎಂಬ ಋಕ್ಕನ್ನುದಹರಿಸಿ **ಅಥ ಸ ಓಕಃ ಪುನರೇವ ತದೇತಿ ಯತ ಆಗತೋ ಭವತಿ ।** (ನಿ. ೩-೩) ಸ್ವೀಕೃತ ಪುತ್ರನಿಗೆ ಎಂದಿದ್ದರೂ ಸ್ವಗೃಹದಲ್ಲಿಯೇ ಅಭಿಮಾನವಿದ್ದು ಅಲ್ಲಿಗೇ ವಾಪಸ್ಸು ಹೋಗುತ್ತಾನಾದ್ದರಿಂದ ಸ್ವಗೃಹವು ಪೂರ್ಣವಾದ ಅಭಿಮಾನಕ್ಕೆ ಪಾತ್ರವು. ಸರ್ವವಿಧವಾದ ಫಲಕ್ಕೂ ಉತ್ಪತ್ತಿಸ್ಥಾನವಾದುದರಿಂದಲೂ ಯಜ್ಞಗೃಹದಲ್ಲಿಯೂ ಅದೇ ಅಭಿಮಾನವಿರುವುದರಿಂದಲೂ ಇಲ್ಲಿಯೂ ಸಹ ಓಕ ಶಬ್ದವನ್ನು ಪ್ರಯೋಗಿಸಿದೆ.

ವ್ಯಾಕರಣಪ್ರಕ್ರಿಯಾ

**ದ್ವಾ—ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ವಿಭಕ್ತಿಗೆ ಆಕಾರದೇಶ.

**ಸಪರ್ಯತಃ**—ಸಪರ ಪೂಜಾಯಾಂ ಧಾತು. ಕಂಡ್ವಾದಿ. **ಕಂಡ್ವಾದಿಭ್ಯೋಯಕ್** ( ಪಾ. ಸೂ. ೩-೧-೨೭) ಎಂಬುದರಿಂದ ಸ್ವಾರ್ಥದಲ್ಲಿ ಯಕ್. ಲಟ್ ಪ್ರಥಮಪುರುಷ ದ್ವಿವಚನಾಂತರೂಪ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಯಕ್‌ಸ್ವರ ಉಳಿಯುತ್ತದೆ.

**ಯೋನಾ**—ಯು ಮಿಶ್ರಣೇ. ಧಾತು. **ವಹಿಶ್ರಿಶ್ರುಯು**—( ಉ. ಸೂ. ೪-೫೧ ) ಎಂಬುದರಿಂದ ನಿ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿನ ಇಕಿಗೆ ಗುಣ. ನಿತ್ವ ಅತಿದೇಶ ಮಾಡಿರುವುದರಿಂದ ಆದ್ಯುದಾತ್ತ ಸ್ವರ ಬರುತ್ತದೆ. **ಸುಪಾಂ ಸುಲುಕ್**—ಎಂಬುದರಿಂದ ಸಪ್ತಮೀ ಏಕವಚನಕ್ಕೆ ಡಾದೇಶ.

**ಮಿಥುನಾ**—ಮಿಥ ಎಂಬುದು ಸೌತ್ರಧಾತು. **ಕ್ಷುಧಿಪಿಶಿಮಿಥಿಭ್ಯಃ ಕಿತ್** (ಉ. ಸೂ. ೩-೩೫) ಎಂಬುದರಿಂದ ಉನನ್ ಪ್ರತ್ಯಯ- ಕಿತ್ವ ವಿಧಾನಮಾಡಿರುವುದರಿಂದ ಗುಣ ಬರುವುದಿಲ್ಲ. ವ್ಯತ್ಯಯದಿಂದ ಅಂತೋದಾತ್ತವಾಗುತ್ತದೆ. ಹಿಂದಿನಂತೆ ವಿಭಕ್ತಿಗೆ (ಔ) ಆಕಾರಾದೇಶ.

**ಸಮೋಕಸಾ**—ಸಮಾನಂ ಓಕಃ ಯಯೋಸ್ತೌ ಸಮೋಕಸಾ **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್** ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ ಹಿಂದಿನಂತೆ ದ್ವಿವಚನಕ್ಕೆ ಆಕಾರಾದೇಶ.

**ಪಲಿತಃ—ಲೋಷ್ಟಪಲಿತೌ** (ಉ. ಸೂ. ೩-೩೭) ಎಂಬುದರಿಂದ ನಿಪಾತಿತವಾಗಿದೆ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಯುವಾ**—ಯು ಮಿಶ್ರಣೇ. ಧಾತು. **ಕನಿನ್‌ಯುವೃಷಿ**—(ಉ. ಸೂ. ೧-೧೫೪) ಎಂಬುದರಿಂದ ಕನಿನ್ ಪ್ರತ್ಯಯ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ

**ಅಜನಿ**—ಜನೀ ಪ್ರಾದುರ್ಭಾವೇ. ಧಾತು. ಛಾಂದಸವಾಗಿ ವರ್ತಮಾನಾರ್ಥದಲ್ಲಿ ಲುಙ್. ಪ್ರಥಮ ಪುರುಷ ಏಕವಚನಪರವಾದಾಗ **ದೀಪಜನಬುಧ**—(ಪಾ ಸೂ ೩-೧-೬೧) ಎಂಬುದರಿಂದ ಚ್ಲಿಗೆ ಚಿಣಾದೇಶ. **ಚಿಣೋ ಲುಕ್** (ಪಾ. ೬-೪-೧೦೪) ಎಂಬುದರಿಂದ ಚಿಣಿನ ಪರವಾದ ತಶಬ್ದಕ್ಕೆ ಲುಕ್. ಅಂಗಕ್ಕೆ ಅಡಾಗಮ. ಅತಿಙಂತದ ಪರದಲ್ಲಿರುವುದರಿಂದ ತಿಙಂತ ನಿಘಾತಸ್ವರ ಬರುತ್ತದೆ.

**ಪುರು—ನಿಪಾತಸ್ಯಚ** (ಪಾ. ಸೂ. ೬-೩-೧೩೬) ಎಂಬುದರಿಂದ ಸಂಹಿತಾದಲ್ಲಿ ದೀರ್ಘ.

**ಚರನ್**—ಚರ ಗತಿಭಕ್ಷಣಯೋಃ ಧಾತು. ಲಡರ್ಥದಲ್ಲಿ ಶತೃಪ್ರತ್ಯಯ. ಪ್ರಥಮಾ ಏಕವಚನಾಂತರೂಪ. ಲಸಾರ್ವಧಾತುಕ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಅಜರಃ**—ನ ವಿದ್ಯತೇ ಜರಾ ಯಸ್ಯಸಃ ಅಜರಃ. ನಞ್‌ಸ್ವರಕ್ಕೆ ಅಪವಾದವಾಗಿ **ನಞೋಜರಮರ**—(ಪಾ. ಸೂ. ೬-೧-೧೧೬) ಎಂಬುದರಿಂದ ಉತ್ತರಪದ ಆದ್ಯುದಾತ್ತಸ್ವರ ಬರುತ್ತದೆ.

**ಮಾನುಷಾ**—ಮಾನುಷಾನಿ ಎಂದು ರೂಪವಾದಾಗ **ಶೇಶ್ಛಂದಸಿ ಬಹುಲಮ್** (ಪಾ. ಸೂ. ೬-೧-೭೦) ಎಂಬುದರಿಂದ ಶಿಗೆ ಲೋಪ. ಯುಗಾ ಎಂಬಲ್ಲಿಯೂ ಹೀಗೆಯೇ ಲೋಪ ಬರುತ್ತದೆ. ॥ ೪ ॥

——— :o: ———

ಸಂಹಿತಾಪಾಠಃ

ತಮೀಂ ಹಿನ್ವಂತಿ ಧೀತಯೋ ದಶ ವ್ರಿಶೋ ದೇವಂ ಮರ್ತಾಸ ಊತಯೇ ಹವಾಮಹೇ ।
ಧನೋರಧಿ ಪ್ರವತ ಆ ಸ ಋಣ್ವತ್ಯಭಿವ್ರಜದ್ಭಿರ್ವಯುನಾ ನವಾಧಿತ ॥ ೫ ॥

ಪದಪಾಠಃ

ತಂ । ಈಂ । ಹಿನ್ವಂತಿ । ಧೀತಯಃ । ದಶ । ವ್ರಿಶಃ । ದೇವಂ । ಮರ್ತಾಸಃ । ಊತಯೇ । ಹವಾಮಹೇ ।
ಧನೋಃ । ಅಧಿ । ಪ್ರಽವತಃ । ಆ । ಸಃ । ಋಣ್ವತಿ । ಅಭಿವ್ರಜತ್ಽಭಿಃ । ವಯುನಾ । ನವಾ । ಅಧಿತ । ॥ ೫ ॥

॥ ಸಾಯಣಭಾಷ್ಯಂ ॥

ದೇವಂ ದ್ಯೋತಮಾನಂ ತಮೇನಮಗ್ನಿಂ ದಶ ಧೀತಯೋ ದಶಸಂಖ್ಯಾಕಾ ಅಂಗುಲಯೋ ವ್ರಿಶೋ ವಿಶಃ ಪರಸ್ಪರವಿಶ್ಲಿಷ್ಟಾ ಹಿನ್ವಂತಿ । ಪ್ರೀಣಯಂತಿ ಮಥನಕಾಲೇ । ತಥಾ ಮರ್ತಾಸೋ ಮನುಷ್ಯಾ ವಯಂ ಯಜಮಾನಾ ಊತಯೇ ರಕ್ಷಣಾಯ ಹವಾಮಹೇ । ಆಹ್ವಯಾಮಃ । ಕೋಽಸ್ಯ ವಿಶೇಷ ಇತ್ಯುಚ್ಯತೇ । ಅಯಮಗ್ನಿರ್ಧನೋರ್ಧನುಷಃ ಸಕಾಶಾತ್ಪ್ರವತ ಆ ಪ್ರಕರ್ಷೇಣ ಗಚ್ಛತೋ ಬಾಣಾನಿವ । ತಾನ್ಯಥಾ ಶತ್ರೋರುಪರಿ ಮುಂಚಂತಿ ॥ ಆ ಇತ್ಯುಪಮಾರ್ಥೇ ॥ ತದ್ವತ್ಸೋಽಗ್ನಿರ್ಧನುಃಸ್ಥಾನೀಯಾನ್ನಿಜಶರೀರಸಕಾಶಾತ್ಪ್ರವತಃ ಪ್ರಕೃಷ್ಟವೇಗವತೋ ರಶ್ಮೀನೃಣ್ವತಿ । ಗಮಯತಿ ॥ ಋಣ್ವತಿರ್ಗತ್ಯರ್ಥಃ ॥ ಅತ್ರಾಂತರ್ಭಾವಿತಣ್ಯರ್ಥೋಽಯಂ । ಇದಿತ್ವಾನ್ನುಮ್ । ಛಾಂದಸಂ ರೇಫಸ್ಯ ಸಂಪ್ರಸಾರಣಂ । ಅಧಿಶಬ್ದೋಽನರ್ಥಕೋ ಧಾತ್ವರ್ಥಮಾತ್ರಾನುವಾದೀ ॥ ಕಿಂಚೈವಂ ಪ್ರವೃದ್ಧೋಽಗ್ನಿರಭಿವ್ರಜದ್ಭಿರನುಷ್ಠಾನಾರ್ಥಮಭಿತಃ ಸಂಚರದ್ಭಿರ್ಜ್ಞೇಯಮರ್ಥಮಭಿಗಚ್ಛದ್ಭಿರ್ವಾ ತದರ್ಥಂ ನವಾ ನವಾನಿ ನೂತನಾನಿ ವಯುನಾ ವಯುನಾನಿ ಪ್ರಜ್ಞಾನಾನ್ಯನುಷ್ಠಾನವಿಷಯಾಣ್ಯಧಿತ । ಧಾರಯತಿ । ಜ್ಞಾಪಯತೀತ್ಯರ್ಥಃ । ಯದ್ವಾ । ಅಭಿವ್ರಜದ್ಭಿರಾಭಿಮುಖ್ಯೇನ ಗಚ್ಛದ್ಭಿರ್ಹೋತ್ರಾದಿಭಿಃ ಕ್ರಿಯಮಾಣಾನಿ ನವಾನಿ ವಯುನಾನಿ ಪ್ರಜ್ಞಾವಿಶಿಷ್ಟಾನಿ ಸ್ತೋತ್ರಾದೀನ್ಯಧಿತ । ಧತ್ತೇ ॥ ಧಾಞಶ್ಛಾಂದಸೇ ಲುಙಿ ಸ್ಥಾಘ್ವೋರಿಚ್ಚೇತೀತ್ವಂ । ಉತ್ತರಸ್ಯ ಸಿಚಃ ಕಿತ್ತ್ವಂ । ಹ್ರಸ್ವಾದಂಗಾದಿತಿ ಸಲೋಪಃ ॥

ಪ್ರತಿಪದಾರ್ಥ

ದೇವಂ—ಪ್ರಕಾಶಮಾನನಾದ । ತಂ—ಅಗ್ನಿಯನ್ನು । ದಶಧೀತಯಃ—ಹತ್ತು ಬೆರಳುಗಳೂ ಸಹ ವ್ರಿಶಃ—ಪರಸ್ಪರ ಬೇರೆಬೇರೆಯಾದವರೂ ಒಟ್ಟಿಗೆ ಸೇರಿಕೊಂಡು । ಹಿನ್ವಂತಿ—ತೃಪ್ತಿಗೊಳಿಸುತ್ತವೆ । ಮರ್ತಾಸಃ—ಯಜ್ಞಕರ್ತರೂ ಮಾನವರೂ ಆದ ನಾವೂ ಸಹ । ಊತಯೇ—ರಕ್ಷಣಾರ್ಥವಾಗಿ । ಹವಾಮಹೇ—(ಅಗ್ನಿ

ಯನ್ನು) ಕರೆಯುತ್ತೇವೆ । **ಧನೋಃ**—ಧನುಸ್ಸಿನಿಂದ (ಬಿಡಲ್ಪಟ್ಟ) । **ಪ್ರವತ ಆ**— ವೇಗವಾಗಿ ಹೋಗತಕ್ಕ ಬಾಣಗಳಂತೆ । **ಸಃ**—ಅಗ್ನಿಯು । **ಋಣ್ವತಿ**—(ತನ್ನ ಕಿರಣಗಳನ್ನು) ವೇಗವಾಗಿ ಪ್ರಸರಿಸುವಂತೆ ಮಾಡುತ್ತಾನೆ । **ಅಭಿವ್ರಜದ್ಭಿಃ**—(ಅನುಷ್ಠಾನಕ್ಕಾಗಿ) ಸುತ್ತಲೂ ಸಂಚರಿಸುವವರಿಂದ (ಅವರಿಗಾಗಿ) । **ನವಾ**—ನೂತನವಾದ । **ವಯುನಾ**—(ಯಜ್ಞಾನುಷ್ಠಾನಕ್ಕೆ ಬೇಕಾದ) ವಿಷಯಗಳನ್ನು । **ಅಧಿತ**—ತಿಳಿಯುವಂತೆಮಾಡುತ್ತಾನೆ । [ಅಥವಾ **ಅಭಿವ್ರಜದ್ಭಿಃ**— ಸುತ್ತಲೂ ಸಂಚರಿಸುವ ಹೋತ್ರಾದಿಗಳಿಂದ (ಪಠಿಸಲ್ಪಟ್ಟ) । **ನವಾನಿ** — ನೂತನಗಳಾದ । **ವಯುನಾನಿ**—ಸ್ತೋತ್ರಾದಿಗಳನ್ನು । **ಅಧಿತ**—ಸ್ವೀಕರಿಸುತ್ತಾನೆ] ॥

ಭಾವಾರ್ಥ

ಹತ್ತು ಬೆರಳುಗಳೂ ಸಹ ಪ್ರಕಾಶಮಾನನಾದ ಅಗ್ನಿಯನ್ನು ಒಟ್ಟಿಗೆ ಸೇರಿಕೊಂಡು ತೃಪ್ತಿಗೊಳಿಸುತ್ತವೆ. ಯಜ್ಞಕರ್ತರಾದ ನಾವೂ ಸಹ ಅವನನ್ನು ರಕ್ಷಣಾರ್ಥವಾಗಿ ಕರೆಯುತ್ತೇವೆ. ಧನುಸ್ಸಿನಿಂದ ಬಿಡಲ್ಪಟ್ಟ ಬಾಣಗಳು ತೀವ್ರವಾಗಿ ಹೋಗುವಂತೆ ಅಗ್ನಿಯು ತನ್ನ ಜ್ವಾಲೆಗಳನ್ನು ವೇಗವಾಗಿ ಪ್ರಸರಿಸುವಂತೆ ಮಾಡುತ್ತಾನೆ. ಮತ್ತು ಸುತ್ತಲೂ ಸಂಚರಿಸುವ ಹೋತ್ರಾದಿಗಳಿಂದ ಪಠಿತಗಳಾದುದೂ ನೂತನಗಳಾದುದೂ ಆದ ಸ್ತೋತ್ರಗಳನ್ನು ಸ್ವೀಕರಿಸುತ್ತಾನೆ.

English Translation

The ten fingers intertwined propitiate that divine (Agni), whom we mortals invoke for protection : he darts (his rays) like swift (arrows) from a bow, and accepts the new praises (uttered) by those who crowd round the alter.

ವಿಶೇಷವಿಷಯಗಳು

**ದಶಧೀತಯಃ**—ಧೀತಿಶಬ್ದಕ್ಕೆ **ಕರ್ಮ, ಪ್ರಜ್ಞಾ** ಎಂಬರ್ಥಗಳಿರುವುದನ್ನು ಹಿಂದೆಯೇ ತಿಳಿಸಿದೆ. (ಋ. ಸಂ. ೧-೧೪೯-೧) ಈ ಪದವು **ಅಂಗುಳಿನಾಮ**ಗಳಲ್ಲಿಯೂ ಪಠಿತವಾಗಿದೆ. (ನಿ. ೩-೮). ಇಲ್ಲಿ ಹತ್ತು ಬೆರಳುಗಳೆಂದರ್ಥ.

**ವ್ರಿಶಃ**—ಈ ಪದವೂ **ಅಂಗುಳಿನಾಮ**ಗಳಲ್ಲಿ ಪಠಿತವಾಗಿದೆ. (ನಿ. ೩-೮) ಇಲ್ಲ **ಪರಸ್ಪರ ವಿಶ್ಲಿಷ್ಟಾಃ** । ಬೇರೆಬೇರೆ ಬಿಡಿಸಿದ್ದರೂ ಸಹ ಎಂದು ನಿರ್ವಚನವನ್ನು ತೋರಿಸಿ **ಧೀತಯಃ** ಎಂಬುದಕ್ಕೆ ವಿಶೇಷಣವಾಗಿದೆಯೆಂದು ಸಾಯಣರು ಹೇಳಿದ್ದಾರೆ.

**ಋಣ್ವತಿ**— ಗತ್ಯರ್ಥಕವಾದ **ರಿವಿ**ಧಾತುವಿನಿಂದ ನಿಷ್ಪನ್ನವಾಗಿ ಹೊಂದಿಸು, ಹೋಗುವಂತೆ ಮಾಡು ಇತ್ಯಾದ್ಯರ್ಥಗಳಾಗುತ್ತವೆ.

**ಕ್ರಾಣಾ ರುದ್ರೇಭಿರ್ವಸುಭಿಃ ಪುರೋಹಿತೋ ಹೋತಾ ನಿಷತ್ತೋ ರಯಿಷಾಳಮರ್ತ್ಯಃ ।**
**ರಥೋ ನ ವಿಕ್ಷ್ವೃಂಜಸಾನ ಆಯುಷು ವ್ಯಾನುಷಗ್ವಾರ್ಯಾ ದೇವ ಋಣ್ವತಿ ।**
(ಋ. ಸಂ. ೧-೫೮-೩)

ಇತ್ಯಾದಿ ಋಕ್ಕುಗಳಲ್ಲಿ ಗಮಯತಿ ಎಂಬರ್ಥವಾಗುವಂತೆ ಇಲ್ಲಿಯೂ ಸಹ ತನ್ನ ಕಿರಣಗಳನ್ನು ಪ್ರಸರಿಸುವಂತೆ ಮಾಡುತ್ತಾನೆಂದರ್ಥ.

ಈ ಋಕ್ಕಿನ ಉತ್ತರಾರ್ಧಕ್ಕೆ ಎರಡು ವಿಧವಾದ ಅರ್ಥಗಳಾಗುವುವು. ಮೊದಲನೆಯದಾಗಿ, ಅಗ್ನಿಯು ಯಜ್ಞಭೂಮಿಯ ಸುತ್ತಲೂ ಇರತಕ್ಕ ಋತ್ವಿಗಾದಿಗಳಿಗೆ ಯಜ್ಞಾನುಷ್ಠಾನದ ವಿಷಯಗಳನ್ನು ತಿಳಿಯುವಂತೆ ಮಾಡುತ್ತಾನೆಂದೂ, ಎರಡನೆಯದಾಗಿ, ಸುತ್ತಲೂ ಇರತಕ್ಕ ಹೋತ್ರಾದಿಗಳಿಂದ ಪಠಿಸಲ್ಪಟ್ಟವೂ ನೂತನವಾದವೂ ಆದ ಸ್ತೋತ್ರಾದಿಗಳನ್ನು ಸ್ವೀಕರಿಸುತ್ತಾನೆಂದೂ ಅರ್ಥವಾಗುವುದೆಂದು ಸಾಯಣರು ಅರ್ಥಮಾಡಿದ್ದಾರೆ.

**ವಯುನಾ**—**ಕೇತಃ, ಕೇತುಃ** (ನಿ. ೩-೧೩) ಇತ್ಯಾದಿ ಪ್ರಜ್ಞಾನಾಮಗಳಲ್ಲಿ ಪಠಿತವಾಗಿದೆ. ಪ್ರಕಾಶವನ್ನುಂಟುಮಾಡುವುದರಿಂದ ಈ ಅರ್ಥವೆಂದು ವಿವರಿಸಿದೆ. **ವಯುನಂ ವೇತೇಃ ಕಾಂತಿರ್ವಾ ಪ್ರಜ್ಞಾ ವಾ।** (ನಿ ೫-೧೫) ಹೆಣೆದುಹಾಕು ಎಂಬರ್ಥವನ್ನು ಕೊಡತಕ್ಕ ವೀ ಧಾತುವಿನಿಂದ ನಿಷ್ಪನ್ನವಾಗಿ **ಅಪೇಕ್ಷೆ** ಅಥವಾ **ಪ್ರಜ್ಞೆ**ಯೆಂಬರ್ಥವನ್ನು ಕೊಡುತ್ತದೆಂದು ನಿರುಕ್ತಕಾರರು ತೋರಿಸಿ—

**ಸ ಇತ್ತಮೋಽವಯುನಂ ತತನ್ವತ್ಸೂರ್ಯೇಣ ವಯುನವಚ್ಚಕಾರ।**
**ಕದಾ ತೇ ಮರ್ತಾ ಅಮೃತಸ್ಯ ಧಾಮೇಯಕ್ಷಂತೋ ನ ಮಿನಂತಿ ಸ್ವಧಾವಃ॥**

(ಋ. ಸಂ ೬-೨೧-೩)

ಎಂಬ ಋಕ್ಕನ್ನುದಹರಿಸಿ **ಸ ತಮೋಽಪ್ರಜ್ಞಾನಂ ತತನ್ವತ್ತತಂ ಸೂರ್ಯೇಣ ಪ್ರಜ್ಞಾನವಚ್ಚಕಾರ** (ನಿ. ೫-೧೫) ಕತ್ತಲಿನ ರೂಪವಲ್ಲಿದ್ದು ಗೋಚರಾತೀತವಾದುದನ್ನು ಪ್ರಜ್ಞಾವಿಷಯವನ್ನಾಗಿ ಮಾಡಿದನು ಎಂಬರ್ಥವನ್ನು ಕೊಡುವುದೆಂದು ವಿವರಿಸಿದ್ದಾರೆ. ಪ್ರಕೃತವಾದ ಋಕ್ಕಿನಲ್ಲಿ ಪ್ರಜ್ಞಾವಿಶಿಷ್ಟವಾದ ಸ್ತೋತ್ರವೆಂದರ್ಥವಾಗುತ್ತದೆ.

**ಅಧಿತ**—**ಜ್ಞಾಪಯತಿ।** ಋತ್ವಿಗಾದಿಗಳಿಗೆ ತಿಳಿಯುವಂತೆ ಮಾಡುತ್ತಾನೆಂದು ಒಂದರ್ಥವೂ, **ಸ್ತೋತ್ರಾದೀನಿ ಧತ್ತೇ** ಸ್ತೋತ್ರಾದಿಗಳನ್ನು ಸ್ವೀಕರಿಸುತ್ತಾನೆ ಎಂದು ಇನ್ನೊಂದರ್ಥವೂ ಆಗುತ್ತದೆ.

### ವ್ಯಾಕರಣಪ್ರಕ್ರಿಯಾ

**ಹಿನ್ವಂತಿ**—ಹಿವಿ ಪ್ರೀಣನೇ. ಧಾತು. ಲಟ್ ಪ್ರಥಮಪುರುಷ ಬಹುವಚನದಲ್ಲಿ ಝಿಗೆ ಅಂತಾದೇಶ. **ಇದಿತೋ ನುಮ್ ಧಾತೋಃ** (ಪಾ. ಸೂ. ೭-೧-೫೮) ಎಂಬುದರಿಂದ ನುಮಾಗಮ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಧೀತಯಃ**—ಡುಧಾಞ್ ಧಾರಣಪೋಷಣಯೋಃ ಧಾತು. ಕ್ತಿಚ್ ಪ್ರತ್ಯಯ. **ಘುಮಾಸ್ಥಾಗಾಪಾ**— (ಪಾ. ಸೂ. ೬-೪-೬೬) ಎಂಬುದರಿಂದ ಧಾತುವಿಗೆ ಈತ್ವ. ಚಿತ್ತ್ವಾದುದರಿಂದ ಅಂತೋದಾತ್ತಸ್ವರ ಬರುತ್ತದೆ.

**ವ್ರಿಶಃ**—ಛಾಂದಸವಾಗಿ ರೇಫವು ಮಧ್ಯೆ ಬರುತ್ತದೆ. ಪ್ರಥಮಾ ಬಹುವಚನಾಂತರೂಪ.

**ಮರ್ತಾಸಃ**—**ಆಜ್ಜಸೇರಸುಕ್** (ಪಾ ಸೂ. ೭-೧-೫೦) ಎಂಬುದರಿಂದ ಜಸಿಗೆ ಅಸುಕಾಗಮ.

**ಊತಯೇ**—ಅವ ರಕ್ಷಣೇ. ಧಾತು. **ಊತಿಜೂತಿಸಾತಿ**—(ಪಾ. ಸೂ. ೩-೩-೯೭) ಎಂಬುದರಿಂದ ಉದಾತ್ತವಾದ ಕ್ತಿನ್ ಪ್ರತ್ಯಯದಿಂದ ನಿಪಾತಿತವಾಗಿದೆ. ಚತುರ್ಥೀ ಏಕವಚನಾಂತರೂಪ

**ಹವಾಮಹೇ**—ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ ಧಾತು. ಲಟ್ ಉತ್ತಮಪುರುಷ ಬಹುವಚನದಲ್ಲಿ ಮಹಿಙ್ ಪ್ರತ್ಯಯ. ಟಿಗೆ ಏತ್ವ. ಶಪ್‌ವಿಕರಣ. **ಬಹುಲಂ ಛಂದಸಿ** ಎಂಬುದರಿಂದ ಧಾತುವಿಗೆ ಸಂಪ್ರಸಾರಣ. ಶಪ್ ನಿಮಿತ್ತವಾಗಿ ಉಕಾರಕ್ಕೆ ಗುಣ, ಅವಾದೇಶ. ತಿಙಂತನಿಘಾತಸ್ವರ ಬರುತ್ತದೆ.

**ಧನೋಃ**—ಧನ ಧಾನ್ಯೇ ಧಾತು **ಭೃಮೃಶೀ**—(ಉ. ಸೂ. ೧-೭) ಎಂಬುದರಿಂದ ಉ ಪ್ರತ್ಯಯ. ವ್ಯತ್ಯಯದಿಂದ ಆದ್ಯುದಾತ್ತವಾಗುತ್ತದೆ. ಪಂಚಮೀ ಏಕವಚನಾಂತರೂಪ.

**ಪ್ರವತಃ**—ಪ್ರ ಉಪಸರ್ಗ. ವನ ಸಂಭಕ್ತೌ ಧಾತು. **ಕ್ವಿಪ್‌ಚ** ಎಂಬುದರಿಂದ ಪ್ರ ಪೂರ್ವವಾಗಿರುವಾಗ ಕ್ವಿಪ್. **ಗಮಾದೀನಾಮಿತಿವಕ್ತವ್ಯಮ್** (ಪಾ. ಸೂ. ೬-೪-೪೦—೧) ಎಂಬುದರಿಂದ ಧಾತುವಿನ ಅನುನಾಸಿಕಕ್ಕೆ ಲೋಪ. ಆಗ **ಹ್ರಸ್ವಸ್ಯ ಪಿತಿ ಕೃತಿ ತುಕ್** (ಪಾ. ಸೂ. ೬-೧-೭೧) ಎಂಬುದರಿಂದ ಧಾತುವಿಗೆ ತುಕಾಗಮ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ದ್ವಿತೀಯಾ ಬಹುವಚನಾಂತರೂಪ.

**ಆ**—ಇದು ಉಪಮಾ (ಸಾದೃಶ್ಯ)ರ್ಥದಲ್ಲಿ ಪ್ರಯುಕ್ತವಾಗಿದೆ.

**ಋಣ್ವತಿ**—ರಿವಿ ಗತೌ. ಧಾತು. ಪ್ರೇರಣಾತೋರುವುದರಿಂದ ಅಂತರ್ಭಾವಿತಣ್ಯರ್ಥಕವಾದ ಧಾತು. **ಇದಿತೋನುಮ್‌ಧಾತೋಃ** (ಪಾ. ಸೂ. ೭-೧-೫೮) ಎಂಬುದರಿಂದ ನುಮಾಗಮ. ಲಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. ಶಪ್ ವಿಕರಣ. **ಬಹುಲಂ ಛಂದಸಿ** ಎಂಬುದರಿಂದ ಧಾತುವಿನ ರೇಫಕ್ಕೆ ಸಂಪ್ರಸಾರಣ ಪೂರ್ವರೂಪ. **ಋವರ್ಣಾನ್ನಸ್ಯ ಣತ್ವಂ ವಾಚ್ಯಮ್** ಎಂಬ ವಚನದಿಂದ ನುಮಿನ ನಕಾರಕ್ಕೆ ಣತ್ವ. ಋಣ್ವತಿ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ಅಧಿ ಎಂಬ ಉಪಸರ್ಗಕ್ಕೆ ಇಲ್ಲಿ ಅರ್ಥವಿಶೇಷ ಜನಕ ಶಕ್ತಿಯಿಲ್ಲ. ಕೇವಲ ಧಾತ್ವರ್ಥವನ್ನೇ ಅನುವಾದ ಮಾಡುತ್ತದೆ.

**ಅಭಿವ್ರಜದ್ಭಿಃ**—ವ್ರಜ ಗತೌ ಧಾತು. ಲಡರ್ಥದಲ್ಲಿ ಶತೃಪ್ರತ್ಯಯ. ಲಸಾರ್ವಧಾತುಕ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ. ಪ್ರಾದಿಸಮಾಸವಾದಾಗ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ತೃತೀಯಾ ಬಹುವಚನಾಂತರೂಪ.

**ವಯುನಾ—ನವಾ** | ನಪುಂಸಕದಲ್ಲಿ ಶಿ ಆದೇಶ ಬಂದು ರೂಪವಾದಾಗ **ಶೇಶ್ಛಂದಸಿ ಬಹುಲಮ್** ಎಂಬುದರಿಂದ ಶಿಗೆ ಲೋಪ.

**ಅಧಿತ**—ಡುಧಾಞ್ ಧಾರಣಪೋಷಣಯೋಃ ಧಾತು. **ಛಂದಸಿ ಲುಙ್‌ಲಙ್‌ಲಿಟಃ** ಎಂಬುದರಿಂದ ವರ್ತಮಾನಾರ್ಥದಲ್ಲಿ ಲುಙ್. ಪ್ರಥಮಪುರುಷಏಕವಚನದಲ್ಲಿ ತಪ್ರತ್ಯಯ. ಚ್ಲಿಗೆ ಸಿಚಾದೇಶ. **ಸ್ಥಾಘ್ವೋರಿಚ್ಚ** (ಪಾ. ಸೂ. ೧-೨-೧೭) ಎಂಬುದರಿಂದ ಧಾತುವಿಗೆ ಇತ್ವ ; ಪರದಲ್ಲಿರುವ ಸಿಚಿಗೆ ಕಿತ್ವವೂ ಬರುತ್ತದೆ. **ಹ್ರಸ್ವಾದಂಗಾತ್** (ಪಾ. ಸೂ ೮-೨-೨೭) ಎಂಬುದರಿಂದ ಹ್ರಸ್ವದ ಪರದಲ್ಲಿರುವ ಸಿಚಿಗೆ ಲೋಪ. ಅಂಗಕ್ಕೆ ಅಡಾಗಮ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. || ೫ ||

——— :o: ———

ಸಂಹಿತಾಪಾಠಃ

ತ್ವಂ ಹ್ಯಗ್ನೇ ದಿವ್ಯಸ್ಯ ರಾಜಸಿ ತ್ವಂ ಪಾರ್ಥಿವಸ್ಯ ಪಶುಪಾಇವ ತ್ಮನಾ ।
ಏನೀ ತ ಏತೇ ಬೃಹತೀ ಅಭಿಶ್ರಿಯಾ ಹಿರಣ್ಯಯೀ ವಕ್ವರೀ ಬರ್ಹಿರಾಶಾತೇ ।
॥ ೬ ॥

ಪದಪಾಠಃ

ತ್ವಂ । ಹಿ । ಅಗ್ನೇ । ದಿವ್ಯಸ್ಯ । ರಾಜಸಿ । ತ್ವಂ । ಪಾರ್ಥಿವಸ್ಯ । ಪಶುಪಾಃಽಇವ । ತ್ಮನಾ ।
ಏನೀ ಇತಿ । ತೇ । ಏತೇ ಇತಿ । ಬೃಹತೀ ಇತಿ । ಅಭಿಽಶ್ರಿಯಾ । ಹಿರಣ್ಯಯೀ ಇತಿ । ವಕ್ವರೀ ಇತಿ ।
ಬರ್ಹಿಃ । ಆಶಾತೇ ಇತಿ ॥ ೬ ॥

ಸಾಯಣಭಾಷ್ಯಂ

ಹೇ ಅಗ್ನೇ ತ್ವಂ ದಿವ್ಯಸ್ಯ ದಿವಿ ಭವಸ್ಯ ದೇವಾದೇರ್ವಿದ್ಯುದಾತ್ಮನಾ ವೃಷ್ಟ್ಯಾದೇರ್ವಾ ರಾಜಸಿ । ಈಶಿಷೇ । ಐಶ್ವರ್ಯೇಣಾನ್ವೈತತ್ । ತಥಾ ಪಾರ್ಥಿವಸ್ಯ ಪೃಥಿವೀಸಂಬಂಧಿನೋ ಮನುಷ್ಯಾದೇ ರಾಜಸಿ । ಈಶ್ವರೋ ಭವಸಿ । ಕಿಮನ್ಯತಂತ್ರತ್ವೇನ ನೇತ್ಯಾಹ । ತ್ಮನಾತ್ಮನೈವ ಸ್ವಸಾಮರ್ಥ್ಯೇನೈವ । ತತ್ರ ದೃಷ್ಟಾಂತಃ । ಪಶುಪಾ ಇವ । ಪಶುಪಾಲಕೋ ಯಥಾ ಸ್ವಸಾಮರ್ಥ್ಯೇನೈವ ಪಶೂನಾಂ ನಿರೋಧನಿರ್ಗಮನಾದಿವ್ಯಾಪಾರೇಷು ಸಮರ್ಥೋ ಭವತಿ ತದ್ವತ್ । ಏತದ್ದೃಷ್ಟಾಂತೇನಾತ್ಯಂತಸ್ವಾತಂತ್ರ್ಯಮುಕ್ತಂ ಭವತಿ । ಕಿಂಚ ಯಸ್ಮಾದೇವ ತಸ್ಮಾತ್ತೇ ತವ ಬರ್ಹಿರ್ಯಜ್ಞಮೇತೇ ಪ್ರಸಿದ್ಧೇ ಏನೀ ಏತವರ್ಣೇ ಶುಭ್ರೇ ದ್ಯಾವಾಪೃಥಿವ್ಯಾವಾಶಾತೇ । ಅಶ್ನುವಾತೇ । ವ್ಯಾಪ್ನುತಃ ॥ ವರ್ಣಾದನುದಾತ್ತಾದಿತಿ ಙೀಪ್ ತಕಾರಸ್ಯ ನಕಾರಶ್ಚ ॥ ಕೀದೃಶ್ಯೌ ತೇ । ಬೃಹತೀ ಮಹತ್ಯಾವತಿವಿಸ್ತೃತೇ ಅಭಿಶ್ರಿಯಾ ಪ್ರಾಪ್ತೈಶ್ವರ್ಯೇ ಅಭಿತಃ ಸೇವ್ಯೇ ವಾ ಹಿರಣ್ಯಯೀ ಹಿತರಮಣೀಯೇ ವಕ್ವರೀ ಅತಿಕುಶಲಂ ಶಬ್ದಯಂತ್ಯೌ ॥ ವಚೇರ್ವನಿಪಿ ವನೋ ರ ಚೇತಿ ಙೀಬ್ರೇಫೌ । ಛಾಂದಸಂ ಕುತ್ವಂ । ವಕಿ ಕೌಟಿಲ್ಯ ಇತ್ಯಸ್ಮಾದ್ವಾ ಛಾಂದಸೋ ನುಮಭಾವಃ ॥ ಈದೃಶ್ಯೌ ದ್ಯಾವಾಪೃಥಿವ್ಯೌ ಬರ್ಹಿರಶ್ನುವಾತೇ ॥

ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ । ತ್ವಂ—ನೀನು । ಪಶುಪಾ ಇವ—ಪಶುಪಾಲಕನು ಪಶುಗಳಮೇಲೆ ತನ್ನ ಸ್ವತಂತ್ರವಾದ ಪ್ರಭುತ್ವವನ್ನಿಟ್ಟುಕೊಂಡಿರುವಂತೆ । ತ್ಮನಾ—ನಿನ್ನ ಸ್ವತಂತ್ರವಾದ ಸಾಮರ್ಥ್ಯದಿಂದಲೇ । ದಿವ್ಯಸ್ಯ—ದ್ಯುಲೋಕದಲ್ಲಿರುವ ದೇವಾದಿಗಳಿಗೆಲ್ಲಾ ಅಥವಾ ವೃಷ್ಟ್ಯಾದಿಗಳಿಗೆಲ್ಲಾ । ರಾಜಸಿ ಹಿ—ಪ್ರಭುವಾಗಿಯೇ ಇದ್ದೀಯೆ

**ತ್ವಂ**—ನೀನು | **ಪಾರ್ಥಿವಸ್ಯ**—ಭೂಮಿಯಮೇಲಿರುವ ಮಾನವಾದಿಗಳಿಗೆಲ್ಲಾ ಈಶ್ವರನಾಗಿದ್ದೀ(ಯೆ) | **ಬೃಹತೀ**—ಅತ್ಯಂತ ವಿಸ್ತೃತವಾದವೂ | **ಅಭಿ ಶ್ರಿಯಾ**—ಐಶ್ವರ್ಯಯುಕ್ತವಾದವೂ ಅಥವಾ ಸುತ್ತಲೂ ಪೂಜಿಸಲ್ಪಡುವುವೂ | **ಹಿರಣ್ಯಯೀ**—ಹಿತಕರವೂ, ರಮಣೀಯವೂ ಆದವೂ | **ವಕ್ವರೀ**—ಮನೋಹರವಾಗಿ ಶಬ್ದಮಾಡುವುವೂ | **ಏನೀ**—ಪ್ರಕಾಶಮಾನವೂ ಆದ | **ಏತೇ**—ಈ ದ್ಯಾವಾಪೃಥಿವಿಗಳು | **ತೇ**—ನಿನ್ನ | **ಬರ್ಹಿಃ**—ಯಜ್ಞವನ್ನು | **ಆಶಾತೇ**—ವ್ಯಾಪಿಸಿ ಹರಡುತ್ತವೆ.

**ಭಾವಾರ್ಥ ||**

ಎಲೈ ಅಗ್ನಿಯೇ, ಪಶುಪಾಲಕನು ಪಶುಗಳಮೇಲೆ ತನ್ನ ಸ್ವತಂತ್ರವಾದ ಪ್ರಭುತ್ವವನ್ನಿಟ್ಟುಕೊಂಡಿರುವಂತೆ ನೀನೂ ಸಹ ನಿನ್ನ ಸ್ವತಂತ್ರವಾದ ಸಾಮರ್ಥ್ಯದಿಂದಲೇ ದ್ಯುಲೋಕದಲ್ಲಿರುವ ದೇವಾದಿಗಳಿಗೂ ಭೂಲೋಕದಲ್ಲಿರುವ ಮಾನವಾದಿಗಳಿಗೂ ಈಶ್ವರನಾಗಿದ್ದೀಯೆ. ಅತ್ಯಂತ ವಿಸ್ತೃತವಾದವೂ, ಪೂಜ್ಯವಾದವೂ, ಲೋಕಕ್ಕೆ ಹಿತಕರವಾದವೂ, ಮನೋಹರವಾಗಿ ಶಬ್ದಮಾಡುವುವೂ, ಪ್ರಕಾಶಮಾನವಾದವೂ ಆದ ದ್ಯಾವಾಪೃಥಿವಿಗಳು ನಿನ್ನ ಯಜ್ಞವನ್ನು ವ್ಯಾಪಿಸಿ ಹರಡುತ್ತವೆ.

English Translation

You Agni, reign over (the dwellers in) heaven, and over those of earth, according to your own (will), as a herdsman over his (herd) and those two, (heaven and earth), bright, vast, adorable, beneficent, and sounding (agreeably), partake of the oblation.

**ವಿಶೇಷವಿಷಯಗಳು**

**ಅಭಿಶ್ರಿಯಾ—ಪ್ರಾಪ್ತೈಶ್ವರ್ಯೇ ಅಭಿತಃ ಸೇವ್ಯೇ ವಾ |** ಐಶ್ವರ್ಯಯುಕ್ತವಾದವೂ ಅಥವಾ ಸರ್ವತಃ ಸೇವಿಸಲ್ಪಡುವುವೂ ಆದ ಎಂದು ದ್ಯಾವ್ಯಾಪೃಥಿವಿಗಳ ಮಹತ್ತ್ವವನ್ನು ಹೇಳುತ್ತದೆ. ಸಾಧಾರಣವಾಗಿ ಈ ವಿಶೇಷಣವು ಪೂಜ್ಯವಾದ ಆಧಾರ ಅಥವಾ ಆಶಯ ಎನ್ನುವ ಅರ್ಥಗಳಲ್ಲಿ ಬಹಳವಾಗಿ ಉಪಯೋಗಿಸಲ್ಪಟ್ಟಿದೆ. ದ್ಯಾವಾಪೃಥಿವಿಗಳಿಗೆ ವಿಶೇಷಣವಾಗಿ ಅನೇಕ ಕಡೆಗಳಲ್ಲಿ ಅವುಗಳ ಮಹತ್ತ್ವವನ್ನು ತಿಳಿಸುತ್ತದೆ.

**ಘೃತವತೀ ಭುವನಾನಾಮಭಿಶ್ರಿಯೋರ್ವೀ ಪೃಥ್ವೀ ಮಧುದುಘೇ ಸುಪೇಶಸಾ |**
**ದ್ಯಾವಾಪೃಥಿವೀ ವರುಣಸ್ಯ ಧರ್ಮಣಾ ವಿಷ್ಕಭಿತೇ ಅಜರೇ ಭೂರಿರೇತಸಾ ||**
(ಋ. ಸಂ. ೬-೭೦-೧)

ಎಂಬ ಋಕ್ಕಿನಲ್ಲಿ ಸಕಲಲೋಕಗಳಿಗೂ ಪೂಜ್ಯವಾದ ಆಶ್ರಯವೆಂದು ಪೃಥ್ವಿಯನ್ನು ಸ್ತುತಿಸಿದೆ. ಇದರಂತೆಯೇ

**ಪ್ರತ್ನಂ ಹೋತಾರಮೀಡ್ಯಂ ಜುಷ್ಟಮಗ್ನಿಂ ಕವಿಕ್ರತುಂ | ಅಧ್ವರಾಣಾಮಭಿಶ್ರಿಯಂ ||**
(ಋ. ಸಂ. ೮-೪೪-೭)

ಎಂಬ ಋಕ್ಕಿನಲ್ಲಿ ಅಗ್ನಿಗೆ ವಿಶೇಷಣವಾಗಿ ಲೋಕಪೂಜ್ಯನಾದ ಅವನ ಗುಣವನ್ನು ಹೇಳುತ್ತದೆ.

**ವಕ್ವರೀ—ಅತಿಕುಶಲಂ ಶಬ್ದಯಂತ್ಯೌ |** ಅತಿಕುಶಲವಾಗಿ ಎಂದರೆ ಆಕರ್ಷಕವಾಗಿ ಶಬ್ದಮಾಡತಕ್ಕವು ಎಂದು ದ್ಯಾವಾಪೃಥಿವಿಗಳಿಗೆ ವಿಶೇಷಣವಾಗಿವೆ. ಈ ಪದವು **ವಚ್** ಧಾತುವಿನಿಂದಾಗಲಿ ಅಥವಾ ವಕಿ ಧಾತುವಿನಿಂ

ಬಾಗಲಿ ನಿಷ್ಪನ್ನವಾಗಬಹುದು. **ವಕಿ ಕೌಟಿಲ್ಯ ಇತ್ಯಸ್ಮಾದ್ವಾ ಛಾಂದಸೋ ನಮುಭಾವಃ।** ಎಂದು ಸಾಯಣರು ಹೇಳುವಂತೆ ಇದರ ಮೂಲವು **ವಕಿ** ಧಾತುವಾದರೆ **ವಕ್ರ** ಅಥವಾ **ಕೌಟಿಲ್ಯ**ವೆಂಬ ಅರ್ಥಬರುವುದೆಂದು ಹಿಂದೆಯೇ ಹೇಳಿದೆ. ಆದರೆ ಅತಿಯಾಗಿ ಶಬ್ದವಮಾಡತಕ್ಕ ಸಂದರ್ಭಗಳಲ್ಲೆಲ್ಲಾ **ವಕ್ವರೀ** ಮತ್ತು **ವಕ್ವ** ಎಂಬ ಪದವನ್ನುಪಯೋಗಿಸಿರುವುದರಿಂದ ಆ ಸ್ಥಳಗಳಲ್ಲಿ **ವಚ್** ಧಾತುವಿನಿಂದಲೇ ನಿಷ್ಪನ್ನವಾಗಿದೆಯೆಂದು ಹೇಳಬೇಕಾಗುತ್ತದೆ. ಉದಾಹರಣೆಗೆ—

**ತಂ ಪೃಚ್ಛಂತೀ ವಜ್ರಹಸ್ತಂ ರಥೇಷ್ಠಾಮಿಂದ್ರಂ ವೇಪೀ ವಕ್ವರೀ ಯಸ್ಯ ನೂ ಗೀಃ।**
**ತುವಿಗ್ರಾಭಂ ತುವಿಕೂರ್ಮಿಂ ರಭೋದಾಂ ಗಾತುಮಿಷೇ ನಕ್ಷತೇ ತುಮ್ರಮಚ್ಛ॥**

(ಋ. ಸಂ. ೬-೨೨-೫)

ಎಂಬ ಋಕ್ಕಿನಲ್ಲಿಯೂ **ವಕ್ವರೀ** ಎಂಬುದಕ್ಕೆ **ಗುಣಾನಾಂ ವಕ್ತ್ರೀ ಈದೃಶೀ ಗೀಃ ಸ್ತುತಿಃ।** ಗುಣಗಳನ್ನು ಪ್ರಶಂಸಿಸತಕ್ಕವು ಎಂದು **ಸ್ತುತಿ**ಗೆ ವಿಶೇಷಣವಾಗಿರುವುದರಿಂದ **ವಚ್** ಧಾತುವೇ ಇದರ ಮೂಲವೆಂದು ಹೇಳಬೇಕು. ಇದೇ ಧಾತುವಿನಿಂದ ನಿಷ್ಪನ್ನವಾದ **ವಕ್ವಾ** ಎನ್ನುವ ಪದವೂ ಸಹ,

**ಅಸರ್ಜಿ ವಕ್ವಾ ರಥ್ಯೇ ಯಥಾಜೌ ಧಿಯಾ ಮನೋತಾ ಪ್ರಥಮೋ ಮನೀಷೀ।**
**ದಶ ಸ್ವಸಾರೋ ಅಧಿ ಸಾನೋ ಅವ್ಯೇಽಜಂತಿ ವಹ್ನಿಂ ಸದನಾನ್ಯಚ್ಛ।**

(ಋ. ಸಂ. ೯-೯೧-೧)

ಎಂಬ ಋಕ್ಕಿನಲ್ಲಿ **ಶಬ್ದಾಯಮಾನಃ** ಎಂದು ಸೋಮಕ್ಕೆ ವಿಶೇಷಣವಾಗಿಯೂ,

**ಶ್ರುಧೀ ಹವಮಿಂದ್ರ ಶೂರ ಪೃಥ್ಯಾ ಉತ ಸ್ತವಸೇ ವೇನ್ಯಸ್ಯಾರ್ಕೈಃ।**
**ಆ ಯಸ್ತೇ ಯೋನಿಂ ಘೃತವಂತಮಸ್ವಾರೂರ್ಮಿರ್ನ ನಿಮ್ನೈರ್ದ್ರವಯಂತ ವಕ್ವಾಃ।**

(ಋ. ಸಂ. ೧೦-೧೪೮-೫)

ಎಂಬ ಋಕ್ಕಿನಲ್ಲಿ ಶಬ್ದಮಾಡತಕ್ಕ ಸ್ತೋತೃಗಳಿಗೆ ವಿಶೇಷಣವಾಗಿಯೂ, ಮತ್ತು,

**ಪ್ರಾಗ್ರುವೋ ನಭನ್ವೋ೩ ನ ವಕ್ವಾ ಧ್ವಸ್ರಾ ಅಪಿನ್ವದ್ಯುವತೀರೃತಜ್ಞಾಃ।**
**ಧನ್ವಾನ್ಯಜ್ರಾँ ಅಪೃಣಕ್ತೃಷಾಣಾँ ಅಧೋಗಿಂದ್ರಃ ಸ್ತರ್ಯೋ೩ದಂಸುಪತ್ನೀಃ।**

(ಋ. ಸಂ. ೪-೧೯-೭)

ಎಂಬ ಋಕ್ಕಿನಲ್ಲಿ ಶಬ್ದಮಾಡತಕ್ಕ ಸೇನೆಗೆ ವಿಶೇಷಣವಾಗಿಯೂ ಇರುವುದರಿಂದ **ವಚ್**ಧಾತುವೇ ಈ ಪದದ ಮೂಲವೆಂದು ಹೇಳಬೇಕಾಗುತ್ತದೆ.

**ರಾಜಸಿ**—ಈ ಪದವು ಐಶ್ವರ್ಯಕರ್ಮನಾಮಗಳಲ್ಲಿ ಪಠಿತವಾಗಿದೆ. (ನಿ. ೨-೨೧) **ಈಶ್ವರೋ ಭವಸಿ।** ಪ್ರಭುವಾಗಿದ್ದೀಯೆಂದರ್ಥ.

ವ್ಯಾಕರಣಪ್ರಕ್ರಿಯಾ

**ದಿವ್ಯಸ್ಯ**—ದಿವಿ ಭವಂ ದಿವ್ಯಮ್. **ಭವೇ ಛಂದಸಿ** (ಪಾ. ಸೂ. ೪-೪-೧೧೦) ಎಂಬುದರಿಂದ ಯತ್ ಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಷಷ್ಠ್ಯೇಕವಚನಾಂತರೂಪ.

**ರಾಜಸಿ**—ರಾಜೃ ದೀಪ್ತೌ ಧಾತು. ಲಟ್ ಪ್ರಥಮಪುರುಷಏಕವಚನಾಂತರೂಪ ಹಿ ಎಂಬುದರ ಸಂಬಂಧ ವಿರುವುದರಿಂದ **ಹಿಚ** (ಪಾ. ಸೂ. ೮-೧-೩೪) ಎಂಬುದರಿಂದ ನಿಘಾತಪ್ರತಿಷೇಧ ಬರುತ್ತದೆ. ಶಪ್‌ಸಿಪ್ ಅನು ದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಪಾರ್ಥಿವಸ್ಯ**—ಪೃಥಿವ್ಯಾ ಅಯಂ ಪಾರ್ಥಿವಃ **ಪೃಥಿವ್ಯಾ ಞ್ಯಾಞ್** (ಪಾ. ಸೂ. ೪-೧೮-೫-೨) ಎಂಬುದರಿಂದ ಅಞ್ ಪ್ರತ್ಯಯ. **ತದ್ಧಿತೇಷ್ವಚಾಮಾದೇಃ** (ಪಾ. ಸೂ. ೭-೨-೧೧೭) ಎಂಬುದರಿಂದ ಆದಿವೃದ್ಧಿ. **ಯಸ್ಯೇತಿ ಚ** (ಪಾ. ಸೂ. ೬-೪-೧೪೮) ಎಂಬುದರಿಂದ ಈಕಾರಲೋಪ. ಞಿತ್ತಾದುದರಿಂದ **ಞ್ನಿತ್ಯಾದಿ-ರ್ನಿತ್ಯಮ್** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಷಷ್ಠೀಏಕವಚನಾಂತರೂಪ.

**ಪಶುಪಾಃ**—ಪಶೂನ್ ಪಾತೀತಿ ಪಶುಪಾಃ ಪಾ ರಕ್ಷಣೇ ಧಾತು. ಕ್ವಿಪ್ ಪ್ರತ್ಯಯ. ಕೃದುತ್ತರಪದಪ್ರಕೃತಿ ಸ್ವರ ಬರುತ್ತದೆ. ಆಕಾರಾಂತಪುಲ್ಲಿಂಗಶಬ್ದ.

**ತ್ಮನಾ**—ಆತ್ಮನಾ ಎಂದು ರೂಪವಾದಾಗ **ಮಂತ್ರೇಷ್ವಾಙ್ಯಾದೇರಾತ್ಮನಃ** (ಪಾ. ಸೂ. ೬-೪-೧೪೧) ಎಂಬುದರಿಂದ ಆಕಾರಕ್ಕೆ ಲೋಪ.

**ಏನೀ**—ಏತಶಬ್ದ. ಇದಕ್ಕೆ ಸ್ತ್ರೀತ್ವವಿವಕ್ಷಾಮಾಡಿದಾಗ **ವರ್ಣಾದನುದಾತ್ತಾತ್ತೋಪಧಾತ್ತೋನಃ** (ಪಾ. ಸೂ. ೪-೧-೩೯) ಎಂಬುದರಿಂದ ಜೀಪ್. ತತ್ಸನ್ನಿಯೋಗನಿಂದ ತಕಾರಕ್ಕೆ ನಕಾರಾದೇಶ. ಅಕಾರಕ್ಕೆ ಲೋಪ. ಜೀಪ್ ಪಿತ್ತಾದುದರಿಂದ ಅನುದಾತ್ತವಾಗುತ್ತದೆ.

**ಬೃಹತೀ—ಬೃಹನ್ಮಹತೋರುಪಸಂಖ್ಯಾನಮ್** ಎಂಬ ವಚನದಿಂದ ಇದಕ್ಕೆ ಬಂದಿರುವ ಜೀಪ್ ಉದಾತ್ತವಾಗುತ್ತದೆ.

**ಅಭಿಶ್ರಿಯಾ**—ಶ್ರಿಞ್ ಸೇವಾಯಾಂ ಧಾತು. **ಕಿಬ್ವಚಿಪ್ರಚ್ಛಿ** (ಉ. ಸೂ. ೨-೫೭) ಎಂಬುದರಿಂದ ಕ್ವಿಪ್. ಧಾತುವಿಗೆ ದೀರ್ಘ. ಪ್ರಾದಿಸಮಾಸವಾದಾಗ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. ತೃತೀಯಾ ಏಕವಚನಾಂತರೂಪ.

**ವಕ್ವರೀ**—ವಚ ಪರಿಭಾಷಣೇ ಧಾತು. **ಅನ್ಯೇಭ್ಯೋಽಪಿ ದೃಶ್ಯಂತೇ** (ಪಾ. ಸೂ. ೩-೨-೭೫) ಎಂಬುದ ರಿಂದ ಇದಕ್ಕೆ ವನಿಪ್ ಪ್ರತ್ಯಯ. **ವನೋರ ಚ** (ಪಾ. ಸೂ. ೪-೧-೭) ಎಂಬುದರಿಂದ ಸ್ತ್ರೀತ್ವವಿವಕ್ಷಾಮಾಡಿದಾಗ ಜೀಪ್, ನಕಾರಕ್ಕೆ ರೇಫಾದೇಶ. ಛಾಂದಸವಾಗಿ ಧಾತುಚಕಾರಕ್ಕೆ ಕುತ್ವ. ಪ್ರತ್ಯಯಗಳೆರಡೂ ಪಿತ್ತಾದುದರಿಂದ ಧಾತುಸ್ವರ ಉಳಿಯುತ್ತದೆ. ಅಥವಾ ವಕಿ ಕೌಟಿಲ್ಯೇ ಧಾತು. ಇದಿತ್ತಾದರೂ ಛಾಂದಸವಾಗಿ ನುಮಾಗಮ ಬರುವು ದಿಲ್ಲ. ಇದಕ್ಕೆ ಹಿಂದಿನಂತೆ ವನಿಪ್. ಜೀಪ್, ರತ್ವ. **ಸುಪಾಂ ಸುಲುಕ್** (ಪಾ. ಸೂ. ೭-೧-೩೯) ಎಂಬುದರಿಂದ ದ್ವಿವಚನ ಪರವಾದಾಗ ಪೂರ್ವಸವರ್ಣದೀರ್ಘ.

**ಆಶಾತೇ**—ಅಶೂ ವ್ಯಾಪ್ತೌ ಧಾತು. **ಛಂದಸಿ ಲುಙ್‌ಲಙ್‌ಲಿಟಃ** (ಪಾ. ಸೂ. ೩-೪-೬) ಎಂಬುದರಿಂದ ವರ್ತಮಾನಾರ್ಥದಲ್ಲಿ ಲಿಟ್. ಪ್ರಥಮಪುರುಷದ್ವಿವಚನದಲ್ಲಿ ಆತಾಮ್ ಪ್ರತ್ಯಯ. **ಲಿಟಸ್ತಝಯೋಃ**—ಎಂಬುದ

ರಿಂದ ಟಿಗೆ ಏತ್ವ. ಧಾತುವಿಗೆ ದ್ವಿತ್ವಾದಿ. ಆಗಮಾನುಶಾಸನಮನಿತ್ಯಮ್ ಎಂಬ ವಚನದಿಂದ ಇಡಾಗಮ ಬರುವು ದಿಲ್ಲ. ಅತಿಜಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೬ ॥

ಸಂಹಿತಾಪಾಠಃ

ಅಗ್ನೇ ಜುಷಸ್ವ ಪ್ರತಿ ಹರ್ಯ ತದ್ವಚೋ ಮಂದ್ರ ಸ್ವಧಾವ ಋತಜಾತ
ಸುಕ್ರತೋ ।
ಯೋ ವಿಶ್ವತಃ ಪ್ರತ್ಯಙ್ಙಸಿ ದರ್ಶತೋ ರಣ್ವಃ ಸಂದೃಷ್ಟೌ ಪಿತುಮಾ ಇವ
ಕ್ಷಯಃ ॥ ೭ ॥

ಪದಪಾಠಃ

ಅಗ್ನೇ । ಜುಷಸ್ವ । ಪ್ರತಿ । ಹರ್ಯ । ತತ್ । ವಚಃ । ಮಂದ್ರ । ಸ್ವಧಾऽವಃ । ಋತऽಜಾತ । ಸುಕ್ರತೋ
ಇತಿ ಸುऽಕ್ರತೋ ।
ಯಃ । ವಿಶ್ವತಃ । ಪ್ರತ್ಯಙ್ । ಅಸಿ । ದರ್ಶತಃ । ರಣ್ವಃ । ಸಂऽದೃಷ್ಟೌ । ಪಿತುಮಾನ್ऽಇವ । ಕ್ಷಯಃ ॥೭॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ಜುಷಸ್ವ । ಸೇವಸ್ವ ಹವಿಃ । ಪ್ರೀತೋ ಭವ ವಾ ಸ್ತುತ್ಯಾ । ಕಿಂಚ ತತ್ತಾದೃಶಂ ಪ್ರಿಯಕರಂ ವಚೋ ವಾಗ್ರೂಪಂ ಸ್ತೋತ್ರಂ ಪ್ರತಿ ಹರ್ಯ । ಪುನಃ ಕಾಮಯಸ್ವ । ಹೇ ಮಂದ್ರ ಮಾದನಶೀಲ ಸ್ತುತ್ಯ ವಾ ಹೇ ಸ್ವಧಾವೋ ಹವಿರ್ಲಕ್ಷಣಾನ್ನವನ್ ಹೇ ಋತಜಾತ ಯಜ್ಞಾರ್ಥಮುತ್ಪನ್ನ ಹೇ ಸುಕ್ರತೋ ಶೋಭನಕರ್ಮನ್ ಶೋಭನಪ್ರಜ್ಞ ವಾ । ಯ ಈದೃಶಸ್ತ್ವಂ ವಿಶ್ವತಃ ಸರ್ವಸ್ಯ ಸ್ಥಾವರಜಂಗಮಸ್ಯ ಜಗತಃ ಪ್ರತ್ಯಙ್ಙಸಿ ಅಭಿಮುಖ ಅನುಕೂಲೋऽಸಿ । ನ ಪರಾಙ್ಮುಖ ಇತ್ಯರ್ಥಃ । ತಥಾ ದರ್ಶತೋ ದರ್ಶನೀಯಃ ಸರ್ವೈಃ ಕಿಂಚ ಸಂದೃಷ್ಟೌ ಸಮ್ಯಗ್ದರ್ಶನೇ ರಣ್ವೋ ರಮಣಶೀಲೋ ರಮಯಿತಾ ವಾ ಭವಸಿ ಸರ್ವಸ್ಯ । ಯದ್ವಾ । ತವ ಸಂದೃಷ್ಟೌ ಸತ್ಯಾಂ ಸರ್ವೋ ಜನಃ ಕ್ಷಯೋ ನಿವಾಸವಾನ್ಭವತಿ । ತತ್ರ ದೃಷ್ಟಾಂತಃ । ಪಿತುಮಾನಿವ । ಅತಿಪ್ರಭೂತಾನ್ನಸ್ವಾಮೀ ಯಥಾ ಸರ್ವೈರ್ವಸ್ತ್ರಪ್ಸ್ಯೋ ಗಂತವ್ಯಶ್ಚ ಭವತಿ ತದ್ವತ್ ॥

### ಪ್ರತಿಪದಾರ್ಥ

**ಮಂದ್ರ**—ಹರ್ಷದಾಯಕನೂ ಅಥವಾ ಪೂಜ್ಯನೂ । **ಸ್ವಧಾವಃ**—ಹವಿಸ್ಸಿನರೂಪದ ಅನ್ನವುಳ್ಳವನೂ । **ಋತಜಾತ**—ಯಜ್ಞಾರ್ಥವಾಗಿ ಉತ್ಪನ್ನನಾದವನೂ । **ಸುಕ್ರತೋ**—ಶ್ರೇಷ್ಠವಾದ ಕರ್ಮವುಳ್ಳವನೂ ಅಥವಾ ಪ್ರಜ್ಞೆಯುಳ್ಳವನೂ ಆದ । **ಅಗ್ನೇ**—ಎಲೈ ಅಗ್ನಿಯೇ । **ಜುಷಸ್ವ**—ಹವಿಸ್ಸನ್ನು ಸೇವಿಸು (ಅಥವಾ ತೃಪ್ತನಾಗು)। (ಮತ್ತು) **ತತ್**—ಹಿತಕರವಾದ । **ವಚಃ**—ವಾಗ್ರೂಪವಾದ ಸ್ತೋತ್ರವನ್ನು । **ಪ್ರತಿಹರ್ಯ**—ಅಪೇಕ್ಷಿಸಿ ಸ್ವೀಕರಿಸು । **ಯಃ**—ಇಂತಹ ನೀನು । **ವಿಶ್ವತಃ**—ಸಕಲ ಜಗತ್ತಿಗೂ । **ಪ್ರತ್ಯಙ್ಙಸಿ**—ಅನುಕೂಲನಾಗಿ ಅಭಿಮುಖನಾಗಿಯೇ ಇದ್ದೀಯೆ । **ದರ್ಶತಃ**—(ಸಕಲರಿಗೂ) ಗೋಚರನಾಗಿ । **ಸಂದೃಷ್ಟೌ**—ಚೆನ್ನಾಗಿ ನೋಡುವುದಕ್ಕೆ । **ರಣ್ವಃ**—ಮನೋಹರನಾಗಿದ್ದೀಯೆ (ಮತ್ತು) । **ಪಿತುಮಾನಿವ**—ಪ್ರಭೂತವಾದ ಅನ್ನಕ್ಕೆ ಸ್ವಾಮಿಯಾದವನು ಎಲ್ಲರಿಗೂ ಆಶ್ರಯದಾತನಾಗಿರುವಂತೆ । **ಕ್ಷಯಃ**—ವಾಸಸ್ಥಾನನಾಗಿದ್ದೀಯೆ ।

### ಭಾವಾರ್ಥ

ಸಕಲರಿಗೂ ಹರ್ಷದಾಯಕನೂ, ಹವಿಸ್ಸಿನರೂಪದ ಅನ್ನವುಳ್ಳವನೂ, ಯಜ್ಞಾರ್ಥವಾಗಿ ಉತ್ಪನ್ನನಾದವನೂ, ಶ್ರೇಷ್ಠವಾದ ಕರ್ಮವುಳ್ಳವನೂ ಆದ ಎಲೈ ಅಗ್ನಿಯೇ, ನಮ್ಮ ಹವಿಸ್ಸನ್ನು ಸೇವಿಸು ಮತ್ತು ನಮ್ಮ ವಾಗ್ರೂಪವಾದ ಸ್ತೋತ್ರವನ್ನು ಸ್ವೀಕರಿಸಿ ತೃಪ್ತನಾಗು. ನೀನು ಸಕಲಜಗತ್ತಿಗೂ ಅನುಕೂಲನಾಗಿ ಅಭಿಮುಖನಾಗಿಯೇ ಇದ್ದೀಯೆ. ಸಕಲರಿಗೂ ಗೋಚರನಾಗಿ ನೋಡುವುದಕ್ಕೆ ಮನೋಹರನಾಗಿದ್ದೀಯೆ. ಮತ್ತು ಪ್ರಭೂತವಾದ ಅನ್ನಕ್ಕೆ ಸ್ವಾಮಿಯಾದವನು ಎಲ್ಲರಿಗೂ ಆಶ್ರಯದಾತನಾಗಿರುವಂತೆ ನೀನು ಎಲ್ಲರಿಗೂ ವಾಸಸ್ಥಾನನಾಗಿದ್ದೀಯೆ

### English Translation

Agni, you confer happiness, you accept oblations, you were born for sacrifice, and are the performer of good works ; be pleased (with this rite), attend to this prayer : for you are in presence of all (the world), are visible (to all) are pleasant in their sight, and are their refuge, like a (bountiful) distributor of food.

### ವಿಶೇಷ ವಿಷಯಗಳು

**ರಣ್ವಃ—ರಮಣಶೀಲಃ ರಮಯಿತಾ ವಾ ।** ಹವಿರಾದಿಗಳಿಂದ ತಾನು ರಮಿಸುವವನು ಅಥವಾ ದೇವಮಾನವಾದಿಗಳನ್ನು ತನ್ನ ಸ್ವರೂಪದಿಂದ ರಮಿಸುವಂತೆ ಮಾಡುವವನೆಂದರ್ಥ.

**ಋತಜಾತ**—ಯಜ್ಞದಲ್ಲಿ ಹುಟ್ಟಿದವನೆಂದೂ ಅಥವಾ ಯಜ್ಞಾರ್ಥವಾಗಿ ಹುಟ್ಟಿದವನೆಂದೂ ಅಗ್ನಿಯನ್ನು ಸಂಬೋಧಿಸಿದೆ.

**ಪ್ರತಿಹರ್ಯ—ಕಾಮಯ ।** ಅಪೇಕ್ಷಿಸು ಎಂದರೆ ಆದರದಿಂದ ಸ್ವೀಕರಿಸು. ನಿರುಕ್ತಕಾರರು—

ಆ ರುದ್ರಾಸ ಇಂದ್ರವಂತಃ ಸಜೋಷಸೋ ಹಿರಣ್ಯರಥಾಃ ಸುವಿತಾಯ ಗಂತನ ।
ಇಯಂ ವೋ ಅಸ್ಮತ್ಪ್ರತಿ ಹರ್ಯತೇ ಮತಿಸ್ತೃಷ್ಣಜೇ ನ ದಿವ ಉತ್ಸಾ ಉದನ್ಯವೇ ।
( ಋ. ಸಂ. ೫-೫೭-೧)

ಎಂಬ ಋಕ್ಕನ್ನುದಹರಿಸಿ ಪ್ರತಿಹರ್ಯತೇ ಎಂಬ ಪದಕ್ಕೆ ಪ್ರತಿಕಾಮಯತೇ ಎಂದರೆ ಅಪೇಕ್ಷಿಸುತ್ತಾನೆ ಎಂಬರ್ಥವನ್ನು ಮಾಡಿರುವಂತೆ (ನಿ. ೧೧-೧೬) ಇಲ್ಲಿಯೂ ಅದೇ ಅರ್ಥವಾಗುತ್ತದೆ.

**ಮಂದ್ರ**—ಮಾದನಶೀಲ ಸ್ತುತ್ಯ ವಾ । ಹರ್ಷದಾಯಕನಾದ ಅಥವಾ ಪೂಜ್ಯನಾದ ಎಂದು ಅಗ್ನಿಗೆ ವಿಶೇಷಣವಾಗಿದೆ, ನಿರುಕ್ತಕಾರರು

**ದೇವೀಂ ವಾಚಮಜನಯಂತ ದೇವಾಸ್ತಾಂ ವಿಶ್ವರೂಪಾಃ ಪಶವೋ ವದಂತಿ ।**
**ಸಾ ನೋ ಮಂದ್ರೇಷಮೂರ್ಜಂ ದುಹಾನಾ ಧೇನುರ್ವಾಗಸ್ಮಾನುಪ ಸುಷ್ಟುತೈತು ॥**

(ಋ. ಸಂ. ೮-೧೦೦-೧೧)

ಎಂಬ ಋಕ್ಕಿನಲ್ಲಿ **ಮಂದ್ರ** ಶಬ್ದಕ್ಕೆ ಮದನ ಎಂದರೆ ಹರ್ಷಜನಕವಾದ ಎಂಬರ್ಥವನ್ನು ಮಾಡಿದ್ದಾರೆ. (೧೧-೩೦) ಸಾಯಣರು ಇದೇ ಋಕ್ಕಿನಲ್ಲಿ ಈ ಪದಕ್ಕೆ **ಮದನಾ, ಸ್ತುತ್ಯಾ, ಹರ್ಷಯಿತ್ರೀ ವಾ** ಎಂಬ ನಾನಾರ್ಥಗಳನ್ನು ತೋರಿಸಿದ್ದಾರೆ. ಇದೇ ಪದವನ್ನು ನಿರುಕ್ತಕಾರರು **ವಾಕ್**ನಾಮಗಳಲ್ಲಿಯೂ ಸೇರಿಸಿದ್ದಾರೆ. (ನಿ. ೨-೨೩).

### ವ್ಯಾಕರಣಪ್ರಕ್ರಿಯಾ

**ಜುಷಸ್ವ**—ಜುಷೀ ಪ್ರೀತಿಸೇವನಯೋಃ ಧಾತು. ಲೋಟ್ ಮಧ್ಯಮಪುರುಷಏಕವಚನಾಂತರೂಪ. ಇದಕ್ಕೆ ಅಗ್ನೇ ಎಂಬ ಆಮಂತ್ರಿತಸಂಜ್ಞೆಯುಳ್ಳ ಸಂಬುದ್ಧ್ಯಂತವು ಇರುವುದರಿಂದ **ಆಮಂತ್ರಿತಂ ಪೂರ್ವಮವಿದ್ಯಮಾನವತ್** (ಪಾ. ಸೂ. ೮-೧-೭೨) ಎಂಬುದರಿಂದ ಅದಕ್ಕೆ ಅವಿದ್ಯಮಾನವದ್ಭಾವ ಬರುವುದರಿಂದ ಇಲ್ಲದಂತಾಗುತ್ತದೆ. ಅಗ ಪದದ ಪರದಲ್ಲಿ ಬಾರದಿರುವುದರಿಂದ ತಿಙಂತನಿಘಾತಸ್ವರ ಬರುವುದಿಲ್ಲ. **ತಾಸ್ಯನುದಾತ್ತೇತ್** (ಪಾ. ಸೂ. ೬-೧-೧೮೬) ಸೂತ್ರದಿಂದ ಲಸಾರ್ವಧಾತುಕ ಅನುದಾತ್ತವಾಗುವುದರಿಂದ ವಿಕರಣಸ್ವರ ಉಳಿಯುತ್ತದೆ.

**ಹರ್ಯ**—ಹರ್ಯ ಗತಿಕಾಂತ್ಯೋಃ ಧಾತು. ಲೋಟ್ ಮಧ್ಯಮಪುರುಷಏಕವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಮಂದ್ರ**—ಮದಿ ಸ್ತುತಿಮೋದಸ್ವಪ್ನಕಾಂತಿಗತಿಷು. ಧಾತು. **ಸ್ಫಾಯಿತಂಚಿವಂಚಿ** (ಉ. ಸೂ. ೨-೧೩೦) ಎಂಬುದರಿಂದ ರಕ್ ಪ್ರತ್ಯಯ. ಇದಿತ್ತಾದುದರಿಂದ ನುಮಾಗಮ. ಸಂಬುದ್ಧ್ಯಂತರೂಪ. ಪಾದಾದಿಯಲ್ಲಿರುವುದರಿಂದ ಆಮಂತ್ರನಿಘಾತಸ್ವರ ಬರುವುದಿಲ್ಲ. **ಆಮಂತ್ರಿತಸ್ಯ ಚ** (ಪಾ. ಸೂ. ೬-೧-೧೯೮) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಸ್ವಧಾವಃ—ತದಸ್ಯಾಸ್ತಿ**—ಎಂಬುದರಿಂದ ಮತುಪ್ ಬಂದಾಗ **ಮಾದುಪಧಾಯಾಶ್ಚ** ಎಂಬುದರಿಂದ ಮಕಾರಕ್ಕೆ ವತ್ವ. ಸಂಬುದ್ಧಿಯಲ್ಲಿ **ಮತುವಸೋರುಸಂಬುದ್ಧೌ** (ಪಾ. ಸೂ. ೮-೩-೧) ಎಂಬುದರಿಂದ ರುತ್ವ. ಪೂರ್ವದ ಆಮಂತ್ರಿತಕ್ಕೆ ಅವಿದ್ಯಮಾನವದ್ಭಾವವಿರುವುದರಿಂದ ಪಾದಾದಿಯಲ್ಲಿರುವುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಋತಜಾತ**—ಋತಾಯ ಯಜ್ಞಾಯ ಜಾತಃ ಋತಜಾತಃ. ಸಂಬುದ್ಧಿಯಲ್ಲಿ ಹಿಂದಿನಂತೆಯೇ ಆದ್ಯುದಾತ್ತಸ್ವರ ಬರುತ್ತದೆ.

**ಸುಕ್ರತೋ**—ಶೋಭನಃ ಕ್ರತುಃ ಯಸ್ಯ ಸಃ ಸುಕ್ರತುಃ ಸಂಬುದ್ಧಿಯಲ್ಲಿ **ಹ್ರಸ್ವಸ್ಯಗುಣಃ** ಎಂಬುದರಿಂದ ಗುಣ. ಏಙಂತವ ಪರವಲ್ಲಿರುವುದರಿಂದ ಸುಲೋಪ. ಆಮಂತ್ರಿತಾದ್ಯುದಾತ್ತಸ್ವರ ಬರುತ್ತದೆ.

**ವಿಶ್ವತಃ—ಪಂಚಮ್ಯಾಸ್ತಸಿಲ್** (ಪಾ. ಸೂ. ೫-೩-೭) ಎಂಬುದರಿಂದ ಪಂಚಮ್ಯರ್ಥದಲ್ಲಿ ತಸಿಲ್ ಪ್ರತ್ಯಯ. **ಲಿತಿ**— (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ.

**ಅಸಿ**—ಅಸ ಭುವಿ ಧಾತು. ಲಟ್ ಮಧ್ಯಮಪುರುಷಏಕವಚನ ಪರವಾದಾಗ ಸಿಪ್. **ತಾಸಸ್ತ್ಯೋರ್ಲೋಪಃ** (ಪಾ. ಸೂ. ೭-೪-೫೦) ಎಂಬುದರಿಂದ ಧಾತುವಿನ ಸಕಾರಕ್ಕೆ ಲೋಪ. ಯದ್ಯೋಗವಿರುವುದರಿಂದ ನಿಘಾತಪ್ರತಿಷೇಧ ಬರುವುದರಿಂದ ಧಾತುಸ್ವರ ಉಳಿಯುತ್ತದೆ.

**ದರ್ಶತಃ**—ದೃಶಿರ್ ಪ್ರೇಕ್ಷಣೇ ಧಾತು. **ಭೃಮೃದೃಶಿ**—(ಉ. ಸೂ. ೩-೩೯೦) ಎಂಬುದರಿಂದ ಅತಚ್ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿನ ಇಕಿಗೆ ಗುಣ. ರಪರವಾಗಿ ಬರುತ್ತದೆ. **ಚಿತಃ** (ಪಾ. ಸೂ ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

ರಣ್ವಃ—ರವಿ ಗತೌ ಧಾತು. ಇದಕ್ಕೆ ಕರ್ಮಣಿಯಲ್ಲಿ ಕ ಪ್ರತ್ಯಯ. **ಇದಿತೋ ನುಮ್‌ಧಾತೋಃ** ಎಂಬುದರಿಂದ ನುಮಾಗಮ. **ಅಟ್ ಕುಪ್ವಾ**—ಸೂತ್ರದಿಂದ ಅದಕ್ಕೆ ಣತ್ವ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ

**ಸಮ್‌ದೃಷ್ಟೌ**— ದೃಶಿರ್ ಪ್ರೇಕ್ಷಣೇ ಧಾತು. **ಸ್ತ್ರಿಯಾಂ ಕ್ತಿನ್** ಎಂಬುದರಿಂದ ಭಾವಾರ್ಥದಲ್ಲಿ ಕ್ತಿನ್ ಪ್ರತ್ಯಯ. **ವ್ರಶ್ಚಭ್ರಸ್ಜ**—ಎಂಬುದರಿಂದ ಧಾತುಶಕಾರಕ್ಕೆ ಷತ್ವ. ಅದನ್ನು ನಿಮಿತ್ತೀಕರಿಸಿ ಪ್ರತ್ಯಯಕ್ಕೆ ಷ್ಟುತ್ವ. ತಾದೌ ಚ ನಿತಿ (ಪಾ. ಸೂ. ೬-೨-೫೦) ಎಂಬುದರಿಂದ ಗತಿಗೆ (ಸಮ್) ಪ್ರಕೃತಿಸ್ವರ ಬರುತ್ತದೆ. ‖ ೬ ‖

ಇಲ್ಲಿಗೆ ನೂರನಲವತ್ತನಾಲ್ಕನೆಯ ಸೂಕ್ತವು ಮುಗಿದುದು.



## ನೂರನಲವತ್ತೈದನೆಯ ಸೂಕ್ತವು

**ತಂ ಪೃಚ್ಛತೇತಿ ಪಂಚರ್ಚಂ ಪಂಚಮಂ ಸೂಕ್ತಂ । ಅತ್ರಾನುಕ್ರಮಣಿಕಾ । ತಂ ಪೃಚ್ಛತ ಪಂಚಾಂತ್ಯಾ ತ್ರಿಷ್ಟುಬಿತಿ । ದೀರ್ಘತಮಾ ಋಷಿಃ । ಪೂರ್ವತ್ರಾಗ್ನೇಯಂ ತು ತದಿತ್ಯುಕ್ತತ್ವಾದಿದಮಪ್ಯಾಗ್ನೇಯಂ । ಅಂತ್ಯಾ ತ್ರಿಷ್ಟುಪ್ । ಶಿಷ್ಟಾಸ್ತ್ರಿಷ್ಟುಬಂತಪರಿಭಾಷಯಾ ಜಗತ್ಯಃ ‖ ಪ್ರಾತರನುವಾಕಾಶ್ವಿನಶಸ್ತ್ರಯೋರಸ್ಯ ವಿನಿಯೋಗ ಉಕ್ತಃ ‖**

ಅನುವಾದವು—ತಂ ಪೃಚ್ಛತ ಎಂಬ ಸೂಕ್ತವು ಇಪ್ಪತ್ತೊಂದನೆಯ ಅನುವಾಕದಲ್ಲಿ ಐದನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವುವು. ಅನುಕ್ರಮಣಿಕೆಯಲ್ಲಿ—**ತಂ ಪೃಚ್ಛತ ಪಂಚಾಂತ್ಯಾ ತ್ರಿಷ್ಟುಪ್** ಎಂದು ಹೇಳಿರುವುದು. ಈ ಸೂಕ್ತಕ್ಕೆ ದೀರ್ಘತಮಾಃ ಎಂಬುವನು ಋಷಿಯು. ಅಗ್ನಿಯೇ ದೇವತೆಯು. ಕೊನೆಯ ಋಕ್ಕು ತ್ರಿಷ್ಟುಪ್ ಛಂದಸ್ಕವು. ಉಳಿದ ಋಕ್ಕುಗಳು ಜಗತೀಛಂದಸ್ಸಿನವು. ಪ್ರಾತರನುವಾಕ ಮತ್ತು ಆಶ್ವಿನಶಸ್ತ್ರ ಮಂತ್ರಪಠನಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದು.

॥ ಓಂ ॥

## ಸೂಕ್ತ—೧೪೫

॥ ಮಂಡಲ—೧ ॥ ಅನುವಾಕ—೨೧ ॥ ಸೂಕ್ತ—೧೪೫ ॥

॥ ಅಷ್ಟಕ— ೨ ॥ ಅಧ್ಯಾಯ— ೨ ॥ ವರ್ಗ— ೧೪ ॥

ಸೂಕ್ತದಲ್ಲಿರುವ ಋಕ್ಸಂಖ್ಯೆ–೫ ॥

॥ ಋಷಿಃ—ದೀರ್ಘತಮಾ ಔಚಥ್ಯಃ ॥

॥ ದೇವತಾ—ಅಗ್ನಿಃ ॥

॥ ಛಂದಃ—೧-೪. ಜಗತೀ ೫. ತ್ರಿಷ್ಟುಪ್ ॥

ಸಂಹಿತಾಪಾಠಃ

ತಂ ಪೃಚ್ಛತಾ ಸ ಜಗಾಮಾ ಸ ವೇದ ಸ ಚಿಕಿತ್ವಾಁ ಈಯತೇ ಸಾ ನ್ವೀಯತೇ।
ತಸ್ಮಿನ್ತ್ಸಂತಿ ಪ್ರಶಿಷಸ್ತಸ್ಮಿನ್ನಿಷ್ಟಯಃ ಸ ವಾಜಸ್ಯ ಶವಸಃ ಶುಷ್ಮಿಣಸ್ಪತಿಃ ॥೧॥

। ಪದಪಾಠಃ ।

ತಂ । ಪೃಚ್ಛತ । ಸಃ । ಜಗಾಮ । ಸಃ । ವೇದ । ಸಃ । ಚಿಕಿತ್ವಾನ್ । ಈಯತೇ । ಸಃ । ನು । ಈಯತೇ ।
ತಸ್ಮಿನ್ । ಸಂತಿ । ಪ್ರಽಶಿಷಃ । ತಸ್ಮಿನ್ । ಇಷ್ಟಯಃ । ಸಃ । ವಾಜಸ್ಯ । ಶವಸಃ । ಶುಷ್ಮಿಣಃ । ಪತಿಃ ॥೧॥

ಸಾಯಣಭಾಷ್ಯಂ

ಹೇ ಯಜಮಾನಾಃ ತಮಗ್ನಿಂ ಪೃಚ್ಛತ । ಯತ್ಸ್ವರ್ಗಾದಿವಿಷಯಂ ಪ್ರಷ್ಟವ್ಯಮಸ್ತಿ ತತ್ । ತಸ್ಯೈವ ಪ್ರಷ್ಟವ್ಯತ್ವೇಽತಿಶಯಮಾಹ । ಸ ಜಗಾಮ । ಸ ಸರ್ವತ್ರ ಗಚ್ಛತಿ । ಅತ ಏವ ಸ ವೇದ । ಸ ಚ ಪ್ರಷ್ಟವ್ಯಂ ಜಾನಾತಿ । ಕಿಮಿತರಸಾಧಾರಣ್ಯೇನ ನೇತ್ಯಾಹ । ಸ ಚಿಕಿತ್ವಾನ್ ಸ ಏವ ಚೇತನಾವಾನ್ । ಸ ವಿಶೇಷಜ್ಞ ಇತ್ಯರ್ಥಃ । ಸ ಏವೇಯತೇ । ಜ್ಞೇಯಸಕಾಶಂ ಗಚ್ಛತಿ । ಪುನರ್ಗತಿರೇವ ವಿಶೇಷ್ಯತೇ । ಸಃ ಸೋಽಗ್ನಿರೇವ ನು ಕ್ಷಿಪ್ರಮೀಯತೇ । ಯದ್ಯಜಮಾನಸ್ಯ ಜ್ಞೇಯಮಸ್ತಿ ತಮರ್ಥಂ ಜ್ಞಾತುಂ ಶೀಘ್ರಮೇವ ಗಚ್ಛತೀತ್ಯರ್ಥಃ । ಯದ್ವಾ । ಜ್ಞಾನಾರ್ಥಮೀಯತೇ । ಸೇವ್ಯತೇ । ತಥಾ ಶೀಘ್ರಮನುಸೇವ್ಯತೇ । ಯಸ್ಮಾದಯಮುಕ್ತರೂಪಃ ತಸ್ಮಾತ್ತಮೇವ ಪೃಚ್ಛತೇತ್ಯರ್ಥಃ । ತತ್ರಾಪೇಕ್ಷಿತಾಃ ಕಾಮಾಃ ಸಂತೀತ್ಯಾಹ । ತಸ್ಮಿನ್ನಗ್ನೌ ಪ್ರಶಿಷಃ ಪ್ರಶಾಸನಾನಿ ನಿಯಮನಸಾಮರ್ಥ್ಯಾನಿ ಸಂತಿ । ಅಸಾಧ್ಯಂ ನಿಯಮ್ಯಾಪಿ ಸಾಧಯಿತುಂ ಶಕ್ತ ಇತ್ಯರ್ಥಃ । ಕಿಂಚ ತಸ್ಮಿನ್ನೇವಾಗ್ನಾವಿಷ್ಟಯ ಏಷ್ಟವ್ಯಾ ಭೋಗಾಃ ಸರ್ವಫಲಸಾಧಕಾ

ಯಾಗಾ ವಾ ಸಂತಿ । ಕಿಂಚ ಸೋಽಗ್ನಿರ್ವಾಜಸ್ಯಾನ್ನಸ್ಯ ಶವಸೋ ಬಲಸ್ಯ ಚ ಪತಿಃ ಪಾಲಯಿತಾ ದಾತಾ । ಕಿಂಚ ಶುಷ್ಮಿಣೋ ಬಲವತೋ ರಾಜಾದೇರಪಿ ಪತಿಃ ಸ್ವಾಮಿ । ಯಸ್ಮಾದಯಂ ಮಹಾನುಭಾವಸ್ತಸ್ಮಾತ್ತಮೇವ ಪೃಷ್ಟ್ವಾ ಪುರುಷಾರ್ಥಂ ಸಾಧಯತೇತಿ ॥

ಪ್ರತಿಪದಾರ್ಥ

**ತಂ**—ಅಗ್ನಿಯನ್ನು । **ಪೃಚ್ಛತ**—(ನೀವು ತಿಳಿದುಕೊಳ್ಳಬೇಕೆಂಬ ವಿಷಯಗಳನ್ನೆಲ್ಲಾ) ಕೇಳಿ (ತಿಳಿದು ಕೊಳ್ಳಿ) । **ಸಃ**—ಅಗ್ನಿಯು । **ಜಗಾಮ**—(ಸಕಲ ಪ್ರದೇಶಗಳಲ್ಲಿಯೂ) ಸಂಚರಿಸುತ್ತಾನೆ। **ಸಃ**—ಅವನು । **ವೇದ**—(ಸಕಲವನ್ನೂ) ತಿಳಿದಿದ್ದಾನೆ । **ಸಃ**—ಅವನು । **ಚಿಕಿತ್ವಾನ್**—ವಿಶೇಷವಾದ ಪ್ರಜ್ಞೆಯುಳ್ಳವನಾಗಿದ್ದಾನೆ । **ಈಯತೇ**—(ತಿಳಿದುಕೊಳ್ಳಬೇಕಾದ ವಿಷಯದ ಸಮೀಪಕ್ಕೆ) ಹೋಗುತ್ತಾನೆ । **ಸಃ**—ಅವನು । **ನು**—ಜಾಗ್ರತೆಯಾಗಿಯೇ । **ಈಯತೇ**—(ಯಜಮಾನನಿಗೋಸ್ಕರ) ಹೋಗುತ್ತಾನೆ । ಅಥವಾ (ತಿಳಿವಳಿಕೆಗಾಗಿ) ಸೇವಿಸಲ್ಪಡುತ್ತಾನೆ । **ತಸ್ಮಿನ್**—ಆ ಅಗ್ನಿಯಲ್ಲಿ । **ಪ್ರಶಿಷಃ**—ನಿಯಮನ ಸಾಮರ್ಥ್ಯಗಳೂ ಕೂಡ । **ಸಂತಿ**—ಇವೆ । **ತಸ್ಮಿನ್**—ಅವನಲ್ಲಿ । **ಇಷ್ಟಯಃ**—ಸಕಲಭೋಗಗಳೂ ಅಥವಾ ಫಲವನ್ನು ಕೊಡತಕ್ಕ ಯಾಗಗಳೂ (ಇವೆ) । **ಸಃ**—ಅವನು । **ವಾಜಸ್ಯ**—ಅನ್ನಕ್ಕೂ । **ಶವಸಃ**—ಬಲಕ್ಕೂ । **ಪತಿಃ**—ದಾತನಾಗಿದ್ದಾನೆ । **ಶುಷ್ಮಿಣಃ**—(ರಾಜನೇ ಮೊದಲಾದ) ಬಲಶಾಲಿಗಳಿಗೂ ಸಹ (ಒಡೆಯನಾಗಿದ್ದಾನೆ).

ಭಾವಾರ್ಥ

ಅಗ್ನಿಯು ಸಕಲ ಪ್ರದೇಶಗಳಲ್ಲಿಯೂ ಸಂಚರಿಸಿ ಸಕಲವನ್ನೂ ತಿಳಿದಿದ್ದಾನೆ. ಅವನು ವಿಶೇಷವಾದ ಪ್ರಜ್ಞೆಯುಳ್ಳವನಾಗಿದ್ದಾನೆ ಮತ್ತು ತಿಳಿದುಕೊಳ್ಳಬೇಕಾದ ವಿಷಯದ ಸಮೀಪಕ್ಕೆ ಯಜಮಾನನಿಗೋಸ್ಕರ ಹೋಗುತ್ತಾನೆ. ಅವನಲ್ಲಿ ನಿಯಮನಸಾಮರ್ಥ್ಯವಿದೆ. ಅವನು ಸಕಲ ಭೋಗಗಳಿಗೂ ನಿಧಿಯಾಗಿದ್ದಾನೆ. ಅವನು ಅನ್ನಕ್ಕೂ ಬಲಕ್ಕೂ ದಾತನಾಗಿಯೂ ಮತ್ತು ಬಲಶಾಲಿಗಳಿಗೆ ಒಡೆಯನಾಗಿಯೂ ಇದ್ದಾನೆ.

English Translation

. Ask (of Agni what you desire), for he goes (everywhere), he knows (all things): possessed of intelligence, he proceeds (to ascertain what is to be done), and is had recourse to (by his worshippers); for in him is the power of restraining (unreasonable desires), in him (is the power of granting) enjoyment; he is the giver of food and of strength; the protector of the mighty.

ವಿಶೇಷವಿಷಯಗಳು

**ಪ್ರಶಿಷಃ**—ಈ ಪದಕ್ಕೆ ನಿಯಮನ ಸಾಮರ್ಥ್ಯವೆಂದು ಇಲ್ಲಿ ಅರ್ಥಮಾಡಿದೆ. ಆಜ್ಞಾರ್ಥಕವಾದ **ಶಾಸ್** ಧಾತುವಿನಿಂದ ನಿಷ್ಪನ್ನವಾಗಿದೆಯೆಂದು ಹೇಳಿದೆ. ಆದರೆ,

ಸ ಸೂರ್ಯಸ್ಯ ರಶ್ಮಿಭಿಃ ಪರಿ ವ್ಯತ ತಂತುಂ ತನ್ವಾನಸ್ತ್ರಿವೃತಂ ಯಥಾ ವಿದೇ ।
ನಯನ್ನೃತಸ್ಯ ಪ್ರಶಿಷೋ ನವೀಯಸೀಃ ಪತಿರ್ಜನೀನಾಮುಪ ಯಾತಿ ನಿಷ್ಕೃತಂ ।
(ಋ. ಸಂ. ೯-೮೬-೩೨)

ಎಂಬ ಋಕ್ಕಿನಲ್ಲಿ **ಪ್ರಶಿಷಃ** ಎಂಬ ಪದಕ್ಕೆ **ಪ್ರಶಂಸನಾ** ಅಭಿಮತಾಸಿ ಎಂದರ್ಥಮಾಡಿರುವುದರಿಂದ ಅಲ್ಲಿ ಶಂಸ್ ಧಾತುವಿನಿಂದ ನಿಷ್ಪನ್ನವಾಗಿ **ಪ್ರಶಿಷಃ** ಎಂದಾಗಿರಬೇಕು.

ತವೇಮೇ ಸಪ್ತಸಿಂಧವಃ ಪ್ರಶಿಷಂ ಸೋಮ ಸಿಸ್ರತೇ । ತುಭ್ಯಂ ಧಾವಂತಿ ಧೇನವಃ ।
(ಋ. ಸಂ. ೯-೬೬-೬)

ಎಂಬಲ್ಲಿ ಸಪ್ತನದಿಗಳೂ **ಸೋಮನ** ಆಜ್ಞೆಯನ್ನನುಸರಿಸುತ್ತವೆಯೆಂದು ಹೇಳುವಾಗ **ಪ್ರಶಿಷಃ** ಎನ್ನುವುದಕ್ಕೆ **ಪ್ರಶಾಸನಂ** ಆಜ್ಞಾಂ ಎಂದೂ,

ಯ ಆತ್ಮದಾ ಬಲದಾ ಯಸ್ಯ ವಿಶ್ವ ಉಪಾಸತೇ **ಪ್ರಶಿಷಂ ಯಸ್ಯ ದೇವಾಃ** ।
ಯಸ್ಯ ಛಾಯಾಮೃತಂ ಯಸ್ಯ ಮೃತ್ಯುಃ ಕಸ್ಮೈ **ದೇವಾಯ ಹವಿಷಾ ವಿಧೇಮ** ।
(ಋ. ಸಂ. ೧೦-೧೨೧-೨)

ಎಂಬಲ್ಲಿಯೂ **ಪ್ರಕೃಷ್ಟಂ ಶಾಸನಂ**- ಆಜ್ಞಾಂ ಪ್ರಜಾಪತಿಯ ಶ್ರೇಷ್ಠವಾದ ಆಜ್ಞೆಯನ್ನು ಎಂದರೆ ನಿಯಮವನ್ನು ಎಂದೂ ಅರ್ಥಮಾಡಿದೆ. ಪ್ರಕೃತವಾದ ಋಕ್ಕಿನಲ್ಲಿಯೂ ಸಹ **ನಿಯಮನ**ವೆಂದರ್ಥ. ಅಗ್ನಿಯ ನಿಯಮನ ಸಾಮರ್ಥ್ಯವೆಂದು ತಾತ್ಪರ್ಯ.

**ಇಷ್ಟಯಃ—ಇಷ್ಟವ್ಯಾ ಭೋಗಾಃ ಸರ್ವಫಲಸಾಧಕಾ ಯಾಗಾ ವಾ ।** ಅಪೇಕ್ಷಿತಗಳಾದ ಭೋಗಗಳು ಅಥವಾ ಸಕಲವಾದ ಫಲಗಳನ್ನು ಕೊಡತಕ್ಕ ಯಾಗಗಳು ಎಂದು ಸಾಯಣರು ವಿವರಿಸಿದ್ದಾರೆ. ಇಷ್ಟಿ ಶಬ್ದವು **ಯಜ್ಞ** ನಾಮಗಳಲ್ಲಿ ಪಠಿತವಾಗಿದ್ದರೂ ಸಹ (ನಿ. ೩-೧೯) ಇಂತಹ ಸಂದರ್ಭಗಳಲ್ಲಿ ಈ ಪದವು **ಇಷ್** ಧಾತುವಿನಿಂದ ನಿಷ್ಪನ್ನವಾಗಿದೆಯೋ ಅಥವಾ **ಯಜ್** ಧಾತುವಿನಿಂದ ನಿಷ್ಪನ್ನವಾಗಿದೆಯೋ ಎಂಬ ವಿಷಯದಲ್ಲಿ ಕೆಲವು ಪಂಡಿತರು ಚರ್ಚಿಸಿದ್ದಾರೆ (Oldenbrg. Z. D. M. G. L XII. 473) ಋಕ್ಸಂಹಿತೆಯಲ್ಲಿ ಈ ಎರಡು ಧಾತುಗಳ ಅರ್ಥಗಳನ್ನು ಕೊಡುವಂತೆ ಈ ಪದದ ಪ್ರಯೋಗಗಳನ್ನು ನೋಡಬಹುದು.

ನಿತ್ಯೇ ಚಿನ್ನು ಯಂ ಸದನೇ ಜಗೃಭ್ರೇ ಪ್ರಶಸ್ತಿಭಿರ್ದಧಿರೇ ಯಜ್ಞಿಯಾಸಃ ।

ಪ್ರ ಸೂ ನಯಂತ ಗೃಭಯಂತ ಇಷ್ಟಾವಶ್ವಾಸೋ ನ ರಥ್ಯೋ ರಾರಹಾಣಾಃ ॥
(ಋ. ಸಂ. ೧-೧೪೮-೩)

ಎಂಬ ಋಕ್ಕಿನಲ್ಲಿ **ಇಷ್ಟೌ** ಏಷಣಸಾಧನೇ **ಯಜ್ಞೇ** । ಇಷ್ಟಾರ್ಥಗಳನ್ನು ಒದಗಿಸುವ ಸಾಧನವಾದ ಯಜ್ಞವೆಂದೂ,

ನ ಯಸ್ಯ ಸಾತುರ್ಜನಿತೋರವಾರಿ ನ ಮಾತರಾಪಿತರಾ ನೂ ಚಿದಿಷ್ಟೌ ।
ಅಧಾ ಮಿತ್ರೋ ನ ಸುಧಿತಃ ಪಾವಕೋ೩ ಗ್ನಿರ್ದೀದಾಯ ಮಾನುಷೀಷು ವಿಕ್ಷು ।
(ಋ. ಸಂ. ೪-೬-೭)

ಎಂಬಲ್ಲಿ **ಯಸ್ಯ ಇಷ್ಟ್ವೌ ಪ್ರೇಷಣೇ** । ಎಂಬರ್ಥವೆಂದೂ ಹೇಳಿರುವುದರಿಂದ ಇಲ್ಲಿ **ಇಷ್** ಧಾತುವೇ ಮೂಲವೆಂದಿದೆ.

**ಯಾಃ ಸರೂಪಾ ವಿರೂಪಾ ಏಕರೂಪಾ ಯಾಸಾಮಗ್ನಿರಿಷ್ಟ್ಯಾ ನಾಮಾನಿ ವೇದ ।**
**ಯಾ ಅಂಗಿರಸಸ್ತಪಸೇಹ ಚಕ್ರುಸ್ತಾಭ್ಯಃ ಪರ್ಜನ್ಯ ಮಹಿ ಶರ್ಮ ಯಚ್ಛ ।**
(ಋ. ಸಂ. ೧೦-೧೬೯-೨)

ಇತ್ಯಾದಿ ಋಕ್ಕುಗಳಲ್ಲಿ ಯಾಗವೆಂಬರ್ಥವಾಗಿ **ಯಜ್** ಧಾತುವಿನಿಂದ ನಿಷ್ಪನ್ನವಾಗಿದೆಯೆಂದು ತೋರಿಸಿದೆ.

ಪ್ರಕೃತವಾದ ಋಕ್ಕಿನಲ್ಲಿ ಭೋಗಗಳು ಮತ್ತು ಯಾಗಗಳು ಎಂದು ಎರಡರ್ಥಗಳನ್ನೂ ಹೇಳಿರುವುದರಿಂದ ಯಾವ ನಿಷ್ಪತ್ತಿಯನ್ನಾದರೂ ಹೇಳಬಹುದು.

**ಚಿಕಿತ್ವಾನ್—ಚೇತನಾವಾನ್** । ಪ್ರಜ್ಞೆಯುಳ್ಳವನು, ಪ್ರಾಜ್ಞನು ಎಂದರ್ಥ.

॥ ವ್ಯಾಕರಣಪ್ರಕ್ರಿಯಾ ॥

**ಪೃಚ್ಛತ**—ಪೃಚ್ಛ ಜ್ಞೀಪ್ಸಾಯಾಂ ಧಾತು. ಲೋಟ್ ಮಧ್ಯಮಪುರುಷಬಹುವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಜಗಾಮ**—ಗಮ್ಲೃ ಗತೌ ಧಾತು. **ಛಂದಸಿ ಲುಙ್ ಲಙ್ ಲಿಟಃ** ಎಂಬುದರಿಂದ ವರ್ತಮಾನಾರ್ಥದಲ್ಲಿ ಲಿಟ್ ಪ್ರಥಮಪುರುಷಏಕವಚನದ ರೂಪ. ತಿಙಂತನಿಘಾತಸ್ವರ ಬರುತ್ತದೆ.

**ವೇದ**—ವಿದ ಜ್ಞಾನೇ ಧಾತು. ಲಟ್ ಪ್ರಥಮಪುರುಷಏಕವಚನದಲ್ಲಿ **ವಿದೋ ಲಟೋ ವಾ** (ಪಾ. ಸೂ. ೩-೪-೮೩) ಎಂಬುದರಿಂದ ಣಲಾದೇಶ. **ಪುಗಂತಲಘೂಪಧಸ್ಯ ಚ** ಎಂಬುದರಿಂದ ಧಾತೂಪಧೆಗೆ ಗುಣ. ತಿಙಂತನಿಘಾತಸ್ವರ ಬರುತ್ತದೆ.

**ಚಿಕಿತ್ವಾನ್**—ಕಿತ ಜ್ಞಾನೇ ಇದಕ್ಕೆ ಛಾಂದಸವಾಗಿ ಲಟ್ ಬಂದಾಗ **ಕ್ವಸುಶ್ಚ** (ಪಾ. ಸೂ. ೭-೨-೧೦೭) ಎಂಬುದರಿಂದ ಅದಕ್ಕೆ ಕ್ವಸುರಾದೇಶ. ಪ್ರಥಮಾಏಕವಚನಾಂತರೂಪ. ವಸುವಿನಸ್ವರ ಬರುತ್ತದೆ.

**ಈಯತೇ**—ಈಙ್ ಗತೌ ಧಾತು ದಿವಾದಿ. ಲಟ್ ಪ್ರಥಮಪುರುಷಏಕವಚನಾಂತರೂಪ. ತಿಙಂತನಿಘಾತ ಸ್ವರ ಬರುತ್ತದೆ.

**ಪ್ರಶಿಷಃ**—ಶಾಸು ಅನುಶಿಷ್ಟೌ ಧಾತು. **ಕ್ವಿಪ್ ಚ** ಎಂಬುದರಿಂದ ಕ್ವಿಪ್ ಪ್ರತ್ಯಯ. **ಶಾಸ ಇದಙ್-ಹಲೋಃ** (ಪಾ. ಸೂ. ೬-೪-೩೪) ಎಂಬುದರಿಂದ ಉಪಧೆಗೆ ಇತ್ವ. **ಶಾಸಿವಸಿಘಸೀನಾಂ ಚ** (ಪಾ. ಸೂ. ೮-೩-೬೦) ಎಂಬುದರಿಂದ ಧಾತುಸಕಾರಕ್ಕೆ ಷತ್ವ. **ಗತಿಕಾರಕೋಪಪದಾತ್ ಕೃತ್** ಎಂಬುದರಿಂದ ಕೃದುತ್ತರ ಪದಪ್ರಕೃತಿಸ್ವರ ಬರುತ್ತದೆ.

**ಇಷ್ಟಯಃ**—ಇಷು ಇಚ್ಛಾಯಾಂ ಧಾತು. ಕ್ತಿನ್ ಪ್ರತ್ಯಯ. ಷ್ಟುತ್ವದಿಂದ ಅದಕ್ಕೆ ಟಕಾರಾದೇಶ. **ಮಂತ್ರೇವೃಷೇ**—(ಪಾ. ಸೂ. ೩-೩-೯೬) ಎಂಬುದರಿಂದ ಕ್ತಿನ್ ಉದಾತ್ತವಾಗುತ್ತದೆ. ॥ ೧ ॥



। ಸಂಹಿತಾಪಾಠಃ ।

ತಮಿತ್ಪೃ॒ಚ್ಛಂ॒ತಿ॒ ನ ಸಿ॒ಮೋ॒ ವಿ ಪೃ॒ಚ್ಛ॒ತಿ॒ ಸ್ವೇನೇ॑ವ॒ ಧೀರೋ॒ ಮನ॑ಸಾ॒ ಯದಗ್ರ॑ಭೀತ್ ।
ನ ಮೃ॒ಷ್ಯತೇ ಪ್ರ॒ಥ॒ಮಂ ನಾಪ॑ರಂ॒ ವಚೋ॒ಽಸ್ಯ ಕ್ರತ್ವಾ॑ ಸಚ॒ತೇ ಅಪ್ರ॑ದೃಪಿತಃ ॥ ೨ ॥

ಪದಪಾಠಃ

ತಂ । ಇತ್ । ಪೃ॒ಚ್ಛಂ॒ತಿ॒ । ನ । ಸಿ॒ಮಃ । ವಿ । ಪೃ॒ಚ್ಛ॒ತಿ॒ । ಸ್ವೇನ॑ಽಇವ । ಧೀರ॑ಃ । ಮನ॑ಸಾ । ಯತ್ । ಅಗ್ರ॑ಭೀತ್ ।
ನ । ಮೃ॒ಷ್ಯ॒ತೇ॒ । ಪ್ರ॒ಥ॒ಮಂ । ನ । ಅಪ॑ರಂ । ವಚ॑ಃ । ಅ॒ಸ್ಯ । ಕ್ರತ್ವಾ॑ । ಸ॒ಚ॒ತೇ॒ । ಅಪ್ರ॑ಽದೃಪಿತಃ ॥ ೨ ॥

ಸಾಯಣಭಾಷ್ಯಂ

ಪೂರ್ವಮಂತ್ರೇಽಗ್ನಿಂ ಪೃಚ್ಛತೇತ್ಯುಕ್ತಂ । ಅತ್ರ ತು ಸೋಽನುನಯೇನ ಪ್ರಷ್ಟವ್ಯ ಇತ್ಯಾಹ । ತಮಿತ್ತಮೇವಾಗ್ನಿಂ ಪೃಚ್ಛಂತಿ ಸ ತು ನಾನ್ಯಂ ಪೃಚ್ಛತಿ ಪ್ರಶ್ನಸಮಯೇಽಪಿ । ಸಿಮಃ ಸರ್ವಜನೋ ನ ವಿ ಪೃಚ್ಛತಿ । ವಿಪರೀತಂ ನ ಪೃಚ್ಛತಿ । ಪೃಷ್ಟೋಽಪಿ ಧೀರೋ ಧೀಮಾನಯಂ ಸ್ವೇನೇವ ಮನಸಾ । ಇವಶಬ್ದ ಏವಾರ್ಥೇ । ಸ್ವಕೀಯಯೈವ ಬುದ್ಧ್ಯಾ ಯತ್ ಯತ್ಕಾರ್ಯಮಗ್ರಭೀತ್ ವದಾವಿರಾತ್ಮ್ಯಾದತ್ರೇ ತದೇವ ಪ್ರತಿಬ್ರೂತೇ ನ ತು ಪ್ರಶ್ನಾನುಕೂಲಂ । ಸ್ವತಂತ್ರೇಶ್ವರ ಇತ್ಯುಕ್ತಂ ಭವತಿ । ಯದ್ವಾ । ಪ್ರಷ್ಟಾ ಧೀಮಾನ್ ಸ್ವೇನ ಮನಸಾ ವಾಚಾ ವಾಚ್ಯಂ ವಿಚಾರ್ಯ ಯದಗ್ರಭೀತ್ ಯದ್ವಾಕ್ಯಂ ವಕ್ತವ್ಯತ್ವೇನ ಸ್ವೀಕುರ್ಯಾತ್ ತದೇವಾಗ್ನಿಂ ಪೃಚ್ಛತಿ ನ ತು ಬಹು ಭಾಷತ ಇತ್ಯರ್ಥಃ । ಪರವಾಕ್ಯಾಸಹ್ಯತ್ವಮಾಹ । ಅಯಮಗ್ನಿಃ ಪ್ರಥಮಂ ವಚಃ ಸ್ವವಾಕ್ಯಾತ್ಪೂರ್ವಭಾವಿ ವಚನಂ ನ ಮೃಷ್ಯತೇ । ನ ಸಹತೇ । ತಥಾಪರಂ ವಚಃ ಸ್ವೋಕ್ತ್ಯನಂತರಭಾವಿ ಪ್ರತಿವಚನಂ ನ ಮೃಷ್ಯತೇ । ಯಸ್ಮಾದಯಮೇವಂವಿಧಸ್ತಸ್ಮಾದಪ್ರದೃಪಿತೋಽಪ್ರದೃಪ್ತಃ ಯದ್ವಾ ತೇನ ಶಿಕ್ಷಿತೋಽನುದ್ದಂಡಃ ಸರ್ವೋ ಲೋಕೋಽಸ್ಯ ಮಹಾನುಭಾವಸ್ಯಾಗ್ನೇಃ ಕ್ರತ್ವಾ ಕ್ರತುನಾ ರಕ್ಷಣಾದಿಕರ್ಮಣಾ ಸಹ ಸಚತೇ । ಸಂಗಚ್ಛತೇ । ಜೀವತೀತ್ಯರ್ಥಃ ॥

ಪ್ರತಿಪದಾರ್ಥ

ತಮಿತ್—ಆ ಅಗ್ನಿಯನ್ನೇ । ಪೃಚ್ಛಂತಿ—(ತಿಳಿಯಬೇಕಾದುದನ್ನು ಸಕಲರೂ) ಕೇಳುತ್ತಾರೆ । ಸಿಮಃ ಸಕಲ ಜನವೂ (ಯಾವ ಕೂಡ) । ನ ವಿ ಪೃಚ್ಛತಿ—ಅಯೋಗ್ಯವಾದ ಪ್ರಶ್ನೆಯನ್ನು ಕೇಳುವುದಿಲ್ಲ । ಧೀರಃ—

ಬುದ್ಧಿವಂತನಾದ ಅಗ್ನಿಯು । **ಸ್ವೇನೇವ ಮನಸಾ**—ತನ್ನ ಬುದ್ಧಿಯಿಂದಲೇ । **ಯತ್**—ಯಾವ ವಿಷಯವನ್ನು । **ಅಗ್ರಭೀತ್**—(ಹೇಳಬೇಕೆಂದು) ನಿಶ್ಚಯ ಮಾಡಿಕೊಂಡಿರುವನೋ ಅದನ್ನು ಮಾತ್ರ ಹೇಳುತ್ತಾನೆ । [ಅಥವಾ **ಧೀರಃ**—ಬುದ್ಧಿವಂತನಾದ ಪ್ರಾಶ್ನಿಕನು । **ಸ್ವೇನೇವ ಮನಸಾ**—ತನ್ನ ಸ್ವಬುದ್ಧಿಯಿಂದಲೇ । **ಯತ್**—(ಕೇಳಲು ಯೋಗ್ಯವಾದ) ಯಾವ ಪ್ರಶ್ನೆಯನ್ನು । **ಅಗ್ರಭೀತ್**—ವಿಚಾರಮಾಡಿ ನಿಷ್ಕರ್ಷಿಸಿರುವನೋ ಆ ಪ್ರಶ್ನೆಯನ್ನೇ ಕೇಳುತ್ತಾನೆ)] (ಈ ಅಗ್ನಿಯು) । **ಪ್ರಥಮಂ ವಚಃ** ತನ್ನ ವಾಕ್ಯಕ್ಕಿಂತ ಪೂರ್ವಭಾವಿಯಾದ ಮಾತನ್ನು । **ನ ಮೃಷ್ಯತೇ**—ಸಹಿಸುವುದಿಲ್ಲ । **ಅಪರಂ**—ತನ್ನ ವಾಕ್ಯಾನಂತರ ಬರತಕ್ಕ ಪ್ರತ್ಯುತ್ತರವನ್ನು । **ನ**—ಸಹಿಸುವುದಿಲ್ಲ । **ಅಪ್ರದೃಪಿತಃ**—ಅಹಂಕಾರ ರಹಿತನಾದವನು (ಮಾತ್ರ) ಅಥವಾ ಅವನಿಂದ ಶಿಕ್ಷಿತನಾದವನು (ಮಾತ್ರ) । **ಅಸ್ಯ**—ಈ ಅಗ್ನಿಯ । **ಕ್ರತ್ವಾ**—ರಕ್ಷಣಾದಿ ಕರ್ಮಗಳಿಂದ । **ಸಚತೇ**—ಕೂಡಿಕೊಳ್ಳುತ್ತಾನೆ (ರಕ್ಷಿತನಾಗುತ್ತಾನೆ).

ಭಾವಾರ್ಥ

ಸಕಲರೂ ಕೂಡ ತಾವು ತಿಳಿದುಕೊಳ್ಳಬೇಕಾದುದನ್ನು ಈ ಅಗ್ನಿಯನ್ನೇ ಕೇಳಿ ತಿಳಿದುಕೊಳ್ಳುತ್ತಾರೆ. ಅಯೋಗ್ಯವಾದ ಪ್ರಶ್ನೆಯನ್ನು ಯಾರೂ ಕೇಳುವುದಿಲ್ಲ. ಪ್ರಾಜ್ಞನಾದ ಅಗ್ನಿಯು ತನ್ನ ಮನಸ್ಸಿನಿಂದ ಮಾತ್ರ ನಿಶ್ಚಯಮಾಡಿಕೊಂಡಿರುವ ವಿಷಯವನ್ನು ಹೇಳುತ್ತಾನೆ. ಅದಲ್ಲದೆ, ಅದಕ್ಕೆ ಪೂರ್ವಭಾವಿಯಾದ ವಾಕ್ಯವನ್ನಾಗಲಿ, ಅದಾದಮೇಲೆ ಬರುವ ಪ್ರತ್ಯುತ್ತರವಾದ ವಾಕ್ಯವನ್ನಾಗಲಿ ಸಹಿಸುವುದಿಲ್ಲ. ಅಹಂಕಾರ ರಹಿತನಾದವನು ಮಾತ್ರ ಈ ಅಗ್ನಿಯ ರಕ್ಷಣೆಗೆ ಪಾತ್ರನಾಗುತ್ತಾನೆ.

## English Translation

They ask of Agni, but no one asks improperly ; for a sensible man (replies to solicitation) as he has determined in his own mind ; Agni tolerates not a speech that anticipates (his reply), nor endures a rejoinder : he who is devoid of arrogance is favoured by his protection.

ವಿಶೇಷವಿಷಯಗಳು

**ಸಿಮಃ—ಸರ್ವಜನಃ** ಎಂದು **ಸಿಮ** ಶಬ್ದಕ್ಕೆ ಸರ್ವವೆಂದರ್ಥಮಾಡಿದೆ. ಆದರೆ ಶ್ರೇಷ್ಠವೆಂಬರ್ಥವೂ ಅನೇಕ ಕಡೆಗಳಲ್ಲಿದೆ.

> **ಯದಿಂದ್ರ ಪ್ರಾಗಪಾಗುದಙ್ ನ್ಯಗ್ವಾ ಹೂಯಸೇ ನೃಭಿಃ ।**
> **ಸಿಮಾ ಪುರೂ ನೃಷೂತೋ ಅಸ್ಯಾನವೇಽಸಿ ಪ್ರಶರ್ಧ ತುರ್ವಶೇ ॥**

(ಋ. ಸಂ. ೮-೪-೧)

ಎಂಬಲ್ಲಿ ಸಾಯಣರು ಈ ಪದದ ಅರ್ಥವನ್ನು ವಿವರಿಸುವಾಗ **ಸಿಮ ಇತಿ ವೈ ಶ್ರೇಷ್ಠಮಾಚಕ್ಷತೇ** । ಎಂದು ಇತರ ವ್ಯಾಖ್ಯಾಕಾರರ ಮತವನ್ನುದಹರಿಸಿ **ಶ್ರೇಷ್ಠೇಂದ್ರ** ಶ್ರೇಷ್ಠನಾದ ಇಂದ್ರನೆಂದು ಅರ್ಥಮಾಡಿದ್ದಾರೆ.

**ತೇಭ್ಯೋ ಗೋಧಾ ಅಯಥಂ ಕರ್ಷದೇತದ್ಯೇ ಬ್ರಹ್ಮಣಃ ಪ್ರತಿಪೀಯಂತ್ಯನ್ನೈಃ ।**

**ಸಿಮ ಉಕ್ಷ್ಣೋಽವಸೃಷ್ಟಾ ಅದಂತಿ ಸ್ವಯಂ ಬಲಾನಿ ತನ್ವಃ ಶೃಣಾನಾಃ ॥**

(ಋ ಸಂ ೧೦-೨೮-೧೧)

ಎಂಬ ಋಕ್ಕಿನಲ್ಲಿ **ಸಿಮಃ—ಸಿಮಾನ್ ಶ್ರೇಷ್ಠಾನ್ । ಯದ್ವಾ । ಸಿಮಶಬ್ದಃ ಸರ್ವಶಬ್ದಪರ್ಯಾಯಃ । ಸರ್ವಾನ್ ।** ಎಂದು **ಶ್ರೇಷ್ಠ, ಸರ್ವ** ಎಂಬ ಎರಡರ್ಥಗಳನ್ನೂ ಮಾಡಿದೆ. ಪ್ರಕೃತವಾದ ಋಕ್ಕಿನಲ್ಲಿ **ಸರ್ವ** ವೆಂಬ ಅರ್ಥವೇ ಹೊಂದಿಕೊಳ್ಳುವುದು. ಸಿಮಃ ನ ನಿಪೃಚ್ಛತಿ । ಯಾರೂ ಕೂಡ ಅಯೋಗ್ಯವಾದ ಪ್ರಶ್ನೆಯನ್ನು ಕೇಳುವುದಿಲ್ಲ ವೆಂದರ್ಥ.

**ಸ್ವೇನೇವ ಧೀರೋ ಮನಸಾ ಯದಗ್ರಭೀತ್ ।** ಎಂಬ ವಾಕ್ಯಕ್ಕೆ ಎರಡು ವಿಧವಾದ ಅನ್ವಯವನ್ನು ಮಾಡಿದೆ. ಮೊದಲನೆಯದಾಗಿ ಧೀರಃ ಎಂಬ ಪದವನ್ನು ಅಗ್ನಿಗೆ ವಿಶೇಷಣವನ್ನಾಗಿ ಮಾಡಿ ಪ್ರಾಜ್ಞನಾದ ಅಗ್ನಿಯು ಹೇಳಬೇಕಾದುದನ್ನೇ ಹೇಳುತ್ತಾನೆ ಎಂದೂ, ಎರಡನೆಯದಾಗಿ **ಧೀರಃ** ಎಂಬುದನ್ನು ಪ್ರಾಶ್ನಿಕನಿಗೆ ವಿಶೇಷಣ ವನ್ನಾಗಿ ಮಾಡಿ ಪ್ರಾಶ್ನಿಕನು ಯೋಗ್ಯವಾದ ಪ್ರಶ್ನೆಯನ್ನೇ ಕೇಳುತ್ತಾನೆ ಎಂದೂ ಅರ್ಥಮಾಡಿದೆ.

**ಧೀರಃ—ಧೀಮಂತಃ ಪ್ರಜ್ಞಾವಂತೋ ವಾ ।** ಬುದ್ಧಿವಂತರಾದ, ಪ್ರಜ್ಞಾವಂತರಾದ ಎಂದು **ಧೀರಃ** ಎಂಬ ಶಬ್ದಕ್ಕೆ ಅನೇಕ ಕಡೆ ಅರ್ಥಮಾಡಿರುವುದನ್ನು ಹಿಂದೆ ತಿಳಿಸಿದೆ.

### ವ್ಯಾಕರಣಪ್ರಕ್ರಿಯಾ

**ಪೃಚ್ಛಂತಿ—**ಪ್ರಚ್ಛ ಜ್ಞೀಪ್ಸಾಯಾಂ ವಾಚಿ ಧಾತು. ತುದಾದಿ ಲಟ್ ಪ್ರಥಮಪುರುಷಬಹುವಚನದಲ್ಲಿ ಅಂತಾದೇಶ. **ತುಧಾದಿಭ್ಯಃ ಶಃ** ಎಂಬುದರಿಂದ ಶ ವಿಕರಣ. **ಗ್ರಹಿಜ್ಯಾವಯಿ—**(ಪಾ. ಸೂ. ೬-೪-೧೬) ಎಂಬು ದರಿಂದ ಧಾತುವಿಗೆ ಸಂಪ್ರಸಾರಣ. ತಿಙಂತನಿಘಾತಸ್ವರ ಬರುತ್ತದೆ.

**ಧೀರಃ—**ಡುಧಾಞ್ ಧಾರಣಪೋಷಣಯೋಃ ಧಾತು. **ಸುಸೂಧಾಗೃಧಿಭ್ಯಃ ಕ್ರನ್** (ಉ. ಸೂ. ೨-೧೮೨) ಎಂಬುದರಿಂದ ಕ್ರನ್ ಪ್ರತ್ಯಯ. ಕಿತ್ತಾದುದರಿಂದ **ಘುಮಾಸ್ಥಾಗಾಪಾ**--(ಪಾ. ಸೂ. ೬-೪೬೬) ಎಂಬುದ ರಿಂದ ಆದ್ಯುದಾತ್ತಸ್ವರ ಬರುತ್ತದೆ

**ಅಗ್ರಭೀತ್—**ಗ್ರಹ ಉಪಾದಾನೇ ಧಾತು. **ಛಂದಸಿ ಲುಙ್—**(ಪಾ. ಸೂ. ೩-೪-೬) ಎಂಬುದರಿಂದ ವರ್ತಮಾನಾರ್ಥದಲ್ಲಿ ಲುಙ್ ಪ್ರಥಮಪುರುಷಏಕವಚನದಲ್ಲಿ ತಿಪ್ ಪ್ರತ್ಯಯ. **ಇತಶ್ಚ** ಸೂತ್ರದಿಂದ ಇಕಾರಲೋಪ. ಚ್ಲಿಗೆ ಸಿಚಾದೇಶ. **ಆರ್ಧಧಾತುಕಸ್ಯೇಡ್ವಲಾದೇಃ** ಎಂಬುದರಿಂದ ಅದಕ್ಕೆ ಇಡಾಗಮ **ಅಸ್ತಿಸಿಚೋಽಪೃಕ್ತೇ** (ಪಾ ಸೂ. ೭-೩-೯೬) ಎಂಬುದರಿಂದ ಪ್ರತ್ಯಯಕ್ಕೆ ಈಡಾಗಮ. **ಇಟಈಟಿ** (ಪಾ. ಸೂ. ೮-೨-೨೮)ಎಂಬುದರಿಂದ ಸಿಚಿಗೆ ಲೋಪ. **ಹ್ಮ್ಯಂತಕ್ಷಣ** (ಪಾ. ಸೂ. ೭-೨-೫) ಎಂಬುದರಿಂದ ನಿಷೇಧ ವಿಧಾನಮಾಡಿರುವುದರಿಂದ ವೃದ್ಧಿ ಬರುವುದಿಲ್ಲ. ಅಂಗಕ್ಕೆ ಅಡಾಗಮ. **ಹೃಗ್ರಹೋರ್ಭಶ್ಛಂದಸಿ** ಎಂಬ ವಚನದಿಂದ ಧಾತು ಹಕಾರಕ್ಕೆ ಭತ್ವ. ಯದ್ಯೋಗವಿರುವುದರಿಂದ ನಿಘಾತಪ್ರತಿಷೇಧ ಬರುತ್ತದೆ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ.

**ಮೃಷ್ಯತೇ—**ಮೃಷ ತಿತಿಕ್ಷಾಯಾಂ ಧಾತು. ದಿವಾದಿ. ಲಟ್ ಪ್ರಥಮಪುರುಷಏಕವಚನಾಂತರೂಪ ತಿಙಂತನಿಘಾತಸ್ವರ ಬರುತ್ತದೆ.

**ಪ್ರಥಮಃ**—ಪ್ರಥ ಪ್ರಖ್ಯಾನೇ. ಧಾತು. **ಪ್ರಥೇರಮಚ್** (ಉ. ಸೂ. ೫-೭೪೬) ಎಂಬುದರಿಂದ ಅಮಚ್ ಪ್ರತ್ಯಯ. **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ವಚಃ**—ವಚ ಪರಿಭಾಷಣೇ ಧಾತು. ಸರ್ವಧಾತುನಿಬಂಧನವಾಗಿ ಬರುವ ಅಸುನ್ ಪ್ರತ್ಯಯ. ನಿತ್ತ್ವದಿಂದ ಆದ್ಯುದಾತ್ತವಾಗುತ್ತದೆ.

**ಕ್ರತ್ವಾ**—ಕ್ರತುಶಬ್ದಕ್ಕೆ ತೃತೀಯಾಏಕವಚನ ಪರವಾದಾಗ **ಜಸಾದಿಷು ಛಂದಸಿ ವಾ ವಚನಮ್** ಎಂಬ ವಚನದಿಂದ ನಾಭಾವ ಬಾರದಿರುವುದರಿಂದ ಯಣಾದೇಶ.

**ಸಚತೇ**—ಷಚ ಸಮವಾಯೇ ಧಾತು. ಲಟ್ ಪ್ರಥಮಪುರುಷಏಕವಚನಾಂತರೂಪ ತಿಙಂತನಿಘಾತಸ್ವರ ಬರುತ್ತದೆ.

**ಅಪ್ರದೃಪಿತಃ**—ದೃಪ ಉತ್ಕ್ಲೇಶೇ ಧಾತು. ತುದಾದಿ. **ನಿಷ್ಠಾ** ಎಂಬುದರಿಂದ ಕ್ತ ಪ್ರತ್ಯಯ. ಅದಕ್ಕೆ ಇಡಾಗಮ ಪ್ರಕರ್ಷೇಣ ದೃಪಿತಃ ಪ್ರದೃಪಿತಃ ಆ ಮೇಲೆ ನಞ್‌ತತ್ಪುರುಷ ಸಮಾಸ. **ತತ್ಪುರುಷೇ ತುಲ್ಯಾರ್ಥ** (ಪಾ. ಸೂ. ೬-೨-೨) ಎಂಬುದರಿಂದ ಅವ್ಯಯಪೂರ್ವಪದಪ್ರಕೃತಿಸ್ವರ ಬರುತ್ತದೆ. ॥ ೨ ॥

———:o:———

ಸಂಹಿತಾಪಾಠಃ

**ತಮಿದ್ಗಚ್ಛಂತಿ ಜುಹ್ವ೧ಸ್ತಮರ್ವತೀರ್ವಿಶ್ವಾನ್ಯೇಕಃ ಶೃಣವದ್ವಚಾಂಸಿ ಮೇ।**

**ಪುರುಪ್ರೈಷಸ್ತತುರಿರ್ಯಜ್ಞಸಾಧನೋಽಚ್ಛಿದ್ರೋತಿಃ ಶಿಶುರಾದತ್ತ ಸಂ ರಭಃ।**

॥ ೩ ॥

ಪದಪಾಠಃ

**ತಂ । ಇತ್ । ಗಚ್ಛಂತಿ । ಜುಹ್ವಃ । ತಂ । ಅರ್ವತೀಃ । ವಿಶ್ವಾನಿ । ಏಕಃ । ಶೃಣವತ್ । ವಚಾಂಸಿ । ಮೇ ।**

**ಪುರುಽಪ್ರೈಷಃ । ತತುರಿಃ । ಯಜ್ಞಽಸಾಧನಃ । ಅಚ್ಛಿದ್ರಽಊತಿಃ । ಶಿಶುಃ । ಆ । ಅದತ್ತ । ಸಂ । ರಭಃ ।**

॥ ೩ ॥

ಸಾಯಣಭಾಷ್ಯಂ

ಜುಹ್ವೋಽಸ್ಮದೀಯಾ ಜುಹೂಪಭೃದಾದಯಸ್ತಮಿತ್ತಮೇವಾಗ್ನಿಂ ಆಜ್ಯಪೂರ್ಣಾಃ ಸತ್ಯೋ ಗಚ್ಛಂತಿ ಪ್ರೀಣಯಿತುಂ । ಯದ್ವಾ। ಹೂಯಂತ ಇತಿ ಜುಹ್ವ ಆಹುತಯಃ ಸೋಮಾದಿರೂಪಾಃ। ಅಥವಾ ಜುಹ್ವಾದಿಷು ಸ್ಥಿತಾನ್ಯಾಜ್ಯಾನ್ಯಪ್ಯಾಶ್ರಯಾಶ್ರಯಿಣೋರಭೇದೇನ ಜುಹ್ವ ಇತ್ಯುಚ್ಯಂತೇ ಮಂಚಾಃ ಕ್ರೋಶಂತೀತಿವತ್ । ತಾ ಅಪಿ ತಮೇವ ಗಚ್ಛಂತಿ ಅಸ್ಯ ಸರ್ವದೇವತಾತ್ಮಕತ್ವಾತ್ । ಅತ್ರೈವೇತರದೇವ-

ತಾರ್ಥಮಪಿ ಹೂಯಮಾನಂ ಚೇತಿ ಭಾವಃ । ಕಿಂಚಾರ್ವತೀಃ ಪ್ರಾಪ್ತಿಮತ್ಯಃ ಸ್ತುತಯಸ್ತಮಿತ್ತಮೇ-ವಾಗ್ನಿಂ ಗಚ್ಛಂತಿ ಸರ್ವದೇವತಾತ್ಮಕತ್ವಾದೇವ । ಸ ಏವೈಕೋಽಯಮಗ್ನಿರ್ವಿಶ್ವಾನಿ ಮೇ ಮದೀಯಾನಿ ವಚಾಂಸಿ ಸ್ತೋತ್ರರೂಪಾಣಿ ಶೃಣವತ್ । ಶೃಣೋತಿ । ಅಗ್ನೇಃ ಸರ್ವದೇವತಾತ್ಮಕತ್ವಂ ತೈತ್ತಿರೀಯಾ ಆಹುಃ । ತೇ ದೇವಾ ಬಿಭ್ಯತೋಽಗ್ನಿಂ ಪ್ರಾವಿಶನ್ ತಸ್ಮಾದಾಹುರಗ್ನಿಃ ಸರ್ವಾ ದೇವತಾ ಇತಿ । ತೈ. ಸಂ. ೬-೨-೨-೬ । ತಥಾತ್ರೈವ ಪುರಸ್ತಾದಾಮ್ನಾಸ್ಯತೇ । ತ್ವಮಗ್ನೇ ವರುಣೋ ಜಾಯಸೇ ಯತ್ತ್ವಂ ಮಿತ್ರಃ । ಋ. ೫-೩-೧ । ಇತ್ಯಾದಿಕೋಽಸ್ಯ ವಿಶೇಷ ಇತ್ಯುಚ್ಯತೇ । ಪುರುಪ್ರೈಷೋ ಬಹುಪ್ರೈಷಭಾಕ್ । ಯದ್ವಾ ಬಹುಪ್ರೇಷಣಃ । ಸರ್ವಸ್ಯಾಜ್ಞಾಪಯಿತೇತ್ಯರ್ಥಃ । ತತುರಿಸ್ತಾರಯಿತಾ ॥ ತರತೇರಂತರ್ಣ್ಯರ್ಥಾದಾದೃ-ಗಮಹನ ಇತಿ ಕಿನ್ಪ್ರತ್ಯಯಃ । ಬಹುಲಂ ಛಂದಸೀತ್ಯುತ್ವಂ ॥ ಯಜ್ಞಸಾಧನೋ ಯಜ್ಞಸಾಧಕಃ ಅಗ್ನ್ಯಧೀನತ್ವಾದ್ಯಜ್ಞಸ್ಯ ಅಚ್ಛಿದ್ರೋತಿರವಿಚ್ಛಿನ್ನರಕ್ಷಣಃ ಶಿಶುಃ ಶಿಶುವತ್ಪ್ರಿಯಕಾರೀ ಶೋಚಯಿತಾ ವಾ ಶತ್ರೂಣಾಂ ಏವಂಭೂತೋಽಗ್ನಿಃ ಸಂ ರಭೋ ಯಜ್ಞಾದಿಸಂರಂಭವಾನ್ ಸನ್ನಾದತ್ತ । ಆದತ್ತೇ । ಹವಿರಾದಿಕಂ ಸ್ವೀಕರೋತಿ ॥

## ಪ್ರತಿಪದಾರ್ಥ

**ಜುಹ್ವಃ**—(ಆಜ್ಯಾದಿಗಳಿಂದ ತುಂಬಿದ) ಜುಹ್ವಾದಿಪಾತ್ರೆಗಳು ಅಥವಾ ಸೋಮಾದ್ಯಾಹುತಿಗಳು ಅಥವಾ ಪಾತ್ರೆಗಳಲ್ಲಿರುವ ಆಜ್ಯಾದಿಗಳು । **ತಮಿತ್**—ಆ ಅಗ್ನಿಯನ್ನೇ ಉದ್ದೇಶಿಸಿ । **ಗಚ್ಛಂತಿ**— (ಅಭಿಮುಖವಾಗಿ) ಹೋಗುತ್ತವೆ । **ಅರ್ವತೀಃ**—ಸ್ತುತಿಗಳೆಲ್ಲವೂ । **ತಂ**—ಅವನನ್ನೇ (ಸೇರುತ್ತವೆ) । **ಏಕಃ**—(ಸಕಲದೇವತೆಗಳಿಗೂ) ಏಕಮಾತ್ರಪ್ರತಿನಿಧಿಯಾಗಿರುವ ಅಗ್ನಿಯು । **ಮೇ**—ನನ್ನ । **ವಿಶ್ವಾನಿ ವಚಾಂಸಿ**—ಸಕಲ ಸ್ತೋತ್ರವಾಕ್ಯಗಳನ್ನೂ । **ಶೃಣವತ್**—ಕೇಳುತ್ತಾನೆ । **ಪುರುಪ್ರೈಷಃ**—ಎಲ್ಲರಿಗೂ ಪ್ರೇರಕನಾಗಿರುವವನೂ । **ತತುರಿಃ**—(ಸಂಸಾರದಿಂದ) ದಾಟಿಸುವವನೂ । **ಯಜ್ಞಸಾಧನಃ**—ಯಜ್ಞಕ್ಕೆ ಕಾರಣನಾಗಿರುವವನೂ । **ಅಚ್ಛಿದ್ರೋತಿಃ**—ಅನವರತವಾಗಿರತಕ್ಕ ರಕ್ಷಣೆಯುಳ್ಳವನೂ । **ಶಿಶುಃ**—ಮಗುವಿನಂತೆ (ಪ್ರಿಯಕಾರಿಯಾಗಿ) ಇರುವವನೂ ಅಥವಾ (ಶತ್ರುಗಳನ್ನು) ಶೋಕಪಡುವಂತೆ ಮಾಡುವವನೂ ಆದ ಅಗ್ನಿಯು । **ಸಂ ರಭಃ**—(ಯಜ್ಞಾದಿಗಳಿಗೆ ಬೇಕಾದ) ಸಲಕರಣೆಗಳೊಡನೆ ಕೂಡಿಕೊಂಡು । ಆ **ಅದತ್ತ**—(ಹವಿಸ್ಸುಗಳನ್ನು) ಸ್ವೀಕರಿಸುತ್ತಾನೆ ॥

## ಭಾವಾರ್ಥ

ಆಜ್ಯಾದಿಗಳಿಂದ ತುಂಬಿದ ಜುಹ್ವಾದಿ ಪಾತ್ರೆಗಳು ಆ ಅಗ್ನಿಯನ್ನೇ ಉದ್ದೇಶಿಸಿ ಅವನ ಅಭಿಮುಖವಾಗಿ ಹೋಗುತ್ತವೆ. ಸಕಲ ದೇವತೆಗಳಿಗೂ ಏಕಮಾತ್ರ ಪ್ರತಿನಿಧಿಯಾಗಿರುವ ಅಗ್ನಿಯು ನನ್ನ ಎಲ್ಲಾ ಸ್ತೋತ್ರವಾಕ್ಯಗಳನ್ನು ಕೇಳುತ್ತಾನೆ ಮತ್ತು ಅವೆಲ್ಲವೂ ಅವನನ್ನೇ ಸೇರುತ್ತವೆ. ಎಲ್ಲರಿಗೂ ಪ್ರೇರಕನಾದವನೂ, ಸಂಸಾರದಿಂದ ಎಲ್ಲರನ್ನು ದಾಟಿಸುವವನೂ, ಯಜ್ಞಕ್ಕೆ ಕಾರಣನಾಗಿರುವವನೂ, ಅನವರತವಾದ ರಕ್ಷಣೆಯಿಂದ ಕೂಡಿದವನೂ. ಶತ್ರುಗಳನ್ನು ಶೋಕಿಸುವಂತೆ ಮಾಡುವವನೂ ಆದ ಅಗ್ನಿಯು ಯಜ್ಞಕ್ಕೆ ಬೇಕಾದ ಸಲಕರಣೆಗಳೊಡನೆ ಕೂಡಿಕೊಂಡು ಹವಿಸ್ಸುಗಳನ್ನು ಸ್ವೀಕರಿಸುತ್ತಾನೆ.

## English Translation

To him the (sacrifiical) ladles are directed ; to him (our) praises are addressɔd ; he alone hears all my prayers ; he is the instigator of many, the transporter (across the world), the instrument of sacrifice, the unintermitting preserver (of mankind), and (gentle as) an infant : provided with the preparations (of sacrifice), he accepts the oblation.

॥ ವಿಶೇಷವಿಷಯಗಳು ॥

**ಅರ್ವತೀಃ—ಪ್ರಾಪ್ತಿಮತ್ಯಃ ಸ್ತುತಯಃ ।** ಅಗ್ನಿಯನ್ನು ಸಮೀಪಿಸತಕ್ಕ ಸ್ತುತಿಗಳೆಂದು ಇಲ್ಲಿ ಅರ್ಥ ಮಾಡಿದೆ. ಸಾಧಾರಣವಾಗಿ **ಅರ್ವತೀಃ** ಎಂಬುದಕ್ಕೆ ಹೆಣ್ಣುಕುದುರೆಗಳೆಂದೇ ಅರ್ಥ. ಅಗ್ನಿಯನ್ನು ಸಮೀಪಿಸುವುದರಲ್ಲಿ ಅಶ್ವಗಳ ವೇಗವನ್ನು ಸೂಚಿಸುವುದರಿಂದ ಸ್ತುತಿಗಳಿಗೂ ಈ ಪದದ ಪ್ರಯೋಗವಿರಬಹುದು.

**ತತುರಿಃ—ತಾರಯಿತಾ ।** ಸಂಸಾರದಿಂದ ದಾಟಿಸುವವನು.

**ಏಕಃ ಮೇ ವಿಶ್ವಾನಿ ವಚಾಂಸಿ ಶೃಣವತ್**—ಸಕಲ ದೇವತೆಗಳಿಗೂ ಏಕಮಾತ್ರ ಪ್ರತಿನಿಧಿಯಾದ ಅಗ್ನಿಯು ನನ್ನ ಸಕಲ ಸ್ತೋತ್ರವಾಕ್ಯಗಳನ್ನೂ ಕೇಳುತ್ತಾನೆ. ಸರ್ವದೇವತೆಗಳಿಗೂ ಏಕಮಾತ್ರಪ್ರತಿನಿಧಿಯಾಗಿರುವುದು ಹೇಗೆಂದರೆ ಸಾಯಣರು ಅದನ್ನು ವಿವರಿಸಿದ್ದಾರೆ. **ಅಗ್ನೇಃ ಸರ್ವದೇವತಾತ್ಮಕತ್ವಂ ತೈತ್ತಿರೀಯಾ ಆಹುಃ । ತೇ ದೇವಾ ಬಿಭ್ಯತೋಽಗ್ನಿಂ ಪ್ರಾವಿಶನ್ ತಸ್ಮಾದಾಹುರಗ್ನಿಃ ಸರ್ವಾ ದೇವತಾ ಇತಿ ।** ಭೀತಿಗೊಂಡ ಸಕಲ ದೇವತೆಗಳೂ ಅಗ್ನಿಯನ್ನು ಪ್ರವೇಶಿಸಿ ಅವನಲ್ಲಿ ಅಂತರ್ಗತರಾದುದರಿಂದ ಅವರೆಲ್ಲರಿಗೂ ಅವನೊಬ್ಬನೇ ಏಕಮಾತ್ರ ಪ್ರತಿನಿಧಿಯಾದನೆಂದು ತೈತ್ತಿರೀಯಸಂಹಿತೆಯಲ್ಲಿ ಹೇಳಿರುವ ವಿಷಯವನ್ನು ಇಲ್ಲಿ ಉದಹರಿಸಿದೆ. ಋಕ್ಸಂಹಿತೆಯಲ್ಲಿಯೂ ಸಹ,

**ಯದೀಂ ಗಣಸ್ಯ ರಶನಾಮಜೀಗಃ ಶುಚಿರಂಕ್ತೇ ಶುಚಿಭಿರ್ಗೋಭಿರಗ್ನಿಃ ।**
**ಆದ್ದಕ್ಷಿಣಾ ಯುಜ್ಯತೇ ವಾಜಯಂತ್ಯುತ್ತಾನಾಮೂರ್ಧ್ವೋ ಅಧಯಜ್ಜುಹೂಭಿಃ ॥**

(ಋ. ಸಂ. ೫-೧-೩)

ಎಂಬ ಋಕ್ಕಿನಲ್ಲಿಯೂ ಸಹ ಮೇಲಿನ ಅಭಿಪ್ರಾಯವನ್ನೇ ಹೇಳಿದೆ. ಆದುದರಿಂದ **ಏಕಃ ಶೃಣವತ್** ಎಂದು ಸ್ತುತಿಸಿದೆ.

**ಶಿಶುಃ— ಶಿಶುವತ್ಪ್ರಿಯಕಾರೀ ।** ಮಗುವಿನಂತೆ ಪ್ರಿಯಕಾರಿಯಾದವನೆಂದು ಒಂದರ್ಥವನ್ನೂ **ಶೋಚಯಿತಾ ವಾ ಶತ್ರೂಣಾಂ** ಎಂಬ ಎರಡನೆಯ ಅರ್ಥವನ್ನೂ ಸಾಯಣರು ಹೇಳಿದ್ದಾರೆ. ಅಗ್ನಿಯ ವಿಷಯದಲ್ಲಿ ಈ ಎರಡರ್ಥಕ್ಕೂ ಅವಕಾಶವಿದೆ.

**ಹಸ್ತಾಭ್ಯಾಂ ಹ್ಯೇನಂ ಮಂಥಂತಿ । ಶಿಶುಂ ಜಾತಮಿತಿ ಶಿಶುರಿವ ವಾ ಏವ ಪ್ರಥಮಜಾತೋ ಯದಗ್ನಿಃ ।**

( ಐ. ಬ್ರಾ. ೧-೧೬ )

ಎಂದು ಐತರೇಯ ಬ್ರಾಹ್ಮಣದಲ್ಲಿಯೂ ಇತರ ಕಡೆಗಳಲ್ಲಿಯೂ ವರ್ಣಿಸಿರುವಂತೆ ಇಲ್ಲಿಯೂ ಆ ಗುಣವನ್ನು ಹೇಳಿದೆ. ಶಿಶುವೆಂದರೆ ಕೇವಲ ಮಗುರೂಪವಾಗಿರುವುದಿಲ್ಲ, ಪೂಜ್ಯನೂ ಹೌದು ಎಂಬುದನ್ನು ತೋರಿಸಲು ನಿರುಕ್ತಕಾರರು,

**ಶಿಶುಃ ಶಂಸನೀಯೋ ಭವತಿ ।** (ನಿ. ೧೦-೩೯) ಪ್ರಶಂಸೆಗೆ ಅರ್ಹವಾದುದರಿಂದ **ಶಿಶುವೆಂದು** ಹೆಸರು. ಅಥವಾ—

**ಶಿಶೀತೇರ್ವಾ ಸ್ಯಾದ್ದಾನಕರ್ಮಣಃ । ಚಿರಲಬ್ಧೋ ಗರ್ಭೋ ಭವತಿ ।**

(ನಿ. ಸಂ. ೧೦-೩೯)

ಪುರುಷನಿಂದ ಸ್ತ್ರೀಗೆ ದಾನರೂಪವಾಗಿ ಬಂದುದರಿಂದ **ಶಿಶುವೆಂಬ** ಹೆಸರು ಎಂದೂ ಸಹ ಈ ಪದದ ನಿರ್ವಚನವನ್ನು ತೋರಿಸಿದ್ದಾರೆ.

ಅನ್ಯಾನ್ಯಾ ವತ್ಸಮುಪಧಾಪಯೇತೇ। ತಯೋರೇತೌ ವತ್ಸೌ । ಅಗ್ನಿಶ್ಚಾದಿತ್ಯಶ್ಚ । ರಾತ್ರೇರ್ವತ್ಸಃ । ಶ್ವೇತ ಆದಿತ್ಯಃ । ಅಹ್ನೋಽಗ್ನಿಃ ।

(ತೈ. ಆ. ೧-೧೦)

ಇತ್ಯಾದಿ ವಾಕ್ಯಗಳಲ್ಲೂ ಸಹ ಈ ಶಿಶುಭಾವವನ್ನು ಪ್ರಶಂಸಿಸಿದೆ.

ಎರಡನೇ ಅರ್ಥದಲ್ಲಿ **ಶೋಚಯಿತಾ ವಾ ಶತ್ರೂಣಾಂ** ಎಂದು ಅಗ್ನಿಯು ತನ್ನ ಶತ್ರುಗಳನ್ನು ಪೂರ್ಣವಾಗಿ ನಾಶಮಾಡುವುದರಿಂದ ಈ ಹೆಸರೆಂದು ಹೇಳಿದೆ.

**ನ ತಸ್ಯ ಮಾಯಯಾ ಚನ ರಿಪುರೀಶೀತ ಮರ್ತ್ಯಃ ।**
**ಯೋ ಅಗ್ನಯೇ ದದಾಶ ಹವ್ಯದಾತಿಭಿಃ ।**

(ಋ. ಸಂ. ೮-೨೩-೧೫)

ಇತ್ಯಾದಿ ಋಕ್ಕುಗಳಲ್ಲಿ ಎಂತಹ ಶತ್ರುವಾದರೂ ಸಹ ಅಗ್ನಿಯ ಕೈಗೆ ಸಿಕ್ಕಿ ತಪ್ಪಿಸಿಕೊಳ್ಳಲಾರನು, ಅಗ್ನಿಯನ್ನು ಜಯಿಸಲೂ ಸಾಧ್ಯವಿಲ್ಲ. ಎಲ್ಲರನ್ನೂ ಅಗ್ನಿಯು ಹಿಂಸಿಸಲು ಶಕ್ತನು ಎಂಬ ವರ್ಣನೆಯಿರುವುದರಿಂದ ಎರಡನೆಯ ಅರ್ಥವು ಸಾಧ್ಯವಾಗುತ್ತದೆ.

ವ್ಯಾಕರಣಪ್ರಕ್ರಿಯಾ

**ಗಚ್ಛಂತಿ**—ಗಮ್ಲೃ ಗತೌ ಧಾತು. ಲಟ್ ಪ್ರಥಮಪುರುಷಬಹುವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ಜುಹ್ವಃ**—ಹು ದಾನಾದನಯೋಃ ಧಾತು. ಇದಕ್ಕೆ **ಹುವಃ ಶ್ಲುವಚ್ಚ** (ಉ. ಸೂ. ೨-೨೧೮) ಎಂಬುದರಿಂದ ಕ್ವಿಪ್ ಪ್ರತ್ಯಯ, ಧಾತುವಿಗೆ ದೀರ್ಘ. ಶ್ಲುವದ್ಭಾವ. ಇದರಿಂದ ಧಾತುವಿಗೆ ದ್ವಿತ್ವಾದಿ. ಉದಾತ್ತಸ್ಥಾನದಲ್ಲಿ ಯಣ್ ಬಂದು ಅದರ ಪರದಲ್ಲಿ ವಿಭಕ್ತಿ ಬಂದುದರಿಂದ (ಅನುದಾತ್ತ) **ಉದಾತ್ತಸ್ವರಿತಯೋಃ**—(ಪಾ. ಸೂ. ೮-೨-೪) ಎಂಬುದರಿಂದ ಸ್ವರಿತಸ್ವರ ಬರುತ್ತದೆ

**ಅರ್ವತಿ**—ಋ ಗತೌ ಧಾತು. **ಅನ್ಯೇಭ್ಯೋಽಪಿದೃಶ್ಯಂತೇ** (ಪಾ ಸೂ. ೩-೨-೭೫) ಎಂಬುದರಿಂದ ವನಿಪ್. ಸ್ತ್ರೀತ್ವ ವಿವಕ್ಷಾ. ಮಾಡಿದಾಗಿ **ಋನ್ನೇಭ್ಯೋಙೀಪ್** ಎಂಬುದರಿಂದ ಙೀಪ್. **ಅರ್ವಣಸ್ತ್ರ್ಯಸಾವನಞಃ** (ಪಾ. ಸೂ. ೬-೪-೧೨೭) ಎಂಬುದರಿಂದ ತೃ ಅಂತಾದೇಶ. ಋಕಾರ ಇತ್. ಜಸ್ ಪರವಾದಾಗ **ಸುಪಾಂ ಸುಲುಕ್** (ಪಾ. ಸೂ. ೭-೧-೩೯) ಎಂಬುದರಿಂದ ಪೂರ್ವಸವರ್ಣದೀರ್ಘ ಬರುತ್ತದೆ.

**ಶೃಣವತ್**—ಶ್ರು ಶ್ರವಣೇ ಧಾತು. ಲೇಟ್ ಪ್ರಥಮಪುರುಷಏಕವಚನದಿಂದ ತಿಪ್ ಪ್ರತ್ಯಯ. **ಇತಶ್ಚ-ಲೋಪಃ** (ಪಾ. ಸೂ. ೩-೪-೯೭) ಎಂಬುದರಿಂದ ಅದರ ಇಕಾರಕ್ಕೆ ಲೋಪ **ಲೇಟೋಽಡಾಟೌ** (ಪಾ. ಸೂ. ೩-೪-೯೪) ಎಂಬುದರಿಂದ ಅಡಾಗಮ. **ಶ್ರುವಃ ಶೃಚ** (ಪಾ. ಸೂ. ೩-೧-೭೪) ಎಂಬುದರಿಂದ ಧಾತುವಿಗೆ ಶೃ ಆದೇಶ. ಶ್ನು ವಿಕರಣ ಪ್ರತ್ಯಯನಿಮಿತ್ತವಾಗಿ ವಿಕರಣ ಉಕಾರಕ್ಕೆ ಗುಣ. ಅವಾದೇಶ ಋವರ್ಣವನ್ನು ನಿಮಿತ್ತೀಕರಿಸಿ ವಿಕರಣನಕಾರಕ್ಕೆ ಣತ್ವ. ತಿಙಂತನಿಘಾತಸ್ವರ ಬರುತ್ತದೆ.

**ತತುರಿಃ**—ತೄ ಪ್ಲವನತರಣಯೋಃ ಧಾತು. ಪ್ರಯೋಜಕವ್ಯಾಪಾರ ತೋರುವುದರಿಂದ ಅಂತರ್ಭಾವಿತಣ್ಯರ್ಥಕವಾದ ಧಾತು. **ಆದೃಗಮಹನಜನ**—(ಪಾ. ಪಾ. ೩-೨-೧೭೧) ಎಂಬುದರಿಂದ ಕಿನ್ ಪ್ರತ್ಯಯ ಲಿಡ್ವದ್ಭಾವವಿರುವುದರಿಂದ ಧಾತುವಿಗೆ ದ್ವಿತ್ವ. **ಬಹುಲಂ ಛಂದಸಿ** ಎಂಬುದರಿಂದ ಧಾತುವಿಗೆ ಉತ್ವ. ರಪರವಾಗಿ ಬರುತ್ತದೆ. ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಯಜ್ಞಸಾಧನಃ**—ಯಜ್ಞಂ ಸಾಧಯತಿ ಇತಿ ಯಜ್ಞಸಾಧನಃ ಸಾಧ ಸಂಸಿದ್ಧೌ ಧಾತು. ಣ್ಯಂತದ ಮೇಲೆ ಲ್ಯುಟ್ ಪ್ರತ್ಯಯ. **ಯುವೋರನಾಕೌ** (ಪಾ ಸೂ. ೭-೧-೧) ಎಂಬುದರಿಂದ ಅನಾದೇಶ. **ಣೇರನಿಟಿ** ಎಂಬುದರಿಂದ ಣಿಚಿಗೆ ಲೋಪ. **ಲಿತಿ** (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ. ಸಮಾಸದಲ್ಲಿ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

**ಅಚ್ಛಿದ್ರಊತಿಃ**—ಛಿದ್ರಾ ಊತಿಃ ಯಸ್ಯ ಸಃ ಛಿದ್ರಊತಿಃ ನ ಛಿದ್ರಊತಿಃ ಅಛಿದ್ರಊತಿಃ **ತತ್ಪುರುಷೇ-ತುಲ್ಯಾರ್ಥ**—(ಪಾ. ಸೂ. ೬-೨-೨) ಎಂಬುದರಿಂದ ನಞ್ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಅದತ್ತ**—ಡುದಾಞ್ ದಾನೇ. ಧಾತು. ಛಾಂದಸವಾಗಿ ವರ್ತಮಾನಾರ್ಥದಲ್ಲಿ ಲಙ್ ಪ್ರಥಮಪುರುಷ ಏಕವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೩ ॥



ಸಂಹಿತಾಪಾಠಃ

ಉಪಸ್ಥಾಯಂ ಚರತಿ ಯತ್ಸಮಾರತ ಸದ್ಯೋ ಜಾತಸ್ತತ್ಸಾರ ಯುಜ್ಯೇಭಿಃ ।

ಅಭಿ ಶ್ವಾಂತಂ ಮೃಶತೇ ನಾಂದ್ಯೇ ಮುದೇ ಯದೀಂ ಗಚ್ಛಂತ್ಯುಶತೀರ-
ಪಿಷ್ಠಿತಂ ॥ ೪ ॥

ಭಾವಾರ್ಥ

ಉಪ॒ऽಸ್ಥಾ॒ಯಂ । ಚ॒ರ॒ತಿ॒ । ಯತ್ । ಸ॒ಮ್ऽಆರ॑ತ । ಸ॒ದ್ಯಃ । ಜಾ॒ತಃ । ತ॒ತ್ಸಾ॒ರ॒ । ಯುಜ್ಯೇ॑ಭಿಃ ।

ಅ॒ಭಿ । ಶ್ರಾ॒ಂತಂ । ಮೃ॒ಶ॒ತೇ॒ । ನಾ॒ಂದ್ಯೇ॑ । ಮು॒ದೇ । ಯತ್ । ಈ॒ಂ । ಗಚ್ಛಂ॑ತಿ । ಉ॒ಶ॒ತೀಃ । ಅ॒ಪಿऽ-
ಸ್ಥಿ॒ತಂ ॥ ೪ ॥

ಸಾಯಣಭಾಷ್ಯಂ

ಯದ್ಯದಾಧ್ವರ್ಯುರುಪಸ್ಥಾಯಂ ಚರತಿ ಉಪಸ್ಥಾಯೋಪಸ್ಥಾಯಾನುತಿಷ್ಠತಿ ಅಗ್ನ್ಯುತ್ಪತ್ತ್ಯನು-ಕೂಲವ್ಯಾಪಾರಂ ಕರೋತಿ । ಕದೇತ್ಯಾಹ । ಯತ್ ಸಮಾರತ ಸಮಾಗಚ್ಛತ ಮಥನೇನಾವಿರಭವತ್ ॥ ಸಮೋ ಗಮ್ಯೃಚ್ಛೀತ್ಯತ್ರರ್ತೇರಾತ್ಮನೇಪದಂ ॥ ಸದ್ಯಸ್ತದಾನೀಮೇವ ಜಾತ ಉತ್ಪನ್ನಃ ಸನ್ ಯುಜ್ಯೇಭಿ-ರ್ಯೋಕ್ತುಂ ಸಂಬದ್ಧುಂ ಸಮರ್ಥೈಃ ಫಲೈರ್ಮಿಶ್ರಯಿತುಮರ್ಹೈಸ್ತೇಜೋಭಿರ್ವಾ ಯುಕ್ತಃ ಸನ್ ತತ್ಸಾರ । ಅರಣ್ಯೋರ್ಗರ್ಭಃ ಸನ್ ಚಚಾರ । ಯದ್ವಾ । ಯುಜ್ಯೇಭಿರಶ್ವೈರ್ಜಾತಮಾತ್ರ ಏವ ಸರ್ವತ್ರ ಸಂಚಚಾರ ॥ ತ್ಸರ ಛದ್ಮಗತೌ । ಲಿಟಿ ಣಲಿ ರೂಪಂ ॥ ಏವಂ ಪ್ರವೃದ್ಧೋಽಯಂ ಶ್ರಾಂತಂ ಶ್ರಾಂತಂ ಶಾಂತಂ ವಾ ಯಜಮಾನಂ ನಾಂದ್ಯೇ ನಂದನೀಯೇ ಕರ್ಮಣಿ ನಿಮಿತ್ತಭೂತೇ ಸತಿ ಮುದೇ ತಸ್ಯ ಸಂತೋಷಯಾಭಿ ಮೃಶತೇ । ಅಭಿಮರ್ಶನಂ ಕರೋತಿ । ಫಲಪ್ರದಾನೇನೇತಿ ಭಾವಃ । ಯಥಾ ಲೋಕೇ ಗುರ್ವಾದಿಃ ಶ್ರಾಂತಂ ಶಿಷ್ಯಾದಿಕಂ ಸ್ಪೃಶತಿ ತದ್ವತ್ । ಕದೇತಿ ಚೇತ್ ಉಚ್ಯತೇ । ಯದ್ಯದಾಪಿಸ್ಥಿತಂ ವ್ಯಾಪ್ಯ ವರ್ತಮಾನಮಿಮಮೇನಮಗ್ನಿಮುಶತೀಃ ಕಾಮಯಮಾನಾ ಆಜ್ಯಧಾರಾಃ ಸ್ತುತಯೋ ವಾ ಗಚ್ಛಂತಿ ಪ್ರಾಪ್ನುವಂತಿ ತದಾಭಿ ಮೃಶತೇ ॥

॥ ವಿಶೇಷವಿಷಯಗಳು ॥

**ಯತ್**—ಯಾವಾಗ (ಅಧ್ವರ್ಯುವು) । **ಉಪಸ್ಥಾಯಂ**—(ಅಗ್ನ್ಯುತ್ಪತ್ತಿಗೆ) ಅನುಕೂಲವಾದ ವ್ಯಾಪಾರವನ್ನು । **ಚರತಿ**—ಮಾಡುತ್ತಾನೆಯೋ (ಆಗ) । **ಸಮಾರತ**—(ಅಗ್ನಿಯು) ಕಾಣಿಸಿಕೊಂಡನು । **ಸದ್ಯಃ**—ಒಡನೆಯೇ । **ಜಾತಃ**—ಉತ್ಪನ್ನನಾಗಿ । **ಯುಜ್ಯೇಭಿಃ**—ಕೂಡಿಕೊಳ್ಳಬಹುದಾದ ತೇಜಸ್ಸುಗಳೊಡನೆ ಅಥವಾ ಫಲಗಳೊಡನೆ ಕೂಡಿಕೊಂಡು । **ತತ್ಸಾರ**—(ಅರಣಿಗಳ ನಡುವೆ) ಸಂಚರಿಸಿದನು (ಮತ್ತು) । **ಯತ್**—ಯಾವಾಗ । **ಅಪಿಸ್ಥಿತಂ**—(ಎಲ್ಲಾ ಕಡೆಯಲ್ಲಿಯೂ) ವ್ಯಾಪಿಸಿರುವ । **ಈಂ**—ಈ ಅಗ್ನಿಯನ್ನು । **ಉಶತೀಃ**—ಅಪೇಕ್ಷಿಸುವ ಆಜ್ಯಧಾರೆಗಳು ಅಥವಾ ಸ್ತುತಿಗಳು । **ಗಚ್ಛಂತಿ**—ಸಮೀಪಿಸಿ ಹೋಗುತ್ತವೆಯೋ (ಆಗ) । **ಶ್ರಾಂತಂ**—(ಯಜ್ಞಕ್ರಿಯೆಗಳಿಂದ) ಬಳಲಿದ ಅಥವಾ ಪ್ರಸನ್ನಚಿತ್ತನಾದ ಯಜಮಾನನನ್ನು । **ನಾಂದ್ಯೇ**—ತೃಪ್ತಿದಾಯಕವಾದ ಕರ್ಮದಲ್ಲಿ । **ಮುದೇ**—(ಯಜಮಾನನ) ಸಂತೋಷಾರ್ಥವಾಗಿ । **ಅಭಿಮೃಶತೇ**—ಸಂಯುಕ್ತನಾಗುತ್ತಾನೆ ।

ಭಾವಾರ್ಥ

ಅಧ್ವರ್ಯುವು ಅಗ್ನ್ಯುತ್ಪತ್ತಿಗೆ ಅನುಕೂಲವಾದ ವ್ಯಾಪಾರವನ್ನು ಮಾಡಿದೊಡನೆಯೇ ಅಗ್ನಿಯು ಕಾಣಿಸಿಕೊಂಡನು. ಮತ್ತು ಒಡನೆಯೇ ಉತ್ಪನ್ನನಾಗಿ ತನ್ನ ತೇಜಸ್ಸುಗಳೊಡನೆ ಕೂಡಿಕೊಂಡು ಸಂಚರಿಸಿದನು

ಮತ್ತು ಸರ್ವತ್ರ ವ್ಯಾಪಿಸಿದ ಅಗ್ನಿಯನ್ನು ಆಜ್ಯಧಾರೆಗಳು ಸಮೀಪಿಸಿದೊಡನೆಯೇ, ಯಜ್ಞಕ್ರಿಯೆಗಳಿಂದ ಬಳಲಿದ ನಾವರೂ ಪ್ರಸನ್ನಚಿತ್ತನಾದ ಯಜಮಾನನ ಸಂತೋಷಾರ್ಥವಾಗಿ ಅಗ್ನಿಯು ತೃಪ್ತಿದಾಯಕವಾದ ಕರ್ಮದಲ್ಲಿ ಸಂಯುಕ್ತನಾಗುತ್ತಾನೆ. (ವೃದ್ಧಿಯಾಗುತ್ತಾನೆ).

English Translation

When (the priest) proceeds to effect his development, he is (at once) manifested ; and as soon as engendered, is associated with his objects : he provides for the gratification ( of his worshipper ), placidly engaged in the agreeable (rite), when the (oblations) that desire (his acceptance) reach him present (at the sacrifice).

ವಿಶೇಷವಿಷಯಗಳು

**ಉಪಸ್ಥಾಯಂ – ಉಪಸ್ಥಾಯಾನುತಿಷ್ಠತಿ । ಉತ್ಪತ್ತ್ಯನುಕೂಲವ್ಯಾಪಾರಂ ।** ಯಜ್ಞವೇದಿಕೆಯಲ್ಲಿ ಅಧ್ವರ್ಯುವು ಕುಳಿತು ಅಗ್ನ್ಯುತ್ಪತ್ತಿಗೆ ಅನುಕೂಲವಾದ ವ್ಯಾಪಾರವನ್ನು ಮಾಡುವುದೆಂದರ್ಥ.

**ಸಮಾರತೆ—ಸಮುಗಚ್ಛತ । ಮಥನೇನಾಪಿರಭವತ್ ।** ಅರಣಿಗಳ ಮಥನವಾದೊಡನೆಯೇ ಆವಿರ್ಭೂತನಾದವನು ಎಂದರ್ಥ. ಗತ್ಯರ್ಥಕವಾದ **ಋ** ಧಾತುವಿಗೆ **ಸಂ** ಎಂಬ ಉಪಸರ್ಗವು ಸೇರಿ ಈ ಪದವು ನಿಷ್ಪನ್ನವಾಗಿದೆ. ಇದರಂತೆಯೇ,

**ಇಂದ್ರೇಷಿತೇ ಪ್ರಸವಂ ಭಿಕ್ಷಮಾಣೇ ಅಚ್ಛಾ ಸಮುದ್ರಂ ರಥ್ಯೇವ ಯಾಥಃ ।**
**ಸಮಾರಾಣೇ ಊರ್ಮಿಭಿಃ ಪಿನ್ವಮಾನೇ ಅನ್ಯಾ ವಾಮನ್ಯಾಮಪ್ಯೇತಿ ಶುಭ್ರೇ ॥**

(ಋ. ಸಂ. ೩-೩೩-೨)

ಎಂಬ ಋಕ್ಕಿನಲ್ಲಿಯೂ **ಋ** ಧಾತುವಿಗೆ ಇದೇ ಉಪಸರ್ಗವು ಸೇರಿ **ಪರಸ್ಪರಂ ಸಂಗಚ್ಛಂತ್ಯೌ** ಎಂದರ್ಥವಾಗುತ್ತದೆ. ಎದುರಾಗಿ ಕಾಣಿಸಿಕೊ ಎಂದರ್ಥ. ಪ್ರಕೃತವಾದ ಋಕ್ಕಿನಲ್ಲಿ ಆವಿರ್ಭೂತನಾದವನು ಎಂದರೆ ಎದುರಾಗಿ ಕಾಣಿಸಿಕೊಂಡನು, ಅಗ್ನಿಯು ಅರಣಿಗಳಲ್ಲಿ ಉತ್ಪತ್ತಿಯಾಯಿತು. ಎಂದು ತಾತ್ಪರ್ಯ.

**ಯುಜ್ಯೇಭಿಃ—ಯೋಕ್ತುಂ ಸಂಬದ್ಧುಂ ಸಮರ್ಥೈಃ ಫಲೈಃ, ಋತ್ವಿಗ್ಭಿರ್ಯುಕ್ತುಮರ್ಹೈಸ್ತೇಜೋಭಿರ್ವಾ ।** ತಾನು ಕೂಡಿಕೊಳ್ಳಬಹುದಾದ ತೇಜಸ್ಸುಗಳೊಡನೆ ಅಥವಾ ಫಲಗಳೊಡನೆ ಕೂಡಿಕೊಂಡು. (as being joined with abilities, that may be associated with their objects, or with energies fit to be connected with their consequences, or with his horses joined to his Car· Tr· Wilson)

**ತತ್ಸಾರ—**ಗತ್ಯರ್ಥವಾದ **ತ್ಸರ** ಧಾತುವಿನಿಂದ ನಿಷ್ಪನ್ನವಾಗಿದೆ **ಸಂಚಚಾರ ।** ಸಂಚರಿಸಿದನೆಂದರ್ಥವು. **ಯದ್ವಾ ಯುಜ್ಯೇಭಿರಶ್ವೈರ್ಜಾತಮಾತ್ರ ಏವ ಸರ್ವತ್ರ ಸಂಚಚಾರ ।** ತನ್ನ ರಥಾಶ್ವಗಳೊಡನೆ ಕೂಡಿಕೊಂಡು ಸಂಚರಿಸಿದನು ಎಂದೂ ಆಗಬಹುದು.

**ಅಪಿಶ್ರಿತಂ—ವ್ಯಾಪ್ಯ ವರ್ತಮಾನಂ ।** ಎಲ್ಲಾ ಕಡೆಯೂ ವ್ಯಾಪಿಸಿರುವ ಅಗ್ನಿಯನ್ನು.

**ಶ್ವಾಂತಂ—ಶ್ರಾಂತಂ ಶಾಂತಂ ವಾ ಯಜಮಾನಂ ।**

ಯಜ್ಞಕ್ರಿಯೆಗಳಿಂದ ಬಳಲಿದ ಅಥವಾ ಕರ್ತವ್ಯವನ್ನು ನೆರವೇರಿಸಿದ್ದರಿಂದ ಪ್ರಸನ್ನಚಿತ್ತನಾದ ಯಜಮಾನನನ್ನು ಎಂದರ್ಥ. ಶ್ವಾಂತಶಬ್ದಕ್ಕೆ ಪ್ರವೃದ್ಧನಾದ ಎಂದೂ ಅರ್ಥವಾಗಬಹುದು.

**ಅಧಾ ಗಾವ ಉಪಮಾತಿಂ ಕನಾಯಾ ಅನು ಶ್ವಾಂತಸ್ಯ ಕಸ್ಯ ಚಿತ್ಪರೇಯುಃ**
**ಶ್ರುಧಿ ತ್ವಂ ಸುದ್ರವಿಣೋ ನಸ್ತ್ವಂ ಯಾಳಾಶ್ವಘ್ನಸ್ಯ ವಾವೃಧೇ ಸೂನೃತಾಭಿಃ ॥**
(ಋ. ಸಂ. ೧೦-೬೧-೨೧)

ಎಂಬ ಋಕ್ಕಿನಲ್ಲಿ ಶ್ವಾಂತಸ್ಯ ಎಂಬ ಪದಕ್ಕೆ **ಪ್ರವೃದ್ಧಸ್ಯ ಶ್ರಾಂತಸ್ಯ ವಾ ।** ಎಂಬ ಎರಡು ಅರ್ಥಗಳನ್ನು ಹೇಳಿದೆ ಅದರಂತೆಯೇ ಪ್ರಕೃತವಾದ ಋಕ್ಕಿನಲ್ಲಿಯೂ ಹೇಳಬಹುದು.

**ಉಶತೀಃ—ಕಾಮಯಮಾನಾ ಆಜ್ಯಧಾರಾಃ ಸ್ತುತಯೋ ವಾ** ಅಗ್ನಿಯನ್ನು ಸೇರಲು ಬಯಸುವ ಆಜ್ಯಧಾರೆಗಳು ಅಥವಾ ಸ್ತೋತ್ರಗಳೆಂದರ್ಥ.

**ನಾಂದ್ಯೇ—ನಂದನೀಯೇ ಕರ್ಮಣಿ ।** ಸಂತೋಷದಾಯಕವಾದ ಕರ್ಮನಿಮಿತ್ತವಾಗಿ ಎಂದರ್ಥ ಕರ್ಮವು ದೇಹಕ್ಕೆ ಕ್ಲೇಶವನ್ನುಂಟುಮಾಡಿದರೂ ಸಹ ಮನಸ್ಸಿಗೆ ಹರ್ಷವನ್ನುಂಟುಮಾಡುವುದರಿಂದ ಈ ಋಕ್ಕಿನಲ್ಲಿ ಹೇಳಿರುವಂತೆಯೇ,

**ತ್ರಿರ್ವರ್ತಿರ್ಯಾತಂ ತ್ರಿರನುವ್ರತೇ ಜನೇ ತ್ರಿಃ ಸುಪ್ರಾವ್ಯೇ ತ್ರೇಧೇವ ಶಿಕ್ಷತಂ ।**
**ತ್ರಿರ್ನಾನ್ದ್ಯಂ ವಹತಮಶ್ವಿನಾ ಯುವಂ ತ್ರಿಃ ಪೃಕ್ಷೋ ಅಸ್ಮೇ ಅಕ್ಷರೇವ ಪಿನ್ವತಂ ॥**
**(ಋ. ಸಂ. ೧-೩೪-೪)**

ಎಂಬ ಋಕ್ಕಿನಲ್ಲಿಯೂ ಸಹ **ನಾಂದ್ಯ** ಶಬ್ದಕ್ಕೆ ನಂದನೀಯಂ, ಸಂತೋಷಕರಂ ಎಂದರ್ಥಮಾಡಿದೆ. ಹರ್ಷದಾಯಕ ವಾದ ಫಲವನ್ನು ಕೊಡತಕ್ಕ ಕರ್ಮವೆಂದರ್ಥ.

**ಅಭಿಮೃಶತೇ—ಅಭಿಮರ್ಶನಂ ಕರೋತಿ । ಯಥಾ ಲೋಕೇ ಗುರ್ವಾದಿಃ ಶ್ರಾಂತಂ ಶಿಷ್ಯಾದಿಕಂ ಸ್ಪೃಶತಿ ತದ್ವತ್ ।** ಗುರುಗಳಾಗಲಿ ತಂದೆಯಾಗಲಿ ಶ್ರಾಂತನಾದ ಎಂದರೆ ಬಳಲಿದ ಶಿಷ್ಯನನ್ನು ಅಥವಾ ಪುತ್ರನನ್ನು ಆದರದಿಂದ ಮುಟ್ಟುವಂತೆ ಅಗ್ನಿಯೂ ಸಹ ನಾಂದ್ಯವಾದ ಕರ್ಮವನ್ನು ಆದರದಿಂದ ಅಭಿಮರ್ಶನ ಮಾಡುತ್ತಾನೆ.

ವ್ಯಾಕರಣಪ್ರಕ್ರಿಯಾ

**ಉಪಸ್ಥಾಯಮ್—** ಉಪಸ್ಥಾಯ ಉಪಸ್ಥಾಯಮ್. ಷ್ಠಾ ಗತಿನಿವೃತ್ತೌ ಧಾತು. **ಅಭೀಕ್ಷ್ಣ್ಯೇ ಣಮುಲ್** (ಪಾ. ಸೂ. ೩-೪-೨೨) ಎಂಬುದರಿಂದ ಣಮುಲ್ **ಆತೋ ಯುಕ್‌ಚಿಣ್‌ಕೃತೋಃ** (ಪಾ. ಸೂ. ೭-೩-೩೩) ಎಂಬುದರಿಂದ ಧಾತುವಿಗೆ ಯುಕಾಗಮ. ಣಮುಲಿನಲ್ಲಿ ಅಮ್ ಉಳಿಯುತ್ತದೆ. ಲಿತ್ತಾದುದರಿಂದ ಲಿತಿ (ಪಾ. ಸೂ ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ. ಪ್ರಾದಿಸಮಾಸವಾದಾಗ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

**ಚರತಿ**—ಚರ ಗತಿಭಕ್ಷಣಯೋಃ ಧಾತು. ಲಟ್ ಪ್ರಥಮಪುರುಷಏಕವಚನಾಂತರೂಪ. ತಿಙಂತನಿಘಾತ ಸ್ವರ ಬರುತ್ತದೆ.

**ಸಮಾರತ**—ಋ ಗತೌ ಧಾತು. ಸಮ್ ಉಪಸರ್ಗಪೂರ್ವವಾಗಿರುವುದರಿಂದ **ಸಮೋಗಮ್ಯೃಚ್ಛಿ-ಭ್ಯಾಮ್** (ಪಾ ಸೂ ೧-೩-೨೯) ಎಂಬುದರಿಂದ ಆತ್ಮನೇಪದಿಯಾಗುತ್ತದೆ. ಲಙ್ ಪ್ರಥಮಪುರುಷಏಕವಚನ ದಲ್ಲಿ ಆರತ ಎಂದು ರೂಪವಾಗುತ್ತದೆ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಆಡಾಗಮ. ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ. ಉದಾತ್ತವುಳ್ಳ ತಿಙಂತ ಪರವಾದುದರಿಂದ **ತಿಙಿಚೋ-ದಾತ್ತವತಿ** (ಪಾ. ಸೂ. ೮-೧-೭೧) ಎಂಬುದರಿಂದ ಗತಿಗೆ ಅನುದಾತ್ತಸ್ವರ ಬರುತ್ತದೆ.

**ತತ್ಸಾರ**—ತ್ಸರ ಛದ್ಮಗತೌ ಧಾತು. ಲಿಟ್ ಪ್ರಥಮಪುರುಷಏಕವಚನದಲ್ಲಿ ತಿಪಿಗೆ ಣಲಾದೇಶ. ಧಾತು ವಿಗೆ ದ್ವಿತ್ವಾದಿ **ಅತ ಉಪಧಾಯಾಃ** (ಪಾ. ಸೂ ೭-೨-೧೧೬) ಎಂಬುದರಿಂದ ಧಾತೂಪಧೆಗೆ ವೃದ್ಧಿ. ತಿಙಂತ ನಿಘಾತಸ್ವರ ಬರುತ್ತದೆ.

**ಯುಜ್ಯೇಭಿಃ**—ಯುಜಿರ್ ಯೋಗೇ ಧಾತು. ಅರ್ಹಾರ್ಥದಲ್ಲಿ ಯತ್ ಪ್ರತ್ಯಯ. **ಯತೋಽನಾವಃ** (ಪಾ. ಸೂ ೬-೧-೨೧೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಇದಕ್ಕೆ ಭಿಸ್ ಪರವಾದಾಗ **ಬಹುಲಂ ಛಂದಸಿ** ಎಂಬುದರಿಂದ ಐಸ್ ಭಾವ ವಿಕಲ್ಪವಾದುದರಿಂದ **ಬಹುವಚನೇ ಝಲ್ಯೇತ್** ಎಂಬುದರಿಂದ ಏತ್ವ.

**ಶ್ವಾಂತಮ್**—ಶ್ರಾಂತಮ್ ಎಂದು ರೂಪವಾದಾಗ ಛಾಂದಸವಾಗಿ ರೇಫಕ್ಕೆ ವಕಾರಾದೇಶ ಬರುತ್ತದೆ.

**ಮೃಶತೇ**—ಮೃಷ ಆಮರ್ಶನೇ. ಧಾತು. ತುದಾದಿ. ಲಟ್ ಪ್ರಥಮಪುರುಷಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ಮುದೇ**—ಮುದ ಹರ್ಷೇ ಧಾತು. **ಕ್ವಿಪ್ ಚ** ಎಂಬುದರಿಂದ ಕ್ವಿಪ್ ಪ್ರತ್ಯಯ. ಚತುರ್ಥೀಏಕವಚ ನಾಂತರೂಪ. **ಸಾವೇಕಾಚಸ್ತೃತೀಯಾದಿಃ** (ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತ ಸ್ವರ ಬರುತ್ತದೆ.

**ಗಚ್ಛಂತಿ**—ಗಮ್ಲೃ ಗತೌ ಧಾತು. ಲಟ್ ಪ್ರಥಮಪುರುಷಬಹುವಚನಾಂತರೂಪ ಯದ್ಯೋಗವಿರುವುದ ರಿಂದ ನಿಘಾತಸ್ವರ ಬರುವುದಿಲ್ಲ. ಲಸಾರ್ವಧಾತುಕ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ

**ಉಶತೀಃ**—ವಶ ಕಾಂತೌ ಧಾತು. ಅದಾದಿ. ಲಟಿಗೆ ಶತ್ರಾದೇಶ. **ಅದಿಪ್ರಭೃತಿಭ್ಯಃ ಶಪಃ** ಎಂಬು ದರಿಂದ ಶಪಿಗೆ ಲುಕ್. **ಸಾರ್ವಧಾತುಕಮಪಿತ್** ಎಂಬುದರಿಂದ ಪ್ರತ್ಯಯ ಙಿತ್ತಾದುದರಿಂದ **ಗ್ರಹಿಜ್ಯಾವಯಿ**—(ಪಾ. ಸೂ. ೬ ೧-೧೬) ಎಂಬುದರಿಂದ ಧಾತುವಿಗೆ ಸಂಪ್ರಸಾರಣ. ಸ್ತ್ರೀತ್ವದಲ್ಲಿ **ಉಗಿತಶ್ಚ** (ಪಾ. ಸೂ. ೪-೧-೬) ಎಂಬುದರಿಂದ ಙೀಪ್. ನುಮ್‌ರಹಿತವಾದ ಶತೃವಿನ ಪರದಲ್ಲಿ ಙೀಪ್ ಬಂದುದರಿಂದ **ಶತುರನುಮೋ-ನದ್ಯ**—(ಪಾ. ಸೂ. ೬-೧-೧೭೩) ಎಂಬುದರಿಂದ ಉದಾತ್ತವಾಗುತ್ತದೆ. ಇದಕ್ಕೆ ಜಸ್ ಪರವಾದಾಗ **ಸುಪಾಂ ಸುಲುಕ್**—ಎಂಬುದರಿಂದ ಪೂರ್ವಸವರ್ಣದೀರ್ಘ.

ಅಪಿಷ್ಠಿತಮ್—ಷ್ಠಾ ಗತಿನಿವೃತ್ತೌ. ಧಾತು. ಧಾತ್ವಾದೇಃಷಃಸಃ ಎಂಬುದರಿಂದ ಆದಿಗೆ ಸತ್ವ. ಇದಕ್ಕೆ ಕ್ತ ಪ್ರತ್ಯಯ. ದ್ಯತಿ ಸ್ಯತಿ—(ಪಾ. ಸೂ. ೭-೪-೪೦) ಎಂಬುದರಿಂದ ಧಾತುವಿಗೆ ಇತ್ವ. ಉಪಸರ್ಗಾತ್ಸುನೋತಿ—(ಪಾ ಸೂ. ೮-೩-೬೫) ಎಂಬುದರಿಂದ ಧಾತು ಸಕಾರಕ್ಕೆ ಷತ್ವ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ॥ ೪ ॥

———:o:———

ಸಂಹಿತಾಪಾಠಃ

ಸ ಈಂ ಮೃಗೋ ಅಪ್ಯೋ ವನರ್ಗುರು ಪತ್ವಚ್ಯುಪಮಸ್ಯಾಂ ನಿ ಧಾಯಿ ।
ವ್ಯಬ್ರವೀದ್ವಯುನಾ ಮರ್ತ್ಯೇಭ್ಯೋಽಗ್ನಿರ್ವಿದ್ವಾಁ ಋತಚಿದ್ಧಿ ಸತ್ಯಃ ॥ ೫ ॥

। ಪದಪಾಠಃ ।

ಸಃ । ಈಂ । ಮೃಗಃ । ಅಪ್ಯಃ । ವನರ್ಗುಃ । ಉಪ । ತ್ವಚಿ । ಉಪಽಮಸ್ಯಾಂ । ನಿ । ಧಾಯಿ ।
ವಿ । ಅಬ್ರವೀತ್ । ವಯುನಾ । ಮರ್ತ್ಯೇಭ್ಯಃ । ಅಗ್ನಿಃ । ವಿದ್ವಾನ್ । ಋತಽಚಿತ್ । ಹಿ । ಸತ್ಯಃ ॥ ೫ ॥

ಸಾಯಣಭಾಷ್ಯಂ

ಸ ಈಂ ಸ ಏವಾಗ್ನಿರುಪಮಸ್ಯಾಮುಪಮಾಯಾಮುಪಮಾಸ್ಪದಾಯಾಂ ತ್ವಚ್ಯೋಽಷಧ್ಯಾದಿಭಿರಾಚ್ಛಾದಿತಾಯಾಂ ವೇದ್ಯಾಮುಪ ನಿ ಧಾಯಿ ।:ಉಪಸ್ಥಾಪ್ಯತ ಉತ್ತರತ್ರೋಽಪಭೋಗಾಯ । ಕೀದೃಶಃ ಸಃ । ಮೃಗೋ ಮಾರ್ಜಯಿತಾನ್ವೇಷಣಶೀಲೋ ವಾ । ಮೃಗೋ ಮಾಷ್ಟೇರ್ಗತಿಕರ್ಮಣಃ । ನಿ. ೧-೨೦ । ಇತಿ ಯಾಸ್ಕಃ । ಅಪ್ಯ ಆಪ್ಯೋ ಗಂತವ್ಯಃ । ಅಪಃ ಕರ್ಮ ತತ್ರ ಸಾಧುರ್ವಾ । ವನರ್ಗುರ್ವನಗಾಮೀ ॥ ಋಚ್ಛತೇರ್ಗಮೇಶ್ಚೇದಂ ರೂಪಂ । ಯದ್ವಾ । ಗಮೇರೇವ । ಉಪಪದಸ್ಯ ರುಡಾಗಮಶ್ಛಾಂದಸಃ ॥ ಏವಂಭೂತೋಽಗ್ನಿರ್ಮರ್ತ್ಯೇಭ್ಯೋ ಮರಣಧರ್ಮೇಭ್ಯೋ ಯಜಮಾನಾದಿರೂಪೇಭ್ಯೋ ವಯುನಾನಿ ಪ್ರಜ್ಞಾನಾನ್ಯನುಷ್ಠೇಯಜ್ಞಾನಾನಿ ವ್ಯಬ್ರವೀತ್ । ವಿಶೇಷೇಣ ಬ್ರವೀತಿ । ಉಪದಿಶತಿ । ವಯುನಮಿತಿ ಪ್ರಜ್ಞಾನಾಮ ವಯುನಮಭಿಖ್ಯೇತಿ ತನ್ನಾಮಸು ಪಾಠಾತ್ । ಈದೃಕ್ ಸಾಮರ್ಥ್ಯಮಸ್ತೀತಿ ದರ್ಶಯತಿ । ಅಯಮಗ್ನಿರ್ವಿದ್ವಾನ್ ಸರ್ವಜ್ಞ ಋತಚಿದ್ಯಜ್ಞಸ್ಯೋದಕಸ್ಯ ವಾ ಚೇತಿತಾ ಜ್ಞಾತಾ ಸತ್ಯಃ । ಸತ್ ಕ್ರಿಯಮಾಣಂ ಕರ್ಮ । ತತ್ರ ಸಾಧುಃ । ಸತ್ಸು ಭವೋ ವಾ । ಸತ್ ಫಲಂ ತದರ್ಹತೀತಿ ವಾ । ಸಮ್ಯಕ್ಫಲಪ್ರದ ಇತ್ಯರ್ಥಃ । ಯಸ್ಮಾದಯಮುಕ್ತಸಾಮರ್ಥ್ಯೋಽಪೇತಸ್ತಸ್ಮಾತ್ತಸ್ಯ ಜ್ಞೋಪದೇಶೋ ಯುಕ್ತಃ । ಹಿಶಬ್ದಃ ಪ್ರಸಿದ್ಧೌ ॥

#### ಪ್ರತಿಪದಾರ್ಥ

**ಮೃಗಃ**—ಅನ್ವೇಷಣಕುಶಲನೂ । **ಅಪ್ಯಃ**--( ಸುಲಭವಾಗಿ ) ಸಮೀಪಿಸಬಹುದಾದವನೂ ಅಥವಾ ಕರ್ಮದಲ್ಲಿ ಶ್ರೇಷ್ಠನೂ । **ವನರ್ಗುಃ**—ವನದಲ್ಲಿ ಸಂಚರಿಸುವವನೂ ಆದ । **ಸ ಈಂ**—ಅದೇ ಅಗ್ನಿಯು । **ಉಪಮಸ್ಯಾಂ**—ಮಾದರಿಯಾಗಿರತಕ್ಕ । **ತ್ವಚಿ**—ಚರ್ಮಚೀಲದಂತಿರುವ ವೇದಿಕೆಯಲ್ಲಿ । **ಉಪ ನಿಧಾಯಿ**—ಸ್ಥಾಪಿತನಾಗಿದ್ದಾನೆ । **ವಿದ್ವಾನ್**—ಸರ್ವಜ್ಞನೂ । **ಋತಚಿತ್**—ಯಜ್ಞವನ್ನು ಅನುಭವಿಸುವವನೂ ಅಥವಾ ತಿಳಿದವನೂ । **ಸತ್ಯಃ**—ಸತ್ಯಶೀಲನೂ ಅಥವಾ ಸಜ್ಜನರಲ್ಲಿರುವವನೂ ಅಥವಾ ಫಲಾರ್ಹನೂ ಆದ । **ಅಗ್ನಿ ರ್ಹಿ**—ಅದೇ ಅಗ್ನಿಯು **ಮರ್ತ್ಯೇಭ್ಯಃ**—ಯಜ್ಞಕರ್ತರಾದ ಮಾನವರಿಗೆ । **ವಯುನಾ**— (ಯಜ್ಞಾನುಷ್ಠಾನದ) ಕರ್ತವ್ಯಜ್ಞಾನವನ್ನು । **ವ್ಯಬ್ರವೀತ್**—ವಿಶೇಷವಾದ ರೀತಿಯಲ್ಲಿ ಉಪದೇಶಮಾಡಿದನು.

#### ಭಾವಾರ್ಥ

ಅನ್ವೇಷಣಕುಶಲನೂ, ಸುಲಭವಾಗಿ ಸಮೀಪಿಸಬಹುದಾದವನೂ, ವನದಲ್ಲಿ ಸಂಚರಿಸುವವನೂ ಆದ ಅಗ್ನಿಯು ಮಾದರಿಯಾಗಿರುವ ಚರ್ಮಚೀಲದಂತಿರುವ ವೇದಿಕೆಯಲ್ಲಿ ಸ್ಥಾಪಿತನಾಗಿದ್ದಾನೆ. ಸರ್ವಜ್ಞನೂ ಯಜ್ಞದ ಯೋಗ್ಯತೆಯನ್ನು ತಿಳಿದವನೂ ಸತ್ಯಶೀಲನೂ ಆದ ಅದೇ ಅಗ್ನಿಯು ಯಜ್ಞಕರ್ತರಾದ ಮಾನವರಿಗೆ ಯಜ್ಞಾನುಷ್ಠಾನದ ಕರ್ತವ್ಯಜ್ಞಾನವನ್ನು ವಿಶೇಷವಾದ ರೀತಿಯಲ್ಲಿ ಉಪದೇಶಮಾಡಿದನು.

### English Tranlation

He, the searcher, the accessible, the dweller in woods, has been placed (amidst the fuel), as in the similitude of (an enveloping) skin: the wise Agni, the appreciater of sacrificc, the veracious, has declared to mortals (the knowledge of) their religious duties.

#### ವಿಶೇಷವಿಷಯಗಳು

**ಮೃಗಃ**—**ಮೃಗೋ ಮಾರ್ಷ್ಟೇರ್ಗತಿಕರ್ಮಣಃ** (ನಿ. ೧-೨೦) ಗತ್ಯರ್ಥಕವಾದ **ಮೃಜ್** ಧಾತುವಿನಿಂದ ನಿಷ್ಪನ್ನವಾಗಿ **ನಿತ್ಯಂ ಹ್ಯಸೌ ಗಚ್ಛತಿ** ಇವನು ನಿತ್ಯಸಂಚಾರಿ ಎಂಬರ್ಥವನ್ನು ಕೊಡುತ್ತದೆ. **ಅನ್ವೇಷಣ ಶೀಲೋ ವಾ** ಎಂದರೆ ತನ್ನ ಆಹಾರವಾದ ವೃಕ್ಷಲತಾದಿಗಳನ್ನು ಅನ್ವೇಷಣ ಮಾಡುವುದರಲ್ಲಿ ಕುಶಲನು ಎಂದೂ ಸಾಯಣರು ವಿವರಿಸಿದ್ದಾರೆ. ಆದುದರಿಂದಲೇ,

**ವನರ್ಗುಃ**—**ವನಗಾಮೀ** । ವನದಲ್ಲಿ ಸಂಚರಿಸುವವನು.

**ಜಾಮಿಃ ಸಿಂಧೂನಾಂ ಭ್ರಾತೇವ ಸ್ವಸ್ರಾಮಿಭ್ಯಾನ್ನ ರಾಜಾ ವನಾನ್ಯತ್ತಿ ।**
**ಯದ್ವಾತಜಾತೋ ವನಾ ವ್ಯಸ್ಥಾದಗ್ನಿರ್ಹ ದಾತಿ ರೋಮಾ ಪೃಥಿವ್ಯಾಃ ॥**
(ಋ. ಸಂ. ೧-೬೫-೪)

ಇತ್ಯಾದಿ ಋಕ್ಕುಗಳಲ್ಲಿ ವರ್ಣಿಸಿರುವಂತೆ ವನದಲ್ಲಿ ಸಂಚರಿಸಿ ವನಗಳನ್ನು ಆಕ್ರಮಿಸುವುದರಿಂದ ಈ ಎರಡು ವಿಶೇಷಣಗಳು ಅಗ್ನಿಯ ಸ್ವರೂಪವನ್ನು ತಿಳಿಸುತ್ತವೆ. ನಿರುಕ್ತಕಾರರು,

ತನೂತ್ಯಜೇವ ತಸ್ಕರಾ ವನರ್ಗೂ ರಶನಾಭಿರ್ದಶಭಿರಭ್ಯಧೀತಾಂ ।
ಇಯಂ ತೇ ಅಗ್ನೇ ನವ್ಯಸೀ ಮನೀಷಾ ಯುಕ್ಷ್ವಾ ರಥಂ ನ ಶುಚಯದ್ಭಿರಂಗೈಃ ।

(ಋ. ಸಂ. ೧೦-೪-೬)

ಎಂಬ ಋಕ್ಕನ್ನು ಪಠಿಸಿ **ವನರ್ಗೂ ವನಗಾಮಿನೌ** (ಅಗ್ನಿಮಂಥನ ಬಾಹೂ) ಎಂದು ಅಗ್ನಿಸ್ತುತಿಯ ಕಾಲದಲ್ಲಿ ಪ್ರಯೋಗಿಸಿರುವ ಈ ಪದದ ಅರ್ಥವನ್ನು ವಿವರಿಸಿದ್ದಾರೆ (ನಿ. ೬-೧೪).

**ಸ ಈಂ**—ಸ ಏವಾಗ್ನಿರೂಪಂ ಎಂದು ನಿರ್ಧಾರ ರೂಪದಲ್ಲಿದೆ. ಈಂ ಎಂಬ ಪದಕ್ಕೆ ಪ್ರತ್ಯೇಕವಾದ ಅರ್ಥವಿಲ್ಲ.

ಅಥ ಯೇ ಪ್ರವೃತ್ತೇಽರ್ಥೇಽಮಿತಾಕ್ಷರೇಷು ಗ್ರಂಥೇಷು ವಾಕ್ಯಪೂರಣಾ ಆಗಚ್ಛಂತಿ ಪದ ಪೂರಣಾಸ್ತೇ ಮಿತಾಕ್ಷರೇಷ್ವನರ್ಥಕಾಃ ಕಮೀಮಿದ್ವಿತಿ । (ನಿ. ೧-೯).

ಈ ನಿರುಕ್ತಭಾಷ್ಯವು ಈ ರೀತಿಯಿದೆ—**ಅನ್ಯೈರೇವ ಪದೈರ್ವಿವಕ್ಷಿತೇಽರ್ಥೇ ಸಮಾಪ್ತೇ ಸತಿ ಯೇ ಶಬ್ದಾ ಈಮಿತ್ಯಾದಯಃ ಪ್ರಯುಕ್ತಾಸ್ತೇ ಶಬ್ದಾ ಅಮಿತಾಕ್ಷರೇಷು ಛಂದೋರಾಹಿತ್ಯೇನ ಪರಿಮಿತಾಕ್ಷರ-ರಹಿತೇಷು ಬ್ರಾಹ್ಮಣಾದಿವಾಕ್ಯೇಷು ವಾಕ್ಯಪೂರಣಾರ್ಥಾ ದ್ರಷ್ಟವ್ಯಾಃ ।** ಛಂದಸ್ಸುಗಳ ನಿಯಮವಿಲ್ಲದವೂ, ಅಕ್ಷರ ಸಂಖ್ಯೆಗಳ ನಿಯಮವಿಲ್ಲದವೂ ಆದ ಬ್ರಾಹ್ಮಣ ಮತ್ತು ಇತರ ಸಜಾತೀಯ ವಾಕ್ಯಗಳಲ್ಲಿ **ಈಂ** ಎಂಬ ಪದವು ಕೇವಲ ವಾಕ್ಯಪೂರಣಕ್ಕಾಗಿ ಪ್ರಯೋಗಿಸಲ್ಪಟ್ಟಿರುವುದು. ಮತ್ತು **ಮಿತಾಕ್ಷರೇಷು ಛಂದೋಯುಕ್ತೇಷು ಗ್ರಂಥೇಷು ಪಾದಪೂರಣಾರ್ಥಾಃ । ತೇ ಚ ಕಮೀಮಿತ್ಯಾದಯಃ ।** ಛಂದಸ್ಸುಗಳ ನಿಯಮಕ್ಕೆ ಒಳಗಾದವೂ, ಅಕ್ಷರಗಳ ಸಂಖ್ಯೆಯಲ್ಲಿ ನಿಯಮವುಳ್ಳವೂ ಆದ ಋಕ್ಕುಗಳು ಮತ್ತು ಸಜಾತೀಯವಾದ ವಾಕ್ಯಗಳಲ್ಲಿ ಪಾದಪೂರಣಕ್ಕಾಗಿ ಉಪಯೋಗಿಸಲ್ಪಡುವುವು ಎಂದು **ಈಂ** ಇತ್ಯಾದಿ ಪದಗಳ ಪ್ರಯೋಗದ ವಿಷಯವನ್ನು ವಿವರಿಸಿರುವರು.

**ಋತಚಿತ್—ಯಜ್ಞಸ್ಯ ಉದಕಸ್ಯ ವಾ ಚೇತಿತಾ ಜ್ಞಾತಾ ।** ಯಜ್ಞವನ್ನು ಅಥವಾ ಉದಕವನ್ನು ತಿಳಿಯುವವನು. ಈ ವಿಶೇಷಣವನ್ನು ಹಿಂದೆಯೇ ವಿವರಿಸಿದೆ.

**ವಯುನಾ—ವಯುನಮಿತಿ ಪ್ರಜ್ಞಾನಾಮ ।** ವಯುನ ಶಬ್ದದ ವಿಶೇಷವಿಷಯವನ್ನು ಹಿಂದೆ ಉದಾಹರಣೆಗಳೊಂದಿಗೆ ತಿಳಿಸಿದೆ.

**ಅಗ್ನಿರ್ಹಿ ವಯುನಾ ವ್ಯಬ್ರವೀತ್**—ಅಗ್ನಿಯು ಕರ್ತವ್ಯಜ್ಞಾನವನ್ನು ಪದೇಶಿಸಿದನು.

**ಅಥಾಸ್ಯ ಹಸ್ತಂ ಗೃಹ್ಣಾತಿ । ಇಂದ್ರಸ್ಯ ಬ್ರಹ್ಮಚಾರ್ಯಸ್ಯಗ್ನಿರಾಚಾರ್ಯಸ್ತವಾಹಮಾಚಾರ್ಯಸ್ತವಾ-ಸಾವಿತ್ಯೇತೇ ।**

(ಶ. ಬ್ರಾ. ೧೧-೫-೪-೨)

ಇತ್ಯಾದಿ ವಾಕ್ಯಗಳಲ್ಲಿ ಅಗ್ನಿಯನ್ನು ಆಚಾರ್ಯನೆಂದು ಸ್ತುತಿಸಿ ಅವನಿಂದಲೇ ಎಲ್ಲಾ ಕರ್ತವ್ಯಜ್ಞಾನಗಳೂ ಉಪದೇಶಿಸಲ್ಪಟ್ಟವು ಎಂದಿರುವಂತೆ ಇಲ್ಲಿಯೂ ಸಹ ಆ ವಿಷಯವನ್ನು ಹೇಳಿದೆ.

ವ್ಯಾಕರಣಪ್ರಕ್ರಿಯಾ

**ಮೃಗಃ**—ಮೃಜೂಷ್ ಶುದ್ಧೌ. ಧಾತು. ಇಲ್ಲಿ ಗತ್ಯರ್ಥದಲ್ಲಿ ಪ್ರಯುಕ್ತವಾಗಿದೆ. ಇದರಿಂದ ಮೃಗ ಶಬ್ದವಾಗಿದೆ. ಇದನ್ನು ಯಾಸ್ಕರೂ ಮೃಗೋ ಮಾರ್ಷ್ಟೇರ್ಗತಿಕರ್ಮಣಃ (ನಿರು. ೧-೨೦) ಎಂದು ಹೇಳಿರುತ್ತಾರೆ. ಕ ಪ್ರತ್ಯಯ. ವ್ಯತ್ಯಯದಿಂದ ಕುತ್ವ.

**ಅಪ್ಯಃ**—ಅಪ್ಸು ಸಾಧುಃ ಅಪ್ಯಃ **ತತ್ರಸಾಧುಃ** ಎಂಬುದರಿಂದ ಯತ್ ಪ್ರತ್ಯಯ. ಅಥವಾ ಆಪಲೃ ವ್ಯಾಪ್ತೌ ಧಾತು. ಇದಕ್ಕೆ ಅರ್ಹಾರ್ಥದಲ್ಲಿ ಯತ್ ಪ್ರತ್ಯಯ. ಛಾಂದಸವಾಗಿ ಧಾತುವಿಗೆ ಹ್ರಸ್ವ. **ಯತೋಽನಾವಃ** (ಪಾ. ಸೂ. ೬-೧-೨೧೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ವನರ್ಗುಃ**—ವನಂ ಗಚ್ಛತೀತಿ ವನರ್ಗುಃ ಋಧಾತು ಗಮ್ಲೃ ಧಾತು ಇವುಗಳಿಗೆ ಔಣಾದಿಕಪ್ರತ್ಯಯದಿಂದ ಈ ರೂಪಸಿದ್ಧಿಯಾಗುತ್ತದೆ. ಅಥವಾ ಕೇವಲ ಗಮ್ಲೃ ಧಾತು. ಛಾಂದಸವಾಗಿ ಉಪಪದವಾದ ವನ ಶಬ್ದಕ್ಕೆ ರುಡಾಗಮ ಬರುತ್ತದೆ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ತ್ವೇ**—ಸಪ್ತಮೀ ಏಕವಚನಾಂತರೂಪ. **ಸಾವೇಕಾಚಃ**— (ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಧಾಯಿ**—ಡುಧಾಞ್ ಧಾರಣಪೋಷಣಯೋಃ ಧಾತು. ಛಾಂದಸವಾಗಿ ಕರ್ಮಣಿಯಲ್ಲಿ ಲುಙ್. ಪ್ರಥಮಪುರುಷ ಏಕವಚನದಲ್ಲಿ ತಪ್ರತ್ಯಯ. **ಚಿಣ್‌ಭಾವಕರ್ಮಣೋಃ** (ಪಾ. ಸೂ. ೩-೧-೬೬) ಎಂಬುದರಿಂದ ಚ್ಲಿಗೆ ಚಿಣಾದೇಶ. **ಆತೋ ಯುಕ್ ಚಿಣ್‌ಕೃತೋಃ** ( ಪಾ. ಸೂ. ೭-೩-೩೩ ) ಎಂಬುದರಿಂದ ಧಾತುವಿಗೆ ಯುಕಾಗಮ. **ಚಿಣೋ ಲುಕ್** (ಪಾ. ಸೂ. ೬-೪-೧೦೪) ಎಂಬುದರಿಂದ ತಶಬ್ದಕ್ಕೆ ಲುಕ್. **ಬಹುಲಂ ಛಂದಸ್ಯಮಾಙ್‌ಯೋಗೇಽಪಿ.** (ಪಾ. ಸೂ. ೬-೪-೭೫) ಎಂಬುದರಿಂದ ಅಡಾಗಮ ಬರುವುದಿಲ್ಲ. ತಿಙಂತನಿಘಾತಸ್ವರ ಬರುತ್ತದೆ.

**ಅಬ್ರವೀತ್**—ಬ್ರೂಞ್ ವ್ಯಕ್ತಾಯಾಂ ವಾಚಿ. ಧಾತು. ಛಾಂದಸವಾಗಿ ವರ್ತಮಾನಾರ್ಥದಲ್ಲಿ ಲಙ್. ಪ್ರಥಮಪುರುಷಏಕವಚನದಲ್ಲಿ ತಿಪ್. ಇಕಾರ ಲೋಪ. **ಅದಿಪ್ರಭೃತಿಭ್ಯಃಶಪಃ** ಎಂಬುದರಿಂದ ಶಪಿಗೆ ಲುಕ್. **ಬ್ರುವ ಈಟ್** (ಪಾ. ಸೂ. ೭-೩-೯೩) ಎಂಬುದರಿಂದ ಪ್ರತ್ಯಯಕ್ಕೆ ಈಟಾಗಮ. ಪ್ರತ್ಯಯವನ್ನು ನಿಮಿತ್ತೀಕರಿಸಿ ಧಾತುವಿನ ಇಕಿಗೆ ಗುಣ, ಅವಾದೇಶ. ಅಂಗಕ್ಕೆ ಅಡಾಗಮ. ತಿಙಂತನಿಘಾತಸ್ವರ ಬರುತ್ತದೆ.

**ವಿದ್ವಾನ್**—ವಿದ ಜ್ಞಾನೇ ಧಾತು. ಲಟಿಗೆ ಶತೃ ಬಂದಾಗ **ವಿದೇಃ ಶತುರ್ವಸುಃ** (ಪಾ. ಸೂ. ೭-೧-೩೬) ಎಂಬುದರಿಂದ ಅದಕ್ಕೆ ವಸುರಾದೇಶ. ಪ್ರಥಮಾವಿಭಕ್ತಿಏಕವಚನದಲ್ಲಿ ವಿದ್ವಾನ್ ಎಂದು ರೂಪವಾಗುತ್ತದೆ. ಪ್ರತ್ಯಯ ಸ್ವರದಿಂದ ಅಕಾರ ಉದಾತ್ತವಾಗುತ್ತದೆ.

**ಋತಚಿತ್**— ಚಿತೀ ಸಂಜ್ಞಾನೇ ಧಾತು. **ಕ್ವಿಪ್‌ಚ** ಎಂಬುದರಿಂದ ಕ್ವಿಪ್ ಪ್ರತ್ಯಯ. ಋತಂ ಚೇತತಿ ಇತಿ ಋತಚಿತ್. **ಗತಿಕಾರಕೋಪಪದಾತ್‌ಕೃತ್** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರ ಪದಪ್ರಕೃತಿಸ್ವರ ಬರುತ್ತದೆ.

**ಸತ್ಯಃ**—ಸತ್ಸು ಭವಃ ಸತ್ಯಃ ಅಥವಾ ಸತ್ ಅರ್ಹತಿ ಸತ್ಯಃ **ಭವೇ ಛಂದಸಿ** (ಪಾ. ಸೂ. ೪ ೪ ೧೧೦) ಎಂಬುದರಿಂದ ಯ ಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ॥ ೫ ॥

ಇಲ್ಲಿಗೆ ನೂರನಲವತ್ತೈದನೆಯ ಸೂಕ್ತವು ಮುಗಿದುದು.



## ನೂರನಲವತ್ತಾರನೆಯ ಸೂಕ್ತವು

**ತ್ರಿಮೂರ್ಧಾನಮಿತಿ ಪಂಚರ್ಚಂ ಷಷ್ಠಂ ಸೂಕ್ತಂ ದೈರ್ಘತಮಸಂ । ಆಗ್ನೇಯಂ ಪೂರ್ವತ್ರಾಗ್ನೇಯಂ ತು ತದಿತ್ಯುಕ್ತತ್ವಾತ್ । ತ್ರಿಮೂರ್ಧಾನಮಿತ್ಯನುಕ್ರಮಣಿಕಾ ॥ ಪ್ರಾತರನುವಾಕಾಶ್ವಿನಶಸ್ತ್ರಯೋಸ್ತ್ರೈಷ್ಟುಭೇ ಛಂದಸೀದಮಾದಿಸೂಕ್ತತ್ರಯಸ್ಯ ವಿನಿಯೋಗಃ। ಅಥೈತಸ್ಯಾ ಇತಿ ಖಂಡೇ ಸೂತ್ರಿತಂ । ತ್ರಿಮೂರ್ಧಾನಮಿತಿ ತ್ರೀಣಿ । ಅ ೪-೧೩ । ಇತಿ ॥**

ಅನುವಾದವು—**ತ್ರಿಮೂರ್ಧಾನಂ** ಎಂಬ ಈ ಸೂಕ್ತವು ಇಪ್ಪತ್ತೊಂದನೆಯ ಅನುವಾಕದಲ್ಲಿ ಆರನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವವು. ಈ ಸೂಕ್ತಕ್ಕೆ ದೀರ್ಘತಮಾ ಔಚಥ್ಯಃ ಎಂಬುವನು ಋಷಿಯು. ಹಿಂದೆಯೇ ಹೇಳಿರುವಂತೆ ಈ ಸೂಕ್ತಕ್ಕೂ ಅಗ್ನಿಯೇ ದೇವತೆಯು. ಅನುಕ್ರಮಣಿಕೆಯಲ್ಲಿ **ತ್ರಿಮೂರ್ಧಾನಂ** ಎಂದು ಮೊದಲಾಗಿ ಹೇಳಿರುವುದು. ಪ್ರಾತರನುವಾಕ ಮತ್ತು ಆಶ್ವಿನಶಸ್ತ್ರಮಂತ್ರಗಳ ತ್ರಿಷ್ಟುಪ್ ಛಂದಸ್ಸಿನ ಋಕ್ಕುಗಳ ಪಠನಕ್ಕಾಗಿ ಈ ಸೂಕ್ತವೂ ಮುಂದಿನ ಎರಡು ಸೂಕ್ತಗಳೂ ಎಂದರೆ ಒಟ್ಟು ಮೂರು ಸೂಕ್ತಗಳ ವಿನಿಯೋಗವಿರುವುದೆಂದು ಆಶ್ವಲಾಯನ ಶ್ರೌತಸೂತ್ರದ **ಅಥೈತಸ್ಯಾ** ಎಂಬ ಖಂಡದ **ತ್ರಿಮೂರ್ಧಾನಮಿತಿ ತ್ರೀಣಿ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಅ. ೪-೧೩).

———— :o: ————

॥ ಓಂ ॥

### ಸೂಕ್ತ—೧೪೬

॥ ಮಂಡಲ—೧ ॥ ಅನುವಾಕ—೨೧ ॥ ಸೂಕ್ತ—೧೪೬ ॥

॥ ಅಷ್ಟಕ— ೨ ॥ ಅಧ್ಯಾಯ— ೨ ॥ ವರ್ಗ— ೧೫ ॥

ಸೂಕ್ತದಲ್ಲಿರುವ ಋಕ್ಸಂಖ್ಯೆ-೫ ॥

॥ ಋಷಿಃ—ದೀರ್ಘತಮಾ ಔಚಥ್ಯಃ ॥

॥ ದೇವತಾ—ಅಗ್ನಿಃ ॥

॥ ಛಂದಃ—ತ್ರಿಷ್ಟುಪ್ ॥

ಸಂಹಿತಾಪಾಠಃ

ತ್ರಿಮೂರ್ಧಾನಂ ಸಪ್ತರಶ್ಮಿಂ ಗೃಣೀಷೇಽನೂನಮಗ್ನಿಂ ಪಿತ್ರೋರುಪಸ್ಥೇ ।
ನಿಷತ್ತಮಸ್ಯ ಚರತೋ ಧ್ರುವಸ್ಯ ವಿಶ್ವಾ ದಿವೋ ರೋಚನಾಪಪ್ರಿವಾಂಸಂ ॥
॥ ೧ ॥

। ಪದಪಾಠಃ ।

ತ್ರಿಽಮೂರ್ಧಾನಂ । ಸಪ್ತಽರಶ್ಮಿಂ । ಗೃಣೀಷೇ । ಅನೂನಂ । ಅಗ್ನಿಂ । ಪಿತ್ರೋಃ । ಉಪಽಸ್ಥೇ ।
ನಿಽಸತ್ತಂ । ಅಸ್ಯ । ಚರತಃ । ಧ್ರುವಸ್ಯ । ವಿಶ್ವಾ । ದಿವಃ । ರೋಚನಾ । ಆಪಪ್ರಿಽವಾಂಸಂ ॥ ೧ ॥

ಸಾಯಣಭಾಷ್ಯಂ

ಅನಯಾಗ್ನಿರ್ಯಜ್ಞರೂಪೇಣ ಸ್ತೂಯತೇ । ತ್ರಿಮೂರ್ಧಾನಂ ಸವನತ್ರಯರೂಪಮೂರ್ಧತ್ರಯೋಪೇತಂ ॥ ದ್ವಿತ್ರಿಭ್ಯಾಂ ಷಾಮೂರ್ಧ್ನಃ ಬಹುವ್ರೀಹಾವಿತ್ಯುತ್ತರಪದಾಂತೋದಾತ್ತತ್ವಂ ॥ ಕಿಂಚ ಸಪ್ತರಶ್ಮಿಂ ನಿಯಾಮಕಸಪ್ತಚ್ಛಂದೋಯುಕ್ತಂ ಅನೂನಮವಿಕಲಂ ಸಂಪೂರ್ಣಫಲಂ ಅಗ್ನಿಮಗ್ನಿಸಾಧ್ಯಮಂಗನಾದಿಗುಣಯುಕ್ತಂ ವಾ ಪಿತ್ರೋರುಪಸ್ಥೇ ದ್ಯಾವಾಪೃಥಿವ್ಯೋರುತ್ಸಂಗೇ ನಿಷತ್ತಂ ನಿಷಣ್ಣಂ । ಮಧ್ಯೇ ವರ್ತಮಾನಮಿತ್ಯರ್ಥಃ । ಭೂಮಿಸ್ಥದ್ರವ್ಯೇಣ ದ್ಯುಲೋಕಸ್ಥದೇವತಾಭಿಶ್ಚ ಸಾಧ್ಯತ್ವಾದಿತಿ ಯಾವತ್। ಕಿಂಚ ಧ್ರುವಸ್ಯ ನಿಶ್ಚಲಸ್ಯ ಚರತೋ ಹವಿರ್ಭಕ್ಷಯತೋಽಸ್ಯಾಗ್ನೇಃ ಸಂಬಂಧಿನಂ ಯಜ್ಞಂ ದಿವೋ ದ್ಯುಲೋಕಾದಾಗತಾನಿ ವಿಶ್ವಾನಿ ರೋಚನಾನಿ ದೇವವಿಮಾನಾನ್ಯಾಪಪ್ರಿವಾಂಸಂ ಸರ್ವತಃ ಪೂರಯಿತಾರಂ ಗೃಣೀಷೇ । ಗೃಣೀಹಿ । ಸ್ತುಹಿ । ಯದ್ವಾ । ಅಯಮಗ್ನಿರೇವೋಚ್ಯತೇ । ತ್ರಿಮೂರ್ಧವದತ್ರ ಕ್ಷಿತ್ಯಂತರಿಕ್ಷದ್ಯುಲೋಕಾಖ್ಯಸ್ಥಾನತ್ರಯೋಪೇತಂ । ಲೋಕತ್ರಯವ್ಯಾಪ್ತಮಿತ್ಯರ್ಥಃ । ಗಾರ್ಹಪತ್ಯಾದಿಸ್ಥಾನತ್ರಯವರ್ತಿನಂ ವಾ । ಸಪ್ತರಶ್ಮಿಂ ಸಪ್ತಜ್ವಾಲಂ ಅನೂನಮನ್ಯೂನಂ ಪಿತ್ರೋರ್ದ್ಯಾವಾಪೃಥಿವ್ಯೋರುಪಸ್ಥ ಉತ್ಸಂಗೇ ನಿಷತ್ತಂ ॥ ನಸತ್ತನಿಷತ್ತೇತಿ ನಿಪಾತನಾನ್ನಿಷ್ಠಾನತ್ವಾಭಾವಃ ॥ ನಿಷಣ್ಣಂ ಆಪಪ್ರಿವಾಂಸಂ ಸರ್ವತಃ ಪೂರಯಂತಂ ಕಾಮಾನಾಂ ಉಕ್ತಲಕ್ಷಣವಿಶಿಷ್ಟಮಗ್ನಿಂ ಗೃಣೀಷೇ । ಗೃಣೀಹಿ । ಸ್ತುಹಿ । ಕಿಂಚ ಚರತಃ ಸರ್ವತ್ರ ಜ್ವಾಲಾಭಿರ್ಗಚ್ಛತೋ ಧ್ರುವಸ್ಯ ಧೃತತ್ವಾದವಿಚಲಿತಸ್ಯ ದಿವೋ ದ್ಯೋತಮಾನಸ್ಯಾಗ್ನೇರ್ವಿಶ್ವಾ ಸರ್ವಾಣಿ ರೋಚನಾ ರೋಚಮಾನಾನಿ ತೇಜಾಂಸಿ ಸರ್ವತ್ರ ವ್ಯಾಪ್ನುವಂತೀತಿ ಶೇಷಃ । ಈದೃಶಮಗ್ನಿಂ ಸ್ತುಹೀತ್ಯಂತರಾತ್ಮನಃ ಪ್ರೈಷಃ ॥

ಪ್ರತಿಪದಾರ್ಥ

ತ್ರಿಮೂರ್ಧಾನಂ-ಸವನತ್ರಯ ರೂಪವಾದ ಮೂರುತಲೆಯುಳ್ಳವನೂ(ಅಥವಾ)ಭೂಮಿ, ಅಂತರಿಕ್ಷ ಮತ್ತು ದ್ಯುಲೋಕಗಳೆಂಬ ಮೂರು ಲೋಕಗಳನ್ನು (ವ್ಯಾಪ್ತ) ನೂ (ಅಥವಾ) ದಕ್ಷಿಣಾಗ್ನಿ, ಗಾರ್ಹಪತ್ಯ, ಆಹವನೀಯ

ಗಳೆಂಬ ಮೂರು ಸ್ಥಾನಗಳುಳ್ಳವನೂ | **ಸಪ್ತರಶ್ಮಿಂ**—ಏಳು ಛಂದಸ್ಸುಗಳುಳ್ಳವನೂ ಅಥವಾ ಏಳು ಜ್ವಾಲೆಗಳುಳ್ಳವನೂ | **ಅನೂನಂ**—ವಿಕಲರಹಿತನೂ | **ಪಿತ್ರೋಃ**—ದ್ಯಾವಾಪೃಥಿವಿಗಳ ತೊಡೆಯಮೇಲೆ (ನಡುವೆ) | **ನಿಷತ್ತಂ**-ಕುಳಿತಿರುವವನೂ, (ವ್ಯಾಪಿಸಿರುವವನೂ) | **ಆ ಪಪ್ರಿವಾಂಸಂ**—(ಇಷ್ಟಾರ್ಥಗಳನ್ನು) ಪೂರೈಸುವವನೂ ಆದ | **ಅಗ್ನಿಂ**—ಅಗ್ನಿಯನ್ನು | **ಗೃಣೀಷೆ**—ಸ್ತೋತ್ರಮಾಡು | **ಚರತಃ**—ಹವಿಸ್ಸನ್ನು ಸೇವಿಸುವವನೂ ಅಥವಾ (ಜ್ವಾಲೆಗಳಿಂದ ಸಕಲದೇಶದಲ್ಲೂ) ಸಂಚರಿಸುವವನೂ | **ಧ್ರುವಸ್ಯ**—ಅಚಲನಾಗಿರುವವನೂ | **ದಿವಃ**—ಪ್ರಕಾಶಮಾನನೂ ಆದ | **ಅಸ್ಯ**—ಈ ಅಗ್ನಿಯ | **ವಿಶ್ವಾ ರೋಚನಾ**—ಸಮಸ್ತ ತೇಜಸ್ಸುಗಳೂ (ಎಲ್ಲಾ ಕಡೆಯೂ ವ್ಯಾಪಿಸುತ್ತವೆ).

ಭಾವಾರ್ಥ

ಸವನತ್ರಯರೂಪವಾದ ಮೂರು ತಲೆಯುಳ್ಳವನೂ, ಸಪ್ತಛಂದಾತ್ಮಕನೂ, ವಿಕಲರಹಿತನೂ, ದ್ಯಾವಾಪೃಥಿವಿಗಳ ನಡುವೆಯೆಲ್ಲಾ ವ್ಯಾಪಿಸಿರುವವನೂ, ಇಷ್ಟಾರ್ಥಗಳನ್ನು ಪೂರೈಸುವವನೂ ಆದ ಅಗ್ನಿಯನ್ನು ಸ್ತೋತ್ರಮಾಡು. ಜ್ವಾಲೆಗಳಿಂದ ಸರ್ವತ್ರ ಸಂಚರಿಸುವವನೂ, ಅಚಲನೂ ಮತ್ತು ಪ್ರಕಾಶಮಾನನೂ ಆದ ಈ ಅಗ್ನಿಯ ಸಮಸ್ತ ತೇಜಸ್ಸುಗಳೂ ಎಲ್ಲಾ ಕಡೆಯೂ ವ್ಯಾಪಿಸುತ್ತವೆ.

## English Translation

Glorify the three-headed, seven-rayed Agni ; who is subject to no diminution, seated on the lap of his parents, (heaven and earth) ; and gratifying all (desires); as the universal radiance of the divine (Agni), whether moving or stationary, (spreads around).

ವಿಶೇಷವಿಷಯಗಳು

**ತ್ರಿಮೂರ್ಧಾನಂ—ಅನಯಾಗ್ನಿರ್ಯಜ್ಞರೂಪೇಣ ಸ್ತೂಯತೇ |** ಈ ವಿಶೇಷಣಕ್ಕೂ **ಸಪ್ತರಶ್ಮಿಂ** ಎಂಬ ವಿಶೇಷಣಕ್ಕೂ ಮೊದಲು ಯಜ್ಞಪರ್ಯಾಯವಾಗಿಯೂ ಅನಂತರ ಸಾಕ್ಷಾದಗ್ನಿಪರ್ಯಾಯವಾಗಿಯೂ ಅರ್ಥಮಾಡಿದೆ. **ತ್ರಿಮೂರ್ಧಾನಂ | ಸವನತ್ರಯರೂಪಮೂರ್ಧತ್ರಯೋಪೇತಂ | ಯದ್ವಾ |** ಅಯಮಗ್ನಿರೇವೋಚ್ಯತೇ | **ತ್ರಿಮೂರ್ಧವದತ್ರ ಕ್ಷಿತ್ಯಂತರಿಕ್ಷದ್ಯುಲೋಕಾಖ್ಯಸ್ಥಾನತ್ರಯೋಪೇತಂ ಲೋಕತ್ರಯವ್ಯಾಪ್ತಮಿತ್ಯರ್ಥಃ | ಗಾರ್ಹಪತ್ಯಾದಿಸ್ಥಾನತ್ರಯವರ್ತಿನಂ ವಾ ||** ಸವನತ್ರಯರೂಪವಾದ ಮೂರು ತಲೆಯುಳ್ಳವನೂ, ಅಥವಾ ಭೂಮಿ, ಅಂತರಿಕ್ಷ ಮತ್ತು ಸ್ವರ್ಗಲೋಕಗಳೆಂಬ ಮೂರು ಲೋಕಗಳಲ್ಲೂ ವ್ಯಾಪಿಸಿರುವವನೂ ಅಥವಾ ದಕ್ಷಿಣಾಗ್ನಿ, ಗಾರ್ಹಪತ್ಯ, ಆಹವನೀಯಗಳೆಂಬ ಮೂರು ಸ್ಥಾನಗಳುಳ್ಳವನೂ ಎಂದು ಮೂರು ವಿಧವಾಗಿ ಅರ್ಥಮಾಡಿದ್ದಾರೆ. Oldenberg ಎಂಬ ಜರ್ಮನ್ ಪಂಡಿತನು ಈ ಸೂಕ್ತವನ್ನು ಆಂಗ್ಲಭಾಷೆಗೆ ಪರಿವರ್ತನಮಾಡಿ ವಿಶೇಷ ವಿಷಯವನ್ನು ಬರೆಯುವಾಗ ಸಾಯಣರ ಈ ಮೂರು ಅರ್ಥಗಳನ್ನು ನಿರ್ದೇಶಿಸಿ ಹೀಗೆ ಹೇಳಿದ್ದಾನೆ.

Sayana refers the three heads of Agni to the three Savanas, or the three worlds, or the three sacrificial fires. The last explanation seems to be most probable. ಈ ಮೂರು ಅರ್ಥಗಳಲ್ಲಿ ಮೂರನೆಯದು ಎಂದರೆ ದಕ್ಷಿಣಾಗ್ನಿ, ಗಾರ್ಹಪತ್ಯ, ಆಹವನೀಯ ಎಂಬ ಮೂರು ಸ್ಥಾನ

ಳುಳ್ಳವನು ಎಂಬರ್ಥವೇ ಹೆಚ್ಚು ಸಮಂಜಸವಾಗಿದೆ. ಆದರೂ ಮೊದಲನೆಯ ಅರ್ಥಗಳು ಸಮಂಜಸವಾಗಿಲ್ಲವೆಂದು ಹೇಳುವುದಕ್ಕಾಗುವುದಿಲ್ಲ.

**ದಿವಸ್ಪರಿ ಪ್ರಥಮಂ ಜಜ್ಞೇ ಅಗ್ನಿರಸ್ಮದ್ದ್ವಿತೀಯಂ ಪರಿ ಜಾತವೇದಾಃ ।**
**ತೃತೀಯಮಪ್ಸು ನೃಮಣಾ ಅಜಸ್ರಮಿಂಧಾನ ಏನಂ ಜರತೇ ಸ್ವಾಧೀಃ ॥**

( ಋ. ಸಂ. ೧೦-೪೫-೧ )

ಎಂಬ ಋಕ್ಕಿನಲ್ಲಿ ದ್ಯುಲೋಕ, ಪೃಥ್ವೀಲೋಕ ಮತ್ತು ಅಂತರಿಕ್ಷಲೋಕಗಳಲ್ಲಿ ಅಗ್ನಿಯ ಉತ್ಪತ್ತಿಯು ಕ್ರಮವಾಗಿ ಹೇಳಿರುವುದರಿಂದಲೂ ಮತ್ತು ಶತಪಥಬ್ರಾಹ್ಮಣದಲ್ಲಿ

**ದಿವಸ್ಪರಿ ಪ್ರಥಮಂ ಜಜ್ಞೇ ಅಗ್ನಿರಿತಿ । ಪ್ರಾಣೋ ವೈ ದಿವಃ ಪ್ರಾಣಾದು ವಾ ಏಷ ಪ್ರಥಮ-ಮಜಾಯತಾಸ್ಮದ್ದ್ವಿತೀಯಂ ಪರಿ ಜಾತವೇದಾ ಇತಿ ಯದೇನಮದೋ ದ್ವಿತೀಯಂ ಪುರುಷ-ವಿಧೋಽಜನಯತ್ತೃತೀಯಮಪ್ಸ್ವಿತಿ ಯದೇನಮದಸ್ತೃತೀಯ ಮದ್ಭ್ಯೋಽಜನಯನ್ನೃ-ಮಣಾ ಅಜಸ್ರಮಿತಿ ಪ್ರಜಾಪತಿರ್ವೈ ನೃಮಣಾ ಅಗ್ನಿರಜಸ್ರ ಇಂಧಾನ ಏನಂ ಜರತೇ ಸ್ವಾಧೀಃ॥**

(ಶ. ಬ್ರಾ. ೬-೭-೪-೩)

ಎಂಬ ವಾಕ್ಯಗಳಿಂದ ಮೇಲಿನ ಋಕ್ಕಿನಲ್ಲಿ ಹೇಳಿರುವ ಅಭಿಪ್ರಾಯವನ್ನೇ ಹೇಳಿ ಮೂರುಲೋಕಗಳಲ್ಲಿಯೂ ಇರುವ ಅಗ್ನಿಯ ವ್ಯಾಪ್ತಿಯನ್ನು ತಿಳಿಸಿರುವುದರಿಂದಲೂ ಹೀಗೆಯೇ ಇನ್ನೂ ಅನೇಕ ಶ್ರುತಿವಾಕ್ಯಗಳಿಂದ ಈ ಅಂಶವು ತಿಳಿಯುವುದರಿಂದಲೂ ಎರಡನೆಯ ಅರ್ಥವೂ ಹೊಂದಿಕೊಳ್ಳುತ್ತದೆ.

**ಸಪ್ತರಶ್ಮಿಂ—ನಿಯಾಮಕಸಪ್ತಚ್ಛಂದೋಯುಕ್ತಂ ಅಥವಾ ಸಪ್ತಜ್ವಾಲಂ ।** ಏಳು ಛಂದಸ್ಸುಗಳುಳ್ಳವನು ಅಥವಾ ಏಳು ಜ್ವಾಲೆಗಳುಳ್ಳವನು ಎಂದು ಇಲ್ಲಿಯೂ ಎರಡರ್ಥಗಳನ್ನು ಹೇಳಿದೆ. Oldenberg ಎಂಬ ಪಂಡಿತನು ಇಲ್ಲಿಯೂ ಸಹ ತನ್ನ ಅಭಿಪ್ರಾಯವನ್ನು ಹೇಳಿರುವನು

The seven reins (rays) are, according to Sayana, the seven metres or the seven flames of Agni. The last explanation is recommended by III—6-2. But it is possible also to think of the seven Priests.

**ಸಪ್ತ ಹೋತಾರಃ** ಸಾಯಣರು ಹೇಳಿರುವ ಈ ಎರಡು ಅರ್ಥಗಳಲ್ಲಿ ಎರಡನೆಯದೇ ಹೆಚ್ಚು ಹೊಂದಿಕೊಳ್ಳುತ್ತದೆ. ಈ ಅರ್ಥವನ್ನು ಸಮರ್ಥಿಸುತ್ತಾ,

**ಆ ರೋದಸೀ ಅಪೃಣಾ ಜಾಯಮಾನ ಉತ ಪ್ರ ರಿಕ್ಥಾ ಅಧ ನು ಪ್ರಯಜ್ಯೋ ।**
**ದಿವಶ್ಚಿದಗ್ನೇ ಮಹಿನಾ ಪೃಥಿವ್ಯಾ ವಚ್ಯಂತಾಂ ತೇ ವಹ್ನಯಃ ಸಪ್ತಜಿಹ್ವಾಃ ॥**

(ಋ. ಸಂ. ೩-೬-೨)

ಎಂಬ ಋಕ್ಕಿನಲ್ಲಿಯೂ ಸಪ್ತಜಿಹ್ವಾತ್ಮಕವಾದ ಅಗ್ನಿಯ ಸ್ತುತಿಯಿದೆ. ಇದೇ ಅಲ್ಲದೇ,

**ಆ ಯಸ್ಮಿನ್ತ್ಸಪ್ತ ರಶ್ಮಯಸ್ತತಾ ಯಜ್ಞಸ್ಯ ನೇತರಿ ।**
**ಮನುಷ್ವದ್ದೈವ್ಯಮಷ್ಟಮಂ ಪೋತಾ ವಿಶ್ವಂ ತದಿನ್ವತಿ ॥**

(ಋ, ಸಂ. ೨-೫-೨)

ಎಂಬ ಋಕ್ಕಿನಲ್ಲಿಯೂ **ಸಪ್ತರಶ್ಮಿವದ್ವ್ಯಾಪ್ತಾ ಹೋತ್ರಕಾಃ ಸ್ವಸ್ವಕರ್ಮಭಿಃ ಸರ್ವತೋ ವ್ಯಾಪ್ತಾ ಭವಂತಿ ।** ಸಪ್ತರಶ್ಮಿಗಳಂತೆ ಸಪ್ತಹೋತೃಗಳೂ ತಮ್ಮ ತಮ್ಮ ಕರ್ತವ್ಯಗಳಲ್ಲಿ ನಿರತರಾಗಿರುವರು ಎಂದಿರುವುದರಿಂದ ಇಲ್ಲಿಯೂ ಸಪ್ತ ಹೋತೃಗಳುಳ್ಳ ಎಂದೂ ಆಗಬಹುದು.

**ಸಪ್ತ ತೇ ಅಗ್ನೇ ಸಮಿಧಸ್ಸಪ್ತ ಜಿಹ್ವಾಸ್ಸಪ್ತ ಋಷಯಸ್ಸಪ್ತ ಧಾಮ ಪ್ರಿಯಾಣಿ । ಸಪ್ತ ಹೋತ್ರಾಸ್ಸಪ್ತಧಾ ತ್ವಾ ಯಜಂತಿ ಸಪ್ತ ಯೋನೀರಾ ಪೃಣಸ್ವಾ ಘೃತೇನ ।**

(ತೈ. ಸಂ. ೧-೫-೩-೨)

ಎಂಬ ತೈತ್ತಿರೀಯಸಂಹಿತಾವಾಕ್ಯದಲ್ಲಿಯೂ ಈ ಅಂಶವನ್ನು ವಿಶೇಷವಾಗಿ ಸ್ತುತಿಸಿದೆ. ಹೀಗೆಯೇ,

**ಕಾಲೀ ಕರಾಲೀ ಚ ಮನೋಜವಾ ಚ ಸುಲೋಹಿತಾ ಯಾ ಚ ಸುಧೂಮ್ರವರ್ಣಾ ।**
**ಸ್ಫುಲಿಂಗಿನೀ ವಿಶ್ವರುಚೀ ಚ ದೇವೀ ಲೇಲಾಯಮಾನಾ ಇತಿ ಸಪ್ತ ಜಿಹ್ವಾಃ ॥**

(ಮುಂಡಕ. ೧-೨-೪)

ಎಂದು ಮುಂಡಕೋಪನಿಷತ್ತಿನಲ್ಲಿ ಅಗ್ನಿಯ ಏಳು ಜಿಹ್ವೆಗಳ ಹೆಸರನ್ನು ವಿವರಿಸಿದೆ.

**ಪಾಯೂಪಸ್ಥೇಽಪಾನಂ ಚಕ್ಷುಃಶ್ರೋತ್ರೇ ಮುಖನಾಸಿಕಾಭ್ಯಾಂ ಪ್ರಾಣಃ ಸ್ವಯಂ ಪ್ರಾತಿಷ್ಠತೇ ಮಧ್ಯೇ ತು ಸಮಾನಃ । ಏಷ ಹ್ಯೇತದ್ಧುತಮನ್ನಂ ಸಮಂ ನಯತಿ ತಸ್ಮಾದೇತಾಃ ಸಪ್ತಾರ್ಚಿಷೋ ಭವಂತಿ ।**

(ಪ್ರಶ್ನ ೩-೫)

ಎಂದು ಪ್ರಶ್ನೋಪನಿಷತ್ತಿನಲ್ಲಿಯೂ ಸಪ್ತಸ್ವರೂಪವಾದ ಅಗ್ನಿಯ ಜ್ವಾಲೆಗಳನ್ನು ಅವುಗಳ ಶಕ್ತಿಗಳನ್ನು ವರ್ಣಿಸಿದೆ.

**ಪಿತ್ರೋಃ—ದ್ಯಾವಾಪೃಥಿವ್ಯೋಃ ।** ದ್ಯಾವಾಪೃಥಿವಿಗಳ,

**ಸ ರೋಚಯಜ್ಜನುಷಾ ರೋದಸೀ ಉಭೇ ಸ ಮಾತ್ರೋರಭವತ್ಪುತ್ರ ಈಡ್ಯಃ ।**
**ಹವ್ಯವಾಳಗ್ನಿರಜರಶ್ಚನೋಹಿತೋ ದೂಳಭೋ ವಿಶಾಮತಿಥಿರ್ವಿಭಾವಸುಃ ॥**

(ಋ. ಸಂ. ೩-೨-೨)

ಎಂಬ ಋಕ್ಕಿನಲ್ಲಿಯೂ

**ಅಗ್ನೇ ದಿವಃಸೂನುರಸಿ ಪ್ರಚೇತಾಸ್ತನಾ ಪೃಥಿವ್ಯಾ ಉತ ವಿಶ್ವವೇದಾಃ ।**
**ಋಧಗ್ದೇವಾँ ಇಹ ಯಜಾ ಚಿಕಿತ್ವಃ ॥**

(ಋ. ಸಂ. ೩-೨೫-೧)

ಎಂಬಲ್ಲಿಯೂ ಇನ್ನೂ ಹೀಗೆಯೇ ೧೦-೧-೨ ; ೧೦-೨-೭ ; ೧೦-೧೪೦-೨ ಇತ್ಯಾದಿ ನಾನಾ ಋಕ್ಕುಗಳಲ್ಲಿಯೂ ಅಗ್ನಿಯು ದ್ಯಾವಾಪೃಥಿವಿಗಳಿಂದ ಉತ್ಪನ್ನನಾದುದಾಗಿ ಹೇಳಿರುವುದರಿಂದ **ಪಿತ್ರೋಃ** ಎಂದರೆ ಪಿತೃಗಳಾದ ದ್ಯಾವಾಪೃಥಿವಿಗಳೆಂದರ್ಥ.. ಅರಣಿಗಳ ಎಂಬ ಇನ್ನೊಂದು ಅರ್ಥವೂ ಸಾಧ್ಯವಾಗಬಹುದು.

**ಆ ಪಪ್ರಿವಾಂಸಂ—ಸರ್ವತಃ ಪೂರಯಂತಂ ಕಾಮಾನಾಂ ।** ಸರ್ವಕಾಲದಲ್ಲಿಯೂ, ಸರ್ವಪ್ರದೇಶಗಳಲ್ಲಿಯೂ ಇಷ್ಟಾರ್ಥಗಳನ್ನು ಪೂರೈಸುವವನೆಂದರ್ಥ. ಪೃ—**ಪಾಲನಪೂರಣಯೋಃ** ಎಂಬ ಪೂರಣಾರ್ಥವನ್ನು ಕೊಡುವ ಪೃ ಧಾತುವಿನಿಂದ ಪಪ್ರಿಃ ಎಂಬ ಶಬ್ದವು ನಿಷ್ಪನ್ನವಾಗಿ **ಪೂರಕನು** ಎಂದರೆ ತುಂಬಿಕೊಡುವವನು ಎಂದರ್ಥವಾಗುತ್ತದೆ.

ನೃ ಚಕ್ಷಾ ಏಷ ದಿವೋ ಮಧ್ಯ ಆಸ್ತ ಆಪಪ್ರಿವಾನ್ರೋದಸೀ ಅಂತರಿಕ್ಷಂ ।
ಸ ವಿಶ್ವಾಚೀರಭಿ ಚಷ್ಟೇ ಘೃತಾಚೀರಂತರಾ ಪೂರ್ವಮಪರಂ ಚ ಕೇತುಂ ।

(ಋ. ಸಂ. ೧೦-೧೩೯-೨)

ಎಂಬ ಋಕ್ಕಿನಲ್ಲಿ ಆಪಪ್ರಿವಾನ್ ಸ್ವತೇಜಸಾ ಪೂರಯನ್ ಎಂದರ್ಥವಾಗುವಂತೆ ಇಲ್ಲಿ ಕಾಮಾನಾಂ ಪೂರಯಿತಾರಂ ಎಂದರ್ಥವಾಗುತ್ತದೆ.

ಚರತಃ ಧ್ರುವಸ್ಯ— ಎಂಬ ವಿಶೇಷಣಗಳಿಂದ ವಿರೋಧವಾದ ಗುಣಗಳು ಹೇಳಲ್ಪಟ್ಟಿದ್ದರೂ ಸಹ ಜ್ವಾಲೆಗಳ ರೂಪದ ಸಂಚಾರವೂ, ಮೂಲರೂಪಾಗ್ನಿಯ ಅಚಲಸ್ವರೂಪವೂ ಸ್ತುತಿಸಲ್ಪಟ್ಟವೆ.

ವ್ಯಾಕರಣಪ್ರಕ್ರಿಯಾ

**ತ್ರಿಮೂರ್ಧಾನಮ್**—ತ್ರಯಃ ಮೂರ್ಧಾನಃ ಯಸ್ಯ ಸಃ ತ್ರಿಮೂರ್ಧಾ. ತಮ್ **ದ್ವಿತ್ರಿಭ್ಯಾಂ ಪಾದ್ದನ್-ಮೂರ್ಧಸು** (ಪಾ. ಸೂ. ೬-೨-೧೯೭) ಎಂಬುವರಿಂದ ಬಹುವ್ರೀಹಿಯಲ್ಲಿ ಉತ್ತರಪದಾಂತೋದಾತ್ತಸ್ವರ ಬರುತ್ತದೆ.

**ಸಪ್ತರಶ್ಮಿಮ್**—ಸಪ್ತರಶ್ಮಯಃ ಯಸ್ಯ ಸಃ ತಮ್. **ಬಹುವ್ರೀಹೌಪ್ರಕೃತ್ಯಾಪೂರ್ವಪದಮ್** (ಪಾ.ಸೂ. ೬-೨-೧) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಗೃಣೀಷೇ**—ಗೄ ಶಬ್ದೇ ಧಾತು. ಕ್ರ್ಯಾದಿ. ಲೇಟ್ ಮಧ್ಯಮಪುರುಷಏಕವಚನದಲ್ಲಿ ಥಾಸ್ ಪ್ರತ್ಯಯ. **ಥಾಸಃ ಸೇ** (ಪಾ. ಸೂ. ೩-೪-೮೦) ಎಂಬುದರಿಂದ ಅದಕ್ಕೆ ಸೇ ಆದೇಶ. **ಕ್ರ್ಯಾದಿಭ್ಯಃಶ್ನಾ**-ಎಂಬುದರಿಂದ ಶ್ನಾವಿಕರಣ. **ಪ್ವಾದೀನಾಂಹ್ರಸ್ವಃ** (ಪಾ. ಸೂ. ೭-೩-೮) ಎಂಬುದರಿಂದ ಧಾತುವಿಗೆ ಹ್ರಸ್ವ. **ಈಹಲ್ಯಘೋಃ** (ಪಾ. ಸೂ. ೬-೪-೧೧೩) ಎಂಬುದರಿಂದ ವಿಕರಣಕ್ಕೆ ಈತ್ವ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಅನೂನಮ್**—ನ ಊನಃ ಅನೂನಃ ತಮ್. **ನಲೋಪೋ ನಞಃ** ಎಂಬುದರಿಂದ ನಲೋಪ ಬಂದಾಗ **ತಸ್ಮಾನ್ನುಡಚಿ** ಎಂಬುದರಿಂದ ಅದರ ಪರಕ್ಕೆ ನುಡಾಗಮ. ಅವ್ಯಯಪೂರ್ವಪದಪ್ರಕೃತಿಸ್ವರ ಬರುತ್ತದೆ.

**ನಿಷತ್ತಮ್**—ಷದ್ಲೃ ವಿಶರಣಗತ್ಯವಸಾದನೇಷು ಧಾತು. ಇದಕ್ಕೆ ಕ್ತಪ್ರತ್ಯಯ. ದಕಾರದ ಪರದಲ್ಲಿ ಬಂದರೂ **ನಸತ್ತನಿಷತ್ತ**—(ಪಾ. ಸೂ. ೮-೨-೬೧) ಎಂಬುದರಿಂದ ನಿಪಾತನಮಾಡಿರುವುದರಿಂದ ನತ್ವ ಬರುವುದಿಲ್ಲ. ದ್ವಿತೀಯಾಏಕವಚನಾಂತರೂಪ. ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

**ಚರತಃ**— ಚರ ಗತಿಭಕ್ಷಣಯೋಃ ಧಾತು. ಲಡರ್ಥದಲ್ಲಿ ಶತೃಪ್ರತ್ಯಯ. ಷಷ್ಠೀಏಕವಚನಾಂತರೂಪ. ಧಾತುಸ್ವರ ಉಳಿಯುತ್ತದೆ.

**ವಿಶ್ವಾ**—ನಪುಂಸಕದಲ್ಲಿ ಶಿ ಆದೇಶ ಬಂದು ರೂಪವಾದಾಗ **ಶೇಶ್ಛಂದಸಿ ಬಹುಲಮ್** ಎಂಬುದರಿಂದ ಶಿಗೆ ಲೋಪ.

**ದಿವಃ—ಊಡಿದಂ ಪದಾದಿ**-(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ರೋಚನಾ**—**ಸುಪಾಂ ಸುಲುಕ್** (ಪಾ. ಸೂ. ೭-೧-೩೯) ಎಂಬುದರಿಂದ ವಿಭಕ್ತಿಗೆ (**ಜಸ್**) ಆಕಾರಾದೇಶ ಬರುತ್ತದೆ.

**ಆಪಪ್ರಿವಾಂಸಮ್**—ಆಙ್ ಉಪಸರ್ಗ. ಪ್ರಾ ಪೂರಣೇ ಧಾತು. ಇದಕ್ಕೆ ಲಿಟ್ ಬಂದಾಗ **ಕ್ವಸುಶ್ಚ** (ಪಾ. ಸೂ. ೩-೨-೧೦೭) ಎಂಬುದರಿಂದ ಅದಕ್ಕೆ ಕ್ವಸು ಪ್ರತ್ಯಯ. ಏಕಾಚಾದುದರಿಂದ **ವಸ್ವೇಕಾಜಾದ್ಘಸಾಮ್** (ಪಾ. ಸೂ. ೭-೨-೬೭) ಎಂಬುದರಿಂದ ಅದಕ್ಕೆ ಇಡಾಗಮ. **ಆತೋ ಲೋಪ ಇಟಿ ಚ** (ಪಾ. ಸೂ. ೬-೪-೬೪) ಎಂಬುದರಿಂದ ಆಕಾರಲೋಪ. **ದ್ವಿರ್ವಚನೇಽಚಿ** (ಪಾ. ಸೂ. ೧-೧-೫೯) ಎಂಬುದರಿಂದ ಸ್ಥಾನಿವದ್ಭಾವ ಬರುವುದರಿಂದ ಪ್ರತ್ಯಯನಿಮಿತ್ತವಾಗಿ ದ್ವಿತ್ವಾದಿ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ. ಪ್ರಾದಿಸಮಾಸವಾದಾಗ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. ದ್ವಿತೀಯಾಏಕವಚನ ಪರವಾದಾಗ **ಅತ್ವಸಂತಸ್ಯ** ಎಂಬುದರಿಂದ ಉಪಧಾದೀರ್ಘ. ಉಗಿತ್ತಾದುದರಿಂದ ನುಮಾಗಮ. ॥ ೧ ॥



ಸಂಹಿತಾಪಾಠಃ

ಉಕ್ಷಾ ಮಹಾಁ ಅಭಿ ವವಕ್ಷ ಏನೇ ಅಜರಸ್ತಸ್ಥಾವಿತಊತಿರ್ಋಷ್ವಃ ।
ಉರ್ವ್ಯಾಃ ಪದೋ ನಿ ದಧಾತಿ ಸಾನೌ ರಿಹಂತ್ಯೂಧೋ ಅರುಷಾಸೋ ಅಸ್ಯ ।
॥ ೨ ॥

ಪದಪಾಠಃ

ಉಕ್ಷಾ । ಮಹಾನ್ । ಅಭಿ । ವವಕ್ಷೇ । ಏನೇ ಇತಿ । ಅಜರಃ । ತಸ್ಥೌ । ಇತಃಽಊತಿಃ । ಋಷ್ವಃ ।
ಉರ್ವ್ಯಾಃ । ಪದಃ । ನಿ । ದಧಾತಿ । ಸಾನೌ । ರಿಹಂತಿ । ಊಧಃ । ಅರುಷಾಸಃ । ಅಸ್ಯ ॥ ೨ ॥

॥ ಸಾಯಣಭಾಷ್ಯಂ ॥

ಉಕ್ಷಾ ಸೇಕ್ತಾ । ಫಲಪ್ರದಾನಸಮರ್ಥ ಇತ್ಯರ್ಥಃ । ಅತ ಏವ ಮಹಾನ್ ಮಹಿಮ್ನಾ ಸ್ವರೂಪೇಣೋದ್ವೃತ್ತವೃಷಭಸದೃಶೋಽಯಮಗ್ನಿರೇನೇ ದ್ಯಾವಾಪೃಥಿವ್ಯಾವಭ್ಯಭಿಕ್ರಮ್ಯ ವ್ಯಾಪ್ಯ ವವಕ್ಷೇ । ವಹತಿ । ವ್ಯಾಪ್ನೋತೀತ್ಯರ್ಥಃ ॥ ವಹತೇರ್ಲೇಟಿ ಛಾಂದಸಃ ಶಪಃ ಶ್ಲುಃ । ಲೋಪಸ್ತ ಆತ್ಮನೇಪದೇಷ್ವಿತಿ ತಲೋಪಃ । ಸಿಬ್ಬಹುಲಮಿತಿ ಸಿಪ್ ॥ ವೃಷ್ಟ್ಯಾದಿಪ್ರದಾನೇನ ಹವಿರ್ವಹನೇನ ಚ ಲೋಕದ್ವಯಸ್ಯ ವಾಸಿನೋ ದೇವಾನ್ಮನುಷ್ಯಾಂಶ್ಚ ರಕ್ಷತೀತ್ಯರ್ಥಃ । ಕಿಂಚಾಯಮಜರೋ ಜರಾರಹಿತೋ ಋಷ್ವೋ ಮಹಾನ್ ಪೂಜ್ಯಃ । ಮಹನ್ನಾಮೈತತ್ ಋಷ್ವ ಉಕ್ಷ ಇತಿ ತನ್ನಾಮಸು ಪಾಠಾತ್ । ತಥೇತಊತಿಃ ಪ್ರಾಪ್ತರಕ್ಷಣಃ ಸನ್ ತಸ್ಥೌ । ಸ್ಥಿತೋ ವರ್ತತೇ । ಯದ್ವಾ । ಉಕ್ತಗುಣೋಽಯಮಿತಊತಿರತ ಏವ ಗಮನವಾನಸ್ಮದ್ದೇವಯಜನಾಭಿಮುಖಗಮನವಾನ್ ತಸ್ಥೌ । ವರ್ತತೇ । ತದನಂತರಮುರ್ವ್ಯಾ ವಿಸ್ತೃತಾಯಾ ಭೂಮ್ಯಾಃ

ಸಾನೌ ಸಮುಚ್ಛ್ರಿತೇ ಪ್ರದೇಶೇ ವೇದಿಲಕ್ಷಣೇ ಪದೋ ನಿ ದಧಾತಿ । ಪದಾನಿ ಸ್ಥಾಪಯತಿ ಕರೋತಿ । ಕಿಂಚಾಸ್ಯಾಗ್ನೇರರುಷಾಸೋಽರುಷಾ ಆರೋಚನಾ ಊಧರೂಧಃಸ್ಥಾನೀಯಮಂತರಿಕ್ಷಂ ರಿಹಂತಿ ಲಿಹಂತಿ । ಯದ್ವಾ । ಅಸ್ಯೋಧರೂಧಃಸ್ಥಾನೀಯಂ ಯಜ್ಞಮರುಷಾಸ ಆರೋಚನಾ ಬ್ರಹ್ಮವರ್ಚಸೇನ ಯಜಮಾನಾ ರಿಹಂತಿ । ಅಭಿಮತಸ್ವರ್ಗಾದೀನಿ ಲಿಹಂತಿ ॥

### ಪ್ರತಿಪದಾರ್ಥ

**ಉಕ್ಷಾ**—(ಇಷ್ಟಾರ್ಥಗಳನ್ನು) ಸುರಿಸಿಕೊಡುವವನೂ । **ಮಹಾನ್**—ಮಹಿಮೆಯಿಂದ ಕೂಡಿದವನೂ ಆದ ಅಗ್ನಿಯು । **ಇಮೇ**—ದ್ಯಾವಾಪೃಥಿವಿಗಳೆರಡನ್ನೂ । **ಅಭಿ ವವಕ್ಷೇ**—ವ್ಯಾಪಿಸಿಕೊಂಡಿದ್ದಾನೆ । **ಅಜರಃ**—ಮುಪ್ಪಿಲ್ಲದವನೂ । **ಋಷ್ವಃ**—ಪೂಜ್ಯನೂ ಆದ ಅಗ್ನಿಯು । **ಇತಊತಿಃ**—ರಕ್ಷಣೆಗಳೊಡನೆ ಕೂಡಿಕೊಂಡು (ಅಥವಾ) ಯಜ್ಞದೇಶವಾದ ಈಕಡೆಗೆ ಬರುವವನಾಗಿ । **ತಸ್ಥೌ**—ನಿಂತಿದ್ದಾನೆ । **ಉರ್ವ್ಯಾಃ**—ವಿಸ್ತಾರವಾದ ಪೃಥಿವಿಯ । **ಸಾನೌ**—ಶಿಖರದಂತೆ ಎತ್ತರವಾದ ವೇದಿಸ್ಥಾನದಲ್ಲಿ । **ಪದಃ**—ಪಾದಗಳನ್ನು । **ನಿ ದಧಾತಿ**—ಇಡುತ್ತಾನೆ । **ಅಸ್ಯ**—ಈ ಅಗ್ನಿಯ । **ಅರುಷಾಸಃ**—ಪ್ರಕಾಶಮಾನವಾದ ತೇಜಸ್ಸುಗಳು । **ಊಧಃ**—ಕೆಚ್ಚಲಿನಂತಿರುವ ಅಂತರಿಕ್ಷವನ್ನು । **ರಿಹಂತಿ**—ಮುಚ್ಚು (ವ್ಯಾಪಿಸು) ತ್ತವೆ । (ಅಥವಾ) **ಅಸ್ಯ**—ಈ ಅಗ್ನಿಯ । **ಊಧಃ**—ಕೆಚ್ಚಲಿನಂತಿರುವ ಯಜ್ಞವನ್ನು । **ಅರುಷಾಸಃ**— (ತಮ್ಮ ತೇಜಸ್ಸಿನಿಂದ) ಬೆಳಗುವ ಯಜಮಾನರು । **ರಿಹಂತಿ** — (ಸ್ವರ್ಗಾದಿಗಳನ್ನು) ಮುಟ್ಟುತ್ತಾರೆ.

### ಭಾವಾರ್ಥ

ಇಷ್ಟಾರ್ಥಗಳನ್ನು ಸುರಿಸಿಕೊಡುವವನೂ, ಮಹಿಮೆಯಿಂದ ಕೂಡಿದವನೂ ಆದ ಅಗ್ನಿಯು ದ್ಯಾವಾಪೃಥಿವಿಗಳೆರಡನ್ನೂ ವ್ಯಾಪಿಸಿಕೊಂಡಿದ್ದಾನೆ. ಮುಪ್ಪಿಲ್ಲದವನೂ, ಪೂಜ್ಯನೂ ಆದ ಅಗ್ನಿಯು ತನ್ನ ರಕ್ಷಣೆಗಳೊಡನೆ ಕೂಡಿಕೊಂಡು ಇದ್ದಾನೆ ಮತ್ತು ವಿಸ್ತಾರವಾದ ಪೃಥಿವಿಯ ಶಿಖರದಂತೆ ಎತ್ತರವಾದ ವೇದಿಸ್ಥಾನದಲ್ಲಿ ಪಾದಗಳನ್ನು ಇಡುತ್ತಾನೆ. ಈ ಅಗ್ನಿಯ ಪ್ರಕಾಶಮಾನವಾದ ತೇಜಸ್ಸುಗಳು ಕೆಚ್ಚಲಿನಂತಿರುವ ಅಂತರಿಕ್ಷವನ್ನು ವ್ಯಾಪಿಸುತ್ತವೆ.

### English Translation

The great showerer (of benefits) has pervaded these two (worlds); undecaying and adorable, he is (ever) present, bestowing protection: he places his foot on the summit of the earth, and his radiant ( flames ) lick the udder (of the firmament).

### ವಿಶೇಷವಿಷಯಗಳು

**ಉಕ್ಷಾ**—ಸೇಕ್ತಾ । ಫಲಪ್ರದಾತಾ ಇತ್ಯರ್ಥಃ । ಇಷ್ಟಾರ್ಥಗಳನ್ನು ಒದಗಿಸಿಕೊಡತಕ್ಕವನು. ಸೇಚನ ಎಂದರೆ ಸುರಿಸು ಎಂಬರ್ಥವನ್ನು ಕೊಡುವ ಉಕ್ಷ್ ಧಾತುವಿನಿಂದ ನಿಷ್ಪನ್ನವಾಗಿದೆ. ಭಕ್ತರಿಗೆ ಇಷ್ಟಾರ್ಥಗಳನ್ನು ಸುರಿಸುವ ದೇವತೆಗಳೆಂದರ್ಥ. ಉಕ್ಷನ್ ಶಬ್ದವನ್ನು ನಿರುಕ್ತಕಾರರು **ಮಹನ್ನಾಮ**ಗಳಲ್ಲಿ ಪಠಿಸಿದ್ದಾರೆ. (ನಿ. ೩-೧೩) ಮತ್ತು,

ವೃಷಾಕಪಾಯಿ ರೇವತಿ ಸುಪುತ್ರ ಆದು ಸುಸ್ನುಷೇ ।
ಘಸತ್ತ ಇಂದ್ರ ಉಕ್ಷಣಃ ಪ್ರಿಯಂ ಕಾಚಿತ್ಕರಂ ಹವಿರ್ವಿಶ್ವಸ್ಮಾದಿಂದ್ರ ಉತ್ತರಃ ।

(ಋ. ಸಂ. ೧೦-೮೬-೧೩)

ಎಂಬ ಋಕ್ಕನ್ನುದಹರಿಸಿ ಅದರಲ್ಲಿ ಬರುವ **ಉಕ್ಷಣ** ಶಬ್ದಕ್ಕೆ ಅರ್ಥವನ್ನು ಹೇಳುವಾಗ **ಉಕ್ಷಣ ಉಕ್ಷತೇರ್ವೃದ್ಧಿಕರ್ಮಣಃ ಉಕ್ಷಂತ್ಯುದಕೇನೇತಿ ವಾ** (ನಿ ೧೨-೯) ವೃದ್ಧಿಯಾಗು ಎಂಬರ್ಥವನ್ನು ಕೊಡುವ **ಉಕ್ಷ್** ಧಾತುವಿನಿಂದ ನಿಷ್ಪನ್ನವಾಗಿರುವುದರಿಂದ ಉದಕದೊಂದಿಗೆ ವೃದ್ಧಿಯಾಗತಕ್ಕ ಎಂಬರ್ಥವನ್ನು ಆ ಸಂದರ್ಭದಲ್ಲಿ ಮಾಡಿದ್ದಾರೆ. ಸಾಧಾರಣವಾಗಿ **ಉಕ್ಷ** ಶಬ್ದವು **ಶಕ್ತಿ ಸಾಮರ್ಥ್ಯ** ಎಂಬರ್ಥದಲ್ಲಿಯೂ ಉಪಯೋಗಿಸಲ್ಪಟ್ಟಿದೆ. ಸೇಚನ ಸಾಮರ್ಥ್ಯದಲ್ಲಿ ತಾತ್ಪರ್ಯವಾಗುತ್ತದೆ.

ತೇ ಜಜ್ಞಿರೇ ದಿವ ಋಷ್ವಾಸ ಉಕ್ಷಣೋ ರುದ್ರಸ್ಯ ಮರ್ಯಾ ಅಸುರಾ ಅರೇಪಸಃ ।
ಪಾವಕಾಸಃ ಶುಚಯಃ ಸೂರ್ಯಾ ಇವ ಸತ್ವಾನೋ ನ ದ್ರಪ್ಸಿನೋ ಘೋರವರ್ಪಸಃ ॥

(ಋ. ಸಂ. ೧-೬೪-೨)

ಯಜ್ಞಸ್ಯ ಕೇತುಂ ಪ್ರಥಮಂ ಪುರೋಹಿತಂ ಹವಿಷ್ಮಂತ ಈಳತೇ ಸಪ್ತ ವಾಜಿನಂ ।
ಶೃಣ್ವಂತಮಗ್ನಿಂ ಘೃತಪೃಷ್ಠಮುಕ್ಷಣಂ ಪೃಣಂತಂ ದೇವಂ ಪೃಣತೇ ಸುವೀರ್ಯಂ ॥

(ಋ. ಸಂ. ೧೦-೧೨೨-೪)

ಇತ್ಯಾದಿ ಋಕ್ಕುಗಳಲ್ಲಿ ಉಕ್ಷ ಶಬ್ದಕ್ಕೆ ಸೇಚನ ಅಥವಾ ಸೇಚನಸಾಮರ್ಥ್ಯವೆಂದು ಶಕ್ತಿಯಲ್ಲಿ ಪರ್ಯಾವಸಾನವನ್ನು ಹೊಂದುತ್ತದೆ. ಪ್ರಕೃತವಾದ ಋಕ್ಕಿನಲ್ಲಿಯೂ ಸೇಚನಸಾಮರ್ಥ್ಯವುಳ್ಳ ಎಂದರೆ ಇಷ್ಟಾರ್ಥಗಳನ್ನು ಒದಗಿಸಿ ಕೊಡುವ ಸಾಮರ್ಥ್ಯವುಳ್ಳ ಅಗ್ನಿಯೆಂದರ್ಥ.

**ಅಭಿ ವವಕ್ಷೇ—ಅಭಿಕ್ರಮ್ಯ ವ್ಯಾಪ್ಯ ವಹತಿ । ವ್ಯಾಪ್ನೋತೀತ್ಯರ್ಥಃ ।** ಸುತ್ತಲೂ ವ್ಯಾಪಿಸಿಕೊಂಡಿದ್ದಾನೆಂದರ್ಥ. **ವವಕ್ಷೇ** ಎಂಬ ಪದವು **ವಹ್** ಧಾತುವಿನಿಂದಾಗಲಿ ಅಥವಾ **ವಚ ಪರಿಭಾಷಣೇ** ಎಂಬ ಧಾತುವಿನಿಂದಾಗಲಿ ನಿಷ್ಪನ್ನವಾಗಬಹುದು ಎಂದು ನಿರುಕ್ತಕಾರರು,

ಕಿಮಿತ್ತೇ ವಿಷ್ಣೋ ಪರಿಚಕ್ಷ್ಯಂ ಭೂತ್ಪ್ರ ಯದ್ವವಕ್ಷೇ ಶಿಪಿವಿಷ್ಟೋ ಅಸ್ಮಿ ।
ಮಾ ವರ್ಪೋ ಅಸ್ಮದಪ ಗೂಹ ಏತದ್ಯದನ್ಯರೂಪಃ ಸಮಿಥೇ ಬಭೂಥ ।

(ಋ. ಸಂ. ೭-೧೦೦-೬)

ಎಂಬ ಋಕ್ಕನ್ನುದಹರಿಸಿ ಇಲ್ಲಿ **ವವಕ್ಷೇ** ಎಂಬ ಪದಕ್ಕೆ ಪ್ರಬ್ರೂಷೇ ಹೇಳುತ್ತೀಯೆ ಎಂದರ್ಥಮಾಡಿ **ವಚ್** ಧಾತುವೇ ಇದರ ಮೂಲವೆಂದು ತೋರಿಸಿದ್ದಾರೆ. ಆದರೆ,

ಸದ್ಯೋ ಜಾತ ಓಷಧೀಭಿರ್ವವಕ್ಷೇ ಯದೀ ವರ್ಧಂತಿ ಪ್ರಸ್ವೋ ಘೃತೇನ ।
ಆಪ ಇವ ಪ್ರವತಾ ಶುಂಭಮಾನಾ ಉರುಷ್ಯದಗ್ನಿಃ ಪಿತ್ರೋರುಪಸ್ಥೇ ॥

(ಋ. ಸಂ. ೩-೫-೮)

ಇತ್ಯಾದಿ ಋಕ್ಕುಗಳಲ್ಲಿ ವವಕ್ಷೇ— ಉಹ್ಯತೇ ವಹಿಸಲ್ಪಡುತ್ತಾನೆಂದೂ,

**ವವಕ್ಷ ಇಂದ್ರೋ ಅಮಿತಮೃಜೀಷ್ಯು೧ಭೇ ಆ ಪಪ್ರೌ ರೋದಸೀ ಮಹಿತ್ವಾ ।**
**ಅತಶ್ಚಿದಸ್ಯ ಮಹಿಮಾ ವಿ ರೇಚ್ಯಭಿ ಯೋ ವಿಶ್ವಾ ಭುವನಾ ಬಭೂವ ॥**

(ಋ. ಸಂ. ೪-೧೬-೫)

ಎಂಬಲ್ಲಿ ಉವಾಹ ವಹಿಸಿದನು ಎಂದೂ ಅರ್ಥವಾಗುವಂತೆ ಪ್ರಕೃತವಾದ ಋಕ್ಕಿನಲ್ಲಿಯೂ **ವಹ್** ಧಾತುವಿನಿಂದ ನಿಷ್ಪನ್ನವಾಗಿ ಅಭಿ ವವಕ್ಷೇ ಎಂದರೆ ವ್ಯಾಪ್ಯ ವಹತಿ । ಸುತ್ತಲೂ ವ್ಯಾಪಿಸಿಕೊಂಡಿದ್ದಾನೆ ಎಂದರ್ಥ.

**ಋಷ್ವಃ**— ಈ ಪದವು ಮಹನ್ನಾಮಗಳಲ್ಲಿ ಪಠಿತವಾಗಿದೆ. (ನಿ. ೩-೧೩) ಋಕ್ಸಂಹಿತೆಯಲ್ಲಿ ಈ ಪದವನ್ನು **ಮಹಾನ್** ಎಂಬರ್ಥದಲ್ಲಿಯೂ, ರಮ್ಯವಾದ ರೂಪವುಳ್ಳವನು ಎಂಬರ್ಥದಲ್ಲಿಯೂ ಉಪಯೋಗಿಸಿದೆ. ನಿರುಕ್ತಕಾರರು,

**ಉರುಂ ನೋ ಲೋಕಮನು ನೇಷಿ ವಿದ್ವಾನ್ತ್ಸ್ವರ್ವಜ್ಜ್ಯೋತಿರಭಯಂ ಸ್ವಸ್ತಿ ।**
**ಋಷ್ವಾ ತ ಇಂದ್ರ ಸ್ಥವಿರಸ್ಯ ಬಾಹೂ ಉಪ ಸ್ಥೇಯಾಮ ಶರಣಾ ಬೃಹಂತಾ ॥**

(ಋ. ೬-೪೭-೮)

ಎಂಬ ಋಕ್ಕನ್ನುದಹರಿಸಿ **ಋಷ್ವಾ** ಎಂಬ ಪದಕ್ಕೆ **ದರ್ಶನೀಯೌ** ರಮ್ಯವಾದ ರೂಪವುಳ್ಳದ್ದು ಎಂದರ್ಥಮಾಡಿದ್ದಾರೆ.

**ಅನಾನುದೋ ವೃಷಭೋ ದೋಧತೋ ವಧೋ ಗಂಭೀರ ಋಷ್ವೋ ಅಸಮಷ್ಟಕಾವ್ಯಃ ।**
**ರಧ್ರಚೋದಃ ಶ್ನಥನೋ ವೀಳಿತಸ್ಪೃಥುರಿಂದ್ರಃ ಸುಯಜ್ಞ ಉಷಸಃ ಸ್ವರ್ಜನತ್ ॥**

(ಋ. ಸಂ. ೨-೨೧-೪)

ಎಂಬ ಋಕ್ಕಿನಲ್ಲಿ **ಮಹಾನ್** ಎಂದು ಇಂದ್ರನಿಗೆ ವಿಶೇಷಣವಾಗಿದೆ. ಪ್ರಕೃತವಾದ ಋಕ್ಕಿನಲ್ಲಿ ಈ ಪದವು ಅಗ್ನಿಗೆ ವಿಶೇಷಣವಾಗಿದೆ. ಅಗ್ನಿಗೆ ಈ ಎರಡು ಗುಣಗಳೂ ಇರುವುದರಿಂದ ಈ ಪದಕ್ಕೆ ಈ ಎರಡರ್ಥಗಳಲ್ಲಿ ಯಾವುದನ್ನಾದರೂ ಹೇಳಬಹುದು.

**ಉರ್ವ್ಯಾಃ**— **ವಿಸ್ತೃತಾಯಾಃ ಭೂಮ್ಯಾಃ** । ಎಂದು **ಉರ್ವೀ** ಶಬ್ದವು ಪೃಥ್ವಿಗಾಗಲಿ, ಅಂತರಿಕ್ಷಕ್ಕಾಗಲಿ ವಿಶೇಷಣವಾಗಿ ವಿಸ್ತಾರವಾಗಿ ಹರಡಿರುವ ಸ್ವರೂಪವನ್ನು ತೋರಿಸುತ್ತದೆ.

**ಉರ್ವೀ ನ ಪೃಥ್ವೀ ಬಹುಲೇ ಗಭೀರೇ ಮಾ ವಾಮೇತೌ ।**

(. ಬ್ರಾ. ೪-೨೦)

ಇತ್ಯಾದಿ ವಾಕ್ಯಗಳಲ್ಲಿ ಈ ಪದವು ದ್ಯಾವಾಪೃಥಿವಿಗಳಿಗೆ ವಿಶೇಷಣವಾಗಿ ಅವುಗಳು ಅತ್ಯಂತ ವಿಸ್ತಾರವಾಗಿ ಹರಡಿರುವುದನ್ನು ತಿಳಿಸುತ್ತದೆ.

**ರಿಹಂತ್ಯೂಧೋ ಅರುಷಾಸೋ ಅಸ್ಯ**— ಈ ವಾಕ್ಯಕ್ಕೆ ಎರಡುವಿಧವಾದ ಅರ್ಥವು ಸಾಧ್ಯವೆಂದು ತೋರಿಸಿದ್ದಾರೆ. ಮೊದಲನೆಯದಾಗಿ **ಅಸ್ಯ ಅರುಷಾಸಃ**— ಈ ಅಗ್ನಿಯ ಪ್ರಕಾಶಮಾನವಾದ ತೇಜಸ್ಸುಗಳು, ಊಧಃ ಕೆಚ್ಚಲಿನಂತಿರುವ ಅಂತರಿಕ್ಷವನ್ನು ರಿಹಂತಿ ವ್ಯಾಪಿಸುತ್ತವೆ ಎಂದೂ, ಎರಡನೆಯದಾಗಿ ಅಸ್ಯ ಊಧಃ ಈ ಅಗ್ನಿಯ

ಕೆಚ್ಚಲಿನಂತಿರುವ ಯಜ್ಞವನ್ನು, ಅರುಷಾಸಃ—ತಮ್ಮ ತೇಜಸ್ಸಿನಿಂದ ಬೆಳಗುವ ಯಜಮಾನರು, ರಿಹಂತಿ ಸ್ವರ್ಗಾದಿ ಗಳನ್ನುಮುಟ್ಟುತ್ತಾರೆ ಎಂದೂ ಆಗುತ್ತದೆ ಆದರೆ ಇಲ್ಲಿ ಮೊದಲನೆಯ ಅರ್ಥವೇ ಹೆಚ್ಚು ಹೊಂದಿಕೊಳ್ಳುತ್ತದೆ. Oldenbrg ಎಂಬ ಪಂಡಿತನು ಅರುಷಾಸಃ ಎಂಬ ಪದಕ್ಕೆ His horses or flames of Agni ಎಂದರ್ಥ ಮಾಡಿದ್ದಾನೆ.

**ಅರುಷಾಸಃ**—ಅರುಷ ಶಬ್ದವು ನಿರುಕ್ತದಲ್ಲಿ ಅಶ್ವನಾಮಗಳಲ್ಲಿ ಪಠಿತವಾಗಿದೆ. (ನಿ. ೨-೨೭). ಅರುಷ ಶಬ್ದದ ನಾನಾರ್ಥಗಳನ್ನೂ ಋಕ್ಸಂಹಿತೆಯಲ್ಲಿ ಈ ಪದದ ಪ್ರಯೋಗಗಳನ್ನೂ ಉದಾಹರಣೆಗಳೊಂದಿಗೆ ೧-೧೪೧-೮ ನೇ ಋಕ್ಕಿನ ವಿಶೇಷವಿಷಯಗಳಲ್ಲಿ ತಿಳಿಸಿದೆ

ವ್ಯಾಕರಣಪ್ರಕ್ರಿಯಾ

**ಉಕ್ಷಾ**—ಉಕ್ಷ ಸೇಚನೇ ಧಾತು. **ಶ್ವನ್ನುಕ್ಷನ್ಪ್ಲೀಹನ್** (ಉ ೧-೧೫೭) ಎಂಬುದರಿಂದ ಕನಿ ಪ್ರತ್ಯಯಾಂತವಾಗಿ ನಿಪಾತಿತವಾಗಿದೆ.

**ಮಹಾನ್+ಅಭಿ**—**ದೀರ್ಘಾದಟಿ ಸಮಾನಪಾದೇ** (ಪಾ. ಸೂ. ೮-೩-೯) ಎಂಬುದರಿಂದ ನಕಾರಕ್ಕೆ ರುತ್ವ. **ಆತೋಽಟಿ ನಿತ್ಯಮ್** (ಪಾ. ಸೂ. ೮-೩-೩) ಎಂಬುದರಿಂದ ಆಕಾರಕ್ಕೆ ನಿತ್ಯವಾಗಿ ಅನುನಾಸಿಕತ್ವ ಬರುತ್ತದೆ.

**ವವಕ್ಷೇ**—ವಹ ಪ್ರಾಪಣೇ ಧಾತು. ಲೇಟ್ ಪ್ರಥಮಪುರುಷಏಕವಚನದಲ್ಲಿ ತ ಪ್ರತ್ಯಯ. **ಬಹುಲಂ ಛಂದಸಿ** ಎಂಬುದರಿಂದ ಶಪಿಗೆ ಶ್ಲು ಅದೇಶ. **ಶ್ಲೌ** ಎಂಬುದರಿಂದ ಧಾತುವಿಗೆ ದ್ವಿತ್ವ. **ಲೋಪಸ್ತ ಆತ್ಮನೇಪದೇಷು** (ಪಾ. ಸೂ. ೭-೪-೪೧) ಎಂಬುದರಿಂದ ಪ್ರತ್ಯಯ ತಕಾರಕ್ಕೆ ಲೋಪ. **ಸಿಬ್ಬಹುಲಂ ಲೇಟಿ** (ಪಾ. ಸೂ. ೩-೧-೩೪) ಎಂಬುದರಿಂದ ಸಿಪ್. **ಹೋಢಃ** ಸೂತ್ರದಿಂದ ಹಕಾರಕ್ಕೆ ಢತ್ವ. **ಷಢೋಃಕಃಸಿ** ಸೂತ್ರದಿಂದ ಢಕಾರಕ್ಕೆ ಕತ್ವ ಅದನ್ನು ನಿಮಿತ್ತೀಕರಿಸಿ ಸಕಾರಕ್ಕೆ ಷತ್ವ. ವವಕ್ಷೇ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತ ಸ್ವರ ಬರುತ್ತದೆ.

**ಅಜರಃ**—ನ ವಿದ್ಯತೇ ಜರಾ ಯಸ್ಯ ಸಃ **ನಞೋ ಜರಮರ**—(ಪಾ. ಸೂ. ೬-೨-೧೧೬) ಎಂಬುದರಿಂದ ಉತ್ತರಪದ ಆದ್ಯುದಾತ್ತಸ್ವರ ಬರುತ್ತದೆ.

**ತಸ್ಥೌ**—ಷ್ಠಾ ಗತಿನಿವೃತ್ತೌ ಧಾತು. ಲಿಟ್ ಪ್ರಥಮಪುರುಷಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ಇತಊತಿಃ**—ಇಣ್ ಗತೌ ಧಾತು. **ನಿಷ್ಠಾ** ಎಂಬುದರಿಂದ ಕ್ತ ಪ್ರತ್ಯಯ. ಇತಾ ಊತಿಃ ಯೇನ ಸಃ ಇತಊತಿಃ **ಬಹುವ್ರೀಹೌಪ್ರಕೃತ್ಯಾಪೂರ್ವಪದಮ್** (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದಪ್ರಕೃತಿ ಸ್ವರ ಬರುತ್ತದೆ.

**ಉರ್ವ್ಯಾಃ**—ಉದಾತ್ತಸ್ಥಾನದಲ್ಲಿ ಯಣಾದೇಶ ಬಂದು ಅದರ ಪರದಲ್ಲಿ ವಿಭಕ್ತಿ ಅನುದಾತ್ತ ಬಂದುದರಿಂದ **ಉದಾತ್ತಯಣೋಹಲ್‌ಪೂರ್ವಾತ್** ಎಂಬುದರಿಂದ ವಿಭಕ್ತಿಗೆ ಉದಾತ್ತ ಬರುತ್ತದೆ.

ಪದಃ—**ಊಡಿದಂಪದಾದಿ** (ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ (ಶಸ್) ಉದಾತ್ತಸ್ವರ ಬರುತ್ತದೆ.

ದಧಾತಿ—ಡುಧಾಞ್ ಧಾರಣಪೋಷಣಯೋಃ ಧಾತು. ಲಿಟ್ ಪ್ರಥಮಪುರುಷಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

ರಿಹಂತಿ—ರಿಹ ಕತ್ಥನಯುದ್ಧನಿಂದಾಹಿಂಸಾದಾನೇಷು. ಧಾತು. ತುದಾದಿ. ಲಟ್ ಪ್ರಥಮಪುರುಷಬಹುವಚನಾಂತರೂಪ. ಅಥವಾ ಲಿಹ ಆಸ್ವಾದನೇ ಧಾತು. ಅದಾದಿ ವ್ಯತ್ಯಯದಿಂದ ಲಕಾರಕ್ಕೆ ರೇಫಾದೇಶ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

ಅರುಷಾಸಃ—ರುಷ ಹಿಂಸಾಯಾಂ ಧಾತು. ರೋಷಂತೀತಿ ರುಷಾಃ ನ ರುಷಾಃ ಅರುಷಾಃ **ಇಗುಪಧಜ್ಞಾಪ್ರೀಕಿರಃ ಕಃ** (ಪಾ. ಸೂ ೩-೪-೧೩೫) ಎಂಬುದರಿಂದ ಕ ಪ್ರತ್ಯಯ. ಇದಕ್ಕೆ ಜಸ್ ಪರವಾದಾಗ **ಆಜ್ಜಸೇರಸುಕ್** (ಪಾ. ಸೂ. ೭-೧-೫೦) ಎಂಬುದರಿಂದ ಅಸುಕಾಗಮ. ॥ ೨ ॥

———— - :o: ————

। ಸಂಹಿತಾಪಾಠಃ ।

ಸಮಾನಂ ವತ್ಸಮಭಿ ಸಂಚರಂತೀ ವಿಷ್ವಗ್ಧೇನೂ ವಿ ಚರತಃ ಸುಮೇಕೇ ।
ಅನಪವೃಜ್ಯಾಁ ಅಧ್ವನೋ ಮಿಮಾನೇ ವಿಶ್ವಾನ್ಕೇತಾಁ ಅಧಿ ಮಹೋ ದಧಾನೇ ।
॥ ೩ ॥

ಪದಪಾಠಃ

ಸಮಾನಂ । ವತ್ಸಂ । ಅಭಿ । ಸಂಚರಂತೀ ಇತಿ ಸಂऽಚರಂತೀ । ವಿಷ್ವಕ್ । ಧೇನೂ ಇತಿ । ವಿ । ಚರತಃ । ಸುಮೇಕೇ ಇತಿ ಸುऽಮೇಕೇ ।
ಅನಪವೃಜ್ಯಾನ್ । ಅಧ್ವನಃ । ಮಿಮಾನೇ ಇತಿ । ವಿಶ್ವಾನ್ । ಕೇತಾನ್ । ಅಧಿ । ಮಹಃ । ದಧಾನೇ ಇತಿ ॥ ೩ ॥

ಸಾಯಣಭಾಷ್ಯಂ

ಸಮಾನಮೇಕಮೇವ ವತ್ಸಂ ವತ್ಸಸ್ಥಾನೀಯಂ ಪುತ್ರವದ್ಧರ್ಷಹೇತುಮಗ್ನಿಮಭಿಮುಖಂ ಸಂಚರಂತೀ ಸಂಚರಂತ್ಯೌ ದ್ವೇ ಧೇನೂ ಅಗ್ನಿಹಿತಕರಣೇನ ಪ್ರೀಣಯಿತ್ರ್ಯೌ ಪತ್ನೀಯಜಮಾನಲಕ್ಷಣೇ ಧೇನೂ ವಿಷ್ವಗ್ವಿ ಚರತಃ । ಸಂಚರತಃ । ಸ್ತನಪಾನಾದಿಸದೃಶೇಂಧನಪ್ರಕ್ಷೇಪಸಂಮಾರ್ಜನಾದಿನಾ ಸಮ್ಯಗ್ವರ್ಧಯತ ಇತ್ಯರ್ಥಃ । ಕೀದೃಶ್ಯೌ ತೇ । ಸುಮೇಕೇ ಶೋಭನಕರ್ಮಾಣೌ ಶೋಭನಮೇಹನೇ ವಾ । ಪರಿಚರಣ-

ಕುಶಲೇ ಇತ್ಯರ್ಥಃ । ಕಿಂಚಾನಪವೃಜ್ಯಾನಪವರ್ಜನೀಯರಹಿತಾನ್ ॥ ನಞ್ಸ್ವರಾಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ ॥ ಅಧ್ವನೋ ಮಾರ್ಗಾನಗ್ನೇಃ ಪ್ರಾಂತಪ್ರದೇಶಾನ್ ಕೇಶಾದ್ಯಮೇಧ್ಯರಹಿತಾನ್ಮಿಮಾನೇ ಸಂಪಾದಯಿತ್ರ್ಯೌ । ಕಿಂಚ ವಿಶ್ವಾನ್ಕೇತಾನ್ ಸರ್ವಾಣಿ ಪ್ರಜ್ಞಾನಾನಿ ಪ್ರವರ್ಧನವಿಷಯಾಣಿ ಮಹೋ ಮಹಾಂತ್ಯಧ್ಯಧಿಕಂ ಧಾನೇ ದಧಾರಯಂತ್ಯೌ । ಈದೃಶ್ಯಾವಧ್ವರ್ಯುಯಜಮಾನರೂಪೇ ಜಾಯಾಪತಿರೂಪೇ ವಾ ಧೇನೂ ವಿಷ್ವಗ್ವಿ ಚರತಃ ॥

ಪ್ರತಿಪದಾರ್ಥ

**ಸುಮೇಕೇ**—ಶ್ರೇಷ್ಠವಾದ ಕರ್ಮವುಳ್ಳವರೂ ಅಥವಾ ಉಪಚಾರ ಮಾಡುವುದರಲ್ಲಿ ಕುಶಲರೂ । **ಮತ್ತು ಅನಪವೃಜ್ಯಾ೯**—ಪರಿತ್ಯಾಜ್ಯಗಳಲ್ಲದಿರುವ (ಕಶ್ಮಲ ರಹಿತಗಳಾದ) । **ಅಧ್ವನಃ**—(ಅಗ್ನಿಯ) ಮಾರ್ಗಗಳನ್ನು । **ಮಿಮಾನೇ**—ಪರಿಷ್ಕರಿಸಿ ಸಂಪಾದಿಸುವವರೂ । **ವಿಶ್ವಾನ್ ಕೇತಾನ್**-(ಅಗ್ನಿಯನ್ನು ವೃದ್ಧಿಪಡಿಸುವ) ಸಕಲ ಜ್ಞಾನಗಳನ್ನೂ । **ಮಹಃ**—ಮಹತ್ತಾಗಿಯೂ । **ಅಧಿ**—ಅತ್ಯಧಿಕವಾಗಿಯೂ । **ದಧಾನೇ**—ಹೊಂದಿದವರಾಗಿಯೂ । **ಸಮಾನಂ**—(ಇಬ್ಬರಿಗೂ) ಸಾಧಾರಣವಾದ ಪ್ರೀತಿಗೆ ಪಾತ್ರವಾಗಿ । **ವತ್ಸಂ**—ಕರುವಿನಂತೆ ಹರ್ಷದಾಯಕವಾದ ಅಗ್ನಿಯನ್ನು । **ಅಭಿ ಸಂಚರಂತೀ**—(ಎದುರುಗೊಂಡು) ಹೋಗುವವರಾಗಿಯೂ (ತೃಪ್ತಿಪಡಿಸುತ್ತಾ) । **ಧೇನೂ**—ಗೋವುಗಳಂತೆ ಪ್ರೀತಿಯನ್ನು ತೋರಿಸುವವರಾಗಿಯೂ ಇರುವ ಯಜಮಾನ ಮತ್ತು ಅವನ ಪತ್ನಿ ಇಬ್ಬರೂ (ಅಥವಾ) ಹೋತ್ರಧ್ವರ್ಯುಗಳಿಬ್ಬರೂ । **ವಿಷ್ವಕ್**--ಒಟ್ಟಿಗೆ ಕೂಡಿಕೊಂಡು । **ವಿ ಚರತಃ**—(ಯಜ್ಞಕ್ಕೆ ಬೇಕಾದ ಸಿದ್ಧತೆಗಳೊಡನೆ) ಸಂಚರಿಸುತ್ತಾರೆ.

ಭಾವಾರ್ಥ

ಉಪಚಾರ ಮಾಡುವುದರಲ್ಲಿ ಕುಶಲರೂ, ಕಶ್ಮಲರಹಿತಗಳಾಗಿ ಪರಿತ್ಯಾಜ್ಯಗಳಲ್ಲದ ಅಗ್ನಿಯ ಮಾರ್ಗಗಳನ್ನು ಪರಿಷ್ಕರಿಸಿ ಸಂಪಾದಿಸುವವರೂ, ಅಗ್ನಿಯನ್ನು ವೃದ್ಧಿಪಡಿಸುವ ಸಕಲಜ್ಞಾನಗಳನ್ನೂ ಮಹತ್ತಾಗಿಯೂ ಅತ್ಯಧಿಕವಾಗಿಯೂ ಹೊಂದಿದವರಾಗಿಯೂ, ಇಬ್ಬರಿಗೂ ಸಾಧಾರಣವಾದ ಪ್ರೀತಿಗೆ ಪಾತ್ರವಾದುದೂ ಕರುವಿನಂತೆ ಹರ್ಷದಾಯಕವಾದುದೂ ಆದ ಅಗ್ನಿಯನ್ನು ಸಂತೋಷಗೊಳಿಸುತ್ತಾ ಎದುರುಗೊಂಡು ಹೋಗುವವರಾಗಿಯೂ. ಕರುವಿನಮೇಲೆ ಪ್ರೀತಿಯನ್ನು ತೋರಿಸುವ ಗೋವುಗಳಂತೆ ಇರುವವರೂ ಆದ ಹೋತೃ ಮತ್ತು ಅಧ್ವರ್ಯು ಇವರಿಬ್ಬರೂ ಅಥವಾ ಯಜಮಾನ ಮತ್ತು ಅವನ ಪತ್ನಿ ಇವರಿಬ್ಬರೂ ಒಟ್ಟಿಗೆ ಕೂಡಿಕೊಂಡು ಯಜ್ಞಕ್ಕೆ ಬೇಕಾದ ಸಿದ್ಧತೆಗಳೊಡನೆ ಸಂಚರಿಸುತ್ತಾರೆ.

English Translation

(There are) two well-disposed milch cows together approaching their common progeny, and fully nourishing (him); pointing out the paths that are free from all that is to be avoided, and possessing more than the great intelligence (necessary for his development).

ವಿಶೇಷ ವಿಷಯಗಳು

**ಸುಮೇಕೇ—ಶೋಭನಕರ್ಮಾಣೌ ಶೋಭನಮೇಹನೇ ವಾ । ಪರಿಚರಣಕುಶಲೇ ಇತ್ಯರ್ಥಃ ।** ಶ್ರೇಷ್ಠವಾದ ಕರ್ಮವುಳ್ಳವರು ಅಥವಾ ಉಪಚಾರಮಾಡುವುದರಲ್ಲಿ ಕುಶಲರು ಎಂದು ಸಾಯಣರು ಇಲ್ಲಿ ಅರ್ಥಮಾಡಿರುವರು. ಸಾಧಾರಣವಾಗಿ ಈ ಪದವು ಸ್ಥಿರವಾಗಿ ಪ್ರತಿಷ್ಠಾಪಿತವಾದ ಎಂಬರ್ಥದಲ್ಲಿ ಉಪಯೋಗಿಸಲ್ಪಟ್ಟಿದೆ ಅನೇಕ ವೇಳೆ ಶ್ರೇಷ್ಠವಾದ ರೂಪವುಳ್ಳ ಎಂಬರ್ಥದಲ್ಲಿಯೂ ಇರಬಹುದು. ಉದಾಹರಣೆಗೆ—

**ಅಚ್ಛಿದ್ರಾ ಶರ್ಮ ಜರಿತಃ ಪುರೂಣಿ ದೇವಾँ ಅಚ್ಛಾ ದೀದ್ಯಾನಃ ಸುಮೇಧಾಃ ।**
**ರಥೋ ನ ಸಸ್ನಿರಭಿ ವಕ್ಷಿ ವಾಜಮಗ್ನೇ ತ್ವಂ ರೋದಸೀ ನಃ ಸುಮೇಕೇ ॥**
(ಋ. ಸಂ. ೩-೧೫-೫)

ಇತ್ಯಾದಿ ಋಕ್ಕುಗಳಲ್ಲಿ **ಶೋಭನರೂಪೋಪೇತೇ ಸ್ವಕೀಯಪ್ರಭಾಭಿಃ ಪ್ರಕಾಶಯುಕ್ತೇ ।** ತನ್ನ ಸ್ವಪ್ರಕಾಶದಿಂದ ಬೆಳಗುತ್ತಾ ರಮ್ಯವಾದ ರೂಪವುಳ್ಳ ಎಂದರ್ಥ. ಪ್ರಕೃತವಾದ ಋಕ್ಕಿನಲ್ಲಿ ಹೋತ್ರಧ್ವರ್ಯುಗಳಾಗಲಿ ಅಥವಾ ಯಜಮಾನ ಮತ್ತು ಅವನ ಪತ್ನಿಯಾಗಲಿ (ಧೇನೂ) ಅವರ ಉತ್ತಮವಾದ ಕರ್ಮಗಳಿಂದ ಸುರೂಪರಾಗಿದ್ದುದರಿಂದ ಪ್ರಾಯಃ ಈ ವಿಶೇಷಣವಿರಬಹುದು-

**ಮಿಮಾನೇ—ಸಂಪಾದಯಿತ್ರ್ಯೌ ।** ಪರಿಷ್ಕರಿಸಿ ಸಂಪಾದಿಸತಕ್ಕವರು.

**ವಿಷ್ವಕ್—ಸರ್ವತಃ ।** ಎಲ್ಲಾ ಕಡೆಯೂ ಎಂದಾಗಲಿ ಅಥವಾ ಒಟ್ಟಿಗೆ ಸೇರಿಕೊಂಡು ಎಂದಾಗಲಿ ಅರ್ಥವಾಗುತ್ತದೆ.

**ತವ ಭ್ರಮಾಸ ಆಶುಯಾ ಪತಂತ್ಯನು ಸ್ಪೃಶ ಧೃಷತಾ ಶೋಶುಚಾನಃ ।**
**ತಪೂಂಷ್ಯಗ್ನೇ ಜುಹ್ವಾ ಪತಂಗಾನಸಂದಿತೋ ವಿ ಸೃಜ ವಿಷ್ವಗುಲ್ಕಾಃ ॥**
(ಋ. ಸಂ. ೪-೪-೨)

ಇತ್ಯಾದಿ ಋಕ್ಕುಗಳಲ್ಲೆಲ್ಲಾ **ಸರ್ವತಃ** ಎಂದೇ ಅರ್ಥಮಾಡಿದೆ. ಪ್ರಕೃತವಾದ ಋಕ್ಕಿನಲ್ಲಿ ಹೋತ್ರಧ್ವರ್ಯುಗಳು ಒಟ್ಟಿಗೆ ಸೇರಿಕೊಂಡು ಉಪಚರಿಸುವರೆಂದು ತಾತ್ಪರ್ಯ.

**ಧೇನೂ—ಈದೃಶ್ಯೌ ಅಧ್ವರ್ಯುಯಜಮಾನರೂಪೇ, ಜಾಯಾಪತಿರೂಪೇ ವಾ ಧೇನೂ ।** ಇಲ್ಲಿ ಅಗ್ನಿಯನ್ನು ಕರುವಿಗೂ ಯಜಮಾನ ಮತ್ತು ಅವನ ಪತ್ನಿಯನ್ನಾಗಲಿ ಅಥವಾ ಹೋತೃ ಮತ್ತು ಅಧ್ವರ್ಯುವನ್ನಾಗಲಿ ಧೇನುವಿಗೂ ಹೋಲಿಸಿದೆ. **ಅಗ್ನಿಗೂ** ಇವರಿಗೂ ಇರತಕ್ಕ ಪರಸ್ಪರ ಸಂಬಂಧವು ಅಷ್ಟು ವಾತ್ಸಲ್ಯಪೂರ್ಣವಾದುದೆಂದೂ, ಕರುವಿನ ಆಗಮನವು ಧೇನುವಿಗೆ ಹರ್ಷದಾಯಕವಾಗಿರುವಂತೆ ಅಗ್ನಿಯ ಆವಿರ್ಭಾವವು ಇವರಿಗೂ ಹರ್ಷದಾಯಕವಾಗಿರುವುದೆಂದು ತಾತ್ಪರ್ಯ. ಈ ಪದವನ್ನು ಪ್ರೀಣಯಿತ್ರ್ಯೌ ಹರ್ಷದಾಯಕೌ ಎಂಬರ್ಥದಲ್ಲಿಯೇ ಅನೇಕ ಕಡೆಗಳಲ್ಲಿ ಉಪಯೋಗಿಸಿದೆ—

**ಮಹಾನ್ತ್ಸಧಸ್ಥೇ ಧ್ರುವ ಆ ನಿಷತ್ತೋಽಂತರ್ದ್ಯಾವಾ ಮಾಹಿನೇ ಹರ್ಯಮಾಣಃ ।**
**ಆಸ್ಕ್ರೇ ಸಪತ್ನೀ ಅಜರೇ ಅಮೃಕ್ತೇ ಸಬರ್ದುಘೇ ಉರುಗಾಯಸ್ಯ ಧೇನೂ ।**
(ಋ. ಸಂ. ೩-೬-೪)

ಎಂಬಲ್ಲಿ ದ್ಯಾವಾಪೃಥಿವಿಗಳಿಗೆ ವಿಶೇಷಣವಾಗಿದೆ. ಅಗ್ನಿಯು ವತ್ಸರೂಪದಲ್ಲಿ ವರ್ಣಿತನಾಗಿ **ಧೇನೂ** ಎನ್ನುವುದಕ್ಕೆ **ಪ್ರೀಣಯಿತ್ರ್ಯೌ** ಎಂದರ್ಥಮಾಡಿದೆ.

**ಮಾತಾ ಚ ಯತ್ರ ದುಹಿತಾ ಚ ಧೇನೂ ಸಬರ್ದುಘೇ ಧಾಪಯೇತೇ ಸಮೀಚೀ ।**
**ಋತಸ್ಯ ತೇ ಸದಸೀಳೇ ಅಂತರ್ಮಹದ್ದೇವಾನಾಮಸುರತ್ವಮೇಕಂ ॥**

(ಋ. ಸಂ. ೩-೫೫-೧೨)

ಎಂಬಲ್ಲಿಯೂ ದ್ಯಾವಾಪೃಥಿವಿಗಳಿಗೆ ವಿಶೇಷಣವಾಗಿ **ಜಗತಃ** ಪ್ರೀಣಯಿತ್ರ್ಯೌ ಜಗತ್ತಿಗೆಲ್ಲಾ ಹರ್ಷದಾಯಕರಾದ ಎಂದರ್ಥವಾಗಿದೆ. ಇದರಂತೆ ಪ್ರಕೃತವಾದ ಋಕ್ಕಿನಲ್ಲಿಯೂ **ಹರ್ಷದಾಯಕತ್ವವೇ** ಮುಖ್ಯವಾದ ಗುಣವಾಗಿದೆ. ಹೋತೃಧ್ವರ್ಯುಗಳೂ ಯಜಮಾನ ಮತ್ತು ಆವನ ಪತ್ನಿಯೂ **ವತ್ಸ**ರೂಪನಾದ ಅಗ್ನಿಯನ್ನು ವಾತ್ಸಲ್ಯದಿಂದ ಎದುರುಗೊಂಡು ಉಪಚರಿಸಿದರೆಂದು ತಾತ್ಪರ್ಯ.

॥ ವ್ಯಾಕರಣಪ್ರಕ್ರಿಯಾ ॥

**ವತ್ಸಮ್**— ವದ ವ್ಯಕ್ತಾಯಾಂ ವಾಚಿ ಧಾತು. **ವೃತೃವದಿ**—(ಉ. ಸೂ. ೩-೬೨) ಎಂಬುದರಿಂದ ಸ ಪ್ರತ್ಯಯ. **ಖರಿಚ** ಎಂಬುದರಿಂದ ಧಾತುದಕಾರಕ್ಕೆ ತಕಾರಾದೇಶ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಸಂಚರಂತೀ**—ಚರ ಗತಿಭಕ್ಷಣಯೋಃ ಧಾತು. ಲಡರ್ಥದಲ್ಲಿ ಶತೃ ಪ್ರತ್ಯಯ. ಸ್ತ್ರೀತ್ವದಲ್ಲಿ **ಉಗಿತಶ್ಚ** ಎಂಬುದರಿಂದ ಙೀಪ್. **ಶಪ್‌ಶ್ಯನೋರ್ನಿತ್ಯಮ್** ಎಂಬುದರಿಂದ ನುಮಾಗಮ. ಲಸಾರ್ವಧಾತುಕ ಅನುದಾತ್ತವಾದುದರಿಂದ ಧಾತುಸ್ವರ ಉಳಿಯುತ್ತದೆ. ಪ್ರಾದಿಸಮಾಸವಾದಾಗ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. ದ್ವಿವಚನ ಪರವಾದಾಗ **ಸುಪಾಂ ಸುಲುಕ್** (ಪಾ. ಸೂ. ೭-೧-೩೯) ಎಂಬುದರಿಂದ ಪೂರ್ವಸವರ್ಣದೀರ್ಘ ಬರುತ್ತದೆ.

**ವಿಷ್ವಕ್**— ಅಂಚು ಗತಿಪೂಜನಯೋಃ ಧಾತು. ವಿಷು ಎಂಬುದು ಉಪಪದವಾಗಿರುವಾಗ **ಋತ್ವಿಕ್-ದಧೃಕ್**—(ಪಾ. ಸೂ. ೩-೨-೫೯) ಎಂಬುದರಿಂದ ಕ್ವಿನ್ ಪ್ರತ್ಯಯ, **ಅನಿದಿತಾಂ ಹಲಉ**—(ಪಾ. ಸೂ. ೬-೪-೨೪) ಎಂಬುದರಿಂದ ಉಪಧಾನಕಾರ ಲೋಪ. **ಕ್ವಿನ್‌ಪ್ರತ್ಯಯಸ್ಯ ಕುಃ** (ಪಾ. ಸೂ. ೮-೨-೬೨) ಎಂಬುದರಿಂದ ಧಾತು ಚಕಾರಕ್ಕೆ ಕುತ್ವ.

**ಚರತಃ**—ಚರ ಗತಿಭಕ್ಷಣಯೋಃ ಧಾತು. ಲಟ್ ಪ್ರಥಮಪುರುಷದ್ವಿವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ಸುಮೇಕೇ**— ಮಿಹ ಸೇಚನೇ ಧಾತು. ಭಾವಾರ್ಥದಲ್ಲಿ ಘಞ್ ಪ್ರತ್ಯಯ. ಶೋಭನಂ ಮೇಹಃ ಯಯೋಸ್ತೇ ಸುಮೇಕೇ ವ್ಯತ್ಯಯದಿಂದ ಹಕಾರಕ್ಕೆ ಕಕಾರಾದೇಶ. ಞಿತ್ ಸ್ವರದಿಂದ ಆದ್ಯುದಾತ್ತವಾಗುತ್ತದೆ. ಸಮಾಸದಲ್ಲಿ **ಆದ್ಯುದಾತ್ತಂದ್ವ್ಯಚ್‌ಛಂದಸಿ** (ಪಾ. ಸೂ. ೬-೨-೧೧೯) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ. ದ್ವಿವಚನಾಂತರೂಪ.

**ಅನಪವೃಜ್ಯಾನ್**—ನ ಅಪವೃಜ್ಯಃ ಅನಪವೃಜ್ಯಃ **ನಞ್‌ಸುಭ್ಯಾಮ್** (ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ. ದ್ವಿತೀಯಾಬಹುವಚನಾಂತರೂಪ.

**ಅಧ್ವನಃ**—ಅದ ಭಕ್ಷಣೇ ಧಾತು. **ಅದೇರ್ಧಚ** (ಉ. ಸೂ. ೪-೫೫) ಎಂಬುದರಿಂದ ಕ್ವನಿಪ್‌ಪ್ರತ್ಯಯ. ಧಕಾರ ಅಂತಾದೇಶವಾಗಿ ಬರುತ್ತದೆ. ಪ್ರತ್ಯಯ ಪಿತ್ತಾದುದರಿಂದ ಧಾತುಸ್ವರ ಉಳಿಯುತ್ತದೆ. **ನಸಂಯೋಗಾದ್ವಮಂತಾತ್** (ಪಾ. ಸೂ. ೬-೪-೧೩೭) ಎಂಬುದರಿಂದ ಅಲ್ಲೋಪನಿಷೇಧಬರುವುದರಿಂದ ದ್ವಿತೀಯಾಬಹುವಚನದಲ್ಲಿ ಅನಿನ ಅಕಾರಕ್ಕೆ ಲೋಪ ಬರುವುದಿಲ್ಲ.

**ಮಿಮಾನೇ**—ಮಾಙ್ ಮಾನೇ ಧಾತು. ಜುಹೋತ್ಯಾದಿ. ಲಡರ್ಥದಲ್ಲಿ ಶಾನಚ್ ಪ್ರತ್ಯಯ. ಶ್ಲು ವಿಕರಣ. **ಭೃಞಾಮಿತ್** (ಪಾ. ಸೂ. ೭-೪-೭೬) ಎಂಬುದರಿಂದ ಅಭ್ಯಾಸಕ್ಕೆ ಇತ್ವ. **ಅಭ್ಯಸ್ತಾನಾಮಾದಿಃ** (ಪಾ. ಸೂ. ೬-೧-೧೮೯) ಎಂಬದರಿಂದ ಆದ್ಯುದಾತ್ತಸ್ವರ ಬರುತ್ತದೆ. ದ್ವಿವಚನಾಂತರೂಪ. ಹೀಗೆಯೇ ದಧಾನೇ ಎಂಬಲ್ಲಿಯೂ ಧಾಞ್ ಧಾತುವಿಗೆ ಶಾನಚ್ ಬಂದು ರೂಪಸಿದ್ಧಿಯಾಗುತ್ತದೆ.

**ಮಹಃ**—ಮಹ ಪೂಜಾಯಾಂ ಧಾತು. **ಕ್ವಿಪ್ ಚ** ಎಂಬುದರಿಂದ ಕ್ವಿಪ್ ಪ್ರತ್ಯಯ. ದ್ವಿತೀಯಾಬಹುವಚನಾಂತರೂಪ. **ಸಾವೇಕಾಚಸ್ತೃತೀಯಾದಿಃ** ( ಪಾ. ಸೂ. ೬-೧-೧೬ ) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ. ॥ ೩ ॥

———:o:———

ಸಂಹಿತಾಪಾಠಃ

ಧೀರಾಸಃ ಪದಂ ಕವಯೋ ನಯಂತಿ ನಾನಾ ಹೃದಾ ರಕ್ಷಮಾಣಾ ಅಜುರ್ಯಂ ।
ಸಿಷಾಸಂತಃ ಪರ್ಯಪಶ್ಯಂತ ಸಿಂಧುಮಾವಿರೇಭ್ಯೋ ಅಭವತ್ಸೂರ್ಯೋ ನೄನ್ ॥ ೪ ॥

ಪದಪಾಠಃ

ಧೀರಾಸಃ । ಪದಂ । ಕವಯಃ । ನಯಂತಿ । ನಾನಾ । ಹೃದಾ । ರಕ್ಷಮಾಣಾಃ । ಅಜುರ್ಯಂ ।
ಸಿಷಾಸಂತಃ । ಪರಿ । ಅಪಶ್ಯಂತ । ಸಿಂಧುಂ । ಆವಿಃ । ಏಭ್ಯಃ । ಅಭವತ್ । ಸೂರ್ಯಃ । ನೄನ್ ॥ ೪ ॥

ಸಾಯಣಭಾಷ್ಯಂ

ಧೀರಾಸೋ ಧೀರಾ ಧೀಮಂತಃ ಪ್ರಯೋಗಜ್ಞಾ ಅಧ್ವರ್ಯ್ವಾದಯೋಽಜುರ್ಯಮಜರ್ಯಮಜೀರ್ಣಮೇನಮಗ್ನಿಂ ಪದಂ ಸ್ಥಾನಂ ವೇದಿಲಕ್ಷಣಂ ನಯಂತಿ। ಪ್ರಾಪಯಂತಿ। ಮಥನದೇಶಾದ್ಗಾರ್ಹಪತ್ಯಾದ್ವಾ। ಅಥವಾ ವಕ್ಷ್ಯಮಾಣಲಕ್ಷಣಾ ಯಜಮಾನಾದಯಃ ಪದಮಾಸ್ಪದಂ ಸರ್ವಕಾಮಾ-

ನಾಮಾಸ್ಪದಮೇನಂ ಗಮಯಂತಿ । ಕೀದೃಶಾಸ್ತೇ । ಕವಯಃ ಕ್ರಾಂತದರ್ಶಿನೋ ಮೇಧಾವಿನಃ ಅನೂಚಾನಾ ವಾ । ಯೇ ವಾ ಅನೂಚಾನಾಸ್ತೇ ಕವಯ ಇತಿ ಶ್ರುತೇಃ । ಕಿಂಚ ನಾನಾ ಹೃದಾ ಬಹುಪ್ರಕಾರಯಾ ಬುದ್ಧ್ಯಾ ರಕ್ಷಮಾಣಾ ಧಾರಯಮಾಣಾಃ। ಕಿಂಚೈವಂರೂಪಾಸ್ತೇ ಸಿಂಧುಂ ಸ್ಯಂದಮಾನಂ ಯಜ್ಞದ್ವಾರಾ ಫಲಾನಿ ಸ್ರವಂತಮಗ್ನಿಂ ಸಿಷಾಸಂತಃ ಸಂಭಕ್ತುಮಿಚ್ಛಂತಃ ॥ ಸನತೇಃ ಸನಿ ಸನೀವಂತರ್ಧೇತಿ ವಿಕಲ್ಪನಾದಿಡಭಾವಃ । ಜನಸನಖನಾಮಿತ್ಯಾತ್ವಂ ॥ ಪರ್ಯಪಶ್ಯಂತ । ಪರಿತಃ ಪಶ್ಯಂತಿ । ಶುಶ್ರೂಷಂತ ಇತ್ಯರ್ಥಃ । ಕಿಂಚ ಸೂರ್ಯಃ ಸರ್ವಸ್ಯ ಪ್ರಸವಿತಾಯಮಗ್ನಿರೇಭ್ಯ ಏವಂ ಕುರ್ವದ್ಭ್ಯೋ ನೃಭ್ಯೋ ನೇತೃಭ್ಯ ಆವಿರಭವತ್ । ತೇಷಾಮನುಗ್ರಹೇಣ ಪ್ರತ್ಯಕ್ಷೋಽಭವತ್ ॥ ನೄನಿತ್ಯತ್ರ ವಚನವ್ಯತ್ಯಯಃ ॥ ನೄನ್ಪ್ರಾಣಿನೋಽನುಗ್ರಹೀತುಮಿತಿ ವಾ ಯೋಜ್ಯಂ ॥

ಪ್ರತಿಪದಾರ್ಥ

**ಕವಯಃ**—ಮೇಧಾವಿಗಳೂ । **ಧೀರಾಸಃ**—ಪ್ರಯೋಗಕುಶಲರೂ ಆದ ಅಧ್ವರ್ಯುವೇ ಮೊದಲಾದವರು ಅಥವಾ ಯಜಮಾನಾದಿಗಳು । **ಅಜುರ್ಯಂ**—ನಾಶರಹಿತನಾದ ಅಗ್ನಿಯನ್ನು । **ಹೃದಾ**—ತಮ್ಮ ಹೃದಯಗಳಲ್ಲಿ । **ನಾನಾ**—ಅನೇಕವಿಧವಾಗಿ । **ರಕ್ಷಮಾಣಾಃ**—ಆದರಿಸುತ್ತಾ । **ಪದಂ**—ವೇದಿಕೆಗೆ । **ನಯಂತಿ**—ತಂದು ಸೇರಿಸುತ್ತಾರೆ। [ಅಥವಾ) **ಪದಂ**—(ಸಕಲವಾದ ಇಷ್ಟಾರ್ಥಗಳಿಗೂ) ಆಸ್ಪದನಾಗಿರುವ ಅಗ್ನಿಯನ್ನು। **ನಯಂತಿ**—ಒಯ್ಯುತ್ತಾರೆ. ] (ಮತ್ತು) **ಸಿಂಧುಂ**—(ಯಜ್ಞದ ಮೂಲಕ ಫಲಗಳನ್ನು) ಸುರಿಯುವಂತೆ ಮಾಡುವ ಅಗ್ನಿಯನ್ನು । **ಸಿಷಾಸಂತಃ**—ಸೇವಿಸಲಿಚ್ಛೆಯುಳ್ಳವರಾಗಿ । **ಪರ್ಯಪಶ್ಯಂತ** — ಸುತ್ತಲೂ ಆರಾಧಿಸುತ್ತಾರೆ (ಆದುದರಿಂದ) । **ಸೂರ್ಯಃ**—ಸೂರ್ಯರೂಪದ ಅಗ್ನಿಯು । **ಏಭ್ಯಃ ನೄನ್**—ಮಾರ್ಗದರ್ಶಕರಾದ ಇವರಿಗೆ । **ಆವಿರಭವತ್**—ಪ್ರತ್ಯಕ್ಷನಾಗಿ ಕಾಣಿಸಿಕೊಂಡನು.

॥ ಭಾವಾರ್ಥ ॥

ಮೇಧಾವಿಗಳೂ, ಪ್ರಯೋಗವನ್ನು ತಿಳಿದು ಅದರಲ್ಲಿ ಕುಶಲರೂ ಆದ ಅಧ್ವರ್ಯುವೇ ಮೊದಲಾದವರು ನಾಶರಹಿತನಾದ ಅಗ್ನಿಯನ್ನು ತಮ್ಮ ಹೃದಯಗಳಲ್ಲಿ ಅನೇಕ ವಿಧವಾಗಿ ಆದರಿಸುತ್ತಾ ವೇದಿಕೆಗೆ ತಂದು ಸೇರಿಸುತ್ತಾರೆ. ಮತ್ತು ಯಜ್ಞದಮೂಲಕ ಇಷ್ಟಾರ್ಥಗಳನ್ನು ಕೊಡುವ ಅಗ್ನಿಯನ್ನು ಸೇವಿಸಲಿಚ್ಛೆಯುಳ್ಳವರಾಗಿ ಅವನನ್ನು ಸುತ್ತಲೂ ಆರಾಧಿಸುತ್ತಾರೆ. ಸೂರ್ಯರೂಪದಲ್ಲಿ ಸಕಲವನ್ನೂ ಉತ್ಪನ್ನವಾಗುವಂತೆ ಮಾಡುವ ಈ ಅಗ್ನಿಯು ಮಾರ್ಗದರ್ಶಕರಾದ ಈ ಪೂಜಕರಿಗೆ ಪ್ರತ್ಯಕ್ಷನಾಗಿ ಕಾಣಿಸಿಕೊಂಡನು.

## English Translation

Experienced sages bring the invincible (Agni) to his station (on the altar); cherishing him in manifold (ways) in their hearts: desirous of propitiating him they worship the (boon)-shedding (Agni); and to those men he is manifest as the Sun.

**ಧೀರಾಸಃ—ಧೀರೋ ಧೀಮಾನ್ ।** ಪ್ರಜ್ಞಾವಂತನೆಂದರ್ಥ (ನಿ. ೩-೧೨). ಈ ಪದವು **ಮೇಧಾವಿ** ನಾಮಗಳಲ್ಲಿ ಪಠಿತವಾಗಿದೆ (ನಿ. ೩--೯) ಸಾಯಣರು ಈ ಋಕ್ಕಿನಲ್ಲಿ ಈ ಪದಕ್ಕೆ **ಪ್ರಯೋಗಜ್ಞಾ ಅಧ್ವರ್ಯ್ವಾ-ದಯಃ ।** ಪ್ರಯೋಗ ಕುಶಲರಾದ ಅಧ್ವರ್ಯುವೇ ಮೊದಲಾದ ಋತ್ವಿಕ್ಕುಗಳೆಂದರ್ಥ ಮಾಡಿದಾರೆ.

ಈಗಿನ ರೂಢಿಯಲ್ಲಿ **ಧೀರ** ಶಬ್ದಕ್ಕೆ ಧೈರ್ಯವುಳ್ಳವನೆಂದಾಗುತ್ತದೆ. ವೇದದಲ್ಲಿಯೂ ಉಪನಿಷತ್ತುಗಳಲ್ಲಿಯೂ **ಪ್ರಾಜ್ಞ,** ವಿವೇಕಿ ಎಂಬರ್ಥದಲ್ಲಿಯೇ ಉಪಯೋಗಿಸಲ್ಪಟ್ಟಿದೆ. ಅಲ್ಲಿಯೂ ಸಹ **ಧೀರನು** ಪ್ರಾಜ್ಞನಾದುದರಿಂದಲೂ ಭಯವನ್ನು ಜಯಿಸಿ ನಿರ್ಭಯನಾಗಿರುವುದು, ಆಪತ್ಕಾಲದಲ್ಲೂ ಪ್ರಶಾಂತಚಿತ್ತನಾಗಿರುವುದು ಇತ್ಯಾದಿ ಗುಣಗಳಿರು ವುದರಿಂದಲೂ ಧೈರ್ಯವುಳ್ಳವನೆಂದೇ ತಾತ್ಪರ್ಯವಾಗುತ್ತದೆ.

**ಯುವಾ ಸುವಾಸಾಃ ಪರಿವೀತ ಆಗಾತ್ಸ ಉ ಶ್ರೇಯಾನ್ಭವತಿ ಜಾಯಮಾನಃ ।**
**ತಂ ಧೀರಾಸಃ ಕವಯ ಉನ್ನಯಂತಿ ಸ್ವಾಧ್ಯೋ೩ ಮನಸಾ ದೇವಯಂತಃ ॥**

(ಋ. ಸಂ. ೩-೮-೪)

ಇತ್ಯಾದಿ ಋಕ್ಕುಗಳಲ್ಲೂ,

**ಶ್ರೇಯಶ್ಚ ಪ್ರೇಯಶ್ಚ ಮನುಷ್ಯಮೇತಸ್ತೌ ಸಂಪರೀತ್ಯ ವಿವಿನಕ್ತಿ ಧೀರಃ ।**
**ಶ್ರೇಯೋ ಹಿ ಧೀರೋಽಭಿಪ್ರೇಯಸೋ ವೃಣೀತೇ ಪ್ರೇಯೋ ಮಂದೋ ಯೋಗಕ್ಷೇಮಾ-**
**ದ್ವೃಣೀತೇ ॥**

(ಕಠ. ೨-೨)

**ಮಹಾಂತಂ ವಿಭುಮಾತ್ಮಾನಂ ಮತ್ವಾ ಧೀರೋ ನ ಶೋಚತಿ ।**

(ಕಠ. ೫-೪)

ಇತ್ಯಾದ್ಯುಪನಿಷದ್ವಾಕ್ಯಗಳಲ್ಲಿಯೂ ಸಹ ಧೀರ ಶಬ್ದಕ್ಕೆ **ಧೀಮಾನ್ ಪ್ರಾಜ್ಞಃ** ಎಂದರ್ಥವಾಗುತ್ತದೆ.

**ಅಜುರ್ಯಂ—ಅಜೀರ್ಣಂ । ನಾಶರಹಿತಂ ।** ನಾಶರಹಿತನಾದ ಎಂದು ಅಗ್ನಿಗೆ ವಿಶೇಷಣವಾಗಿದೆ.

**ಸಿಂಧುಂ—ಸಿಂಧುಃ ಸ್ರವಣಾತ್ ।** ಪ್ರವಹಿಸುವುದರಿಂದ ನದಿಗೆ ಸಿಂಧುವೆಂದು ಹೆಸರು. ಆದುದರಿಂದ ನದೀ ನಾಮಗಳಲ್ಲಿ ಪಠಿತವಾಗಿದೆ.

ಪ್ರಕೃತದಲ್ಲಿ **ಸ್ಯಂದಮಾನಂ ಯಜ್ಞದ್ವಾರಾ ಫಲಾನಿ ।** ಯಜ್ಞದ ಮೂಲಕ ಫಲಗಳು ಪ್ರವಹಿಸುವಂತೆ ಮಾಡುವವನಾದ್ದರಿಂದ ಅಗ್ನಿಗೆ ವಿಶೇಷಣವಾಗಿದೆ.

**ಪದಂ ನಯಂತಿ ।** ಎಂಬುದಕ್ಕೆ ಎರಡು ವಿಧವಾಗಿ ಅರ್ಥಮಾಡಿದ್ದಾರೆ. ಮೊದಲಣಯದಾಗಿ, **ಪದಂ ಸ್ಥಾನಂ ವೇದಿಲಕ್ಷಣಂ ನಯಂತಿ ।** ವೇದಿರೂಪವಾದ ಸ್ಥಾನಕ್ಕೆ ಒಯ್ಯುತ್ತಾರೆಂದೂ ಅಥವಾ ಎರಡನೆಯದಾಗಿ **ಯಜಮಾನಾದಯಃ ಸರ್ವಕಾಮಾನಾಮಾಸ್ಪದಮೇನಂ ನಯಂತಿ ।** ಸಕಲವಾದ ಇಷ್ಟಾರ್ಥಪ್ರದನಾದ ಅಗ್ನಿಯನ್ನು ಒಯ್ಯುತ್ತಾರೆಂದೂ ಅರ್ಥಮಾಡಿದೆ.

**ಪರ್ಯಪಶ್ಯಂತ—ಪರಿತಃ ಪಶ್ಯಂತಿ । ಶುಶ್ರೂಷಂತ ಇತ್ಯರ್ಥಃ ।** ಸುತ್ತಲೂ ಆರಾಧಿಸುತ್ತಾರೆಂದರ್ಥ.

ವ್ಯಾಕರಣಪ್ರಕ್ರಿಯಾ

**ಧೀರಾಸಃ**—ಡುಧಾಞ್ ಧಾರಣಪೋಷಣಯೋಃ ಧಾತು. **ಸುಸೂಧಾಗೃಧಿಭ್ಯಃ** (ಉ. ಸೂ. ೩-೧೮೩) ಎಂಬುದರಿಂದ ಕ್ರನ್ ಪ್ರತ್ಯಯ. ಕಿತ್ತಾಗುವದರಿಂದ **ಘುಮಾಸ್ಥಾ** (ಪಾ ಸೂ. ೬-೪-೬೬) ಎಂಬುದರಿಂದ ಧಾತುವಿಗೆ ಈತ್ವ. ಜಸ್ ಪರವಾದಾಗ **ಆಜ್ಜಸೇರಸುಕ್** (ಪಾ. ಸೂ. ೭-೧-೫೦) ಎಂಬುದರಿಂದ ಅಸುಕಾಗಮ. **ಞ್ನಿತ್ಯಾದಿರ್ನಿತ್ಯಮ್** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಕವಯಃ**—ಕು ಶಬ್ದೇ ಧಾತು. **ಅಚಇಃ** (ಉ. ಸೂ. ೪-೫೭೮) ಎಂಬುದರಿಂದ ಇ ಪ್ರತ್ಯಯ. ಪ್ರತ್ಯಯನಿಮಿತ್ತವಾಗಿ ಧಾತುವಿನ ಇಕಿಗೆ ಗುಣ. ಅವಾದೇಶ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಜಸ್ ಪರವಾದಾಗ **ಜಸಿ ಚ** ಎಂಬುದರಿಂದ ಗುಣ. ಅಯಾದೇಶ.

**ನಯಂತಿ**—ಣೀಞ್ ಪ್ರಾಪಣೇ ಧಾತು **ಣೋನಃ** ಎಂಬುದರಿಂದ ಆದಿಗೆ ನತ್ವ. ಲಟ್ ಪ್ರಥಮಪುರುಷ ಬಹುವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ಹೃದಾ**—ಹೃದಯಶಬ್ದ. ತೃತೀಯಾಏಕವಚನ ಪರವಾದಾಗ **ಪದ್ದನ್ನೋಮಾಸ್**—(ಪಾ ಸೂ. ೬-೧-೬೩) ಎಂಬುದರಿಂದ ಹೃದಾದೇಶ. **ಊಡಿದಂಪದಾದಿ**—(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ರಕ್ಷಮಾಣಾಃ**—ರಕ್ಷ ಪಾಲನೇ ಧಾತು. ಲಡರ್ಥದಲ್ಲಿ ಶಾನಚ್ ಪ್ರತ್ಯಯ. ಶಪ್ ವಿಕರಣ. **ಆನೇಮುಕ್** (ಪಾ. ಸೂ. ೭-೨-೮೨) ಎಂಬುದರಿಂದ ಮುಕಾಗಮ. **ತಾಸ್ಯನುದಾತ್ತೇತ್** ಸೂತ್ರದಿಂದ ಲಸಾರ್ವಧಾತುಕ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಅಜುರ್ಯಮ್**—ಜ್ಯೂಷ್ ವಯೋಹಾನೌ ಧಾತು. ಭಾವಾರ್ಥದಲ್ಲಿ ಣ್ಯತ್ ಪ್ರತ್ಯಯ. **ಅಚೋಞ್ಣಿತಿ** ಎಂಬುದರಿಂದ ಧಾತುವಿನ ಋಕಾರಕ್ಕೆ ವೃದ್ಧಿ. ರ ಪರವಾಗಿ ಬರುತ್ತದೆ. ವ್ಯತ್ಯಯದಿಂದ ಆಕಾರಕ್ಕೆ ಉಕಾರ ಬರುತ್ತದೆ. ನ ವಿದ್ಯತೇ ಜುರ್ಯಂ ಜರಾ ಯಸ್ಯ ಸಃ ಅಜುರ್ಯಃ ತಮ್. **ನಞ್ಸುಭ್ಯಾಮ್** (ಪಾ, ಸೂ. ೬-೨-೧೭೨) ಎಂಬುದರಿಂದ ಉತ್ತರಪದ ಅಂತೋದಾತ್ತಸ್ವರ ಬರುತ್ತದೆ.

**ಸಿಷಾಸಂತಃ**—ಷಣ ಸಂಭಕ್ತೌ ಧಾತು. **ಧಾತೋಃ ಕರ್ಮಣಃ** (ಪಾ. ಸೂ. ೩-೧-೭) ಎಂಬುದರಿಂದ ಇಚ್ಛಾರ್ಥದಲ್ಲಿ ಸನ್. **ಸನೀವಂತರ್ಧ**—(ಪಾ. ಸೂ. ೭-೨-೪೯) ಎಂಬುದರಿಂದ ಇಡಾಗಮ. ವಿಕಲ್ಪವಿಧಾನ ಮಾಡಿರುವುದರಿಂದ ಇಲ್ಲಿ ಇಡಾಗಮ ಬರುವುದಿಲ್ಲ. **ಜನಸನಖನಾಂ ಸಞ್ಝಲೋಃ** (ಪಾ ಸೂ. ೬-೪-೪೨) ಎಂಬುದರಿಂದ ಧಾತುವಿಗೆ ಆತ್ವ. **ಸನ್ಯತಃ** (ಪಾ. ಸೂ ೭-೪-೭೯) ಎಂಬುದರಿಂದ ಅಭ್ಯಾಸಕ್ಕೆ ಇತ್ವ. ಸನ್ನಂತದ ಮೇಲೆ ಲಟ್ ಬಂದಾಗ ಅದಕ್ಕೆ ಶತ್ರಾದೇಶ. ಪ್ರಥಮಾಬಹುವಚನಾಂತರೂಪ. **ಅಭ್ಯಸ್ತಾನಾಮಾದಿಃ** (ಪಾ. ಸೂ. ೬-೧-೧೮೯) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

ಅಪಶ್ಯಂತ—ದೃಶಿರ್ ಪ್ರೇಕ್ಷಣೇ ಧಾತು. **ವ್ಯತ್ಯಯೋ ಬಹುಲಂ** ಎಂಬುದರಿಂದ ಆತ್ಮನೇಪದಿಯಾಗುತ್ತದೆ. ಛಾಂದಸವಾಗಿ ವರ್ತಮಾನಾರ್ಥದಲ್ಲಿ ಲಙ್. ಪ್ರಥಮಪುರುಷಬಹುವಚನಾಂತರೂಪ. ಅತಿಙಂತದ ಪರದಲ್ಲಿ ಇರುವುದರಿಂದ ನಿಘಾತಸ್ವರ ಬರುತ್ತದೆ.

**ಸಿಂಧುಂ**—ಸ್ಯಂದೂ ಪ್ರಸ್ರವಣೇ ಧಾತು. **ಸ್ಯಂದೇಃ ಸಂಪ್ರಸಾರಣಂ ಧಶ್ಚ** (ಉ. ಸೂ. ೧-೧೦) ಎಂಬುದರಿಂದ ಉ ಪ್ರತ್ಯಯ. ಧಾತುವಿನ ಯಕಾರಕ್ಕೆ ಸಂಪ್ರಸಾರಣ. ದಕಾರಕ್ಕೆ ಧಕಾರಾದೇಶ. ದ್ವಿತೀಯಾ ಏಕವಚನಾಂತರೂಪ.

**ಸೂರ್ಯಃ**—ಷೂಙ್ ಪ್ರಸವೇ ಧಾತು. **ಧಾತ್ವಾದೇಃ ಷಃ ಸಃ** ಎಂಬುದರಿಂದ ಆದಿಗೆ ಸತ್ವ. **ರಾಜ-ಸೂಯಸೂರ್ಯ**—ಎಂಬುದರಿಂದ ಕ್ಯಬಂತವಾಗಿ ನಿಪಾತಿತವಾಗಿದೆ.

**ನೄನ್**—ವಚನ ವ್ಯತ್ಯಯದಿಂದ ಚತುರ್ಥೀವಿಭಕ್ತಿಗೆ ತೃತೀಯಾಬಹುವಚನ ಬಂದಿದೆ. ಅಥವಾ ಅನುಗೃಹೀತುಂ ಎಂದು ಅಧ್ಯಾಹಾರ ಮಾಡುವುದರಿಂದ ಕರ್ಮವಾಚಕವಾಗುವುದರಿಂದ ದ್ವಿತೀಯಾ ಬರುತ್ತದೆ. ॥ ೪ ॥



ಸಂಹಿತಾಪಾಠಃ

ದಿದೃಕ್ಷೇಣ್ಯಃ ಪರಿ ಕಾಷ್ಠಾಸು ಜೇನ್ಯ ಈಳೇನ್ಯೋ ಮಹೋ ಅರ್ಭಾಯ ಜೀವಸೇ ।
ಪುರುತ್ರಾ ಯದಭವತ್ಸೂರಹೈಭ್ಯೋ ಗರ್ಭೇಭ್ಯೋ ಮಘವಾ ವಿಶ್ವ-ದರ್ಶತಃ ॥ ೫ ॥

ಪದಪಾಠಃ

ದಿದೃಕ್ಷೇಣ್ಯಃ । ಪರಿ । ಕಾಷ್ಠಾಸು । ಜೇನ್ಯಃ । ಈಳೇನ್ಯಃ । ಮಹಃ । ಅರ್ಭಾಯ । ಜೀವಸೇ ।
ಪುರುऽತ್ರಾ । ಯತ್ । ಅಭವತ್ । ಸೂಃ । ಅಹ । ಏಭ್ಯಃ । ಗರ್ಭೇಭ್ಯಃ । ಮಘऽವಾ । ವಿಶ್ವऽದರ್ಶತಃ ।
॥ ೫ ॥

। ಸಾಯಣಭಾಷ್ಯಂ ॥

ಅಯಮಗ್ನಿಃ ಕಾಷ್ಠಾಸು ಪರಸ್ಪರಂ ಕ್ರಾಂತ್ವಾ ವರ್ತಮಾನಾಸು ದಶಸು ದಿಕ್ಷು ದಿದೃಕ್ಷೇಣ್ಯಃ । ಅನುಗ್ರಹಯುಕ್ತ್ಯಾ ದರ್ಶನಯುಕ್ತೋ ಭವತಿ । ಯದ್ವಾ । ದ್ರಷ್ಟುಮೇಷ್ಟವ್ಯೋ ದರ್ಶನೇಚ್ಛಾವಿಷಯ-ಭೂತಃ ॥ ದೃಶೇಃ ಸನಂತಾತ್ಕೃತ್ಯಾರ್ಥೇ ತವೈಕೇನ್ಕೇನ್ಯತ್ವನ ಇತಿ ಕೇನ್ಯಪ್ರತ್ಯಯಃ ॥ ಅತ ಏವ ಜೇನ್ಯಃ ಸರ್ವತ್ರ ಪ್ರಾದುರ್ಭವನಶೀಲೋ ಭವತಿ ಜಯಶೀಲೋ ವಾ । ಕಿಂಚ ಪ್ರದಾನಸಮಯ ಈಳೇನ್ಯಃ ಸ್ತುತ್ಯೋ ಭವತಿ । ಕಿಮರ್ಥಮೇವಂ । ಮಹೋ ಮಹತೋ ದೇವಾದೇರರ್ಭಾಯಾರ್ಭಕಸ್ಯಾಲ್ಪಸ್ಯ

ಯಜಮಾನಾದೇರ್ವಾ ಜೀವಸೇ ಜೀವನಾಯ । ಹವಿರ್ವಹನೇನ ಧನಪ್ರದಾನೇನೇತಿ ವಿವೇಕಃ । ತತ್ರೋಪಪತ್ತಿಮಾಹ । ಯದಹ ಯಸ್ಮಾತ್ಖಲು ಪುರುತ್ರಾ ಬಹುಷು ದೇಶೇಷು ॥ ದೇವಮನುಷ್ಯೇತ್ಯಾದಿನಾ ತ್ರಾಪ್ರತ್ಯಯಃ ॥ ಮಘವಾ ಹವಿರ್ಲಕ್ಷಣಾನ್ನವಾನ್ ವಿಶ್ವದರ್ಶತಃ ಸರ್ವವಿಷಯೇಪ್ರೇಕ್ಷಣೀಯೋಽಗ್ನಿರೇಭ್ಯೋ ಗರ್ಭೇಭ್ಯಃ ॥ ಷಷ್ಠ್ಯರ್ಥೇ ಚತುರ್ಥೀ ॥ ಏಷಾಮೃತ್ವಿಜಾಂ ಗರ್ಭವಚ್ಛಿಶುವದ್ರಕ್ಷಣೀಯಾನಾಂ ಸೂರಭವತ್ ಪ್ರಸವಿತೋತ್ಪಾದಯಿತಾಭವತ್ ಭವತಿ । ತಸ್ಮಾನ್ನಾನಾ ಪ್ರಜಾ ರಕ್ಷಣಾಕಾಂಕ್ಷಿಣಃ ಕವಯಃ ಪದಂ ನಯಂತೀತಿ ಪೂರ್ವತ್ರ ಸಂಬಂಧಃ ॥

ಪ್ರತಿಪದಾರ್ಥ

(ಅಗ್ನಿಃ—ಅಗ್ನಿಯು) । ಮಹಃ—(ಹವಿಸ್ಸನ್ನು ವಹಿಸುವುದರಿಂದ) ಪ್ರಭಾವಶಾಲಿಗಳಾದ ದೇವತೆಗಳಿಗೂ । ಅರ್ಭಾಯ—ಅಲ್ಪರಾದ ಮಾನವರಿಗೂ । ಜೀವಸೇ—ಜೀವನಕ್ಕಾಗಿ । ಕಾಷ್ಠಾಸು—ಹತ್ತು ದಿಕ್ಕುಗಳಲ್ಲಿಯೂ । ಪರಿ ದಿದೃಕ್ಷೇಣ್ಯಃ—(ಅನುಗ್ರಹಬುದ್ಧಿಯಿಂದ) ಎಲ್ಲರಿಗೂ ಕಾಣಿಸಿಕೊಳ್ಳಬೇಕೆಂಬ ಇಚ್ಛೆಯಿಂದಿರುವನು (ಅದ್ದರಿಂದಲೇ) । ಜೇನ್ಯಃ—(ಎಲ್ಲೆಲ್ಲಿಯೂ) ಆವಿರ್ಭೂತನಾಗಿಯೂ ಅಥವಾ ಜಯಶಾಲಿಯಾಗಿಯೂ । ಈಳೇನ್ಯಃ—ಪೂಜ್ಯನಾಗಿಯೂ (ಆಗಿರುತ್ತಾನೆ) । **ಯತ್ ಅಹ**—ಆದ್ದರಿಂದಲೇ । **ಪುರುತ್ರಾ**—ಅನೇಕ ಪ್ರದೇಶಗಳಲ್ಲಿ । **ಮಘವಾ**—ಹವಿಸ್ಸಿನ ರೂಪದ ಅನ್ನದೊಡನೆ ಕೂಡಿಕೊಂಡು । **ವಿಶ್ವದರ್ಶತಃ**—ಎಲ್ಲರಿಗೂ ಗೋಚರನಾಗುವ ಅಗ್ನಿಯು । ಏಭ್ಯಃ **ಗರ್ಭೇಭ್ಯಃ**—ಗರ್ಭದ ಶಿಶುವಿನಂತೆ ಬಳ್ಳಿಯ ರಕ್ಷಣೆಗೆ ಯೋಗ್ಯರಾದ ಈ ಋತ್ವಿಗಾದಿಗಳಿಗೆ । **ಸೂಃ ಅಭವತ್**—ಉತ್ಪಾದಕನಾಗಿ ಆಗಿದ್ದಾನೆ ॥

ಭಾವಾರ್ಥ ॥

ಅಗ್ನಿಯು ಹವಿಸ್ಸನ್ನು ವಹಿಸಿ ಹಂಚುವುದರಿಂದ ಪ್ರಭಾವಶಾಲಿಗಳಾದ ದೇವತೆಗಳಿಗೂ, ಧನವನ್ನು ಕೊಡುವುದರಿಂದ ಅಲ್ಪರಾದ ಮಾನವರಿಗೂ ಜೀವಿಸಲು ಅನುಕೂಲವಾಗುವಂತೆ ಅನುಗ್ರಹಬುದ್ಧಿಯಿಂದ ಹತ್ತುದಿಕ್ಕುಗಳಲ್ಲಿಯೂ ಸಹ ಎಲ್ಲರಿಗೂ ಕಾಣಿಸಿಕೊಳ್ಳುವ ಇಷ್ಟದಿಂದಿರುವನು. ಆದುದರಿಂದ ಅವನು ಎಲ್ಲೆಲ್ಲಿಯೂ ಆವಿರ್ಭೂತನಾಗಿಯೂ, ಪೂಜ್ಯನಾಗಿಯೂ ಆಗಿರುತ್ತಾನೆ. ಆ ಕಾರಣದಿಂದಲೇ, ಅನೇಕ ಪ್ರದೇಶಗಳಲ್ಲಿ ಹವಿಸ್ಸಿನರೂಪದ ಅನ್ನದೊಡನೆ ಕೂಡಿಕೊಂಡು ಸಕಲರಿಗೂ ಗೋಚರನಾಗಿ ಗರ್ಭದ ಶಿಶುವಿನಂತೆ ರಕ್ಷಣೆಗೆ ಯೋಗ್ಯರಾದ ಈ ಋತ್ವಿಗಾದಿಗಳಿಗೆ ಉತ್ಪಾದಕನಾಗಿ ಆಗಿದ್ದಾನೆ.

English Translation

He his willing to be seen in the (ten) regions (of space); the victorious, the adorable, the source of life to great and small: inasmuch as in many places the opulent (possessor of sacrificial food), who is visible to all, s the parent of that (pious) progeny.

ವಿಶೇಷವಿಷಯಗಳು

ಅರ್ಭಾಯ—ಅರ್ಭಕಸ್ಯ ಅಲ್ಪಸ್ಯ ಯಜಮಾನಾದೇಃ । ಅರ್ಭಕ ಶಬ್ದವು ಅಲ್ಪ. ಹ್ರಸ್ವನಾಮಗಳಲ್ಲಿ ಪಠಿತವಾಗಿವೆ. (ನಿ. ೩-೧೩) ನಿರುಕ್ತಕಾರರು—

**ಕನೀನಕೇವ ವಿದ್ರಧೇ ನವೇ ದ್ರುಪದೇ ಅರ್ಭಕೇ । ಬಭ್ರೂ ಯಾಮೇಷು ಶೋಭೇತೇ ॥**

(ಋ. ಸಂ. ೪-೩೨-೨೩)

ಎಂಬ ಋಕ್ಕನ್ನುದಹರಿಸಿ **ಅರ್ಭಕೇ ಅವೃದ್ಧೇ** । ಇನ್ನೂ ದೊಡ್ಡದಲ್ಲದಿರುವುದು ಎಂದರೆ ಸಣ್ಣದು ಅಥವಾ ಸಣ್ಣ ಸ್ಥಾನವನ್ನಾಕ್ರಮಿಸುವುದು ಎಂದು ವಿವರಿಸಿದ್ದಾರೆ (ನಿ. ೪-೧೫). **ಅಗ್ನಿಯು** ಮಹತ್ತ್ವದೊಡನೆ ಹೋಲಿಸಿದರೆ ಯಜ್ಞಕರ್ತರಾದ ಮಾನವರು ಅಲ್ಪರೆಂದರ್ಥ.

**ಕಾಷ್ಠಾಸು**—ಈ ಪದವು ದಿಙ್ನಾಮಗಳಲ್ಲಿ ಪಠಿತವಾಗಿದೆ. (ನಿ. ೨-೧೬). **ತತ್ರ ಕಾಷ್ಠಾ ಇತ್ಯೇತದನೇಕಸ್ಯಾಪಿ ಸತ್ತ್ವಸ್ಯ ನಾಮ ಭವತಿ ।**

**ಕಾಷ್ಠಾ ದಿಶೋ ಭವಂತಿ ಕ್ರಾನ್ತ್ವಾ ಸ್ಥಿತಾ ಭವಂತಿ ।**
**ಕಾಷ್ಠಾ ಉಪದಿಶೋ ಭವಂತೀತರೇತರಂ ಕ್ರಾನ್ತ್ವಾ ಸ್ಥಿತಾ ಭವಂತಿ ।**
**ಆದಿತ್ಯೋಽಪಿ ಕಾಷ್ಠೋಚ್ಯತೇ ಕ್ರಾನ್ತ್ವಾ ಸ್ಥಿತೋ ಭವತಿ ।**
**ಆಜ್ಯಂತೋಽಪಿ ಕಾಷ್ಠೋಚ್ಯತೇ ಕ್ರಾನ್ತ್ವಾ ಸ್ಥಿತೋ ಭವತಿ ।**
**ಆಪೋಽಪಿ ಕಾಷ್ಠಾ ಉಚ್ಯಂತೇ ಕ್ರಾನ್ತ್ವಾ ಸ್ಥಿತಾ ಭವಂತೀತಿ ಸ್ಥಾವರಾಣಾಂ ॥**

ಎಲ್ಲಾ ಪ್ರದೇಶಗಳನ್ನೂ ಆಕ್ರಮಿಸಿಕೊಂಡು ವಿಸ್ತರಿಸಿ ಹರಡಿರುವುದರಿಂದ **ಕಾಷ್ಠಾ** ಎಂದರೆ ದಿಕ್ಕೆಂದೂ, ಪರಸ್ಪರವಾಗಿ ಹೆಣೆದುಕೊಂಡು ವಿಸ್ತರಿಸಿ ಹರಡಿರುವುದರಿಂದ ಉಪದಿಕ್ಕುಗಳೆಂದೂ, ಎಲ್ಲಾ ಪ್ರದೇಶಗಳನ್ನು ಆಕ್ರಮಿಸುತ್ತಾ ಸಂಚರಿಸುವುದರಿಂದ ಆದಿತ್ಯನೆಂದೂ, ತನ್ನ ಸ್ಥಾನವನ್ನಾಕ್ರಮಿಸಿ ಸ್ಥಿತವಾಗಿರುವುದರಿಂದ ಉದಕವೆಂದೂ ಅರ್ಥವಾಗುತ್ತದೆ. ಮತ್ತು ನಡೆಯಬೇಕಾದ ದೂರವನ್ನು ದಾಟಿರುವುದರಿಂದ ಗನ್ತವ್ಯಸ್ಥಾನಕ್ಕೂ ಕಾಷ್ಠವೆಂದು ಹೆಸರು.

**ತ್ವಾಮಿದ್ಧಿ ಹವಾಮಹೇ ಸಾತಾ ವಾಜಸ್ಯ ಕಾರವಃ ।**
**ತ್ವಾಂ ವೃತ್ರೇಷ್ವಿಂದ್ರ ಸತ್ಪತಿಂ ನರಸ್ತ್ವಾಂ ಕಾಷ್ಠಾಸ್ವರ್ವತಃ ॥**

(ಋ. ಸಂ. ೬-೪೬-೧)

**ಉಪೋ ಹ ಯದ್ವಿದಥಂ ವಾಜಿನೋ ಗುರ್ಧೀಭಿರ್ವಿಪ್ರಾಃ ಪ್ರಮತಿಮಿಚ್ಛಮಾನಾಃ ।**
**ಅರ್ವಂತೋ ನ ಕಾಷ್ಠಾಂ ನಕ್ಷಮಾಣಾ ಇಂದ್ರಾಗ್ನೀ ಜೋಹುವತೋ ನರಸ್ತೇ ।**

(ಋ. ಸಂ. ೭-೯೩-೩)

ಇತ್ಯಾದಿ ಋಕ್ಕುಗಳಲ್ಲಿ **ಕಾಷ್ಠಾ** ಶಬ್ದಕ್ಕೆ ಆಜ್ಯಂತವಾದ ಪ್ರದೇಶ (Destination) ಎಂದರೆ ಕುದುರೆಗಳ ಗನ್ತವ್ಯಸ್ಥಾನವಾದ ಯುದ್ಧಭೂಮಿಯೆಂದರ್ಥಮಾಡಿದ್ದಾರೆ.

**ತಂ ವಾ ಏತಮಾಹುಃ ಅತಿಪಿತಾ ಬತಾಭೂರತಿಪಿತಾಮಹೋ ಬತಾಭೂಃ ಪರಮಾಂ ಬತ ಕಾಷ್ಠಾಂ ಪ್ರಾಪಚ್ಛ್ರಿಯಾ ಯಶಸಾ ಬ್ರಹ್ಮವರ್ಚಸೇನ ।**

( ಬೃ. ಉ. ೬-೪-೨೮ )

**ಮಹತಃ ಪರಮವ್ಯಕ್ತಮವ್ಯಕ್ತಾತ್ಪುರುಷಃ ಪರಃ ।**
**ಪುರುಷಾನ್ನ ಪರಂ ಕಿಂಚಿತ್ಸಾ ಕಾಷ್ಠಾ ಸ ಪರಾ ಗತಿಃ ॥**
(ಕಠ. ೩-೧೧)

ಇತ್ಯಾದಿ ವಾಕ್ಯಗಳಲ್ಲಿ **ಕಾಷ್ಠಾ** ಎಂದರೆ ಅತ್ಯುತ್ತಮವಾದ **ಗಮ್ಯಸ್ಥಾನ** ಎಂದರೆ **ಪರಮಪದ**ವೆಂದರ್ಥ. ಹೀಗಿರುವ ನಾನಾರ್ಥಗಳಲ್ಲಿ ಪ್ರಕೃತವಾದ ಋಕ್ಕಿನಲ್ಲಿ **ಕಾಷ್ಠಾಸು** ಎಂದರೆ ದಶದಿಕ್ಕುಗಳಲ್ಲೂ ಎಂದರ್ಥ.

**ಜೇನ್ಯಃ—ಸರ್ವತ್ರ ಪ್ರಾದುರ್ಭವನಶೀಲೋ ಭವತಿ ಜಯಶೀಲೋ ವಾ ।** ಎಲ್ಲಾ ಕಡೆಯೂ ಆವಿರ್ಭೂತನಾಗಿಯೂ ಅಥವಾ ಜಯಶೀಲನಾಗಿಯೂ ಎಂದು ಎರಡರ್ಥಗಳನ್ನು ಪರ್ಯಾಯವಾಗಿ ಹೇಳಿದೆ. **ಜನೀ ಪ್ರಾದುರ್ಭಾವೇ** ಎಂಬ ಧಾತುವಿನಿಂದಾಗಲಿ, **ಜೀ ಜಯೇ** ಎಂಬ ಧಾತುವಿನಿಂದಾಗಲಿ ನಿಷ್ಪನ್ನವಾಗಿರಬಹುದೆಂದು ಭಾಷ್ಯಕಾರರ ಮತ. ಈ ಎರಡರ್ಥಗಳಲ್ಲೂ ಈ ಪದದ ಪ್ರಯೋಗವು ಇರುವುದು.

**ಜನಿಷ್ಟ ಹಿ ಜೇನ್ಯೋ ಅಗ್ರೇ ಅಹ್ನಾಂ ಹಿತೋ ಹಿತೇಷ್ವರುಷೋ ವನೇಷು ।**
**ದಮೇದಮೇ ಸಪ್ತ ರತ್ನಾ ದಧಾನೋಽಗ್ನಿರ್ಹೋತಾ ನಿ ಷಸಾದಾ ಯಜೀಯಾನ್ ।**
(ಋ. ಸಂ. ೫-೧-೫)

ಎಂಬ ಋಕ್ಕಿನಲ್ಲಿ **ಜೇನ್ಯ ಉತ್ಪಾದನೀಯಃ** ಎಂದು ಅಗ್ನಿಗೆ ವಿಶೇಷಣವಾಗಿಯೂ,

**ಹೋತಾಜನಿಷ್ಟ ಚೇತನಃ ಪಿತಾ ಪಿತೃಭ್ಯ ಊತಯೇ ।**
**ಪ್ರಯಕ್ಷಞ್ಜೇನ್ಯಂ ವಸು ಶಕೇಮ ವಾಜಿನೋ ಯಮಂ ॥**
(ಋ. ಸಂ. ೨-೫-೧)

ಇತ್ಯಾದಿ ಋಕ್ಕುಗಳಲ್ಲಿ **ಜೇತವ್ಯಂ ಧನಂ** ಎಂದೂ,

**ತೇ ಹಿನ್ವಿರೇ ಅರುಣಂ ಜೇನ್ಯಂ ವಸ್ವೇಕಂ ಪುತ್ರಂ ತಿಸೃಣಾಂ ।**
**ತೇ ಧಾಮಾನ್ಯಮೃತಾ ಮರ್ತ್ಯಾನಾಮದಬ್ಧಾ ಅಭಿ ಚಕ್ಷತೇ ।**
(ಋ. ಸಂ. ೮-೧೦೧-೬)

ಇತ್ಯಾದಿ ಋಕ್ಕುಗಳಲ್ಲಿ **ಜಯಶೀಲಂ** ಅಥವಾ **ಜಯಸಾಧನಂ** ಎಂದೂ ಅರ್ಥವಾಗುತ್ತದೆ. ಪ್ರಕೃತವಾದ ಋಕ್ಕಿನಲ್ಲಿ ಈ ಎರಡರಲ್ಲಿ ಯಾವ ಅರ್ಥವಾದರೂ ಅಗ್ನಿಪರವಾಗಿ ಹೊಂದಿಕೊಳ್ಳುತ್ತದೆ.

**ವಿಭ್ಯಃ ಗರ್ಭೇಭ್ಯಃ** — ಅಗ್ನಿಕಾರ್ಯಾನಂತರ ಇವರಿಗೆ ಸ್ವಸ್ವರೂಪವು ಉತ್ಪನ್ನವಾಗುವುದರಿಂದ ಇವರ ಋತ್ವಿಗ್ರೂಪದ ಉತ್ಪತ್ತಿಗೆ ಅಗ್ನಿಯು ಕಾರಣನಾದನೆಂದು ವಿವರಿಸಿದೆ.

ವ್ಯಾಕರಣಪ್ರಕ್ರಿಯಾ

**ದಿದೃಕ್ಷೇಣ್ಯಃ**—ದೃಶಿರ್ ಪ್ರೇಕ್ಷಣೇ ಧಾತು. **ಧಾತೋಃಕರ್ಮ**—(ಪಾ. ಸೂ. ೩-೧-೭) ಎಂಬುದರಿಂದ ಇಚ್ಛಾರ್ಥದಲ್ಲಿ ಸನ್. **ಸನ್ಯಙೋಃ** ಸೂತ್ರದಿಂದ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಉರದತ್ವ. ಇತ್ಯಾದಿ. ದಿದೃಕ್ಷ ಎಂದು ಸನ್ನಂತಧಾತುವಾಗುತ್ತದೆ. ಇದಕ್ಕೆ ಕೃತ್ಯ ಪ್ರತ್ಯಯ ವಿವಕ್ಷಿತವಾದಾಗ **ಕೃತ್ಯಾರ್ಥೇ ತವೈಕೇನ್‌ಕೇನ್ಯ-**

(ಪಾ. ಸೂ ೩-೪-೧೪) ಎಂಬುದರಿಂದ ಕೇನ್ಯ ಪ್ರತ್ಯಯ. **ಅತೋ ಲೋಪಃ** (ಪಾ. ಸೂ. ೬-೪-೪೮) ಎಂಬುದರಿಂದ ಸನಿನ ಅಕಾರಕ್ಕೆ ಲೋಪ **ಅಟ್‌ಕುಪ್ವಾಙ್** ಎಂಬುದರಿಂದ ಪ್ರತ್ಯಯ ನಕಾರಕ್ಕೆ ಣತ್ವ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

**ಜೇನ್ಯಃ**—ಜನೀ ಪ್ರಾದುರ್ಭಾವೇ ಧಾತು. ಇದಕ್ಕೆ ಔಣಾದಿಕ ಏನ್ಯಪ್ರತ್ಯಯವೂ ಧಾತುವಿನ ಟಿಗೆ (ಅನ್) ಲೋಪವೂ ಬರುತ್ತದೆ. ಇದು ಭಟ್ಟಭಾಸ್ಕರಮಿಶ್ರರ ಮತ. ಅಥವಾ ಜಿ ಜಯೇ ಧಾತು. **ಕೃತ್ಯಲ್ಯುಟೋ ಬಹುಲಂ** (ಪಾ. ಸೂ. ೩-೩-೧೧೩) ಎಂಬಲ್ಲಿ ಬಹುವಚನ ಸಾಮರ್ಥ್ಯದಿಂದ ಕರ್ತರಿಯಲ್ಲಿ **ಅಚೋಯತ್** (ಪಾ. ಸೂ. ೩-೧-೯೭) ಎಂಬುದರಿಂದ ಯತ್‌ಪ್ರತ್ಯಯವೂ ನುಡಾಗಮವೂ ಬರುತ್ತದೆ. **ಸಾರ್ವಧಾತುಕಾರ್ಧಧಾತುಕಯೋಃ** ಎಂಬುದರಿಂದ ಧಾತುವಿನ ಇಕಿಗೆ ಗುಣ. **ಯತೋಽನಾವಃ** (ಪಾ. ಸೂ. ೬-೧-೨೧೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಈಳೇನ್ಯಃ**—ಈಡ ಸ್ತುತೌ ಧಾತು. ಇದಕ್ಕೆ ಔಣಾದಿಕಏನ್ಯ ಪ್ರತ್ಯಯ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

**ಮಹಃ**—ಮಹತಃ ಎಂಬಲ್ಲಿ ಛಾಂದಸವಾಗಿ ಅತಿಗೆ ಲೋಪ. ಅಥವಾ ಮಹಪೂಜಾಯಾಂ ಧಾತು. ಕ್ವಿಪ್ ಪ್ರತ್ಯಯ. ಷಷ್ಠೀಏಕವಚನಾಂತರೂಪ.

**ಜೀವಸೇ**—ಜೀವ ಪ್ರಾಣಧಾರಣೇ ಧಾತು. ಇದಕ್ಕೆ ತುಮುನ್ ವಿವಕ್ಷಾಮಾಡಿದಾಗ **ತುಮರ್ಥೇಸೇಸೇನಸೇ** (ಪಾ. ಸೂ ೩-೪-೯) ಎಂಬುದರಿಂದ ಅಸೇ ಪ್ರತ್ಯಯ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ. ಏಜಂತವಾದುದರಿಂದ **ಕೃನ್ಮೇಜಂತಃ** ಎಂಬುದರಿಂದ ಅವ್ಯಯಸಂಜ್ಞೆಯನ್ನು ಹೊಂದುತ್ತದೆ.

**ಪುರುತ್ರಾ—ದೇವ ಮನುಷ್ಯ ಪುರುಷಪುರು**—(ಪಾ. ಸೂ ೫-೪-೫೬) ಎಂಬುದರಿಂದ ತ್ರಾ ಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಅವ್ಯಯಸಂಜ್ಞೆಯನ್ನು ಹೊಂದುತ್ತದೆ.

**ಅಭವತ್**—ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ.

**ಸೂಃ—ಷೂಙ್** ಪ್ರಸವೇ ಧಾತು. **ಕ್ವಿಪ್ ಚ** ಎಂಬುದರಿಂದ ಕ್ವಿಪ್ ಪ್ರತ್ಯಯ.

ವಿಭ್ಯಃ—**ಸುಪಾಂ ಸುಪೋ ಭವಂತಿ** ಎಂಬ ವಚನದಿಂದ ಷಷ್ಠ್ಯರ್ಥದಲ್ಲಿ ಚತುರ್ಥೀ ಬಂದಿದೆ.

**ವಿಶ್ವದರ್ಶತಃ**—ವಿಶ್ವೈಃ ದರ್ಶನೀಯಃ ವಿಶ್ವದರ್ಶತಃ ದೃಶಿರ್ ಪ್ರೇಕ್ಷಣೇ ಧಾತು. **ಭೃಮೃದೃಶಿ**—(ಉ. ಸೂ. ೩-೩೯೦)) ಎಂಬುದರಿಂದ ಇದಕ್ಕೆ ಅತಚ್ ಪ್ರತ್ಯಯ. ಪುರುದ್ವೃಧಾದಿಯಲ್ಲಿ ಸೇರಿರುವುದರಿಂದ **ಪುರುದ್ವೃಧಾದೀನಾಂ ಛಂದಸ್ಯುಪಸಂಖ್ಯಾನಮ್** (ಪಾ. ಸೂ. ೬-೨-೧೦೬-೩) ಎಂಬುದರಿಂದ ಪೂರ್ವಪದಾಂತೋದಾತ್ತಸ್ವರ ಬರುತ್ತದೆ. ||೫||

ಇಲ್ಲಿಗೆ ನೂರನಲವತ್ತಾರನೆಯ ಸೂಕ್ತವು ಮುಗಿದುದು.

——— :o: ———

# ನೂರನಲವತ್ತೇಳನೆಯ ಸೂಕ್ತವು

---

**ಕಥಾ ತ ಇತಿ ಪಂಚರ್ಚಂ ಸಪ್ತಮಂ ಸೂಕ್ತಂ ದೈರ್ಘತಮಸಮಾಗ್ನೇಯಂ ತ್ರೈಷ್ಟುಭಂ। ಕಥೇತ್ಯನುಕ್ರಮಣಿಕಾ॥ ಪ್ರಾತರನುವಾಕಾಶ್ವಿನಶಸ್ತ್ರಯೋರಸ್ಯ ಸೂಕ್ತಸ್ಯ ವಿನಿಯೋಗಸ್ತ್ರಿಮೂರ್ಧಾನಮಿತಿ ತ್ರೀಣೀತ್ಯನೇನೋಕ್ತಃ॥**

ಅನುವಾದವು—**ಕಥಾ ತೇ** ಎಂಬ ಈ ಸೂಕ್ತವು ಇಪ್ಪತ್ತೊಂದನೆಯ ಅನುವಾಕದಲ್ಲಿ ಏಳನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವುವು. ಈ ಸೂಕ್ತಕ್ಕೆ ದೀರ್ಘತಮಾ ಔಚಥ್ಯಃ ಎಂಬುವನು ಋಷಿಯು. ಅಗ್ನಿಯೇ ದೇವತೆಯು. ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ **ಕಥಾ** ಎಂದು ಮೊದಲಾಗಿ ಹೇಳಿರುವುದು. ಹಿಂದೆಯೇ ಹೇಳಿರುವಂತೆ **ತ್ರಿಮೂರ್ಧಾನಂ** ಎಂಬ ಸೂಕ್ತದಿಂದ (ಹಿಂದಿನ ಸೂಕ್ತ) ಪ್ರಾರಂಭವಾಗುವ ಮೂರು ಸೂಕ್ತಗಳು (೧೪೬, ೧೪೭, ೧೪೮ನೆಯ ಸೂಕ್ತಗಳು) ಪ್ರಾತರನುವಾಕ ಮತ್ತು ಆಶ್ವಿನಶಸ್ತ್ರಮಂತ್ರಪಠನಕ್ಕಾಗಿ ವಿನಿಯೋಗಿಸಲ್ಪಡುವುವೆಂದು ಹಿಂದೆಯೇ ಹೇಳಿದೆ.

---

॥ ಓಂ ॥

## ಸೂಕ್ತ—೧೪೭

॥ ಮಂಡಲ—೧ ॥ ಅನುವಾಕ—೨೧ ॥ ಸೂಕ್ತ—೧೪೭ ॥

॥ ಅಷ್ಟಕ— ೨ ॥ ಅಧ್ಯಾಯ— ೨ ॥ ವರ್ಗ— ೧೬ ॥

ಸೂಕ್ತದಲ್ಲಿರುವ ಋಕ್ಸಂಖ್ಯೆ—೫ ॥

॥ ಋಷಿಃ—ದೀರ್ಘತಮಾ ಔಚಥ್ಯಃ ॥

॥ ದೇವತಾ—ಅಗ್ನಿಃ ॥

॥ ಛಂದಃ—ತ್ರಿಷ್ಟುಪ್ ॥

ಸಂಹಿತಾಪಾಠಃ

ಕಥಾ ತೇ ಅಗ್ನೇ ಶುಚಯಂತ ಆಯೋರ್ದದಾಶುರ್ವಾಜೇಭಿರಾಶುಷಾಣಾಃ।
ಉಭೇ ಯತ್ತೋಕೇ ತನಯೇ ದಧಾನಾ ಋತಸ್ಯ ಸಾಮನ್ರಣಯಂತ ದೇವಾಃ ॥ ೧ ॥

। ಪದಪಾಠಃ ।

ಕಥಾ । ತೇ । ಅಗ್ನೇ । ಶುಚಯಂತಃ । ಆಯೋಃ । ದದಾಶುಃ । ವಾಜೇಭಿಃ । ಆಶುಷಾಣಾಃ ।
ಉಭೇ ಇತಿ । ಯತ್ । ತೋಕೇ ಇತಿ । ತನಯೇ । ದಧಾನಾಃ । ಋತಸ್ಯ । ಸಾಮನ್ । ರಣಯಂತ । ದೇವಾಃ ॥ ೧ ॥

ಸಾಯಣಭಾಷ್ಯಂ

ಹೇ ಅಗ್ನೇ ತೇ ತವ ಸಂಬಂಧಿನೋ ರಶ್ಮಯಃ ಶುಚಯಂತೋ ದೀಪ್ತಿಂ ಸರ್ವತ್ರ ಚಕ್ಷಾಣಾಃ ಪ್ರಕಟಯಂತ ಆಶುಷಾಣಾ ಆಶು ಶೀಘ್ರಂ ಸಂಭಕ್ತಾರ ಆಶೂನ್ಸಂಭಕ್ತಾರೋ ವಾ । ವಾಯ್ವಾದೇರಪಿ ಶೀಘ್ರಂ ಸಂಭಕ್ತಾರ ಇತ್ಯರ್ಥಃ । ಯದ್ವಾ । ಸಮಂತಾಚ್ಛೋಷಯಿತಾರಃ । ಯದ್ವಾ । ಸರ್ವಂ ವ್ಯಾಪ್ನುವಂತಃ ॥ ಅಶ್ನೋತೇರ್ಲಿಟಃ ಕಾನಚ್ । ವ್ಯತ್ಯಯೇನೋಪ್ರತ್ಯಯಃ ಸಿಚ್ಚೇತಿ ದ್ವಿವಿಕರಣತಾ । ಆಙ್ಪೂರ್ವಾದಂತರ್ಭಾವಿತಣ್ಯರ್ಥಾಚ್ಛುಷೇಃ ಶಾನಚಿ ಛಾಂದಸಃ ಶಪೋ ಲುಕ್ । ಆಶುಶಬ್ದೋಪಪದಾತ್ಸನತೇಃ ಕರ್ಮಣ್ಯಣ್ ॥ ಈದೃಶಾ ರಶ್ಮಯೋ ವಾಜೇಭಿರನ್ನೈಃ ಸಹಿತಮಾಯೋರಾಯುರಾಯುಷ್ಯಂ ॥ ಕರ್ಮಣಿ ಷಷ್ಠೀ ॥ ಕಥಾ ಕೇನೋಪಾಯೇನ ದದಾಶುಃ । ದದತಿ ॥ ದಾಶೃ ದಾನೇ । ಛಾಂದಸೋ ಲಿಟ್ ॥ ತಮುಪಾಯಮನುಗೃಹಾಣೇತ್ಯರ್ಥಃ । ರಶ್ಮೀನಾಂ ವರಪ್ರದಾನಂ ಕುತ್ರ ದೃಷ್ಟಮಿತಿ ಚೇತ್ ಉಚ್ಯತೇ । ಯದ್ಯಸ್ಮಾದುಭೇ ಉಕ್ತೇ ಅನ್ನಾಯುಷೀ ತೋಕೇ ಪುತ್ರೇ ತನಯೇಽನವಚ್ಛೇದೇನ ಕುಟುಂಬಸ್ಯ ವಿಸ್ತಾರಕೇ । ಯದ್ವಾ । ತೋಕೇ ಪುತ್ರೇ ತನಯೇ ತತ್ಪುತ್ರಾದೌ ಚ । ದಧಾನಾ ಧಾರಯಂತೋ ದೇವಾ ವ್ಯವಹರ್ತಾರೋ ಯಜಮಾನಾ ಋತಸ್ಯ ಯಜ್ಞಸ್ಯ ಸಂಬಂಧಿನಿ ಸಾಮನ್ ಸಾಮ್ನಿ ರಥಂತರಾದೌ ರಣಯಂತ ರಮಂತೇ ರಮಯಂತಿ ಶಬ್ದಯಂತ್ಯೇವ ವಾ । ಯಸ್ಮಾದನ್ನಾಯುಷ್ಪುತ್ರಾದಿಸಹಿತಾಃ ಸೋಮೇನೇಷ್ಟ್ವಾ ಸಾಮ್ನಿ ರಮಂತೇ ತಸ್ಮಾದ್ರಶ್ಮಯೋ ದದತೀತ್ಯವಗಮ್ಯತ ಇತ್ಯರ್ಥಃ । ತಾದೃಶಾಂಸ್ತ್ವದೀಯಾನ್ರಶ್ಮೀನ್ ಮಾಮಪ್ಯನುಗೃಹಾಣೇತ್ಯರ್ಥಃ ॥

ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ । ಯತ್—ಯಾವ ನಿನ್ನ ಉಪಕಾರಕಗಳಾದ ರಶ್ಮಿಗಳ ಸಹಾಯದಿಂದ । ಉಭೇ—ಅನ್ನ ಮತ್ತು ಆಯುಸ್ಸುಗಳನ್ನು । ತೋಕೇ—ಮಕ್ಕಳಲ್ಲಿಯೂ । ತನಯೇ—ಪೌತ್ರಾದಿಗಳಲ್ಲಿಯೂ ।

**ದಧಾನಾಃ**—ಹೊಂದಿದವರಾಗಿ । **ದೇವಾಃ**—ಭಕ್ತರಾದ ಯಜ್ಞಕರ್ತರು । **ಋತಸ್ಯ**—ಯಜ್ಞಕ್ಕೆ ಸೇರಿದ । **ಸಾಮನ್**—ರಥಂತರಾದಿ ಸಾಮಗಳಲ್ಲಿ (ಸಾಮಗಳ ಪಠಣದಿಂದ) । **ರಣಯಂತ**—ಸಂತೋಷವನ್ನು ಸೂಚಿಸುತ್ತಾರೆಯೋ (ಅಂತಹ) । **ತೇ**—ನಿನ್ನ । **ಶುಚಯಂತಃ**—(ಎಲ್ಲಾ ಕಡೆಯೂ) ಪ್ರಕಾಶವನ್ನು ಹರಡುವವೂ । **ಆಶುಷಾಣಾಃ**—ಶೀಘ್ರವಾಗಿ (ವಾಯ್ವಾದಿಗಳಲ್ಲಿ) ಆವಿಯಾಗಿ ವ್ಯಾಪಿಸುವವೂ ಆದ ರಶ್ಮಿಗಳು । **ವಾಜೇಭಿಃ**—ಅನ್ನಗಳೊಡನೆ ಕೂಡಿದ । **ಆಯೋಃ**—ಆಯುಸ್ಸನ್ನು । **ಕಥಾ**—ಯಾವ ಪ್ರಕಾರದಿಂದ । **ದದಾಶುಃ**—ಅನುಗ್ರಹಿಸಿ ಕೊಡುತ್ತವೆ ? ॥

ಭಾವಾರ್ಥ

ಎಲೈ ಅಗ್ನಿಯೇ, ಎಲ್ಲಾ ಕಡೆಯೂ ಪ್ರಕಾಶವನ್ನು ಹರಡುವವೂ, ಶೀಘ್ರವಾಗಿ ವಾಯ್ವಾದಿಗಳಲ್ಲಿ ಆವಿಯ ರೂಪದಿಂದ ವ್ಯಾಪಿಸುವವೂ ಆದ ನಿನ್ನ ರಶ್ಮಿಗಳ ಸಹಾಯದಿಂದಲೇ ಯಜ್ಞಕರ್ತರು ಅನ್ನವನ್ನೂ ಆಯುಸ್ಸನ್ನೂ ಹೊಂದಿ ತಮ್ಮ ಪುತ್ರಪೌತ್ರಾದಿಗಳಿಗೂ ಸಹ ಇವು ಲಭಿಸುವಂತೆ ಮಾಡುವರು, ಮತ್ತು ಈ ಭಾಗ್ಯಗಳನ್ನು ಅನುಭವಿಸುತ್ತಾ ರಥಂತರಾದಿ ಸಾಮಗಳಿಂದ ಸಂತೋಷವನ್ನು ಸೂಚಿಸಿ ನಿನ್ನ ಗುಣಗಾನವನ್ನು ಮಾಡುವರು. ಆದರೆ ಯಾವ ಉಪಾಯದಿಂದ ನಿನ್ನ ರಶ್ಮಿಗಳು ಹೀಗೆ ಅನ್ನಾಯುಗಳನ್ನು ಅನುಗ್ರಹಿಸುವವು? ಆ ಉಪಾಯಗಳನ್ನು ನಮಗೂ ತಿಳಿಸು.

English Translation

How have your shining and evaporating (rays), Agni, supported life ( and supplied ) food ; so that, enjoying both, the devout (worshippers), possessing sons and grandsons, may repeat the hymns of the sacrifice.

ವಿಶೇಷವಿಷಯಗಳು

**ತೋಕೇ ತನಯೇ**— **ತುಕ್, ತೋಕಂ, ತನಯಃ** ಇತ್ಯಾದಿ ಹದಿನೈದು ಅಪತ್ಯನಾಮಗಳಲ್ಲಿ ಪಠಿತವಾಗಿರುವುದರಿಂದ ( ನಿ. ೩-೨ ) ಎರಡು ಶಬ್ದಗಳಿಗೂ ಪುತ್ರನೆಂದೇ ಅರ್ಥವು. ಆದರೆ ಸ್ಥೂಲದೃಷ್ಟಿಯಿಂದ ನೋಡಿದರೆ ಎರಡು ಶಬ್ದಗಳ ಅರ್ಥವೂ ಒಂದೇ ಆದರೂ ವ್ಯವಹಾರದಲ್ಲಿ **ಪುತ್ರಪೌತ್ರಾದಿಗಳೆಂದು** ಒಟ್ಟಿಗೆ ಹೇಳುವ ರೂಢಿಯಿದೆ. ಅದೂ ಅಲ್ಲದೇ **ತೋಕಂ ತುದ್ಯತೇಃ । ತನಯಂ ತನೋತೇಃ ।** ಎಂದು ನಿರುಕ್ತಕಾರರು ಇವುಗಳ ಸೂಕ್ಷ್ಮವಾದ ವ್ಯತ್ಯಾಸವನ್ನು ತೋರಿಸಿರುವರು. ಇದನ್ನೇ ವ್ಯಾಖ್ಯಾಕಾರರು ವಿವರಿಸುತ್ತಾ **ತೋಕಂ ಇತಿ ಪುತ್ರಃ ಸ ಹಿ ನಿತ್ಯಂ ಪಿತ್ರಾ ವಿನಯತಾ ತುದ್ಯತೇ ಇದಂ ಕುರ್ವಿದಂ ಮಾ ಕಾರ್ಷೀರಿತಿ । ತನಯಂ ತನೋತೇಃ ಪೌತ್ರಂ । ತದ್ಧ್ಯತಿತರಾಂ ಪಿತುಃ ಸಕಾಶಾತ್ ತತಂ ಭವತಿ ।** ಶಿಕ್ಷಣವನ್ನು ಕೊಡತಕ್ಕ ತಂದೆಯು ಯಾವಾಗಲೂ ಇದನ್ನು ಮಾಡು, ಇದನ್ನು ಮಾಡಬೇಡ ಎಂಬ ನಿರ್ಬಂಧವನ್ನಿಟ್ಟು ನಿಯಮದ ಜೀವನವನ್ನು ನಡೆಸುವಂತೆ ಮಾಡುವುದರಿಂದ ಅಂತಹ ಮಗನಿಗೆ **ತೋಕಂ** ಎಂದೂ, ಸಂತತಿಯನ್ನು ವಿಸ್ತರಿಸಿ ಬೆಳೆಸಲು ಸಾಧನವಾದುದರಿಂದ ಪೌತ್ರನಿಗೆ **ತನಯ**ನೆಂದೂ ಅರ್ಥವಾಗುತ್ತದೆಂದು ವಿವರಿಸಿದ್ದಾರೆ. (ನಿ. ೧೦-೭)

ರಣಯಂತ—ರಮಯಂತಿ । ಹರ್ಷಿಸುತ್ತಾರೆ. ಶಬ್ದಯಂತ್ಯೇವ ವಾ । ಅಥವಾ ಹರ್ಷಸೂಚಕವಾದ ಶಬ್ದವನ್ನುಂಟುಮಾಡುತ್ತಾರೆ. ರಮಣೀಯವಾದುದು ಎಂಬುದರ ಮೂಲಾರ್ಥದ ಮೇಲೆ ರಣ ಶಬ್ದವು ಯುದ್ಧ

ಪರ್ಯಾಯವಾಗಿಯೂ ಇದೆ. ದೇವತೆಗಳು ಒಟ್ಟಿಗೆ ಸೇರಿಕೊಂಡು ಯುದ್ಧಮಾಡುತ್ತಿರುವಾಗ ಜಯವು ಸಿದ್ಧವು ಎಂಬ ಹರ್ಷವಿರುವುದರಿಂದ ಯುದ್ಧಭೂಮಿಯೂ ರಮಣೀಯವಾಗಿದೆಯೆಂದು ಈ ಪದವು ಸೂಚಿಸುತ್ತದೆ.

**ಪ್ರತಿ ವ ಏನಾ ನಮಸಾಹಮೇಮಿ ಸೂಕ್ತೇನ ಭಿಕ್ಷೇ ಸುಮತಿಂ ತುರಾಣಾಂ ।**
**ರರಾಣತಾ ಮರುತೋ ವೇದ್ಯಾಭಿರ್ನಿ ಹೇಳೋ ಧತ್ತ ವಿ ಮುಚಧ್ವಮಶ್ವಾನ್ ।**
**(ಋ. ಸಂ. ೧-೧೭೧-೧)**

**ಕೃತೇ ಚಿದತ್ರ ಮರುತೋ ರಣಂತಾನವದ್ಯಾಸಃ ಶುಚಯಃ ಪಾವಕಾಃ ।**
**ಪ್ರ ಣೋಽವತ ಸುಮತಿಭಿರ್ಯಜತ್ರಾಃ ಪ್ರ ವಾಜೇಭಿಸ್ತಿರತ ಪುಷ್ಯಸೇ ನಃ ॥**
(ಋ. ಸಂ. ೭-೫೭-೫)

ಇತ್ಯಾದಿ ಋಕ್ಕುಗಳಲ್ಲಿ **ಹರ್ಷಧ್ವನಿಯನ್ನು** ಸೂಚಿಸಲು ಈ ಪದದ ಪ್ರಯೋಗವಿದೆ. ಅದರಂತೆ ಪ್ರಕೃತವಾದ ಋಕ್ಕಿನಲ್ಲಿಯೂ ಸಹ **ರಥಂತರಾದಿ ಸಾಮ**ಗಳನ್ನು ಪಠಿಸುವಾಗ ಹರ್ಷಧ್ವನಿಯನ್ನು ಪ್ರಕಟಿಸಿದರು ಎಂದರ್ಥ.

**ಆಶುಷಾಣಾಃ—ಆಶು ಶೀಘ್ರಂ ಸಂಭಕ್ತಾರಃ । ವಾಯ್ವಾದೇರಪಿ ಶೀಘ್ರಂ ಸಂಭಕ್ತಾರ ಇತ್ಯರ್ಥಃ ।** ಶೀಘ್ರವಾಗಿ ವಾಯುವ್ವಾದಿಗಳೊಡನೆ ಸೇರಿಕೊಂಡು ಆವಿಯಾಗಿ ವ್ಯಾಪಿಸುವವು ಎಂದರ್ಥ.

ವ್ಯಾಕರಣಪ್ರಕ್ರಿಯಾ

**ಕಥಾ**—ಕಿಮ್ ಶಬ್ದ. **ಥಾಹೇತೌ ಚ ಛಂದಸಿ** (ಪಾ. ಸೂ. ೫-೩-೨೬) ಎಂಬುದರಿಂದ ಪ್ರಕಾರಾರ್ಥದಲ್ಲಿ ಥಾ ಪ್ರತ್ಯಯ- **ಪ್ರಾಗ್ದಿಶೋ ವಿಭಕ್ತಿಃ** ಎಂಬುದರಿಂದ ಅದಕ್ಕೆ ವಿಭಕ್ತಿಸಂಜ್ಞಾ ಇರುವುದರಿಂದ **ಕಿಮಃಕಃ** ಎಂಬುದರಿಂದ ಕಿಮ್ ಶಬ್ದಕ್ಕೆ ಕಾದೇಶ

**ಶುಚಯಂತಃ**—ಶುಚಿರ್ ಪೂತೀಭಾವೇ ಧಾತು. **ಇಗುಪಧಾತ್‌ಕಿತ್** (ಉ. ಸೂ. ೪-೫೫೯) ಎಂಬುದರಿಂದ ಇನ್ ಪ್ರತ್ಯಯ. ಕಿತ್ವವಿಧಾನದಿಂದ ಗುಣ ಬರುವುದಿಲ್ಲ. ಶುಚಿಂ ದೀಪ್ತಿಂ ಕರೋತಿ ಇತಿ ಶುಚಯತಿ **ತತ್ಕರೋತಿ ತದಾಚಷ್ಟೇ** ಎಂಬ ವಚನದಿಂದ ಣಿಚ್. ಇಷ್ಠವದ್ಭಾವವಿರುವುದರಿಂದ ಇಕಾರ (ಟಿಗೆ)ಕ್ಕೆ ಲೋಪ. ಣಿಜಂತದ ಮೇಲೆ ಲಟಿಗೆ ಶತ್ರಾದೇಶ. ಣಿಚ್ ಸ್ವರ ಉಳಿಯುತ್ತದೆ ಪ್ರಥಮಾಬಹುವಚನಾಂತರೂಪ.

**ಆಯೋಃ**—ಇಣ್ ಗತೌ ಧಾತು. **ಛಂದಸೀಣಃ** (ಉ. ಸೂ. ೧-೨) ಎಂಬುದರಿಂದ ಉಣ್ ಪ್ರತ್ಯಯ. **ಅಚೋಞ್ಣಿತಿ** ಎಂಬುದರಿಂದ ವೃದ್ಧಿ. ಆಯಾದೇಶ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. **ಕರ್ತೃಕರ್ಮಣೋಃ ಕೃತಿ** (ಪಾ ಸೂ. ೨-೩-೬೫) ಎಂಬುದರಿಂದ ಕರ್ಮಣಿಯಲ್ಲಿ ಷಷ್ಠೀ ಬಂದಿದೆ.

**ದದಾಶುಃ**—ದಾಶೃ ದಾನೇ ಧಾತು **ಛಂದಸಿಲುಙ್‌ಲಙ್‌ಲಿಟಃ** ಎಂಬುದರಿಂದ ಉಸಾದೇಶ. ಧಾತುವಿಗೆ ದ್ವಿತ್ವಾದಿ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ವಾಜೇಭಿಃ**—**ಬಹುಲಂ ಛಂದಸಿ** ಎಂಬುದರಿಂದ ಭಿಸಿಗೆ ಐಸ್ ಭಾವ ವಿಕಲ್ಪವಾದುದರಿಂದ **ಬಹುವಚನೇಝಲ್ಯೇತ್** ಎಂಬುದರಿಂದ ಏತ್ವ.

**ಆಶುಷಾಣಾಃ**—ಅಶೂ ವ್ಯಾಪ್ತೌ ಧಾತು. ಇದಕ್ಕೆ ಲಿಟ್ ಬಂದಾಗ **ಲಿಟಃ ಕಾನಜ್ವಾ** (ಪಾ. ಸೂ. ೩-೨-೧೦೬) ಎಂಬುದರಿಂದ ಕಾನಜಾದೇಶ. **ವ್ಯತ್ಯಯೋ ಬಹುಲಂ** ಎಂಬುದರಿಂದ ಉ ಪ್ರತ್ಯಯ. ಸಿಚ್ ಈ ಎರಡು ವಿಕರಣಗಳು ಬರುತ್ತವೆ. ಧಾತುವಿಗೆ ದ್ವಿತ್ವ. **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತ ಸ್ವರ ಬರುತ್ತದೆ. ಅಥವಾ ಆಙ್ ಉಪಸರ್ಗ. ಶುಷ ಶೋಷಣೇ ಧಾತು. ಅಂತರ್ಭಾವಿತಣ್ಯರ್ಥಕವಾದ ಧಾತು. ಇದಕ್ಕೆ ಲಟ್ ಬಂದಾಗ ಅದಕ್ಕೆ ಶಾನಚ್. **ಬಹುಲಂ ಛಂದಸಿ** ಎಂಬುದರಿಂದ ಶಪಿಗೆ ಲುಕ್. ರೂಪವು ಹಿಂದಿನಂತೇ ಆಗುತ್ತದೆ. ಅಥವಾ ಆಶು ಶಬ್ದ ಉಪಪದವಾಗಿರುವಾಗ, ಷಣ ಸಂಭಕ್ತೌ ಈ ಧಾತುವಿಗೆ ಕರ್ಮಣಿಯಲ್ಲಿ ಅಣ್ ಪ್ರತ್ಯಯ. **ಅತ ಉಪಧಾಯಾಃ** (ಪಾ. ಸೂ. ೭-೨-೧೧೬) ಎಂಬುದರಿಂದ ಉಪಧಾವೃದ್ಧಿ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ತನಯೇ**—ತನು ವಿಸ್ತಾರೇ ಧಾತು. **ವಲಿಮಲಿತನಿಭ್ಯಃ ಕಯನ್** (ಉ. ಸೂ. ೪-೫೪) ಎಂಬುದರಿಂದ ಕಯನ್ ಪ್ರತ್ಯಯ. **ಞ್ನಿತ್ಯಾದಿರ್ನಿತ್ಯಮ್** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಸಪ್ತಮೀ ಏಕವಚನಾಂತರೂಪ.

**ದಧಾನಾಃ**—ಡುಧಾಞ್ ಧಾರಣಪೋಷಣಯೋಃ ಧಾತು. ಲಟಿಗೆ ಶಾನಚಾದೇಶ. **ಶ್ಲೌ** ಎಂಬುದರಿಂದ ಧಾತುವಿಗೆ ದ್ವಿತ್ವ. **ಅಭ್ಯಸ್ತಾನಾಮಾದಿಃ** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಸಾಮನ್—ಸುಪಾಂ ಸುಲುಕ್** (ಪಾ. ಸೂ. ೭-೧-೩೯) ಎಂಬುದರಿಂದ ವಿಭಕ್ತಿಗೆ (ಸಪ್ತಮೀ) ಲುಕ್ **ನಙಿಸಂಬುದ್ಧ್ಯೋಃ** ಎಂಬುದರಿಂದ ನ ಲೋಪ ಬರುವುದಿಲ್ಲ.

**ರಣಯಂತ**—ರಣ ಶಬ್ದೇ. ಧಾತು. **ಹೇತುಮತಿಚ** ಎಂಬುದರಿಂದ ಣಿಚ್. ಲಙ್ ಪ್ರಥಮಪುರುಷ ಬಹುವಚನಾಂತರೂಪ. **ಬಹುಲಂ ಛಂದಸ್ಯಮಾಙ್ಯೋಗೇಽಪಿ** (ಪಾ. ಸೂ. ೬-೪-೭೫) ಎಂಬುದರಿಂದ ಅಡಾಗಮ ಬರುವುದಿಲ್ಲ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಣಿಚ್ಸ್ವರ ಉಳಿಯುತ್ತದೆ, ॥ ೧ ॥

———— :O: ————

ಸಂಹಿತಾಪಾಠಃ

ಬೋಧಾ ಮೇ ಅಸ್ಯ ವಚಸೋ ಯವಿಷ್ಠ ಮಂಹಿಷ್ಠಸ್ಯ ಪ್ರಭೃತಸ್ಯ ಸ್ವಧಾವಃ।
ಪೀಯತಿ ತ್ವೋ ಅನು ತ್ವೋ ಗೃಣಾತಿ ವಂದಾರುಸ್ತೇ ತನ್ವಂ ವಂದೇ ಅಗ್ನೇ ॥ ೨ ॥

ಭಾವಾರ್ಥ

ಬೋಧ । ಮೇ । ಅಸ್ಯ । ವಚಸಃ । ಯವಿಷ್ಠ । ಮಂಹಿಷ್ಠಸ್ಯ । ಪ್ರಽಭೃತಸ್ಯ । ಸ್ವಧಾಽವಃ ।

ಪೀಯತಿ । ತ್ವಃ । ಅನು । ತ್ವಃ । ಗೃಣಾತಿ । ವಂದಾರುಃ । ತೇ । ತನ್ವಂ । ವಂದೇ । ಅಗ್ನೇ ॥ ೨ ॥

### ಸಾಯಣಭಾಷ್ಯಂ

ಹೇ ಯವಿಷ್ಠ ಯುವತಮ ಹೇ ಸ್ವಧಾವೋ ಹವಿರ್ಲಕ್ಷಣಾನ್ನೇನ ತದ್ವನ್ನಗ್ನೇ ಮೇ ಮದೀಯಸ್ಯ ಮಂಹಿಷ್ಠಸ್ಯಾತಿಶಯೇನ ಪೂಜನೀಯಸ್ಯ ಪ್ರಭೃತಸ್ಯ ಪ್ರಕರ್ಷೇಣ ಸಂಪಾದಿತಸ್ಯಾಸ್ಯೇದಾನೀಂ ಕ್ರಿಯಮಾಣಸ್ಯ ವಚಸಃ ಸ್ತುತಿರೂಪಸ್ಯ ವಚನಸ್ಯ ॥ ಕರ್ಮಣಿ ಷಷ್ಠೀ ॥ ಉಕ್ತಲಕ್ಷಣಂ ವಚೋ ಬೋಧ । ಬುಧ್ಯಸ್ವ । ಸ್ತುತೋ ಭವೇತ್ಯರ್ಥಃ । ಹೇ ಅಗ್ನೇ ಲೋಕೇ ತ್ವಃ । ಅತ್ರ ಯಾಸ್ಕಸ್ತ್ವೇ ನೇಮ ಇತ್ಯರ್ಧಸ್ಯೇತ್ಯುಕ್ತ್ವೈತದೇವೋದಾಜಹಾರ । ನಿ. ೩-೨೦ । ಏಕೋ ಜನಃ ಪೀಯತಿ । ವಧಕರ್ಮೈತತ್ । ಹಿನಸ್ತಿ। ಯಜ್ಞಾದಿನಾ ನ ಪೂಜಯತೀತ್ಯರ್ಥಃ । ತ್ವ ಏಕೋಽನು ಗೃಣಾತಿ । ಅನುಕೂಲಮುಚ್ಚಾರಯತಿ । ತಯೋರ್ಮಧ್ಯೇ ಹೇ ಅಗ್ನೇ ವಂದಾರುರ್ವಂದನಶೀಲೋಽಹಂ ತೇ ತವ ತನ್ವಂ ತನುಂ ತವ ಮೂರ್ತಿಂ ವಂದೇ । ಸ್ತೌಮಿ ॥

### ಪ್ರತಿಪದಾರ್ಥ

**ಯವಿಷ್ಠ**—ಅತ್ಯಂತ ಯುವಕನಾದವನೂ । **ಸ್ವಧಾವಃ**— ಹವಿಸ್ಸಿನರೂಪದ ಅನ್ನವುಳ್ಳವನೂ ಆದ ಎಲೈ ಅಗ್ನಿಯೇ । **ಮೇ**—ನನ್ನ । **ಮಂಹಿಷ್ಠಸ್ಯ**— ಅತ್ಯಂತ ಪೂಜ್ಯವಾದುದೂ । **ಪ್ರಭೃತಸ್ಯ**--ಅತಿಶಯವಾದ ಆದರ ದಿಂದ ಸಂಪಾದಿಸಿದುದೂ ಆದ । **ಅಸ್ಯ ವಚಸಃ**—ಈ ಸ್ತೋತ್ರರೂಪವಾದ ವಾಕ್ಯನ್ನು । **ಬೋಧ**—ತಿಳಿದುಕೊಂಡು ಸ್ವೀಕರಿಸು (ಲೋಕದಲ್ಲಿ) । **ತ್ವಃ**—ಕೆಲವು ಜನರು । **ಪೀಯತಿ**—(ಯಜ್ಞಾದಿಗಳನ್ನು ನೆರವೇರಿಸದೆ ನಿನ್ನನ್ನು) ಅಲಕ್ಷಿಸುತ್ತಾರೆ । **ತ್ವಃ**—ಇನ್ನು ಕೆಲವರು । **ಅನುಗೃಣಾತಿ**—(ಯಜ್ಞಾದಿಗಳನ್ನು ನೇರವಾಗಿ) ಹೊಗಳುತ್ತಾರೆ । **ಅಗ್ನೇ**—ಎಲೈ ಅಗ್ನಿಯೇ (ಅವರ ನಡುವೆ) । **ವಂದಾರುಃ**—ನಿನ್ನನ್ನು ಪೂಜಿಸುವ ನಾನು । **ತೇ**—ನಿನ್ನ । **ತನ್ವಂ**-ಮೂರ್ತಿಯನ್ನು । **ವಂದೇ**—ಸ್ತುತಿಸಿ ಹೊಗಳುತ್ತೇನೆ.

### ಭಾವಾರ್ಥ

ಅತ್ಯಂತ ಯುವಕನಾದವನೂ, ಹವಿಸ್ಸಿನರೂಪದ ಅನ್ನವುಳ್ಳವನೂ ಆದ ಎಲೈ ಅಗ್ನಿಯೇ, ನನ್ನ ಅತ್ಯಂತ ಪೂಜ್ಯವಾದುದೂ, ಅತಿಶಯವಾದ ಆದರದಿಂದ ನಿರ್ಮಿತವಾದುದೂ ಆದ ಈ ಸ್ತೋತ್ರ ವಾಕ್ಯನ್ನು ಸ್ವೀಕರಿಸಿ ಶ್ಲಾಘಿಸು. ಲೋಕದಲ್ಲಿ ಕೆಲವರು ನಿನ್ನನ್ನು ಅಲಕ್ಷಿಸುತ್ತಾರೆ. ಇನ್ನು ಕೆಲವರು ನಿನ್ನನ್ನು ಹೊಗಳುತ್ತಾರೆ. ಆದರೆ, ಎಲೈ ಅಗ್ನಿಯೇ, ನಾನು ಮಾತ್ರ ನಿನ್ನನ್ನು ಪೂಜಿಸುತ್ತಾ ನಿನ್ನ ಮೂರ್ತಿಯನ್ನು ಸ್ತುತಿಸಿ ಹೊಗಳುತ್ತೇನೆ.

### English Translation

Youthful ( Agni ), to whom oblations are due, appreciate this my reverential and earnest praise : one men reviles (you), another propitiates (you) ; I, your worshipper, glorify your person.

ವಿಶೇಷವಿಷಯಗಳು

**ವಂದಾರುಃ**—**ವಂದನಶೀಲಃ ಅಹಂ** । ನಿನ್ನನ್ನು ಪೂಜಿಸುವ ಸ್ವಭಾವವುಳ್ಳ ನಾನು ಎಂದು ಸ್ತುತಿಕಾರನು ಹೇಳಿಕೊಳ್ಳುತ್ತಾನೆ. ಇದೊಂದು ಸ್ಥಳವಲ್ಲಿ ವಿನಹ ಉಳಿದೆಡೆಗಳಲ್ಲಿ **ವಂದಾರು** ಶಬ್ದವು ಸ್ತೋತ್ರಪರ್ಯಾಯವಾಗಿಯೇ ಇದೆ. ಉದಾಹರಣೆಗೆ—

**ಕ ಉ ಶ್ರವತ್ಕತಮೋ ಯಜ್ಞಿಯಾನಾಂ ವಂದಾರು ದೇವಃ ಕತಮೋ ಜುಷಾತೇ ।**
**ಕಸ್ಯೇಮಾಂ ದೇವೀಮಮೃತೇಷು ಪ್ರೇಷ್ಠಾಂ ಹೃದಿ ಶ್ರೇಷಾಮ ಸುಷ್ಟುತಿಂ ಸುಹವ್ಯಾಂ ॥**
(ಋ. ಸಂ. ೪-೪೩-೧)

ಇತ್ಯಾದಿ ಋಕ್ಕುಗಳಲ್ಲಿ **ವಂದನಶೀಲಂ ಸ್ತೋತ್ರಂ** ಎಂದರ್ಥವಾಗುತ್ತದೆ.

**ತನ್ವಂ**—**ತನುಂ ತವ ಮೂರ್ತಿಂ ವಂದೇ** । ನಿನ್ನ ಮೂರ್ತಿಗೆ ನಂದಿಸುತ್ತೇನೆ ಎಂದು ಪೂಜಕನು ಹೇಳಿಕೊಳ್ಳುತ್ತಾನೆ. ದೇವತೆಗಳಿಗೆ ಇರತಕ್ಕ **ಮೂರ್ತಿಯು** ಯಾವ ರೀತಿಯದು, **ಪುರುಷವಿಧಾಃ ಸ್ಯುರಿತ್ಯೇಕಂ** (ನಿ. ೭-೬) ಇತ್ಯಾದ್ಯಭಿಪ್ರಾಯಗಳಲ್ಲಿ ಋಕ್ಸಂಹಿತೆಯಲ್ಲಿ ಯಾವ ಅಭಿಪ್ರಾಯಕ್ಕೆ ಸಮರ್ಥನೆಯಿದೆ ಎಂಬುದನ್ನು **ಪೀಠಿಕಾಪ್ರಕರಣದಲ್ಲಿ** ಚರ್ಚಿಸಿದೆ.

ವ್ಯಾಕರಣಪ್ರಕ್ರಿಯಾ

**ಬೋಧ**—ಬುಧ ಅವಗಮನೇ ಧಾತು. ಭ್ವಾದಿ. ಲೋಟ್ ಮಧ್ಯಮಪುರುಷಏಕವಚನದಲ್ಲಿ ಸಿಪಿಗೆ ಹಿ ಆದೇಶ ಬಂದಾಗ **ಅತೋ ಹೇಃ** ಎಂಬುದರಿಂದ ಅದಕ್ಕೆ ಲುಕ್. **ದ್ವ್ಯಚೋತಸ್ತಿಙಃ** (ಪಾ. ಸೂ. ೬-೩-೧೩೫) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

**ವಚಸಃ**—ವಚ ಪರಿಭಾಷಣೇ ಧಾತುಃ. ಔಣಾದಿಕ ಅಸುನ್ ಪ್ರತ್ಯಯ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. **ಕರ್ತೃಕರ್ಮಣೋಃ ಕೃತಿ** (ಪಾ. ಸೂ. ೨-೩-೬೫) ಎಂಬುದರಿಂದ ಕರ್ಮಣಿಯಲ್ಲಿ ಷಷ್ಠೀವಿಭಕ್ತಿ ಬಂದಿದೆ.

**ಯವಿಷ್ಠ**—ಅತಿಶಯೇನ ಯುವಾ ಯವಿಷ್ಠಃ ಅತಿಶಯಾರ್ಥದಲ್ಲಿ ಇಷ್ಠನ್ ಪ್ರತ್ಯಯ. **ಸ್ಥೂಲದೂರಯುವ**—(ಪಾ. ಸೂ. ೬-೪-೧೫೬) ಎಂಬುದರಿಂದ ಯಣಾದಿಗೆ (ವನ್) ಲೋಪ. ಪೂರ್ವದ ಉಕಾರಕ್ಕೆ ಗುಣ. ಅವಾದೇಶ. ಸಂಬುದ್ಧಿಯಲ್ಲಿ **ಆಮಂತ್ರಿತಸ್ಯ ಚ** ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಮಂಹಿಷ್ಠಸ್ಯ**—ಮಹಿ ವೃದ್ಧೌ ಧಾತು ಕರ್ತರಿಯಲ್ಲಿ ತೃಚ್ ಪ್ರತ್ಯಯ ಅತಿಶಯೇನ ಮಂಹಿತಾ ಮಂಹಿಷ್ಠಃ **ತುಶ್ಛಂದಸಿ** (ಪಾ. ಸೂ. ೫-೩-೫೯) ತೃಜಂತದ ಮೇಲೆ ಇಷ್ಠನ್ ಪ್ರತ್ಯಯ. **ತುರಿಷ್ಠೇಮೇಯಃಸು** (ಪಾ. ಸೂ. ೬-೪-೧೫೪) ಎಂಬುದರಿಂದ ಇಷ್ಠನ್ ಪರವಾದಾಗ ತೃಜಿಗೆ ಲೋಪ. ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಪ್ರಭೃತಸ್ಯ**— ಭೃಞ್ ಭರಣೇ ಧಾತು. ಕರ್ಮಣಿಯಲ್ಲಿ ನಿಷ್ಠಾಪ್ರತ್ಯಯ. **ಗತಿರನಂತರಃ** (ಪಾ. ಸೂ. ೬-೨-೪೯) ಎಂಬುದರಿಂದ ಗತಿಗೆ (ಪ್ರ) ಪ್ರಕೃತಿಸ್ವರ ಬರುತ್ತದೆ. ಷಷ್ಠೀಏಕವಚನಾಂತರೂಪ.

**ಸ್ವಧಾವಃ**— ಮತುಪ್ ಪ್ರತ್ಯಯ ಬಂದಾಗ **ಮಾದುಪಧಾಯಾ** ಎಂಬುದರಿಂದ ಮಕಾರಕ್ಕೆ ವತ್ವ. ಸಂಬುದ್ಧಿಯಲ್ಲಿ **ಮತುವಸೋರುಃಸಂಬುದ್ಧೌ** (ಪಾ. ಸೂ. ೮-೩-೧) ಎಂಬುದರಿಂದ ರುತ್ವ. ಆಮಂತ್ರಿತನಿಘಾತ ಸ್ವರ ಬರುತ್ತದೆ.

**ಪೀಯತಿ**—ಪೀ ಪಾನೇ. ಧಾತು. ಇಲ್ಲಿ ವಧಾರ್ಥದಲ್ಲಿ ಪ್ರಯುಕ್ತವಾಗಿದೆ. ಲಟ್ ಪ್ರಥಮಪುರುಷ ಏಕವಚನಾಂತರೂಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಶ್ಯನ್ ವಿಕರಣ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಗೃಣಾತಿ**—ಗೃ ಶಬ್ದೇ. ಧಾತು. ಕ್ರ್ಯಾದಿ. ಲಟ್ ಪ್ರಥಮಪುರುಷಏಕವಚನದಲ್ಲಿ ತಿಪ್ ಪ್ರತ್ಯಯ. **ಕ್ರ್ಯಾದಿಭ್ಯಃ ಶ್ನಾ** ಎಂಬುದರಿಂದ ಶ್ನಾವಿಕರಣ. **ಪ್ವಾದೀನಾಂ ಹ್ರಸ್ವಃ** (ಪಾ. ಸೂ. ೭-೩-೮೦) ಎಂಬುದರಿಂದ ಧಾತುವಿಗೆ ಹ್ರಸ್ವ. ತಿಜಂತನಿಘಾತಸ್ವರ ಬರುತ್ತದೆ.

**ವಂದಾರುಃ**—ವದಿ ಅಭಿವಾದನಸ್ತುತ್ಯೋಃ ಧಾತು. **ಶೃವಂದ್ಯೋರಾರುಃ**(ಪಾ. ಸೂ. ೩-೨-೧೭೩)ಎಂಬುದರಿಂದ ತಚ್ಛೀಲಾರ್ಥದಲ್ಲಿ ಆರು ಪ್ರತ್ಯಯ. **ಇದಿತೋ ನುಮ್ ಧಾತೋಃ** ಎಂಬುದರಿಂದ ಧಾತುವಿಗೆ ನುಮಾಗಮ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

**ತನ್ವಮ್** - **ತನ್ವಾದೀನಾಂ ಛಂದಸ್ಯುಪಸಂಖ್ಯಾನಮ್** ಎಂಬ ವಚನದಿಂದ ಯಣಾದೇಶ. **ಉದಾತ್ತಸ್ವರಿತಯೋರ್ಯಣಃ** (ಪಾ. ಸೂ. ೮-೨-೪) ಎಂಬುದರಿಂದ ಸ್ವರಿತಸ್ವರ ಬರುತ್ತದೆ.

**ವಂದೇ**—ವದಿ ಅಭಿವಾದನಸ್ತುತ್ಯೋಃ ಧಾತು. ಇದಿತ್ತಾದುದರಿಂದ ನುಮಾಗಮ. ಲಟ್ ಪ್ರಥಮಪುರುಷ ಏಕವಚನಾಂತರೂಪ. ಅತಿಜಂತಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೨ ॥



ಯೇ ಪಾಯವೋ ಮಾಮತೇಯಂ ತೇ ಅಗ್ನೇ ಪಶ್ಯಂತೋ ಅಂಧಂ ದುರಿತಾದರಕ್ಷನ್ ।
ರರಕ್ಷ ತಾನ್ತ್ಸುಕೃತೋ ವಿಶ್ವವೇದಾ ದಿಪ್ಸಂತ ಇದ್ರಿಪವೋ ನಾಹ ದೇಭುಃ ।
॥ ೩ ॥

। ಪದಪಾಠಃ ।

ಯೇ । ಪಾಯವಃ । ಮಾಮತೇಯಂ । ತೇ । ಅಗ್ನೇ । ಪಶ್ಯಂತಃ । ಅಂಧಂ । ದುಃऽಇತಾತ್ । ಅರಕ್ಷನ್ । ರರಕ್ಷ । ತಾನ್ । ಸುऽಕೃತಃ । ವಿಶ್ವऽವೇದಾಃ । ದಿಪ್ಸಂತಃ । ಇತ್ । ರಿಪವಃ । ನ । ಅಹ । ದೇಭುಃ ॥೩ ॥

ಸಾಯಣಭಾಷ್ಯಂ

ಅತ್ರೇತಿಹಾಸಮಾಚಕ್ಷತೇ । ಉಚಥ್ಯಬೃಹಸ್ಪತಿನಾಮಾನೌ ದ್ವಾವೃಷೀ ಆಸ್ತಾಂ । ತತ್ರೋಚಥ್ಯಸ್ಯ ಮಮತಾ ನಾಮ ಭಾರ್ಯಾ। ಸಾ ಚ ಗರ್ಭಿಣೀ । ತಾಂ ಬೃಹಸ್ಪತಿರ್ಗೃಹೀತ್ವಾರಮಯತ್ । ಶುಕ್ರನಿರ್ಗಮನಾವಸರೇ ಪ್ರಾಪ್ತೇ ಗರ್ಭಸ್ಥಂ ರೇತಃ ಪ್ರಾವಾದೀತ್ ಹೇ ಮುನೇ ರೇತೋ ಮಾ ತ್ಯಾಕ್ಷೀಃ ಪೂರ್ವಮಹಂ ವಸಾಮಿ ರೇತಃಸಂಕರಂ ಮಾ ಕಾರ್ಷೀರಿತಿ । ಏವಮುಕ್ತೋ ಬೃಹಸ್ಪತಿರ್ಬಲಾತ್ಪ್ರತಿರುದ್ಧರೇತಸ್ಕಃ ಸನ್ ಶಶಾಪ । ಹೇ ಗರ್ಭ ತ್ವಂ ಯತೋ ರೇತೋನಿರೋಧಮಕರೋಃ ಅತಸ್ತ್ವಂ ದೀರ್ಘಂ ತಮಃ ಪ್ರಾಪ್ನುಹಿ ಜಾತ್ಯಂಧೋ ಭವೇತಿ । ಏವಂ ಶಪ್ತೋ ಮಮತಾಯಾಂ ದೀರ್ಘತಮಾ ಅಜಾಯತ । ಸ ಚೋತ್ಪನ್ನಃ ಸ್ವಮನೋವ್ಯಥಯಾಗ್ನಿಮಸ್ತೌಷೀತ್ । ಸ ಚ ಸ್ತುತ್ಯಾ ಪ್ರೀತ ಆಂಧ್ಯಂ ಪರ್ಯಹರದಿತಿ । ತದಿದಮತ್ರೋಚ್ಯತೇ । ಹೇ ಅಗ್ನೇ ತೇ ತವ ಸಂಬಂಧಿನೋ ಯೇ ಪಾಯವಃ ಪ್ರಸಿದ್ಧಾಃ ಪಾಲಯಿತಾರೋ ರಶ್ಮಯೋ ಮಾಮತೇಯಂ ಮಮತಾಯಾಃ ಪುತ್ರಂ ದೀರ್ಘತಮಸಮಂಧಂ ಪಶ್ಯಂತೋಽಂಧೋಽಯಂ ಅತೋಽಸ್ಮಾಭೀ ರಕ್ಷಣೀಯ ಇತ್ಯವಗಚ್ಛಂತೋ ದುರಿತಾದ್ದುಷ್ಟಂ ಪ್ರಾಪ್ತಾದ್ದುಃಖಾದರಕ್ಷನ್ ತಾನ್ಸುಕೃತಃ ಸುಖಕರ್ತೄನ್ ವಿಶ್ವವೇದಾ ವಿಶ್ವಪ್ರಜ್ಞೋ ರರಕ್ಷ । ರಕ್ಷತಿ । ಅಸ್ಮತ್ಪಾಲನಾಯೇತಿ ಭಾವಃ । ತೈರಸ್ಮಾನಪಿ ರಕ್ಷಿಷ್ಯತೀತ್ಯರ್ಥಃ । ಏವಂ ರಕ್ಷಿತಾನಸ್ಮಾನ್ ದಿಪ್ಸಂತೋ ದಂಭಿತುಮಿಚ್ಛಂತೋ ರಿಪವಃ ಕಾಮಾದಯೋ ನಾಹ ದೇಭುಃ । ಅಹೇತಿ ವಿನಿಗ್ರಹಾರ್ಥೀಯಃ । ನ ಖಲು ದಂಭಿತುಂ ಶಕ್ನುವಂತಿ ॥ ದನ್ಭು ದಂಭೇ । ಶ್ರಂಥಿಗ್ರಂಥಿದಂಭಿಸ್ವಂಜೀನಾಮಿತಿ ವಕ್ತವ್ಯಂ । ಕಾ. ೧-೨-೬-೧ । ಇತಿ ಲಿಟಃ ಕಿತ್ತ್ವಾದನಿದಿತಾಮಿತಿ ನಲೋಪಃ । ತಸ್ಯಾಸಿದ್ಧತ್ವಾದೇತ್ವಾಭ್ಯಾಸಲೋಪಯೋರಪ್ರಾಪ್ತೌ ದಂಭೇಶ್ಚೇತಿ ವಕ್ತವ್ಯಂ । ಪಾ. ೬-೪-೧೨೦-೫ । ಇತಿ ತೌ ವಿಧೀಯೇತೇ ॥ ಯದ್ವಾ । ಸೂಕ್ತದ್ರಷ್ಟಾ ದೀರ್ಘತಮಾಃ ಸ್ವಯಮೇವಾತ್ಮಾನಂ ಪರೋಕ್ಷತಯಾ ಬ್ರವೀತಿ ॥

ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ । ತೇ—ನಿನ್ನ । **ಯೇ ಪಾಯವಃ**—ಪಾಲಕಗಳಾದ ಯಾವ ರಶ್ಮಿಗಳು । **ಮಾಮತೇಯಂ**—ಮಮತೆಯ ಪುತ್ರನಾದ ದೀರ್ಘತಮಸ್ಸನ್ನು (ಅಜ್ಞಾನಾಂಧಕಾರವನ್ನು) । **ಅಂಧಂ ಪಶ್ಯಂತಃ**—ಇವನು ಕುರುಡನು ಎಂದು ತಿಳಿದುಕೊಂಡು । **ದುರಿತಾತ್**—(ಅಂಧಕಾರದ) ದುಃಖದಿಂದ । **ಅರಕ್ಷನ್**—ರಕ್ಷಿಸಿದುವೋ । **ತಾನ್ ಸುಕೃತಃ**—ಸುಖಕಾರಕಗಳಾದ ಆ ರಶ್ಮಿಗಳನ್ನು । **ವಿಶ್ವವೇದಾಃ**—ಸಕಲವನ್ನೂ ತಿಳಿದವನು । ರರಕ್ಷ—ಕಾಪಾಡಿಕೊಳ್ಳುತ್ತಾನೆ (ಹೀಗೆ ನಾವೂ ಸಹ ಕಾಪಾಡಿಕೊಂಡರೆ) । **ದಿಪ್ಸಂತಃ**—(ನಮ್ಮನ್ನು) ಹಿಂಸೆಮಾಡಲಿಚ್ಛಿಸುವ । **ರಿಪವಃ**— (ಕಾಮಾದಿರೂಪದ) ಶತ್ರುಗಳು । **ನಾಹ ದೇಭುಃ**— ಖಂಡಿತವಾಗಿಯೂ ಹಿಂಸಿಸಲಾರರು.

ಭಾವಾರ್ಥ

ಎಲೈ ಅಗ್ನಿಯೇ, ಪಾಲಕಗಳಾದ ಯಾವ ನಿನ್ನ ರಶ್ಮಿಗಳು ಮಮತೆಯ ಪುತ್ರನಾದ ದೀರ್ಘ ತಮಸ್ಸನ್ನು ಇವನು ಕುರುಡನು ಎಂದು ತಿಳಿದುಕೊಂಡು ಕನಿಕರದಿಂದ ಅವನನ್ನು ಅಂಧಕಾರದ ದುಃಖದಿಂದ ರಕ್ಷಿಸಿದವೋ, ಸುಖಕಾರಕಗಳಾದ ಆ ಸಕಲ ರಶ್ಮಿಗಳನ್ನೂ ತಿಳಿದವನು ಕಾಪಾಡಿಕೊಳ್ಳುತ್ತಾನೆ ಹೀಗೆ ನಾವೂ ಸಹ ಕಾಪಾಡಿಕೊಂಡರೆ, ನಮ್ಮನ್ನು ಹಿಂಸಿಸಬೇಕೆಂದು ಅಪೇಕ್ಷಿಸುವ ಶತ್ರುಗಳು ಖಂಡಿತವಾಗಿಯೂ ಹಿಂಸಿಸಲಾರರು.

English Tranlation

Your fostering (rays), Agni, beholding the blind son of Mamata, relieved him of the affliction : he who knows all things protects the pious, and (their) malevolent enemies are unable to do them harm.

ವಿಶೇಷವಿಷಯಗಳು

**ಮಾಮತೇಯಂ ಅಂಧಂ ಪಶ್ಯಂತಃ ದುರಿತಾತ್ ಅರಕ್ಷನ್**–ಮಮತಾ ಎಂಬುವಳ ಪುತ್ರನಾದ ದೀರ್ಘತಮಸ್ಸನ್ನು ಅವನು ಕುರುಡನು ಎಂದು ತಿಳಿದು ದಯೆಯಿಂದ ಅವನನ್ನು ಆ ದುಃಖದಿಂದ ತಪ್ಪಿಸಿದವು ಎಂದು ಅಗ್ನಿರಶ್ಮಿಗಳ ರಕ್ಷಣಾಸ್ವರೂಪವನ್ನು ಸ್ತುತಿಸಿದೆ. ಇಲ್ಲಿ ಸಾಯಣರು ಈ ಸನ್ನಿವೇಶದ ಪೂರ್ವಕಥೆಯನ್ನು ಈ ರೀತಿ ಹೇಳಿದ್ದಾರೆ.

> **ಅತ್ರೇತಿಹಾಸಮಾಚಕ್ಷತೇ । ಉಚಥ್ಯಬೃಹಸ್ಪತಿನಾಮಾನೌ ದ್ವಾವೃಷೀ ಆಸ್ತಾಂ । ತತ್ರೋಚಥ್ಯಸ್ಯ ಮಮತಾ ನಾಮ ಭಾರ್ಯಾ। ಸಾ ಚ ಗರ್ಭಿಣೀ । ತಾಂ ಬೃಹಸ್ಪತಿರ್ಗೃಹೀತ್ವಾರಮಯತ್ । ಶುಕ್ರನಿರ್ಗಮನಾವಸರೇ ಪ್ರಾಪ್ತೇ ಗರ್ಭಸ್ಯ ರೇತಃ ಪ್ರಾವಾದೀತ್ । ಹೇ ಮುನೇ ರೇತೋ ಮಾತ್ಯಾಕ್ಷೀಃ ಪೂರ್ವಮಹಂ ವಸಾಮಿ ರೇತಃಸಂಕರಂ ಮಾ ಕಾರ್ಷೀರಿತಿ । ಏವಮುಕ್ತೋ ಬೃಹಸ್ಪತಿರ್ಬಲಾತ್ಪ್ರತಿರುದ್ಧರೇತಸ್ಕಃ ಸನ್ ಶಶಾಪ । ಹೇ ಗರ್ಭ ತ್ವಂ ಯತೋ ರೇತೋನಿರೋಧಮಕರೋಃ ಅತಸ್ತ್ವಂ ದೀರ್ಘಂ ತಮಃ ಪ್ರಾಪ್ನುಹಿ ಜಾತ್ಯಂಧೋ ಭವೇತಿ । ಏವಂ ಶಪ್ತೋ ಮಮತಾಯಾಂ ದೀರ್ಘತಮಾ ಅಜಾಯತ । ಸ ಚೋತ್ಪನ್ನಸ್ತಮೋವ್ಯಥಯಾಗ್ನಿಮಸ್ತೌಷೀತ್ । ಸ ಚ ಸ್ತುತ್ಯಾ ಪ್ರೀತೆ ಅಂಧ್ಯಂ ಪರ್ಯಹರದಿತಿ । ತದಿದಮತ್ರೋಚ್ಯತೇ ।**

ಉಚಥ್ಯ ಮತ್ತು ಬೃಹಸ್ಪತಿ ಎಂಬ ಇಬ್ಬರು ಋಷಿಗಳಿದ್ದರು. ಮಮತಾ ಎಂಬ ಉಚಥ್ಯನ ಪತ್ನಿಯು ಗರ್ಭಿಣಿಯಾಗಿದ್ದಾಗ ಬೃಹಸ್ಪತಿಯು ಅವಳನ್ನು ಬಲಾತ್ಕಾರದಿಂದ ಹಿಡಿದು ರಮಿಸಿದನು. ರೇತಸ್ಸಿನ ನಿರ್ಗಮನ ಕಾಲದಲ್ಲಿ ಒಳಗಿದ್ದ ಗರ್ಭವು "ಎಲೈ ಋಷಿಯೇ ನಾನು ಪೂರ್ವದಿಂದಲೂ ಇಲ್ಲಿದ್ದೇನೆ. ದಯವಿಟ್ಟು ನಿನ್ನ ರೇತಸ್ಸನ್ನು ತಡೆದುಕೊ" ಎಂದಿತು. ಅದರ ನಿರೋಧಕ್ಕಾಗಿ ಬೃಹಸ್ಪತಿಯು ಕುಪಿತನಾಗಿ ಅದನ್ನು ದೀರ್ಘವಾದ ತಮಸ್ಸಿನಲ್ಲಿಡತಕ್ಕ ಅಂಧನಾಗಿ ಜನಿಸಬೇಕೆಂದು ಶಪಿಸಿದನು. ಅದರಂತೆಯೇ ಮಮತೆಗೆ **ದೀರ್ಘತಮಾ** ಎಂಬ ಅನ್ವರ್ಥನಾಮದ ಪುತ್ರನು ಜನಿಸಿದನು. ಅವನು ಹುಟ್ಟಿದೊಡನೆಯೇ ಅಂಧಕಾರದಿಂದ ತಪಿಸುತ್ತಾ ಅಗ್ನಿಯನ್ನು ಸ್ತುತಿಸಿದನು. ಅಗ್ನಿಯು ಆ ಸ್ತುತಿಯಿಂದ ತುಷ್ಟನಾಗಿ ಅವನ ಅಂಧತ್ವವನ್ನು ನಾಶಮಾಡಿದನು, ಆ ಸಂದರ್ಭವನ್ನು ಇಲ್ಲಿ ಸೂಚಿಸಿದೆ.

ಇದೇ ಕಥೆಯನ್ನು ಬೃಹದ್ದೇವತಾಕಾರರೂ ಈ ರೀತಿ ಹೇಳಿದ್ದಾರೆ.

> **ದ್ವಾವುಚಥ್ಯಬೃಹಸ್ಪತೀ ಋಷಿಪುತ್ರೌ ಬಭೂವತುಃ ।**
> **ಆಸೀದುಚಥ್ಯಭಾರ್ಯಾ ತು ಮಮತಾ ನಾಮ ಭಾರ್ಗವೀ ॥**

ತಾಂ ಕನೀಯಾನ್ಬೃಹಸ್ಪತಿರ್ಮೈಥುನಾಯೋಪಚಕ್ರಮೇ ।
ಶುಕ್ರಸ್ಯೋತ್ಸರ್ಗಕಾಲೇ ತು ಗರ್ಭಸ್ತಂ ಪ್ರತ್ಯಭಾಷತ ॥
ಇಹಾಸ್ಮಿ ಪೂರ್ವಸಂಭೂತೋ ನ ಕಾರ್ಯಃ ಶುಕ್ರಸಂಕರಃ ।
ತಚ್ಛುಕ್ರಪ್ರತಿಷೇಧಂ ತು ನ ಮಮರ್ಷ ಬೃಹಸ್ಪತಿಃ ॥
ಸ ವ್ಯಜಹಾರ ತಂ ಗರ್ಭಂ ತಮಸ್ತೇ ದೀರ್ಘಮಸ್ತ್ವಿತಿ ।
ಸ ಚ ದೀರ್ಘತಮಾ ನಾಮ ಬಭೂವರ್ಷಿರುಚಥ್ಯಜಃ ॥
ಸ ಜಾತೋಽಭ್ಯತಪದ್ದೇವಾನಕಸ್ಮಾದಂಧತಾಂ ಗತಃ ।
ದದುರ್ದೇವಾಸ್ತು ತನ್ನೇತ್ರೇ ತತೋಽನಂಧೋ ಬಭೂವ ಸಃ ॥
ಸ ವೇದಿಷದ ಇತ್ಯಸ್ಮಾಚ್ಚತುರ್ಭಿರ್ಜಾತವೇದಸಂ ।

(ಬೃ. ದೇ. ೪-೧೧-೧೬)

ಈ ಕಥೆಯಲ್ಲಿ ಬೃಹಸ್ಪತಿ ಮತ್ತು ಉಚಥ್ಯರು ಸಹೋದರರೆಂದು ಹೇಳಿದೆ. ಮತ್ತು ಸಾಯಣರ ವಿವರಣೆಯಲ್ಲಿ ದೀರ್ಘತಮಸ್ಸು ಅಗ್ನಿಯನ್ನು ಸ್ತುತಿಸಿದನೆಂದಿದೆ. ಇಲ್ಲಿ ದೇವತೆಗಳನ್ನು ಸ್ತುತಿಸಿದನೆಂದೂ, ಮತ್ತು ಆ ದೇವತೆಗಳು ಇವನಿಗೆ ನೇತ್ರಗಳನ್ನು ಕೊಟ್ಟರೆಂದೂ ಉಕ್ತವಾಗಿದೆ. ಇದೇ **ಮಾಮತೇಯಂ ದುರಿತಾದರಕ್ಷನ್** ಎಂಬುದರ ಕಥಾಸಂದರ್ಭವು.

ಈ ಸೂಕ್ತದ ವಿಷಯವಾಗಿ Oldenberg ಎಂಬ ಪಂಡಿತನು ಈ ರೀತಿ ಹೇಳಿದ್ದಾನೆ.

Dirghatamas, the son of Mamata, is the reputed author of this section of the first Mandala which belongs indeed to a family of priests claiming descent from him. The story of the blindness of Dirghatamas and of the distress into which he fell is told in the Mahabharata I-4179 Seq.

Considering the construction of the whole verse from the grammatical point of view only, one will scarcely be tempted to translate otherwise than we have done. But it is rather strange that Agni is represented here as saving those very guardians by the aid of whom he has saved Mamateya. The meaning which one should expect to find expressed, is rather that Agni, as he saved Mamateya by his guardians, has saved also and will save, all pious worshippers. This meaning may be estabished if we consider the construction of the verse as similar to that of I—37-12.

Thus, we may, I believe, translate here, " Agni, with such guardians as thine who have seen and saved the blind son of Mamata from distress, he, the possessor of all wealth (i.e. Agni) has saved all those who have done good deeds ".

( The Vedic Hymns. P. 171-2 )

**ದುರಿತಾತ್**—ದುರಿತಶಬ್ದಕ್ಕೆ ನಿರುಕ್ತಕಾರರು **ದುರ್ಗತಿಗಮನವೆಂದು** ಅರ್ಥಮಾಡಿದ್ದಾರೆ. (ನಿ. ೬-೧೨)

ಮತ್ತು

**ವೈಶ್ವದೇವೀ ಸೂನೃತಾಮಾರಭಧ್ವಂ ಶುದ್ಧಾ ಭವಂತೋ ಯಜ್ಞಿಯಾಸಃ ಪಾವಕಾಃ ।**
**ಅತಿಕ್ರಾಮಂತೋ ದುರಿತಾನಿ ವಿಶ್ವಾ ಶತಂ ಹಿಮಾಃ ಸರ್ವವೀರಾ ಮದೇಮ ॥**

ಎಂಬ ಶ್ರುತಿವಾಕ್ಯವನ್ನುದಹರಿಸಿ **ದುರಿತ** ಶಬ್ದದ ಅರ್ಥವನ್ನು ವಿವರಿಸಿದ್ದಾರೆ. ದುರ್ಗಾಚಾರ್ಯರು ಇದಕ್ಕೆ ವ್ಯಾಖ್ಯಾನಮಾಡುತ್ತಾ **ದುರಿತಾನಿ—ದುರ್ಗತಿಪ್ರಾಪಕಾಣಿ ಕರ್ಮಾಣಿ ।** ದುಃಸ್ಥಿತಿಗೆ ತರತಕ್ಕದ್ದೂ ದುಃಖಕ್ಕೆ ಸಾಧನವಾಗಿರತಕ್ಕದ್ದೂ ಆದ ಕರ್ಮಗಳೆಂದು ತಿಳಿಸಿದ್ದಾರೆ

**ದಿಪ್ಸಂತಃ—ದಂಭಿತುಮಿಚ್ಛಂತಃ ರಿಪವಃ ಕಾಮಾದಯಃ ।** ನಮ್ಮನ್ನು ಹಿಂಸಿಸಲಿಚ್ಛಿಸುವ ಕಾಮಾದಿ ಶತ್ರುಗಳು ಎಂದರ್ಥ.

ವ್ಯಾಕರಣಪ್ರಕ್ರಿಯಾ

**ಪಾಯವಃ**—ಪಾ ರಕ್ಷಣೇ. ಧಾತು. **ಕೃವಾಪಾ**—(ಉ. ಸೂ. ೧-೧) ಎಂಬುದರಿಂದ ಉಣ್ ಪ್ರತ್ಯಯ. **ಆತೋ ಯುಕ್ ಚಿಣ್‌ಕೃತೋಃ** (ಪಾ. ಸೂ. ೭-೩-೩೩) ಎಂಬುದರಿಂದ ಧಾತುವಿಗೆ ಯುಕಾಗಮ. ಪಾಯು ಶಬ್ದವಾಗುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಮಾಮತೇಯಮ್**—ಮಮತಾಯಾಃ ಅಪತ್ಯಂ ಪುಮಾನ್ ಮಾಮತೇಯಃ. **ಸ್ತ್ರೀಭ್ಯೋ ಢಕ್** (ಪಾ. ಸೂ. ೪-೧-೧೨೦) ಎಂಬುದರಿಂದ ಅಪತ್ಯಾರ್ಥದಲ್ಲಿ ಢಕ್ ಪ್ರತ್ಯಯ. **ಆಯನೇಯೀ**—(ಪಾ. ಸೂ. ೭-೧-೨) ಎಂಬುದರಿಂದ ಏಯಾದೇಶ. **ಯಸ್ಯೇತಿ ಚ** ಎಂಬುದರಿಂದ ಆಕಾರಕ್ಕೆ ಲೋಪ. **ಕಿತಿ ಚ** (ಪಾ. ಸೂ. ೭-೨-೧೧೮) ಎಂಬುದರಿಂದ ಆದಿವೃದ್ಧಿ. ದ್ವಿತೀಯಾ-ಏಕವಚನಾಂತರೂಪ.

**ಪಶ್ಯಂತಃ**—ದೃಶಿರ್ ಪ್ರೇಕ್ಷಣೇ. ಧಾತು. ಲಟ್ ಬಂದಾಗ ಅದಕ್ಕೆ ಶತ್ರಾದೇಶ. ಶಪ್ ವಿಕರಣ ಬಂದಾಗ ಧಾತುವಿಗೆ ಪಶ್ಯಾದೇಶ ಲಸಾರ್ವಧಾತುಕ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ. ಪ್ರಥಮಾ ಬಹುವಚನದಲ್ಲಿ ಉಗಿತ್ತಾದುದರಿಂದ ನುಮಾಗಮ.

**ದುರಿತಾತ್**—ದುರ್ ಉಪಸರ್ಗ. ಇಣ್ ಗತೌ. ಕ್ತಪ್ರತ್ಯಯ. **ಗತಿಕಾರಕೋಪಪದಾತ್ ಕೃತ್** ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ಪಂಚಮೀ ಏಕವಚನಾಂತರೂಪ.

**ಅರಕ್ಷನ್**—ರಕ್ಷ ಪಾಲನೇ. ಧಾತು. ಲಙ್ ಪ್ರಥಮಪುರುಷಏಕವಚನಾಂತರೂಪ. ಯಚ್ಛಬ್ದಸಂಬಂಧವಿರುವುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ.

**ರರಕ್ಷ**—ಪೂರ್ವೋಕ್ತವಾದ ಧಾತುವಿನ ಲಿಟ್ ಪ್ರಥಮಪುರುಷ ಏಕವಚನಾಂತರೂಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಣಲ್ ಲಿತ್ತಾದುದರಿಂದ **ಲಿತಿ** (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ.

**ಸುಕೃತಃ**—ಶೋಭನಂ ಕುರ್ವಂತಿ ಇತಿ ಸುಕೃತಃ ಡುಕೃಞ್ ಕರಣೇ ಧಾತು. ಕ್ವಿಪ್ ಪ್ರತ್ಯಯ. **ಹ್ರಸ್ವಸ್ಯ ಪಿತಿ ಕೃತಿ ತುಕ್** (ಪಾ.ಸೂ. ೬-೧-೭೧) ಎಂಬುದರಿಂದ ತುಕಾಗಮ ಕೃದುತ್ತರಪದ ಪ್ರಕೃತಿಸ್ವರಬರುತ್ತದೆ. ದ್ವಿತೀಯಾ ಬಹುವಚನಾಂತರೂಪ.

ವಿಶ್ವವೇದಾಃ—ವಿದ ಜ್ಞಾನೇ. ಧಾತು. **ಗತಿಕಾರಕೋಪಪದಯೋಃ ಪೂರ್ವಪದಪ್ರಕೃತಿಸ್ವರತ್ವಂಚ** (ಪಾ. ಸೂ. ೪-೬೬೬) ಎಂಬುದರಿಂದ ಅಸುನ್ ಪ್ರತ್ಯಯ. ಕೃದುತ್ತರಪದ ಪ್ರಕೃತಿಸ್ವರಕ್ಕೆ ಬಾಧಕವಾಗಿ ಪೂರ್ವಪದ ಪ್ರಕೃತಿಸ್ವರ ಬರುತ್ತದೆ. ಪ್ರತ್ಯಯ ನಿಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣ.

ದಿಪ್ಸಂತಃ—ದಂಭು ದಂಭನೇ. ಧಾತು. **ಧಾತೋಃ ಕರ್ಮಣಃ**—(ಪಾ. ಸೂ. ೩-೧-೭) ಎಂಬುದರಿಂದ ಇಚ್ಛಾರ್ಥದಲ್ಲಿ ಸನ್. **ಸನ್ಯಜೋಃ** ಎಂಬುದರಿಂದ ದ್ವಿತ್ವ. **ದಂಭ ಇಚ್ಚ** (ಪಾ. ಸೂ. ೭-೪-೫೬) ಎಂಬುದರಿಂದ ಧಾತುವಿಗೆ ಇತ್ವ. **ಹಲಂತಾಚ್ಚ** (ಪಾ. ಸೂ. ೧-೨-೧೦) ಎಂಬುದರಿಂದ ಸನಿಗೆ ಕಿತ್ವ ಬರುವುದರಿಂದ **ಅನಿದಿತಾಂಹ**—ಸೂತ್ರದಿಂದ ಧಾತುವಿನ ಉಪಧಾನಕಾರಕ್ಕೆ ಲೋಪ. **ಅತ್ರ ಲೋಪೋಽಭ್ಯಾಸಸ್ಯ** (ಪಾ. ಸೂ. ೭-೪-೫೮) ಎಂಬುದರಿಂದ ಅಭ್ಯಾಸಕ್ಕೆ ಲೋಪ. **ಖರಿಚ** ಎಂಬುದರಿಂದ ಚರ್ತ್ವ. ಸನ್ನಂತದ ಮೇಲೆ ಲಟರ್ಥದಲ್ಲಿ ಶತೃಪ್ರತ್ಯಯ. ಸನ್ ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

ದೇಭುಃ—ಪೂರ್ವೋಕ್ತವಾದ ಧಾತುವಿಗೆ ಲಿಟ್ ಪ್ರಥಮಪುರುಷ ಬಹುವಚನದಲ್ಲಿ ಉಸಾದೇಶ. ಸಂಯೋಗ ವಿದ್ದರೂ **ಶ್ರಂಥಿಗ್ರಂಥಿದಂಭಿಸ್ವಂಜೀನಾಮಿತಿ ವಕ್ತವ್ಯಮ್** (ಕಾ. ೧-೧-೬-೨) ಎಂಬುದರಿಂದ ಪ್ರತ್ಯಯಕ್ಕೆ ಕಿತ್ವಾತಿದೇಶ ಬರುವುದರಿಂದ **ಅನಿದಿತಾಂ ಹಲ**-ಎಂಬುದರಿಂದ ಧಾತುವಿನ ಉಪಧಾ ನಕಾರಕ್ಕೆ ಲೋಪ. ಇದು ಅಸಿದ್ಧವಾಗುವುದರಿಂದ **ಅತ ಏಕಹಲ್**—(ಪಾ. ಸೂ. ೬-೪-೧೨೦) ಎಂಬುದರಿಂದ ಏತ್ವಾಭ್ಯಾಸ ಬಾರದಿರುವಾಗ **ದಂಭೇಶ್ಚೇತಿ-ವಕ್ತವ್ಯಮ್** (ಪಾ. ಸೂ. ೬-೪-೧೨೦-೪) ಎಂಬುದರಿಂದ ಏತ್ವಾಭ್ಯಾಸ ಲೋಪ ಬರುತ್ತದೆ. ತಿಙಂತನಿಘಾತಸ್ವರ ಬರುತ್ತದೆ. ॥ ೪ ॥

ಸಂಹಿತಾಪಾಠಃ

## ಯೋ ನೋ ಅಗ್ನೇ ಅರರಿವಾ ಅಘಾಯುರರಾತೀವಾ ಮರ್ಚಯತಿ ದ್ವಯೇನ ।
## ಮಂತ್ರೋ ಗುರುಃ ಪುನರಸ್ತು ಸೋ ಅಸ್ಮಾ ಅನು ಮೃಕ್ಷೀಷ್ಟ ತನ್ವಂ ದುರುಕ್ತೈಃ ॥ ೪ ॥

ಪದಪಾಠಃ

ಯಃ । ನಃ । ಅಗ್ನೇ । ಅರರಿಽವಾನ್ । ಅಘಽಯುಃ । ಅರಾತಿಽವಾ । ಮರ್ಚಯತಿ । ದ್ವಯೇನ ।

ಮಂತ್ರಃ । ಗುರುಃ । ಪುನಃ । ಅಸ್ತು । ಸಃ । ಅಸ್ಮೈ । ಅನು । ಮೃಕ್ಷೀಷ್ಟ । ತನ್ವಂ । ದುಃಽಉಕ್ತೈಃ ॥೪॥

## ಸಾಯಣಭಾಷ್ಯಂ

ಹೇ ಅಗ್ನೇ ಸೋಽಸ್ಮಾನ್ಯುಷ್ಮದ್ರಕ್ಷಿತಾನ್ ಯೋಽಘಾಯುರ್ಮಾರಣಾದಿರೂಪಪಾಪೇಚ್ಛಾವಾನ್ ಅರರಿವಾನದಾತಾ । ಅಸ್ಮದ್ದಾನಪ್ರತಿಬಂಧಕ ಇತ್ಯರ್ಥಃ ॥ ರಾತೇಶ್ಛಾಂದಸಸ್ಯ ಲಿಟಃ ಕ್ವಸುಃ ॥ ಅರಾತೀವಾ ಸ್ವಯಮದಾನವಾನ್ ॥ ಛಂದಸಿ ವನಿಪಮಿಚ್ಛಂತೀತಿ ಮತ್ವರ್ಥೀಯೋ ವನಿಪ್ ॥ ಶತ್ರುತ್ವಮಾಚರನ್ ಯಃ ಶತ್ರುರ್ದ್ವಯೇನ ಮಾನಸವಾಚಿಕಭೇದೇನ ದ್ವಿವಿಧೇನ । ನ ದದಾಮೀತಿ ಮಾನಸೋ ಮಂತ್ರಃ । ನಿಂದಾದ್ಯಾರೋಪೇಣ ದಾನನಿವಾರಣಂ ವಾಚಿಕೋ ಮಂತ್ರಃ । ಯದ್ವಾ । ಮಾಯಾಹೇತುಕೇನ ವಿರುದ್ಧ-ರೂಪೇಣ ದ್ವಿವಿಧೇನ ಮಂತ್ರೇಣ । ಯೋ ವಿರುದ್ಧಮಾಚರತಿ ತನ್ನ ಸಂಕೀರ್ತಯತಿ ಯಚ್ಚ ಪ್ರಿಯಂ ಬ್ರೂತೇ ತನ್ನ ಕರೋತಿ ಅನ್ಯತ್ಕರೋತ್ಯನ್ಯದ್ವದತೀತ್ಯೇವಂ ಮಂತ್ರಸ್ವರೂಪದ್ವೈವಿಧ್ಯಂ। ಪೂರ್ವಂ ಮಾನಸ-ವಾಚಿಕಭೇದೇನ ಇದಾನೀಂ ವಾಚಿಕಕಾಯಿಕಭೇದೇನೇತಿ ವಿವೇಕಃ । ಈದೃಶೇನ ಮಂತ್ರೇಣ ಯಃ ಶತ್ರು-ರ್ಮರ್ಚಯತಿ ಭರ್ತ್ಸಯತಿ ವಿಧೇಯೀಕರೋತಿ ವಾಸ್ಮಾನ್ । ಸ ಮಂತ್ರೈಕದೇಶೋ ಮಾನಸರೂಪೋಽ-ಸ್ಮೈ ಪುನರ್ಗುರುರಸ್ತು ॥ ಷಷ್ಠ್ಯರ್ಥೇ ಚತುರ್ಥೀ ॥ ಪ್ರಯೋಕ್ತುರೇವ ಪುನರ್ಗರಿತಾಸ್ತು । ತಥಾ ದುರುಕ್ತೈರ್ದುರ್ವಾಕ್ಯೈರ್ನಿಂದಾರೂಪೈರ್ವಾಚಿಕೈಸ್ತನ್ವಂ ಸ್ವಕೀಯಾಂ ತನುಮನು ವೃಕ್ಷೀಷ್ಟ । ಅನು-ಮಾಷ್ಟ್ರ್ವ । ಅನುಕ್ರಮೇಣ ಲುಂಪತು । ಯದ್ವಾ । ಸ ದ್ವಿವಿಧೋ ಮಂತ್ರೋಽಸ್ಮೈ ಪ್ರಯೋಕ್ತುರೇವ ಗುರುರ್ಗರಿತಾಸ್ತು । ಅನ್ಯಾನ್ಯಪ್ಯಸ್ಮನ್ನ್ಯಕ್ಕಾರಾಯ ಪ್ರಯುಕ್ತಾನಿ ನಿಷ್ಠುರಭಾಷಣಾನಿ ಸಂತಿ । ತೈರ್ದುರ್-ರುಕ್ತೈಃ ಸೋಽರಾತಿಃ ಸ್ವತನುಮೇವಾವಲುಂಪತು । ಸ್ವಾತ್ಮಾನಮೇವಾವೃತ್ಯ ದಹತ್ವಿತ್ಯರ್ಥಃ ॥

## ಪ್ರತಿಪದಾರ್ಥ

**ಅಗ್ನೇ** — ಎಲೈ ಅಗ್ನಿಯೇ । **ನಃ** — (ನಿನ್ನ ಭಕ್ತರಾದ) ನಮ್ಮನ್ನು । **ಅಘಾಯುಃ** — ಪಾಪಿಷ್ಠನೂ । **ಅರರಿವಾನ್**—ನಮ್ಮ ಹವಿಸ್ಸಿನ ದಾನವನ್ನು ಪ್ರತಿಬಂಧಿಸುವವನೂ। **ಅರಾತೀ ವಾ**—ತಾನೂ ಸಹ ದಾನಮಾಡದಿರುವವನೂ ಆದ । **ಯಃ**—ಯಾವ ಶತ್ರುವು । **ದ್ವಯೇನ**—ಮಾನಸಿಕವೂ, ವಾಚಿಕವೂ ಆದ ಎರಡು ವಿಧವಾದ ಮಂತ್ರಗಳಿಂದ (ಅಥವಾ) ಮನಸ್ಸಿನಲ್ಲೊಂದು, ಅದಕ್ಕೆ ವಿರುದ್ಧವಾಗಿ ಬಾಯಿನಲ್ಲೊಂದು ಹೀಗೆ ಎರಡು ಪ್ರಕಾರವಾದ ಮಂತ್ರಗಳಿಂದ । **ಮರ್ಚಯತಿ**—(ನಮ್ಮನ್ನು) ದೂಷಿಸಿ ಗಾಬರಿಗೊಳಿಸುತ್ತಾನೆಯೋ । **ಸಃ ಮಂತ್ರಃ**—ಅವನ ಮಾನಸರೂಪವಾದ ಮಂತ್ರವು । **ಅಸ್ಮೈ ಪುನಃ**—ಅವನಿಗೇನೆ । **ಗುರುಃ**-ಭಾರವಾದ ಹೊರೆಯಾಗಿ । **ಅಸ್ತು**—ಪರಿಣಮಿಸಲಿ (ಹಾಗೆಯೇ) । **ದುರುಕ್ತೈಃ**—ದುರ್ವಾಕ್ಯಗಳಿಂದ । **ತನ್ವಂ**—ತನ್ನ ದೇಹವನ್ನೇ । **ಅನು ವೃಕ್ಷೀಷ್ಟ**—ದಹಿಸುವಂತೆ ಮಾಡಿಕೊಳ್ಳಲಿ.

## ಭಾವಾರ್ಥ

ಎಲೈ ಅಗ್ನಿಯೇ, ನಿನ್ನ ಭಕ್ತರಾದ ನಮ್ಮನ್ನು ಪಾಪಿಷ್ಠನೂ, ನಮ್ಮ ಹವಿಸ್ಸಿನ ದಾನವನ್ನು ಪ್ರತಿಬಂಧಿಸುವವನೂ, ತಾನೂ ಸಹ ದಾನಮಾಡದಿರುವನೂ ಆದ ಯಾವ ಶತ್ರುವು ಮಾನಸಿಕವೂ ವಾಚಿಕವೂ ಆದ ಎರಡು ವಿಧವಾದ ದುಷ್ಟಮಂತ್ರಗಳಿಂದ ನಮ್ಮನ್ನು ದೂಷಿಸಿ ಗಾಬರಿಗೊಳಿಸುತ್ತಾನೆಯೋ, ಅವನ ಮಾನಸರೂಪವಾದ ಮಂತ್ರವು ಅವನಿಗೇನೇ ಭಾರವಾದ ಹೊರೆಯಾಗಿ ಪರಿಣಮಿಸಲಿ, ಹಾಗೆಯೇ, ಅವನ ದುರ್ವಾಕ್ಯಗಳಿಂದ ತನ್ನ ದೇಹವನ್ನೇ ದಹಿಸುವಂತೆ ಮಾಡಿಕೊಳ್ಳಲಿ.

## English Translation

When a wicked (man), with twofold (malignity of thought and speech), obstructing our offerings, and refraining from gifts (himself) reviles us, may his prayer be heavy on him and involve his person ( in the consequences of ) his evil works.

### ವಿಶೇಷವಿಷಯಗಳು

**ಅಘಾಯುಃ—ಮಾರಣಾದಿರೂಪಪಾಪೇಚ್ಛಾವಾನ್ ।** ನಮ್ಮಗಳ ನಾಶವನ್ನಪೇಕ್ಷಿಸುವ ಪಾಪಬುದ್ಧಿಯುಳ್ಳವನೆಂದರ್ಥ. ಈಗಿನ ರೂಢಿಯಲ್ಲಿ **ಅಘಾಯುಃ** ಎಂಬ ಪದಕ್ಕೆ ಅಘ ರೂಪವಾದ ಆಯುವುಳ್ಳವನು ಎಂದರೆ ಪಾಪರೂಪವಾದ ಜೀವನವುಳ್ಳವನೆಂದಾಗುತ್ತದೆ. ಉದಾಹರಣೆಗೆ—

**ಅಘಾಯುರಿಂದ್ರಿಯಾರಾಮೋ ಮೋಘಂ ಪಾರ್ಥ ಸ ಜೀವತಿ ।**

(ಭ. ಗೀ. ೩-೧೬)

ಎಂಬ ಶ್ಲೋಕದಲ್ಲಿ **ಅಘಾಯುಃ** ಎಂಬ ಪದಕ್ಕೆ ಶಂಕರಾಚಾರ್ಯರು **ಅಘಂ ಪಾಪಂ ಆಯುಃ ಜೀವನಂ ಯಸ್ಯ ಸಃ ಅಘಾಯುಃ ಪಾಪಜೀವನಃ ।** ಪಾಪಪೂರಿತವಾದ ಜೀವನವುಳ್ಳವನೆಂದರ್ಥವೆಂದು ಗೀತಾಶ್ಲೋಕದ ವ್ಯಾಖ್ಯಾನದಲ್ಲಿ ವಿವರಿಸಿದ್ದಾರೆ ಆದರೆ ಋಕ್ಸಂಹಿತೆಯಲ್ಲಿ ಆ ವಿಧವಾದ ವಿಗ್ರಹವಾಕ್ಯವಿಲ್ಲ. ಇಲ್ಲಿ **ಅಘಂ ಇಚ್ಛತೀತ್ಯಘಾಯುಃ** ನಮಗೆ ಕೆಡಕನ್ನು ಕೋರುವ ಪಾಪಿಷ್ಠನು ಎಂದರ್ಥ. ಇದರಂತೆಯೇ,

**ಯಸ್ತ ಇಧ್ಮಂ ಜಭರತ್ಸಿಷ್ವಿದಾನೋ ಮೂರ್ಧಾನಂ ವಾ ತತಪತೇ ತ್ವಾಯಾ ।**

**ಭುವಸ್ತಸ್ಯ ಸ್ವತವಾँಃ ಪಾಯುರಗ್ನೇ ವಿಶ್ವಸ್ಮಾತ್ಸೀಮಘಾಯತ ಉರುಷ್ಯ ॥**

(ಋ. ಸಂ. ೪-೨-೬)

ಇತ್ಯಾದಿ ಋಕ್ಕುಗಳಲ್ಲಿ **ಅಘಾಯತಃ ಪಾಪಮಿಚ್ಛತಃ ।** ಪಾಪಕಾರ್ಯವನ್ನು ಮಾಡಲಿಚ್ಛಿಸುವುಳ್ಳ ಎಂದಾಗುವಂತೆ ಇಲ್ಲಿಯೂ ಅರ್ಥವಾಗುತ್ತದೆ. ಅಥವಾ **ಪಾಪಂ ಆತ್ಮನಃ ಇಚ್ಛತಿ** ಎಂದು ವಿವರಿಸಿದರೆ ಮೇಲಿನ ತಾತ್ಪರ್ಯವೇ ಇರುತ್ತದೆ. ಪ್ರಕೃತವಾದ ಋಕ್ಕಿನಲ್ಲಿ ಯಜ್ಞಕರ್ತರಿಗೆ ಕೇಡನ್ನು ಬಯಸುವ ಪಾಪಬುದ್ಧಿಯುಳ್ಳವನೆಂದರ್ಥ.

**ಅರರಿವಾನ್—ರರಿವಾನ್** ಎಂಬುದಕ್ಕೆ ದಾನವಾನ್ ಎಂದರ್ಥ. **ಅರರಿವಾನ್** ಎಂದರೆ **ಅದಾನವಾನ್** ಎಂದು ಅರ್ಥ. ಆದರೆ ಪುನಃ **ಅರಾತೀ ವಾ** ಎಂದಿರುವುದರಿಂದಲೂ, ಆ ಪದಕ್ಕೆ **ಸ್ವಯಂ ಅದಾನವಾನ್** ಎಂದರ್ಥವಾಗುವುದರಿಂದಲೂ, **ಅರರಿವಾನ್** ಎಂಬ ಪದಕ್ಕೆ ದಾನಪ್ರತಿಬಂಧಕನೆಂದರ್ಥವೆಂದು ವಿವರಿಸಿದ್ದಾರೆ.

**ಮರ್ಚಯತಿ—ಭರ್ತ್ಸಯತಿ ವಿಧೇಯೀಕರೋತಿ ವಾಸ್ಮಾನ್.** ನಮ್ಮನ್ನು ಬೆದರಿಸಿ ಆ ಬೆದರಿಕೆಯಿಂದ ನಾವು ಶತ್ರುವಾದ ಆತನಿಗೆ ವಿಧೇಯರಾಗಿರುವಂತೆ ಮಾಡುತ್ತಾನೆ. [ಅಂತಹ ಶತ್ರುವಿನಿಂದ ನಮ್ಮನ್ನು ರಕ್ಷಿಸು. ಮತ್ತು ಆ ಮಂತ್ರದ ಪ್ರಭಾವವು ಅವನ ಮೇಲೇ ಹಿಂತಿರುಗಲಿ ಎಂಬ ಪ್ರಾರ್ಥನೆ]. ಇದೇ ವಿಧವಾದ ಪ್ರಾರ್ಥನೆಯು,

**ಯೋ ನ ಆಗೋ ಅಭ್ಯೇನೋ ಭರಾತ್ಯಧೀದಘಮಘಶಂಸೇ ದಧಾತ ।**
**ಜಹೀ ಚಿಕಿತ್ವೋ ಅಭಿಶಸ್ತಿಮೇತಾಮಗ್ನೇ ಯೋ ನೋ ಮರ್ಚಯತಿ ದ್ವಯೇನ ॥**

(ಋ. ಸಂ. ೫-೩-೭)

ಎಂಬ ಋಕ್ಕಿನಲ್ಲಿಯೂ ಇದೇ ಆನುಪೂರ್ವಿಯಲ್ಲಿದೆ. ಅಲ್ಲಿ **ಮರ್ಚಯತಿ** ಎಂಬ ಪದಕ್ಕೆ **ಬಾಧತೇ** ಎಂದರ್ಥ ಮಾಡಿದ್ದಾರೆ. ಯಾವ ಶತ್ರುವು ನಮಗೆ ಮೇಲೆ ಹೇಳಿರುವ ಎರಡು ವಿಧವಾದ ಪಾಪವನ್ನು ಕೋರುತ್ತಾನೆಯೋ ಯಾರು ನಮ್ಮನ್ನು ಹಿಂಸಿಸುತ್ತಾನೆಯೋ ಅಂತಹ ಶತ್ರುವನ್ನೇ ನೀನು ಹಂಸಿಸು ಎಂದಿರುವಂತೆ ಪ್ರಕೃತವಾದ ಋಕ್ಕಿನಲ್ಲಿಯೂ ಪ್ರಾರ್ಥಿಸಿದೆ.

### ವ್ಯಾಕರಣಪ್ರಕ್ರಿಯಾ

**ಅರರಿವಾನ್**—ರಾ ದಾನೇ ಧಾತು. **ಛಂದಸಿ ಲುಙ್‌ಲಙ್‌ಲಿಟಃ** ಎಂಬುದರಿಂದ ಲಿಟ್, **ಕ್ವಸುಶ್ಚ** (ಪಾ. ಸೂ. ೩-೨-೧೦೭) ಎಂಬುದರಿಂದ ಅದಕ್ಕೆ ಕ್ವಸುರಾದೇಶ. **ವಸ್ವೇಕಾಜಾದ್ಘಸಾಮ್** (ಪಾ ಸೂ. ೭-೨-೬೭) ಎಂಬುದರಿಂದ ಇಡಾಗಮ. ಧಾತುವಿಗೆ ದ್ವಿತ್ವಾದಿ. ಪ್ರಥಮಾಏಕವಚನದಲ್ಲಿ ರರಿವಾನ್ ಎಂದು ರೂಪವಾಗುತ್ತದೆ. ನ ರರಿವಾನ್ **ತತ್ಪುರುಷೇ ತುಲ್ಯಾರ್ಥ**‌ಃ (ಪಾ. ಸೂ. ೬-೨-೨) ಎಂಬುದರಿಂದ ನಞ್‌ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಅಘಾಯುಃ**—ಅಘಂ ಆತ್ಮನಃ ಇಚ್ಛತಿ ಎಂದು ಅರ್ಥವಿವಕ್ಷಾಮಾಡಿದಾಗ **ಸುಪಆತ್ಮನಃ ಕ್ಯಚ್** (ಪಾ. ಸೂ. ೩-೧-೮) ಎಂಬುದರಿಂದ ಕ್ಯಚ್ ಪ್ರತ್ಯಯ. **ನ ಛಂದಸ್ಯಪುತ್ರಸ್ಯ** (ಪಾ. ಸೂ. ೭-೪-೩೫) ಎಂಬುದರಿಂದ ಈತ್ವಾದಿಗಳು ಬರುವುದಿಲ್ಲ. **ಅಶ್ವಾಘಸ್ಯಾತ್** (ಪಾ ಸೂ. ೭-೪-೩೭) ಎಂಬುದರಿಂದ ಆತ್ವ ಬರುತ್ತದೆ. ಕ್ಯಜಂತದ ಮೇಲೆ **ಕ್ಯಾಚ್ಛಂದಸಿ** (ಪಾ. ಸೂ. ೩-೨-೧೭೦) ಎಂಬುದರಿಂದ ಉ ಪ್ರತ್ಯಯ. **ಅತೋ ಲೋಪಃ** (ಪಾ. ಸೂ. ೬-೪-೪೮) ಎಂಬುದರಿಂದ ಅಕಾರಕ್ಕೆ ಲೋಪ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಅರಾತೀ ವಾ**—ರಾತಿಃ ದಾನಂ ಅಸ್ಯ ಅಸ್ತಿ ಎಂದು ಅರ್ಥವಿವಕ್ಷಾಮಾಡಿದಾಗ **ಛಂದಸಿ ವನಿಪನೌಚ್ಛಂತಿ** ಎಂಬ ವಚನದಿಂದ ಮತ್ವರ್ಥದಲ್ಲಿ ವನಿಪ್ ಪ್ರತ್ಯಯ. **ಅನ್ಯೇಷಾಮಪಿ ದೃಶ್ಯಂತೇ** (ಪಾ. ಸೂ. ೬-೩-೧೩೭) ಎಂಬುದರಿಂದ ಪೂರ್ವಕ್ಕೆ ದೀರ್ಘ. ರಾತೀವಾ ಎಂದು ಪ್ರಥಮಾಏಕವಚನದಲ್ಲಿ ರೂಪವಾಗುತ್ತದೆ. ನಞ್ ತತ್ಪುರುಷ ಸಮಾಸವಾದಾಗ ಅವ್ಯಯಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಮರ್ಚಯತಿ**—ಮರ್ಚ ಶಬ್ದಾರ್ಥೇ. ಚುರಾದಿ. **ಸತ್ಯಾಪಪಾ**—(ಪಾ. ಸೂ. ೩-೧-೨೫) ಎಂಬುದರಿಂದ ಸ್ವಾರ್ಥದಲ್ಲಿ ಣಿಚ್. ಣಿಜಂತದ ಮೇಲೆ ಲಟ್ ಪ್ರಥಮಪುರುಷಏಕವಚನಾಂತರೂಪ. **ಯದ್ವೃತ್ತಾನ್ನಿತ್ಯಮ್** ಎಂಬುದರಿಂದ ನಿಘಾತಪ್ರತಿಷೇಧ ಬರುತ್ತದೆ. ಣಿಚ್ ಸ್ವರ ಉಳಿಯುತ್ತದೆ.

**ದ್ವಯೇನ**—ದ್ವೌ ಅವಯವೌ ಯಸ್ಯ **ದ್ವಿತ್ರಿಭ್ಯಾಂ ತಯಸ್ಯಅಯಜ್ವಾ** (ಪಾ. ಸೂ. ೫-೨-೪೩) ಎಂಬುದರಿಂದ ಅವಯವಾರ್ಥದಲ್ಲಿ ತಯಪಿಗೆ ಅಯಚಾದೇಶ. **ಯಸ್ಯೇತಿ ಚ** ಎಂಬುದರಿಂದ ಇಕಾರ ಲೋಪ. ಚಿತ್ತ್ವಾದುದರಿಂದ ಅಂತೋದಾತ್ತವಾಗುತ್ತದೆ. ತೃತೀಯಾಏಕವಚನಾಂತರೂಪ.

**ಮಂತ್ರ**—ಮತ್ರಿ ಗುಪ್ತಪರಿಭಾಷಣೇ ಧಾತು. **ನಂದಿಗ್ರಹಪಚಾದಿಭ್ಯಃ** (ಪಾ. ಸೂ. ೩-೧-೧೩೪) ಎಂಬುದರಿಂದ ಅಚ್ ಪ್ರತ್ಯಯ. **ವೃಷಾದೀನಾಂ ಚ** (ಪಾ. ಸೂ. ೬-೧-೨೦೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಅಸ್ತು**—ಅಸ ಭುವಿ ಧಾತು. ಲೋಟ್ ಪ್ರಥಮಪುರುಷಏಕವಚನಾಂತರೂಪ. ತಿಙಂತನಿಘಾತಸ್ವರ ಬರತ್ತದೆ.

**ಅಸ್ಮೈ—ಸುಪಾಂ ಸುಪೋ ಭವಂತಿ** ಎಂಬ ವಚನದಿಂದ ಷಷ್ಠ್ಯರ್ಥದಲ್ಲಿ ಚತುರ್ಥೀ ಬರುತ್ತದೆ.

**ಮೃಕ್ಷೀಷ್ಟ**—ಮೃಜೂ ಶುದ್ಧೌ ಧಾತು. ಲಿಙ್ ಪ್ರಥಮಪುರುಷಏಕವಚನದಲ್ಲಿ ತ ಪ್ರತ್ಯಯ. **ಲಿಙಃಸೀಯುಟ್** (ಪಾ. ಸೂ. ೩-೪-೧೦೨) ಎಂಬುದರಿಂದ ಸೀಯುಟಾಗಮ. **ಸುಟ್ ತಿಥೋಃ** (ಪಾ. ಸೂ. ೩-೪-೧೦೭) ಎಂಬುದರಿಂದ ತ ಪ್ರತ್ಯಯಕ್ಕೆ ಸುಟಾಗಮ. ಯಲೋಪ **ವ್ರಶ್ಚಭ್ರಸ್ಜಸೃಜ**—ಎಂಬುದರಿಂದ. ಷತ್ವ. **ಷಢೋಃಕಃಸಿ** ಎಂಬುದರಿಂದ ಕತ್ವ. ಅದನ್ನು ನಿಮಿತ್ತೀಕರಿಸಿ ಸಕಾರಕ್ಕೆ ಷತ್ವ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ತನ್ವಮ್**—**ತನ್ವಾದೀನಾಂ ಛಂದಸ್ಯುಪಸಂಖ್ಯಾನಮ್** ಎಂಬುದರಿಂದ ಯಣಾದೇಶ. **ಉದಾತ್ತಸ್ವರಿತಯೋಃ**—(ಪಾ. ಸೂ. ೮-೨-೪) ಎಂಬುದರಿಂದ ಸ್ವರಿತಸ್ವರ ಬರುತ್ತದೆ.

**ದುರುಕ್ತೈಃ**—ವಚ ಪರಿಭಾಷಣೇ ಧಾತು. ಕರ್ಮಣಿಯಲ್ಲಿ ಕ್ತ ಪ್ರತ್ಯಯ. **ವಚಿಸ್ವಪಿಯಜಾದೀನಾಂ ಕಿತಿ** (ಪಾ. ಸೂ. ೬-೧-೧೫) ಎಂಬುದರಿಂದ ಧಾತುವಿನ ವಕಾರಕ್ಕೆ ಸಂಪ್ರಸಾರಣ. ಪೂರ್ವರೂಪ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ॥ ೪ ॥



ಸಂಹಿತಾಪಾಠಃ

ಉತ ವಾ ಯಃ ಸಹಸ್ಯ ಪ್ರವಿದ್ವಾನ್ಮರ್ತೋ ಮರ್ತಂ ಮರ್ಚಯತಿ ದ್ವಯೇನ ।
ಅತಃ ಪಾಹಿ ಸ್ತವಮಾನ ಸ್ತುವಂತಮಗ್ನೇ ಮಾಕಿರ್ನೋ ದುರಿತಾಯ ಧಾಯೀಃ ॥ ೫ ॥

ಪದಪಾಠಃ

ಉತ । ವಾ । ಯಃ । ಸಹಸ್ಯ । ಪ್ರವಿದ್ವಾನ್ । ಮರ್ತಃ । ಮರ್ತಂ । ಮರ್ಚಯತಿ । ದ್ವಯೇನ ।

ಅತಃ । ಪಾಹಿ । ಸ್ತವಮಾನ । ಸ್ತುವಂತಂ । ಅಗ್ನೇ । ಮಾಕಿಃ । ನಃ । ದುಃಽಇತಾಯ । ಧಾಯೀಃ ॥ ೫ ॥

ಸಾಯಣಭಾಷ್ಯಂ

ಪೂರ್ವಮಂತ್ರೇ ದ್ವಿವಿಧಕುಟಿಲಮಂತ್ರೇಣ ಕರ್ತಾರಂ ತನ್ಮಂತ್ರಣಂ ಪ್ರಾಪ್ನೋತು ಮಾಸ್ಮಾನಿತ್ಯುಕ್ತಂ । ಅತ್ರ ತು ತನ್ಮಂತ್ರಣಾತ್ಪಾಹೀತ್ಯಗ್ನಿಃ ಪ್ರಾರ್ಥ್ಯತೇ । ಉತ ವಾ ಹೇ ಸಹಸ್ಯ । ಸಹ ಇತಿ ಬಲನಾಮ । ತತ್ರ ಭವಾಗ್ನೇ ಯೋ ಮರ್ತ್ಯೋ ಮರಣಧರ್ಮಾ ಮನುಷ್ಯಃ ಪ್ರವಿದ್ವಾನ್ ಮಾಯಾಮಂತ್ರಣಂ ಪ್ರಕರ್ಷೇಣ ಜಾನನ್ ದ್ವಯೇನ ಪೂರ್ವೋಕ್ತರೀತ್ಯಾ ದ್ವಿವಿಧಮಂತ್ರೇಣ ಮರ್ತಂ ಮನುಷ್ಯಂ ಮರ್ಚಯತಿ ವಿಧೇಯೀಕರೋತಿ ಭರ್ತ್ಸಯತಿ ವಾ ಅತಸ್ತಾದೃಶಾದ್ಭರ್ತ್ಸನಾತ್ತತ್ಕರ್ತುಃ ಸಕಾಶಾದ್ವಾ ಹೇ ಸ್ತವಮಾನ ಸ್ತೂಯಮಾನಾಗ್ನೇ ಸ್ತುವಂತಂ ಸ್ತುತಿಂ ಕುರ್ವಂತಂ ಮಾಂ ಪಾಹಿ। ರಕ್ಷ। ಕಿಂಚ ನೋಽಸ್ಮಾನ್ದುರಿತಾಯ ತತ್ಕೃತಾಯ ದುರ್ಮಂತ್ರಣಪ್ರಯುಕ್ತದುಃಖಾಯ ಸಮರ್ಥಂ ಮಾಕಿರ್ಧಾಯೀಃ । ಮಾ ಸ್ಥಾಪಯ । ದುರಿತಭಾಜನಂ ಮಾ ಕಾರ್ಷೀರಿತ್ಯರ್ಥಃ ॥ ಧಿ ಧಾರಣೇ । ವ್ಯತ್ಯಯೇನೇಟ್ । ಸಿಚಿ ವೃದ್ಧಿಃ । ನ ಮಾಙ್ಯೋಗ ಇತ್ಯಡಭಾವಃ ॥

ಪ್ರತಿಪದಾರ್ಥ

**ಉತ ವಾ**— ಅಥವಾ । **ಸಹಸ್ಯ**—ಶಕ್ತಿಯಿಂದ ಉತ್ಪನ್ನನಾದ ಅಗ್ನಿಯೇ । **ಯಃ ಮರ್ತ್ಯಃ**—ಯಾವ ಮಾನವನು । **ಪ್ರವಿದ್ವಾನ್**—ವಂಚಕರೂಪವಾದ ಮಂತ್ರಗಳನ್ನು ಚೆನ್ನಾಗಿ ತಿಳಿದುಕೊಂಡು । **ದ್ವಯೇನ**—ಮಾನಸಿಕವೂ ಮತ್ತು ವಾಚಿಕವೂ ಆದ ಎರಡು ವಿಧವಾದ ಮಂತ್ರಗಳಿಂದಲೂ । **ಮರ್ತಂ**—ಇನ್ನೊಬ್ಬ ಮಾನವನನ್ನು । **ಮರ್ಚಯತಿ**—ಗಾಬರಿಗೊಳಿಸುತ್ತಾನೆಯೋ । **ಅತಃ**—ಭಯಗೊಳಿಸುವ ಆ ಮಂತ್ರದ್ವಯದಿಂದ । **ಸ್ತವಮಾನ**—ಸ್ತುತಿಗೆ ಪಾತ್ರನಾದ । **ಅಗ್ನೇ**—ಎಲೈ ಅಗ್ನಿಯೇ । **ಸ್ತುವಂತಂ**—ಸ್ತುತಿಮಾಡತಕ್ಕ ನನ್ನನ್ನು । **ಪಾಹಿ**—ರಕ್ಷಿಸು (ಮತ್ತು) । **ನಃ**—ನಮ್ಮನ್ನು । **ದುರಿತಾಯ**—ದುರ್ಮಂತ್ರದ ದುಃಖಕ್ಕೆ । **ಮಾಕಿಃ ಧಾಯೀಃ**—ಪಾತ್ರರನ್ನಾಗಿ ಮಾಡಲೇಬೇಡ.

॥ ಭಾವಾರ್ಥ ॥

ಶಕ್ತ್ಯುತ್ಪನ್ನನಾದ ಅಗ್ನಿಯೇ, ಯಾವ ದುಷ್ಟಮಾನವನು ವಂಚಕರೂಪವಾದ ಮಂತ್ರಗಳನ್ನು ಚೆನ್ನಾಗಿ ತಿಳಿದುಕೊಂಡು ಮಾನಸಿಕವೂ ಮತ್ತು ವಾಚಿಕವೂ ಆದ ಎರಡು ವಿಧವಾದ ಮಂತ್ರಗಳಿಂದಲೂ ಇನ್ನೊಬ್ಬ ಮಾನವನನ್ನು ಗಾಬರಿಗೊಳಿಸುತ್ತಾನೆಯೋ, ಎಲೈ ಸ್ತುತಿಗೆ ಪಾತ್ರನಾದ ಅಗ್ನಿಯೇ, ನಿನ್ನನ್ನು ಸ್ತೋತ್ರಮಾಡತಕ್ಕ ನನ್ನನ್ನು ಭಯಗೊಳಿಸುವ ಆ ಮಂತ್ರದ್ವಯದಿಂದ ರಕ್ಷಿಸು. ಮತ್ತು ನಮ್ಮನ್ನು ದುರ್ಮಂತ್ರದ ದುಃಖಕ್ಕೆ ಪಾತ್ರರನ್ನಾಗಿ ಮಾಡಬೇಡ.

English Translation

When, Son of Strength, a man skilful (in deception) assails another man with a doubly (malignant prayer), do you, Agni, duly propitiated, protect him who worships you (from its effects); consign us not to misfortune.

ವಿಶೇಷ ವಿಷಯಗಳು

**ಸಹಸ್ಯ**—ಸಹ ಇತಿ ಬಲನಾಮ । ತತ್ರ ಭವಾಗ್ನೇ । ಶಕ್ತ್ಯುತ್ಪನ್ನನಾದವನೇ ಎಂದು ಅಗ್ನಿಯನ್ನು ಸಂಬೋಧಿಸಿದೆ. ಯತಃ ಕಾರಣಾನ್ಮಥನಕಾಲೇ ಬಲೇನೋತ್ಪನ್ನಃ ಅತೋ ಬಲಾಯ ಧಾರ್ಯತೇ । ಅರಣಿಗಳ ಮಥನಕಾಲದಲ್ಲಿ ಶಕ್ತಿಯಿಂದ ಉತ್ಪನ್ನನಾದುದರಿಂದ ಈ ವಿಶೇಷಣವೆಂದು ಹಿಂದೆ ತಿಳಿಸಿದೆ. **ಸಹಸಸ್ಪುತ್ರ**, **ಸಹಸಾ ಜಾಯಮಾನಃ** ಇತ್ಯಾದಿ ವಿಶೇಷಣಗಳು ಅನೇಕ ಕಡೆಗಳಲ್ಲಿ ಅಗ್ನಿಯ ಉತ್ಪತ್ತಿಕ್ರಮವನ್ನು ತಿಳಿಸುತ್ತವೆ.

**ದುರಿತಾಯ**—ಶತ್ರುಕೃತಾಯ ದುರ್ಮಂತ್ರಣಪ್ರಯುಕ್ತದುಃಖಾಯ । ಶತ್ರುವಿನಿಂದ ಉಚ್ಚರಿತವಾದುದೂ ಕೆಡಕನ್ನುಂಟುಮಾಡುವುದೂ ಆದ ಮಂತ್ರದಿಂದ ಉಂಟಾಗತಕ್ಕ ದುಃಖಕ್ಕೆ.

**ಮಾಕಿಃ ಧಾಯೀಃ**—ಅಥ ಸರ್ವಪದಸಮಾಮ್ನಾತಂ ಎಂದು ಹಿಕಂ, ನುಕಂ ಇತ್ಯಾದಿ ಒಂಭತ್ತು ಪದಗಳನ್ನು ಪಠಿಸಿದೆ. (ನಿ. ೩-೧೩) ಇವುಗಳಲ್ಲಿ ನಿಪಾತಗಳೂ, ಸಂಬಂಧಸೂಚಕಾವ್ಯಯಗಳೂ ಸೇರಿವೆ. **ಮಾಕಿಃ** ಎಂಬ ಪದವು ಆ ಸಮುದಾಯದಲ್ಲಿ ಸೇರಿದೆ. **ಮಾಕಿಃ ಧಾಯೀಃ** ಎಂದರೆ ಖಂಡಿತವಾಗಿಯೂ (ನಮ್ಮನ್ನು ದುಃಖ ಪಾತ್ರರನ್ನಾಗಿ) ಮಾಡಬೇಡ ಎಂದಾಗಲಿ ಅಥವಾ **ಯಾರೂ ಕೂಡ** ನಮ್ಮನ್ನು ಹಿಂಸಿಸುವಂತೆ ಅವಕಾಶವನ್ನು ಕೊಡಬೇಡ ಎಂದದಾಗಲಿ ತಾತ್ಪರ್ಯವಾಗುತ್ತದೆ.

**ಪ್ರತಿ ಸ್ಪಶೋ ವಿಸೃಜ ತೂರ್ಣಿತಮೋ ಭವಾ ಪಾಯುರ್ವಿಶೋ ಅಸ್ಯಾ ಅದಬ್ಧಃ ।**
**ಯೋ ನೋ ದೂರೇ ಅಘಶಂಸೋ ಯೋ ಅಂತ್ಯಗ್ನೇ ಮಾಕಿಷ್ಟೇ ವ್ಯಥಿರಾ ದಧರ್ಷೀತ್ ॥**
(ಋ. ಸಂ. ೪-೪-೩)

ಇತ್ಯಾದಿ ಋಕ್ಕುಗಳಲ್ಲಿ **ಮಾಕಿಃ** ಎಂದರೆ **ನ ಕಶ್ಚಿದಪಿ** ಯಾರೂಕೂಡ (ಹಿಂಸಿಸದಿರಲಿ) ಎಂದು ಪ್ರಾರ್ಥಿಸಿರುವಂತೆ ಇಲ್ಲಿಯೂ ಪ್ರಾರ್ಥಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ಸಹಸ್ಯ**—ಸಹಃ ಬಲಮ್. ತತ್ರಭವಃ ಸಹಸ್ಯಃ **ಭವೇ ಛಂದಸಿ** (ಪಾ. ಸೂ. ೪-೪-೧೧೦) ಎಂಬುದರಿಂದ ಯ ಪ್ರತ್ಯಯ. ಸಂಬುದ್ಧಿಯಲ್ಲಿ **ಆಮಂತ್ರಿತಸ್ಯಚ** (ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಪ್ರವಿದ್ವಾನ್**—ಪ್ರಕರ್ಷೇಣ ವೇತ್ತಿ ಪ್ರವಿದ್ವಾನ್. ವಿದ ಜ್ಞಾನೇ ಧಾತು. **ವಿದೇಃಶತುರ್ವಸುಃ** (ಪಾ.ಸೂ. ೭-೧-೩೬) ಎಂಬುದರಿಂದ ಶತೃವಿಗೆ ವಸುರಾದೇಶ. ಪ್ರಾದಿಸಮಾಸವಾದಾಗ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

**ಮರ್ತಃ**—ಮೃಜ್ ಪ್ರಾಣತ್ಯಾಗೇ ಧಾತು. **ಅಸಿಹಸಿಮೃ**—(ಉ. ಸೂ. ೩-೮೬) ಎಂಬುದರಿಂದ ತನ್ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿನ ಇಕಿಗೆ ಗುಣ. ರ ಪರವಾಗಿ ಬರುತ್ತದೆ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಪಾಹಿ**— ಪಾ ರಕ್ಷಣೇ ಧಾತು. ಲೋಟ್ ಮಧ್ಯಮಪುರುಷಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

ಸ್ತವಮಾನ—ಷ್ಟುಞ್ ಸ್ತುತೌ ಧಾತು. ಲಡರ್ಥವಲ್ಲಿ ಶಾನಚ್ ಪ್ರತ್ಯಯ. ವ್ಯತ್ಯಯದಿಂದ ಶಪಿಗೆ ಲುಕ್ ಬರುವುದಿಲ್ಲ. ಶಪ್ ನಿಮಿತ್ತವಾಗಿ ಧಾತುವಿನ ಇಕಿಗೆ ಗುಣ. ಅವಾದೇಶ. ಆನೇಮುಕ್ (ಪಾ-ಸೂ. ೭ ೨-೮೨) ಎಂಬುದರಿಂದ ಮುಕಾಗಮ. ಸಂಬುದ್ಧಿಯಲ್ಲಿ ಆಮಂತ್ರಿತನಿಘಾತಸ್ವರ ಬರುತ್ತದೆ.

ಸ್ತುವಂತಮ್—ಪೂರ್ವೋಕ್ತವಾದ ಧಾತುವಿಗೆ ಲಡರ್ಥವಲ್ಲಿ ಶತೃ ಪ್ರತ್ಯಯ. ಶಪಿಗೆ ಲುಕ್. ಸಾರ್ವಧಾತುಕಮಪಿತ್ ಎಂಬುದರಿಂದ ಪ್ರತ್ಯಯ ಚಿತ್ತಾಗುವುದರಿಂದ ಗುಣ ಬರುವುದಿಲ್ಲ. ಅಚಿಶ್ನುಧಾತುಭ್ರುವಾಂ ಸೂತ್ರದಿಂದ ಉವಜಾದೇಶ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

ಅಗ್ನೇ— ಪಾದಾದಿಯಲ್ಲಿರುವುದರಿಂದ ಆಷ್ಟಮಿಕ ನಿಘಾತಸ್ವರ ಬರುವುದಿಲ್ಲ ಆಮಂತ್ರಿತಸ್ಯ (ಪಾ. ಸೂ. ೬-೧-೧೯೮) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

ದುರಿತಾಯ—ದುರ್ ಉಪಸರ್ಗ. ಇಣ್ ಗತೌ ಧಾತು. ಕ್ತ ಪ್ರತ್ಯಯ. ಗತಿಕಾರಕೋಪಪದಾತ್ಕೃತ್ ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. ಚತುರ್ಥೀಏಕವಚನಾಂತರೂಪ

ಧಾಯೀಃ—ಧಿ ಧಾರಣೇ ಧಾತು. ಲುಙ್ ಮಧ್ಯಮಪುರುಷಏಕವಚನದಲ್ಲಿ ಸಿಪ್ ಪ್ರತ್ಯಯ. ಇತಶ್ಚ ಎಂಬುದರಿಂದ ಇಕಾರ ಲೋಪ. ಚ್ಲಿಗೆ ಸಿಚಾದೇಶ. ವ್ಯತ್ಯಯದಿಂದ ಅದಕ್ಕೆ ಇಡಾಗಮ. ಅಸ್ತಿಸಿಚೋಽಪೃಕ್ತೇ ಎಂಬುದರಿಂದ ಪ್ರತ್ಯಯಕ್ಕೆ ಈಡಾಗಮ. ಇಟಈಟಿ (ಪಾ. ಸೂ. ೮-೨-೨೮) ಎಂಬುದರಿಂದ ಸಿಚಿಗೆ ಲೋಪ. ಸಿಚಿವೃದ್ಧಿಃ ಪರಸ್ಮೈಪದೇಷು (ಪಾ. ಪಾ. ೭-೨-೧) ಎಂಬುದರಿಂದ ಧಾತುವಿನ ಇಕಿಗೆ ವೃದ್ಧಿ. ಅಚ್ ಪರವಾದುದರಿಂದ ಅಯಾದೇಶ. ನಮಾಙ್ಯೋಗೇ (ಪಾ. ಸೂ. ೬-೪-೭೪) ಎಂಬುದರಿಂದ ಅಂಗಕ್ಕೆ ಅಡಾಗಮ ಬರುವುದಿಲ್ಲ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ||೫||

ಇಲ್ಲಿಗೆ ನೂರನಲವತ್ತೇಳನೆಯ ಸೂಕ್ತವು ಮುಗಿದುದು.

———:o:———

## ನೂರನಲವತ್ತೆಂಟನೆಯ ಸೂಕ್ತವು

———

ಮಥೀದ್ಯದಿತಿ ಪಂಚರ್ಚಮಷ್ಟಮಂ ಸೂಕ್ತಂ ದೈರ್ಘತಮಸಂ ತ್ರೈಷ್ಟುಭಮಾಗ್ನೇಯಂ । ಮಥೀದ್ಯದಿತ್ಯನುಕ್ರಮಣಿಕಾ ॥ ಸೂಕ್ತತ್ರಯಮಧ್ಯಸ್ಯ ತೃತೀಯತ್ವೇನ ಪೂರ್ವಂ ವಿನಿಯೋಗ ಉಕ್ತಃ ॥

ಅನುವಾದವು—ಮಥೀದ್ಯತ್ ಎಂಬ ಸೂಕ್ತವು ಇಪ್ಪತ್ತೊಂದನೆಯ ಅನುವಾಕದಲ್ಲಿ ಎಂಟನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವುವು. ಈ ಸೂಕ್ತಕ್ಕೆ ದೀರ್ಘತಮಾ ಔಚಥ್ಯಃ ಎಂಬುವನು ಋಷಿಯು. ಅಗ್ನಿಯು ದೇವತೆಯು. ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ ಮಥೀದ್ಯದೀಂ ಎಂದು ಮೊದಲಾಗಿ ಹೇಳಿರುವುದು. ಈ ಸೂಕ್ತವು ಹಿಂದೆ ಹೇಳಿದ ಮೂರು ಸೂಕ್ತಗಳಲ್ಲಿ ಸೇರಿರುವುದರಿಂದ ಇದಕ್ಕೂ ಹಿಂದಿನ ಸೂಕ್ತದಂತೆಯೇ ವಿನಿಯೋಗವು.

॥ ಓಂ ॥

## ಸೂಕ್ತ—೧೪೮

—

॥ ಮಂಡಲ—೧ ॥ ಅನುವಾಕ—೨೧ ॥ ಸೂಕ್ತ— ೧೪೮ ॥

॥ ಅಷ್ಟಕ—೨ ॥ ಅಧ್ಯಾಯ—೨ ॥ ವರ್ಗ—೧೭ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೫ ॥

॥ ಋಷಿಃ—ದೀರ್ಘತಮಾ ಔಚಥ್ಯಃ ॥

॥ ದೇವತಾ—ಅಗ್ನಿಃ ॥

॥ ಛಂದಃ—ತ್ರಿಷ್ಟುಪ್ ॥

—

ಸಂಹಿತಾಪಾಠಃ

ಮಥೀದ್ಯದೀಂ ವಿಷ್ಟೋ ಮಾತರಿಶ್ವಾ ಹೋತಾರಂ ವಿಶ್ವಾಪ್ಸುಂ ವಿಶ್ವದೇವ್ಯಂ।
ನಿ ಯಂ ದಧುರ್ಮನುಷ್ಯಾಸು ವಿಕ್ಷು ಸ್ವ೧ರ್ಣ ಚಿತ್ರಂ ವಪುಷೇ ವಿಭಾವಂ।
॥ ೧ ॥

ಪದಪಾಠಃ

ಮಥೀತ್ । ಯತ್ । ಈಂ । ವಿಷ್ಟಃ । ಮಾತರಿಶ್ವಾ । ಹೋತಾರಂ । ವಿಶ್ವಽಅಪ್ಸುಂ । ವಿಶ್ವಽದೇವ್ಯಂ ।
ನಿ । ಯಂ । ದಧುಃ । ಮನುಷ್ಯಾಸು । ವಿಕ್ಷು । ಸ್ವಃ । ನ । ಚಿತ್ರಂ । ವಪುಷೇ । ವಿಭಾಽವಂ ॥ ೧ ॥

ಸಾಯಣಭಾಷ್ಯಂ

ಹೋತಾರಂ ದೇವಾನಾಮಾಹ್ವಾತಾರಂ ವಿಶ್ವಾಪ್ಸುಂ । ಅಪ್ಸ್ವಿತಿ ರೂಪನಾಮ । ನಾನಾರೂಪಂ ಪಾರ್ಥಿವವೈದ್ಯುತಜಾಠರಾದಿಭೇದೇನಾಹವನೀಯಾದಿಭೇದೇನ ವಾ । ಯದ್ವಾ । ಕಾಲೀಕರಾಲ್ಯಾದಿರೂಪೇಣ ಜ್ವಾಲಾನಾಂ ವೈರೂಪ್ಯಾದ್ವಿಶ್ವರೂಪತ್ವಂ । ವಿಶ್ವದೇವ್ಯಂ ಸರ್ವದೇವಯೋಗ್ಯಕ್ರಿಯಾಸಾಧುಂ ಯದೀಂ ಯಮೇನಮಗ್ನಿಂ ಮಾತರಿಶ್ವಾ ವೃಷ್ಟ್ಯಾದಿನಿರ್ಮಾತ್ರಂತರಿಕ್ಷಶ್ವಸನೋ ವಾಯುರ್ವಿಷ್ಟಃ ಕಾಷ್ಠೇಷ್ವಂತಃಪ್ರವಿಷ್ಟಃ ಸನ್ ಮಥೀತ್ ಅಮಥ್ನಾತ್ । ಪ್ರಾವರ್ಧಯದಿತ್ಯರ್ಥಃ ॥ ಮಥೇ ವಿಲೋಡನೇ । ಹ್ಮ್ಯಂತಕ್ಷಣೇತಿ ವೃದ್ಧಿಪ್ರತಿಷೇಧಃ ॥ ಪುನಃ ಸ ಏವ ವಿಶೇಷ್ಯತೇ । ಯಮಗ್ನಿಂ ಮನುಷ್ಯಾಸು ಮತ್ವಾ

ಕರ್ಮ ಕುರ್ವತೀಷು ವಿಕ್ಷ್ವೃತ್ವಿಗ್ರೂಪಾಸು ಪ್ರಜಾಸು ಪೂರ್ವಂ ವಪುಷೇ ಯಜ್ಞಸಿದ್ಧಯೇ ನಿ ದಧುಃ ಧಾರಯಂತಿ ಯಜಮಾನಾಃ । ಮನುಷ್ಯಶಬ್ದೋ ನಿರುಕ್ತೇ ಬಹುಧಾ ನಿರುಕ್ತಃ । ಮನುಷ್ಯಾಃ ಕಸ್ಮಾನ್ಮತ್ವಾ ಕರ್ಮಾಣಿ ಸೀವ್ಯಂತಿ ಮನಸ್ಯಮಾನೇನ ಸೃಷ್ಟಾ ಮನೋರಪತ್ಯಂ ಮನುಷೋ ವಾ ॥ ನಿ. ೩.೭ । ಇತಿ । ಯದ್ವಾ । ಪೂರ್ವಂ ದೇವಾ ಮನುಷ್ಯಾಸು ಮನೋರಪತ್ಯಭೂತಾಸು ವಿಕ್ಷು ಪ್ರಜಾಸು ಪ್ರಾಣಿಷು ವಪುಷೇ ಸ್ವರೂಪಾಯ ಯಾಗಾದಿಸ್ವರೂಪಪ್ರಕಾಶಾಯ ಶರೀರಧಾರಣಾಯ ವಾ ಜಾಠರಾಗ್ನಿರೂಪೇಣ ನಿ ದಧುಃ । ಸ್ಥಾಪಿತವಂತಃ । ತತ್ರ ದೃಷ್ಟಾಂತಃ । ಸ್ವರ್ಣ ಸ್ವರಣಂ ಸ್ವೀರಣಂ ವಾ । ಆದಿತ್ಯಮಿವ ಚಿತ್ರಂ ಚಾಯನೀಯಂ ವಿಭಾವಂ ವಿವಿಧಪ್ರಕಾಶವಂತಂ ಯಥಾ ಪ್ರಕಾಶಾದಿಸಾಧನಾಯ ಧಾರಯಂತಿ ತದ್ವತ್ । ಸ್ವಃಶಬ್ದಂ ಯಾಸ್ಕ ಏವಂ ನಿರುವಾಚ । ಸ್ವರಾದಿತ್ಯೋ ಭವತಿ ಸು ಅರಣಃ ಸು ಈರಣಃ ಸ್ವೃತೋ ರಸಾನ್ತ್ಸ್ವೃತೋ ಭಾಸಂ, ಜ್ಯೋತಿಷಾಂ ಸ್ವೃತೋ ಭಾಸೇತಿ ವಾ । ನಿ. ೨-೧೪ । ಇತಿ । ಈದೃಶಂ ಯಂ ನಿ ದಧುಸ್ತಂ ಮಥೀದಿತಿ ಪೂರ್ವತ್ರಾನ್ವಯಃ ॥

ಪ್ರತಿಪದಾರ್ಥ

**ಹೋತಾರಂ**—ದೇವತೆಗಳನ್ನು ಯಜ್ಞಕ್ಕೆ ಕರೆಯುವವನೂ । **ವಿಶ್ವಾಪ್ಸುಂ**—ಪಾರ್ಥಿವ, ವೈದ್ಯುತ ಜಾಠರಾದಿ ಭೇದಗಳಿಂದ ಅಥವಾ ಕಾಲೀ, ಕರಾಳಾದಿ ಜ್ವಾಲೆಗಳ ವೈರೂಪ್ಯದಿಂದ ನಾನಾವಿಧವಾದ ರೂಪವುಳ್ಳವನೂ। **ವಿಶ್ವದೇವ್ಯಂ**—ಸಕಲ ದೇವತೆಗಳ ಪೂಜೆಗೂ ಪ್ರತಿನಿಧಿಯಾದವನೂ ( ಮತ್ತು ) । **ಯಂ**—ಯಾವನನ್ನು । **ಮನುಷ್ಯಾಸು**—ಮಾನವರಾದ । **ವಿಕ್ಷು**—ಋತ್ವಿಗಾದಿ ಪ್ರಜೆಗಳಲ್ಲಿ । **ವಪುಷೇ**—ಯಜ್ಞಶರೀರದ ಸಿದ್ಧಿಗಾಗಿ । ಅಥವಾ [**ಯಂ**—ಯಾವನನ್ನು । (**ದೇವಾಃ**—ದೇವತೆಗಳು) । **ಮನುಷ್ಯಾಸು**—ಮನುವಿನ ಸಂತತಿಯುರಾದ। **ವಿಕ್ಷು**—ಪ್ರಜೆಗಳಲ್ಲಿ । **ವಪುಷೇ**— ಯಾಗಾದಿ ಸ್ವರೂಪಸಿದ್ಧಿಗಾಗಿ । ] **ಚಿತ್ರಂ**— ಮನೋಹರನಾದವನೂ । **ವಿಭಾವಂ**—ನಾನಾವಿಧವಾದ ಪ್ರಕಾಶವುಳ್ಳವನೂ ಆದ । **ಸ್ವಃ ನ**—ಆದಿತ್ಯನನ್ನು ಸ್ಥಾಪಿಸಿವಂತೆ । **ನಿ ದಧುಃ**— ಸ್ಥಾಪಿಸಿದರೋ, ಅಂತಹವನೂ ಆದ । **ಯದೀಂ**—ಯಾವ ಇದೇ ಅಗ್ನಿಯನ್ನು । **ಮಾತರಿಶ್ವಾ**—ಅಂತರಿಕ್ಷ ಸಂಚಾರಿ ಯಾದ ವಾಯುವು । **ವಿಶ್ವಃ**—(ಕಾಷ್ಠಾದಿಗಳಲ್ಲಿ) ಪ್ರವೇಶಿಸಿ । **ಮಥೀತ್**—ಪ್ರಜ್ವಲಿಸುವಂತೆ ಕೆರಳಿಸಿದನು ॥

ಭಾವಾರ್ಥ

ದೇವತೆಗಳನ್ನು ಯಜ್ಞಕ್ಕೆ ಕರೆಯುವವನೂ, ನಾನಾವಿಧವಾದ ರೂಪವುಳ್ಳವನೂ, ಸಕಲ ದೇವತೆಗಳ ಪೂಜೆಗೂ ಪ್ರತಿನಿಧಿಯಾದವನೂ ಮತ್ತು ದೇವತೆಗಳು ಹಿಂದೆ ಜಗತ್ತಿನ ಪ್ರಕಾಶಕ್ಕಾಗಿ ಮನೋಹರವಾಗಿ ಪ್ರಕಾಶಿಸುವ ಆದಿತ್ಯನನ್ನು ಸ್ಥಾಪಿಸಿದಂತೆ ಯಾವನನ್ನು ಮನುವಿನ ಸಂತತಿಯವರಾದ ಮಾನವರಲ್ಲಿ ಸಿದ್ಧಿಗಾಗಿ ಸ್ಥಾಪಿಸಿದರೋ ಅಂತಹವನೂ ಆದ ಅಗ್ನಿಯನ್ನು ವಾಯುವು ಕಾಷ್ಠಾದಿಗಳಲ್ಲಿ ಪ್ರವೇಶಿಸಿ ಪ್ರಜ್ವಲಿಸುವಂತೆ ಕೆರಳಿಸಿದನು.

English Translation

The wind, penetrating ( amidst the fuel ), has excited ( Agni), the invoker (of the gods) the multiform, the minister of all the deities, whom they have established amongst mortal worshippers for the accomplishment of sacrifice, like the wonderful and variously radiant sun.

॥ ವಿಶೇಷವಿಷಯಗಳು ॥

ವಿಶ್ವಾಪ್ಸುಂ—ಅಪ್ಸ್ವಿತಿ ರೂಪನಾಮ । ನಾನಾರೂಪಂ ಪಾರ್ಥಿವವೈದ್ಯುತಜಾಠರಾದಿಭೇದೇನ, ಆಹವನೀಯಾದಿಭೇದೇನ ವಾ । ಯದ್ವಾ । ಕಾಲೀಕರಾಲ್ಯಾದಿರೂಪೇಣ ಜ್ವಾಲಾನಾಂ ವೈರೂಪ್ಯಾದ್ವಿಶ್ವ-ರೂಪತ್ವಂ । ಪಾರ್ಥಿವ, ವೈದ್ಯುತ ಮತ್ತು ಜಾಠರಾದಿಭೇದಗಳಿಂದ ಅಥವಾ ದಕ್ಷಿಣಾಗ್ನಿ, ಗಾರ್ಹಪತ್ಯ ಮತ್ತು ಆಹವನೀಯ ಎಂಬ ಭೇದಗಳಿಂದ ಅಥವಾ ಕಾಲೀ, ಕರಾಳೀ ಇತ್ಯಾದಿ ಜ್ವಾಲೆಗಳ ವೈರೂಪ್ಯದಿಂದ ನಾನಾವಿಧವಾದ ರೂಪವುಳ್ಳವನು ಎಂದು ಅಗ್ನಿಗೆ ವಿಶೇಷಣವಾಗಿದೆ.

ತ್ರೀಣಿ ಜಾನಾ—ಇತ್ಯಾದಿವರ್ಣನೆಗಳು ಜಗತ್ತಿನ ಮೂಲತತ್ತ್ವವನ್ನು ಪ್ರತಿಬಿಂಬಿಸುವ ಅಗ್ನಿಯ ಮೂರು ವಿಧವಾದ ಆವಿರ್ಭಾವವನ್ನು ತಿಳಿಸುತ್ತನೆ. ಅವು ಯಾವುವೆಂದರೆ,

**ತ್ರಿಸ್ಥಾನಂ ಚೈನಮರ್ಚಂತಿ ಹೋತ್ರಾಯಾಂ ವೃಕ್ತಬರ್ಹಿಷಃ ।**
**ಇಹೈವ ಪವಮಾನೋಽಗ್ನಿರ್ಮಧ್ಯಮೋಽಗ್ನಿರ್ವನಸ್ಪತಿಃ ॥**
**ಅಮುಷ್ಮಿನ್ನೇವ ವಿಪ್ರೈಸ್ತು ಲೋಕೇಽಗ್ನಿಃ ಶುಚಿರುಚ್ಯತೇ ।**
**ಇಹಾಗ್ನಿಭೂತಸ್ತ್ವೃಷಿಭಿರ್ಲೋಕೇ ಸ್ತುತಿಭಿರೀಳಿತಃ ॥**
**ಜಾತವೇದಾಃ ಸ್ತುತೋ ಮಧ್ಯೇ ಸ್ತುತೋ ವೈಶ್ವಾನರೋ ದಿವಿ ।**

(ಬೃ. ದೇ. ೧-೬೫ರಿಂದ ೬೭)

ಈ ಮೂರು ವಿಧಗಳಲ್ಲಿ ಪೃಥ್ವಿಯಲ್ಲಿ ಆವಿರ್ಭವಿಸುವ ಅಗ್ನಿಗೆ **ಪವಮಾನಾಗ್ನಿಯೆಂದೂ**, ಮಧ್ಯಮಲೋಕವರ್ತಿಯಾದ ಅಗ್ನಿಗೆ **ವನಸ್ಪತಿಯೆಂದೂ** ದ್ಯುಲೋಕಸ್ಥನಾದ ಅಗ್ನಿಗೆ ಅಗ್ನಿಃಶುಚಿಯೆಂದೂ ಪ್ರಸಿದ್ಧಿಯಿದೆ. ಈ ಮೂರು ಪ್ರಭೇದಗಳೂ ತೈತ್ತಿರೀಯ ಸಂಹಿತೆಯಲ್ಲಿ,

**ಅಗ್ನಯೇ ಪವಮಾನಾಯ ಪುರೋಡಾಶಮಷ್ಟಾಕಪಾಲಂ ನಿರ್ವಪೇದಗ್ನಯೇ ಪಾವಕಾಯಾ-ಗ್ನಯೇ ಶುಚಯೇ ।**

(ತೈ. ಸಂ. ೨-೨-೪)

ಪವಮಾನ, ಶುಚಿ, ಪಾವಕ ಎಂಬ ವಿಭಾಗದಿಂದ ಪಠಿತವಾಗಿದೆ. ಇವಲ್ಲದೆ **ಅಗ್ನಿ**, **ಜಾತವೇದಸ್** ಮತ್ತು **ವೈಶ್ವಾನರ** ಎಂಬ ಹೆಸರೂ ಸಹ ಅಗ್ನಿಯ ಮೂರುವಿಧವಾದ ಸ್ವರೂಪಗಳನ್ನು ತಿಳಿಸುತ್ತವೆ. ಅಲ್ಲದೆ **ದಿವಸ್ಪರಿ ಪ್ರಥಮಂ ಜಜ್ಞೇ** ( ಋ. ಸಂ. ೧೦-೪೫-೧ ; ತೈ. ಸಂ. ೧-೩-೧೪-೫ ) ಇತ್ಯಾದಿ ವರ್ಣನೆಗಳಿಂದ ಅಗ್ನಿಯು ಬಡಬಾನಲ ರೂಪವಲ್ಲಿಯೂ, **ಆದಿತ್ಯ**ರೂಪದಲ್ಲಿಯೂ ಅಂತರಿಕ್ಷದಲ್ಲಿ **ವಿದ್ಯುದ್ರೂಪ**ದಲ್ಲಿಯೂ ಗೋಚರಿಸುತ್ತಾನೆ ಎಂದು ಹೇಳಿದೆ. ಅಲ್ಲದೆ,

**ವಿಶ್ವರೂಪಂ ಹರಿಣಂ ಜಾತವೇದಸಂ ಪರಾಯಣಂ ಜ್ಯೋತಿರೇಕಂ ತಪಂತಂ ।**

(ಪ್ರಶ್ನೋಪನಿಷತ್ ೧-೮)

ಎಂಬ ವಾಕ್ಯಗಳಿಂದ ಸಕಲ ಭೂತಗಳಿಗೂ ಅಂತರಾತ್ಮನಾಗಿರತಕ್ಕ ಅಗ್ನಿಯನ್ನು ವಿಶ್ವರೂಪನೆಂದೂ, ಸಪ್ತರಶ್ಮಿಗಳುಳ್ಳವನೆಂದೂ ಸರ್ವಜ್ಞನೆಂದೂ ಸ್ತುತಿಸಿದೆ. ಮತ್ತು,

**ಕಾಲೀ ಕರಾಲೀ ಚ ಮನೋಜವಾ ಚ ಸುಲೋಹಿತಾ ಯಾ ಚ ಸುಧೂಮ್ರವರ್ಣಾ ।**
**ಸ್ಫುಲಿಂಗಿನೀ ವಿಶ್ವರುಚೀ ಚ ದೇವೀ ಲೇಲಾಯಮಾನಾ ಇತಿ ಸಪ್ತ ಜಿಹ್ವಾಃ ॥**
(ಮುಂಡಕ. ೧-೨-೪)

ಇತ್ಯಾದಿವಾಕ್ಯಗಳಲ್ಲಿ ಅಗ್ನಿಜ್ವಾಲೆಗಳ ನಾನಾವಿಧವಾದ ವೈರೂಪ್ಯವನ್ನು ಹೇಳಿರುವುದರಿಂದ **ವಿಶ್ವಾಪ್ಸುಂ** ಎಂಬ ವಿಶೇಷಣದಿಂದ ಅಗ್ನಿಯ ಈ ಅಂಶಗಳ ವರ್ಣನೆಯಾಗಬಹುದು. **ವಿಶ್ವಾಪ್ಸು**ನಾದ ಅಗ್ನಿಯ ವೈರೂಪ್ಯವು ಶತಪಥ ಬ್ರಾಹ್ಮಣದಲ್ಲಿ ಈರೀತಿ ವರ್ಣಿತವಾಗಿದೆ.

**ತಮಬ್ರವೀದ್ರುದ್ರೋಽಸೀತಿ । ತದ್ಯದಸ್ಯ ತನ್ನಾಮಾಕರೋದಗ್ನಿಸ್ತದ್ರೂಪಮಭವದಗ್ನೀ ರುದ್ರೋ ಯದರೋದೀತ್ತಸ್ಮಾದ್ರುದ್ರಃ ಸೋಽಬ್ರವೀಜ್ಜ್ಯಾಯಾನ್ವಾತೋಽಸ್ಮಿ ಧೇಹ್ಯೇವ ಮೇ ನಾಮೇತಿ ।**

ಪ್ರಜಾಪತಿಯು ಅಗ್ನಿಗೆ **ರುದ್ರ**ನೆಂದು ಕರೆಯಲು ಅಗ್ನಿಯು ನಾನು ಅದಕ್ಕಿಂತಲೂ ಅಧಿಕನು. ಬೇರೆ ಹೆಸರನ್ನು ಕೊಡು ಎನ್ನಲು,

**ತಮಬ್ರವೀತ್ಸರ್ವೋಽಸೀತಿ । ತದ್ಯದಸ್ಯ ತನ್ನಾಮಾಕರೋದಾಪಸ್ತದ್ರೂಪಮಭವನ್ನಾಪೋ ವೈ ಸರ್ವೋಽದ್ಭ್ಯೋ ಹೀದಗ್ ಸರ್ವಂ ಜಾಯತೇ ಸೋಽಬ್ರವೀಜ್ಜ್ಯಾಯಾನ್ವಾ ಅತೋಽಸ್ಮಿ ಧೇಹ್ಯೇವ ಮೇ ನಾಮೇತಿ ।**

ಆಗ ಪ್ರಜಾಪತಿಯು ಅಗ್ನಿಯನ್ನು ಕುರಿತು 'ನೀನು ಸರ್ವನು' ಎಂದನು. ಅಗ್ನಿಯು ತಾನು ಅದಕ್ಕಿಂತಲೂ ಅಧಿಕನೆಂದೂ, ಬೇರೆ ಹೆಸರಿನಿಂದ ತನ್ನನ್ನು ಕರೆಯಬೇಕೆಂದೂ ಹೇಳಲು, ಪ್ರಜಾಪತಿಯು

**ತಮಬ್ರವೀತ್ಪಶುಪತಿರಸೀತಿ । ತದ್ಯದಸ್ಯ ತನ್ನಾಮಾಕರೋದೋಷಧಯಸ್ತದ್ರೂಪಮಭವನ್ನೋಷಧಯೋ ವೈ ಪಶುಪತಿಸ್ತಸ್ಮಾದ್ಯದಾ ಪಶವ ಓಷಧೀರ್ಲಭಂತೇಽಥ ಪತೀಯಂತಿ ಸೋಽಬ್ರವೀಜ್ಜ್ಯಾಯಾನ್ ವಾ .... .... .... .... ।**

ಓಷಧಿಗಳ ರೂಪದಲ್ಲಿ ಅವುಗಳ ಅಂತರ್ಗತನಾಗಿರುವುದರಿಂದ ನೀನು **ಪಶುಪತಿ**ಯಾಗಿರುವೆ. ಓಷಧಿಗಳಿಗೆ **ಪಶುಪತಿ**ಯೆಂಬ ಹೆಸರಿರುವುದರಿಂದ ನಿನಗೂ ಅದೇ ಹೆಸರು ಎಂದನು. ಆಗ ಅಗ್ನಿಯು ತಾನು ಅದಕ್ಕಿಂತಲೂ ಅಧಿಕನೆಂದೂ, ಬೇರೆ ಹೆಸರಿಡಬೇಕೆಂದೂ ಕೇಳಲು,

**ತಮಬ್ರವೀದುಗ್ರೋಽಸೀತಿ । ತದ್ಯದಸ್ಯ ತನ್ನಾಮಾಕರೋದ್ವಾಯುಸ್ತದ್ರೂಪಮಭವದ್ವಾಯುರ್ವಾ ಉಗ್ರಸ್ತಸ್ಮಾದ್ಯದಾ ಬಲವದ್ವಾತ್ಯುಗ್ರೋ ವಾತೀತ್ಯಾಹುಃ ಸೋಽಬ್ರವೀಜ್ಜ್ಯಾಯಾನ್ .... .... .... .... ।**

**ಉಗ್ರ**ವಾಗಿ ಬೀಸತಕ್ಕ **ವಾಯುವೇ** ನೀನಾದುದರಿಂದ ನಿನಗೆ **ಉಗ್ರ**ನೆಂಬ ಹೆಸರು ಎನ್ನಲು ಪುನಃ ಅಗ್ನಿಯು ಬೇರೆ ನಾಮಧೇಯವಿಡಬೇಕೆನ್ನಲು,

**ತಮಬ್ರವೀದಶನಿರಸೀತಿ । ತದ್ಯದಸ್ಯ ತನ್ನಾಮಾಕರೋದ್ವಿದ್ಯುತ್ತದ್ರೂಪಮಭವದ್ವಿದ್ಯುದ್ವಾ ಅಶನಿಸ್ತಸ್ಮಾದ್ಯ ವಿದ್ಯುದ್ಧಂತ್ಯಶನಿಃ ಅವಧೀರಿತ್ಯಾಹುಃ .... .... .... .... ।**

ವಿದ್ಯುದಾತ್ಮಕನಾದ ಅಶನಿಯೇ ನೀನಾದುದರಿಂದ ನಿನಗೆ ಅಶನಿಯೆಂಬ ಹೆಸರು ಎನ್ನಲು ಅಗ್ನಿಯು ಅದಕ್ಕೂ ತೃಪ್ತನಾಗದಿದ್ದಾಗ,

**ತಮುಬ್ರವೀತ್ಪರ್ಜನ್ಯೋಽಸೀತಿ । ತದ್ಯದಸ್ಯ ತನ್ನಾಮಾಕರೋತ್ಪರ್ಜನ್ಯಸ್ತದ್ರೂಪಮಭವತ್ಪರ್ಜನ್ಯೋ ವೈ ಭವಃ ಪರ್ಜನ್ಯಾದ್ಧೀದಂ ಸರ್ವಂ ಭವತಿ ಸೋಽಬ್ರವೀತ್ .... .... .... .... ॥**

ಪರ್ಜನ್ಯಾತ್ಮನಾದ ಭವನೇ ನೀನು ಎಂದನು, ಆಗಲೂ ಅಗ್ನಿಯು ತಾನು ಅದಕ್ಕಿಂತಲೂ ಅಧಿಕನೆನ್ನಲು,

**ತಮುಬ್ರವೀನ್ಮಹಾದೇವೋಽಸೀತಿ । ತದ್ಯದಸ್ಯ ತನ್ನಾಮಾಕರೋಚ್ಚಂದ್ರಮಾಸ್ತದ್ರೂಪಮಭವತ್ಪ್ರಜಾಪತಿರ್ವೈ ಚಂದ್ರಮಾಃ ಪ್ರಜಾಪತಿರ್ವೈ ಮಹಾನ್ ದೇವಃ ಸೋಽಬ್ರವೀತ್ .... .... ....।**

ಚಂದ್ರಾತ್ಮಕನಾಗಿರುವ ಪ್ರಜಾಪತಿಯೇ ನೀನು ಎಂದನು ಆಗ ಅಗ್ನಿಯು ನಾನು ಇನ್ನೂ ಅಧಿಕನು, ಬೇರೊಂದು ಹೆಸರನ್ನು ಕೊಡೆಂದನು. ಆಗ ಪ್ರಜಾಪತಿಯು,

**ತಮುಬ್ರವೀದೀಶಾನೋಽಸೀತಿ । ತದ್ಯದಸ್ಯ ತನ್ನಾಮಾಕರೋದಾದಿತ್ಯಸ್ತದ್ರೂಪಮಭವದಾದಿತ್ಯೋ ವಾ ಈಶಾನ ಆದಿತ್ಯೋ ಹ್ಯಸ್ಯ ಸರ್ವಸ್ಯೇಷ್ಟೇ .... .... .... .... । ತಾನ್ಯೇತಾನ್ಯಷ್ಟಾವಗ್ನಿರೂಪಾಣಿ ।**

(ಶ. ಬ್ರಾ. ೬-೧-೩-೧೦ರಿಂದ ೧೭)

ಸಕಲ ಲೋಕಕ್ಕೂ ಪ್ರಭುವಾಗಿರುವ ಆದಿತ್ಯನೇ ನೀನು ಎಂದನು. ಈರೀತಿ **ರುದ್ರ, ಸರ್ವ, ಪಶುಪತಿ, ಉಗ್ರ, ಮಹಾದೇವ, ಅಶನಿ, ಭವ,** ಮತ್ತು **ಈಶಾನ** ಎಂಬ ಎಂಟು ವಿಶೇಷ ಗುಣಗಳನ್ನು ತಿಳಿಸುವ ಎಂಟು ಹೆಸರುಗಳು. **ತಾನ್ಯೇತಾನ್ಯಷ್ಟಾವಗ್ನಿರೂಪಾಣಿ ।** ಈ ಎಂಟೂ ಅಗ್ನಿಯ ವಿಶೇಷರೂಪಗಳು ಎಂದು ಶತಪಥ ಬ್ರಾಹ್ಮಣದ ವಿವರಣೆಯಿದೆ. ಆದುದರಿಂದ **ವಿಶ್ವಾಪ್ಸು**ವೆಂಬ ವಿಶೇಷಣಕ್ಕೆ ಮೇಲೆ ಹೇಳಿರುವ ನಾನಾವಿಧವಾದ **ರೂಪ**ಗಳುಳ್ಳವನೆಂದರ್ಥ.

**ವಿಶ್ವದೇವ್ಯಂ—ಸರ್ವದೇವಯೋಗ್ಯಕ್ರಿಯಾಸಾಧುಂ ।** ಸಕಲ ದೇವತೆಗಳ ಪೂಜೆಗೂ ಪ್ರತಿನಿಧಿಯಾದವನು.

**ತ್ವಾಮಗ್ನ ಆದಿತ್ಯಾಸ ಆಸ್ಯಂ೧ ತ್ವಾಂ ಜಿಹ್ವಾಂ ಶುಚಯಶ್ಚಕ್ರಿರೇ ಕವೇ ।**
**ತ್ವಾಂ ರಾತಿಷಾಚೋ ಅಧ್ವರೇಷು ಸಶ್ಚಿರೇ ತ್ವೇ ದೇವಾ ಹವಿರದಂತ್ಯಾಹುತಂ ।**

(ಋ. ಸಂ. ೨-೧-೧೩)

ಇತ್ಯಾದಿ ಋಕ್ಕುಗಳಲ್ಲಿ ವರ್ಣಿಸಿರುವಂತೆ ಅಗ್ನಿಯೇ ಸಕಲ ದೇವತೆಗಳ ಪ್ರತಿನಿಧಿಯಾಗಿ ಎಲ್ಲರಿಗಾಗಿಯೂ ಹವಿಸ್ಸನ್ನು ಸ್ವೀಕರಿಸುವುದರಿಂದ ಈ ವಿಶೇಷಣವಿದೆ.

ಸ್ವಃ—ಸ್ವರಾದಿತ್ಯೋ ಭವತಿ । ಸು ಅರಣಃ,—ಸು ಈರಣಃ । **ಸ್ವೃತೋ ರಸಾನ್, ಸ್ವೃತೋ ಭಾಸಂ ಜ್ಯೋತಿಷಾಂ । ಸ್ವೃತೋ ಭಾಸೇತಿ ವಾ ।** ಅತ್ಯಂತ ದೂರದಲ್ಲಿರುವುದರಿಂದಲೂ, (ತಮಸ್ಸನ್ನು), ಚಲಿಸುವುದರಿಂದಲೂ, ರಸಗಳೊಳಗೆ ಪ್ರವೇಶಿಸಿ ಅಂತರ್ಗತನಾಗುವುದರಿಂದಲೂ, ತೇಜೋಮಂಡಲದಲ್ಲಿ ತನ್ನ

ಕಾಂತಿಯನ್ನು ಬೀರಿ ಪ್ರವೇಶಿಸುವುದರಿಂದಲೂ, ಪ್ರಕಾಶದೊಡನೆ ಒಳಹೊಗುವುದರಿಂದಲೂ **ಸ್ವಃ** ಎಂದರೆ ಆದಿತ್ಯನೆಂದರ್ಥ. (ನಿ. ೨-೧೪). ಆದುದರಿಂದಲೇ **ಅಹಸ್ಸು**ಗಳಿಗೂ **ಸ್ವಸರಾಣಿ** ಎಂದು ಹೆಸರು. **ಸ್ವಃ ಆದಿತ್ಯೋ ಭವತಿ ಸ ಏನಾನಿ ಸಾರಯತಿ** (ನಿ. ೫-೪) ಆದಿತ್ಯನು ಇವುಗಳನ್ನು ಚಲಿಸುವಂತೆ ಮಾಡುವುದರಿಂದ **ಸ್ವಸರಾಣಿ** ಎಂದರೆ ಅಹಸ್ಸುಗಳು ಎಂದಾಗುತ್ತದೆಂದು ನಿರುಕ್ತಕಾರರು ವಿವರಿಸಿದ್ದಾರೆ. ಋಕ್ಸಂಹಿತೆಯಲ್ಲಿ ಈ ಪದವು ಕೇವಲ ಆದಿತ್ಯಪರ್ಯಾಯವಾಗಿಯೇ ಉಪಯೋಗಿಸಲ್ಪಟ್ಟಿಲ್ಲ.

**ವವ್ರಾಸೋ ನ ಯೇ ಸ್ವಜಾಃ ಸ್ವತವಸ ಇಷಂ ಸ್ವರಭಿಜಾಯಂತ ಧೂತಯಃ**
**ಸಹಸ್ರಿಯಾಸೋ ಅಪಾಂ ನೋರ್ಮಯ ಆಸಾ ಗಾವೋ ವಂದ್ಯಾಸೋ ನೋಕ್ಷಣಃ** ।

(ಋ. ಸಂ. ೧-೧೬೮-೨)

ಎಂಬ ಋಕ್ಕಿನಲ್ಲಿ **ಸ್ವಃ** ಎಂಬ ಪದಕ್ಕೆ **ಸ್ವರ್ಗ**ವೆಂದೂ ಹೀಗೆಯೇ ಇತರ ಕೆಲವೆಡೆಗಳಲ್ಲಿ ತೇಜಸ್ಸೆಂದೂ ಅರ್ಥಮಾಡಿದೆ. ಪ್ರಕೃತವಾದ ಋಕ್ಕಿನಲ್ಲಿ **ಆದಿತ್ಯ**ನೆಂಬರ್ಥವು ಸರಿಯಾಗಿದೆ.

**ಮಾತರಿಶ್ವಾ ಮಥೀತ್**—ಅಂತರಿಕ್ಷಸಂಚಾರಿಯಾದ ವಾಯುವು ಕಾಷ್ಠಾದಿಗಳಲ್ಲಿ ಪ್ರವೇಶಿಸಿ ಅಗ್ನಿಯನ್ನು ಪ್ರಜ್ವಲಿಸುವಂತೆ ಕೆರಳಿಸಿದನು. **ಮಾತರಿಶ್ವಾ ಗುಹಾ ಸಂತಂ ಹವ್ಯವಾಹಂ ಸಮೀಧೇ** । (ಋ. ಸಂ. ೩-೫-೧೦) ಇತ್ಯಾದಿ ವಾಕ್ಯಗಳಿಂದ ಮಾತರಿಶ್ವನು ಅಗ್ನಿಮಥನವನ್ನು ಮಾಡಿದ ಕಥಾ ಸಂದರ್ಭವನ್ನು ಹಿಂದೆಲ್ಲಾ ವಿವರಿಸಿದೆ.

### ವ್ಯಾಕರಣಪ್ರಕ್ರಿಯಾ

**ಮಥೀತ್**— ಮಥೇ ವಿಲೋಡನೇ ಧಾತು. ಲುಙ್ ಪ್ರಥಮಪುರುಷಏಕವಚನದಲ್ಲಿ ತಿಪ್. ಇಕಾರಲೋಪ. ಸಿಚಿಗೆ ಇಡಾಗಮ. ಅಪೃಕ್ತಕ್ಕೆ ಈಡಾಗಮ. **ಇಟಈಟಿ** ಎಂಬುದರಿಂದ ಸಿಚಿಗೆ ಲೋಪ. **ಹ್ಮ್ಯಂತಕ್ಷಣಶ್ವಸ**—(ಪಾ. ಸೂ. ೭-೨-೫ ) ಎಂಬುದರಿಂದ ವೃದ್ಧಿಪ್ರತಿಷೇಧ ಬರುತ್ತದೆ. **ಬಹುಲಂ ಛಂದಸ್ಯಮಾಙ್ಯೋಗೇಪಿ** (ಪಾ. ಸೂ. ೬-೪-೭೫) ಎಂಬುದರಿಂದ! **ಅಡಾಗಮ** ಬರುವುದಿಲ್ಲ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಆಗಮ ಅನುದಾತ್ತವಾದುದರಿಂದ ಧಾತುಸ್ವರ ಉಳಿಯುತ್ತದೆ.

**ವಿಷ್ಟಃ**—ವಿಶ ಪ್ರವೇಶನೇ ಧಾತು. **ನಿಷ್ಠಾ** ಎಂಬುದರಿಂದ ಕ್ತ ಪ್ರತ್ಯಯ. **ವ್ರಶ್ಚಭ್ರಸ್ಜಸೃಜ**—ಎಂಬುದರಿಂದ ಶಕಾರಕ್ಕೆ ಷತ್ವ. ಅದನ್ನು ನಿಮಿತ್ತೀಕರಿಸಿ ಪ್ರತ್ಯಯಕ್ಕೆ ಷ್ಟುತ್ವ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಹೋತಾರಮ್**—ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ ಧಾತು ಕರ್ತರಿಯಲ್ಲಿ ತೃನ್ ಪ್ರತ್ಯಯ. **ಬಹುಲಂ ಛಂದಸಿ** ಎಂಬುದರಿಂದ ಧಾತುವಿಗೆ ಸಂಪ್ರಸಾರಣ. **ಪೂರ್ವ**ರೂಪ. **ಸಾರ್ವಧಾತುಕಾರ್ಧಧಾತುಕಯೋಃ** ಎಂಬುದರಿಂದ ಧಾತುವಿನ ಇಕಿಗೆ ಗುಣ. ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ವಿಶ್ವಾಪ್ಸುಮ್**—ವಿಶ್ವೇ ಅಪ್ಸವಃ ಯಸ್ಯ ಸಃ ವಿಶ್ವಾಪ್ಸುಃ **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್** ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ದಧುಃ**—ಡುಧಾಞ್ ಧಾರಣಪೋಷಣಯೋಃ ಧಾತು. ಲಿಟ್ ಪ್ರಥಮಪುರುಷಬಹುವಚನಾಂತರೂಪ ತಿಙಂತ ನಿಘಾತಸ್ವರ ಬರುತ್ತದೆ.

**ಮನುಷ್ಯಾಸು**—ಮನುಷ್ಯಶಬ್ದವು ನಾನಾರೀತಿಯಾಗಿ ನಿರುಕ್ತದಲ್ಲಿ ವಿವೃತವಾಗಿದೆ. ಮನ ಜ್ಞಾನೇ, ತನು ತಂತುಸಂತಾನೇ ಈ ಎರಡು ಧಾತುಗಳಿಂದ ನಿಷ್ಪನ್ನವಾಗಿದೆ. ಪೃಷೋದರಾದಿಯಿಂದ ಸಿದ್ಧವಾಗುತ್ತದೆ. ಮನಸ್ಯಮಾನೇನ ಸೃಷ್ಟಾಃ ಅಥವಾ ಮನೋರಪತ್ಯಂ ಮನುಷ್ಯಾಃ ಮನುಷ್ಯಭವಾಃ ಮನುಷ್ಯಾಃ **ಭವೇ ಛಂದಸಿ** ಎಂಬುದರಿಂದ ಯ ಪ್ರತ್ಯಯ.

**ವಿಕ್ಷು**— ವಿಶ್ ಶಬ್ದ, ಸಪ್ತಮೀಬಹುವಚನಾಂತರೂಪ **ಸಾವೇಕಾಚಸ್ತೃತೀಯಾದಿಃ** (ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಸ್ವಃ—ನ್ಯಙ್ ಸ್ವರೌ ಸ್ವರಿತೌ** (ಫಿ. ಸೂ. ೭೪) ಎಂಬುದರಿಂದ ಸ್ವರಿತಸ್ವರ ಬರುತ್ತದೆ.

**ಚಿತ್ರಮ್**—ಚಿಞ್ ಚಯನೇ ಧಾತು. **ಅಮಿಚಿಮಿದಿಶ**-(ಉ.ಸೂ. ೪-೬೦೩) ಎಂಬುದರಿಂದ ಕ್ತ್ರ ಪ್ರತ್ಯಯ. ಕಿತ್ತ್ವಾದುದರಿಂದ ಗುಣ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ॥೧॥



ಸಂಹಿತಾಪಾಠಃ

ದದಾನಮಿನ್ನ ದದಭಂತ ಮನ್ಮಾಗ್ನಿರ್ವರೂಥಂ ಮಮ ತಸ್ಯ ಚಾಕನ್ ।
ಜುಷಂತ ವಿಶ್ವಾನ್ಯಸ್ಯ ಕರ್ಮೋಪಸ್ತುತಿಂ ಭರಮಾಣಸ್ಯ ಕಾರೋಃ ॥ ೨ ॥

ಪದಪಾಠಃ

ದದಾನಂ । ಇತ್ । ನ । ದದಭಂತ । ಮನ್ಮ । ಅಗ್ನಿಃ । ವರೂಥಂ । ಮಮ । ತಸ್ಯ । ಚಾಕನ್ ।
ಜುಷಂತ । ವಿಶ್ವಾನಿ । ಅಸ್ಯ । ಕರ್ಮ । ಉಪಽಸ್ತುತಿಂ । ಭರಮಾಣಸ್ಯ । ಕಾರೋಃ ॥ ೨ ॥

ವಿಶೇಷವಿಷಯಗಳು

ಮನ್ಮ ಮನನೀಯಂ ಸ್ತೋತ್ರಂ ಹವಿರಾದಿಕಂ ವಾ ದದಾನಮಿದಗ್ನಯೇ ಕುರ್ವಾಣಮೇವ ಮಾಂ ದಂಭಿತಾರೋ ವೈರಿಣೋ ನ ದದಭಂತ । ದಂಭಿತುಂ ಹಿಂಸಿತುಂ ನ ಪ್ರಭವಂತಿ ॥ ದಂಭೇರ್ಬಹುಲಂ ಛಂದಸೀತಿ ವಿಕರಣಸ್ಯ ಶ್ಲುಃ । ವ್ಯತ್ಯಯೇನಾಂತಾದೇಶಃ ॥ ಮಮ ಕೋಽತಿಶಯ ಇತಿ ಉಚ್ಯತೇ । ತಸ್ಯ ತಾದೃಶಸ್ಯ ಪ್ರದಾತುರ್ಮಮ ವರೂಥಂ ವರಣೀಯಂ ಸ್ತೋತ್ರಾದಿಕಮಯಮಗ್ನಿಶ್ಚಾಕನ್ । ಅತ್ಯರ್ಥಂ ಕಾಮಯತೇ ॥ ಕನತಿಃ ಕಾಂತಿಕರ್ಮಾ ಅಸ್ಮಾದ್ಯಙ್ಲುಗಂತಾಲ್ಲಙಿ ಛಾಂದಸೋಽಡಭಾವಃ । ಬಹುಲಾದೇವ ವಾ ಛಾಂದಸಸ್ತುಜಾದಿತ್ವಾದಭ್ಯಾಸದೀರ್ಘಃ ॥ ಯಸ್ಮಾದೇವಂ ತಸ್ಮಾನ್ನ ದಭ್ನುವಂತೀತ್ಯರ್ಥಃ । ನ

ಕೇವಲಮಗ್ನಿರೇವ ಕಾಮಯತೇ ಕಿಂತು ಸರ್ವೇ ದೇವಾಃ ಕಾಮಯಂತೆ ಇತ್ಯಾಹ । ಉಪಸ್ತುತಿಂ ಭರಮಾಣಸ್ಯ ಕುರ್ವಾಣಸ್ಯ ಕಾರೋಃ ಸ್ತೋತುರಸ್ಯ ಯಜಮಾನಸ್ಯ ಮಮ ವಿಶ್ವಾನಿ ಸರ್ವಾಣಿ ಹವಿಷ್ಪ್ರದಾನಾದಿರೂಪಾಣಿ ಜುಷಂತೆ ಸರ್ವೇ ದೇವಾಃ । ಅತೋ ನ ದದಭಂತೇತ್ಯರ್ಥಃ ॥

ಪ್ರತಿಪದಾರ್ಥ

**ಮನ್ಮ**—ಶ್ರದ್ಧೆಯಿಂದಕೂಡಿದ ಸ್ತೋತ್ರವನ್ನು ಅಥವಾ ಹವಿಸ್ಸನ್ನು । **ದದಾನಮಿತ್**—(ಅಗ್ನಿಗೆ) ಅರ್ಪಿಸುವವನೇ ಆದ ನನ್ನನ್ನು । **ನ ದದಭಂತೆ**—(ಹಿಂಸಕರಾದ ಶತ್ರುಗಳು) ಹಿಂಸಿಸಲು ಸಮರ್ಥರಾಗುವುದಿಲ್ಲ (ಏತಕ್ಕೆಂದರೆ) । **ತಸ್ಮ**—ಆ ರೀತಿಯಲ್ಲಿ ಅರ್ಪಿಸುವ । **ಮಮ**—ನನ್ನ । **ವರೂಥಂ**—ಪ್ರಿಯವಾದ ಸ್ತೋತ್ರಾದಿಗಳನ್ನು । **ಅಗ್ನಿಃ**—ಅಗ್ನಿಯು । **ಚಾಕನ್**—ಅತಿಶಯವಾಗಿ ಅಪೇಕ್ಷಿಸುತ್ತಾನೆ (ಅಲ್ಲದೆ) । **ಉಪಸ್ತುತಿಂ**—(ಅವರ) ಸ್ತೋತ್ರವನ್ನು । **ಭರಮಾಣಸ್ಯ**—ಪಠಿಸತಕ್ಕವನೂ । **ಕಾರೋಃ**—ಕೀರ್ತನಕಾರನೂ । **ಅಸ್ಯ**—ಯಜಮಾನನೂ ಆದ ನನ್ನ । **ವಿಶ್ವಾನಿ ಕರ್ಮ**—ಸಕಲವಾದ (ಹವಿಸ್ಸುಗಳನ್ನು ಮತ್ತು ಸ್ತೋತ್ರಗಳನ್ನು ಅರ್ಪಿಸುವ) ಕರ್ಮಗಳನ್ನು । **ಜುಷಂತೆ**—(ಸಕಲದೇವತೆಗಳೂ) ಸೇವಿಸಿ ತೃಪ್ತಿಯನ್ನು ಹೊಂದುತ್ತಾರೆ.

ಭಾವಾರ್ಥ

ಶ್ರದ್ಧಾಪೂರ್ವಕವಾದ ಸ್ತೋತ್ರವನ್ನು ಅಗ್ನಿಗೆ ಅರ್ಪಿಸುವ ನನ್ನನ್ನು ಹಿಂಸಕರಾದ ಶತ್ರುಗಳು ಹಿಂಸಿಸಲು ಸಮರ್ಥರಾಗುವುದಿಲ್ಲ. ಏತಕ್ಕೆಂದರೆ ಆರೀತಿಯಲ್ಲಿ ಅರ್ಪಿಸುವ ನನ್ನ ಪ್ರಿಯವಾದ ಸ್ತೋತ್ರಾದಿಗಳನ್ನು ಅಗ್ನಿಯು ಅತಿಶಯವಾಗಿ ಅಪೇಕ್ಷಿಸುತ್ತಾನೆ. ಅಲ್ಲದೆ, ದೇವತೆಗಳ ಸ್ತೋತ್ರವನ್ನು ಪಠಿಸತಕ್ಕವನೂ, ಕೀರ್ತನಕಾರನೂ, ಯಜಮಾನನೂ ಆದ ನನ್ನ ಸಕಲಕರ್ಮಗಳನ್ನೂ ಸಹ ದೇವತೆಗಳು ಸೇವಿಸಿ ತೃಪ್ತಿಯನ್ನು ಹೊಂದುತ್ತಾರೆ.

English Translation

Let not ( my enemies ) prevail against me, when presenting acceptable (oblations), for (Agni) is desirous of my so offered adoration, and all they (the gods) are gratified by the (pious) acts of me, the reciter of their praise, and the celebrator (of the sacrifice).

॥ ವಿಶೇಷವಿಷಯಗಳು ॥

**ಮನ್ಮ**—ಮನನೀಯಂ ಸ್ತೋತ್ರಂ ಹವಿರಾದಿಕಂ ವಾ ! ಧ್ಯಾನಾತ್ಮಕವಾದ ಸ್ತೋತ್ರ ಅಥವಾ ಪೂಜ್ಯವಾದ ಹವಿರಾದಿಗಳು ಎಂದು ಅರ್ಥಮಾಡಿದೆ. **ಮನ್ಮ** ಶಬ್ದಕ್ಕೆ ಮನಸ್ಸಿನ ಇಚ್ಛೆಯಿಂದು ಅವಯವಾರ್ಥವಾದರೂ ಋಕ್ಸಂಹಿತಾವಾಕ್ಯಗಳಲ್ಲಿ ಈ ಪದಪ್ರಯೋಗವು ಶ್ರೇಷ್ಠವಾದ ಅಭಿಲಾಷೆಯನ್ನು ತೋರಿಸುವ ವಸ್ತುವನ್ನು ನಿರ್ದೇಶಿಸುವುದಾಗಿದೆ. ನಿರುಕ್ತಕಾರರು,

ಉಪ ಪ್ರಾಗಾತ್ಸುಮನ್ಮೇಽಧಾಯಿ ಮನ್ಮ ದೇವಾನಾಮಾಶಾ ಉಪ ವೀತಪೃಷ್ಠಃ ।
ಅನ್ವೇನಂ ವಿಪ್ರಾ ಋಷಯೋ ಮದಂತಿ ದೇವಾನಾಂ ಪುಷ್ಟೇ ಚಕೃಮಾ ಸುಬಂಧುಂ ।
(ಋ. ಸಂ. ೧-೧೬೨-೭)

ಎಂಬ ಋಕ್ಕನ್ನುದಹರಿಸಿ ಮನ್ಮಶಬ್ದದ ಅರ್ಥವನ್ನು ತೋರಿಸಿದ್ದಾರೆ. ದುರ್ಗಾಚಾರ್ಯರು ಈ ಪದವನ್ನು ವಿವರಿಸುತ್ತಾ ಮನ್ಮ—ಮನನೀಯಮರ್ಥಜಾತಂ । ಆದೃತವಾದ ವಸ್ತುವೆಂದರ್ಥಮಾಡಿದ್ದಾರೆ. ಆದೃತವಾದ ವಸ್ತುವು ಯಜ್ಞಫಲವಾಗಬಹುದು, ಸ್ತುತಿಯಾಗಬಹುದು, ಹವಿಸ್ಸಾಗಬಹುದು. ೧-೧೬೩-೭ ನೇ ಋಕ್ಕಿನ ಪದಕ್ಕೆ ಸಾಯಣರು ಮನನೀಯಂ ಫಲಂ ಎಂದರ್ಥಮಾಡಿದ್ದಾರೆ, ೧-೨೬-೨, ೧-೧೨೭-೨, ೧-೧೪೦-೧, ೧-೧೫೧-೮ ಇತ್ಯಾದ್ಯನೇಕ ಸನ್ನಿವೇಶಗಳಲ್ಲಿ ಮನ್ಮನಾ ಮನ್ಮಭಿಃ ಎಂಬ ಪದಗಳಿಗೆ ಶ್ರೇಷ್ಠವಾದ, ಪೂಜ್ಯವಾದ ಮನಃಪ್ರವೃತ್ತಿಯೆಂದರ್ಥವಿರುವಂತೆ ಪ್ರಕೃತವಾದ ಋಕ್ಕಿನಲ್ಲೂ ಸಹ ಪೂಜ್ಯವಾದುದೂ, ಧ್ಯಾನಾತ್ಮಕವಾದುದೂ ಆದ ಸ್ತುತಿಯಿಂದಾಗಲಿ ಅಥವಾ ಶ್ರೇಷ್ಠವಾದ ಹವಿಸ್ಸಿಂದಾಗಲಿ ಅರ್ಥವಾಗುತ್ತದೆ. ಅಗ್ನಿಃ ಪ್ರತ್ನೇನ ಮನ್ಮನಾ (ಐ. ಬ್ರಾ. ೧-೪) ಇತ್ಯಾದಿ ವಾಕ್ಯಗಳಲ್ಲೂ ಈ ಪದದ ಅತಿಶಯವಾದ ಅರ್ಥವನ್ನು ಗಮನಿಸಬಹುದು.

ವರೂಥಂ—ವರೂಥಶಬ್ದವು ನಿರುಕ್ತದಲ್ಲಿ ಗೃಹನಾಮಗಳಲ್ಲಿ ಪಠಿತವಾಗಿದೆ. (ನಿ. ೩-೧೩) ಈ ಪದವು ವರಣಾರ್ಥಕವಾದ ವೃ ಧಾತುವಿನಿಂದ ನಿಷ್ಪನ್ನವಾಗಿದೆ. ವರಿಸುವುದೂ, (To choose) ಆದರದಿಂದ ಅಪೇಕ್ಷಿಸುವುದೂ ಆದ ಯಾವ ವಸ್ತುವಿಗಾದರೂ ವಿಶೇಷಣವಾಗಬಹುದು. ಋಕ್ಸಂಹಿತೆಯಲ್ಲಿ ಬೇರೆ ಬೇರೆ ವಸ್ತುಗಳನ್ನು ನಿರ್ದೇಶಿಸುವಂತೆ ಈ ಪದದ ಪ್ರಯೋಗವಿದೆ.

ತಾಁ ಇಯಾನೋ ಮಹಿ ವರೂಥಮೂತಯ ಉಪ ಘೇದೇನಾ ನಮಸಾ ಗೃಣೀಮಸಿ ।
ತ್ರಿತೋ ನ ಯಾನ್ಪಂಚ ಹೋತೄನಭಿಷ್ಟಯ ಆವವರ್ತದವರಾಞ್ಚಕ್ರಿಯಾವಸೇ ।

(ಋ. ಸಂ. ೨-೩೪-೧೪)

ಎಂಬ ಋಕ್ಕಿನಲ್ಲಿ ಪ್ರಶಸ್ತಂ ವರಣೀಯಂ ಧನಂ ಎಂದೂ,

ಮಾ ತೇ ಅಸ್ಯಾಂ ಸಹಸಾವನ್ಪರಿಷ್ಟಾವಘಾಯ ಭೂಮ ಹರಿವಃ ಪರಾದೈ ।
ತ್ರಾಯಸ್ವ ನೋಽವೃಕೇಭಿರ್ವರೂಥೈಸ್ತವ ಪ್ರಿಯಾಸಃ ಸೂರಿಷು ಸ್ಯಾಮ ।

(ಋ. ಸಂ. ೭-೧೯-೭)

ಎಂಬ ಋಕ್ಕಿನಲ್ಲಿ ವಾರಯಂತ್ಯುಪದ್ರವೇಭ್ಯಃ ಇತಿ ವರೂಥಾನಿ ರಕ್ಷಣಾನಿ ಉಪದ್ರವಗಳಿಂದ ಕಾಪಾಡತಕ್ಕ ರಕ್ಷಣೆಗಳೆಂದರ್ಥವಾಡಿದೆ. ಹೀಗೆ ಬೇರೆ ಬೇರೆ ಅರ್ಥಗಳಲ್ಲಿ ಪ್ರಯುಕ್ತವಾಗಿದ್ದರೂ ಪ್ರಕೃತವಾದ ಋಕ್ಕಿನಲ್ಲಿ ವರಣೀಯವಾದ ಎಂದರೆ ಪ್ರಿಯವಾದ ಸ್ತೋತ್ರವೆಂದರ್ಥಮಾಡಿದೆ.

ಕಾರೋಃ—ಸ್ತೋತುಃ ಅಸ್ಯ ಯಜಮಾನಸ್ಯ ಮಮ । ಸ್ತೋತ್ರಮಾಡುವವನೂ ಯಜ್ಞಕರ್ತನೂ ಆದ ನನ್ನ ಎಂದು ಅರ್ಥಮಾಡಿದೆ. ನಿರುಕ್ತಕಾರರು ಕಾರುಶಬ್ದವನ್ನು ಸ್ತೋತೃ ನಾಮಗಳಲ್ಲಿ ಪಠಿಸಿದ್ದಾರೆ (ನಿ. ೩-೧೬) ಬೃಹದ್ದೇವತಾಕಾರರು ಈ ಪದವನ್ನು ಕವಿಗಳು ಸೂಕ್ತದ್ರಷ್ಟೃಗಳಾದ ಋಷಿಗಳು ಎಂಬರ್ಥದಲ್ಲಿ ಉಪಯೋಗಿಸಿದ್ದಾರೆ.

ಅಗ್ನೇಸ್ತು ಯಾನಿ ಸೂಕ್ತಾನಿ ಪಂಚ ನಾಮಾನಿ ಕಾರವಃ ।
ಷಡ್ವಿಂಶತಿಸ್ತಥೇಂದ್ರಸ್ಯ ಪ್ರಾಹುಃ ಸೂರ್ಯಸ್ಯ ಸಪ್ತ ಚ ।

(ಬೃ. ದೇ. ೨೦-೨೨)

**ಪೃಥಕ್ತ್ವೇನ ಸಮಾಸ್ತೈಸ್ತು ಯಜ್ಞೇ ಯಚ್ಛಸ್ಯತೇ ನೃಭಿಃ ।**
**ಸ್ತುವಂತ್ಯಾಸ್ರೀಷು ತೇನೇಮುಂ ನರಾಶಂಸಂ ತು ಕಾರವಃ ॥**
(ಬೃ. ದೇ. ೨-೨೮)

ಎಂಬ ವಾಕ್ಯಗಳಲ್ಲಿ **ಕಾರುಗಳು** ಸ್ತುತಿಸುತ್ತಾರೆ ಎಂದು ಕವಿಪರ್ಯಾಯವಾದ ಪದವಾಗಿ ಉಪಯೋಗಿಸಿದ್ದಾರೆ. ಋಕ್ಸಂಹಿತೆಯಲ್ಲಿಯೂ,

**ಪ್ರದಕ್ಷಿಣಿದಭಿ ಗೃಣಂತಿ ಕಾರವೋ ವಯೋ ವದಂತ ಋತುಥಾ ಶಕುಂತಯಃ ।**
**ಉಭೇ ವಾಚೌ ವದತಿ ಸಾಮಗಾ ಇವ ಗಾಯತ್ರಂ ಚ ತ್ರೈಷ್ಟುಭಂ ಚಾನು ರಾಜತಿ ।**
(ಋ. ಸಂ. ೨-೪೩-೧)

**ವಿ ಚೇದುಚ್ಛಂತ್ಯಶ್ವಿನಾ ಉಷಾಸಃ ಪ್ರ ವಾಂ ಬ್ರಹ್ಮಾಣಿ ಕಾರವೋ ಭರಂತೇ ।**
**ಊರ್ಧ್ವಂ ಭಾನುಂ ಸವಿತಾ ದೇವೋ ಅಶ್ರೇದ್ಬೃಹದಗ್ನಯಃ ಸಮಿಧಾ ಜರಂತೇ ।**
(ಋ. ಸಂ. ೭-೭೨-೪)

ಇತ್ಯಾದಿ ಋಕ್ಕುಗಳಲ್ಲಿ **ಸ್ತೋತಾರಃ** ಎಂದರ್ಥವಾಗುತ್ತದೆ. ಪ್ರಕೃತವಾದ ಋಕ್ಕಿನಲ್ಲಿಯೂ ಅದೇ ಅರ್ಥವಾಗುತ್ತದೆ.

ವ್ಯಾಕರಣಪ್ರಕ್ರಿಯಾ

**ದದಾನಮ್**—ಡುದಾಞ್ ದಾನೇ ಧಾತು. ಲಡರ್ಥದಲ್ಲಿ ಶಾನಚ್ ಪ್ರತ್ಯಯ. ಶ್ಲು ವಿಕರಣ ವ್ಯತ್ಯಯದಿಂದ ಅಂತೋದಾತ್ತಸ್ವರ ಬರುತ್ತದೆ.

**ದದಭಂತೆ**—ದಂಭು ದಂಭನೇ ಧಾತು. ಲೇಟ್ ಪ್ರಥಮಪುರುಷಬಹುವಚನದಲ್ಲಿ ವ್ಯತ್ಯಯದಿಂದ ಅಂತಾದೇಶ. **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಶ್ಲು ಆದೇಶ. **ಶ್ಲೌ** ಎಂಬುದರಿಂದ ಧಾತುವಿಗೆ ದ್ವಿತ್ವ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಮನ್ಮ**–ಮನ ಜ್ಞಾನೇ ಧಾತು. ಇದಕ್ಕೆ ಔಣಾದಿಕವಾದ ಮನ್ ಪ್ರತ್ಯಯ. **ಞ್ನಿತ್ಯಾದಿರ್ನಿತ್ಯಂ** (ಪಾ.ಸೂ ೬–೧–೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ವರೂಥಮ್**—ವೃಞ್ ವರಣೇ ಧಾತು. **ಜ್ಯಾವೃಞ್ಭ್ಯಾಮೂಥನ್** (ಉ. ಸೂ. ೨–೧೬೩) ಎಂಬುದರಿಂದ ಊಥನ್ ಪ್ರತ್ಯಯ. ಪ್ರತ್ಯಯನಿಮಿತ್ತವಾಗಿ ಧಾತುವಿನ ಇಕಿಗೆ ಗುಣ· ರಪರವಾಗಿ ಬರುತ್ತದೆ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ

**ಚಾಕನ್**—ಕನ ಕಾಂತೌ ಧಾತು. ಕಾಂತಿಃ ಇಚ್ಛಾ. ಭೃಶಾರ್ಥ ತೋರುವಾಗ **ಧಾತೋರೇಕಾಚ**—(ಪಾ. ಸೂ. ೩-೧-೨೨) ಎಂಬುದರಿಂದ ಯಙ್ ಬಂದಾಗ **ಯಙೋಚಿಚ** (ಪಾ. ಸೂ ೨-೪-೭೪) ಎಂಬುದರಿಂದ ಅದಕ್ಕೆ ಅನೈಮಿತ್ತಿಕವಾಗಿ ಲುಕ್. ಯಙ್ ಲುಗಂತದ ಮೇಲೆ ವರ್ತಮಾನಾರ್ಥದಲ್ಲಿ ಲಙ್. ಅಥವಾ **ಬಹುಲಂ ಛಂದಸಿ** ಎಂಬುದರಿಂದ ಶಪಿಗೆ ಶ್ಲು ಆದೇಶ. ಪ್ರಥಮಪುರುಷಬಹುವಚನಾಂತರೂಪ **ಬಹುಲಂ ಛಂದಸ್ಯಮಾಙ್ಯೋಗೇಪಿ** ಎಂಬುದರಿಂದ ಅಡಾಗಮ ಬರುವುದಿಲ್ಲ. ತಿಙಂತನಿಘಾತಸ್ವರ ಬರುತ್ತದೆ.

**ಜುಷಂತೇ**—ಜುಷೀ ಪ್ರೀತಿಸೇವನಯೋಃ ಧಾತು. ಛಾಂದಸವಾಗಿ ಲಙ್. ಪ್ರಥಮಪುರುಷಬಹುವಚನಾಂತರೂಪ **ಬಹುಲಂ ಛಂದಸ್ಯ** —ಎಂಬುದರಿಂದ ಅಡಾಗಮ ಬರುವುದಿಲ್ಲ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

**ಉಪಸ್ತುತಿಮ್**—ಷ್ಟುಞ್ ಸ್ತುತೌ ಧಾತು. **ಸ್ತ್ರಿಯಾಂ ಕ್ತಿನ್** (ಪಾ. ಸೂ. ೩-೩-೯೪) ಎಂಬುದರಿಂದ ಭಾವಾರ್ಥದಲ್ಲಿ ಕ್ತಿನ್ ಪ್ರತ್ಯಯ. **ತಾದೌ ಚ ನಿತಿ** (ಪಾ. ಸೂ. ೬-೨-೫೦) ಎಂಬುದರಿಂದ ಗತಿಗೆ (ಉಪ) ಪ್ರಕೃತಿಸ್ವರ ಬರುತ್ತದೆ.

**ಭರಮಾಣಸ್ಯ**—ಭೃಞ್ ಭರಣೇ. ಲಡರ್ಥದಲ್ಲಿ ಶಾನಚ್ ಪ್ರತ್ಯಯ. ಶಪ್ ವಿಕರಣ. **ಆನೇಮುಕ್** ಎಂಬುದರಿಂದ ಮುಕಾಗಮ. **ತಾಸ್ಯನುದಾತ್ತೇತ್** ಸೂತ್ರದಿಂದ ಲಸಾರ್ವಧಾತುಕ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಕಾರೋಃ**—ಡುಕೃಞ್ ಕರಣೇ ಧಾತು. **ಕೃವಾಪಾ** (ಉ. ಸೂ. ೧-೧) ಎಂಬುದರಿಂದ ಉಣ್ ಪ್ರತ್ಯಯ **ಅಚೋಞ್ಣಿತಿ** ಎಂಬುದರಿಂದ ವೃದ್ಧಿ. ರಪರವಾಗಿ ಬರುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ॥೨॥



ಸಂಹಿತಾಪಾಠಃ

## ನಿತ್ಯೇ ಚಿನ್ನು ಯಂ ಸದನೇ ಜಗೃಭ್ರೇ ಪ್ರಶಸ್ತಿಭಿರ್ದಧಿರೇ ಯಜ್ಞಿಯಾಸಃ ।
## ಪ್ರ ಸೂ ನಯಂತ ಗೃಭಯಂತ ಇಷ್ಟಾವಶ್ವಾಸೋ ನ ರಥ್ಯೋ ರಾರಹಾಣಾಃ ॥ ೩ ॥

। ಪದಪಾಠಃ ।

ನಿತ್ಯೇ । ಚಿತ್ । ನು । ಯಂ । ಸದನೇ । ಜಗೃಭ್ರೇ । ಪ್ರಶಸ್ತಿऽಭಿಃ । ದಧಿರೇ । ಯಜ್ಞಿಯಾಸಃ ।

ಪ್ರ । ಸು । ನಯಂತ । ಗೃಭಯಂತಃ । ಇಷ್ಟೌ । ಅಶ್ವಾಸಃ । ನ । ರಥ್ಯಃ । ರರಹಾಣಾಃ ॥ ೩ ॥

ಸಾಯಣಭಾಷ್ಯಂ

ಯಜ್ಞಿಯಾಸೋ ಯಜ್ಞಯೋಗ್ಯಾ ಯಜಮಾನಾ ಋತ್ವಿಜೋ ವಾ ಯಂ ಮಥನೇನೋತ್ಪನ್ನಮಗ್ನಿಂ ನಿತ್ಯೇ ಚಿತ್ಸದನೇ ನಿತ್ಯ ಏವ ಗಾರ್ಹಪತ್ಯಲಕ್ಷಣೇಽಗ್ನ್ಯಾಸಾದನಸ್ಥಾನೇ ನು ಕ್ಷಿಪ್ರಂ ಜಗೃಭ್ರೇ ಗೃಹ್ಣಂತಿ ॥ ಗ್ರಹೇರ್ಲಿಟೇರಯೋ ರ ಇತಿ ರೇಭಾವಃ । ಹೃಗ್ರಹೋರ್ಭ ಇತಿ ಭತ್ವಂ ॥ ನಿತ್ಯಂ ಗತಶ್ರಿಯೋ ಧ್ರಿಯತೇ ನಿತ್ಯಂ ಗಾರ್ಹಪತ್ಯಮಿತಿ ಸೂತ್ರಾದ್ಗಾರ್ಹಪತ್ಯೋ ನಿತ್ಯಃ । ತದಾಶ್ರಯತ್ವಾತ್ಸದನಮಪಿ ನಿತ್ಯ

ಮುಚ್ಯತೇ । ಗೃಹೀತ್ವಾ ಪ್ರಶಸ್ತಿಭಿಃ ಪ್ರಶಂಸಾಭಿಃ ಸ್ತುತಿಭಿರ್ದಧಿರೇ । ಧಾರಯಂತ್ಯಾಹವನೀಯಾರ್ಥಂ । ಧೃತ್ವಾ ಚೇಷ್ಟಾವೇಷಣಸಾಧನೇ ಯಜ್ಞೇ ನಿಮಿತ್ತಭೂತೇ ಸತಿ ಗೃಭಯಂತ ಋತ್ವಿಜಃ ಪ್ರ ಸೂ ನಯಂತೆ । ಸುಷ್ಠು ಪ್ರಣಯಂತಿ । ತತ್ರ ದೃಷ್ಟಾಂತಃ । ರರಹಾಣಾ ರಂಹಸಾ ಗಚ್ಛಂತಃ ॥ ರಹಿ ಗತೌ । ಛಾಂದಸಸ್ಯ ಲಿಟಃ ಕಾನಚ್ । ಅನಿತ್ಯಮಾಗಮಶಾಸನಮಿತಿ ನುಮಭಾವಃ ॥ ರಥ್ಯೋ ರಥವಂತಸ್ತತ್ರ ನಿಯುಕ್ತಾಃ ॥ ಛಂದಸೀ-ವನಿಪಾವಿತಿ ರಥಶಬ್ದಾನ್ಮತ್ವರ್ಥೀಯ ಈಕಾರಃ ॥ ಅಶ್ವಾಸೋ ನಾಶ್ವಾ ಇವ । ತೇ ಯಥಾ ಧೃತ್ವಾ ರಥ-ಸ್ವಾಮಿನಮಭಿಮತದೇಶಂ ನಯಂತಿ ತದ್ವತ್ ॥

ಪ್ರತಿಪದಾರ್ಥ

**ಯಜ್ಞಿಯಾಸಃ**—ಯಜ್ಞಯೋಗ್ಯರಾದ ಯಜಮಾನರು ಅಥವಾ ಋತ್ವಿಕ್ಕುಗಳು । **ಯಂ**—(ಅರಣಿ ಮಥನದಿಂದ ಉತ್ಪನ್ನನಾದ) ಯಾವ ಆದೇ ಅಗ್ನಿಯನ್ನು । **ನಿತ್ಯೇ ಚಿತ್ ಸದನೇ**—ಗಾರ್ಹಪತ್ಯರೂಪವಾದ ಶಾಶ್ವತಸ್ಥಾನದಲ್ಲಿ । **ಸು**—ಜಾಗರೂಕತೆಯಿಂದ । **ಜಗೃಭ್ರೇ** – ಹಿಡಿದಿರುತ್ತಾರೆ. (ಮತ್ತು) । **ಪ್ರಶಸ್ತಿಭಿಃ**—ಸ್ತೋತ್ರಗಳಿಂದ । **ದಧಿರೇ**—(ಆಹವನೀಯದ ಯೋಗ್ಯತಾಸಂಪಾದನೆಗಾಗಿ) ಅಲ್ಲಿಯೇ ನಿಲ್ಲಿಸಿರುತ್ತಾರೆ । **ಇಷ್ಟೌ**—ಯಜ್ಞದ ನಿಮಿತ್ತವಾಗಿ । **ಗೃಭಯಂತಃ**—(ಹೀಗೆ) ಹಿಡಿದಿರುವ ಋತ್ವಿಕ್ಕುಗಳು । **ರರಹಾಣಾಃ**—ವೇಗವಾಗಿ ಓಡುವುವೂ **ರಥ್ಯಃ**—ರಥಕ್ಕೆ ಕಟ್ಟಿರುವವೂ ಆದ । **ಅಶ್ವಾಸೋ ನ**—ಕುದುರೆಗಳು ರಥದ ಯಜಮಾನನನ್ನು ಉದ್ದಿಷ್ಟಸ್ಥಾನಕ್ಕೆ ಕರೆದುಕೊಂಡು ಹೋಗುವಂತೆ । **ಪ್ರ ಸೂ ನಯಂತೆ**— ಶ್ರದ್ಧೆಯಿಂದ ಯಜ್ಞಪ್ರದೇಶಕ್ಕೆ ತೆಗೆದುಕೊಂಡು ಹೋಗುತ್ತಾರೆ ॥

ಭಾವಾರ್ಥ

ಯಜ್ಞವನ್ನು ನೆರವೇರಿಸಲು ಯೋಗ್ಯರಾದ ಋತ್ವಿಕ್ಕುಗಳು ಅಥವಾ ಯಜಮಾನರು ಅರಣಿ ಮಥನದಿಂದ ಉತ್ಪನ್ನನಾದ ಅಗ್ನಿಯನ್ನು ಗಾರ್ಹಪತ್ಯರೂಪವಾದ ಶಾಶ್ವತ ಸ್ಥಾನದಲ್ಲಿ ಜಾಗರೂಕತೆಯಿಂದ ಹಿಡಿದಿರುತ್ತಾರೆ. ಮತ್ತು ಸ್ತೋತ್ರಗಳಿಂದ ಆಹವನೀಯಾರ್ಥವಾಗಿ ಅಲ್ಲಿಯೇ ನಿಲ್ಲಿಸಿಕೊಂಡಿರುತ್ತಾರೆ. ಅನಂತರ ಯಜ್ಞದ ನಿಮಿತ್ತವಾಗಿ ಹೀಗೆ ಹಿಡಿದಿರುವ ಋತ್ವಿಕ್ಕುಗಳು. ವೇಗವಾಗಿ ಓಡುವುವೂ. ರಥಕ್ಕೆ ಕಟ್ಟಿರುವುವೂ ಆದ ಕುದುರೆಗಳು ರಥದ ಯಜಮಾನನ್ನು ಉದ್ದಿಷ್ಟಸ್ಥಾನಕ್ಕೆ ಕರೆದುಕೊಂಡುಹೋಗುವಂತೆ ಅಗ್ನಿಯನ್ನೂ ಸಹ ಶ್ರದ್ಧೆಯಿಂದ ಯಜ್ಞಪ್ರದೇಶಕ್ಕೆ ತೆಗೆದುಕೊಂಡು ಹೋಗುತ್ತಾರೆ.

English Tranlation

Him, whom the worshippers lay hold of in his perpetual abode, they detain by their praises, and the holders convey him diligently to the sacrifice, as rapid coursers, harnessed to a car, (bear the rider to his-destination).

ವಿಶೇಷವಿಷಯಗಳು

**ರರಹಾಣಾ**—ಗತ್ಯರ್ಥಕವಾದ ರಹಿ ಧಾತುವಿನಿಂದ ನಿಷ್ಪನ್ನವಾಗಿ **ರಂಹಸಾ ಗಚ್ಛಂತಃ** । ವೇಗವಾಗಿ ಓಡತಕ್ಕವುವೆಂದು ಅಶ್ವಗಳಿಗೆ ವಿಶೇಷಣವಾಗಿದೆ.

**ಆ ತ್ವಾ ಜುವೋ ರಾರಹಾಣಾ ಅಭಿ ಪ್ರಯೋ ವಾಯೋ ವಹಂತ್ವಿಹ ಪೂರ್ವಪೀತಯೇ ಸೋಮಸ್ಯ ಪೂರ್ವಪೀತಯೇ ।**

(ಋ. ಸಂ. ೧-೧೩೪-೧)

ಇತ್ಯಾದಿ ಋಕ್ಕುಗಳಲ್ಲೂ ಇದೇ ಅರ್ಥವನ್ನು ಕೊಡುತ್ತಾ ಅಗಸ್ತ್ಯಳಿಗೆ ವಿಶೇಷಣವಾಗಿ ಉಪಯೋಗಿಸಲ್ಪಟ್ಟಿದೆ

**ನಿತ್ಯೇ ಚಿತ್ಸದನೇ**—ಗಾರ್ಹಪತ್ಯಲಕ್ಷಣೇ ಅಗ್ನ್ಯಾಯಾವನಸ್ಥಾನೇ ಶಾಶ್ವತವಾದುದೂ, ಗಾರ್ಹಪತ್ಯ ರೂಪವಾದುದೂ ಆದ ಅಗ್ನಿಪ್ರತಿಷ್ಠಾಪನಾಸ್ಥಾನದಲ್ಲಿ ಎಂದರ್ಥ.

**ಇಷ್ಟ್ವೋ** ಇಷ್ಟಿಶಬ್ದದ ಅರ್ಥವನ್ನು ಹಿಂದಿನ ಸೂಕ್ತದಲ್ಲಿ ವಿವರಿಸಿದೆ.

### ವ್ಯಾಕರಣಪ್ರಕ್ರಿಯಾ

**ನಿತ್ಯೇ**—**ತ್ಯಪ್ ನೇರ್ಧ್ರುವ ಇತಿ ವಕ್ತವ್ಯಮ್** ಎಂಬ ವಚನದಿಂದ ನಿ ಎಂಬುದಕ್ಕೆ ತ್ಯಪ್ ಪ್ರತ್ಯಯ ಪಿತ್ತಾದುದರಿಂದ ಅನುದಾತ್ತವಾಗುತ್ತದೆ.

**ಜಗೃಭ್ರೇ**—ಗ್ರಹ ಉಪಾದಾನೇ ಧಾತು. ಛಾಂದಸವಾಗಿ ವರ್ತಮಾನಾರ್ಥದಲ್ಲಿ ಲಿಟ್. **ಇರಯೋರೇ** ಎಂಬುದರಿಂದ ಪ್ರತ್ಯಯಕ್ಕೆ ರೇ ಆದೇಶ. ಧಾತುವಿಗೆ ದ್ವಿತ್ವ ಬಂದಾಗ **ಕುಹೋಶ್ಚುಃ** ಎಂಬುದರಿಂದ ಅಭ್ಯಾಸಕ್ಕೆ ಜಕಾರಾದೇಶ. **ಹೃಗ್ರಹೋರ್ಭಶ್ಛಂದಸಿ** ಎಂಬುದರಿಂದ ಧಾತುಹಕಾರಕ್ಕೆ ಭತ್ವ. ಯದ್ಯೋಗವಿರುವುದರಿಂದ ನಿಘಾತಸ್ವರಪ್ರತಿಷೇಧ ಬರುತ್ತದೆ. ಪ್ರತ್ಯಯದಿಂದ ಅಂತೋದಾತ್ತವಾಗುತ್ತದೆ.

**ಪ್ರಶಸ್ತಿಭಿಃ**—ಶಂಸು ಸ್ತುತೌ ಧಾತು. ಭಾವಾರ್ಥದಲ್ಲಿ **ಕ್ತಿನ್** ಪ್ರತ್ಯಯ. **ಅನಿದಿತಾಂಹಲ**—ಸೂತ್ರದಿಂದ ಉಪಧಾನಕಾರಲೋಪ **ತಾದೌ ಚ ನಿತಿ** (ಪಾ. ಸೂ. ೬-೨-೫೦) ಎಂಬುದರಿಂದ ಗತಿಗೆ ನಿಘಾತಸ್ವರ ಬರುತ್ತದೆ. ತೃತೀಯಾಬಹುವಚನಾಂತರೂಪ.

**ದಧಿರೇ**—ಡುಧಾಞ್ ಧಾರಣಪೋಷಣಯೋಃ ಧಾತು. ಲಿಟ್ ಪ್ರಥಮಪುರುಷಬಹುವಚನಾಂತರೂಪ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಯಜ್ಞಿಯಾಸಃ**—ಯಜ್ಞಮರ್ಹಂತಿ ಇತಿ ಯಜ್ಞಿಯಾಸಃ **ಯಜ್ಞರ್ತ್ವಿಗ್ಭ್ಯಾಂಘಖಞೌ** (ಪಾ. ಸೂ. ೫-೧-೭೧) ಎಂಬುದರಿಂದ ಘ ಪ್ರತ್ಯಯ. **ಆಯನೇಯೀನೀಯಿ**— (ಪಾ. ಸೂ. ೭-೧-೨) ಎಂಬುದರಿಂದ ಅದಕ್ಕೆ ಇಯಾದೇಶ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

**ಸು**—**ನಿಪಾತಸ್ಯ ಚ** (ಪಾ. ಸೂ ೬-೩-೧೩೬) ಎಂಬುದರಿಂದ ದೀರ್ಘ ಬರುತ್ತದೆ

**ನಯಂತ**—ಣೀಞ್ ಪ್ರಾಪಣೇ ಧಾತು. ಛಾಂದಸವಾಗಿ ವರ್ತಮಾನಾರ್ಥದಲ್ಲಿ ಲಙ್. ಪ್ರಥಮಪುರುಷ ಬಹುವಚನಾಂತರೂಪ. ಛಾಂದಸವಾಗಿ ಅಂಗಕ್ಕೆ ಅಡಾಗಮ ಬರುವುದಿಲ್ಲ ತಿಙಂತನಿಘಾತಸ್ವರ ಬರುತ್ತದೆ.

**ಗೃಭಯಂತಃ**—ಗ್ರಹ ಉಪಾದಾನೇ ಧಾತು. ಇದಕ್ಕೆ ಣಿಜಂತದ ಮೇಲೆ ಲಡರ್ಥದಲ್ಲಿ ಶತೃ ಪ್ರತ್ಯಯ. ಶಪ್ ವಿಕರಣ **ಹೃಗ್ರಹೋರ್ಭಶ್ಛಂದಸಿ** ಎಂಬುದರಿಂದ ಧಾತುಹಕಾರಕ್ಕೆ ಭಕಾರಾದೇಶ. ಲಸಾರ್ವಧಾತುಕ ಅನುದಾತ್ತವಾಗುವುದರಿಂದ ಣಿಚ್‌ಸ್ವರ ಉಳಿಯುತ್ತದೆ.

**ಅಶ್ವಾಸಃ**—ಜಸ್ ಪರವಾದಾಗ **ಆಜ್ಜಸೇರಸುಕ್** (ಪಾ. ಸೂ. ೭-೧-೫೦) ಎಂಬುದರಿಂದ ಅದಕ್ಕೆ ಅಸುಕಾಗಮ.

**ರಥ್ಯಃ**—ರಥಃ ಯೇಷಾಮಸ್ತಿ ಇತಿ ರಥ್ಯಃ **ಛಂದಸೀವನಿಪೌ** (ಪಾ. ಸೂ. ೫-೨-೧೨೨-೨) ಎಂಬುದ ರಿಂದ ಮತ್ವರ್ಥದಲ್ಲಿ ಈಕಾರಪ್ರತ್ಯಯ. ಜಸ್ ಪರವಾದಾಗ ಯಣಾದೇಶ. ಉದಾತ್ತಸ್ಥಾನದಲ್ಲಿ ಯಣಾದೇಶ ಬಂದು ಅದರ ಪರದಲ್ಲಿ ಅನುದಾತ್ತವಿಭಕ್ತಿ ಬಂದುದರಿಂದ **ಉದಾತ್ತಸ್ವರಿತಯೋರ್ಯಣಃ** (ಪಾ. ಸೂ. ೮-೨-೪) ಎಂಬು ದರಿಂದ ಅದಕ್ಕೆ ಸ್ವರಿತಸ್ವರ ಬರುತ್ತದೆ.

**ರರಹಾಣಾಃ**—ರಹಿ ಗತೌ ಧಾತು. ಛಾಂದಸವಾಗಿ ಲಿಟ್ ಬಂದಾಗ **ಲಿಟಃ ಕಾನಜ್ವಾ** (ಪಾ. ಸೂ. ೩-೨-೧೦೬) ಎಂಬುದರಿಂದ ಅದಕ್ಕೆ ಕಾನಜಾದೇಶ. **ಆಗಮಾನುಶಾಸನಮನಿತ್ಯಮ್** ಎಂಬ ಪರಿಭಾಷೆಯಿಂದ ಇದಿತ್ತಾ ದರೂ ನುಮಾಗಮ ಬರುವುದಿಲ್ಲ. ಪ್ರತ್ಯಯನಿಮಿತ್ತವಾಗಿ ಧಾತುವಿಗೆ ದ್ವಿತ್ವಾದಿ. **ಅಟ್‌ಕುಪ್ವಾಜ್**—ಸೂತ್ರದಿಂದ ಪ್ರತ್ಯಯ ನಕಾರಕ್ಕೆ ಣತ್ವ. **ಚಿತಃ** ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ॥ ೩ ॥

---------- :೦: ----------

ಸಂಹಿತಾಪಾಠಃ

## ಪುರೂಣಿ ದಸ್ಮೋ ನಿ ರಿಣಾತಿ ಜಂಭೈರಾದ್ರೋಚತೇ ವನ ಆ ವಿಭಾವಾ ।
## ಆದಸ್ಯ ವಾತೋ ಅನು ವಾತಿ ಶೋಚಿರಸ್ತುರ್ನ ಶರ್ಯಾಮಸನಾಮನು ದ್ಯೂನ್ ॥ ೪ ॥

ಪದಪಾಠಃ

**ಪುರೂಣಿ । ದಸ್ಮಃ । ನಿ । ರಿಣಾತಿ । ಜಂಭೈಃ । ಆತ್ । ರೋಚತೇ । ವನೇ । ಆ । ವಿಭಾಽವಾ ।**
**ಆತ್ । ಅಸ್ಯ । ವಾತಃ । ಅನು । ವಾತಿ । ಶೋಚಿಃ । ಅಸ್ತುಃ । ನ । ಶರ್ಯಾಂ । ಅಸನಾಂ । ಅನು ದ್ಯೂನ್ ॥ ೪ ॥**

। ಸಾಯಣಭಾಷ್ಯಂ ।

**ಅತ್ರ ದಾವಾಗ್ನಿರೂಪೇಣಾಯಂ ಸ್ತೂಯತೇ । ದಸ್ಮ ಉಪಕ್ಷಪಯಿತಾಯಮಗ್ನಿಃ ಪುರೂಣಿ ಬಹೂನಿ ವೃಕ್ಷಾದೀನಿ ನಿ ರಿಣಾತಿ । ನಿತರಾಂ ಹಿನಸ್ತಿ ॥ ರೀ ಗತಿರೇಷಣಯೋಃ । ಪ್ವಾದಿತ್ವಾದ್ಧ್ರಸ್ವಃ ॥ ಕೇನ ಸಾಧನೇನೇತಿ ತದುಚ್ಯತೇ । ಜಂಭೈರ್ದಂತಸ್ಥಾನೀಯಾಭಿರ್ಜ್ವಾಲಾಭಿಃ । ಆದ್ಬಾಹಾನಂತರಂ ವನೇ ವೃಕ್ಷಾದಿ- ಸಮೂಹಾತ್ಮಕೇ ವಿಭಾವಾ ವಿವಿಧಪ್ರಕಾಶಯುಕ್ತಃ ಸನ್ರೋಚತೇ । ದೀಪ್ತೋ ಭವತಿ । ಅದನಂತರಮಸ್ಯ ಶೋಚಿರ್ಜ್ವಾಲಾನುಕೂಲಂ ವಾತೋಽಗ್ನಿಸಖಿಭೂತೋ ವಾಯುರನು ದ್ಯೂನ್ । ಅನ್ವಿತಿ ವೀಪ್ಸಾರ್ಥೇ ।**

ಪ್ರತಿದಿನಮನುಕೂಲಂ ವಾತಿ । ಜ್ವಾಲಾ ಆದಾಯ ಗಚ್ಛತಿ । ತತ್ರ ದೃಷ್ಟಾಂತಃ । ಅಸ್ತುಃ ಕ್ಷೇಪ್ತುಃ ಸಕಾಶಾದಸನಾಂ ಗಚ್ಛಂತೀಂ ಶರ್ಯಾಂ ನ । ಶರೋ ನಾಮ ಹಿಂಸಾಸಾಧನಲೋಹಮಯಮಿಷುಮುಖಂ । ತತ್ಪ್ರಚುರಾಂ । ಯದ್ವಾ । ಶರೋ ನಾಮ ವಂಶಾವಾಂತರಜಾತೀಯಃ ಕಾಷ್ಠವಿಶೇಷಃ । ತದ್ವಿಕಾರಾಮಿಷುಮಿವ । ಶರ್ಯಾ ಇಷವಃ ಶರಮಯ್ಯ ಇತಿ ಯಾಸ್ಕಃ । ನಿ. ೫-೪ । ಯದ್ವಾ । ಶರ ಏವ ಶರ್ಯಾ । ಅಥವಾ । ಶರೋ ಹಿಂಸಾ । ತತ್ಕರೋತೀತಿ ಶರ್ಯೇಷುಃ । ತಾಂ ಯಥಾ ವಾಯುರ್ನೋದಕಜನ್ಯೋ ವೇಗೋ ವಾನುಕೂಲಂ ಪ್ರೇರಯತಿ ತದ್ವತ್ ॥

ಪ್ರತಿಪದಾರ್ಥ

**ದಸ್ಮಃ**—ದಾಹಾತ್ಮಕನಾದ ಅಗ್ನಿಯು । **ಪುರೂಣಿ**—ಅನೇಕ ವೃಕ್ಷಗಳನ್ನು । **ಜಂಭೈಃ**—ದಂತಸ್ಥಾನೀಯವಾದ ಜ್ವಾಲೆಗಳಿಂದ । **ನಿ ರಿಣಾತಿ**—ಸಂಪೂರ್ಣವಾಗಿ ದಹಿಸುತ್ತಾನೆ । **ಆತ್**—ಅನಂತರ । **ವನೇ**—ವೃಕ್ಷಭರಿತವಾದ ಕಾಡಿನಲ್ಲಿ । **ವಿಭಾವಾ**—ಅನೇಕವಿಧವಾಗಿ ಪ್ರಕಾಶಿಸುತ್ತಾ । **ರೋಚತೇ**—ಬೆಳಗುತ್ತಾನೆ । **ಆತ್**—ಅನಂತರ । **ವಾತಃ**—(ಇವನ ಸಖನಾದ) ವಾಯುವು । **ಅಸ್ತುಃ**—ಬಾಣವನ್ನು ಬಿಡುವ ಧನ್ವಿಯ ಹತ್ತಿರದಿಂದ । **ಅಸನಾಂ**—ವೇಗವಾಗಿ ಹೋಗುವ । **ಶರ್ಯಾಂ ನ**—ಬಾಣವನ್ನು ಕೊಂಡೊಯ್ಯುವಂತೆ । **ಅನು ದ್ಯೂನ್**—ಪ್ರತಿದಿನವೂ ಅನುಕೂಲವಾದ ರೀತಿಯಲ್ಲಿ । **ಅಸ್ಯ**—ಈ ಅಗ್ನಿಯ । **ಶೋಚಿಃ**—ಜ್ವಾಲೆಯನ್ನು (ಹೊತ್ತುಕೊಂಡು) **ವಾತಿ**—ಬೀಸುತ್ತಾನೆ ॥

ಭಾವಾರ್ಥ

ದಾಹಾತ್ಮಕನಾದ ಅಗ್ನಿಯು ಅನೇಕ ವೃಕ್ಷಗಳನ್ನು ತನ್ನ ದಂತಸ್ಥಾನೀಯವಾದ ಜ್ವಾಲೆಗಳಿಂದ ಸಂಪೂರ್ಣವಾಗಿ ದಹಿಸುತ್ತಾನೆ. ಅನಂತರ ವೃಕ್ಷಭರಿತವಾದ ಕಾಡಿನಲ್ಲಿ ಅನೇಕವಿಧವಾಗಿ ಪ್ರಕಾಶಿಸುತ್ತಾ ಬೆಳಗುತ್ತಾನೆ ಕೂಡಲೇ, ಇವನ ಸಖನಾದ ವಾಯುವು ಬಾಣವನ್ನು ಬಿಡುವ ಧನ್ವಿಯ ಹತ್ತಿರದಿಂದ ವೇಗವಾಗಿ ಹೋಗುವ ಬಾಣವನ್ನು ಕೊಂಡೊಯ್ಯುವಂತೆ ಪ್ರತಿದಿನವೂ ಅನುಕೂಲವಾದ ರೀತಿಯಲ್ಲಿ ಈ ಅಗ್ನಿಯ ಜ್ವಾಲೆಯನ್ನು ಹೊತ್ತುಕೊಂಡು ಬೀಸುತ್ತಾನೆ

## English Translation

The destroyer, (Agni), consumes numerous (tree) by his flames and shines with manifold radiance in the forest : the favouring wind blows (the flames) onwards day by day, like the swift arrows of an archer.

ವಿಶೇಷವಿಷಯಗಳು

ದಸ್ಮಃ—ದಸ್ಮ ಶಬ್ದಕ್ಕೆ ದಾಹಾತ್ಮಕನಾದುದು ಮತ್ತು ದರ್ಶನೀಯವಾದುದು ಎಂಬರ್ಥವಿರುವುದನ್ನು ಇದೇ ಭಾಗದಲ್ಲಿ ೧-೧೩೮-೪ನೇ ಋಕ್ಕಿನಲ್ಲಿ ತಿಳಿಸಿದೆ.

ಜಂಭೈಃ—ಈ ಪದದ ವಿಶೇಷಾರ್ಥವನ್ನು ೧-೧೪೩-೫ನೇ ಋಕ್ಕಿನಲ್ಲಿ ತಿಳಿಸಿದೆ. ಈ ಋಕ್ಕಿನಲ್ಲಿ ದಂತಸ್ಥಾನೀಯವಾದ ಜ್ವಾಲೆಗಳಿಂದ ಎಂದರ್ಥ.

**ಶರ್ಯಾಂ—ಶರ್ಯಾ ಅಂಗುಲಯೋ ಭವಂತಿ ಸೃಜಂತಿ ಕರ್ಮಾಣಿ । ಶರ್ಯಾ ಇಷವಃ ಶರಮಯ್ಯಃ । ಶರಃ ಶೃಣಾತೇಃ ।**

(ನಿ. ೫-೪).

ಈ ಪದಕ್ಕೆ ನಿರುಕ್ತಕಾರರು ಎರಡರ್ಥಗಳನ್ನು ಹೇಳಿದ್ದಾರೆ. ಮೊದಲನೆಯದಾಗಿ ಕರ್ಮಗಳನ್ನು ಸೃಜಿಸುವುದರಿಂದ (ನೆರವೇರಿಸುವುದರಿಂದ) ಬೆರಳುಗಳಿಗೆ **ಶರ್ಯ**ವೆಂಬ ಹೆಸರೆಂದೂ, ಎರಡನೆಯದಾಗಿ, ಶೀಳು ಎಂಬರ್ಥವನ್ನು ಕೊಡುವ **ಶೄ** ಧಾತುವಿನಿಂದ ನಿಷ್ಪನ್ನವಾಗಿ **ಶರ್ಯಾ** ಎಂದಾಗಿದೆಯೆಂದೂ ಈ ಪದದ ನಿರ್ವಚನವನ್ನು ತೋರಿಸಿದ್ದಾರೆ. ಅನಂತರ—

**ಅಭ್ಯಭಿ ಹಿ ಶ್ರವಸಾ ತತರ್ದಿಥೋತ್ಸಂ ನ ಕಂ ಚಿಜ್ಜನಪಾನಮಕ್ಷಿತಂ ।**
**ಶರ್ಯಾಭಿರ್ನ ಭರಮಾಣೋ ಗಭಸ್ತ್ಯೋಃ ॥**

(ಋ. ಸಂ. ೯-೧೧೦-೫)

ಎಂಬ ಋಕ್ಕನ್ನುದಹರಿಸಿದ್ದಾರೆ ದ.ಗಾರ್ಗಾಚಾರ್ಯರು ಈ ಋಕ್ಕನ್ನು ವಿವರಿಸುತ್ತಾ **ಶರ್ಯಾಭಿರ್ನ ಭರಮಾಣಃ । ಶರಮಯೀಭಿಃ ಇಷುಭಿಃ ಯಥಾ ಕಶ್ಚಿತ್ ಕಂಚಿತ್ ಅಭಿತರ್ದಯೇತ್** । ಯಾರಾದರೂ ಬಾಣಗಳಿಂದ ಹಿಂಸಿಸಿದ್ದೇ ಆದರೆ ಎಂದು **ಶರ್ಯಾಭಿಃ** ಎನ್ನುವ ಪದಕ್ಕೆ ಬಾಣಗಳಿಂದ ಎಂದರ್ಥ ಮಾಡಿದ್ದಾರೆ. ಆದರೆ ಸಾಯಣರು ಆ ಪದಕ್ಕೆ **ಅಂಗುಲೀಭಿಃ** ಬೆರಳುಗಳಿಂದ ಎಂದರ್ಥಮಾಡಿದ್ದಾರೆ. ಎರಡರ್ಥವೂ ಸಾಧ್ಯವಾದುದರಿಂದ ಎರಡೂ ಹೊಂದಿಕೊಳ್ಳುತ್ತವೆ. ಪ್ರಕೃತವಾದ ಋಕ್ಕಿನಲ್ಲಿ ಸಾಯಣರು **ಶರೋ ನಾಮ ಹಿಂಸಾಸಾಧನಲೋಹಮಯಮಿಷುಮುಖಂ । ತತ್ಪ್ರಚುರಾಂ । ಯದ್ವಾ ಶರೋ ನಾಮ ವಂಶಾನಾಂತರಜಾತೀಯಃ ಕಾಷ್ಠವಿಶೇಷಃ। ತದ್ವಿಕಾರಾಮಿಷುಮಿವ । ಯದ್ವಾ ಶರ ಏವ ಶರ್ಯಾ । ಅಥವಾ ಶರೋ ಹಿಂಸಾ ತತ್ಸರೋತೀತಿ ಶರ್ಯಾ ಇಷುಃ ।** ಹಿಂಸಾಸಾಧನವಾದುದೂ ಲೋಹಮಯವಾದುದೂ ಆದ ಬಾಣವೆಂದಾಗಲಿ, ಅಥವಾ ಹಿಂಸಾತ್ಮಕವಾದುದರಿಂದಲೇ ಇದಕ್ಕೆ ಹೆಸರೆಂದಾಗಲಿ, ಈ ನಿರ್ವಚನವನ್ನು ತೋರಿಸಿದ್ದಾರೆ.

ವ್ಯಾಕರಣಪ್ರಕ್ರಿಯಾ

**ದಸ್ಮಃ**—ದಸು ಉಪಕ್ಷಯೇ ಧಾತು. ಅಂತರ್ಭಾವಿತಣ್ಯರ್ಥಕವಾದ ಧಾತು. **ಇಷಿಯುಧೀಂಧಿ**—(ಉ.ಸೂ. ಎಂಬುದರಿಂದ ಮಕ್ ಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ರಿಣಾತಿ**—ರೀ ಗತಿರೇಷಣಯೋಃ ಧಾತು ಲಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್ರತ್ಯಯ. **ಕ್ರ್ಯಾದಿಭ್ಯಃಶ್ನಾ** ಎಂಬುದರಿಂದ ಶ್ನಾವಿಕರಣ. **ಪ್ವಾದೀನಾಂ ಹ್ರಸ್ವಃ** (ಪಾ. ಸೂ. ೭-೩-೮೦) ಎಂಬುದರಿಂದ ಧಾತುವಿಗೆ ಹ್ರಸ್ವ. **ಅಟ್‌ಕುಪ್ವಾಙ್**—ಸೂತ್ರದಿಂದ ವಿಕರಣಕ್ಕೆ ಣತ್ವ. ತಿಙಂತ ನಿಘಾತಸ್ವರ ಬರುತ್ತದೆ.

**ರೋಚತೇ**—ರುಚ ದೀಪ್ತೌ ಧಾತು. ಲಟ್ ಪ್ರಥಮಪುರುಷ ಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ವಿಭಾವಾ**—ವಿವಿಧಾಃ ಭಾಃ ಯಸ್ಯ ಸಃ ವಿಭಾವಾ. **ಆತೋ ಮನಿನ್**—(ಪಾ. ಸೂ. ೩-೨-೭೪) ಎಂಬುದರಿಂದ ವನಿಪ್ ಪ್ರತ್ಯಯ. ಇದು ಪಿತ್ತಾದುದರಿಂದ ಅನುದಾತ್ತವಾಗುತ್ತದೆ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ

ವಾತಃ—ವಾ ಗತಿಗಂಧನಯೋಃ ಧಾತು. **ಹಸಿಮೃಗ್ರಿಣ್ವಾ**—(ಉ. ಸೂ. ೩-೩೬೬) ಎಂಬುದರಿಂದ ತನ್ ಪ್ರತ್ಯಯ. ಇದು ನಿತ್ತಾದುದರಿಂದ ಆದ್ಯುದಾತ್ತ ಸ್ವರ ಬರುತ್ತದೆ.

ವಾತಿ—ಪೂರ್ವೋಕ್ತವಾದ ಧಾತುವಿಗೆ ಲಟ್ ಪ್ರಥಮಪುರುಷ ಏಕವಚನದಲ್ಲಿ ವಾತಿ ಎಂದು ರೂಪವಾಗುತ್ತದೆ. ತಿಙಂತನಿಘಾತಸ್ವರ ಬರುತ್ತದೆ.

**ಅಸ್ತುಃ**—ಅಸು ಕ್ಷೇಪಣೇ. ಧಾತು. ಕರ್ತರಿಯಲ್ಲಿ ತೃನ್ ಪ್ರತ್ಯಯ. ಅಸ್ತೃ ಶಬ್ದವಾಗುತ್ತದೆ. ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಪಂಚಮೀ ಏಕವಚನ ಪರವಾದಾಗ **ಋತಉತ್** ಎಂಬುದರಿಂದ ಉತ್ವ. ರಪರವಾಗಿ ಬಂದಾಗ **ರಾತ್ಸಸ್ಯ** ಎಂಬುದರಿಂದ ಸಕಾರಕ್ಕೆ ಲೋಪ.

**ಶರ್ಯಾಣಾಮ್**—ಶರ ಏವ ಶರ್ಯಾ. **ಚತುರ್ವರ್ಣಾದಿಭ್ಯ ಉಪಸಂಖ್ಯಾನಮ್** ಎಂಬುದರಿಂದ ಷ್ಯಞ್ ಪ್ರತ್ಯಯ. **ಯಸ್ಯೇತಿ ಚ** ಸೂತ್ರದಿಂದ ಅಕಾರ ಲೋಪ. ಞಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಅಥವಾ ವಿಕಾರಾರ್ಥದಲ್ಲಿ ಯತ್ ಪ್ರತ್ಯಯ. **ಯತೋಽನಾವಃ** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಅಸನಾಮ್**— ಅಸು ಕ್ಷೇಪಣೇ. ಧಾತು. ಬಹುಲಗ್ರಹಣದಿಂದ ಕರ್ತರಿಯಲ್ಲಿ ಲ್ಯುಟ್ ಪ್ರತ್ಯಯ. **ಯುವೋರನಾಕೌ** (ಪಾ. ಸೂ. ೭-೧-೧) ಎಂಬುದರಿಂದ ಅನಾದೇಶ. ಘೃತಾದಿಯಲ್ಲಿ ಸೇರಿರುವುದರಿಂದ ಅಂತೋದಾತ್ತವಾಗುತ್ತದೆ. ॥ ೪ ॥

———— :o: ————

। ಸಂಹಿತಾಪಾಠಃ ।

ನ ಯಂ ರಿಪವೋ ನ ರಿಷಣ್ಯವೋ ಗರ್ಭೇ ಸಂತಂ ರೇಷಣಾ ರೇಷಯಂತಿ ।
ಅಂಧಾ ಅಪಶ್ಯಾ ನ ದಭನ್ನಭಿಖ್ಯಾ ನಿತ್ಯಾಸ ಈಂ ಪ್ರೇತಾರೋ ಅರಕ್ಷನ್ ।
॥ ೫ ॥

ಪದಪಾಠಃ

ನ । ಯಂ । ರಿಪವಃ । ನ । ರಿಷಣ್ಯವಃ । ಗರ್ಭೇ । ಸಂತಂ । ರೇಷಣಾಃ । ರೇಷಯಂತಿ ।
ಅಂಧಾಃ । ಅಪಶ್ಯಾಃ । ನ । ದಭನ್ । ಅಭಿऽಖ್ಯಾ । ನಿತ್ಯಾಸಃ । ಈಂ । ಪ್ರೇತಾರಃ । ಅರಕ್ಷನ್ ॥ ೫ ॥

॥ ಸಾಯಣಭಾಷ್ಯಂ ॥

ಯಮಗ್ನಿಂ ಗರ್ಭೇ ಗರ್ಭವದ್ರಕ್ಷಕೇಽರಣಿಮಧ್ಯೇ ಸಂತಂ ವರ್ತಮಾನಂ ರಿಪವೋ ನರಾ ನ ರೇಷಯಂತಿ ನ ದುಃಖಯಂತಿ । ತಥಾ ರಿಷಣ್ಯವೋಽನ್ಯೇ ಹಿಂಸಕಾಃ ॥ ದುರಸ್ಯುರ್ದ್ರವಿಣಸ್ಯುರ್ವೃಷಣ್ಯತಿ

ರಿಷಣ್ಯತಿ । ಪಾ. ೭-೪-೩೬ । ಇತಿ ಕ್ಯಚಿ ನಿಪಾತ್ಯತೇ । ಕ್ಯಾಚ್ಛಂದಸೀತ್ಯುಃ ॥ ನ ಹಿಂಸಂತಿ । ಕೀದೃಶಾಸ್ತೇ ರೇಷಣಾ ಹಿಂಸನಸ್ವಭಾವಾಃ । ಯದ್ವಾ । ತೈಃ ಕ್ರಿಯಮಾಣಾ ಹಿಂಸನಪ್ರಕಾರಾ ನ ಹಿಂಸಂತಿ । ಕಿಂಚಾಸ್ಯಾಭಿಖ್ಯಾಭಿತಃ ಖ್ಯಾತಿಂ ಮಾಹಾತ್ಮ್ಯಮಂಧಾ ಜ್ಞಾನಶಕ್ತಿರಹಿತಾ ಅವಿದ್ವಾಂಸಃ ಅತ ಏವಾಪಶ್ಯಾ ಅದ್ರಷ್ಟಾರಃ । ಯದ್ವಾ । ವಿದ್ವಾಂಸೋಽಪ್ಯಭಾವಯಿತಾರಃ । ಅನುಪಾಸಕಾ ಇತ್ಯರ್ಥಃ । ಈದೃಗ್ರೂಪಾ ಭಯೇಽಪಿ ನ ದಭನ್ । ನ ದಭ್ನುವಂತಿ । ನ ಹಿಂಸಂತಿ । ಲೌಕಿಕೋಪಕಾರೇಣಾಪಿ ಪ್ರಯೋಜಕತ್ವಾದಿತಿ ಭಾವಃ । ತರ್ಹ್ಯಸ್ಯ ಪಾರಮಾರ್ಥಿಕಂ ರೂಪಂ ಕೇ ಜಾನಂತೀತಿ ಚೇತ್ ಉಚ್ಯತೇ । ನಿತ್ಯಾಸೋ ನಿತ್ಯಾ ಅವಿಚಲಿತಭಕ್ತಯಃ ಅಗ್ನಿಹೋತ್ರಾದಿನಿತ್ಯಕರ್ಮರತಾ ವಾ । ಅಗ್ನ್ಯನುಗ್ರಹಾತ್ಸ್ವಯಮಪಿ ನಿತ್ಯಾ ಭವಿಷ್ಯಂತೀತಿ ಭಾವಿ ನಿತ್ಯತ್ವಮಾಶ್ರಿತ್ಯ ನಿತ್ಯಾ ಉಪಚರ್ಯಂತೇ । ತಾದೃಶಾ ಯಜಮಾನಾಃ ಪ್ರೇತಾರೋ ಯಜ್ಞಾದಿನಾ ತಮೇವ ತರ್ಪಯಿತಾರಃ ಸಂತ ಈಮೇನಮರಕ್ಷನ್ । ರಕ್ಷಂತಿ । ಯಜ್ಞಾದಿರೂಪೇಣ ಭಜಂತ ಇತ್ಯರ್ಥಃ ॥

ಪ್ರತಿಪದಾರ್ಥ

**ಗರ್ಭೇ**—ಅರಣಿಗಳ ನಡುವೆ ಗರ್ಭಸ್ಥವಾದ ಶಿಶುವಿನಂತೆ ರಕ್ಷಣೀಯವಾಗಿ । **ಸಂತಂ**—ಇರತಕ್ಕ । **ಯಂ**—ಯಾವ ಈ ಅಗ್ನಿಯನ್ನು । **ರಿಪವಃ**—(ಯಜ್ಞಕರ್ತರಲ್ಲದ) ಶತ್ರುರೂಪರಾದ ಮಾನವರು । **ನ ರೇಷಯಂತಿ**—ಹಿಂಸಿಸಲಾರರು । **ರೇಷಣಾಃ**—ಕೆಡುಕಿನ ಸ್ವಭಾವವುಳ್ಳ । **ರಿಷಣ್ಯವಃ**—ಇತರ ಹಿಂಸಕರೂ ಸಹ । **ನ**—ಹಿಂಸಿಸಲಾರರು । (ಮತ್ತು) **ಅಂಧಾಃ**—ಕುರುಡರಂತೆ ಜ್ಞಾನರಹಿತರಾದ ಅವಿದ್ವಾಂಸರು । **ಅಪಶ್ಯಾಃ**—ನೋಡಲು ಸಮರ್ಥರಲ್ಲದೇ । **(ಅಥವಾ)** ಜ್ಞಾನದಿಂದಕೂಡಿದವರಾದರೂ ಸಹ ಭಕ್ತಿಶ್ರದ್ಧೆಗಳೊಡನೆ ಪೂಜಿಸದೇ ಇರುವ ವಿದ್ವಾಂಸರೂ ಸಹ । **ಅಭಿಖ್ಯಾ**—ಪ್ರಸಿದ್ಧವಾದ ಅಗ್ನಿಯ ಮಾಹಾತ್ಮ್ಯವನ್ನು । **ನ ದಭನ್**—ಕುಂದುವಂತೆ ಮಾಡಲಾರರು । **ನಿತ್ಯಾಸಃ**—ಶಾಶ್ವತವಾದ ಭಕ್ತಿಶ್ರದ್ಧೆಗಳುಳ್ಳ । **ಪ್ರೇತಾರಃ**—ಯಜ್ಞಾದಿಗಳಿಂದ ಅಗ್ನಿಯನ್ನು ತೃಪ್ತಿಪಡಿಸುವ ಯಜಮಾನರು । **ಈಂ**—ಈ ಅಗ್ನಿಯನ್ನು । **ಅರಕ್ಷನ್**—ರಕ್ಷಿಸಿ ಭಜಿಸುತ್ತಾರೆ.

ಭಾವಾರ್ಥ

ಅರಣಿಗಳ ನಡುವೆ ಗರ್ಭಸ್ಥವಾದ ಶಿಶುವಿನಂತೆ ರಕ್ಷಣೀಯವಾಗಿ ಇರತಕ್ಕ ಈ ಅಗ್ನಿಯನ್ನು ಯಜ್ಞಕರ್ತರಲ್ಲದ ಶತ್ರುರೂಪರಾದ ಮಾನವರಾಗಲಿ, ಅಥವಾ ಕೆಡಕಿನ ಸ್ವಭಾವವುಳ್ಳ ಇತರ ಹಿಂಸಕರಾಗಲಿ ಹಿಂಸಿಸಲಾರರು. ಮತ್ತು ಕುರುಡರಂತೆ ಜ್ಞಾನರಹಿತರಾದ ಅವಿದ್ವಾಂಸರು ಇವನನ್ನು ತಿಳಿಯಲು ಸಮರ್ಥರಲ್ಲದೇ ಇದ್ದರೂ ಸಹ ಪ್ರಸಿದ್ಧವಾದ ಈ ಅಗ್ನಿಯ ಮಾಹಾತ್ಮ್ಯವನ್ನು ಕುಂದುವಂತೆ ಮಾಡಲಾರರು. ಶಾಶ್ವತವಾದ ಭಕ್ತಿಶ್ರದ್ಧೆಗಳಿಂದ ಕೂಡಿದವರೂ, ಯಜ್ಞಾದಿಗಳಿಂದ ತೃಪ್ತಿಪಡಿಸುವವರೂ ಆದ ಯಜಮಾನರು ಈ ಅಗ್ನಿಯನ್ನು ರಕ್ಷಿಸಿ ಭಜಿಸುತ್ತಾರೆ.

English Translation

The blind (of intellect), or those who see not (physically), detract not from his glory, whom no enemies, no malevolent adversaries, harm, even whilst yet in (his) embryo (condition); for his constant encouragers defend him.

**ಗರ್ಭೇ ಸಂತಂ—ಗರ್ಭವದ್ರಕ್ಷತೇ ಅರಣಿಮಧ್ಯೇ ।** ಅರಣಿಗಳ ನಡುವೆ ಗರ್ಭಸ್ಥವಾದ ಶಿಶುವಿನಂತೆ ಎಂದು ಸಾಯಣರು ಈ ಋಕ್ಕಿನಲ್ಲಿ ಅರ್ಥಮಾಡಿದ್ದರೂ ಸಹ,

**ಗರ್ಭೋ ಯೋ ಅಪಾಂ ಗರ್ಭೋ ವನಾನಾಂ ಗರ್ಭಶ್ಚ ಸ್ಥಾತಾಂ ಗರ್ಭಶ್ಚರಥಾಂ ।**
**ಅದ್ರೌ ಚಿದಸ್ಮಾ ಅಂತರ್ದುರೋಣೇ ವಿಶಾಂ ನ ವಿಶ್ವೋ ಅಮೃತಃ ಸ್ವಾಧೀಃ ॥**
(ಋ. ಸಂ. ೧-೭೦-೨)

ಎಂಬ ಋಕ್ಕಿನಲ್ಲಿ, (೧) **ಅಪಾಂ ಗರ್ಭಃ ಗರ್ಭವದಂತರ್ವರ್ತೀ ಅಪಾಂ ನಪಾತ್ಸಂಜ್ಞಃ । ಅಪಾಂನಪಾತ್** ಸಂಜ್ಞೆಯಿಂದ ಉದಕಗಳಲ್ಲಿ ಗರ್ಭರೂಪದಲ್ಲಿರತಕ್ಕವನು, (೨) **ವನಾನಾಂ ಅರಣ್ಯಾನಾಂ ಗರ್ಭಃ ದಾವಾಗ್ನಿ ರೂಪೇಣ ತನ್ಮಧ್ಯೇ ವರ್ತತೇ ।** ವನವೃಕ್ಷಗಳಲ್ಲಿ ದಾವಾಗ್ನಿರೂಪದಲ್ಲಿ ಅವುಗಳ ಅಂತರ್ವರ್ತಿಯಾಗಿರತಕ್ಕವನು (೩) **ಸ್ಥಾತಾಂ ಸ್ಥಾವರಾಣಾಂ ಕಾಷ್ಠಾದೀನಾಂ ಗರ್ಭಃ ಅಂತರವಸ್ಥಾತಾ ।** ಸ್ಥಾವರಗಳಾದ ಕಾಷ್ಠಾದಿಗಳಲ್ಲಿ ಅಡಗಿರುವವನು. (೪) **ಚರಥಾಂ ಚರಣವತಾಂ ಜಂಗಮಾನಾಂ ಗರ್ಭಃ । ಜಾಠರರೂಪೇಣ ದೇಹಮಧ್ಯೇ ಸ್ಥಿತಃ ।** ಜಂಗಮಾತ್ಮಕಗಳಾದ ದೇಹಗಳಲ್ಲಿ **ಜಾಠರಾಗ್ನಿ** ರೂಪದಲ್ಲಿರತಕ್ಕವನು ಇತ್ಯಾದಿಯಾಗಿ ನಾನಾ ವಸ್ತುಗಳಲ್ಲಿ ಅಂತರ್ವರ್ತಿಯಾಗಿರುವ ಅಗ್ನಿಯ ಗರ್ಭರೂಪವಾದ ಸ್ಥಿತಿಯನ್ನು ವರ್ಣಿಸಿದೆ.

**ಕ ಇಮಂ ವೋ ನಿಣ್ಯಮಾ ಚಿಕೇತ ವತ್ಸೋ ಮಾತೄರ್ಜನಯತ ಸ್ವಧಾಭಿಃ ।**
**ಬಹ್ವೀನಾಂ ಗರ್ಭೋ ಅಪಸಾಮುಪಸ್ಥಾನ್ಮಹಾನ್ಕವಿರ್ನಿಶ್ಚರತಿ ಸ್ವಧಾವಾನ್ ॥**
(ಋ. ಸಂ. ೧-೯೫-೪)

ಎಂಬಲ್ಲಿ **ಬಹ್ವೀನಾಂ ಗರ್ಭಃ** ಎನ್ನುವುದಕ್ಕೂ ಸಹ **ಬಹ್ವೀನಾಂ ಮೇಘಸ್ಥಾನಾಂ ಅಪಾಂ ಗರ್ಭಃ ವೈದ್ಯುತ ರೂಪೇಣ ಗರ್ಭಸ್ಥಾನೀಯಃ ಸಃ ಅಗ್ನಿಃ ।** ವಿದ್ಯುದ್ರೂಪದಲ್ಲಿ ಉದಕಗಳ ನಡುವೆ ಇರತಕ್ಕ ಅಗ್ನಿಯೆಂದು ಒಂದು ವಿಧವಾಗಿಯೂ, **ಬಹ್ವೀನಾಂ ಓಷಧೀನಾಂ ದಿಶಾಂ ವಾ ಗರ್ಭಃ ।** ಓಷಧಿಗಳೊಳಗೆ ಅಂತರ್ವರ್ತಿಯಾದವನು ಅಥವಾ ದಶದಿಕ್ಕುಗಳೊಳಗೆ ಸುಪ್ತನಾಗಿ ಗರ್ಭರೂಪದಲ್ಲಿರುವವನು ಎಂದು ಗರ್ಭರೂಪವಾದ ಅಗ್ನಿಯ ಸ್ವರೂಪವನ್ನು ಹೇಳುವಂತೆ ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಹೇಳಿದೆ.

**ಅಂಧಾಃ ಅಪಶ್ಯಾಃ**—ಇಲ್ಲಿ ಎರಡು ವಿಧವಾಗಿ ಅರ್ಥಮಾಡಿದೆ. ಮೊದಲನೆಯದಾಗಿ **ಅಂಧಾಃ—ಜ್ಞಾನ ಶಕ್ತಿರಹಿತಾ ಅವಿದ್ವಾಂಸಃ ಅತ ಏವ, ಅಪಶ್ಯಾಃ—ಅದ್ರಷ್ಟಾರಃ ।** ಜ್ಞಾನವೂ ಶಕ್ತಿಯೂ ಇಲ್ಲದಿರತಕ್ಕ ಅವಿದ್ವಾಂಸರು ಅನ್ಧರಂತಲೇ ಕುರುಡರು ನೋಡಲಸಮರ್ಥರಾಗಿರುವಂತೆ ಕರ್ಮಾದಿಗಳ ವೈಶಿಷ್ಟ್ಯವನ್ನು ತಿಳಿಯಲ ಸಮರ್ಥರು ಎಂದೂ, ಎರಡನೆಯದಾಗಿ. ಕೇವಲ ಜ್ಞಾನದಿಂದ ಕೂಡಿದವರಾದರೂ ಸಹ ಭಕ್ತಿಶ್ರದ್ಧೆಗಳೊಡನೆ ಪೂಜಿಸದೇ ಅಂಧಪ್ರಾಯರಾಗಿರುವ ವಿದ್ವಾಂಸರು ಎಂದೂ ವಿವರಿಸಿದೆ.

**ಅಭಿಖ್ಯಾ**—ಈ ಪದವು **ಪ್ರಜ್ಞಾ**ನಾಮಗಳಲ್ಲಿ ಪಠಿತವಾಗಿದೆ. (ನಿ ೩-೧೭) ಇಲ್ಲಿ **ಅಭಿತಃ ಖ್ಯಾತಿಂ ಮಾಹಾತ್ಮ್ಯಂ ।** ಸರ್ವತ್ರ ತನ್ನ ಮಹಿಮೆಯನ್ನು ಪಡೆದ ಪ್ರಸಿದ್ಧನಾದ ಅಗ್ನಿಯ ಮಾಹಾತ್ಮ್ಯವನ್ನು ಎಂದು ಅರ್ಥ ಮಾಡಿದ್ದಾರೆ.

**ಪ್ರೇತಾರಃ—ಯಜ್ಞಾದಿನಾ ತರ್ಪಯಿತಾರಃ ತರ್ಪಯಿತಾರಃ** । ಯಜ್ಞಾದಿಗಳಿಂದ ಅಗ್ನಿಯನ್ನು ತೃಪ್ತಿಪಡಿಸುವ ಯಜ್ಞಕರ್ತರು.

ವ್ಯಾಕರಣಪ್ರಕ್ರಿಯಾ

**ರಿಪವಃ**—ರಪ ವ್ಯಕ್ತಾಯಾಂ ವಾಚಿ ಧಾತು **ರಪೇರಿಚ್ಚೋಪಧಾಯಾಃ** (ಉ. ಸೂ. ೧-೨೭) ಎಂಬುದರಿಂದ ಕು ಪ್ರತ್ಯಯ. ಧಾತುವಿನ ಉಪಧೆಗೆ ಇತ್ವ.. ಅನಿಷ್ಟಂ ರಪತಿ ಇತಿ ರಿಪುಃ ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ರಿಷಣ್ಯವಃ**—ರಿಷ ಹಿಂಸಾಯಾಂ ಧಾತು. **ದುರಸ್ಯುರ್ದ್ರವಿಣಸ್ಯುರ್ವೃಷಣ್ಯತಿ ರಿಷಣ್ಯತಿ** (ಪಾ. ಸೂ. ೭-೪-೩೬) ಎಂಬುದರಿಂದ ಕ್ಯಚ್‌ಪ್ರತ್ಯಯದಿಂದ ನಿಪಾತಿತವಾಗಿದೆ **ಕ್ಯಾಚ್ಛಂದಸಿ** (ಪಾ. ಸೂ. ೩-೨-೧೭೦) ಎಂಬುದರಿಂದ ಕ್ಯಜಂತದ ಮೇಲೆ ಉ ಪ್ರತ್ಯಯ. **ಅತೋ ಲೋಪಃ** ಎಂಬುದರಿಂದ ಅಕಾರಲೋಪ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಪ್ರಥಮಾಬಹುವಚನಾಂತರೂಪ.

**ರೇಷಣಾಃ**—ರಿಷ ಹಿಂಸಾಯಾಂ ಧಾತು. ಕರ್ತರಿಯಲ್ಲಿ ಯುಚ್ ಪ್ರತ್ಯಯ. ಅದಕ್ಕೆ ಅನಾದೇಶ. ಚಿತ್ತ್ವಾದುದರಿಂದ ಅಂತೋದಾತ್ತಸ್ವರ ಬರುತ್ತದೆ.

**ರೇಷಯಂತಿ**—ಪೂರ್ವೋಕ್ತವಾದ ಧಾತುವಿಗೆ ಪ್ರೇರಣಾರ್ಥದಲ್ಲಿ **ಹೇತುಮತಿ ಚ** (ಪಾ. ಸೂ. ೩-೧-೨೬) ಎಂಬುದರಿಂದ ಣಿಚ್ ಪ್ರತ್ಯಯ. **ಪುಗಂತಲಘೂಪಧಸ್ಯ ಚ** ಎಂಬುದರಿಂದ ಲಘೂಪಧಗುಣ. ಲಟ್ ಪ್ರಥಮಪುರುಷಬಹುವಚನಾಂತರೂಪ. ಲಸಾರ್ವಧಾತುಕ ಅನುದಾತ್ತವಾಗುವುದರಿಂದ ಣಿಚ್ ಸ್ವರ ಉಳಿಯುತ್ತದೆ.

**ಅಪಶ್ಯಾಃ**—ನ ಪಶ್ಯಂತಿ ಇತಿ ಅಪಶ್ಯಾಃ ವ್ಯತ್ಯಯದಿಂದ ಅಂತೋದಾತ್ತಸ್ವರ ಬರುತ್ತದೆ.

**ದಭನ್**—ದಂಭು ದಂಭೇ. ಧಾತು. ವರ್ತಮಾನಾರ್ಥದಲ್ಲಿ ಛಾಂದಸವಾಗಿ ಲಙ್. ಪ್ರಥಮಪುರುಷ ಬಹುವಚನದಲ್ಲಿ ಝಿಗೆ ಅಂತಾದೇಶ. ಇಕಾರಲೋಪ. **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಲುಕ್. ಪ್ರತ್ಯಯಕ್ಕೆ ಙಿತ್ವಾದೇಶವಿರುವುದರಿಂದ ಧಾತುವಿನ ಉಪಧಾ ನಕಾರಕ್ಕೆ ಲೋಪ. **ಬಹುಲಂ ಛಂದಸ್ಯಮಾಙ್ಯೋಗೇಽಪಿ** ಎಂಬುದರಿಂದ ಅಡಾಗಮ ಬರುವುದಿಲ್ಲ. ತಿಙಂತನಿಘಾತಸ್ವರ ಬರುತ್ತದೆ.

**ನಿತ್ಯಾಸಃ**—ನಿತ್ಯ ಶಬ್ದಕ್ಕೆ ಜಸ್ ಪರವಾದಾಗ **ಆಜ್ಜಸೇರಸುಕ್** (ಪಾ. ಸೂ. ೭-೧-೫೦) ಎಂಬುದರಿಂದ ಅದಕ್ಕೆ ಅಸುಕಾಗಮ.

**ಪ್ರೇತಾರಃ**—ಪ್ರೀಞ್ ತರ್ಪಣೇ. ಧಾತು. ಕರ್ತರಿಯಲ್ಲಿ ತೃಚ್ ಪ್ರತ್ಯಯ. **ಆರ್ಧಧಾತುಕಸ್ಯೇಡ್ವಲಾದೇಃ** ಎಂಬುದರಿಂದ ಇಡಾಗಮ. ಗುಣ. ಚಿತ್ತ್ವಾದುದರಿಂದ ಅಂತೋದಾತ್ತಸ್ವರ ಬರುತ್ತದೆ. ಪ್ರಥಮಾ ಬಹುವಚನಾಂತರೂಪ.

**ಅರಕ್ಷನ್**—ರಕ್ಷ ಪಾಲನೇ. ಧಾತು. ಛಾಂದಸವಾಗಿ ವರ್ತಮಾನಾರ್ಥದಲ್ಲಿ ಲಙ್. ಪ್ರಥಮಪುರುಷ ಬಹುವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೫ ॥

ಇಲ್ಲಿಗೆ ನೂರನವಲತ್ತೆಂಟನೆಯ ಸೂಕ್ತವು ಮುಗಿದುದು.

—— :0: ——

# ನೂರನಲವತ್ತೊಂಭತ್ತನೆಯ ಸೂಕ್ತವು

ಮಹಃ ಸ ಇತಿ ಪಂಚರ್ಚಂ ನವಮಂ ಸೂಕ್ತಂ ದೈರ್ಘತಮಸಂ ವೈರಾಜಮಾಗ್ನೇಯಂ ದಶಕಾಸ್ತ್ರಯೋ ವಿರಾಳೇಕಾದಶಕಾ ವಾ । ಅನು. ೬.೭ । ಇತ್ಯುಕ್ತಲಕ್ಷಣಸದ್ಭಾವಾತ್ । ತಥಾ ಚಾನುಕ್ರಾಂತಂ । ಮಹಃ ಸ ವೈರಾಜಮಿತಿ ॥ ವಿನಿಯೋಗೋ ಲೈಂಗಿಕಃ ॥

ಅನುವಾದವು—**ಮಹಃ ಸ** ಎಂಬ ಈ ಸೂಕ್ತವು ಇಪ್ಪತ್ತೊಂದನೆಯ ಅನುವಾಕದಲ್ಲಿ ಒಂಭತ್ತನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವುವು. ಈ ಸೂಕ್ತಕ್ಕೆ ದೀರ್ಘತಮಾ ಔಚಥ್ಯನೆಂಬುವನು ಋಷಿಯು. ಅಗ್ನಿಯು ದೇವತೆಯು. ವಿರಾಟ್ ಛಂದಸ್ಸು. ಅನುಕ್ರಮಣಿಕೆಯಲ್ಲಿ **ಮಹಃ ಸ ವೈರಾಜಂ** ಎಂದು ಹೇಳಿ **ದಶಕಾಸ್ತ್ರಯೋ ವಿರಾಳೇಕಾದಶಕಾ** ವಾ ಎಂದು ವಿರಾಟ್ ಛಂದಸ್ಸಿನ ಲಕ್ಷಣವನ್ನೂ ಹೇಳಿರುವುದು. ವಿನಿಯೋಗವು ಲೈಂಗಿಕವು.

॥ ಓಂ ॥

## ಸೂಕ್ತ—೧೪೯

॥ ಮಂಡಲ—೧ ॥ ಅನುವಾಕ—೨೧ ॥ ಸೂಕ್ತ—೧೪೯ ॥

॥ ಅಷ್ಟಕ— ೨ ॥ ಅಧ್ಯಾಯ— ೨ ॥ ವರ್ಗ— ೧೮ ॥

ಸೂಕ್ತದಲ್ಲಿರುವ ಋಕ್ಸಂಖ್ಯೆ-೫ ॥

॥ ಋಷಿಃ—ದೀರ್ಘತಮಾ ಔಚಥ್ಯಃ ॥

॥ ದೇವತಾ—ಅಗ್ನಿಃ ॥

॥ ಛಂದಃ—ವಿರಾಟ್ ॥

ಸಂಹಿತಾಪಾಠಃ

ಮಹಃ ಸ ರಾಯ ಏಷತೇ ಪತಿರ್ದನ್ನಿನ ಇನಸ್ಯ ವಸುನಃ ಪದ ಆ ।

ಉಪ ಧ್ರಜಂತಮದ್ರಯೋ ವಿಧನ್ನಿತ್ ॥ ೧ ॥

ಪದಪಾಠಃ

ಮಹಃ । ಸಃ । ರಾಯಃ । ಆ । ಈಷತೇ । ಪತಿಃ । ದನ್ । ಇನಃ । ಇನಸ್ಯ । ವಸುನಃ । ಪದೇ । ಆ ।
ಉಪ । ಧ್ರಜಂತಂ । ಅದ್ರಯಃ । ವಿಧನ್ । ಇತ್ ॥ ೧ ॥

ಸಾಯಣಭಾಷ್ಯಂ

ಮಹೋ ಮಹತಃ ಪೂಜ್ಯಸ್ಯ ರಾಯೋ ಗವಾದಿರೂಪಸ್ಯ ಧನಸ್ಯ ಪತಿಃ ಪಾಲಕಃ ಸ್ವಾಮೀ ಸೋಽಗ್ನಿರ್ದನ್ ದದದಭಿಮತಂ ಪ್ರಯಚ್ಛನ್ ॥ ದದಾತೇಃ ಶತರಿ ಚ್ಛಾಂದಸಃ ಶಪೋ ಲುಕ್ । ತಸ್ಯ ಚ್ಛಂದಸ್ಯುಭಯಥೇತ್ಯಾರ್ಧಧಾತುಕತ್ವಾದಾತೋ ಲೋಪ ಇತಿ ಚೇತ್ಯಾಕಾರಲೋಪಃ ॥ ಆ ಆಭಿಮುಖ್ಯೇ-ನಾಸ್ಮದ್ದೇವಯಜನಂ ಪ್ರತೀಷತೇ । ಗಚ್ಛತಿ । ಕಿಂಚೇನಸ್ಯ ಸ್ವಾಮಿನೋಽಪೀನಃ ಸ್ವಾಮೀ । ಸರ್ವಸ್ಯ ಪತಿರಿತ್ಯರ್ಥಃ । ಈದೃಶೋಽಯಂ ವಸುನೋ ಧನಸ್ಯ ಪದ ಆಸ್ಪದಭೂತೇ ವೇದಿಸ್ಥಾನ ಆ । ಆಶ್ರಯತಿ ॥ ಉಪಸರ್ಗವಶಾದ್ಯೋಗ್ಯಕ್ರಿಯಾಧ್ಯಾಹಾರಃ ॥ ಯದ್ವಾ । ವಸುನೋ ನಿವಾಸಯೋಗ್ಯಸ್ಯ ಧನಸ್ಯಾಪೀನ ಇತಿ ಸಂಬಂಧಃ । ಯದ್ವಾ । ವಸುಪ್ರಾಪ್ತಿಃ ಪ್ರಸಿದ್ಧಾ । ಕಿಂಚೋಪ ಧ್ರಜಂತಮುಪಗಚ್ಛಂತಮೇನಮಭಿ-ಷವಾರ್ಥಮದ್ರಯೋ ಗ್ರಾವಣಸ್ತೋ ಯಜಮಾನಾ ವಿಧನ್ನಿತ್ । ಪರಿಚರಂತ್ಯೇವ ॥ ವಿಧ ವಿಧಾನೇ । ತೌದಾದಿಕಃ । ಲಙಃ ಬಹುಲಂ ಛಂದಸೀತ್ಯಡಭಾವಃ । ನಿಘಾತಾಭಾವಶ್ಛಾಂದಸಃ । ಯದ್ವಾ । ಪೂರ್ವತ್ರ ಶಚ್ಛಬ್ದಶ್ರುತೇರತ್ರ ಯಚ್ಛಬ್ದಾಧ್ಯಾಹಾರೇಣಾಸ್ಯ ಸಂಬಂಧಾದನಿಘಾತಃ । ಯದ್ವಾ । ಅದ್ರಯೋಽಭಿಷವ-ಗ್ರಾವಾಣಃ ಸ್ವಶಬ್ದೈರುಪೋಪೇತ್ಯ ವಿಧನ್ನಿತ್ । ಪೂಜಯಂತ್ಯೇವ । ಆಹ್ಲಾದಂ ಜನಯಂತೀತ್ಯರ್ಥಃ ॥

ಪ್ರತಿಪದಾರ್ಥ

**ಮಹಃ**—ಮಹತ್ತಾದ । **ರಾಯಃ**—ಗವಾದಿರೂಪವಾದ ಧನಕ್ಕೆ । **ಪತಿಃ**—ಒಡೆಯನಾದ । **ಸಃ**—ಅಗ್ನಿಯು । **ದನ್**—(ಇಷ್ಟಾರ್ಥಗಳನ್ನು) ಕೊಡುತ್ತಾ । **ಆ**—ಯಜ್ಞಾಭಿಮುಖವಾಗಿ । **ಈಷತೇ**—ಬರುತ್ತಾನೆ । **ಇನಸ್ಯ**—ಪ್ರಭುವಾದವನಿಗೂ ಸಹ । **ಇನಃ**—ಪ್ರಭುವಾದ ಅಗ್ನಿಯು । **ವಸುನಃ**—ಧನಕ್ಕೆ । **ಪದೇ**—ಆಸ್ಪಭೂತ ವಾದ ವೇದಿಕೆಗೆ । **ಆ**—ಬಂದುಕುಳಿತುಕೊಳ್ಳುತ್ತಾನೆ । **ಉಪ ಧ್ರಜಂತಂ**—ಸಮೀಪಕ್ಕೆ ಬರುತ್ತಿರುವ ಈ ಅಗ್ನಿ ಯನ್ನು । **ಅದ್ರಯಃ**—(ಸೋಮರಸವನ್ನು ಹಿಂಡುವ) ಕಲ್ಲುಗಳನ್ನು ಹಿಡಿದಿರುವ ಯಜಮಾನರು । (**ಅಥವಾ**) **ಅದ್ರಯಃ**—ಸೋಮರಸವನ್ನು ಹಿಂಡುವ ಕಲ್ಲುಗಳು । **ಧ್ರಜಂತಂ**—ಬರುತ್ತಿರುವ ಈ ಅಗ್ನಿಯನ್ನು । **ಉಪ**—ಸಮೀಪಿಸಿ (ತಮ್ಮ ಶಬ್ದಗಳಿಂದ) **ವಿಧನ್ನಿತ್**—ಖಂಡಿತವಾಗಿಯೂ ಪೂಜಿಸಿ ಸಂತೋಷಗೊಳಿಸುತ್ತಾರೆ.

ಭಾವಾರ್ಥ

ಮಹತ್ತಾದ ಗವಾದಿರೂಪವಾದ ಧನಕ್ಕೆ ಒಡೆಯನಾದ ಅಗ್ನಿಯು ಇಷ್ಟಾರ್ಥಗಳನ್ನು ಕೊಡುತ್ತಾ ಯಜ್ಞಾಭಿ ಮುಖನಾಗಿ ಬರುತ್ತಾನೆ. ಪ್ರಭುವಾದವನಿಗೂ ಸಹ ಪ್ರಭುವಾದ ಅಗ್ನಿಯು ಧನಕ್ಕೆ ಆಸ್ಪದಭೂತವಾದ ವೇದಿಕೆಗೆ ಬಂದು ಕುಳಿತುಕೊಳ್ಳುತ್ತಾನೆ. ಸಮೀಪಕ್ಕೆ ಬರುತ್ತಿರುವ ಈ ಅಗ್ನಿಯನ್ನು ಸೋಮರಸವನ್ನು ಹಿಂಡುವ ಕಲ್ಲುಗಳು ತಮ್ಮ ಶಬ್ದಗಳಿಂದ ಸಂತೋಷಗೊಳಿಸುತ್ತವೆ.

## English Translation

Agni, the lord of great wealth, the granter (of desires), comes (to the place of sacrifice); he, the lord of lords, comes to the place of affluence, (the altar); the stone prepares (the libation for him) as he approaches.

### ವಿಶೇಷವಿಷಯಗಳು

ಇನಃ—ಈ ಪದವು ಈಶ್ವರ ನಾಮಗಳಲ್ಲಿ ಪಠಿತವಾಗಿದೆ. (ನಿ. ೩-೧೧).ಅಗ್ನಿಯನ್ನು— ಇನಸ್ಯ ಇನಃ ಪ್ರಭುವಾದವನಿಗೂ ಪ್ರಭುವೆಂದು ಸ್ತುತಿಸಿದೆ.

**ಪ್ರ ಸಮ್ರಾಜೋ ಅಸುರಸ್ಯ ಪ್ರಶಸ್ತಿಂ ಪುಂಸಃ ಕೃಷ್ಟೀನಾಮನುಮಾದ್ಯಸ್ಯ ।**
**ಇಂದ್ರಸ್ಯೇವ ಪ್ರ ತವಸಸ್ಕೃತಾನಿ ವಂದೇ ದಾರುಂ ವಂದಮಾನೋ ವಿವಕ್ಮಿ ।**
(ಋ. ಸಂ. ೭-೬-೧)

ಇತ್ಯಾದಿ ಸಂಹಿತಾವಾಕ್ಯಗಳಿಂದಲೂ,

**ಅಗ್ನಿರ್ವೈ ದೇವತಾನಾಂ ಮುಖಾ, ಪ್ರಜನಯಿತಾ ಸ ಪ್ರಜಾಪತಿಃ ಸ ಉ ಏವ ಯಜಮಾನಃ ।**
(ಶ. ಬ್ರಾ, ೩-೯-೧-೬)

ಇತ್ಯಾದಿ ಬ್ರಾಹ್ಮಣವಾಕ್ಯಗಳಿಂದಲೂ ಅಗ್ನಿಯು ಸರ್ವೋತ್ತಮನೆಂದು ಸ್ತುತಿಸಿದೆ.

ಅದ್ರಯಃ—ಸೋಮರಸವನ್ನು ಹಿಂಡುವ ಕಲ್ಲುಗಳು ಅಥವಾ ಅಂತಹ ಕಲ್ಲುಗಳನ್ನು ಹಿಡಿದಿರುವ ಯಜಮಾನರು ಎಂದು ಅರ್ಥಮಾಡಿದೆ. ಸೋಮರಸವನ್ನು ಹಿಂಡುವ ಸಾಧನವೆಂಬರ್ಥದಲ್ಲಿ ಅದ್ರಿ ಶಬ್ದಕ್ಕೂ ಗ್ರಾವ ಶಬ್ದಕ್ಕೂ ಇರತಕ್ಕ ವ್ಯತ್ಯಾಸವನ್ನು ತೋರಿಸಿ ಇದೇ ಭಾಗದಲ್ಲಿ ೧-೧೩೭-೧ ನೇ ಋಕ್ಕಿನ ವಿಶೇಷವಿಷಯಗಳಲ್ಲಿ ತಿಳಿಸಿದೆ.

ಈ ಪದಕ್ಕೆ ರಸವನ್ನು ಹಿಂಡುವುದು ಅಥವಾ ಅದರ ಸಾಧನ ಎಂಬರ್ಥವು ಮಾತ್ರವಲ್ಲದೇ ಇನ್ನೂ ಇತರ ಅರ್ಥಗಳಲ್ಲೂ ಈ ಪದದ ಪ್ರಯೋಗವಿದೆ.

**ಉತ ಸ್ಮ ತೇ ಪರುಷ್ಣ್ಯಾಮೂರ್ಣಾ ವಸತ ಶುಂಧ್ಯವಃ ।**
**ಉತ ಪವ್ಯಾ ರಥಾನಾಮದ್ರಿಂ ಭಿಂದಂತ್ಯೋಜಸಾ ॥**
(ಋ ಸಂ. ೫-೫೨-೯)

ಇತ್ಯಾದಿ ಋಕ್ಕುಗಳಲ್ಲಿ ಪರ್ವತವೆಂದೂ,

**ಬ್ರಹ್ಮಾಣಿ ಮೇ ಮತಯಃ ಶಂ ಸುತಾಸಃ ಶುಷ್ಮ ಇಯರ್ತಿ ಪ್ರಭೃತೋ ಮೇ ಅದ್ರಿಃ ।**
**ಆ ಶಾಸತೇ ಪ್ರತಿ ಹರ್ಯಂತ್ಯುಕ್ಥೇಮಾ ಹರೀ ವಹತಸ್ತಾ ನೋ ಅಚ್ಛ ।**
(ಋ. ಸಂ. ೧-೧೬೫-೪)

ಎಂಬ ಋಕ್ಕಿನಲ್ಲಿ **ಶತ್ರೂಣಾಂ ಭಕ್ಷಕೋ ವಜ್ರಃ** । ಶತ್ರುನಾಶಕವಾದ ವಜ್ರಾಯುಧವೆಂದೂ,

**ಇಂದ್ರಸ್ಯಾಂಗಿರಸಾಂ ಚೇಷ್ಟೌ ವಿದತ್ಸರಮಾ ತನಯಾಯ ಧಾಸಿಂ ।**
**ಬೃಹಸ್ಪತಿರ್ಭಿನದದ್ರಿಂ ವಿದದ್ಗಾಃ ಸಮುಸ್ರಿಯಾಭಿರ್ವಾವಶಂತ ನರಃ ॥**
(ಋ. ಸಂ. ೧-೬೨-೩)

ಇತ್ಯಾದಿ ಋಕ್ಕುಗಳಲ್ಲಿ ಅಸುರನೆಂದೂ,

**ಪ್ರ ಯದ್ರಥೇಷು ಪೃಷತೀರಯುಗ್ಧ್ವಂ ವಾಜೇ ಅದ್ರಿಂ ಮರುತೋ ರಂಹಯಂತಃ ।**
**ಉತಾರುಷಸ್ಯ ವಿ ಷ್ಯಂತಿ ಧಾರಾಶ್ಚರ್ಮೇವೋದಭಿರ್ವ್ಯುಂದಂತಿ ಭೂಮ ॥**

(ಋ. ಸಂ. ೧-೮೫-೫)

ಎಂಬಲ್ಲಿ ಮೇಘವೆಂದೂ,

**ಮಹಃ ಸ ರಾಯ ಏಷತೇ ಪತಿರ್ದನ್ನಿನ ಇನಸ್ಯ ವಸುನಃ ಪದ ಆ ।**
**ಉಪ ಧ್ರಜಂತಮದ್ರಯೋ ವಿಧನ್ನಿತ್ ॥**

(ಋ. ಸಂ. ೧-೧೪೯-೧)

ಇತ್ಯಾದಿ ಕಡೆಗಳಲ್ಲಿ ಅದ್ರಿಗಳುಳ್ಳ ಎಂದರೆ ಹಿಂಡುವ ಕಲ್ಲುಗಳುಳ್ಳ ಯಜಮಾನನೆಂದೂ ಅನೇಕಾರ್ಥಗಳಿವೆ.

ಅದ್ರಿ ಶಬ್ದಕ್ಕೆ ಹೀಗೆ **ವಜ್ರಾಯುಧ, ರಾಕ್ಷಸ, ಕಲ್ಲು, ಪರ್ವತ, ಮೇಘ** ಇತ್ಯಾದ್ಯರ್ಥಗಳಾಗುವುದಕ್ಕೆ ನಿರುಕ್ತಕಾರರು ನಿರ್ವಚನಗಳನ್ನು ಈರೀತಿ ತೋರಿಸಿದ್ದಾರೆ.

**ಅದ್ರಿರಾದೃಣಾತ್ಯೇತೇನ । ಅಪಿ ವಾ ಅತ್ತೇಃ ಸ್ಯಾತ್ ।**

(ನಿ. ೪-೪)

**ಸೀಳು** ಎಂದರ್ಥವನ್ನು ಕೊಡತಕ್ಕ **ದೃ** ಧಾತುವಿನಿಂದಾಗಲಿ **ತಿನ್ನು** ಎಂದರ್ಥವನ್ನು ಕೊಡುವ **ಅದ್** ಧಾತುವಿನಿಂದಾಗಲಿ **ಅದ್ರಿ** ಶಬ್ದವು ನಿಷ್ಪನ್ನವಾಗಿದೆ. ಪರ್ವತಾದಿಗಳನ್ನು ಸೀಳುವುದರಿಂದ ವಜ್ರಾಯುಧಕ್ಕೆ ಅದ್ರಿಯೆಂದು ಹೆಸರು. ಇದರಂತೆಯೇ **ಭಕ್ಷಕಃ ವಜ್ರಃ** ಎಂದು ೧-೧೬೧-೪ ಇತ್ಯಾದಿ ಋಕ್ಕುಗಳಲ್ಲಿ ಅದ್ರಿ ಶಬ್ದದ ವಿವರಣೆಯಿದೆ. ಮತ್ತು **ಅತ್ತಾರಂ, ಅಸುರಂ, ಭಕ್ಷಕಂ** ಪಣಿಂ ಎಂದೂ ಸಹ ಅರ್ಥಮಾಡಿದೆ. ಈ ವಿವರಣೆಯನ್ನು ಕೊಡುವಾಗ ನಿರುಕ್ತಕಾರರು,

**ಯದಿಂದ್ರ ಚಿತ್ರ ಮೇಹನಾಸ್ತಿ ತ್ವಾದಾತಮದ್ರಿವಃ ।**
**ರಾಧಸ್ತನ್ನೋ ವಿದದ್ವಸ ಉಭಯಾಹಸ್ತ್ಯಾ ಭರ ॥**

(ಋ. ಸಂ. ೫-೩೯-೧)

ಎಂಬ ಋಕ್ಕನ್ನುದಹರಿಸಿ ಅದ್ರಿವಃ ಎಂಬುದಕ್ಕೆ **ವಜ್ರವನ್ ಇಂದ್ರ** ಎಂಬ ಅರ್ಥವು ಹೇಗೆ ಸಾಧ್ಯವಾಗುವುದೆಂದು ತೋರಿಸಿದ್ದಾರೆ. ಹೀಗೆ ಅದ್ರಿ ಶಬ್ದದ ಮೂಲಧಾತುವು ಅಥವಾ ಧಾತುಗಳು ಸಂದರ್ಭಾನುಸಾರವಾದ ನಿಷ್ಪತ್ತಿಗಳಿಂದ ಬೇರೆ ಬೇರೆ ಅರ್ಥಗಳನ್ನು ಕೊಡುವುದರಿಂದ ಆಯಾ ಸನ್ನಿವೇಶಕ್ಕನುಗುಣವಾಗಿ ಅರ್ಥಮಾಡಬೇಕು. ಪ್ರಕೃತವಾದ ಋಕ್ಕಿನಲ್ಲಿ **ಗ್ರಾವವಂತೋ ಯಜಮಾನಾಃ ।** ಸೋಮರಸವನ್ನು ಹಿಂಡುವ ಕಲ್ಲುಗಳನ್ನು ಹಿಡಿದಿರುವ ಯಜಮಾನರೆಂದು ಅರ್ಥಮಾಡಿದೆ.

ಧ್ರಜತಿ ಎಂಬ ಪದವು ಗತಿಕರ್ಮನಾಮಗಳಲ್ಲಿ ಪಠಿತವಾಗಿರುವುದರಿಂದ **ಉಪ ಧ್ರಜಂತಂ—ಉಪ ಗಚ್ಛಂತಂ ।** ಸಮೀಪಿಸುವ (ನಿ. ೩-೯) ಅಗ್ನಿಯನ್ನು ಎಂದರ್ಥ

## ವ್ಯಾಕರಣಪ್ರಕ್ರಿಯಾ

**ಮಹಃ**—ಮಹತಃ ಎಂಬಲ್ಲಿ ಅತಿಗೆ ಛಾಂದಸವಾಗಿ ಲೋಪ. ಅಥವಾ ಮಹ ಧಾತುವಿಗೆ ಕ್ವಿಪ್. ಷಷ್ಠಿಯಲ್ಲಿ ಮಹಃ ಎಂದು ರೂಪವಾಗುತ್ತದೆ.

**ರಾಯಃ**—ಷಷ್ಠೀ ಏಕವಚನಾಂತರೂಪ. **ಊಡಿದಂಪದಾದಿ**—(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಈಷತೇ**—ಈಷ ಗತೌ. ಧಾತು. ತುದಾದಿ. ಲಟ್‌ಪ್ರಥಮಪುರುಷ ಏಕವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ.

**ದನ್**—ಡುದಾಞ್ ದಾನೇ. ಧಾತು. ಲಡರ್ಥದಲ್ಲಿ ಶತೃಪ್ರತ್ಯಯ. **ಬಹುಲಂ ಛಂದಸಿ** ಎಂಬುದರಿಂದ ಶಪಿಗೆ ಲುಕ್. **ಛಂದಸ್ಯುಭಯಥಾ** (ಪಾ. ಸೂ. ೩-೪-೧೧೭) ಎಂಬುದರಿಂದ ಶತೃಪ್ರತ್ಯಯಕ್ಕೆ ಆರ್ಧಧಾತುಕ ಸಂಜ್ಞೆ ಇರುವುದರಿಂದ **ಆತೋಲೋಪ ಇಟಿಚ** (ಪಾ. ಸೂ. ೬-೪-೬೪) ಎಂಬುದರಿಂದ ಧಾತುವಿನ ಆಕಾರಕ್ಕೆ ಲೋಪ. ಪ್ರಥಮಾ ಏಕವಚನಪರವಾದಾಗ **ಉಗಿದಚಾಂ ಸ**—ಎಂಬುದರಿಂದ ನುಮಾಗಮ. ಸಂಯೋಗಾಂತಲೋಪ ಅಸಿದ್ಧವಾದುದರಿಂದ ನಲೋಪ ಬರುವುದಿಲ್ಲ. ಪ್ರತ್ಯಯಸ್ವರದಿಂದ ಉದಾತ್ತವಾಗುತ್ತದೆ.

**ಇನಃ**—ಇಣ್ ಗತೌ ಧಾತು. **ಇಣ್‌ಸಿಂಜಿದೀಙ್**—(ಉ. ಸೂ ೨-೨೮೩) ಎಂಬುದರಿಂದ ನಕ್ ಪ್ರತ್ಯಯ ಕಿತ್ತಾದುದರಿಂದ ಗುಣ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಆ**—ಕಾರಕವು ನಿತ್ಯವಾಗಿ ಕ್ರಿಯೆಯನ್ನು ಆಕಾಂಕ್ಷಿಸುವುದರಿಂದಲೂ ಉಪಸರ್ಗವು ಕ್ರಿಯಾಪದದೊಡನೆಯೇ ಇರುವುದರಿಂದಲೂ ಇಲ್ಲಿ ಆಶ್ರಯತಿ ಎಂದು ಕ್ರಿಯೆಯನ್ನು ಅಧ್ಯಾಹಾರಮಾಡಿಕೊಳ್ಳಬೇಕು

**ಧ್ರಜಂತಮ್**—ಧ್ರಜ ಗತೌ ಧಾತು ಲಡರ್ಥದಲ್ಲಿ ಶತೃ ಪ್ರತ್ಯಯ. ಶಪ್ ವಿಕರಣ. **ತಾಸ್ಯನುದಾತ್ತೇತ್** ಸೂತ್ರದಿಂದ ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ. ದ್ವಿತೀಯಾ ಏಕವಚನದಲ್ಲಿ ಉಗಿತ್ತಾದುದರಿಂದ ನುಮಾಗಮ.

**ಅದ್ರಯಃ**—ಅದ ಭಕ್ಷಣೇ ಧಾತು. **ಅದಿಶದಿಭೂಶುಭಿಭ್ಯಃ ಕ್ರಿನ್** (ಉ. ಸೂ ೪-೫೦-೫) ಎಂಬುದರಿಂದ ಕ್ರಿನ್ ಪ್ರತ್ಯಯ **ಞ್ನಿತ್ಯಾದಿರ್ನಿತ್ಯಮ್** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ವಿಧನ್**—ವಿಧ ವಿಧಾನೇ. ಧಾತು. ತುದಾದಿ. **ಛಂದಸಿ ಲುಙ್**—(ಪಾ. ಸೂ. ೩-೪-೬) ಎಂಬುದರಿಂದ ವರ್ತಮಾನಾರ್ಥದಲ್ಲಿ ಲಙ್. ಪ್ರಥಮ ಪುರುಷ ಬಹುವಚನದಲ್ಲಿ ಅಂತಾದೇಶ. ಇಕಾರಲೋಪ. **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಲುಕ್. **ಬಹುಲಂ ಛಂದಸ್ಯ**—(ಪಾ. ಸೂ. ೬-೪-೭೫) ಎಂಬುದರಿಂದ ಅಡಾಗಮ ಬರುವುದಿಲ್ಲ. ಅತಿಙಂತದ ಪರದಲ್ಲಿ ಬಂದರೂ ಛಾಂದಸವಾಗಿ ನಿಘಾತಸ್ವರ ಬರುವುದಿಲ್ಲ ಅಥವಾ ಹಿಂದೆ ತತ್ ಶಬ್ದವು ಶ್ರುತವಾದುದರಿಂದ ಯತ್ ತತ್ ಶಬ್ದಗಳಿಗೆ ನಿತ್ಯಸಂಬಂಧವಿರುವುದರಿಂದ ಯಚ್ಛಬ್ದವು ಅಧ್ಯಾಹೃತವಾಗುವುದರಿಂದ ಯೋದ್ಯೋಗವಿರುವುದರಿಂದ ನಿಘಾತಸ್ವರಬರುವುದಿಲ್ಲ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ. ॥೧॥



ಸಂಹಿತಾಪಾಠಃ

ಸ ಯೋ ವೃಷಾ ನರಾಂ ನ ರೋದಸ್ಯೋಃ ಶ್ರವೋಭಿರಸ್ತಿ ಜೀವಪೀತಸರ್ಗಃ।
ಪ್ರ ಯಃ ಸಸ್ರಾಣಃ ಶಿಶ್ರೀತ ಯೋನೌ ॥ ೨ ॥

ಪದಪಾಠಃ

ಸಃ । ಯಃ । ವೃಷಾ । ನರಾಂ । ನ । ರೋದಸ್ಯೋಃ । ಶ್ರವಃಽಭಿಃ । ಅಸ್ತಿ । ಜೀವಪೀತಽಸರ್ಗಃ ।
ಪ್ರ । ಯಃ । ಸಸ್ರಾಣಃ । ಶಿಶ್ರೀತ । ಯೋನೌ ॥ ೨ ॥

ಸಾಯಣಭಾಷ್ಯಂ

ಸ ತಾದೃಶೋ ಯೋಽಗ್ನಿರ್ನರಾಂ ನ ಮನುಷ್ಯಾಣಾಮಿವ ರೋದಸ್ಯೋರ್ದ್ಯಾವಾಪೃಥಿವ್ಯೋರಪಿ ವೃಷಾ ಸೇಕ್ತಾ । ಉತ್ಪಾದಕ ಇತ್ಯರ್ಥಃ । ಏವಂ ಸರ್ವೋತ್ಪಾದಕಃ ಶ್ರವೋಭಿಃ ಸರ್ವತ್ರ ಶ್ರೂಯಮಾಣೈರ್ಯಶೋಭಿರ್ಯುಕ್ತಃ ಸನ್ನಸ್ತಿ ವರ್ತತೇ । ಸರ್ವೋತ್ಪಾದಕ ಇತ್ಯುಕ್ತಂ ತತ್ರೋಪಪತ್ತಿಮಾಹ । ಯತೋಽಯಂ ಜೀವಪೀತಸರ್ಗಃ । ಜೀವೈರ್ನಾನಾವಿಧೈಃ ಪೀತ ಆಸ್ವಾದಿತಃ ಸರ್ಗಃ ಸೃಷ್ಟಿಕ್ರಮೋ ಯಸ್ಯ ಸ ತಥೋಕ್ತಃ ॥ ತೃತೀಯಾ ಕರ್ಮಣೀತಿ ಪೂರ್ವಪದಪ್ರಕೃತಿಸ್ವರತ್ವಂ । ಪುನರ್ಬಹುವ್ರೀಹೌ ಸ ಏವ ಸ್ವರಃ ॥ ಅತ್ರಾಯಂ ಸೃಷ್ಟಿಕ್ರಮಃ । ಅಯಮಗ್ನಿಃ ಸ್ವದತ್ತಂ ಹವಿರಾದಿತ್ಯಂ ಪ್ರಾಪಯ್ಯ ತದ್ರಶ್ಮಿಭಿಃ ಸಹ ವೈದ್ಯುತರೂಪೇಣ ಮೇಘದ್ವಾರೋದಕೇನ ಪ್ರವರ್ಷ್ಯ ಸರ್ವಾನ್ಪ್ರಾಣಿನಃ ಪ್ರಾಪಯತೀತ್ಯತೋ ವೃಷ್ಟ್ಯುತ್ಪಾದನದ್ವಾರೋತ್ಪಾದಯಿತಾ । ಇದಾನೀಂ ಸಾಕ್ಷಾದುತ್ಪಾದಕತ್ವಮಾಹ । ಯೋಽಗ್ನಿರ್ಯೋನೌ ಗರ್ಭಾಶಯೇ ಸಸ್ರಾಣಃ ಪ್ರವಿಷ್ಟಃ ಸನ್ ಶಿಶ್ರೀತ ನಿಷಿಕ್ತಂ ರೇತಃ ಪಾರಯತಿ। ನೃಪಶ್ವಾದಿದೇಹಾಕಾರೇಣ ಪರಿಣಮಯತೀತ್ಯರ್ಥಃ । ಯದ್ಯಗ್ನಿರ್ನ ಪಚೇತ್ ಪೂರಯೇದೇವ ನೋತ್ಪದ್ಯತೇ । ತಸ್ಮಾದಯಂ ಸಾಕ್ಷಾದೇವೋತ್ಪಾದಕಃ । ಸ ತಾದೃಶೋಽಗ್ನಿರ್ಯಶಸ್ವೀ ವರ್ತತ ಇತ್ಯರ್ಥಃ । ಯದ್ವಾ । ಯೋಽಗ್ನಿರ್ನರಾಂ ನ ನರಾಣಾಂ ಕರ್ಮಸೂತ್ಸಾಹಯುಕ್ತಾನಾಂ ಯಜಮಾನಾನಾಮಿವ । ನರಾ ಮನುಷ್ಯಾ ನೃತ್ಯಂತಿ ಕರ್ಮಸ್ವಿತಿ ಯಾಸ್ಕಃ । ನಿ. ೫-೧ । ತೇಷಾಂ ಯಥಾ ಸ್ವರ್ಗಾದ್ಯಭಿಮತವರ್ಷಕಃ ತದ್ವದ್ರೋದಸ್ಯೋರಪಿ । ಆಶ್ರಯವಾಚಿನಾ ಶಬ್ದೇನಾಶ್ರಯಿಣೋ ಲಕ್ಷ್ಯಂತೇ । ಭೂಲೋಕವರ್ತಿನಾಂ ವೃಷ್ಟಿಪ್ರದಾನೇನ ದ್ಯುಲೋಕವರ್ತಿನಾಂ ಹವಿಷ್ಪ್ರದಾನೇನೇತಿ ಭಾವಃ । ಸ ತಾದೃಶೋಽಗ್ನಿಃ ಶ್ರವೋಭಿರ್ಹವಿರ್ಲಕ್ಷಣೈಃ ಸೋಮಾಜ್ಯಾದಿಭಿರನ್ನೈರ್ನಿಮಿತ್ತಭೂತೈರ್ಜೀವಪೀತಸರ್ಗೋ ಜೀವವಿಶೇಷೈರ್ಯಜಮಾನೈರವಿಶೇಷೇಣ ಸರ್ವೈರಾಸ್ವಾದಿತಸ್ವಭಾವಃ ಸನ್ನಸ್ತಿ । ಪ್ರಕೃಷ್ಟೋ ವರ್ತತೇ । ಅಮುಮಗ್ನಿಂ ಹವಿರ್ಭಿಃ ಪ್ರೀಣಯಿತ್ವಾ ಸ್ವಾಭಿಮತಾನ್ಭೋಗಾನ್ಭುಂಜತ ಇತ್ಯರ್ಥಃ । ಕಿಂಚ ಯೋಽಗ್ನಿರ್ಯೋನೌ ಸ್ವಕೀಯಸ್ಥಾನೇ ವೇದಿಲಕ್ಷಣೇ ಸಸ್ರಾಣಃ ಪ್ರವಿಷ್ಟಃ ಸನ್ ಶಿಶ್ರೀತ ಸ್ವಸ್ಮಿನ್ಪ್ರಾಪ್ತಂ ಪುರೋಡಾಶಾದಿಕಂ ಪಚತಿ ಸೋಽಯಮಗ್ನಿರಸ್ತಿ । ಮಹಾನುಭಾವೋ ವರ್ತತೇ ॥

### ಪ್ರತಿಪದಾರ್ಥ

**ಯಃ**—ಯಾವ ಅಗ್ನಿಯು । **ನರಾಂ ನ**—ಮಾನವರಿಗೆ ಉತ್ಪಾದಕನಾಗಿರುವಂತೆ । **ರೋದಸ್ಯೋಃ**—ದ್ಯಾವಾಪೃಥಿವಿಗಳಿಗೂ ಸಹ । **ವೃಷಾ**-ಉತ್ಪಾದಕನಾಗಿದ್ದಾನೆಯೋ । (ಮತ್ತು) **ಜೀವಪೀತಸರ್ಗಃ**—ಯಾವನಿಂದ ಸೃಷ್ಟಿಯೆಲ್ಲಾ ಜೀವರಸದಿಂದ ತುಂಬಿದೆಯೋ ಅಂತಹ । **ಸಃ**—ಅಗ್ನಿಯು । **ಶ್ರವೋಭಿಃ**—ಪ್ರಸಿದ್ಧವಾದ ಎಲ್ಲರಕಿವಿಗೂ ಬೀಳತಕ್ಕ ತನ್ನ ಯಶಸ್ಸಿನೊಡನೆ ಕೂಡಿಕೊಂಡು । **ಅಸ್ತಿ**—ಮೆರೆಯುತಿದ್ದಾನೆ. । **ಯಃ**—ಯಾವ ಅದೇ ಅಗ್ನಿಯು । **ಯೋನೌ**—(ಎಲ್ಲರ) ಗರ್ಭಾಶಯದಲ್ಲೂ । **ಪ್ರ ಸಸ್ರಾಣಃ**—ಪ್ರವೇಶಿಸುತ್ತಾ । **ಶಿಶ್ರೀತೆ**—ರೇತಸ್ಸನ್ನು ಸುರಿಸಿ ಎಲ್ಲಾ ಜಿವರಾಶಿಗಳನ್ನೂ) ಸೃಷ್ಟಿಸುತ್ತಾನೆಯೋ । [ಅಥವಾ **ಯಃ**—ಯಾವ ಅಗ್ನಿಯು । **ನರಾ ನ**—ಯಜ್ಞಕರ್ಮಗಳಲ್ಲಿ ನಿರತರಾದ ಯಾಜಮಾನರಿಗೆ ಇಷ್ಟಾರ್ಥಗಳನ್ನು ಕೊಡುವಂತೆಯೇ, । **ರೋದಸ್ಯೋಃ**-ದ್ಯಾವಾ ಪೃಥಿವಿಗಳೆರಡರಲ್ಲೂ ಇರುವವರಿಗೆಲ್ಲಾ । **ವೃಷಾ**—ದೇವತೆಗಳಿಗೆ ಹವಿಸ್ಸನ್ನು ಹಂಚುತ್ತಲೂ ಮತ್ತು ಮಾನವರಿಗೆ ವೃಷ್ಟ್ಯಾದಿಗಳನ್ನೂ ಸುರಿಸುತ್ತಲೂ ಇರುವನೋ, । **ಸಃ**—ಅಂತಹ ಅಗ್ನಿಯು । **ಜೀವಪೀತಸರ್ಗಃ**-(ಯಜಮಾನರಿಗೆ ಮಾಡುವಂತೆಯೇ) ಇತರ ಎಲ್ಲಾ ಭೂತಗಳಿಗೂ ತನ್ನ ಔದಾರ್ಯದ ಆಸ್ವಾದವನ್ನು ಸೇವಿಸುವಂತೆಮಾಡುತ್ತಾ । **ಶ್ರವೋಭಿಃ**—ಪ್ರಸಿದ್ಧವಾದ ತನ್ನ ಯಶಸ್ಸುಗಳೊಡನೆ ಕೂಡಿಕೊಂಡು । **ಅಸ್ತಿ**—ಮೆರೆಯುತ್ತಿದ್ದಾನೆ. (ಅಲ್ಲದೇ) । **ಯಃ**—ಯಾವ ಅದೇ ಅಗ್ನಿಯು । **ಯೋನೌ**—ತನ್ನ ಸ್ವಸ್ಥಾನವಾದ ವೇದಿಕೆಯಲ್ಲಿ । **ಪ್ರ ಸಸ್ರಾಣಃ**—ಪ್ರವೇಶಿಸುತ್ತಾ । **ಶಿಶ್ರೀತೆ**—(ತನ್ನಲ್ಲಿ ಅರ್ಪಿಸಿದ ಪುರೋಡಾಶಾದಿಗಳನ್ನು) ಪಕ್ವವಾಗುವಂತೆ ಮಾಡುತ್ತಾನೆ]

### ಭಾವಾರ್ಥ

ಮಾನವರಿಗೆ ಉತ್ಪಾದಕನಾಗಿರುವಂತೆ ದ್ಯಾವಾ ಪೃಥಿವಿಗಳಿಗೂ ಉತ್ಪಾದಕನಾಗಿರುವವನೂ, ಸೃಷ್ಟಿಯನ್ನೆಲ್ಲಾ ಜೀವರಸದಿಂದ ತುಂಬುವವನೂ ಆದ ಅಗ್ನಿಯು ತನ್ನ ಪ್ರಸಿದ್ಧವಾದ ಯಶಸ್ಸುಗಳೊಡನೆ ಕೂಡಿಕೊಂಡು ಮೆರೆಯುತ್ತಿದ್ದಾನೆ. ಮತ್ತು ಸಕಲರ ಗರ್ಭಾಶಯದಲ್ಲೂ ಪ್ರವೇಶಿಸುತ್ತಾ ಎಲ್ಲಾ ಜಿವರಾಶಿಗಳನ್ನೂ ಸೃಷ್ಟಿಸುತ್ತಾನೆ.

### English Translation

He, who is, as it were, the generator of men as well as of heaven and earth, of whom creation has imbibed life, abides with his glories: he it is who, entering into the womb (of being), procreates (all living creatures).

### ವಿಶೇಷವಿಷಯಗಳು

ಈ ಋಕ್ಕಿಗೆ ಎರಡು ವಿಧವಾದ ಅರ್ಥಗಳನ್ನು ಹೇಳಿದ್ದಾರೆ. ಮೊದಲನೆಯದಾಗಿ, **ವೃಷಾ** ಎಂಬ ಪದಕ್ಕೆ ಉತ್ಪಾದಕನೆಂದೂ, **ಯೋನೌ** ಎಂಬುದಕ್ಕೆ ಗರ್ಭಾಶಯವೆಂದೂ ಅರ್ಥಮಾಡಿ, ಯಾವ ಅಗ್ನಿಯು ಮಾನವರಿಗೆ ಉತ್ಪಾದಕನಾಗಿರುವಂತೆ ದ್ಯಾವಾಪೃಥಿವಿಗಳಿಗೂ ಉತ್ಪಾದಕನಾಗಿರುವನೋ, ಯಾವನಿಂದ ಸೃಷ್ಟಿಯೆಲ್ಲಾ ಜೀವರಸದಿಂದ ತುಂಬಿದೆಯೋ ಅಂತಹ ಅಗ್ನಿಯು ಎಲ್ಲರ ಗರ್ಭಾಶಯದಲ್ಲೂ ಪ್ರವೇಶಿಸುತ್ತಾ ರೇತಸ್ಸನ್ನು ಸುರಿಸಿ ಜೀವರಾಶಿಗಳನ್ನು ಸೃಷ್ಟಿಸುತ್ತಾನೆಂದು ಒಂದರ್ಥವೂ, ಎರಡನೆಯದಾಗಿ, **ವೃಷಾ** ಎಂಬ ಪದಕ್ಕೆ **ಸೇಚಕ** ಎಂದರೆ ಇಷ್ಟಾರ್ಥಗಳನ್ನು ಸುರಿಸುವವನು ಎಂದೂ ಮತ್ತು **ಯೋನೌ** ಎಂಬುದಕ್ಕೆ ಸ್ವಸ್ಥಾನವಾದ ವೇದಿಕೆಯಲ್ಲಿ ಎಂದೂ ಅರ್ಥಮಾಡಿ,

ಯಾವ ಅಗ್ನಿಯು ಯಜ್ಞಕರ್ಮಗಳಲ್ಲಿ ನಿರತರಾದ ಯಜಮಾನರಿಗೆ ಇಷ್ಟಾರ್ಥಗಳನ್ನು ಸುರಿಸಿಕೊಡುವಂತೆ ದ್ಯಾವಾಪೃಥಿವಿಗಳೆರಡರಲ್ಲಿಯೂ ಇರುವ ದೇವಮಾನವಾದಿಗಳಿಗೆಲ್ಲಾ ಹವಿಸ್ಸನ್ನು ಹಂಚುತ್ತಲೂ ಮತ್ತು ವೃಷ್ಟ್ಯಾದಿಗಳನ್ನು ಸುರಿಸುತ್ತಲೂ ಇರುವನೋ, ಆ ಅಗ್ನಿಯು ತನ್ನ ಸ್ವಸ್ಥಾನವಾದ ವೇದಿಕೆಯಲ್ಲಿ ಪ್ರವೇಶಿಸುತ್ತಾ ತನ್ನಲ್ಲಿ ಅರ್ಪಿಸಿದ ಪುರೋಡಾಶಾದಿಗಳನ್ನು ಪಕ್ವವಾಗುವಂತೆ ಮಾಡುತ್ತಾನೆ ಎಂದು ಒಂದರ್ಥವೂ ಸಾಧ್ಯವೆಂದು ಸಾಯಣರು ತಿಳಿಸಿದ್ದಾರೆ.

**ವೃಷಾ**—ಎಂಬ ಶಬ್ದಕ್ಕೆ ಮೇಲಿನ ಎರಡರ್ಥಗಳೂ ಆಗಬಹುದೆಂದೂ, ಈ ಎರಡರ್ಥಗಳಲ್ಲೂ ಈ ಪದದ ಪ್ರಯೋಗವು ಋಕ್ಸಂಹಿತೆಯಲ್ಲಿ ನಾನಾಕಡೆಗಳಲ್ಲಿ ಇರುವುದೆಂದೂ ಉದಾಹರಣೆಗಳೊಡನೆ ಇದೇ ಭಾಗದಲ್ಲಿ ಋ ಸಂ. ೧-೧೪೦-೬ನೇ ಋಕ್ಕಿನ ವಿಶೇಷವಿಷಯಗಳಲ್ಲಿ ತಿಳಿಸಿದೆ.

**ಯೋನೌ**—ಯೋನಿ ಶಬ್ದಕ್ಕೆ ಉತ್ಪತ್ತಿಸ್ಥಾನವೆಂಬ ಪ್ರಸಿದ್ಧವಾದ ಅರ್ಥವಲ್ಲದೆ ನಿವಾಸಸ್ಥಾನ, ಗೃಹ ಇತ್ಯಾದ್ಯರ್ಥಗಳೂ ಉಂಟು. ನಿರುಕ್ತದಲ್ಲಿ ಅರ್ಣಃ, ಕ್ಷೋದಃ ಇತ್ಯಾದಿ ೧೦೧ ಉದಕನಾಮಗಳಲ್ಲಿ ಪಠಿತವಾಗಿದೆ. (ನಿ. ೨-೨೪).

**ಋತಸ್ಯ ದೇವಾ ಅನು ವ್ರತಾ ಗುರ್ಭುವತ್ಪರಿಷ್ಟಿರ್ದ್ಯೌರ್ನ ಭೂಮ ।**
**ವರ್ಧಂತೀಮಾಪಃ ಪನ್ವಾ ಸುಶಿಶ್ವಿಮೃತಸ್ಯ ಯೋನಾ ಗರ್ಭೇ ಸುಜಾತಂ ।**

(ಋ. ಸಂ. ೧-೬೫-೨)

ಎಂಬ ಋಕ್ಕಿನಲ್ಲಿ ಯಜ್ಞಸ್ಯ ಅನ್ನಸ್ಯ ವಾ ಕಾರಣಭೂತೇ ಜಲೇ, ಯಜ್ಞಕ್ಕೂ ಅನ್ನಕ್ಕೂ ಕಾರಣಭೂತವಾದ ಜಲದಲ್ಲಿ ಎಂದೂ,

**ದೇವಂ ವೋ ದೇವಯಜ್ಯಯಾಗ್ನಿಮೀಳೀತ ಮರ್ತ್ಯಃ ।**
**ಸಮಿದ್ಧಃ ಶುಕ್ರ ದೀದಿಹ್ಯೃತಸ್ಯ ಯೋನಿಮಾಸದಃ ಸಸಸ್ಯ ಯೋನಿಮಾಸದಃ ॥**

(ಋ. ಸಂ. ೫-೨೧-೪)

ಎಂಬಲ್ಲಿ **ಯೋನಿಂ ಕಾರಣಂ ಸ್ವರ್ಗಸಾಧನಂ ।** ಸ್ವರ್ಗಕ್ಕೆ ಒಯ್ಯಲು ಸಹಕಾರಿಯಾದ ಸಾಧನವೆಂದೂ,

**ದುರೋಕಶೋಚಿಃ ಕ್ರತುರ್ನ ನಿತ್ಯೋ ಜಾಯೇವ ಯೋನಾವರಂ ವಿಶ್ವಸ್ಮೈ ।**
**ಚಿತ್ರೋ ಯದಭ್ರಾಟ್ ಛ್ವೇತೋ ನ ವಿಕ್ಷು ರಥೋ ನ ರುಕ್ಮೀ ತ್ವೇಷಃ ಸಮತ್ಸು ॥**

(ಋ. ಸಂ. ೧-೬೬-೩)

ಎಂಬಲ್ಲಿ ಗೃಹವೆಂದೂ,

**ಯಮೀಂ ದ್ವಾ ಸವಯಸಾ ಸಪರ್ಯತಃ ಸಮಾನೇ ಯೋನಾ ಮಿಥುನಾ ಸಮೋಕಸಾ ।**
**ದಿವಾ ನ ನಕ್ತಂ ಪಲಿತೋ ಯುವಾಜನಿ ಪುರೂ ಚರನ್ನಜರೋ ಮಾನುಷಾ ಯುಗಾ ।**

( ಋ. ಸಂ. ೧-೧೪೪-೪ )

ಎಂಬಲ್ಲಿ ಫಲಕ್ಕೆ ಉತ್ಪತ್ತಿಸ್ಥಾನವೆಂದೂ, ಹೀಗೆಯೇ

**ವೇದಿಷದೇ ಪ್ರಿಯಧಾಮಾಯ ಸುದ್ಯುತೇ ಧಾಸಿಮಿವ ಪ್ರ ಭರಾ ಯೋನಿಮಗ್ನಯೇ ।**
**ವಸ್ತ್ರೇಣೇವ ವಾಸಯಾ ಮನ್ಮನಾ ಶುಚಿಂ ಜ್ಯೋತೀರಥಂ ಶುಕ್ರವರ್ಣಂ ತಮೋಹನಂ ।**
(ಋ. ಸಂ. ೧-೧೪೦-೧)

ಇತ್ಯಾದಿ ಋಕ್ಕುಗಳಲ್ಲಿ **ವೇದ್ಯಾಖ್ಯಂ ಸ್ಥಾನಂ ।** ವೇದಿರೂಪವಾದ ಸ್ಥಾನವೆಂದೂ ನಾನಾರ್ಥಗಳಿರುವವು.

ಆದುದರಿಂದ ಪ್ರಕೃತವಾದ ಋಕ್ಕಿನಲ್ಲಿ ಉತ್ಪತ್ತಿಸ್ಥಾನವೆಂದಾಗಲಿ ಅಥವಾ ಯಜ್ಞವೇದಿಕೆಯೆಂದಾಗಲಿ ಅರ್ಥಮಾಡಬಹುದು.

ವ್ಯಾಕರಣಪ್ರಕ್ರಿಯಾ

**ವೃಷಾ**—ವೃಷು ಸೇಚನೇ ಧಾತು. ಕನಿನ್‌ಯುವೃಷಿ—(ಉ. ಸೂ. ೧-೧೫೪) ಎಂಬುದರಿಂದ ಕನಿನ್ ಪ್ರತ್ಯಯ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಶ್ರವೋಭಿಃ**—ಶ್ರು ಶ್ರವಣೇ. ಧಾತು. ಅಸುನ್ ಪ್ರತ್ಯಯ. ಶ್ರವಸ್ ಶಬ್ದವಾಗುತ್ತದೆ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ತೃತೀಯಾಬಹುವಚನಾಂತರೂಪ.

**ಅಸ್ತಿ**—ಅಸ ಭುವಿ ಧಾತು. ಲಟ್ ಪ್ರಥಮಪುರುಷ ಏಕವಚನಾಂತರೂಪ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಧಾತುಸ್ವರ ಉಳಿಯುತ್ತದೆ.

**ಜೀವಪೀತಸರ್ಗಃ**—ಜೀವೈಃ ಪೀತಃ ಜೀವಪೀತಃ. ಜೀವಪೀತಃ ಸರ್ಗಃ ಯಸ್ಯ ಸಃ ಜೀವಪೀತಸರ್ಗಃ, ಪಾ ಪಾನೇ. ಧಾತು. ಕರ್ಮಣಿಯಲ್ಲಿ **ನಿಷ್ಠಾ** ಎಂಬುದರಿಂದ ಕ್ತಪ್ರತ್ಯಯ. **ಘುಮಾಸ್ಥಾಗಾಪಾ**—(ಪಾ. ಸೂ. ೬-೨-೪೮) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ. ಬಹುವ್ರೀಹಿಸಮಾಸವಾದಾಗ **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್** ( ಪಾ. ಸೂ. ೬-೨-೨ ) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರದಿಂದ ಅದೇ ಸ್ವರ ಉಳಿಯುತ್ತದೆ.

**ಸಸ್ರಾಣಃ**—ಸೃ ಗತೌ ಧಾತು. ಇದಕ್ಕೆ **ಲಿಟಃ ಕಾನಜ್ವಾ** ( ಪಾ. ಸೂ. ೩-೨-೧೦೬ ) ಎಂಬುದರಿಂದ ಲಿಟ್ ಬಂದು ಅದಕ್ಕೆ ಕಾನಚಾದೇಶ. ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಉರದತ್ವ. ಹಲಾದಿಶೇಷ. ಪ್ರತ್ಯಯಕಿತ್ತಾದುದರಿಂದ ಗುಣಾದಿಗಳು ಬರುವುದಿಲ್ಲ. ಯಣಾದೇಶ. **ಅಟ್ಕುಪ್ವಾಙ್**—ಎಂಬುದರಿಂದ ಪ್ರತ್ಯಯ ನಕಾರಕ್ಕೆ ಣತ್ವ. **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಶಿಶ್ರೀತ**—ಶ್ರಾ ಪಾಕೇ. ಧಾತು. ಲಿಙ್ ಪ್ರಥಮಪುರುಷ ಏಕವಚನದಲ್ಲಿ ಛಾಂದಸವಾಗಿ ಶ್ಲು ವಿಕರಣ. **ಶ್ನಾಭ್ಯಸ್ತಯೋರಾತಃ** ಎಂಬುದರಿಂದ ಧಾತುವಿನ ಆಕಾರಕ್ಕೆ ಲೋಪ. **ಬಹುಲಂ ಛಂದಸಿ** ಎಂಬುದರಿಂದ ಅಭ್ಯಾಸಕ್ಕೆ ಇತ್ವ. ಯಚ್ಛಬ್ದಸಂಬಂಧವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ. ॥ ೨ ॥

———:o:———

ಸಂಹಿತಾಪಾಠಃ

ಆ ಯಃ ಪುರಂ ನಾರ್ಮಿಣೀಮದೀದೇದತ್ಯಃ ಕವಿರ್ನಭನ್ಯೋ೩ನಾರ್ವಾ ।
ಸೂರೋ ನ ರುರುಕ್ವಾಞ್ಛತಾತ್ಮಾ ॥ ೩ ॥

ಪದಪಾಠಃ

ಆ । ಯಃ । ಪುರಂ । ನಾರ್ಮಿಣೀಂ । ಅದೀದೇತ್ । ಅತ್ಯಃ । ಕವಿಃ । ನಭನ್ಯಃ । ನ । ಅರ್ವಾ ।
ಸೂರಃ । ನ । ರುರುಕ್ವಾನ್ । ಶತಽಆತ್ಮಾ ॥ ೩ ॥

ಸಾಯಣಭಾಷ್ಯಂ

ಯೋಽಗ್ನಿರ್ನಾರ್ಮಿಣೀಂ ನರ್ಮವತೀಂ ಯಜಮಾನಾನಾಂ ಸಂಬಂಧಿನೀಮುತ್ತರವೇದಿಂ । ಯದ್ವಾ । ನೃಣಾಂ ಮನಸಿ ಸ್ಥಿತಾಂ ಯಜಮಾನಾನಾಂ ಯಜ್ಞಾರ್ಥಂ ಯಾಂ ಭೂಮಿಂ ಪ್ರತ್ಯಗ್ನ್ಯಾಗಮನಮನೀಷಾ ವಿದ್ಯತೇ ತಾಂ । ಪುರಂ ತತ್ಸ್ಥಾನಮಾದೀದೇತ್ ದೀಪಯತಿ । ಕೀದೃಶೋಽಯಂ । ಅತ್ಯೋಽಪೇಕ್ಷಿತದೇಶಂ ಪ್ರತ್ಯತನಶೀಲಃ ಕವಿಃ ಕ್ರಾಂತದರ್ಶೀ । ತತ್ರ ದೃಷ್ಟಾಂತಃ । ಅರ್ವಾರಣಕುಶಲೋ ನಭನ್ಯೋ ನ ನಭಸ್ಯಾಕಾಶೇ ಭವೋ ನಭಸ್ವಾನ್ವಾಯುರಿವ । ಕಿಂಚ ಶತಾತ್ಮಾ ಶತಂ। ಸಹಸ್ರಮಿತ್ಯಪರಿಮಿತವಚನಃ। ತತ್ತದ್ಯಜಮಾನಗೃಹಾಪೇಕ್ಷಯಾ ಆಹವನೀಯಗಾರ್ಹಪತ್ಯಾದ್ಯಪೇಕ್ಷಯಾ ವಾ ನಾನಾರೂಪತ್ವಂ । ಅಥವಾ ಮಿತ್ರವರುಣಭೇದೇನಾಗ್ನೇರ್ಮಿತ್ರಾದಿರೂಪಂ ತ್ವಮಗ್ನೇ ವರುಣೋ ಜಾಯಸೇ ಯತ್ । ಋ. ೫-೩-೧। ಇಂದ್ರಂ ಮಿತ್ರಂ ವರುಣಮಗ್ನಿಮಾಹುಃ । ಋ. ೧-೧೬೪-೪೬ । ಇತ್ಯಾದಿಶ್ರುತಿಷು ಪ್ರಸಿದ್ಧಂ । ಅಗ್ನೇರೇವೇಂದ್ರಾದ್ಯಾತ್ಮಕತ್ವಮಾಹುರಿತಿ ದ್ವಿತೀಯಮಂತ್ರಸ್ಯಾರ್ಥಃ । ತಾದೃಶೋಽಯಂ ಸೂರೋ ನ ಸೂರ್ಯ ಇವ ರರುಕ್ವಾನ್ ದೀಪ್ಯಮಾನಃ ॥ ರುಚ ದೀಪ್ತೌ । ಛಾಂದಸಸ್ಯ ಲಿಟಃ ಕ್ವಸುಃ ॥ ಅತಃ ಸ ತಾದೃಶೋಽಗ್ನಿರಸ್ತಿ ಉತ್ಕೃಷ್ಟಂ ವರ್ತತ ಇತಿ ಪೂರ್ವತ್ರಾನ್ವಯಃ ॥

ಪ್ರತಿಪದಾರ್ಥ

**ಅತ್ಯಃ**—(ಇಷ್ಟಬಂದಪ್ರದೇಶದಲ್ಲಿ) ಸಂಚರಿಸುವವನೂ । **ಕವಿಃ**—ಮೇಧಾವಿಯೂ ಆದ । **ಯಃ**—ಅಗ್ನಿಯು । **ನಾರ್ಮಿಣೀಂ ಪುರಂ**—ಹರ್ಷದಾಯಕವಾದ ಉತ್ತರವೇದಿ ಪ್ರದೇಶವನ್ನು । ಅಥವಾ (ಯಜ್ಞಾರ್ಥವಾಗಿ ಅಗ್ನಿಯು ದಯಮಾಡಬೇಕೆಂದು) ಯಜಮಾನರು ಉದ್ದೇಶಿಸಿದ ಪ್ರದೇಶವನ್ನು । **ಅರ್ವಾ**—ಸಂಚರಿಸುವ ಸ್ವಭಾವವುಳ್ಳ । **ನಭನ್ಯಃ ನ**—ಆಕಾಶಗಾಮಿಯಾದ ವಾಯುವಿನಂತೆ । **ಆ ಅದೀದೇತ್**—ವಿಶೇಷವಾಗಿ ಬೆಳಗಿಸುತ್ತಾನೆ । (ಮತ್ತು) **ಶತಾತ್ಮಾ**—ಆಹವನೀಯ, ಗಾರ್ಹಪತ್ಯಾದಿ ನಾನಾ ರೂಪಗಳುಳ್ಳ ಅಥವಾ ಇಂದ್ರಾದಿ ನಾನಾ ರೂಪವನ್ನು ಹೊಂದಿರುವ ಅಗ್ನಿಯು । **ಸೂರೋ ನ** – ಸೂರ್ಯನಂತೆ । **ರುರುಕ್ವಾನ್**—ಬೆಳಗುತ್ತಿದ್ದಾನೆ.

॥ ಭಾವಾರ್ಥ ॥

ಸ್ವೇಚ್ಛೆಯಿಂದ ಸಂಚರಿಸುವವನೂ, ಮೇಧಾವಿಯೂ ಆದ ಅಗ್ನಿಯು ಹರ್ಷದಾಯಕವಾದ ಉತ್ತರವೇದಿ ಪ್ರದೇಶವನ್ನು ಆಕಾಶದಲ್ಲಿ ಸಂಚರಿಸುವ ವಾಯುವಿನಂತೆ ವಿಶೇಷವಾಗಿ ಬೆಳಗಿಸುತ್ತಾನೆ. ಮತ್ತು, ನಾನಾರೂಪವನ್ನು ಹೊಂದಿರುವ ಅಗ್ನಿಯು ಸೂರ್ಯನಂತೆ ಬೆಳಗುತ್ತಿದ್ದಾನೆ.

## English Translation

He who is wise, and goes (wheresoever he will), like the rapid ethereal ( wind ), has lighted up the delightful spot, ( the altar ), and, identical with many forms, is radiant as the sun·

॥ ವಿಶೇಷವಿಷಯಗಳು ॥

**ನಾರ್ಮಿಣೀಂ**—ಈ ಪದಕ್ಕೆ ಅರ್ಥವನ್ನು ಹೇಳುವುದು ಕೊಂಚ ಕಷ್ಟವಾಗುತ್ತದೆ. ಸಾಯಣರೇ ನಿಷ್ಕೃಷ್ಟವಾದ ಅರ್ಥವನ್ನು ಹೇಳಿಲ್ಲ. ಮೊದಲು **ನರ್ಮವತೀಂ ಯಜಮಾನಾನಾಂ ಸಂಬಂಧಿನೀಂ ಉತ್ತರವೇದಿಂ ।** ಯಜಮಾನರಿಗೆ ಸಂಬಂಧಿಸಿದುದೂ, ಮನಸ್ಸಿಗೆ ಹರ್ಷದಾಯಕವಾದುದೂ ಆದ ಉತ್ತರವೇದಿಯೆಂದು ಅರ್ಥಮಾಡಿ ಅನಂತರ **ನೃಣಾಂ ಮನಸಿ ಸ್ಥಿತಾಂ ಯಜಮಾನಾನಾಂ ಯಜ್ಞಾರ್ಥಂ ಯಾಂ ಭೂಮಿಂ ಪ್ರತಿ ಅಗ್ನ್ಯಾಗಮನ ಮನೀಷಾ ವಿದ್ಯತೇ ತಾಂ ।** ಯಾವ ಯಜ್ಞಭೂಮಿಗೆ ಅಗ್ನಿಯು ಆಗಮನವಿರಬೇಕೆಂದು ಯಜ್ಞಕರ್ತರ ಮನಸ್ಸಿನಲ್ಲಿ ಇಚ್ಛೆಯಿದೆಯೋ ಅಂತಹ ಯಜ್ಞಭೂಮಿಯೆಂದು ಎರಡನೆಯದಾಗಿ ವಿವರಿಸಿದ್ದಾರೆ ಆದುದರಿಂದ **ನಾರ್ಮಿಣೀಂ** ಎಂದರೆ **ನರ್ಮವತೀಂ** ಎಂದಾಗಲಿ ಅಥವಾ **ನೃಣಾಂ ಮನಸಿ ಸ್ಥಿತಾಂ** ಎಂದಾಗಲಿ ಅರ್ಥವಾಗುತ್ತದೆ ಈ ಪದವನ್ನು **ಪುರಂ** ಎಂಬುದಕ್ಕೆ ವಿಶೇಷಣವನ್ನಾಗಿ ಮಾಡಿದೆ. **ಉತ್ತರವೇದಿ**ರೂಪವಾದ ಸ್ಥಾನವೆಂದರ್ಥ.

Monier Williams ಎಂಬ ಪಂಡಿತನು ಈ ಪದಕ್ಕೆ ತನ್ನ Sanskrit-English Dictionary ಯಲ್ಲಿ **ನ+ಅರ್ಮನ್ ।** ಹಾಳಾಗದೇ (ಶಿಥಿಲವಾಗದೇ) ಇರತಕ್ಕದ್ದು ಎಂದರ್ಥ ಮಾಡಿದ್ದಾನೆ. Name of a Town ಎಂದು ಒಂದು ಪಟ್ಟಣದ ಹೆಸರೆಂದೂ ಊಹಿಸುತ್ತಾನೆ. ಪಾಳುಬೀಳದಿರತಕ್ಕ ಪಟ್ಟಣವೆಂದಾಗಬಹುದು. ಪಾಣಿನಿಯಲ್ಲಿ **ದತ್ತಾರ್ಮ, ಗುಪ್ತಾರ್ಮ, ಬೃಹದರ್ಮ** ಎಂಬ ಪದಗಳಿವೆ. **ನಾರ್ಮಿಣೀ** ಎಂಬ ಪದಕ್ಕೆ ಸರಿಯಾದ ಅರ್ಥವನ್ನು ಹೇಳಲು ಪಾಣಿನಿಯಲ್ಲಾಗಲಿ, ನಿರುಕ್ತದಲ್ಲಾಗಲಿ ಸರಿಯಾದ ಸಹಾಯವಿಲ್ಲ ಆದುದರಿಂದ ಸಾಯಣರು ಹೇಳಿರುವ ಎರಡರ್ಥಗಳಲ್ಲಿ ಯಾವುದನ್ನಾದರೂ ಒಂದನ್ನು ಪರಿಗ್ರಹಿಸಬೇಕು.

**ಅತ್ಯಃ—ಅಪೇಕ್ಷಿತದೇಶಂ ಪ್ರತಿ ಅತನಶೀಲಃ ।** ತಾನು ಇಷ್ಟಬಂದ ಪ್ರದೇಶಕ್ಕೆ ಪ್ರಸರಿಸುವ ಸ್ವಭಾವವುಳ್ಳವನು ಎಂದು ಅಗ್ನಿಗೆ ವಿಶೇಷಣವಾಗಿದೆ. ಸಾಧಾರಣವಾಗಿ ಯಾವಾಗಲೂ ಸಂಚರಿಸುವ ಸ್ವಭಾವವುಳ್ಳ, ಅಶ್ವಾದಿತ್ಯಾದಿಗಳಿಗೂ ಈ ಪದವು ವಿಶೇಷಣವಾಗಿದೆ

ಏಷ ಪ್ರ ಪೂರ್ವೀರವ ತಸ್ಯ ಚಮ್ರಿಷೋಽತ್ಯೋ ನ ಯೋಷಾಮುದಯಂಸ್ತ ಭುರ್ವಣಿಃ ।
ದಕ್ಷಂ ಮಹೇ ಪಾಯಯತೇ ಹಿರಣ್ಯಯಂ ರಥಮಾವೃತ್ಯಾ ಹರಿಯೋಗಮೃಭ್ವಸಂ ।

(ಋ. ಸಂ. ೧-೫೬-೧)

ಎಂಬ ಋಕ್ಕಿನಲ್ಲಿ ಅತ್ಯಃ ಎಂಬುದು ಅಶ್ವಪರ್ಯಾಯವಾಗಿಯೂ,

**ಅಸ್ಯ ಶ್ಲೋಕೋ ದಿವೀಯತೇ ಪೃಥಿವ್ಯಾಮತ್ಯೋ ನ ಯಂಸದ್ಯಕ್ಷಭೃದ್ವಿಚೇತಾಃ ।**

**ಮೃಗಾಣಾಂ ನ ಹೇತಯೋ ಯಂತಿ ಚೇಮಾ ಬೃಹಸ್ಪತೇರಹಿಮಾಯಾँ ಅಭಿ ದ್ಯೂನ್ ।**

(ಋ. ಸಂ. ೧-೧೯೦-೪)

ಎಂಬಲ್ಲಿ ಅತನಶೀಲಃ ಆದಿತ್ಯಃ ಎಂದೂ ಅರ್ಥವಾಗುನಂತೆ ಈ ಪದದ ಪ್ರಯೋಗವಿದೆ.

**ನಭನ್ಯಃ—ನಭಸಿ ಆಕಾಶೇ ಭವೋ ನಭಸ್ವಾನ್ ವಾಯುರಿವ ।** ಆಕಾಶಸ್ಥನಾದ ವಾಯುವಿಗೆ ವಿಶೇಷಣವಾಗಿದೆ. ನಿರುಕ್ತಕಾರರು **ನಭತಿ, ಅರ್ದತಿ** (ನಿ ೨-೧೯) ಎಂದು ವಧಕರ್ಮನಾಮಗಳಲ್ಲಿ **ನಭತಿ** ಎಂಬ ಪದವನ್ನು ಸೇರಿಸಿರುವುದರಿಂದ ಸಾಯಣರು ಈ ಆಧಾರದಮೇಲೆ,

**ಗಾಯತ್ಸಾಮ ನಭನ್ಯಂ೧ ಯಥಾ ವೇರರ್ಚಾಮ ತದ್ವಾವೃಧಾನಂ ಸ್ವರ್ವತ್ ।**
**ಗಾವೋ ಧೇನವೋ ಬರ್ಹಿಷ್ಯದಬ್ಧಾ ಆ ಯತ್ಸದ್ಮಾನಂ ದಿವ್ಯಂ ವಿವಾಸಾನ್ ।**

(ಋ. ಸಂ. ೧-೧೭೩-೧)

ಎಂಬ ಋಕ್ಕಿನಲ್ಲಿ **ನಭನ್ಯಂ** ಎಂಬ ಪದಕ್ಕೆ **ನಭಸ್ಯಂ ನಭಸಿ ಭವಂ । ನಭೋವ್ಯಾಪಿನಂ ಹಿಂಸಕಂ ವಾ ರಾಕ್ಷಸಾದಿಕಸ್ಯ । ನಭತಿರ್ವಧಕರ್ಮಾ ।** ಎಂದು ವಿವರಿಸಿ ರಾಕ್ಷಸನಿಗೆ ವಿಶೇಷಣಪದವೆಂದು ಹೇಳಿದ್ದಾರೆ. ಆದರೆ,

**ಪ್ರ ಬ್ರಹ್ಮಾಣೋ ಅಂಗಿರಸೋ ನಕ್ಷಂತ ಪ್ರ ಕ್ರಂದನುರ್ನಭನ್ಯಸ್ಯ ವೇತು ।**
**ಪ್ರ ಧೇನವ ಉದಪ್ರುತೋ ನವಂತ ಯುಜ್ಯಾತಾಮದ್ರೀ ಅಧ್ವರಸ್ಯ ಪೇಶಃ ॥**

(ಋ. ಸಂ. ೭-೪೨-೧)

ಎಂಬಲ್ಲಿ **ನಭನ್ಯಸ್ಯ ಸ್ತೋತ್ರಸ್ಯ । ಅಸ್ಮದೀಯಂ ಸ್ತೋತ್ರಂ** ಎಂದರ್ಥಮಾಡಿದೆ.

**ಅರ್ವಾ—ಅರಣಕುಶಲಃ ।** ಶೀಘ್ರಗಾಮಿ, ವೇಗವಾಗಿ ಸಂಚರಿಸುವವನು ಎಂಬರ್ಥದಲ್ಲಿ ಉಪಯೋಗಿಸಲ್ಪಟ್ಟು ವಾಯುವಿಗೆ ವಿಶೇಷಣವಾಗಿದೆ. ಸಾಧಾರಣವಾಗಿ **ಅರ್ವತ್, ಅರ್ವನ್** ಎಂಬ ತಕಾರಾಂತ ಮತ್ತು ನಕಾರಾಂತ ಶಬ್ದಗಳು **ಅಶ್ವ**ಪರ್ಯಾಯವಾದ ಪದಗಳಾಗಿವೆ. ಆದರೆ ಕೆಲವೆಡೆಗಳಲ್ಲಿ ಅರ್ಥವೈವಿಧ್ಯವನ್ನೂ ಹೊಂದಿರುತ್ತವೆ. ನಿರುಕ್ತಕಾರರು **ಅತ್ಯಃ ಹಯಃ, ಅರ್ವಾ** (ನಿ. ೨-೨೭) ಎಂದು ಅಶ್ವನಾಮಗಳಲ್ಲೇ ಈ ಪದವನ್ನು ಸೇರಿಸಿರುತ್ತಾರೆ. ಆದರೆ ಋಕ್ಸಂಹಿತೆಯಲ್ಲಿ **ಅರ್ವತ್, ಅರ್ವನ್** ಎಂಬ ಎರಡು ಪದಗಳ ಪ್ರಯೋಗಗಳೂ ಗಮನಾರ್ಹಗಳು.

**ಯಸ್ಮೈ ತ್ವಮಾಯಜಸೇ ಸ ಸಾಧತ್ಯನರ್ವಾ ಕ್ಷೇತಿ ದಧತೇ ಸುವೀರ್ಯಂ ।**
**ಸ ತೂತಾವ ನೈನಮಶ್ನೋತ್ಯಂಹತಿರಗ್ನೇ ಸಖ್ಯೇ ಮಾ ರಿಷಾಮಾ ವಯಂ ತವ ।**

(ಋ. ಸಂ. ೧-೯೪-೨)

ಎಂಬಲ್ಲಿ **ಅರ್ವನ್** ಶಬ್ದವು ಶತ್ರುಪರ್ಯಾಯವಾಗಿದ್ದು **ಅನರ್ವಾ** ಎಂದರೆ ಶತ್ರುವಿನ ಅಧೀನವಿಲ್ಲದವನು, ಎಂದರ್ಥ ಮಾಡಿದ್ದಾರೆ. ಇಲ್ಲಿ **ಅರ್ವನ್** ಪದಕ್ಕೆ ಶತ್ರುವೆಂಬರ್ಥವನ್ನು ಸಮರ್ಥಿಸಲು ಸಾಯಣರು,

**ಅನರ್ವಾ ಪ್ರೇಹಿತ್ಯಾಹ ಭ್ರಾತೃವ್ಯೋ ವಾ ಅರ್ವಾ ಭ್ರಾತೃವ್ಯಾಪನುತ್ತ್ಯೈ ।**

(ತೈ. ಸಂ. ೬-೩-೮-೪)

ಎಂಬ ತೈತ್ತಿರೀಯಸಂಹಿತಾವಾಕ್ಯವನ್ನುದಹರಿಸಿ (೧-೩೭-೧ನೇ ಋಕ್ಕಿನ ಭಾಷ್ಯ) **ಅರ್ವನ್** ಶಬ್ದಕ್ಕೆ ಭ್ರಾತೃವ್ಯ ಎಂದರೆ ಶತ್ರುವೆಂದು ಅರ್ಥಮಾಡಿರುವುದನ್ನು ತೋರಿಸಿ ಇಲ್ಲಿ ಉದಹರಿಸಿರುವ ವಾಕ್ಯದಲ್ಲೂ ಇದರಂತೆ ಇನ್ನೂ ಕೆಲವು ಕಡೆಗಳಲ್ಲೂ ಅದೇ ಅರ್ಥವೆಂದು ಹೇಳಿದ್ದಾರೆ. ಹೀಗೆಯೇ ಋ. ಸಂ. ೫-೫೧-೧೧; ೧೦-೯೩-೧೪ ಇತ್ಯಾದಿ ಋಕ್ಕುಗಳಲ್ಲೂ ಶತ್ರುಪರ್ಯಾಯವಾಗಿದೆ. ಈ ಶಬ್ದವ್ಯುತ್ಪತ್ತಿಯ ವಿಷಯದಲ್ಲಿ Wilson ಮತ್ತು Max Muller ಎಂಬ ಪಂಡಿತರ ಭಿನ್ನಾಭಿಪ್ರಾಯಗಳನ್ನು ಈ ಸಂದರ್ಭದಲ್ಲಿ ತಿಳಿಸಿದರೆ ಅನುಚಿತವಾಗಲಾರದು. Wilson ಎಂಬ ಪಂಡಿತನು,

**ಕ್ರೀಳಂ ವಃ ಶರ್ಧೋ ಮಾರುತಮನರ್ವಾಣಂ ರಥೇಶುಭಂ । ಕಣ್ವಾ ಅಭಿ ಪ್ರ ಗಾಯತ ॥**

(ಋ. ಸಂ. ೧-೩೭-೧)

ಎಂಬ ಋಕ್ಕಿನಲ್ಲಿರುವ **ಅರ್ವನ್** ಶಬ್ದಕ್ಕೆ ಅರ್ಥಮಾಡುವಾಗ ಸಾಯಣಭಾಷ್ಯದ ಮೇಲೆ ಟೀಕೆ ಮಾಡುತ್ತಾ ಹೀಗೆ ಹೇಳಿರುತ್ತಾನೆ

The phrase is ಅನರ್ವಾಣಂ which the scholiast explains ಭ್ರಾತೃವ್ಯರಹಿತಂ.।) Literally without a brother's son, which would be a very unintelligible epithet. Arvan is in its usual acceptation a horse ; and being without horses would not be inapplicable to the Maruts, whose chariot is drawn by deer. ಭ್ರಾತೃವ್ಯ may mean an enemy, but it is doubtful if ಅರ್ವತ್ can admit of such an interpretation

(Rig-Veda Translation. Vol. I P. 258)

ಮರುತ್ತುಗಳ ವಾಹನವು ಜಿಂಕೆಗಳಾದುದರಿಂದ ಇಲ್ಲಿ ಕುದುರೆಗಳಿಲ್ಲದ ಎಂದರ್ಥಮಾಡುವುದು ಅನುಚಿತವಾಗಲಾರದು ಎಂದು ಈ ಪಂಡಿತನು ಅಭಿಪ್ರಾಯಪಡುತ್ತಾನೆ. ಆದರೆ ಇದಕ್ಕೆ ವಿರುದ್ಧವಾಗಿ ಇದೇ ಸೂಕ್ತವನ್ನು ಪರಿವರ್ತಿಸುವ ವೇಳೆಯಲ್ಲಿ Max Muller ಪಂಡಿತನು ಈ ಪದಕ್ಕೆ ಅಶ್ವವೆಂದು ಅರ್ಥಮಾಡಿರುವುದು ಸರಿಯಲ್ಲವೆಂದು ಟೀಕಿಸಿರುತ್ತಾನೆ. ಅದು ಈ ರೀತಿಯಿದೆ.

Wilson translates ಅನರ್ವಾಣಂ by without horses, though the commentator distinctly explains the word by without an enemy. Wilson considers it doubtful whether ಅರ್ವನ್ can ever mean enemy. The fact is, that in the Rig-Veda an-arvan never means without horses but always without hurt or free from enemies. and the commentator is perfectly right, as sense is concerned, rendering the word by 'without an enemy or unopposed' ( ಅಪ್ರತ್ಯೃತ ).

(Sacred Books of the East. Vol. 32. P. 65)

ಹೀಗಿದ್ದರೂ ಸಹ **ಅರ್ವನ್** ಎಂಬ ಶಬ್ದದ ಪ್ರಯೋಗವು ಅಶ್ವಪರ್ಯಾಯವಾಗಿರುವುದೇ ಹೆಚ್ಚಾಗಿದೆ. ಪ್ರಕೃತವಾದ ಋಕ್ಕಿನಲ್ಲಿ ಮಾತ್ರ ಅಶ್ವದ ವಿಶೇಷಗುಣವು **ವಾಯು**ವಿನಲ್ಲಿಯೂ ಇರುವುದೆಂದು ತೋರಿಸಲು ಈ ಪದವನ್ನು **ವಾಯು**ವಿಗೆ ವಿಶೇಷಣವನ್ನಾಗಿ ಮಾಡಿ ಉಪಯೋಗಿಸಿದೆ.

**ಶತಾತ್ಮಾ**—ಇದೇ ಭಾಗದಲ್ಲಿ ೧-೧೪೮-೧ನೇ ಋಕ್ಕಿನ ಅರ್ಥವನ್ನು ವಿವರಿಸುವಾಗ·**ವಿಶ್ವಾಪ್ಸು**ವೆಂಬ ವಿಶೇಷಣವು ಅಗ್ನಿಯ ನಾನಾವಿಧವಾದ ಸ್ವರೂಪವನ್ನು ತಿಳಿಸುವುದೆಂದು ಉದಾಹರಣೆಗಳೊಡನೆ ತಿಳಿಸಿದೆ. ಪ್ರಕೃತವಾದ ಋಕ್ಕಿನಲ್ಲಿಯೂ ಸಹ **ಶತಾತ್ಮಾ** ಎಂಬ ವಿಶೇಷಣವು **ಅಗ್ನಿಯ** ಮಹತ್ತ್ವವನ್ನು ತಿಳಿಸುತ್ತದೆ. **ಶತಂ ಸಹಸ್ರಂ ಇತ್ಯಪರಿಮಿತವಚನಃ । ತತ್ತದ್ಯಜಮಾನಗೃಹಾಪೇಕ್ಷಯಾ ಆಹವನೀಯಗಾರ್ಹಪತ್ಯಾದ್ಯಪೇಕ್ಷಯಾ ವಾ ನಾನಾರೂಪತ್ವಂ । ಶತಂ** ಎಂಬ ಪದಕ್ಕೆ ಅಲ್ಲಿ ಕೇವಲ ನೂರು ಎಂದರ್ಥವಲ್ಲ. ಅಪರಿಮಿತವಾದ ಸಂಖ್ಯೆಯೆಂದರ್ಥ. ಬೇರೆ ಬೇರೆ ಯಜ್ಞಕರ್ತರ ಇಷ್ಟಾನುಸಾರವಾಗಿ ಅವರವರ ಗೃಹದಲ್ಲಿ **ದಕ್ಷಿಣಾಗ್ನಿ ಆಹವನೀಯ, ಗಾರ್ಹಪತ್ಯ** ಈ ರೂಪಗಳಲ್ಲಿರುವುದರಿಂದ ಈ ವಿಶೇಷಣವಿದೆಯೆಂದೂ. ಅಥವಾ,

**ಇಂದ್ರಂ ಮಿತ್ರಂ ವರುಣಮಗ್ನಿಮಾಹುರಥೋ ದಿವ್ಯಃ ಸ ಸುಪರ್ಣೋ ಗರುತ್ಮಾನ್ ।**
**ಏಕಂ ಸದ್ವಿಪ್ರಾ ಬಹುಧಾ ವದಂತ್ಯಗ್ನಿಂ ಯಮಂ ಮಾತರಿಶ್ವಾನಮಾಹುಃ ।**

(ಋ. ಸಂ. ೧-೧೬೪-೪೬)

**ತ್ವಮಗ್ನೇ ವರುಣೋ ಜಾಯಸೇ ಯತ್ತ್ವಂ ಮಿತ್ರೋ ಭವಸಿ ಯತ್ಸಮಿದ್ಧಃ ।**
**ತ್ವೇ ವಿಶ್ವೇ ಸಹಸಸ್ಪುತ್ರ ದೇವಾಸ್ತ್ವಮಿಂದ್ರೋ ದಾಶುಷೇ ಮರ್ತ್ಯಾಯ ॥**

(ಋ. ಸಂ. ೫-೩-೧)

ಇತ್ಯಾದಿ ಋಕ್ಕುಗಳಲ್ಲೂ ಮತ್ತು

**ತ್ವಮಗ್ನೇ ರುದ್ರೋ ಅಸುರೋ ಮಹೋ ದಿವಸ್ತ್ವಗ್ಂ ಶರ್ಧೋ ಮಾರುತಂ ಪೃಕ್ಷ ಈಶಿಷೇ ।**
**ತ್ವಂ ವಾತೈರರುಣೈರ್ಯಾಸಿ ಶಂಗಯಸ್ತ್ವಂ ಪೂಷಾ ವಿಧತಃ ಪಾಸಿ ನು ತ್ಮನಾ ॥**

(ತೈ. ಸಂ. ೧-೩-೧೪)

ಇತ್ಯಾದಿ ತೈತ್ತಿರೀಯ ಸಂಹಿತಾವಾಕ್ಯಗಳಲ್ಲೂ ವರ್ಣಿಸಿರುವಂತೆ ಅಗ್ನಿಯು **ವಿಶ್ವಾತ್ಮಾ ನೇ** ಆಗಿರುವುದರಿಂದ ಇಲ್ಲಿ **ಶತಾತ್ಮಾ** ಎಂದು ಸ್ತುತಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ನಾರ್ಮಿಣೀಮ್—ಋನ್ನೇಭ್ಯೋಙೀಪ್** (ಪಾ. ಸೂ. ೪-೧-೫) ಎಂಬುದರಿಂದ ಸ್ತ್ರೀತ್ವದಲ್ಲಿ ಙೀಪ್ ಪಿತ್ತಾದುದರಿಂದ ಅನುದಾತ್ತವಾಗುತ್ತದೆ. ದ್ವಿತೀಯಾ ಏಕವಚನಾಂತರೂಪ.

**ಅದೀದೇತ್**—ದೀದೀ ಎಂಬುದು ಛಾಂದಸಧಾತು. ದೀಪ್ತ್ಯರ್ಥದಲ್ಲಿ ಪ್ರಯುಕ್ತವಾಗಿದೆ. **ಛಂದಸಿಲುಙ್-ಲಙ್‌ಲಿಟಃ** (ಪಾ.ಸೂ ೩-೪-೬) ಎಂಬುದರಿಂದ ವರ್ತಮಾನಾರ್ಥದಲ್ಲಿ ಲಙ್. ಛಾಂದಸವಾಗಿ ಶಪಿಗೆ ಲುಕ್. ಪ್ರತ್ಯಯ ನಿಮಿತ್ತವಾಗಿ ಧಾತುವಿನ ಇಕಿಗೆ ಗುಣ. ಅಂಗಕ್ಕೆ ಅಡಾಗಮ. ಯಚ್ಛಬ್ದ ಸಂಬಂಧವಿರುವುದರಿಂದ ನಿಘಾತಸ್ವರ ಬರುವುದಿಲ್ಲ ಆದ್ಯುದಾತ್ತವಾಗುತ್ತದೆ.

**ಅತ್ಯಃ**—ಅತ್ಯಃ ಹಯಃ (ನಿರು. ೧-೪೧-೧) ಎಂದು ಪಠಿತವಾಗಿದೆ. ವೇಗ ಸಾಮ್ಯದಿಂದ ಗಮನಶೀಲನಾದ ಕವಿಯಲ್ಲಿ ಇಲ್ಲಿ ಪ್ರಯುಕ್ತವಾಗಿದೆ.

**ನಭನ್ಯಃ**—ನಭಸಿ ಭವಃ ನಭನ್ಯಃ. ಯತ್ ಪ್ರತ್ಯಯ. **ತಿತ್ಸ್ವರಿತಮ್** (ಪಾ. ಸೂ. ೬-೧-೧೮೫) ಎಂಬುದರಿಂದ ಸ್ವರಿತಸ್ವರ. ಬರುತ್ತದೆ. ಛಾಂದಸವಾಗಿ ವರ್ಣವಿಕಾರ ಬರುತ್ತದೆ.

**ಸೂರಃ**—ಷೂಙ್ ಪ್ರಾಣಿಗರ್ಭವಿಮೋಚನೇ. ಧಾತು. **ಸುಸೂಧಾ**—(ಉ. ಸೂ. ೨-೧೮೩) ಎಂಬುದರಿಂದ ಕ್ರನ್ ಪ್ರತ್ಯಯ. **ಞ್ನಿತ್ಯಾದಿರ್ನಿತ್ಯಮ್** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ರುರುಕ್ವಾನ್**—ರುಚ ದೀಪ್ತೌ. ಧಾತು. ಛಾಂದಸವಾಗಿ ಲಿಟ್ ಬಂದಾಗ **ಕ್ವಸುಶ್ಚ**. (ಪಾ. ಸೂ. ೩-೨-೧೦೭) ಎಂಬುದರಿಂದ ಅದಕ್ಕೆ ಕ್ವಸು ಪ್ರತ್ಯಯ. ಧಾತುವಿಗೆ ದ್ವಿತ್ವಾದಿ. ಛಾಂದಸವಾಗಿ ಕುತ್ವ ಬರುತ್ತದೆ. ವಸುವಿನ ಸ್ವರ ಉಳಿಯುತ್ತದೆ. ಪ್ರಥಮಾ ಏಕವಚನಾಂತರೂಪ.

**ಶತಾತ್ಮಾ**—ಶತಂ ಆತ್ಮಾನಃ ಯಸ್ಯ ಸಃ ಶತಾತ್ಮಾ **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್** ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ. ॥ ೩ ॥



ಸಂಹಿತಾಪಾಠಃ

ಅಭಿ ದ್ವಿಜನ್ಮಾ ತ್ರೀ ರೋಚನಾನಿ ವಿಶ್ವಾ ರಜಾಂಸಿ ಶುಶುಚಾನೋ ಅಸ್ಥಾತ್ ।

ಹೋತಾ ಯಜಿಷ್ಠೋ ಅಪಾಂ ಸಧಸ್ಥೇ ॥ ೪ ॥

ಪದಪಾಠಃ

ಅಭಿ । ದ್ವಿಽಜನ್ಮಾ । ತ್ರೀ । ರೋಚನಾನಿ । ವಿಶ್ವಾ । ರಜಾಂಸಿ । ಶುಶುಚಾನಃ । ಅಸ್ಥಾತ್ ।

ಹೋತಾ । ಯಜಿಷ್ಠಃ । ಅಪಾಂ । ಸಧಽಸ್ಥೇ ॥ ೪ ॥

ಸಾಯಣಭಾಷ್ಯಂ

ಅಯಮಗ್ನಿರ್ದ್ವಿಜನ್ಮಾ ದ್ವಾಭ್ಯಾಮರಣೀಭ್ಯಾಂ ಜಾಯಮಾನಃ । ಯದ್ವಾ । ಮಥನಾತ್ಪ್ರಥಮಂ ಜನ್ಮ । ಉತ್ಪತ್ತ್ಯನಂತರಂ ಪವಮಾನೇಷ್ಟ್ಯಾದಿಸಂಸ್ಕಾರರೂಪಂ ದ್ವಿತೀಯಂ ಜನ್ಮೈವ । ಏವಂ ದ್ವಿಜನ್ಮತ್ವಂ । ಅಥವಾ ದ್ಯಾವಾಪೃಥಿವೀಭ್ಯಾಮುತ್ಪನ್ನತ್ವಾತ್ । ತಾದೃಶೋಽಗ್ನಿಸ್ತ್ರೀ ರೋಚನಾನಿ ತ್ರೀಣಿ ರೋಚನಾನಿ ಕ್ಷಿತ್ಯಾದಿಸ್ಥಾನಾನಿ ಗಾರ್ಹಪತ್ಯಾದೀನಿ ವಾಭಿ ಶುಶುಚಾನೋಽಭಿತಃ ಪ್ರಕಾಶಯನ್ । ನ ಕೇವಲಂ ತ್ರೀಣ್ಯೇವ ಕಿಂತು ವಿಶ್ವಾ ರಜಾಂಸಿ ಸರ್ವಾಣ್ಯಪಿ ರಂಜನಾತ್ಮಕಾನಿ ಕ್ಷಿತ್ಯಾದಿಲೋಕಾನ್ ಶುಶುಚಾನೋಽಭಿತಃ ಪ್ರಕಾಶಯನ್ ದೀಪಯನ್ ಹೋತಾ ದೇವಾನಾಮಾಹ್ವಾತಾ ಯಜಿಷ್ಠೋ ಯಷ್ಟೃತಮಃ ಸನ್ನಪಾಂ ಪ್ರೋಕ್ಷಣ್ಯಾದ್ಯುದಕಾನಾಂ ಸಧಸ್ಥೇ ಸಹಸ್ಥಾನೇ ಯಾಗದೇಶೇಽಸ್ಥಾತ್ । ತಿಷ್ಠತಿ ॥

### ಪ್ರತಿಪದಾರ್ಥ

**ದ್ವಿಜನ್ಮಾ**—ಎರಡು ವಿಧವಾದ ಉತ್ಪತ್ತಿಯುಳ್ಳ ಅಗ್ನಿಯು । **ತ್ರೀರೋಚನಾನಿ** – ಪ್ರಕಾಶಮಾನಗಳಾದ ಮೂರುಲೋಕಗಳನ್ನೂ । (ಅಲ್ಲದೇ) **ವಿಶ್ವಾ ರಜಾಂಸಿ**—ರಂಜನಾತ್ಮಕಗಳಾದ ಸಕಲ ಲೋಕಗಳನ್ನೂ । **ಅಭಿ ಶುಶುಚಾನಃ**—ಸುತ್ತಲೂ ಪ್ರಕಾಶಿಸುವಂತೆ ಮಾಡುತ್ತಾ । **ಹೋತಾ**—(ದೇವತೆಗಳನ್ನು ಯಜ್ಞಕ್ಕೆ) ಕರೆಯುವವನಾಗಿಯೂ । **ಯಜಿಷ್ಠಃ**—ಅತ್ಯಂತ ಶ್ರೇಷ್ಠನಾದ ಯಜ್ಞಕರ್ತನಾಗಿಯೂ । **ಅಪಾಂ ಸಧಸ್ಥೇ**—ಪ್ರೋಕ್ಷಣ್ಯಾದಿ ಉದಕಗಳು ತುಂಬಿರುವ ಯಾಗ ಪ್ರದೇಶದಲ್ಲಿ । **ಅಸ್ಥಾತ್**—ನೆಲಸಿದ್ದಾನೆ.

### ಭಾವಾರ್ಥ

ಎರಡು ವಿಧವಾದ ಉತ್ಪತ್ತಿಯುಳ್ಳ ಅಗ್ನಿಯು ಪ್ರಕಾಶಮಾನಗಳೂ ರಂಜನಾತ್ಮಕಗಳೂ ಆದ ಎಲ್ಲಾ ಲೋಕಗಳನ್ನೂ ಸುತ್ತಲೂ ಪ್ರಕಾಶಿಸುವಂತೆ ಮಾಡುತ್ತಾ ದೇವತೆಗಳನ್ನು ಯಜ್ಞಕ್ಕೆ ಕರೆಯುವವನಾಗಿಯೂ, ಅತ್ಯಂತ ಶ್ರೇಷ್ಠನಾದ ಯಜ್ಞಕರ್ತನಾಗಿಯೂ ಪ್ರೋಕ್ಷಣ್ಯಾದಿ ಉದಕಗಳು ತುಂಬಿರುವ ಯಾಗಪ್ರದೇಶದಲ್ಲಿ ನೆಲಸಿದ್ದಾನೆ.

### English Translation

He, the twofold-born, illuminating the three bright (regions), and shining over all the lustrous spheres, the adorable invoker of the gods, is present at the place where the waters are collected

### ವಿಶೇಷವಿಷಯಗಳು

**ದ್ವಿಜನ್ಮಾ**—**ದ್ವಾಭ್ಯಾಂ ಅರಣಿಭ್ಯಾಂ ಜಾಯಮಾನಃ । ಯದ್ವಾ । ಮಥನೇನ ಆಧಾನಸಂಸ್ಕಾರೇಣ ಚ ಉತ್ಪನ್ನತ್ವಾತ್ ದ್ವಿಜನ್ಮತ್ವಂ ಅಥವಾ ದ್ಯಯೋರ್ದ್ಯಾವಾಪೃಥಿವ್ಯೋರ್ಜಾಯಮಾನಃ ಅರಣ್ಯೋರ್ವಾ ಜಾಯಮಾನಃ ।** ಇತ್ಯಾದಿಯಾಗಿ ಅಗ್ನಿಯ ಉತ್ಪತ್ತಿಕ್ರಮವು ವರ್ಣಿತವಾಗಿರುವುದನ್ನು ಇದೇ ಭಾಗದಲ್ಲಿ ೧-೧೪೦-೨ ನೇಋಕ್ಕಿನ ವಿಶೇಷ ವಿಷಯಗಳಲ್ಲಿ ತಿಳಿಸಿದೆ.

**ತ್ರೀ ರೋಚನಾನಿ**—ಇಲ್ಲಿ **ರೋಚನ** ಶಬ್ದಕ್ಕೆ ಪ್ರಭಾಮಂಡಲವೆಂದು ಅರ್ಥಮಾಡಬಹುದೆಂದು ತೋರುತ್ತೆ. ಅಗ್ನಿಯು ತನ್ನ ಪ್ರಭೆಯನ್ನು ಬೀರತಕ್ಕ ಸ್ಥಾನಗಳು ಮೂರು. ಇವು ಪೃಥಿವೀ, ಅಂತರಿಕ್ಷ ಮತ್ತು ದ್ಯುಲೋಕ ಎಂದಾಗಲಿ ಅಥವಾ ಗಾರ್ಹಪತ್ಯ, ಆಹವನೀಯ ಮತ್ತು ದಕ್ಷಿಣಾಗ್ನಿ ಎಂದಾಗಲಿ ಆಗಬಹುದೆಂದು ಸಾಯಣರು ವಿವರಿಸಿದ್ದಾರೆ. **ತ್ರಿಮೂರ್ಧಾನಂ** ಎಂಬ ಪದದ ವಿವರಣೆಯಲ್ಲಿ (ಇದೇ ಭಾಗದ ೧-೧೪೬-೧) ಈ ವಿಷಯವನ್ನು ಸೂಕ್ಷ್ಮವಾಗಿ ಸೂಚಿಸಿದೆ. ಅಲ್ಲದೆ

**ತ್ರೀಣಿ ಜಾನಾ ಪರಿ ಭೂಷಂತ್ಯಸ್ಯ ಸಮುದ್ರ ಏಕಂ ದಿವ್ಯೇಕಮಪ್ಸು ।**
**ಪೂರ್ವಾಮನು ಪ್ರ ದಿಶಂ ಪಾರ್ಥಿವಾನಾಮೃತೂನ್ಪ್ರಶಾಸದ್ವಿ ದಧಾವನುಷ್ಠು ।**
(ಋ. ಸಂ. ೧-೯೫-೩)

ಎಂಬ ಋಕ್ಕಿನ ವಿಶೇಷವಿಷಯಗಳಲ್ಲಿಯೂ ಸಹ (ಋಗ್ವೇದ ಸಂಹಿತಾ ಭಾಗ ೮, ಪೇಜು ೧೭ ರಿಂದ ೧೯) ಈ ವಿಷಯವನ್ನು ವಿವರವಾಗಿ ತಿಳಿಸಿದೆ.

**ರಜಾಂಸಿ—ಸರ್ವಾಣ್ಯಪಿ ರಂಜನಾತ್ಮಕಾನ್ ಕ್ಷಿತ್ಯಾದಿಲೋಕಾನ್ ಶುಶುಚಾನಃ ।** ಮನಸ್ಸಿಗೆ ಆಕರ್ಷಕವಾಗಿರುವ ಕ್ಷಿತ್ಯಾದಿಲೋಕಗಳೆಂದರ್ಥ. ರಜಃ ಶಬ್ದಕ್ಕೆ **ಲೋಕ, ಉದಕ** ಈ ಅರ್ಥಗಳಲ್ಲಿರುವ ಪ್ರಯೋಗಗಳನ್ನು ಉದಾಹರಣೆಗಳೊಡನೆ ಇದೇ ಭಾಗದಲ್ಲಿ ೧-೧೩೯-೪ ನೇ ಋಕ್ಕಿನ ವಿಶೇಷವಿಷಯಗಳಲ್ಲಿ ತಿಳಿಸಿದೆ.

**ಅಪಾಂ ಸಧಸ್ಥೇ—ಸಹಸ್ಥಾನೇ** (ನಿ. ೩-೧೫) ಎಲ್ಲರೂ ಒಟ್ಟಿಗೆ ಇರತಕ್ಕ ಪ್ರದೇಶವಾದುದರಿಂದ **ಗೃಹೇ** ಮನೆಯಲ್ಲಿ ಎಂದರ್ಥ. ಅಥವಾ **ಸಹ ತಿಷ್ಠಂತಿ ಯಸ್ಮಿನ್ ದೇವತಾಃ ಸ ಸಧಸ್ಥೋ ಯಜ್ಞಃ ।** ದೇವತೆಗಳೆಲ್ಲರೂ ಒಟ್ಟಿಗೆ ಸೇರಿ ಕುಳಿತುಕೊಳ್ಳುವುದರಿಂದ ಯಜ್ಞವೆಂದಾಗುತ್ತದೆ.

ಅಪಾಂ ಸಧಸ್ಥೇ ಎನ್ನುವುದಕ್ಕೆ **ಪ್ರೋಕ್ಷಣ್ಯಾದ್ಯುದಕಾನಾಂ ಸಹಸ್ಥಾನೇ ಯಾಗೇ ।** ಪವಿತ್ರಾತ್ಮಕವಾದ ಉದಕಗಳಿರುವುದರಿಂದ ಯಜ್ಞಸ್ಥಾನಕ್ಕೆ ಅಪಾಂ ಸಧಸ್ಥವೆಂದು ಹೆಸರು. ಅಂತಹ ಯಜ್ಞಭೂಮಿಯಲ್ಲಿರುವವನು ಎಂದರ್ಥವಾಗುತ್ತದೆ. ಆದರೆ.

**ಇಮಂ ವಿಧಂತೋ ಅಪಾಂ ಸದಸ್ಥೇ ದ್ವಿತಾದಧುರ್ಭೃಗವೋ ವಿಕ್ಷ್ವಾಯೋಃ ।**
**ಏಷ ವಿಶ್ವಾನ್ಯಭ್ಯಸ್ತು ಭೂಮಾ ದೇವಾನಾಮಗ್ನಿರರತಿರ್ಜೀರಾಶ್ವಃ ॥**

(ಋ. ಸಂ. ೨-೪-೨)

**ಇತ್ಯಾದಿ** ಋಕ್ಕುಗಳಲ್ಲಿ **ಅಪಾಂ ಸಹಸ್ಥಾನೇ ಅಂತರಿಕ್ಷೇ ।** ವೈದ್ಯುತಾಗ್ನಿಯ ಗೃಹರೂಪವಾದ ಅಂತರಿಕ್ಷವೆಂದರ್ಥ ಮಾಡಿದೆ.

### ವ್ಯಾಕರಣಪ್ರಕ್ರಿಯಾ

**ದ್ವಿಜನ್ಮಾ**—ದ್ವೇ ಜನ್ಮನೀ ಯಸ್ಯ ಸಃ ದ್ವಿಜನ್ಮಾ. **ಪರಾದಿಶ್ಛಂದಸಿ ಬಹುಲಮ್** (ಪಾ ಸೂ. ೬-೨-೧೯೯) ಎಂಬುದರಿಂದ ಉತ್ತರಪದ ಆದ್ಯುದಾತ್ತಸ್ವರ ಬರುತ್ತದೆ.

**ರೋಚನಾನಿ**—ರುಚ ದೀಪ್ತೌ. ಧಾತು. **ಅನುದಾತ್ತೇತಶ್ಚ ಹಲಾದೇಃ** (ಪಾ. ಸೂ. ೩-೨-೧೪೯) ಎಂಬುದರಿಂದ ಯುಚ್ ಪ್ರತ್ಯಯ. **ಯುವೋರನಾಕೌ** (ಪಾ. ಸೂ. ೭-೧-೧) ಎಂಬುದರಿಂದ ಅದಕ್ಕೆ ಅನಾದೇಶ. **ಚಿತಃ** (ಪಾ ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ವಿಶ್ವಾ**—ವಿಶ್ವಾನಿ ಎಂದು ರೂಪವಾದಾಗ **ಶೇಶ್ಛಂದಸಿ ಬಹುಲಮ್** (ಪಾ. ಸೂ. ೬-೧-೭೦) ಎಂಬುದರಿಂದ ಶಿಗೆ ಲೋಪ.

**ಶುಶುಚಾನಃ**—ಶುಚ ದೀಪ್ತೌ ಧಾತು. ಛಾಂದಸವಾಗಿ ಲಿಟ್ ಬಂದಾಗ **ಲಿಟಃ ಕಾನಜ್ವಾ** (ಪಾ. ಸೂ. ೩-೨-೧೦೬) ಎಂಬುದರಿಂದ ಅದಕ್ಕೆ ಕಾನಚ್ ಆದೇಶ. ಧಾತುವಿಗೆ ದ್ವಿತ್ವಾದಿ. **ಚಿತಃ** ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಅಸ್ಥಾತ್**—ಷ್ಠಾ ಗತಿನಿವೃತ್ತೌ. ಧಾತು. **ಛಂದಸಿಲುಙ್‌ಲಙ್‌ಲಿಟಃ** ಎಂಬುದರಿಂದ ವರ್ತಮಾನಾರ್ಥದಲ್ಲಿ ಲುಙ್. ಪ್ರಥಮಪುರುಷ ಏಕವಚನದಲ್ಲಿ ತಿಪ್‌ಪ್ರತ್ಯಯ. ಇತಶ್ಚ ಸೂತ್ರದಿಂದ ಇಕಾರಲೋಪ. ಚ್ಲಿಗೆ ಸಿಚಾದೇಶಬಂದಾಗ **ಗಾತಿಸ್ಥಾಘುಪಾಭೂಭ್ಯಃ**—(ಪಾ. ಸೂ. ೨-೪-೭೭) ಎಂಬುದರಿಂದ ಅದಕ್ಕೆ ಲುಕ್. ಅಂಗಕ್ಕೆ ಅಡಾಗನು ತಿಙಂತನಿಘಾತಸ್ವರ ಬರುತ್ತದೆ.

**ಯಜಿಷ್ಠಃ**—ಯಜ ದೇವಪೂಜಾಸಂಗತಿಕರಣದಾನೇಷು. ಧಾತು. ಕರ್ತೃವಿನಲ್ಲಿ ತೃಚ್‌ಪ್ರತ್ಯಯ. ಅತಿ ಶಯಾರ್ಥದಲ್ಲಿ **ತುಶ್ಛಂದಸಿ** ಎಂಬುದರಿಂದ ತೃಜಂತದಮೇಲೆ ಇಷ್ಠನ್ ಪ್ರತ್ಯಯ. **ತುರಿಷ್ಠೇಮೇಯಃಸು** ಎಂಬುದ ರಿಂದ ತೃಚಿಗೆ ಲೋಪ. ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಅಪಾಮ್**—**ಊಡಿದಂಪದಾದಿ** (ಪಾ.ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಸಧಸ್ಥೇ**—ಷ್ಠಾ ಗತಿನಿವೃತ್ತೌ. ಧಾತು. **ಸುಪಿ ಸ್ಥಃ** (ಪಾ. ಸೂ ೩-೨-೪) ಎಂಬುದರಿಂದ ಕಪ್ರತ್ಯಯ. **ಸಧಮಾದಸ್ಥಯೋಶ್ಛಂದಸಿ** (ಪಾ.ಸೂ. ೬-೩-೯೬) ಎಂಬುದರಿಂದ ಸಹ ಎಂಬುದಕ್ಕೆ ಸಧಾದೇಶ. **ಆತೋ ಲೋಪ ಇಟಿಚ** (ಪಾ. ಸೂ. ೬-೪-೬೪) ಎಂಬುದರಿಂದ ಧಾತುವಿನ ಆಕಾರಕ್ಕೆ ಲೋಪ. ॥ ೪ ॥



ಸಂಹಿತಾಪಾಠಃ

## ಅಯಂ ಸ ಹೋತಾ ಯೋ ದ್ವಿಜನ್ಮಾ ವಿಶ್ವಾ ದಧೇ ವಾರ್ಯಾಣಿ ಶ್ರವಸ್ಯಾ।

## ಮರ್ತೋ ಯೋ ಅಸ್ಮೈ ಸುತುಕೋ ದದಾಶ ॥ ೫ ॥

। ಪದಪಾಠಃ ।

**ಅಯಂ । ಸಃ । ಹೋತಾ । ಯಃ । ದ್ವಿಜನ್ಮಾ । ವಿಶ್ವಾ । ದಧೇ । ವಾರ್ಯಾಣಿ । ಶ್ರವಸ್ಯಾ ।**

**ಮರ್ತಃ । ಯಃ । ಅಸ್ಮೈ । ಸುऽತುಕಃ । ದದಾಶ ॥ ೫ ॥**

ಸಾಯಣಭಾಷ್ಯಂ

**ಯೋ ದ್ವಿಜನ್ಮಾ ಸ ಏವ ಹೋತಾ ಹೋಮನಿಷ್ಪಾದಕಃ ಅರಣೀಭ್ಯಾಮುತ್ಪನ್ನಸ್ಯೈವ ಗಾರ್ಹ- ಪತ್ಯದ್ವಾರಾಹವನೀಯತ್ವಾತ್ ಆಹ್ವಾತಾ ವಾ ದೇವಾನಾಂ ಸೋಽಯಂ ವಿಶ್ವಾ ವಿಶ್ವಾನಿ ವಾರ್ಯಾಣಿ ವರಣೀಯಾನಿ ॥ ಈಡವಂದವೃಶಂಸದುಹಾಂ ಣ್ಯತ ಇತ್ಯಾದ್ಯುದಾತ್ತತ್ವಂ ॥ ಶ್ರವಸ್ಯಾ ಶ್ರವಸ್ಯಯಾ । ಶ್ರವೋಽನ್ನಂ ಹವಿರ್ಲಕ್ಷಣಂ । ತದಿಚ್ಛಯಾ ॥ ಶ್ರವಃಶಬ್ದಾತ್ ಕ್ಯಜಂತಾತ್ ಅ ಪ್ರತ್ಯಯಾದಿತಿ ಭಾವೇ ಅಪ್ರತ್ಯಯಃ ॥ ದಧೇ । ಧಾರಯತಿ । ಅಸ್ಮಾ ಉಕ್ತಸ್ವರೂಪಾಯಾಗ್ನಯೇ ಯೋ ಮರ್ತ್ಯೋ ದದಾಶ ದದಾತಿ ಸ ಸುತುಕಃ ಶೋಭನಪುತ್ರೋ ಭವತಿ ॥**

ಪ್ರತಿಪದಾರ್ಥ

**ಯಃ**—ಯಾವ ಅಗ್ನಿಯು । **ದ್ವಿಜನ್ಮಾ**—ಎರಡುವಿಧವಾದ ಉತ್ಪತ್ತಿಯುಳ್ಳವನೋ । **ಸಃ**—ಅವನೇ । **ಹೋತಾ**—ಹೋಮಸಂಪಾದಕನು ಅಥವಾ ದೇವತೆಗಳನ್ನು ಯಜ್ಞಕ್ಕೆ ಕರೆಯುವವನು । **ಅಯಂ**—ಈ ಅಗ್ನಿಯು ।

**ಶ್ರವಸ್ಯಾ**—ಹವಿಸ್ಸಿನರೂಪದ ಅನ್ನವನ್ನು ಪಡೆಯಲಿಚ್ಛಿಸಿ । **ವಿಶ್ವಾ**—ಸಮಸ್ತವಾದುವೂ । **ವಾರ್ಯಾಣಿ**—ಅತ್ಯಪೇಕ್ಷಿತವಾದುವೂ ಆದ ಧನಗಳನ್ನು । **ದಧೇ**—ಹೊಂದಿರುತ್ತಾನೆ । **ಅಸ್ಮೈ**—ಈ ಅಗ್ನಿಗೆ । **ಯಃ ಮರ್ತಃ**—ಯಾವ ಮಾನವನು । **ದದಾಶ**—(ಹವಿಸ್ಸನ್ನು) ಅರ್ಪಿಸುತ್ತಾನೆಯೋ, (ಅವನು) । **ಸುತುಕಃ**—ಶ್ರೇಷ್ಠವಾದ ಪುತ್ರಸಂಪತ್ತುಳ್ಳ ಪಿತೃವಾಗಿ ಆಗುವನು ।

ಭಾವಾರ್ಥ

ಯಾವ ಅಗ್ನಿಗೆ ಎರಡು ವಿಧವಾದ ಉತ್ಪತ್ತಿಯಿದೆಯೋ, ಅವನೇ ಹೋಮ ಸಂಪಾದಕನು. ಈ ಅಗ್ನಿಯು ಹವಿಸ್ಸಿನ ರೂಪದ ಅನ್ನವನ್ನು ಪಡೆಯಲಿಚ್ಛಿಸಿ ಸಮಸ್ತವಾದವೂ, ಅತ್ಯಪೇಕ್ಷಿತವಾದವೂ ಆದ ಧನಗಳನ್ನು ಹೊಂದಿರುತ್ತಾನೆ. ಈ ಅಗ್ನಿಗೆ ಯಾವ ಮಾನವನು ಹವಿಸ್ಸನ್ನು ಅರ್ಪಿಸುತ್ತಾನೆಯೋ ಅವನು ಶ್ರೇಷ್ಠವಾದ ಪುತ್ರಸಂಪತ್ತುಳ್ಳ ಪಿತೃವಾಗಿ ಆಗುವನು

English Translation

He is the offerer of oblations, who is of twofold birth; and, through desire for (sacrificial) food, has in his keeping all good things: the man who presents offerings to him is the parent of excellent offspring.

ವಿಶೇಷ ವಿಷಯಗಳು

**ಸುತುಕಃ**—**ಶೋಭನಪುತ್ರಃ** ಶ್ರೇಷ್ಠವಾದ ಪುತ್ರಸಂತಾನವುಳ್ಳವನಾಗಿ (ಆಗುತ್ತಾನೆ). **ತೋಕ** ಶಬ್ದಾರ್ಥವನ್ನು ಇದೇ ಭಾಗದಲ್ಲಿ ೧-೧೪೭-೧ ನೇ ಋಕ್ಕಿನ ವಿಶೇಷವಿಷಯಗಳಲ್ಲಿ ತಿಳಿಸಿದೆ. ಅಂತಹ ಶ್ರೇಷ್ಠವಾದ ಪುತ್ರನುಳ್ಳವನೆಂದರ್ಥ. ನಿರುಕ್ತಕಾರರು,

**ಸ ಆ ವಕ್ಷಿ ಮಹಿ ನ ಆ ಚ ಸತ್ಸಿ ದಿವಸ್ಪೃಥಿವ್ಯೋರರತಿರ್ಯುವತ್ಯೋಃ ।**

**ಅಗ್ನಿಃ ಸುತುಕಃ ಸುತುಕೇಭಿರಶ್ವೈ ರಭಸ್ವದ್ಭೀ ರಭಸ್ವಾँ ಏಹ ಗಮ್ಯಾಃ ।**

(ಋ. ಸಂ. ೧೦-೩-೭)

ಎಂಬ ಋಕ್ಕನ್ನುದಹರಿಸಿ ಇಲ್ಲಿ **ಸುತುಕ** ಶಬ್ದಕ್ಕೆ **ಸುತುಕನಃ ಸುತುಕನ್ಯೈರಿತಿ ವಾ । ಸುಪ್ರಜಾಃ ಸುಪ್ರಜೋಭಿರಿತಿ ವಾ ।** (ನಿ. ೪-೧೮) ಗತ್ಯರ್ಥಕವಾದ **ತುಕ್** ಧಾತುವಿನಿಂದ ನಿಷ್ಪನ್ನವಾದ **ಸುತುಕ** ಶಬ್ದಕ್ಕೆ ಶ್ರೇಷ್ಠವಾದ ಸಂಚಾರವುಳ್ಳದ್ದೆಂದರ್ಥ. ಇಲ್ಲಿ ಉದಾಹೃತವಾದ ಋಕ್ಕಿನಲ್ಲಿ ಶ್ರೇಷ್ಠವಾದ ಗಮನವುಳ್ಳ ಕುದುರೆಗಳನ್ನೊಳಗೊಂಡವನೂ ತಾನೂ ಶ್ರೇಷ್ಠವಾದ ಸಂಚಾರವುಳ್ಳವನೂ ಆದ ಅಗ್ನಿಯೆಂದು ಒಂದರ್ಥವೂ, ಅಥವಾ ಶ್ರೇಷ್ಠವಾದ ಜನ್ಮವುಳ್ಳ ಅಶ್ವಗಳೊಡಗೂಡಿದವನೂ ತಾನೂ ಪವಿತ್ರವಾದ ಉತ್ಪತ್ತಿಯುಳ್ಳವನೂ ಆದವನೆಂದು ಇನ್ನೊಂದರ್ಥವೂ ಸಾಧ್ಯವೆಂದು ತೋರಿಸಿದ್ದಾರೆ. ಆದರೆ ಸಾಯಣರು ಮಾತ್ರ **ತುಕಿರ್ಗತ್ಯರ್ಥಃ । ಸುಗಮಃ ಸ್ತೋತೃಭಿಃ ಯಷ್ಟೃಭಿಶ್ಚ ಸುಖೇನ ಪ್ರಾಪ್ತವ್ಯಃ ।** ಸ್ತೋತೃಗಳಿಂದ ಸುಖವಾಗಿ ಸಮೀಪಿಸಲ್ಪಡುವವನು ಎಂದರ್ಥಮಾಡಿದ್ದಾರೆ.

**ನ ಘಾ ರಾಜೇಂದ್ರ ಆ ದಭನ್ನೋ ಯಾ ನು ಸ್ವಸಾರಾ ಕೃಣವಂತ ಯೋನೌ ।**
**ಆಪಶ್ಚಿದಸ್ಮೈ ಸುತುಕಾ ಅವೇಷನ್ಗಮನ್ನ ಇಂದ್ರಃ ಸಖ್ಯಾ ವಯಶ್ಚ ॥**

(ಋ. ಸಂ. ೧-೧೭೮-೨)

ಎಂಬಲ್ಲಿ **ಶೋಭನಬಲಹೇತೂನಿ** । ಶ್ರೇಷ್ಠವಾದ ಬಲಕ್ಕೆ ಹೇತುಭೂತವಾದ ಎಂದು ಹವಿಸ್ಸುಗಳಿಗೆ ವಿಶೇಷಣ ವೆಂದೂ,

**ಆ ಸಂಯತಮಿಂದ್ರ ಣಃ ಸ್ವಸ್ತಿಂ ಶತ್ರುತೂರ್ಯಾಯ ಬೃಹತೀಮಮೃಧ್ರಾಂ ।**
**ಯಯಾ ದಾಸಾನ್ಯಾರ್ಯಾಣಿ ವೃತ್ರಾ ಕರೋ ವಜ್ರಿನ್ತ್ಸುತುಕಾ ನಾಹುಷಾಣಿ ।**

(ಋ ಸಂ ೬-೨೨-೧೦)

ಎಂಬಲ್ಲಿ **ಸುತುಕಾನಿ ಶೋಭನಹಿಂಸೋಪೇತಾನಿ** । ಬಹಳ ಹಿಂಸೆಗೆ ಪಾತ್ರರಾಗುವಂತೆ ಎಂದೂ ಶತ್ರುಗಳಿಗೆ ವಿಶೇಷಣವಾಗಿದೆ.

ಆದರೆ ಪ್ರಕೃತವಾದ ಋಕ್ಕಿನಲ್ಲಿ ವರ್ಣಿತವಾಗಿರುವ ಸನ್ನಿವೇಶದಲ್ಲಿ **ಮರ್ತೋ ಯೋ ಅಸ್ಮೈ ಸುತುಕೋ ದದಾಶ** ಯಾವ ಮಾನವನಾದ ಯಜ್ಞಕರ್ತನು ಅಗ್ನಿಗೆ ಹವಿಸ್ಸನ್ನರ್ಪಿಸುತ್ತಾನೆಯೋ ಅವನು **ಸುತುಕ**ನಾಗುತ್ತಾನೆ ಎಂದರೆ ಶ್ರೇಷ್ಠವಾದ ಪುತ್ರನುಳ್ಳವನಾಗುತ್ತಾನೆಂಬುದೇ ಸಹಜವಾಗಿದೆ.

॥ ವ್ಯಾಕರಣಪ್ರಕ್ರಿಯಾ ॥

**ದಧೇ**—ಡುಧಾಞ್ ಧಾರಣಪೋಷಣಯೋಃ ಧಾತು. **ಛಂದಸಿ ಲುಙ್**—(ಪಾ. ಸೂ ೩-೪-೯) ಎಂಬುದರಿಂದ ವರ್ತಮಾನಾರ್ಥದಲ್ಲಿ ಲಿಟ್. ಪ್ರಥಮಪುರುಷ ಏಕವಚನಾಂತರೂಪ. ಯಚ್ಛಬ್ದ ಸಂಬಂಧವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ವಾರ್ಯಾಣಿ**—ವೃಞ್ ವರಣೇ. ಧಾತು. **ಋಹಲೋರ್ಣ್ಯತ್** (ಪಾ. ಸೂ. ೩-೧-೧೨೪) ಎಂಬುದರಿಂದ ಣ್ಯತ್ ಪ್ರತ್ಯಯ. **ಅಚೋಞ್ಣಿತಿ** ಎಂಬುದರಿಂದ ವೃದ್ಧಿ. ರಪರವಾಗಿ ಬರುತ್ತದೆ. **ಈಡವಂದವೃಶಂಸದುಹಾಂ ಣ್ಯತಃ** (ಪಾ. ಸೂ. ೬-೧-೨೧೪) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಶ್ರವಸ್ಯಾ**-ಶ್ರವಃ ಆತ್ಮನಃ ಇಚ್ಛತಿ ಶ್ರವಸ್ಯತಿ. **ಸುಪಆತ್ಮನಃ ಕ್ಯಚ್** (ಪಾ. ಸೂ ೩-೧-೮) ಎಂಬುದರಿಂದ ಕ್ಯಚ್‌ಪ್ರತ್ಯಯ. **ಅಪ್ರತ್ಯಯಾತ್** (ಪಾ. ಸೂ. ೩-೩-೧೦೨) ಎಂಬುದರಿಂದ ಕ್ಯಜಂತದ ಮೇಲೆ ಅಕಾರ ಪ್ರತ್ಯಯ. **ಅಜಾದ್ಯತಷ್ಟಾಪ್** ಎಂಬುದರಿಂದ ಟಾಪ್. ಇದಕ್ಕೆ ತೃತೀಯಾ ಏಕವಚನಪರವಾದಾಗ **ಸುಪಾಂ ಸುಲುಕ್**—(ಪಾ. ಸೂ ೭-೧-೩೯) ಎಂಬುದರಿಂದ ಅದಕ್ಕೆ ಆಕಾರಾದೇಶ. ಕ್ಯಚ್‌ಸ್ವರದಿಂದ ಅಂತೋದಾತ್ತವಾಗುತ್ತದೆ.

**ಮರ್ತಃ**—ಮೃಙ್ ಪ್ರಾಣತ್ಯಾಗೇ. ಧಾತು **ಅಸಿಹಸಿಮೃ**—(ಉ. ಸೂ. ೩-೩೯೩) ಎಂಬುದರಿಂದ ತನ್ ಪ್ರತ್ಯಯ. ಪ್ರತ್ಯಯನಿಮಿತ್ತವಾಗಿ ಧಾತುವಿನ ಇಕಿಗೆ ಗುಣ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ

**ಸುತುಕಃ**—ಶೋಭನಂ ತೋಕಂ ಯಸ್ಯ ಸುತುಕಃ ಛಾಂದಸವಾಗಿ ವರ್ಣವಿಕಾರ ಬಂದಿದೆ **ದ್ವ್ಯಚೋತ-ಸ್ತ್ರಿಜಃ** (ಪಾ. ಸೂ. ೬-೩-೧೩೫) ಎಂಬುದರಿಂದ ಉತ್ತರಪದ ಆದ್ಯುದಾತ್ತಸ್ವರ ಬರುತ್ತದೆ.

**ದದಾಶ**—ದಾಶೃ ದಾನೇ. ಧಾತು. ಛಾಂದಸವಾಗಿ ವರ್ತಮಾನಾರ್ಥದಲ್ಲಿ ಲಿಟ್. ಪ್ರಥಮಪುರುಷ ಏಕವಚನಾಂತರೂಪ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. **ಲಿತಿ** (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ನಿಘಾತಸ್ವರ ಬರುತ್ತದೆ. ॥ ೫ ॥

———

## ನೂರಐವತ್ತನೆಯ ಸೂಕ್ತವು

:o:

**ಪುರು ತ್ವೇತಿ ತೃಚಾತ್ಮಕಂ ದಶಮಂ ಸೂಕ್ತಂ ದೈರ್ಘತಮಸಮಾಗ್ನೇಯಮೌಷ್ಣಿಹಂ । ಪುರು ತೃಚ-ಮೌಷ್ಣಿಹಮಿತ್ಯನುಕ್ರಮಣಿಕಾ ॥ ಪ್ರಾತರನುವಾಕಾಶ್ವಿನಶಸ್ತ್ರಯೋರೌಷ್ಣಿಹೇ ಛಂದಸ್ಯಸ್ಯ ವಿನಿಯೋಗಃ । ಅಥೈತಸ್ಯಾ ಇತಿ ಖಂಡೇ ಸೂತ್ರಿತಂ । ಪುರು ತ್ವಾ ತ್ವಾಮಗ್ನೇ । ಆ. ೪-೧೩ । ಇತಿ ॥**

ಅನುವಾದವು—**ಪುರು ತ್ವಾ** ಎಂಬ ಈ ಸೂಕ್ತವು ಇಪ್ಪತ್ತೊಂದನೆಯ ಅನುವಾಕದಲ್ಲಿ ಹತ್ತನೆಯ ಸೂಕ್ತವು. ಇದರಲ್ಲಿ ಮೂರು ಋಕ್ಕುಗಳಿರುವವು. ಈ ಸೂಕ್ತಕ್ಕೆ ದೀರ್ಘತಮಾ ಔಚಥ್ಯಃ ಎಂಬುವನು ಋಷಿಯು, ಅಗ್ನಿಯು ದೇವತೆಯು. ಉಷ್ಣಿಕ್ ಛಂದಸ್ಸು. ಅನುಕ್ರಮಣಿಕೆಯಲ್ಲಿ—**ಪುರು ತೃಚಮೌಷ್ಣಿಹಂ** ಎಂದು ಹೇಳಿರುವುದು. ಪ್ರಾತರನುವಾಕಮಂತ್ರ ಮತ್ತು ಆಶ್ವಿನಶಸ್ತ್ರಮಂತ್ರ ಪಠನಗಳಲ್ಲಿ ಉಷ್ಣಿಕ್‌ಛಂದಸ್ಸಿನ ಋಕ್ಕುಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನ ಶ್ರೌತಸೂತ್ರದ **ಅಥೈತಸ್ಯಾ** ಎಂಬ ಖಂಡದ **ಪುರು ತ್ವಾ ತ್ವಾಮಗ್ನೇ** ಎಂಬ ಸೂತ್ರದಿಂದ ವಿವೃತವಾಗಿರುವುದು.

—

॥ ಓಂ ॥

### ಸೂಕ್ತ—೧೫೦

—

॥ ಮಂಡಲ—೧ ॥ ಅನುವಾಕ—೨೧ ॥ ಸೂಕ್ತ— ೧೫೦ ॥

॥ ಅಷ್ಟಕ—೨ ॥ ಅಧ್ಯಾಯ—೨ ॥ ವರ್ಗ—೧೯ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೩ ॥

॥ ಋಷಿಃ—ದೀರ್ಘತಮಾ ಔಚಥ್ಯಃ ॥

॥ ದೇವತಾ—ಅಗ್ನಿಃ ॥

॥ ಛಂದಃ—ಉಷ್ಣಿಕ್ ॥

॥ [illegible] ॥

ಪುರು ತ್ವಾ ದಾಶ್ವಾನ್ವೋಚೇಽರಿರಗ್ನೇ ತವ ಸ್ವಿದಾ ।

ತೋದಸ್ಯೇವ ಶರಣ ಆ ಮಹಸ್ಯ ॥ ೧ ॥

ಪದಪಾಠಃ

ಪುರು । ತ್ವಾ । ದಾಶ್ವಾನ್ । ವೋಚೇ । ಅರಿಃ ಅಗ್ನೇ । ತವ । ಸ್ವಿತ್ । ಆ ।

ತೋದಸ್ಯಽಇವ । ಶರಣೇ । ಆ । ಮಹಸ್ಯ ॥ ೧ ॥

ಸಾಯಣಭಾಷ್ಯಂ

ಹೇ ಅಗ್ನೇ ತ್ವಾ ತ್ವಾಂ ಪುರು ಬಹು ವೋಚೇ । ಯದ್ವಾ । ಬಹು ದಾಶ್ವಾನಿತಿ ಸಂಬಂಧಃ । ಪುತ್ರಂ ದೇಹಿ ವಿತ್ತಂ ದೇಹೀತ್ಯಾದ್ಯಾಶಾಸನಾನಿ ಬ್ರವೀಮೀತ್ಯರ್ಥಃ । ಕಿಂ ತೂಷ್ಣೀಂ ನೇತ್ಯಾಹ । ಯತೋ ದಾಶ್ವಾನಭಿಮತಂ ಹವಿರ್ದತ್ತವಾನಸ್ಮಿ ಅತೋ ವೋಚೇ । ಇತರಸಾಧಾರಣ್ಯೇನ ಬ್ರುವತಃ ಕಥಂ ದಾತವ್ಯ-ಮಿತಿ ನ ಮಂತವ್ಯಂ । ಯತೋಽಹಂ ಹೇ ಅಗ್ನೆ ತವ ಸ್ವಿತ್ತ್ವವೈವಾ ಆಭಿಮುಖ್ಯೇನಾರಿರರ್ತಾ ಹವಿರಾದಿ ಪ್ರಾಪಣೇನ ಸೇವಕೋಽಹಂ । ತತ್ರ ದೃಷ್ಟಾಂತಃ । ಮಹಸ್ಯ ಮಹತಸ್ತೋದಸ್ಯೇವ ಶಿಕ್ಷಕಸ್ಯ ಸ್ವಾಮಿನಃ ಶರಣೇಽಸ್ಯ ಗೃಹೇ ಯಥಾ ಗರ್ಭದಾಸಾದಿರಾ ಸಮಂತಾನ್ನಿಯತೋ ವರ್ತತೇ ತದ್ವದಹಮಪಿ । ಯಸ್ಮಾ-ದೇವಂ ತಸ್ಮಾದಭಿಮತಂ ಬಹು ವೋಚೇ ತ್ವಮಪಿ ತತ್ಸರ್ವಂ ದೇಹೀತ್ಯರ್ಥಃ । ಅತ್ರ ನಿರುಕ್ತಂ । ಬಹು ದಾಶ್ವಾಂಸ್ತ್ವಾಮೇವಾಭಿಹ್ವಯಾಮ್ಯರಿರಮಿತ್ರ ಋಚ್ಛತೇಃ ಈಶ್ವರೋಽಪ್ಯರಿರೇತಸ್ಮಾದೇವ । ಯದನ್ಯ-ದೇವತ್ಯಾ ಅಗ್ನಾವಾಹುತಯೋ ಹೂಯಂತ ಇತ್ಯೇತದ್ದೃಷ್ಟ್ವೈವಮವಕ್ಷ್ಯತ್ ತೋದಸ್ಯೇವ ಶರಣ ಆ ಮಹಸ್ಯ ತುದಸ್ಯೇವ ಶರಣೇಽಧಿ ಮಹತಃ । ನಿ. ೫-೭ । ಇತಿ ॥

ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ । ತವ ಸ್ವಿದಾ-–ನಿನ್ನ ಅಭಿಮುಖವಾಗಿಯೇ ನಿಂತು । ಮಹಸ್ಯ—ದೊಡ್ಡ ಸ್ಥಾನದಲ್ಲಿರುವ । ತೋದಸ್ಯೇವ ಆ ಶರಣೇ—ಯಜಮಾನನ ಮುಂಭಾಗದಲ್ಲಿ (ಅವನ) ಮನೆಯಲ್ಲಿರುವ (ಸೇವಕನು ಬೇಡುವಂತೆ) । ಅರಿಃ — (ನಿನ್ನ) ಸೇವಕನಾದ ನಾನು । ಪುರು — ಅಧಿಕವಾಗಿ । ದಾಶ್ವಾನ್ — (ಹವಿಸ್ಸುಗಳನ್ನು ) ಅರ್ಪಿಸುತ್ತಾ । ತ್ವಾ— ನಿನ್ನನ್ನು । ವೋಚೇ— (ಪುತ್ರಾದಿ ಧನಗಳನ್ನು ಕೊಡು ಎಂದು ) ಬೇಡಿಕೊಳ್ಳುತ್ತೇನೆ ॥

ಭಾವಾರ್ಥ

ಎಲೈ ಅಗ್ನಿಯೇ, ದೊಡ್ಡ ಪದವಿಯಲ್ಲಿರುವ ಯಜಮಾನನ ಮುಂದೆ ಅವನ ಮನೆಯಲ್ಲಿ ಹುಟ್ಟಿದಾಗಿನಿಂದಲೂ ದಾಸನಾಗಿರುವವನು ದೈನ್ಯದಿಂದ ಬೇಡುವಂತೆ ನಿನ್ನ ಸೇವಕನಾದ ನಾನೂ ಸಹ ನಿನ್ನ ಅಭಿಮುಖವಾಗಿಯೇ ನಿಂತು ನಿನಗೆ ಹವಿಸ್ಸುಗಳನ್ನು ಅರ್ಪಿಸುತ್ತಾ ನಿನ್ನನ್ನು ಪುತ್ರಾದಿ ಧನಗಳನ್ನು ಕೊಡೆಂದು ಬೇಡಿಕೊಳ್ಳುತ್ತೇನೆ.

## English Translation

Presenting many offerings, I address you, Agni, ever coming into your presence (like a servant) in the dwelling of a mighty master.

### ವಿಶೇಷವಿಷಯಗಳು

ಇಲ್ಲಿ ಅಗ್ನಿಗೂ ಯಜ್ಞಕರ್ತನಿಗೂ ಇರುವ ಸಂಬಂಧವನ್ನು ಯಜಮಾನನಿಗೂ ಸೇವಕನಿಗೂ ಇರುವ ಸಂಬಂಧಕ್ಕೆ ಹೋಲಿಸಿದೆ. ಯಜ್ಞಕರ್ತನು ಸೇವಕನ ದೈನ್ಯವನ್ನು ತೋರಿಸುತ್ತಾನೆ.

ತೋದಸ್ಯೇವ—ಈ ಪದದ ಅರ್ಥವನ್ನು ಹೇಳುವ ಸಂದರ್ಭದಲ್ಲಿ ನಿರುಕ್ತಕಾರರು ಪ್ರಕೃತವಾದ ಋಕ್ಕನ್ನೇ ಉದಹರಿಸಿ ವಿವರಿಸಿದ್ದಾರೆ. ಅವರ ವಿವರಣೆಯು ಈರೀತಿಯಿದೆ.

**ಬಹುದಾಶ್ವಾಂಸ್ತ್ವಾಮೇವಾಭಿಹ್ವಯಾಮ್ಯರಿರಮಿತ್ರ ಋಚ್ಛತೇಃ । ಈಶ್ವರೋಽಪ್ಯರಿರೇತಸ್ಮಾದೇವ। ಯದನ್ಯದೇವತ್ಯಾ ಅಗ್ನಾವಾಹುತಯೋ ಹೂಯಂತ ಇತ್ಯೇತದ್ದೃಷ್ಟ್ವೈವಮವಕ್ಷ್ಯತ್ । ತೋದಸ್ಯೇವ ಶರಣ ಆ ಮಹಸ್ಯ—ತುದಸ್ಯೇವ ಶರಣೇಽಧಿ ಮಹತಃ ॥ (ನಿ. ೫-೭)**

ಅಗ್ನಿಯೇ, ನಾನೊಬ್ಬ ಉದಾರಿಯಾದ ಹವಿರ್ದಾತನು. ಆದುದರಿಂದಲೇ ಪುತ್ರಾದಿದಾನಗಳಿಗಾಗಿ ನಿನ್ನನ್ನು ಪ್ರಾರ್ಥಿಸುತ್ತೇನೆ. ನಾನು ಶ್ರೇಷ್ಠವಾದ ಸ್ತುತಿಕರ್ತನಾದುದರಿಂದ ನಿನ್ನ ಪದವಾದ ಸ್ತೋತ್ರಗಳನ್ನು ನಿರ್ಮಿಸುವುದಕ್ಕೂ ಉತ್ತಮವಾದ ಅಧಿಕಾರಿಯಾಗಿದ್ದೇನೆ ಎಂದು ಪ್ರಾರಂಭಿಸಿ ಅನಂತರ, ಅರಿಶಬ್ದದ ನಿರ್ವಚನವನ್ನು ಹೇಳಿದ್ದಾರೆ. ಹಿಂಸಿಸು ಎಂಬರ್ಥವನ್ನು ಕೊಡುವ ಋ ಧಾತುವಿನಿಂದ ನಿಷ್ಪನ್ನವಾದ ಅರಿಯೆಂಬ ಪದವು ಶತ್ರುವೆಂಬರ್ಥವನ್ನು ಕೊಡುತ್ತದೆ. ಸೇವಕನ ವಿಷಯದಲ್ಲಿ ಯಜಮಾನನೂ ಅದೇ ರೀತಿ ಹಿಂಸಾಕಾರಕನಾದುದರಿಂದ ಅವನಿಗೂ ಅರಿಯೆಂಬ ವಿಶೇಷಣವಿರುತ್ತದೆ.

ಇತರ ದೇವತೆಗಳಿಗೂ ಅಗ್ನಿಯ ಮೂಲಕನೇ ಆಹುತ್ಯರ್ಪಣವಿರುವುದರಿಂದಲೂ ದೊಡ್ಡ ಬಾವಿಯ ಆಳದಂತೆ ಆಳವಾದ ಉದರವಿರುವುದರಿಂದಲೂ ಅಗ್ನಿಯ ಸ್ತುತಿಯಿದೆಯೆಂದು ತೋದಶಬ್ದದ ನಿರ್ವಚನವನ್ನು ತೋರಿಸಿದ್ದಾರೆ

ದುರ್ಗಾಚಾರ್ಯರು ಈ ಉಪಮಾನವನ್ನು ಈರೀತಿ ವಿವರಿಸಿದ್ದಾರೆ.

**"ತೋದಸ್ಯ ಇವ ಶರಣೇ ಆ ಮಹಸ್ಯ"—ತುನ್ನಸ್ಯೇವ ವಿದೀರ್ಣಸ್ಯ ಕಸ್ಯಚಿಚ್ಛ್ವಭ್ರಸ್ಯ ಕೂಪಸ್ಯೋಪರಿ । ಶರಣೇ ಬಿಲೇ । ಯಥಾ ಹಿ ಶ್ವಭ್ರೇ ಬಿಲೇ ಕಸ್ಮಿಂಶ್ಚಿದ್ಬಹ್ವ್ಯ ಆಪೋ ಗಚ್ಛಂತಿ, ನ ಚ ತಸ್ಯ ಶ್ವಭ್ರಸ್ಯ ಮಹತೋ ಗ್ರಹಣಶಕ್ತಿಪರಿಹಾಣಿಂ ಭವತಿ। ಏವಂ ತವಾನೇಕಾಶ್ಚಾನೇಕದೇವತಾಶ್ಚಾಹುತೀರಸ್ಮಾಭಿಃ ಪ್ರದತ್ತಾಃ ಪ್ರತೀಚ್ಛತೋ ನ ಸಾಮರ್ಥ್ಯಪರಿಹಾಣಮಸ್ತಿ । ಅತೋ ದೇವತಾನಾಮಸ್ಮಾಕಂ ಸ್ವನೇನಾತಿನಿಶಿಷ್ಟೋಪಕಾರೇ ಪ್ರವೃತ್ತಃ ಅತಃ ತ್ವಾಮೇವಾಹ್ವಯಾಮಿ ।**

ನಿನ್ನನ್ನು ಸ್ತುತಿಸಲು ನಾನು ಶಕ್ತನಾದುದರಿಂದ ನಾನೇ ಆಹ್ವಾನಮಾಡುತ್ತೇನೆ. ಅಲ್ಲದೆ, ಧಾರಾಳವಾಗಿ ಹವಿಸ್ಸನ್ನು ಅರ್ಪಿಸಲೂ ಶಕ್ತನಾಗಿದ್ದೇನೆ. ಅಗ್ನಿಯನ್ನು ಮಾತ್ರ ಆಹ್ವಾನಿಸಲು ಕಾರಣವೇನೆಂದರೆ ಅವನ ಉದರವು ಆಳವಾದ ಬಾವಿಯಂತೆ ಎಷ್ಟು ಹವಿಸ್ಸನ್ನು ಸುರಿದರೂ ತುಂಬಿಕೊಳ್ಳಲು ಶಕ್ತವಾಗಿದೆ.

ಆದುದರಿಂದ ನಿರುಕ್ತದ ವಿವರಣೆಯಂತೆ—ತೋದವೆಂದರೆ ಕೂಪವೆಂದೂ, ಶರಣವೆಂದರೆ ಬಿಲವೆಂದೂ ಅರ್ಥವಾಗುತ್ತದೆ. ಆದರೆ ಸಾಯಣರ ಅರ್ಥವು ಇವಕ್ಕೆ ವಿರುದ್ಧವಾಗಿದೆ.

ಸಾಯಣರು **ತೋದ**ಶಬ್ದಕ್ಕೆ ಶಿಕ್ಷಕನಾದ ಸ್ವಾಮಿಯೆಂದೂ, **ಶರಣ** ಶಬ್ದಕ್ಕೆ **ಗೃಹ**ವೆಂದೂ, **ಅರಿ** ಶಬ್ದಕ್ಕೆ ಪರಿಚಾರಕನೂ ಸೇವಕನ ಸ್ಥಾನದಲ್ಲಿರುವವನೂ ಆದ ಯಜಮಾನನೆಂದೂ ಅರ್ಥಮಾಡಿದ್ದಾರೆ.

**ಮಧ್ಯೇ ಹೋತಾ ದುರೋಣೇ ಬರ್ಹಿಷೋ ರಾಳಗ್ನಿಸ್ತೋದಸ್ಯ ರೋದಸೀ ಯಜಧ್ಯೈ ।**
**ಅಯಂ ಸ ಸೂನುಃ ಸಹಸ ಋತಾವಾ ದೂರಾತ್ಸೂರ್ಯೋ ನ ಶೋಚಿಷಾ ತತಾನ ॥**

(ಋ. ಸಂ. ೬-೧೨-೧)

ಎಂಬ ಋಕ್ಕಿನಲ್ಲಿ ಸಾಯಣರು **ತೋದ** ಶಬ್ದಕ್ಕೆ **ತುದ್ಯತೇ ತಪಸಾ ಪೀಡ್ಯತ ಇತಿ ತೋದಃ ಯಜಮಾನಃ ।** ಅಗ್ನಿಕಾರ್ಯನಿರ್ವಹಣದಿಂದ ಬಳಲಿರುವುದರಿಂದ **ತೋದಃ** ಎಂದರೆ ಯಜ್ಞಕರ್ತನಾದ **ಯಜಮಾನ**ನೆಂದೂ. ಅದೇ ಸೂಕ್ತದಲ್ಲಿ,

**ತೇಜಿಷ್ಠಾ ಯಸ್ಯಾರತಿರ್ವನೇರಾಟ್ ತೋದೋ ಅಧ್ವನ್ನ ವೃಧಸಾನೋ ಅದ್ಯೌತ್ ।**
**ಅದ್ರೋಘೋ ನ ದ್ರವಿತಾ ಚೇತತಿ ತ್ಮನ್ನಮರ್ತ್ಯೋಽವರ್ತ್ರ ಓಷಧೀಷು ।**

(ಋ. ಸಂ. ೬-೧೨-೩)

ಎಂಬಲ್ಲಿ **ತೋದಃ ಸರ್ವಸ್ಯ ಪ್ರೇರಕಃ ಸೂರ್ಯಃ** ಎಂದೂ ಅರ್ಥಮಾಡಿದ್ದಾರೆ. ಮತ್ತು

**ಯಾಸಿ ಕುತ್ಸೇನ ಸರಥಮವಸ್ಯುಸ್ತೋದೋ ವಾತಸ್ಯ ಹರ್ಯೋರೀಶಾನಃ ।**
**ಋಜ್ರಾ ವಾಜಂ ನ ಗಧ್ಯಂ ಯುಯೂಷನ್ಕವಿರ್ಯದಹನ್ಪಾರ್ಯಾಯ ಭೂಷಾತ್ ।**

(ಋ. ಸಂ. ೪-೧೬-೧೧)

ಎಂಬಲ್ಲಿ **ತೋದತಃ ಶತ್ರೂಣಾಂ ಹಿಂಸಕಃ** ಎಂದೂ ಅರ್ಥಮಾಡಿದೆ.

**ಶರಣೇ**—ದುರ್ಗಾಚಾರ್ಯರು ನಿರುಕ್ತಕಾರರ ಅಭಿಪ್ರಾಯವನ್ನನುಸರಿಸಿ ಈ ಪದಕ್ಕೆ ಬಿಲವೆಂದರ್ಥಮಾಡಿದ್ದಾರೆ. ವಾಸಕ್ಕೆ ವಿಶಾಲವಾದುದೂ ಆಶ್ರಯಪಾತ್ರವಾದುದೂ ಆದ ಸ್ಥಳವಿರುವುದರಿಂದ ಬಿಲ ಅಥವಾ **ಗೃಹ** ಎಂದು ಸಂದರ್ಭಾನುಸಾರವಾಗಿ ಅರ್ಥಮಾಡಬಹುದು.

**ಪ್ರಿಯಾಸ ಇತ್ತೇ ಮಘವನ್ನಭಿಷ್ಟೌ ನರೋ ಮದೇಮ ಶರಣೇ ಸಖಾಯಃ ।**
**ನಿ ತುರ್ವಶಂ ನಿ ಯಾದ್ವಂ ಶಿಶೀಹ್ಯತಿಥಿಗ್ವಾಯ ಶಂಸ್ಯಂ ಕರಿಷ್ಯನ್ ॥**

(ಋ. ಸಂ. ೭-೧೯-೮)

ಎಂಬ ಋಕ್ಕಿನಲ್ಲಿ ಗೃಹವೆಂದೂ,

**ಉದುಷ್ಯ ಶರಣೇ ದಿವೋ ಜ್ಯೋತಿರಯಂಸ್ತ ಸೂರ್ಯಃ ।**
**ಅಗ್ನಿರ್ನ ಶುಕ್ರಃ ಸಮಿಧಾನ ಆಹುತಃ ।**

(ಋ. ಸಂ. ೮-೨೫-೧೯)

ಎಂಬಲ್ಲಿ **ಆದಿತ್ಯಸ್ಯ ಸ್ಥಾನೇ ನಭಸಿ ।** ಎಂದರೆ ಆದಿತ್ಯನಿಗೆ ವಿಶಾಲವಾದ ವಾಸಸ್ಥಾನವಾದುದರಿಂದ ಶರಣಪದಕ್ಕೆ **ನಭಸ್ಸೆಂದರ್ಥ**ವೆಂದೂ ತಿಳಿಸಿದ್ದಾರೆ.

ಪ್ರಕೃತವಾದ ಋಕ್ಕಿನಲ್ಲಿ ತೋದಶಬ್ದಕ್ಕೂ ಅರಿಶಬ್ದಕ್ಕೂ ಸಾಯಣರು ನಿರುಕ್ತವನ್ನು ತಮ್ಮ ಭಾಷ್ಯದಲ್ಲಿ ಉದಹರಿಸಿದರೂ ಸಹ ತಮ್ಮದೇ ಆದ ಬೇರೊಂದರ್ಥವನ್ನು ಮಾಡಿದ್ದಾರೆ.

ವ್ಯಾಕರಣಪ್ರಕ್ರಿಯಾ

**ದಾಶ್ವಾನ್**—ದಾಶೃ ದಾನೇ. ಧಾತು. **ದಾಶ್ವಾನ್ ಸಾಹ್ವಾನ್ಮೀಢ್ವಾಂಶ್ಚ** (ಪಾ. ಸೂ. ೬-೧-೧೨) ಎಂಬುದರಿಂದ ಕ್ವಸು ಪ್ರತ್ಯಯಾಂತವಾಗಿ ನಿಪಾತಿತವಾಗಿದೆ.

**ವೋಚೇ**—ಬ್ರೂಞ್ ವ್ಯಕ್ತಾಯಾಂ ವಾಚಿ. ಧಾತು. ಛಾಂದಸವಾಗಿ ಲುಙ್. ಉತ್ತಮಪುರುಷ ಏಕವಚನದಲ್ಲಿ ಇಟ್ ಪ್ರತ್ಯಯ. **ಬ್ರುವೋವಚಿಃ** (ಪಾ. ಸೂ. ೨-೪-೫೩) ಎಂಬುದರಿಂದ ಧಾತುವಿಗೆ ವಚ್ಯಾದೇಶ. **ಅಸ್ಯತಿವಕ್ತಿ ಖ್ಯಾತಿಭ್ಯೋಽಙ್** (ಪಾ. ಸೂ. ೩-೧-೫೨) ಎಂಬುದರಿಂದ ಚ್ಲಿಗೆ ಅಙಾದೇಶ. **ವಚ ಉಮ್** (ಪಾ. ಸೂ. ೭-೪-೨೦) ಎಂಬುದರಿಂದ ಧಾತುವಿಗೆ ಅಙ್‌ಪರವಾದಾಗ ಉಮಾಗಮ. ಮಿತ್ತಾದುದರಿಂದ ಅಂತ್ಯಾಚಿನಪರವಾಗಿ ಬರುತ್ತದೆ. ಪ್ರತ್ಯಯ ಇಕಾರಪರವಾದಾಗ ಗುಣ. **ಬಹುಲಂ ಛಂದಸ್ಯಮಾಙ್‌ಯೋಗೇಽಪಿ** (ಪಾ.ಸೂ. ೬-೪-೭೫) ಎಂಬುದರಿಂದ ಅಡಾಗಮ ಬರುವುದಿಲ್ಲ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಅರಿಃ**—ಋ ಗತೌ ಧಾತು. **ಅಚ ಇಃ** (ಉ. ಸೂ. ೫೭೮) ಎಂಬುದರಿಂದ ಇಪ್ರತ್ಯಯ **ಸಾರ್ವಧಾತು-ಕಾರ್ಧಧಾತುಕಯೋಃ** ಎಂಬುದರಿಂದ ಗುಣ ರಪರವಾಗಿ ಬರುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ತೋದಸ್ಯ**—ತುದ ವ್ಯಥನೇ. ಧಾತು. **ನಂದಿಗ್ರಹಿಪಚಾದಿಭ್ಯಃ**—(ಪಾ. ಸೂ. ೩-೧-೧೩೪) ಎಂಬುದರಿಂದ ಅಚ್‌ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿನ ಲಘೂಪಧೆಗೆ ಗುಣ. ಚಿತ್ತಾದುದರಿಂದ ಅಂತೋದಾತ್ತಸ್ವರ ಬರುತ್ತದೆ. ಷಷ್ಠೀ ಏಕವಚನಾಂತರೂಪ.

**ಮಹಸ್ಯ**—ಮಹ ಪೂಜಾಯಾಂ. ಧಾತು. ಹಿಂದಿನಂತೇ ಅಚ್‌ಪ್ರತ್ಯಯ. ಅಂತೋದಾತ್ತಸ್ವರ ಬರುತ್ತದೆ. ಷಷ್ಠ್ಯಂತರೂಪ. ॥ ೧ ॥

ಸಂಹಿತಾಪಾಠಃ

ವ್ಯನಿನಸ್ಯ ಧನಿನಃ ಪ್ರಹೋಷೇ ಚಿದರರುಷಃ ।
ಕದಾ ಚನ ಪ್ರಜಿಗತೋ ಅದೇವಯೋಃ ॥ ೨ ॥

ಪದಪಾಠಃ

ವಿ । ಅನಿನಸ್ಯ । ಧನಿನಃ । ಪ್ರಽಹೋಷೇ । ಚಿತ್ । ಅರರುಷಃ ।
ಕದಾ । ಚನ । ಪ್ರಽಜಿಗತಃ । ಅದೇವಽಯೋಃ ॥ ೨ ॥

॥ ಸಾಯಣಭಾಷ್ಯಂ ॥

ಪೂರ್ವಮಂತ್ರೇ ಸ್ವಾಭೀಷ್ಟಂ ಬಹು ವಿಜ್ಞಾಪಯಾಮೀತ್ಯುಕ್ತಂ। ಅತ್ರ ತು ಸ್ವವಿಲಕ್ಷಣೇಭ್ಯೋ ದಾನಾದಿರಹಿತೇಭ್ಯೋ ದಾನಂ ನ ದಾತವ್ಯಮಿತಿ ಪ್ರಾರ್ಥಯತೇ। ಹೇ ಅಗ್ನೇ ತ್ವಾಂ ವಿಶೇಷೇಣ ಬ್ರವೀಮಿ॥ ಉಪಸರ್ಗಶ್ರುತೇರ್ಯೋಗ್ಯಕ್ರಿಯಾಧ್ಯಾಹಾರಃ। ಅಥವಾ ಸನ್ನಿಹಿತತ್ವಾದ್ವೋಚ ಇತ್ಯನುಷಜ್ಯತೇ॥ ಅಸ್ಮದರ್ಥಂ ಯದ್ವ್ಯಜಿಜ್ಞಪನ್ ತದ್ವಿರುದ್ಧಂ ವೋಚೇ। ವಕ್ಷ್ಯಮಾಣಸ್ವರೂಪಸ್ಯ ನ ದಾತವ್ಯಮಿತಿ ಬ್ರವೀಮೀತ್ಯರ್ಥಃ। ತೇಷಾಂ ಸ್ವರೂಪಮಾಹ। ಅನಿನಸ್ಯಾಸ್ವಾಮಿನಸ್ತ್ವಾಮಸ್ವಾಮಿನಂ ಕುರ್ವಾಣಸ್ಯ ತಥಾ ಧನಿನಃ ಸಮುಗ್ರದಾನವತಃ। ಪೂರ್ವಮೇವ ಧನವತೋ ದಾನಸ್ಯ ನಿರರ್ಥಕತ್ವಾತ್ತನ್ನಿವಾರ್ಯತೇ। ಯದ್ವಾ। ಯಾಗಾದ್ಯನುಪಯೋಗಿಧನವತ ಇತ್ಯರ್ಥಃ। ಕಿಂಚ ಪ್ರಹೋಷೇ ಪ್ರಕರ್ಷೇಣ ಹೋತುಮರರುಷೋಽದದತೋ ದಕ್ಷಿಣಾರೂಪೇಣ। ಯದ್ವಾ। ಪ್ರಹೋಷೇಽನಿನಸ್ಯೇತಿ ಸಂಬಂಧಃ। ಪ್ರಕರ್ಷೇಣ ಹೋತುಮಸಮರ್ಥಸ್ಯೇತ್ಯರ್ಥಃ। ಅತ್ರೇನಶಬ್ದೇನ ತತ್ಸ್ಥಂ ಸಾಮರ್ಥ್ಯಂ ಲಕ್ಷ್ಯತೇ। ಚಿಚ್ಛಬ್ದಃ ಸಮುಚ್ಚಯಾರ್ಥಃ ಕಿಂಚ ಕದಾ ಚನ ಪ್ರಜಿಗತಃ ಕದಾಚಿದಪಿ ಪ್ರಕರ್ಷೇಣ ದೇವಾನಸ್ತುವತಃ। ಅತ್ರ ಚನೇತಿ ನಿಪಾತದ್ವಯಸಮುದಾಯಃ। ತತ್ರ ಚತಶಬ್ದಃ ಸಮುಚ್ಚಯೇ ನಶಬ್ದೋ ನಿಷೇಧೇ। ಕಿಂಚಾದೇವಯೋಃ। ದೇವಾನಾತ್ಮನೋಽನಿಚ್ಛತಃ। ಏತೇಷಾಂ ನ ದಾತವ್ಯಮಿತಿ ವಿವೋಚ ಇತ್ಯರ್ಥಃ। ನಿಂದಿತಾನಾಂ ಸ್ವರೂಪನಿರೂಪಣೇನ ಸ್ವಸ್ಯಾತಾದೃಶತ್ವಾತ್ ಬಹು ವೋಚ ಇತ್ಯೇತದ್ಯುಕ್ತಮೇವೇತ್ಯುಕ್ತಂ ಭವತಿ। ಯದ್ವಾ। ಚನೇತಿ ಚಿಚ್ಛಬ್ದಪರ್ಯಾಯಃ। ಉಕ್ತಪ್ರಕಾರೇಣ ದುಷ್ಟಸ್ಯಾಪಿ ಕದಾಚಿತ್ಪ್ರಜಿಗತೋ ಯದಾಕದಾಚಿತ್ತ್ವಾಂ ಸ್ತುವತೋ ವಿವೋಚೇ। ತಾದೃಶಸ್ಯ ದಾತವ್ಯಮಿತಿ ವಿಶೇಷೇಣ ಬ್ರವೀಮಿ। ಕಿಮು ವಕ್ತವ್ಯಮಸ್ಮದರ್ಥಮಿತಿ ಭಾವಃ॥

ಪ್ರತಿಪದಾರ್ಥ

(ಎಲೈ ಅಗ್ನಿಯೇ) । ಅನಿನಸ್ಯ—(ನಿನ್ನನ್ನು) ಸ್ವಾಮಿಯನ್ನಾಗಿ ಪೂಜಿಸದಿರುವವನೂ। ಪ್ರಹೋಷೇ—ಶ್ರೇಷ್ಠವಾದ ಯಜ್ಞದ ನಿಮಿತ್ತವಾಗಿ। ಅರರುಷಃ—ದಕ್ಷಿಣಾಧನವನ್ನು ಕೊಡದಿರುವವನೂ ಆದ। ಧನಿನಃ—ಐಶ್ವರ್ಯವಂತನಿಗೂ (ಮತ್ತು)। ಕದಾಚನ—ಯಾವಾಗಲೂ। ಪ್ರಜಿಗತಃ—(ನಿನ್ನನ್ನು) ಸ್ತುತಿಸದಿರುವವನಿಗೂ (ಈ ವಿಧವಾದ)। ಅದೇವಯೋಃ—ದೈವಭಕ್ತಿಯಿಲ್ಲದ ಎರಡುವಿಧವಾದ ಜನರಿಗೂ ಸಹ (ಪುತ್ರಾದಿ ಐಶ್ವರ್ಯಗಳನ್ನು ಅನುಗ್ರಹಿಸಬೇಡ)॥

ಭಾವಾರ್ಥ

ಎಲೈ ಅಗ್ನಿಯೇ, ದೈವಭಕ್ತಿಯಿಲ್ಲದ ಎರಡುವಿಧವಾದ ಜನಗಳಿರುವರು. ಮೊದಲನೆಯವರು, ನಿನ್ನನ್ನು ಸ್ವಾಮಿಯನ್ನಾಗಿ ಪೂಜಿಸದೆಯೂ ಮತ್ತು ಯಜ್ಞದ ನಿಮಿತ್ತವಾಗಿ ದಕ್ಷಿಣಾ ಧನವನ್ನು ಕೊಡದೆಯೂ ಇರುವ ಧನಿಕರ ಗುಂಪು ಅಲ್ಲದೇ ನಿನ್ನನ್ನು ಯಾವಾಗಲೂ ಸಹ ಸ್ತುತಿಸದಿರುವ ನಾಸ್ತಿಕರ ಗುಂಪು ಒಂದು ಈ ಎರಡು ವಿಧವಾದ ಜನರಿಗೂ ಸಹ ನೀನು ನಿನ್ನ ಅನುಗ್ರಹವನ್ನು ದಯಪಾಲಿಸಬೇಡ.

## English Translation

(I ask you also to withhold your favour) from (those) two godless (persons), from the rich man, who, acknowledging you not as his lord, is chary of gifts at sacred rites, and from him who rarely praises (the gods).

॥ ವಿಶೇಷವಿಷಯಗಳು ॥

**ಪ್ರಹೋಷೇ—ಪ್ರಕರ್ಷೇಣ ಹೋತುಂ ।** ಅತಿಶಯವಾಗಿ ಆಹುತಿಗಳನ್ನು ಅರ್ಪಿಸುವ ಯಜ್ಞವೆಂದು ಅರ್ಥಮಾಡಿದ್ದಾರೆ. ಇಂತಹ ಆಹುತಿಗಳನ್ನು ಅರ್ಪಿಸುವವರು **ಪ್ರಹೋಷಿ**ಗಳೆಂದು ಕರೆಯಲ್ಪಟ್ಟಿದ್ದಾರೆ.

**ಅಪಾದು ಶಿಪ್ರ್ಯಂಧಸಃ ಸುದಕ್ಷಸ್ಯ ಪ್ರಹೋಷಿಣಃ । ಇಂದೋರಿಂದ್ರೋ ಯವಾಶಿರಃ ।**

(ಋ. ಸಂ. ೮-೯೨-೪)

ಎಂಬ ಋಕ್ಕಿನಲ್ಲಿ ಪ್ರಹೋಷಿಣ ಎನ್ನುವುದಕ್ಕೆ **ಪ್ರಕರ್ಷೇಣ ದೇವಾನ್ ಹವಿರ್ಭಿರ್ಜುಹ್ವತಃ ಸುದಕ್ಷಸ್ಯ** ಎಂದು ಆಹುತಿಯನ್ನರ್ಪಿಸುವ ಸುದಕ್ಷನಿಗೆ ವಿಶೇಷಣವಾಗಿದೆ.

**ಅನಿನಸ್ಯ—**ಈ ಪದಕ್ಕೆ ಎರಡು ವಿಧವಾದ ಅರ್ಥವನ್ನು ಮಾಡಿದ್ದಾರೆ. ಮೊದಲನೆಯದಾಗಿ ಈ ಪದಕ್ಕೆ ಪ್ರತ್ಯೇಕವಾದ ಅರ್ಥವನ್ನು ಮಾಡಿ, **ತ್ವಾಂ ಅಸ್ವಾಮಿನಂ ಕುರ್ವತಃ ।** ನಿನ್ನನ್ನು ಸ್ವಾಮಿಯನ್ನಾಗಿ ಪರಿಗ್ರಹಿಸದೇ ಇರತಕ್ಕ ಪುರುಷನೆಂದೂ, ಎರಡನೆಯದಾಗಿ **ಪ್ರಹೋಷೇ ಅನಿನಸ್ಯ** ಎಂಬ ಎರಡು ಪದಗಳನ್ನೂ ಒಟ್ಟಿಗೆ ಸೇರಿಸಿ, ಇನ ಶಬ್ದಕ್ಕೆ **ಈಶ್ವರ**ನಲ್ಲಿರಬೇಕಾದ **ಸಾಮರ್ಥ್ಯ**ವೆಂದೂ ಅನಿನವೆಂದರೆ ಅಂತಹ **ಸಾಮರ್ಥ್ಯ**ವಿಲ್ಲದಿರುವನೆಂದೂ ಅರ್ಥಮಾಡಿ ಯಜ್ಞದಲ್ಲಿ ಆಹುತಿಗಳನ್ನರ್ಪಿಸಲು ಅಸಮರ್ಥನಾದ ಪುರುಷನಿಗೆ ಎಂದು ತಾತ್ಪರ್ಯವೆಂದು ವಿವರಿಸಿದೆ.

**ಪ್ರ್ವಜಿಗತಃ—ಕದಾಚಿದಪಿ ದೇವಾನ್ ಅಸ್ತುವತಃ ।** ಯಾವಾಗಲೂ ದೇವತೆಗಳನ್ನು ಸ್ತುತಿಸದೇ ಇರತಕ್ಕ ನಾಸ್ತಿಕನ

**ಅದೇವಯೋಃ— ದೇವಾನಾತ್ಮನೋಽನಿಚ್ಛತಃ ।** ದೇವತೆಗಳ ಅನುಗ್ರಹವನ್ನು ಸಂಪಾದಿಸುವ ಭಕ್ತಿಶ್ರದ್ಧೆಗಳಿಲ್ಲದ ಪೋಲ್ಕಂಡ ಎರಡು ವಿಧವಾದ ನಾಸ್ತಿಕರೆಂದರ್ಥ.

### ವ್ಯಾಕರಣಪ್ರಕ್ರಿಯಾ

ವಿ—ಕ್ರಿಯಾಯೋಗವಿರುವಾಗ ಉಪಸರ್ಗವು ಪ್ರಯುಕ್ತವಾಗುವುದರಿಂದ ಇಲ್ಲಿ ಬ್ರವೀಮಿ ಎಂದು ಯೋಗ್ಯ ಕ್ರಿಯಾಪದವನ್ನು ಅಧ್ಯಾಹಾರಮಾಡಿಕೊಳ್ಳಬೇಕು. ಅಥವಾ ವೋಚೇಃ ಎಂಬುದು ಅನುವೃತ್ತವಾಗುತ್ತದೆ.

**ಅನಿನಸ್ಯ—**ನ ವಿದ್ಯತೇ ಇನಃ ಸ್ವಾಮೀ ಯಸ್ಯ ಅನಿನಃ—**ನಞ್ ಸುಭ್ಯಾಮ್** (ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ. ಷಷ್ಠೀ ಏಕವಚನಾಂತರೂಪ.

**ಧನಿನಃ—**ಧನಮಸ್ಯ ಅಸ್ತಿ ಇತಿ ಧನೀ. ತಸ್ಯ. **ಅತ ಇನಿಠನೌ** ಎಂಬುದರಿಂದ ಮತ್ವರ್ಥದಲ್ಲಿ ಇನಿಪ್ರತ್ಯಯ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

**ಪ್ರಹೋಷೇ**—ಹು ದಾನಾದನಯೋಃ ಧಾತು. ತುಮುನರ್ಥತೋರುವಾಗ **ತುಮರ್ಥೇ ಸೇಸೇನಸೇ**—(ಪಾ. ಸೂ. ೩-೪-೯) ಎಂಬುದರಿಂದ ಸೇ ಪ್ರತ್ಯಯ. ಪ್ರತ್ಯಯನಿಮಿತ್ತವಾಗಿ ಧಾತುವಿನ ಇಕಿಗೆ ಗುಣ. **ಆದೇಶ-ಪ್ರತ್ಯಯಯೋಃ** ಎಂಬುದರಿಂದ ಪ್ರತ್ಯಯ ಸಕಾರಕ್ಕೆ ಷತ್ವ. **ಕೃನ್ಮೇಜಂತಃ** ಎಂಬುದರಿಂದ ಅವ್ಯಯಸಂಜ್ಞಾ ಬರುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತವಾದಾಗ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಅರರುಷಃ**—ಋ ಗತೌ ಧಾತು. **ಆರ್ತೇರರುಃ** (ಉ.ಸೂ. ೪-೫೧೯) ಎಂಬುದರಿಂದ ಅಂತರ್ಭಾವಿತಣ್ಯರ್ಥಕವಾದ ಈ ಧಾತುವಿಗೆ ಅರುಸ್ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿಗೆ ಗುಣ. ರಪರವಾಗಿ ಬರುತ್ತದೆ ಅರರುಸ್ ಶಬ್ದವಾಗುತ್ತದೆ. ಪ್ರತ್ಯಯಸ್ವರ ಪ್ರಾಪ್ತವಾದರೆ **ವೃಷಾದೀನಾಂಚ** (ಪಾ. ಸೂ. ೬-೧-೨೦೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ ಷಷ್ಠೀ ಏಕವಚನಾಂತರೂಪ.

**ಪ್ರಜಿಗತಃ**—ಗಾ ಸ್ತುತೌ ಧಾತು ಜುಹೋತ್ಯಾದಿ. ಇದಕ್ಕೆ ಲಡರ್ಥದಲ್ಲಿ ಶತೃಪ್ರತ್ಯಯ. ಶ್ಲು ವಿಕರಣ. **ಶ್ಲೌ** ಎಂಬುದರಿಂದ ಧಾತುವಿಗೆ ದ್ವಿತ್ವ. **ಕುಹೋಶ್ಚುಃ** (ಪಾ. ಸೂ. ೭-೪-೬೨) ಎಂಬುದರಿಂದ ಅಭ್ಯಾಸಕ್ಕೆ ಕುತ್ವ ಬಂದಾಗ **ಬಹುಲಂ ಛಂದಸಿ** (ಪಾ. ಸೂ. ೭-೪-೭೮) ಎಂಬುದರಿಂದ ಇತ್ವ. **ಸಾರ್ವಧಾತುಕಮಪಿತ್** ಎಂಬುದರಿಂದ ಪ್ರತ್ಯಯಕ್ಕೆ ಙಿತ್ವವಿರುವುದರಿಂದ **ಛಂದಸ್ಯುಭಯಥಾ** (ಪಾ. ಸೂ. ೩-೪-೧೧೭) ಎಂಬುದರಿಂದ ಆರ್ಧಧಾತುಕ ಸಂಜ್ಞೆಯೂ ಇರುವುದರಿಂದ **ಆತೋಲೋಪ ಇಟಿಚ** (ಪಾ ಸೂ. ೬-೪-೬೪) ಎಂಬುದರಿಂದ ಆಕಾರಕ್ಕೆ ಲೋಪ ಜಿಗತ್ ಶಬ್ದವಾಗುತ್ತದೆ. **ಅಭ್ಯಸ್ತಾನಾಮಾದಿಃ** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಕೃದುತ್ತರ ಪದ ಪ್ರಕೃತಿಸ್ವರ ಬರುತ್ತದೆ.

**ಅದೇವಯೋಃ**—ದೇವಮಾತ್ಮನಃ ಇಚ್ಛತಿ. ದೇವಯತಿ. **ಸುಪ ಆತ್ಮನಃ ಕ್ಯಚ್** (ಪಾ. ಸೂ. ೩-೧-೮) ಎಂಬುದರಿಂದ ಇಚ್ಛಾರ್ಥದಲ್ಲಿ ಕ್ಯಚ್. **ಕ್ಯಾಚ್ಛಂದಸಿ** (ಪಾ. ಸೂ. ೩-೨-೧೭೦) ಎಂಬುದರಿಂದ ಕ್ಯಜಂತದ ಮೇಲೆ ಉಪ್ರತ್ಯಯ. **ಅತೋ ಲೋಪಃ** (ಪಾ. ಸೂ ೬-೪-೪೮) ಎಂಬುದರಿಂದ ಕ್ಯಚಿನ ಅಕಾರಕ್ಕೆ ಲೋಪ ನ ದೇವಯುಃ ಅದೇವಯುಃ ತಸ್ಯ. **ತತ್ಪುರುಷೇ ತುಲ್ಯಾರ್ಥ**-(ಪಾ. ಸೂ ೬-೨-೨) ಎಂಬುದರಿಂದ ನಞ್ಪೂರ್ವಪದ ಪ್ರಕೃತಿಸ್ವರ ಬರುತ್ತದೆ. ॥ ೨ ॥

---

ಸಂಹಿತಾಪಾಠಃ

ಸ ಚಂದ್ರೋ ವಿಪ್ರ ಮರ್ತ್ಯೋ ಮಹೋ ವ್ರಾಧನ್ತಮೋ ದಿವಿ ।

ಪ್ರಪ್ರೇತ್ತೇ ಅಗ್ನೇ ವನುಷಃ ಸ್ಯಾಮ ॥ ೩ ॥

ಪದಪಾಠಃ

ಸಃ । ಚಂದ್ರಃ । ವಿಪ್ರ । ಮರ್ತ್ಯಃ । ಮಹಃ । ವ್ರಾಧನ್ಽತಮಃ । ದಿವಿ ।

ಪ್ರಽಪ್ರ । ಇತ್ । ತೇ । ಅಗ್ನೇ । ವನುಷಃ । ಸ್ಯಾಮ ॥ ೩ ॥

ಸಾಯಣಭಾಷ್ಯಂ

ಹೇ ಅಗ್ನೇ ವಿಪ್ರ ಮೇಧಾವಿನ್ ಯೋ ಮರ್ತ್ಯಸ್ತ್ವಾಂ ಯಜತೇ ಸ ಮರ್ತ್ಯೋ ಯಜಮಾನೋ ದಿವಿ ದ್ಯುಲೋಕೇ ಚಂದ್ರಃ ಸರ್ವೇಷಾಮಾಹ್ಲಾದಕಶ್ಚಂದ್ರಸದೃಶೋ ಭವತಿ । ಯದ್ವಾ । ಚಂದ್ರ ಏವ ಭವತಿ । ಯಜಮಾನಾನಾಂ ಚಂದ್ರತ್ವಪ್ರಾಪ್ತಿಂ ಛಂದೋಗಾ ಆಮನಂತಿ । ಪಿತೃಲೋಕಾದಾಕಾಶಮಾಕಾಶಾಚ್ಚಂದ್ರಮಸಮೇಷ ಸೋಮೋ ರಾಜಾ । ಛಾಂ. ಉ. ೫-೧೦-೪ । ಇತಿ । ಸೋಮಲೋಕೇ ವಿಭೂತಿಮನುಭೂಯೇತಿ ಚ । ತಥಾ ಮುಂಡಕೇಽಪಿ ದ್ಯುಲೋಕಪ್ರಾಪ್ತಿರಾಮ್ನಾಯತೇ । ಏಹ್ಯೇಹೀತಿ ತಮಾಹುತಯಃ ಸುವರ್ಚಸಃ ಸೂರ್ಯಸ್ಯ ರಶ್ಮಿಭಿರ್ಯಜಮಾನಂ ವಹಂತಿ ತಂ ನಯಂತ್ಯೇತಾಃ ಸೂರ್ಯಸ್ಯ ರಶ್ಮಯೋ ಯತ್ರ ದೇವಾನಾಂ ಪತಿರೇಕೋಽಧಿವಾಸ ಇತಿ । ಏಷ ವಃ ಪುಣ್ಯಃ ಸುಕೃತೋ ಬ್ರಹ್ಮಲೋಕ ಇತಿ ಚ । ಮುಂ. ಉ. ೧-೨-೫,೬ । ಪುನಃ ಸ ಏವ ವಿಶೇಷ್ಯತೇ । ಮಹೋ ಮಹತೋಽಪಿ ವ್ರಾಧಂತಮಃ ಪ್ರವೃದ್ಧತಮಃ । ಇತರದೇವಾನಾಮಪಿ ಶ್ರೇಷ್ಠ ಇತ್ಯರ್ಥಃ । ಅತೋಽಗ್ನೇ ತೇ ತವ ಪ್ರಪ್ರೇತ್ ಪ್ರಕರ್ಷೇಣೈವ ವನುಷಃ ಸಂಭಕ್ತಾರಃ ಸ್ಯಾಮ । ಯದ್ವಾ । ಪ್ರೀಣಯಿತ್ವಾ ಪ್ರಪ್ರೇತ್ ಸ್ಯಾಮ । ಪ್ರಕೃಷ್ಟಾ ಏವ ಭವೇಮ ॥

ಪ್ರತಿಪದಾರ್ಥ

ವಿಪ್ರ—ಮೇಧಾವಿಯಾದ ಅಗ್ನಿಯೇ । ಮರ್ತ್ಯಃ—ಯಾವ ಮಾನವನು (ನಿನ್ನನ್ನು ಯಜ್ಞಾದಿಗಳಿಂದ ಪೂಜಿಸುತ್ತಾನೆಯೋ) । ಸಃ—ಆ ಮಾನವನು । ದಿವಿ—ದ್ಯುಲೋಕದಲ್ಲಿ । ಚಂದ್ರಃ—ಆಹ್ಲಾದಕರನಾದ ಚಂದ್ರನ ಸದೃಶನಾಗಿ ಅಥವಾ ಚಂದ್ರನೇ ಆಗುತ್ತಾನೆ । ಮಹಃ-ಆಧಿಕ್ಯವನ್ನು ಹೊಂದಿದ ದೇವತೆಗಳಿಗಿಂತಲೂ । ವ್ರಾಧನ್‌ತಮಃ—ಅತ್ಯಧಿಕನಾಗಿ ಆಗುತ್ತಾನೆ, (ಆದ್ದರಿಂದ) । ಅಗ್ನೇ—ಎಲೈ ಅಗ್ನಿಯೇ । ಪಪ್ರೇತ್—ಅತ್ಯುತ್ಕೃಷ್ಟವಾದ ರೀತಿಯಲ್ಲಿ । ತೇ—ನಿನ್ನ । ವನುಷಃ—ಆರಾಧಕರಾಗಿ । ಸ್ಯಾಮ—ಆಗುವಂತೆ (ಅನುಗ್ರಹಿಸು) [ ಅಥವಾ ಪ್ರಪೇತ್ ಸ್ಯಾಮ—ನಿನ್ನನ್ನು ಆರಾಧಿಸಿ ಅತ್ಯುತ್ಕೃಷ್ಟರಾಗುವಂತೆ (ನಮ್ಮನ್ನು ಅನುಗ್ರಹಿಸು) ]

ಭಾವಾರ್ಥ

ಮೇಧಾವಿಯಾದ ಎಲೈ ಅಗ್ನಿಯೇ, ಯಾವ ಮಾನವನು ನಿನ್ನನ್ನು ಯಜ್ಞಾದಿಗಳಿಂದ ಪೂಜಿಸುತ್ತಾನೆಯೋ, ಆ ಮಾನವನು ದ್ಯುಲೋಕದಲ್ಲಿ ಆಹ್ಲಾದಕರನಾದ ಚಂದ್ರನ ಸ್ಥಾನವನ್ನು ಪಡೆಯುತ್ತಾನೆ ಮತ್ತು ಆಧಿಕ್ಯವನ್ನು ಪಡೆದ ದೇವತೆಗಳಿಗಿಂತಲೂ ಅತ್ಯಧಿಕನಾಗಿ ಆಗುತ್ತಾನೆ. ಆದ್ದರಿಂದ ಎಲೈ ಅಗ್ನಿಯೇ, ನಾವೂ ಸಹ ನಿನ್ನನ್ನು ಅತ್ಯುತ್ಕೃಷ್ಟವಾದ ರೀತಿಯಲ್ಲಿ ಆರಾಧಿಸಿ ಉತ್ಕೃಷ್ಟವಾದ ಸ್ಥಾನವನ್ನು ಪಡೆಯುವಂತೆ ಅನುಗ್ರಹಿಸು.

## English Tranlation

Sage Agni, the mortal ( who propitiates you ) becomes a moon in heaven, the most eminent of the great (deities) : may we, therefore, ever be in an especial manner your worshippers.

### ವಿಶೇಷವಿಷಯಗಳು

**ವ್ರಾಧನ್ತಮಃ—ವ್ರಾಧನ್ನಿತಿ ಮಹನ್ನಾಮ ।** ಮಹನ್ನಾಮಗಳಲ್ಲಿ ಪಠಿತವಾಗಿದೆ. ಅತಿಶಯವಾದ ಮಹಿಮೆಯುಳ್ಳವನು ಎಂದರ್ಥ. ಈ ವಿಶೇಷಣವು ಪ್ರಶಂಸಾರ್ಹವಾದ ವಸ್ತುಗಳ ಪರವಾಗಿರುವಂತೆ ಪ್ರಭೂತವಾದ ಶಕ್ತಿಯುಳ್ಳ ಶತ್ರುಪರ್ಯಾಯವಾಗಿಯೂ ಪ್ರಯೋಗಿಸಲ್ಪಟ್ಟಿದೆ. ಉದಾಹರಣೆಗೆ—

**ಇಮೇ ಯೇ ತೇ ಸು ವಾಯೋ ಬಾಹ್ವೋಜಸೋಽಂತರ್ನದೀ ತೇ ಪತಯಂತ್ಯುಕ್ಷಣೋ ಮಹಿ**
**ವ್ರಾಧಂತ ಉಕ್ಷಣಃ ।**

(ಋ. ಸಂ. ೧-೧೩೪-೯)

ಎಂಬಲ್ಲಿ ವ್ರಾಧನ್ತಃ ಎಂಬ ಪದವು ವಾಯುವಿನ ಕುದುರೆಗಳಿಗೆ ವಿಶೇಷಣವಾಗಿ **ಮಹಿ ವ್ರಾಧನ್ತಃ—ಅತಿಪ್ರಭೂತಂ ವರ್ಧಮಾನಾಃ ।** ಅತಿ ಪ್ರಭೂತವಾಗಿ ವೃದ್ಧಿಯಾಗತಕ್ಕ ಎಂಬರ್ಥವನ್ನು ಕೊಡುತ್ತದೆ. ಮತ್ತು

**ಸ ವ್ರಾಧತೋ ನಹುಷೋ ದಂಸುಜೂತಃ ಶರ್ಧಸ್ತರೋ ನರಾಂ ಗೂರ್ತಶ್ರವಾಃ ।**
**ವಿಸೃಷ್ಟರಾತಿರ್ಯಾತಿ ವಾಳ್ಹಸೃತ್ವಾ ವಿಶ್ವಾಸು ಪೃತ್ಸು ಸದಮಿಚ್ಛೂರಃ ॥**

(ಋ. ಸಂ. ೧-೧೨೨-೧೦)

ಎಂಬ ಋಕ್ಕಿನಲ್ಲಿ **ಹಿಂಸಕಾನ್ ಮಹತಃ ಅಪಿ ।** ಹಿಂಸಕರಾದ ಶತ್ರುಗಳು ಅತ್ಯಂತ ಪ್ರಬಲರಾದಾಗ್ಯೂ ಸಹ ಎಂದು ಶತ್ರುಪರ್ಯಾಯವಾದ ಪದವಾಗಿದೆ. ಇದರಂತೆಯೆ,

**ಶತ್ರೂಯಂತೋ ಅಭಿ ಯೇ ನಸ್ತತಸ್ರೇ ಮಹಿ ವ್ರಾಧಂತ ಓಗಣಾಸ ಇಂದ್ರ !**
**ಅಂಧೇನಾಮಿತ್ರಾಸ್ತಮಸಾ ಸಚಂತಾಂ ಸುಜ್ಯೋತಿಷೋ ಅಕ್ತವಸ್ತ್ತಾँ ಅಭಿ ಷ್ಯುಃ ॥**

(ಋ. ಸಂ. ೧೦-೮೯-೧೫)

ಎಂಬಲ್ಲಿಯೂ **ವ್ರಾಧನ್ತಃ ಅಸ್ಮಾನ್ ಬಾಧಮಾನಾಃ ।** ನಮ್ಮನ್ನು ಅತಿಯಾಗಿ ಹಿಂಸಿಸುವ ಎಂದರ್ಥವಾಗಿದೆ.

ಪ್ರಕೃತವಾದ ಋಕ್ಕಿನಲ್ಲಿ **ವ್ರಾಧನ್ತಮಃ** ಎಂಬ ಪದವು ಅಗ್ನಿಯನ್ನು ಪೂಜಿಸತಕ್ಕ ಮಾನವನ ಮಹತ್ವವನ್ನು ಪ್ರಶಂಸಿಸತಕ್ಕ ವಿಶೇಷಣವಾಗಿದೆ. **ವ್ರಾಧನ್ತಮಃ— ಪ್ರವೃದ್ಧತಮಃ । ಇತರದೇವಾನಾಮಪಿ ಶ್ರೇಷ್ಠಃ** ಆಧಿಕ್ಯವನ್ನು ಹೊಂದಿದ ದೇವತೆಗಳಿಗಿಂತಲೂ ಅತ್ಯಧಿಕನಾಗುತ್ತಾನೆಂದರ್ಥ.

**ಚಂದ್ರಃ**—ಈ ಪದಕ್ಕೆ ಎರಡು ವಿಧವಾದ ಅರ್ಥವನ್ನು ಮಾಡಿದ್ದಾರೆ. ಮೊದಲನೆಯದಾಗಿ ಅಗ್ನಿಯನ್ನು ಆರಾಧಿಸುವವನು **ಸರ್ವೇಷಾಂ ಆಹ್ಲಾದಕಶ್ಚಂದ್ರಸದೃಶೋ ಭವತಿ ।** ಎಲ್ಲರಿಗೂ ಆಹ್ಲಾದವನ್ನುಂಟುಮಾಡುವ ಚಂದ್ರನ ಕಾಂತಿಯಂತೆ ಕಾಂತಿಯುಳ್ಳವನಾಗಿ ಆಗುತ್ತಾನೆ ಎಂದಿದೆ. ಈ ಅರ್ಥವು ನಿರುಕ್ತದ ನಿರ್ವಚನವನ್ನನುಸರಿಸಿದೆ. ನಿರುಕ್ತದಲ್ಲಿ—

**ಚಂದ್ರಶ್ಚಂದತೇಃ ಕಾಂತಿಕರ್ಮಣಃ ।** (ನಿ ೧೧-೫).

ಕಾಂತಿಯುತವಾದುದೂ ರಮ್ಯವಾದುದೂ ಆದ ಎಂಬರ್ಥವನ್ನು ಕೊಡುವುದರಿಂದ **ಚಂದ್** ಧಾತುವಿನಿಂದ **ಚಂದ್ರ**ವೆಂಬ ಪದವು ನಿಷ್ಪನ್ನವಾಗಿದೆ ಎಂದು ಹೇಳಿದ್ದಾರೆ. ಆದುದರಿಂದ ಅಗ್ನಿಯು ಆರಾಧಕನು ಕಾಂತಿಯುತನಾಗುತ್ತಾನೆಂಬುದಾಗಿಯೂ, ಎರಡನೆಯದಾಗಿ, **ಚಂದ್ರ ಏವ ಭವತಿ ।** ಯಜಮಾನನು ಚಂದ್ರನೇ ಆಗುತ್ತಾನೆಂಬುದಾಗಿಯೂ ಹೇಳಿದೆ. **ಯಜಮಾನಾನಾಂ ಚಂದ್ರತ್ವಪ್ರಾಪ್ತಿಂ ಛಾಂದೋಗಾ ಆಮನಂತಿ ।** ಯಜ್ಞಕರ್ತನಿಗೆ ಚಂದ್ರತ್ವಪ್ರಾಪ್ತಿಯಾಗುವುದೆಂದು ಶ್ರುತಿವಾಕ್ಯವನ್ನು ಛಾಂದೋಗರು ಪಠಿಸುತ್ತಾರೆ—

**ಪಿತೃಲೋಕಾದಾಕಾಶಮಾಕಾಶಾಚ್ಚಂದ್ರಮಸಮೇಷ ಸೋಮೋ ರಾಜಾ।**

(ಛಾ. ಉ.. ೫-೧೦-೪)

**ಸೋಮಲೋಕೇ ವಿಭೂತಿಮನುಭೂಯ ।**

(ಪ್ರ. ಉ. ೫-೪)

ಇತ್ಯಾದಿ ವಾಕ್ಯಗಳನ್ನು ಸಾಯಣರು ಉದಹರಿಸಿದ್ದಾರೆ.

ವ್ಯಾಕರಣಪ್ರಕ್ರಿಯಾ

**ಚಂದ್ರಃ**—ಚದಿ ಆಹ್ಲಾದನೇ. ಧಾತು. **ಸ್ಫಾಯಿತಂಚಿವಂಚಿ**—(ಉ. ಸೂ. ೨-೧೬೦) ಎಂಬುದರಿಂದ ರಕ್‌ಪ್ರತ್ಯಯ. **ಇದಿತೋನುಮ್‌ಧಾತೋಃ** ಎಂಬುದರಿಂದ ನುಮಾಗಮ ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ವಿಪ್ರಃ**— ಡುವಪ್ ಬೀಜಸಂತಾನೇ. ಧಾತು. **ಋಜ್ರೇಂದ್ರಾಗ್ರವಜ್ರವಿಪ್ರ**—(ಉ. ಸೂ. ೨-೧೮೬) ಎಂಬುದರಿಂದ ರನ್ ಪ್ರತ್ಯಯಾಂತವಾಗಿ ನಿಪಾತಿತವಾಗಿದೆ. ಸಂಬುದ್ಧಿಯಲ್ಲಿ **ಆಮಂತ್ರಿತಸ್ಯ ಚ** (ಪಾ.ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಮಹಃ**—ಮಹ ಪೂಜಾಯಾಂ ಧಾತು. **ಕ್ವಿಪ್ ಚ** ಎಂಬುದರಿಂದ ಕ್ವಿಪ್ ಪ್ರತ್ಯಯ. ಷಷ್ಠೀ ಏಕವಚನಾಂತರೂಪ. **ಸಾವೇಕಾಚಸ್ತೃತೀಯಾದಿಃ** (ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ವ್ರಾಧಂತಮಃ**—ವೃಧು ವೃದ್ಧೌ ಧಾತು. ಇದಕ್ಕೆ ಔಣಾದಿಕ ಅತಿಪ್ರತ್ಯಯ, ಆಕಾಗಮ. ಅತಿಶಯೇನ ವ್ರಾಧತ್ ವ್ರಾಧಂತಮಃ **ಅತಿಶಾಯನೇ ತಮಬಿಷ್ಠನೌ** ಎಂಬುದರಿಂದ ತಮಪ್ ಪ್ರತ್ಯಯ.

**ದಿವಿ**—**ಊಡಿದಂಪದಾದಿ**—(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ವನುಷಃ**—ವನ ಸಂಭಕ್ತೌ. ಧಾತು. ಬಹುಲಗ್ರಹಣಸಾಮರ್ಥ್ಯದಿಂದ ಇದಕ್ಕೆ ಔಣಾದಿಕ ಉಸಿ ಪ್ರತ್ಯಯ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ. ಪ್ರಥಮಾ ಬಹುವಚನಾಂತರೂಪ

**ಸ್ಯಾಮ**—ಅಸ ಭುವಿ. ಧಾತು. ವಿಧಿಲಿಙ್ ಉತ್ತಮಪುರುಷ ಬಹುವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ. ॥ ೩ ॥

———— :೦: ————

# ನೂರಐವತ್ತೊಂದನೆಯ ಸೂಕ್ತವು

:O:

**ಮಿತ್ರಂ ನ ಯಮಿತಿ ನವರ್ಚಮೇಕಾದಶಂ ಸೂಕ್ತಂ ದೈರ್ಘತಮಸಂ ಜಾಗತಂ ಮೈತ್ರಾವರುಣಂ । ಆದ್ಯಾ ಮೈತ್ರ್ಯೇವ । ಅತ್ರಾನುಕ್ರಮಣಿಕಾ । ಮಿತ್ರಂ ನವ ಮೈತ್ರಾವರುಣಂ ಹಿ ಜಾಗತಂ ಮೈತ್ರ್ಯಾದ್ಯೇತಿ ॥ ವಿನಿಯೋಗೋ ಲೈಂಗಿಕಃ ॥**

ಅನುವಾದವು—**ಮಿತ್ರಂ ನ ಯಂ** ಎಂಬ ಈ ಸೂಕ್ತವು ಇಪ್ಪತ್ತೊಂದನೆಯ ಅನುವಾಕದಲ್ಲಿ ಹನ್ನೊಂದನೆಯ ಸೂಕ್ತವು. ಇದರಲ್ಲಿ ಒಂಭತ್ತು ಋಕ್ಕುಗಳಿರುವವು. ಈ ಸೂಕ್ತಕ್ಕೆ ದೀರ್ಘತಮಾ ಔಚಥ್ಯಃ ಎಂಬುವನು ಋಷಿಯು. ಮಿತ್ರಾವರುಣರು ದೇವತೆಯು. ಜಗತೀಛಂದಸ್ಸು. ಮೊದಲನೆಯ ಋಕ್ಕು ಮಿತ್ರದೇವತಾಕವು. ಅನುಕ್ರಮಣಿಕೆಯಲ್ಲಿ—**ಮಿತ್ರಂ ನವ ಮೈತ್ರಾವರುಣಂ ಹಿ ಜಾಗತಂ ಮೈತ್ರ್ಯಾದ್ಯೇತಿ** ಎಂದು ಹೇಳಿರುವುದು. ವಿನಿಯೋಗವು ಲೈಂಗಿಕವು.

———

॥ ಓಂ ॥

## ಸೂಕ್ತ—೧೫೧

॥ ಮಂಡಲ—೧ ॥ ಅನುವಾಕ—೨೧ ॥ ಸೂಕ್ತ—೧೫೧ ॥

॥ ಅಷ್ಟಕ— ೨ ॥ ಅಧ್ಯಾಯ— ೨ ॥ ವರ್ಗ— ೨೦, ೨೧ ॥

ಸೂಕ್ತದಲ್ಲಿರುವ ಋಕ್ಸಂಖ್ಯೆ-೯ ॥

॥ ಋಷಿಃ—ದೀರ್ಘತಮಾ ಔಚಥ್ಯಃ ॥

॥ ದೇವತಾ—೧ ಮಿತ್ರಃ । ೨-೯ ಮಿತ್ರಾವರುಣೌ ॥

॥ ಛಂದಃ—ಜಗತೀ ॥

ಸಂಹಿತಾಪಾಠಃ

ಮಿತ್ರಂ ನ ಯಂ ಶಿಮ್ಯಾ ಗೋಷು ಗವ್ಯವಃ ಸ್ವಾಧ್ಯೋ ವಿದಥೇ ಅಪ್ಸು
ಜೀಜನನ್ ।

ಅರೇಜೇತಾಂ ರೋದಸೀ ಪಾಜಸಾ ಗಿರಾ ಪ್ರತಿ ಪ್ರಿಯಂ ಯಜತಂ

ಜನುಷಾಮವಃ ॥ ೧ ॥

ಪದಪಾಠಃ

ಮಿತ್ರಂ । ನ । ಯಂ । ಶಿಮ್ಯಾ । ಗೋಷು । ಗವ್ಯವಃ । ಸುऽಆಧ್ಯಃ । ವಿದಥೇ । ಅಪ್ऽಸು । ಜೀಜನನ್ ।

ಅರೇಜೇತಾಂ । ರೋದಸೀ ಇತಿ । ಪಾಜಸಾ । ಗಿರಾ । ಪ್ರತಿ । ಪ್ರಿಯಂ । ಯಜತಂ । ಜನುಷಾಂ । ಅವಃ ॥ ೧

॥ ಸಾಯಣಭಾಷ್ಯಂ ॥

ಯಮಗ್ನಿಂ ಶಿಮ್ಯಾ । ಕರ್ಮನಾಮೈತತ್ ಶಿಮೀ ಶಕ್ತಿರಿತಿ ತನ್ನಾಮಸೂಕ್ತತ್ವಾತ್ । ಪ್ರಕಾಶವೃಷ್ಟ್ಯುತ್ಪಾದನಾದಿಕರ್ಮಣಾ ಮಿತ್ರಂ ನ ಮಿತ್ರಮಿವ ಸ್ಥಿತಂ । ಯದ್ವಾ । ಶಿಮ್ಯೇತ್ಯೇತತ್ ಕ್ರಿಯಯಾ ಸಹ ಸಂಬಧ್ಯತೇ । ಗೋಷು ಬಹ್ವೀಷು ನಿಮಿತ್ತಭೂತಾಸು ಗವ್ಯವೋ ಗಾ ಆತ್ಮನ ಇಚ್ಛಂತಃ । ಅತ್ರ ಯದ್ಯಪಿ ಗವ್ಯವ ಇತ್ಯೇನಾಲಂ ನ ಗೋಷ್ವಿತಿ ತಥಾಪಿ ಗವ್ಯವ ಇತ್ಯತ್ರ ಗೋಸ್ವಾಮಿತ್ವಂ ಪ್ರತಿಪಾದ್ಯತೇ । ತಚ್ಚೈಕಯಾ ದ್ವಿತ್ರಾಭಿರಪಿ ಸ್ಯಾತ್ । ಅತಃ ಸ್ಪೃಹಣೀಯಾ ಬಹ್ವ್ಯ ಇತ್ಯವಗಮಯಿತುಂ ಗೋಷ್ವಿತಿ ಪದಂ । ಯಥಾ ಗವಾಮಸಿ ಗೋಪತಿಃ । ಋ ೭-೯೮-೬ । ಗಣಾನಾಂ ತ್ವಾ ಗಣಪತಿಂ । ಋ ೨-೨೩-೧ । ತಥಾ ಸ್ವಾಧ್ಯಃ ಸುಷ್ಠ್ವಾಧ್ಯಾತಾರಃ ಫಲಸ್ಯೋತ್ಪಾದಯಿತಾರಃ ಶೋಭನಧ್ಯಾನಾ ವಾ ವಿದಥೇ ಯಾಗೇऽಪ್ಸ್ವಂತರಿಕ್ಷೇ ವೈದ್ಯುತರೂಪೇಣ ವರ್ತಮಾನಂ । ಆಪ ಇತ್ಯಂತರಿಕ್ಷನಾಮ ಆಪಃ ಪೃಥಿವೀತಿ ತನ್ನಾಮಸೂಕ್ತತ್ವಾತ್ । ಅಗ್ನೇರಂತರಿಕ್ಷೋತ್ಪತ್ತಿರ್ಯದಗ್ನೇ ದಿವಿಜಾ ಅಸ್ಯಪ್ಸುಜಾ ವಾ । ಋ ೮-೪೩-೨೮ । ಅಪ್ಸ್ವಗ್ನೇ ಸಧಿಷ್ಟವ । ಋ. ೮-೪೩-೯ । ಇತ್ಯಾದಿಮಂತ್ರಾಂತರೇಷು ಪ್ರಸಿದ್ಧಾ । ಪ್ರಿಯಂ ಸರ್ವೇಷಾಂ ಪ್ರಿಯತಮಂ ಪ್ರೀಣಯಿತಾರಂ ವಾ ಯಜತಂ ಯಷ್ಟವ್ಯಮಗ್ನಿಂ ಜನುಷಾಂ ಜನ್ಮವತಾಂ ಪ್ರಾಣಿನಾಮವಃ ಪ್ರತಿ ರಕ್ಷಣಂ ನಿಮಿತ್ತೀಕೃತ್ಯ ಶಿಮ್ಯಾ ಮಥನಾದಿಕರ್ಮಣಾ ಜೀಜನನ್ ಜನಯಂತಿ ಯಜಮಾನಾಃ । ಯದ್ವಾ । ಅಪ್ಸು ನಿಮಿತ್ತಭೂತಾಸು ಜೀಜನನ್ ಸರ್ವಪ್ರಾಣಿನಾಮುಪಕಾರಾಯ ವೃಷ್ಟ್ಯರ್ಥಂ ಜೇತ್ಯರ್ಥಃ । ಏವಮುತ್ಪನ್ನಸ್ಯಾಗ್ನೇಃ ಪಾಜಸಾ ಬಲೇನ ಗಿರಾ ಭಯಂಕರಶಬ್ದೇನ ಚ ರೋದಸೀ ದ್ಯಾವಾಪೃಥಿವ್ಯಾವರೇಜೇತಾಂ । ಅಕಂಪೇತಾಂ । ಅಗ್ನೇಃ ಸಕಾಶಾತ್ಕಂಪನಮರೇಜೇತಾಂ ರೋದಸೀ ಹೋತೃವೂರ್ಯೇ । ಋ. ೧-೩೧-೩ । ಇತ್ಯಾದಿಶ್ರುತಿಷು ಪ್ರಸಿದ್ಧಂ । ನ ಚ ಸರ್ವರಕ್ಷಣಾರ್ಥಮುತ್ಪಾದಿತೋऽಗ್ನಿರ್ಲೋಕದ್ವಯಸ್ಯ ಭೀತಿಮಜನಯತ್ ಕಿಮೇತದಿತಿ ವಾಚ್ಯಂ ನಿಂದಾಸ್ತುತಿತ್ವಾತ್ । ಯಥಾ ಲೋಕೌ ಬಿಭೀತಸ್ತಥಾ ಪ್ರವೃದ್ಧೋऽಭವದಿತಿ ಸ್ತುತೌ ಪರ್ಯವಸಾನಾತ್ । ಯದ್ಯಪ್ಯತ್ರಾಗ್ನಿರೇವ ಪ್ರತಿಪಾದ್ಯತೇ ಮಿತ್ರಸ್ತು ಪರಂ ದೃಷ್ಟಾಂತಿತ ಏವ ತಥಾಪಿ ಮೈತ್ರಾವರುಣಸಾಗ್ನೇರೇವ ಮಿತ್ರತ್ವಾನ್ಮಂತ್ರಸ್ಯ ಮೈತ್ರತ್ವಮ-

ವಿರುದ್ಧಂ । ಯದ್ವಾ । ಮಿತ್ರಂ ನ ಸಖಾಯಮಿವ ಸ್ಥಿತಂ ಮಿತ್ರನಾಮಕಂ ದೇವಂ ಯಜ್ಞೇಽಂತರಿಕ್ಷೇ ಚ ಋತ್ವಿಜಃ ಪ್ರಾದುರ್ಭಾವಯಂತಿ । ಶಿಷ್ಟಃಪೋತದ್ವಿಶೇಷೇಣ ತಥೈವ ಯೋಜನೀಯಂ ॥

ಪ್ರತಿಪದಾರ್ಥ

**ಗೋಷು**—ಪ್ರಭೂತವಾದ ಗೋವುಗಳ ನಿಮಿತ್ತವಾಗಿ । **ಗವ್ಯವಃ**—ಗೋವುಗಳನ್ನು ಪಡೆಯಲು ಇಚ್ಛೆಯುಳ್ಳವರೂ । **ಸ್ವಾಧ್ಯಃ**—ಶ್ರೇಷ್ಠವಾದ ಧ್ಯಾನಾಸಕ್ತರೂ ಆದ ಭಕ್ತರು । **ವಿದಥೇ**—ಯಾಗದಲ್ಲಿ । **ಅಪ್ಸು**—ಅಂತರಿಕ್ಷದಲ್ಲಿರುವವನೂ, । **ಪ್ರಿಯಂ**—ಪ್ರಿಯತಮನೂ ಅಥವಾ ಹಿತಕಾರಿಯಾದವನೂ । **ಯಜತಂ**—ಪೂಜ್ಯನಾದವನೂ । **ಮಿತ್ರಂ ನ**—ಮಿತ್ರನಂತೆ ಇರತಕ್ಕವನೂ । **ಯಂ**—ಯಾವ ಅಗ್ನಿಯನ್ನು । [ಅಥವಾ **ಮಿತ್ರಂ ನ**—ಸ್ನೇಹಿತನಂತೆ ಇರತಕ್ಕವನಾದ । **ಯಂ**—ಯಾವ ಮಿತ್ರದೇವನನ್ನು] । **ವಿದಥೇ**—ಯಜ್ಞದಲ್ಲಿಯೂ । **ಅಪ್ಸು**—ಅಂತರಿಕ್ಷದಲ್ಲಿಯೂ ಸಹ । **ಜನುಷಾಂ**—ಉತ್ಪನ್ನವಾಗತಕ್ಕ ಪ್ರಾಣಿಗಳ । **ಅವಃ ಪ್ರತಿ**—ರಕ್ಷಣೆಯ ನಿಮಿತ್ತವಾಗಿ । **ಶಿಮ್ಯಾ**—ಮಥನಾದಿ ಕರ್ಮಗಳಿಂದ ಅಥವಾ ವೃಷ್ಟ್ಯುತ್ಪಾದನಾದಿ ಕರ್ಮಗಳಿಂದ । **ಜೀಜನನ್**—ಉತ್ಪನ್ನನಾಗುವಂತೆಮಾಡಿದರೋ, (ಅಂತಹ ಅಗ್ನಿಯ ಅಥವಾ ಮಿತ್ರನ) । **ಸಾಜಸಾ**—ಬಲದಿಂದಲೂ । **ಗಿರಾ**—(ಭಯಂಕರ ಶಬ್ದಗಳಿಂದಲೂ । **ರೋದಸೀ**—ದ್ಯಾವಾಪೃಥಿವಿಗಳೆರಡೂ ಸಹ । **ಅರೇಜೇತಾಂ**—ಕಂಪಿಸಿದವು ॥

ಭಾವಾರ್ಥ

ಪ್ರಭೂತವಾದ ಗೋವುಗಳನ್ನು ಹೊಂದುವ ನಿಮಿತ್ತವಾಗಿ ಧ್ಯಾನಾಸಕ್ತರಾದ ಭಕ್ತರು ಯಾಗದಲ್ಲೂ ಅಂತರಿಕ್ಷದಲ್ಲೂ ತಮಗೆ ಪ್ರಿಯತಮನೂ, ಲೋಕಕ್ಕೆ ಹಿತಕಾರಿಯೂ ಪೂಜ್ಯನೂ, ಮಿತ್ರನಂತಿರುವನೂ ಆದ ಯಾವ ಮಿತ್ರದೇವನನ್ನು ಅಥವಾ ಅಗ್ನಿಯನ್ನು ಸಕಲಪ್ರಾಣಿಗಳ ರಕ್ಷಣಾನಿಮಿತ್ತವಾಗಿ ತಮ್ಮ ಮಥನಾದಿಕರ್ಮಗಳಿಂದ ಉತ್ಪನ್ನನಾಗುವಂತೆ ಮಾಡಿದರೋ, ಅವನಶಕ್ತಿಯಿಂದಲೂ, ಭಯಂಕರವಾದ ಶಬ್ದದಿಂದಲೂ ಸಹ ದ್ಯಾವಾಪೃಥಿವಿಗಳೆರಡೂ ನಡುಗಿದವು.

English Translation

Heaven and earth have been terrified by the strength and the noise (of him), whom pious worshippers, desirous of acquiring cattle, have generated by their (sacred) acts, amidst the waters (of the firmement) at the sacrifice, as a friend for the preservation of living beings, the benefactor (of man), and entitled to adoration.

। ವಿಶೇಷವಿಷಯಗಳು ।

**ಸ್ವಾಧ್ಯಃ**—**ಸುಷ್ಠು ಆಧ್ಯಾತಾರಃ ಫಲಸ್ಯ ಉತ್ಪಾದಯಿತಾರಃ । ಶೋಭನಧ್ಯಾನಾ ವಾ ।** ಅಪೇಕ್ಷಿತಗಳಾದ ಫಲಗಳನ್ನು ಸಂಪಾದಿಸುವವರು ಅಥವಾ ಶ್ರೇಷ್ಠವಾದ ಧ್ಯಾನಾಸಕ್ತರು ಎಂದು ಹೇಳಿರುವ ಎರಡರ್ಥಗಳಲ್ಲಿ ಎರಡನೆಯ ಅರ್ಥವು ಹೆಚ್ಚು ಹೊಂದಿಕೊಳ್ಳುವುದು. ಅಲ್ಲದೇ,

ತವ ವ್ರತೇ ಸುಭಗಾಸಃ ಸ್ಯಾಮ ಸ್ವಾಧ್ಯೋ ವರುಣ ತುಷ್ಟುವಾಂಸಃ ।
ಉಪಾಯನ ಉಷಸಾಂ ಗೋಮತೀನಾಮಗ್ನಯೋ ನ ಜರಮಾಣಾ ಅನು ದ್ಯೂನ್ ।

(ಋ. ಸಂ. ೨-೨೮-೨)

ಯುವಾ ಸುವಾಸಾಃ ಪರಿವೀತ ಆಗಾತ್ಸ ಉ ಶ್ರೇಯಾನ್ಭವತಿ ಜಾಯಮಾನಃ ।
ತಂ ಧೀರಾಸಃ ಕವಯ ಉನ್ನಯಂತಿ ಸ್ವಾಧ್ಯೋ೩ ಮನಸಾ ದೇವಯಂತಃ ॥

(ಋ. ಸಂ. ೩-೮-೪)

ಇತ್ಯಾದಿ ಋಕ್ಕುಗಳಲ್ಲೆಲ್ಲಾ ಸ್ವಾಧ್ಯಃ ಎಂಬ ಪದಕ್ಕೆ ಶೋಭನಧ್ಯಾನಾಃ । ಸುಷ್ಠು ಸರ್ವತೋ ಧ್ಯಾನಯುಕ್ತಾಃ। ಎಂದರ್ಥವನ್ನೇ ಮಾಡಿರುವುದರಿಂದ ಪ್ರಕೃತವಾದ ಋಕ್ಕಿನಲ್ಲಿಯೂ ಅದೇ ಉಚಿತವಾಗಿರುವುದು.

ವಿದಥೇ—ವಿದಥ ಶಬ್ದಕ್ಕೆ ಕರ್ಮ, ಯಜ್ಞ, ಯಜ್ಞಸಭೆ ಇತ್ಯಾದನೇಕವಾದ ಅರ್ಥಗಳಿರುವುದನು ಉದಾಹರಣೆಗಳೊಂದಿಗೂ, ಪಾಶ್ಚಾತ್ಯ ಪಂಡಿತರ ವಿಮರ್ಶೆಗಳೊಂದಿಗೂ ಇದೇ ಭಾಗದ ೧-೧೫೩-೭ನೇ ಋಕ್ಕಿನಲ್ಲಿ ತಿಳಿಸಿದೆ.

ಮಿತ್ರಂ ನ—ಮಿತ್ರಂ ನ ಎನ್ನುವುದಕ್ಕೆ ಮೊದಲನೆಯದಾಗಿ ಸಖನಂತೆ ಇರತಕ್ಕವನೆಂದೂ, ಎರಡನೆಯದಾಗಿ ಸಕಲರಿಗೂ ಮಿತ್ರನಾಗಿರತಕ್ಕ (ಸ್ನೇಹಿತನಾಗಿರತಕ್ಕ) ಮಿತ್ರದೇವನನ್ನು ಎಂದೂ ಅರ್ಥಮಾಡಿದೆ.

ನ ವೈ ಮಿತ್ರಃ ಕಂಚನ ಹಿನಸ್ತಿ ನ ಮಿತ್ರಂ ಕಶ್ಚನ ಹಿನಸ್ತಿ ನೈನಂ ಕುಶೋ ನ ಕಂಟಕೋ
ವಿಭಿನತ್ತಿ ನಾಸ್ಯ ವ್ರಣಶ್ಚ ನಾಸ್ತಿ ಸರ್ವಸ್ಯ ಹ್ಯೇವ ಮಿತ್ರೋ ಮಿತ್ರಂ ।

(ಶ. ಬ್ರಾ. ೫-೩-೨-೭)

ಇತ್ಯಾದಿ ವಾಕ್ಯಗಳಲ್ಲಿ ಮಿತ್ರನು ಸಕಲ ಭೂತಗಳಿಗೂ ಮಿತ್ರನೆಂದು ಹೇಳಿರುವ ಅಂಶವನ್ನು ಇಲ್ಲಿಯೂ ಹೇಳಿದೆ.

ಗವ್ಯವಃ—ಗಾಃ ಆತ್ಮನ ಇಚ್ಛಂತಃ । ಗೋವುಗಳನ್ನು ತಾವು ಪಡೆಯಬೇಕೆಂದಿಚ್ಛೆಯುಳ್ಳವರೆಂದು ಮೊದಲನೆಯ ಅರ್ಥ. ಅಥವಾ, ಗವ್ಯವ ಇತ್ಯತ್ರ ಗೋಸ್ವಾಮಿತ್ವಂ ಪ್ರತಿಪದ್ಯತೇ । ಯಥಾ । ಗವ್ಯವ ಎಂಬ ಪದದಿಂದ ಗೋಸ್ವಾಮಿತ್ವವೂ ಸೂಚಿತವಾಗುತ್ತದೆ ಎಂದು ಸಾಯಣರು ವಿವರಿಸಿ,

ತವೇದಂ ವಿಶ್ವಮಭಿತಃ ಪಶವ್ಯಂ೧ಯತ್ಪಶ್ಯಸಿ ಚಕ್ಷಸಾ ಸೂರ್ಯಸ್ಯ ।
ಗವಾಮಸಿ ಗೋಪತಿರೇಕ ಇಂದ್ರ ಭಕ್ಷೀಮಹಿ ತೇ ಪ್ರಯತಸ್ಯ ವಸ್ವಃ ॥

(ಋ. ಸಂ ೭-೯೮-೬)

ಎಂಬ ಋಕ್ಕನ್ನುದಹರಿಸಿ ಅಲ್ಲಿ ಗೋಪತಿತ್ವವನ್ನು ಸೂಚಿಸಿರುವ ವಿಷಯವನ್ನು ತಿಳಿಸಿದ್ದಾರೆ.

ಶಿಮ್ಯಾ—ಶಕ್ತಿಯಿಂದ ಎಂದರ್ಥ. ಮಥನಾದಿ ರೂಪವಾದ ಶಕ್ತಿಯಾಗಲಿ, ಅಥವಾ ವೃಷ್ಟ್ಯುತ್ಪಾದನಾದಿ ಕಾಲದ ವಿದ್ಯುದ್ರೂಪವಾದ ಶಕ್ತಿಯಾಗಲಿ ಇಲ್ಲಿ ಸೂಚಿತವಾಗಿದೆಯೆಂದು ತಿಳಿಸಿದೆ.

ಅಪ್ಸು ಜೀಜನನ್—ಅಂತರಿಕ್ಷದಲ್ಲಿ ಉತ್ಪನ್ನವಾಗುವಂತೆ ಮಾಡಿದರು.

ಯದಗ್ನೇ ದಿವಿಜಾ ಅಸ್ಯಪ್ಸುಜಾ ವಾ ಸಹಸ್ಕೃತ । ತಂ ತ್ವಾ ಗೀರ್ಭಿರ್ಹವಾಮಹೇ ।

(ಋ ಸಂ. ೮-೪೩-೨೮

**ಅಪ್ಸ್ವಗ್ನೇ ಸಧಿಷ್ಟವ ಸೌಷಧೀರನು ರುಧ್ಯಸೇ । ಗರ್ಭೇ ಸಂಜಾಯಸೇ ಪುನಃ ॥**

(ಋ. ಸಂ. ೮-೪೩-೯)

ಇತ್ಯಾದಿ ಋಕ್ಕುಗಳಲ್ಲಿ ವರ್ಣಿತವಾಗಿರುವಂತೆ ಅಂತರಿಕ್ಷದಲ್ಲಿ ಅಗ್ನ್ಯುತ್ಪತ್ತಿಯ ಕ್ರಮವನ್ನು ತಿಳಿಸಿದೆ.

**ಪಾಜಸಾ ಗಿರಾ ರೋದಸೀ ಅರೇಜೇತಾಂ**—ಅಗ್ನಿಯ ಶಕ್ತಿಯಿಂದಲೂ ಭಯಂಕರವಾದ ಶಬ್ದದಿಂದಲೂ ದ್ಯಾವಾಪೃಥಿವಿಗಳೆರಡೂ ಸಹ ಕಂಪಿಸಿದವು.

**ತ್ವಮಗ್ನೇ ಪ್ರಥಮೋ ಮಾತರಿಶ್ವನ ಆವಿರ್ಭವ ಸುಕ್ರತೂಯಾ ವಿವಸ್ವತೇ ।**
**ಅರೇಜೇತಾಂ ರೋದಸೀ ಹೋತೃವೂರ್ಯೇಽಸಘ್ನೋರ್ಭಾರಮಯಜೋ ಮಹೋ ವಸೋ ।**

(ಋ. ಸಂ. ೧-೩೧-೩)

ಇತ್ಯಾದಿ ಋಕ್ಕುಗಳಲ್ಲಿ ಅಗ್ನ್ಯುತ್ಪತ್ತಿಕಾಲದಲ್ಲಿ ದ್ಯಾವಾಪೃಥಿವಿಗಳೆರಡೂ ಕಂಪಿಸಿದವು ಎಂದಿರುವಂತೆ ಇಲ್ಲಿಯೂ ಆ ವಿಷಯವು ಸೂಚಿತವಾಗಿದೆ.

### ವ್ಯಾಕರಣಪ್ರಕ್ರಿಯಾ

**ಗವ್ಯವಃ**—ಗಾಃ ಆತ್ಮನಃ ಇಚ್ಛತಿ. ಗವ್ಯತಿ ಇತಿ ಗವ್ಯುಃ. **ಸುಪ ಆತ್ಮನಃ ಕ್ಯಚ್** (ಪಾ. ಸೂ. ೩-೧-೮) ಎಂಬುದರಿಂದ ಕ್ಯಚ್ ಪ್ರತ್ಯಯ. ಕ್ಯಜಂತದ ಮೇಲೆ **ಕ್ಯಾಚ್ಛಂದಸಿ** (ಪಾ. ಸೂ. ೩-೨-೧೭೦) ಎಂಬುದರಿಂದ ಉ ಪ್ರತ್ಯಯ. **ವಾಂತೋಯಿ ಪ್ರತ್ಯಯೇ** ಎಂಬುದರಿಂದ ಅವಾದೇಶ. **ಅತೋಲೋಪಃ** ಸೂತ್ರದಿಂದ ಕ್ಯಚಿನ ಅಕಾರಕ್ಕೆ ಲೋಪ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಜಸ್ ಪರವಾದಾಗ **ಜಸಿಚ** ಎಂಬುದರಿಂದ ಗುಣ. ಅವಾದೇಶ.

**ಸ್ವಾಧ್ಯಃ**—ಧ್ಯೈ ಚಿಂತಾಯಾಂ ಧಾತು. ಸು ಆಙ್ ಇವೆರಡು ಉಪಸರ್ಗಗಳು. **ಅನ್ಯೇಭ್ಯೋಽಪಿದೃಶ್ಯತೇ** (ಪಾ. ಸೂ. ೩-೨-೧೭೮) ಎಂಬುದರಿಂದ ಕ್ವಿಪ್ ಪ್ರತ್ಯಯ ದೃಶ್ಯತೇ ಎಂಬ ಪದ ಸ್ವಾರಸ್ಯದಿಂದ ನಿಮಿತ್ತವಿಲ್ಲದ ಕಾರ್ಯಗಳೂ ಬರುತ್ತವೆ ಆದುದರಿಂದ ಸಂಪ್ರಸಾರಣ. ಪೂರ್ವರೂಪ ಬರುತ್ತವೆ. **ಹಲಃ** (ಪಾ. ಸೂ. ೬-೪-೨) ಎಂಬುದರಿಂದ ಅದಕ್ಕೆ ದೀರ್ಘ. ಇದಕ್ಕೆ ಜಸ್ ಪರವಾದಾಗ **ಏರನೇಕಾಚೋಸಂಯೋಗಪೂರ್ವಸ್ಯ** ಎಂಬುದರಿಂದ ಯಣಾದೇಶ. ಉದಾತ್ತಸ್ಥಾನಕ್ಕೆ ಯಣ್ ಬಂದು ಅದರ ಪರದಲ್ಲಿ ಅನುದಾತ್ತವಾದ ವಿಭಕ್ತಿ ಬಂಬುದರಿಂದ **ಉದಾತ್ತಯಣೋಹಲ್ಪೂರ್ವಾತ್** (ಪಾ. ಸೂ. ೬-೧-೧೭೪) ಎಂಬುದರಿಂದ ಜಸಿಗೆ ಉದಾತ್ತವು ಪ್ರಾಪ್ತವಾದರೆ ಅಲ್ಲಿ ಅಸರ್ವನಾಮಸ್ಥಾನದಲ್ಲಿ ಮಾತ್ರವೆಂದುದರಿಂದ ಇಲ್ಲಿ ಸರ್ವನಾಮಸ್ಥಾನ ಸಂಜ್ಞೆ ಇರುವುದರಿಂದ ಬರುವುದಿಲ್ಲ ಆದುದರಿಂದ **ಉದಾತ್ತಸ್ವರಿತಯೋರ್ಯಣಃ**—(ಪಾ ಸೂ. ೮-೨-೪) ಎಂಬುದರಿಂದ ಸ್ವರಿತಸ್ವರ ಬರುತ್ತದೆ.

**ವಿದಥೇ— ವಿದ ಜ್ಞಾನೇ ಧಾತು. ರುದಿವಿದಿಭ್ಯಾಂ ಙಿತ್** (ಉ. ಸೂ. ೩-೩೯೫) ಎಂಬುದರಿಂದ ಅಥ ಪ್ರತ್ಯಯ. ಙಿತ್ವ ವಿಧಾನ ಮಾಡಿರುವುದರಿಂದ ಲಘೂಪಧಗುಣ ಬರುವುದಿಲ್ಲ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ. ಸಪ್ತಮೀ ಏಕವಚನಾಂತರೂಪ

**ಜೀಜನನ್**—ಜನೀ ಪ್ರಾದುರ್ಭಾವೇ. ಪ್ರೇರಣಾದಲ್ಲಿ ಣಿಚ್. ಣಿಜಂತದಮೇಲೆ ಲುಙ್. ಪ್ರಥಮಪುರುಷ ಬಹುವಚನದಲ್ಲಿ ಅಂತಾದೇಶ. ಅಂತ್ಯ ಇಕಾರಲೋಪ. **ಣಿಶ್ರಿದ್ರುಸ್ರುಭ್ಯಃಕರ್ತರಿಚಙ್** (ಪಾ. ಸೂ. ೩-೧-೪೮)

ಎಂಬುದರಿಂದ ಟ್ಲಿಗೆ ಚಜಾದೇಶ. ಮಿತ್ ಸಂಜ್ಞಾ ಇರುವುದರಿಂದ ಧಾತುವಿನ ಉಪಧೆಗೆ ಹ್ರಸ್ವ. **ಚೆಜಃ** (ಪಾ. ಸೂ. ೬-೧೧-೧೧) ಎಂಬುದರಿಂದ ಧಾತುವಿಗೆ ದ್ವಿತ್ವ. **ಣೇರನಿಟಿ** (ಪಾ. ಸೂ. ೬-೪-೫೧) ಎಂಬುದರಿಂದ ಣಿಚಿಗೆ ಲೋಪ. **ಸನ್ವಲ್ಲಘುನಿ**—(ಪಾ. ಸೂ. ೭-೪-೯೩) ಎಂಬುದರಿಂದ ಸನ್ವದ್ಭಾವವಿರುವುದರಿಂದ **ಸನ್ಯತಃ** ಸೂತ್ರದಿಂದ ಅಭ್ಯಾಸಕ್ಕೆ ಇತ್ವ. **ದೀರ್ಘೋ ಲಘೋಃ** (ಪಾ. ಸೂ. ೭-೪-೯೪) ಎಂಬುದರಿಂದ ಅದಕ್ಕೆ ದೀರ್ಘ. **ಬಹುಲಂ ಛಂದಸ್ಯ-ಮಾಙ್ಯೋಗೇಽಪಿ** ಎಂಬುದರಿಂದ ಅಡಾಗಮ ಬರುವುದಿಲ್ಲ. ಯಚ್ಛಬ್ದ ಸಂಬಂಧವಿರುವುದರಿಂದ ನಿಘಾತಸ್ವರ ಬರುವುದಿಲ್ಲ. **ಅಭ್ಯಸ್ತಾನಾಮಾದಿಃ** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಅರೇಜೇತಾಮ್**—ರೇಜೃ ಕಂಪನೇ. ಧಾತು. ಲಙ್ ಪ್ರಥಮಪುರುಷ ದ್ವಿವಚನಾಂತರೂಪ. ಅನುದಾತ್ತೇ-ತ್ತಾದ ಧಾತುವಾದುದರಿಂದ **ತಾಸ್ಯನುದಾತ್ತೇತ್**—(ಪಾ. ಸೂ. ೬-೧-೧೮೬) ಎಂಬುದರಿಂದ ಲಸಾರ್ವಧಾತುಕ ಅನುದಾತ್ತವಾಗುವುದರಿಂದ ಆದ್ಯುದಾತ್ತವಾಗುತ್ತದೆ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ.

**ಪಾಜಸಾ**—ಪಾ ರಕ್ಷಣೇ. ಧಾತು. **ಪಾತೇರ್ಬಲೇ ಜುಟ್ ಚ** (ಉ. ಸೂ. ೫-೯೬-೨) ಎಂಬುದರಿಂದ ಬಲರೂಪಾರ್ಥ ತೋರುವಾಗ ಅಸುನ್ ಪ್ರತ್ಯಯ ಅದಕ್ಕೆ ಜುಟಾಗಮ. ಟಿತ್ತಾದುದರಿಂದ ಆದ್ಯವಯವವಾಗುತ್ತದೆ. **ಞ್ನಿತ್ಯಾದಿರ್ನಿತ್ಯಮ್** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ತೃತೀಯಾ ಏಕವಚನಾಂತರೂಪ.

**ಗಿರಾ**—ಗೄ ನಿಗರಣೇ. ಧಾತು. ಕ್ವಿಪ್ ಪ್ರತ್ಯಯ. ತೃತೀಯಾಂತರೂಪ. **ಸಾವೇಕಾಚಸ್ತೃತೀಯಾದಿಃ** (ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಯಜತಮ್**—ಯಜ ದೇವಪೂಜಾಸಂಗತಿಕರಣದಾನೇಷು ಧಾತು. **ಭೃಮೃದೃಶಿಯಜಿ**—(ಉ. ಸೂ. ೪-೩೯೦) ಎಂಬುದರಿಂದ ಅತಚ್ ಪ್ರತ್ಯಯ. **ಚಿತಃ** (ಪಾ ಸೂ ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ದ್ವಿತೀಯಾ ಏಕವಚನಾಂತರೂಪ.

**ಜನುಷಾಮ್**—ಜನೀ ಪ್ರಾದುರ್ಭಾವೇ. ಧಾತು. **ಜನೇರುಸಿ** (ಉ. ಸೂ. ೨-೨೭-೨) ಎಂಬುದರಿಂದ ಉಸಿ ಪ್ರತ್ಯಯ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ. ಛಾಂದಸವಾಗಿ ಮತ್ವರ್ಥ ಪ್ರತ್ಯಯಕ್ಕೆ ಲುಕ್. ॥ ೧ ॥

———:o:———

ಸಂಹಿತಾಪಾಠಃ

ಯದ್ಧ ತ್ಯದ್ವಾಂ ಪುರುಮೀಳ್ಹಸ್ಯ ಸೋಮಿನಃ ಪ್ರ ಮಿತ್ರಾಸೋ ನ ದಧಿರೇ ಸ್ವಾಭುವಃ ।

ಅಧ ಕ್ರತುಂ ವಿದತಂ ಗಾತುಮರ್ಚತ ಉತ ಶ್ರುತಂ ವೃಷಣಾ ಪಸ್ತ್ಯಾವತಃ ॥ ೨ ॥

ಪದಪಾಠಃ

ಯತ್ । ಹ । ತ್ಯತ್ । ವಾಂ । ಪುರುऽಮೀಳ್ಹಸ್ಯ । ಸೋಮಿನಃ । ಪ್ರ । ಮಿತ್ರಾಸಃ । ನ । ದಧಿರೇ ।

ಸ್ವಾಽಭುವಃ ।

ಅಧ । ಕ್ರತುಂ । ವಿದತಂ । ಗಾತುಂ । ಅರ್ಚತೇ । ಉತ । ಶ್ರುತಂ । ವೃಷಣಾ । ಪಸ್ತ್ಯಽವತಃ ॥ ೨ ॥

ಸಾಯಣಭಾಷ್ಯಂ

ಹೇ ಮಿತ್ರಾವರುಣೌ ಯದ್ಯಸ್ಮತ್ಕಾರಣಾದ್ವಾಂ ಯುವಾಂ ಪುರುಮೀಳ್ಹಸ್ಯ ಬಹುಲಾಭೀಷ್ಟಸೇಚನಸ್ಯ ಸೋಮಿನಃ ಸ್ವಾಭುವಃ ಸೋಮವತಃ ಸ್ವಾಭವನಶೀಲಸ್ಯ ॥ ಕರ್ಮಣಿ ಷಷ್ಠೀ ॥ ತ್ಯದುಕ್ತಲಕ್ಷಣಂ ಕರ್ಮ ಪ್ರ ಮಿತ್ರಾಸೋ ನ ಮಿತ್ರಾಣೀವ ಮಿತ್ರಭೂತಾ ಋತ್ವಿಜಃ ಪ್ರ ದಧಿರೇ ಪ್ರಕರ್ಷೇಣ ಧಾರಯಂತಿ । ಹೇತಿ ಪೂರಣಃ । ಅಧಾತಃ ಕಾರಣಾದ್ಗಾತುಂ ಯುಷ್ಮದ್ಗಮನಮರ್ಚತೇ ॥ ಷಷ್ಠ್ಯರ್ಥೇ ಚತುರ್ಥೀ ॥ ಅರ್ಚತಃ ಪೂಜಯತೋ ಯಜಮಾನಸ್ಯ ಕ್ರತುಂ ಕರ್ಮ ವಿದತಂ । ಜಾನೀತಂ ॥ ವಿದೇರ್ಲೋಟಿ ವ್ಯತ್ಯಯೇನ ಶಃ॥ ಉತಾಪಿ ಚ ಹೇ ವೃಷಣಾ ಕಾಮಾನಾಂ ವರ್ಷಿತಾರೌ ಯುವಾಂ ಪಸ್ತ್ಯಾವತಃ। ಪಸ್ತ್ಯಮಿತಿ ಗೃಹನಾಮ ಪಸ್ತ್ಯಂ ದುರೋಣ ಇತಿ ತನ್ನಾಮಸೂಕ್ತತ್ವಾತ್। ಸದಃಪ್ರಾಚೀನ ವಂಶಾದಿಗೃಹವತೋ ಯಜಮಾನಸ್ಯಾಹ್ವಾನಂ ಸ್ತೋತ್ರಂ ವಾ ಶ್ರುತಂ । ಶೃಣುತಂ ॥ ಛಾಂದಸೋ ವಿಕರಣಸ್ಯ ಲುಕ್ ॥ ಯದ್ವಾ । ಯದ್ಯಸ್ಮಾತ್ಸೋಮಿನಃ ಸೋಮವತಃ ಪುರುಮೀಳ್ಹಸ್ಯೈತನ್ನಾಮಕಸ್ಯ ರಾಜ್ಞೋ ಮಿತ್ರಾಸೋ ನ ಮಿತ್ರಾಣೀವ ಸ್ಥಿತಾಃ ಸ್ವಾಭುವಃ ಸ್ವಾಭವನಶೀಲಾಃ ಸ್ವಸ್ವವ್ಯಾಪಾರಸಮರ್ಥಾ ದಧಿರೇ ಅಧಾತಃ ಕಾರಣಾತ್ತಸ್ಯಾರ್ಚತೇಽರ್ಚತಃ ಕ್ರತುಂ ವಿದತಮಿತ್ಯಾದಿ ಪೂರ್ವವತ್ ॥

ಪ್ರತಿಪದಾರ್ಥ

(ಎಲೈ ಮಿತ್ರಾವರುಣರೇ) **ಯತ್**— ಯಾವ ಕಾರಣದಿಂದ । **ವಾಂ**—ನಿಮ್ಮಿಬ್ಬರನ್ನೂ ಉದ್ದೇಶಿಸಿ । **ಪುರುಮೀಳ್ಹಸ್ಯ**—ಪ್ರಭೂತವಾಗಿ ಸುರಿಸತಕ್ಕದ್ದೂ, (ಇಷ್ಟಾರ್ಥವನ್ನು ಸುರಿಸುವಂತೆಮಾಡುವುದೂ) । **ಸೋಮಿನಃ**—ಸೋಮರಸದಿಂದ ತುಂಬಿದ್ದೂ । **ಸ್ವಾಭುವಃ**—ಆತ್ಮಸಂತೋಷದಿಂದಲೇ ಪ್ರವರ್ತಿಸಿದ್ದೂ ಆದ ಆಹುತಿಯಿಂದ ಕೂಡಿದ । **ತ್ಯತ್**—ಆ ಯಜ್ಞಕರ್ಮವನ್ನು । **ಪ್ರ ಮಿತ್ರಾಸೋ ನ**—ಶ್ರೇಷ್ಠರಾದ ಮಿತ್ರರಂತೆ ಇರುವ ಋತ್ವಿಕ್ಕುಗಳು। **ದಧಿರೇ ಹ**—ನೆರವೇರಿಸುತ್ತಾರೆಯೋ । [ ಅಥವಾ **ಸೋಮಿನಃ**—ಸೋಮರಸವನ್ನು ಹೊಂದಿರುವ **ಪುರುಮೀಳ್ಹಸ್ಯ**—ಪುರುಮೀಳ್ಹನೆಂಬ ರಾಜನ । **ಪ್ರ ಮಿತ್ರಾಸೋ ನ**—ಶ್ರೇಷ್ಠರಾದ ಮಿತ್ರರಂತೆ ಇರುವವರೂ । **ಸ್ವಾಭುವಃ**—ತಮ್ಮ ತಮ್ಮ ವ್ಯಾಪಾರಗಳಲ್ಲಿ ಸಮರ್ಥರಾಗಿರುವವರೂ ಆದ ಋತ್ವಿಕ್ಕುಗಳು । **ತ್ಯತ್**—ಪ್ರಸಿದ್ಧವಾದ ಯಜ್ಞಕರ್ಮವನ್ನು । **ದಧಿರೇ ಹ**—ನೆರವೇರಿಸುತ್ತಾರೆಯೋ । ] **ಅಧ**—ಅದ್ದರಿಂದಲೇ । **ಗಾತುಂ**—ನಿಮ್ಮ ಆಗಮನವನ್ನು । **ಅರ್ಚತೇ**—ನಿರೀಕ್ಷಿಸಿ ( ನಿಮ್ಮನ್ನು ) ಪೂಜಿಸುವ ಯಜಮಾನನ । **ಕ್ರತುಂ**—ಕರ್ಮವನ್ನು । **ವಿದತಂ**—ತಿಳಿ

ಕೊಂಡು ಶ್ಲಾಘಿಸಿ । ಉತ — ಅಲ್ಲದೆ । ವೃಷಣಾ — ಇಷ್ಟಾರ್ಥಪ್ರದರಾದ ಎಲೈ ಮಿತ್ರಾವರುಣರೇ । ಪಸ್ತ್ಯಾವತಃ — (ಯಜ್ಞಸಂಪತ್ತುಗಳಿಂದ ಕೂಡಿದ) ಗೃಹವುಳ್ಳ ಯಜಮಾನನ (ಸ್ತೋತ್ರವನ್ನು) । ಶ್ರುತಂ — ಕೇಳಿರಿ.

ಭಾವಾರ್ಥ

ಎಲೈ ಮಿತ್ರಾವರುಣರೇ, ಶ್ರೇಷ್ಠರಾದ ಮಿತ್ರರಂತಿರುವ ಋತ್ವಿಕ್ಕುಗಳು ನಿಮ್ಮಿಬ್ಬರನ್ನು ಉದ್ದೇಶಿಸಿ ಪ್ರಭೂತವಾಗಿ ಸ್ರವಿಸತಕ್ಕದ್ದೂ, ಸೋಮರಸದಿಂದ ಕೂಡಿದ್ದೂ, ಆತ್ಮಸಂತೋಷದಿಂದ ಪ್ರವರ್ತಿಸಿದ್ದೂ ಆದ ಆಹುತಿಯಿಂದ ಕೂಡಿದ ಯಜ್ಞಕರ್ಮವನ್ನು ನೆರವೇರಿಸುತ್ತಾರೆ. ಆದ್ದರಿಂದ ನಿಮ್ಮ ಆಗಮನವನ್ನು ನಿರೀಕ್ಷಿಸಿ ನಿಮ್ಮನ್ನು ಪೂಜಿಸುವ ಯಜಮಾನನ ಕರ್ಮವನ್ನು ತಿಳಿದುಕೊಂಡು ಅದನ್ನು ಶ್ಲಾಘಿಸಿರಿ. ಅಲ್ಲದೆ ಇಷ್ಟಾರ್ಥಪ್ರದರಾದ ಎಲೈ ಮಿತ್ರಾವರುಣರೇ, ಯಜ್ಞಸಂಪತ್ತುಗಳಿಂದ ಕೂಡಿದ ಗೃಹವುಳ್ಳ ಯಜಮಾನನ ಸ್ತೋತ್ರವನ್ನು ಚೆನ್ನಾಗಿ ಕೇಳಿರಿ.

## English Translation

Since they, (the priests), like friends, have prepared for you both, Mitra and Varuna, a libation) of the abundantly-flowing and spontaneous Soma juices, therefore do you consent to come to the rite of the worshipper, and listen, showerers (of blessings) to the (prayers of the) householder.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಪೂರ್ವಾರ್ಧಕ್ಕೆ ಎರಡು ವಿಧವಾದ ಅರ್ಥವನ್ನು ಹೇಳಿದೆ. ಮೊದಲನೆಯದಾಗಿ **ಪುರುಮೀಳ್ಹಸ್ಯ** ಎಂಬ ಪದಕ್ಕೆ ಬಹುಳಾಭೀಷ್ಟಸೇಚನಸ್ಯ—ಪ್ರಭೂತವಾಗಿ ಇಷ್ಟಾರ್ಥಗಳನ್ನು ಸುರಿಸತಕ್ಕ ಎಂದು ಷಷ್ಠ್ಯಂತವಾಗಿದ್ದರೂ ಸಹ **ತ್ಯತ್** ಎಂಬ ಕರ್ಮಪದಕ್ಕೆ ವಿಶೇಷಣವಾಗಿದೆ. **ಸ್ವಾಭುವಃ** ಎಂದರೆ **ಸೋಮವತಃ ಸ್ವಾಭುವನಶೀಲಸ್ಯ** । ಆತ್ಮಸಂತೋಷದಿಂದಲೇ ಪ್ರವರ್ತಿಸಿದ ಆಹುತಿಯಿಂದ ಕೂಡಿದ ಯಜ್ಞಕರ್ಮವೆಂದು ತಾತ್ಪರ್ಯ. ಇಂತಹ ಯಜ್ಞಕರ್ಮವನ್ನು ಶ್ರೇಷ್ಠರಾದ ಋತ್ವಿಕ್ಕುಗಳು ನೆರವೇರಿಸುತ್ತಾರೆಂದರ್ಥ.

ಎರಡನೆಯದಾಗಿ, **ಪುರುಮೀಳ್ಹಸ್ಯ** ಎಂಬುದು ಅಂಕಿತನಾಮವಾಗಿ ಪುರುಮೀಳ್ಹನೆಂಬ ರಾಜನ ಎಂದೂ **ಸ್ವಾಭುವಃ** ಎಂದರೆ ತಮ್ಮ ತಮ್ಮ ವ್ಯಾಪಾರಗಳಲ್ಲಿ ಸಮರ್ಥರಾಗಿರುವ ಋತ್ವಿಕ್ಕುಗಳಿಂದೂ ಇಂತಹ ಋತ್ವಿಕ್ಕುಗಳು ಪ್ರಸಿದ್ಧವಾದ ಯಜ್ಞಕರ್ಮವನ್ನು ನೆರವೇರಿಸುವರೆಂದೂ ಅರ್ಥವಾಗುತ್ತದೆ. ಪುರುಮೀಳ್ಹನೆಂಬುವನು ಪ್ರಾಚೀನನಾದ ಋಷಿಯೆಂದು ಕೆಲವು ಕಡೆಗಳಲ್ಲಿಯೂ, ರಾಜನೆಂದು ಕೆಲವು ಕಡೆಗಳಲ್ಲಿಯೂ ಪ್ರಸಿದ್ಧನಾಗಿದ್ದಾನೆ. ಇವನ ಕಥೆಯನ್ನು ಬೃಹದ್ದೇವತೆಯಲ್ಲಿ ಈರೀತಿ ಹೇಳಿದ್ದಾರೆ ಅಲ್ಲಿ ಕಥೆಯು ಮುಖ್ಯವಾಗಿ ಶ್ಯಾವಾಶ್ವನ ವಿಷಯವಾಗಿದ್ದರೂ ಸಹ ಶ್ಯಾವಾಶ್ವನಿಗೂ ಪುರುಮೀಳ್ಹನಿಗೂ ಸಂಭವಿಸಿದ ಸಂಬಂಧವನ್ನು ತಿಳಿಸುವುದರಿಂದ ಬೃಹದ್ದೇವತಾಕಾರರು ಹೇಳುವ ಕಥೆಯನ್ನು ಇಲ್ಲಿ ಹೇಳಲಾಗಿದೆ.

**ರಾಜರ್ಷಿರಭವದ್ದಾರ್ಭ್ಯೋ ರಥವೀತಿರಿತಿ ಶ್ರುತಃ ।**
**ಸ ಯಕ್ಷ್ಯಮಾಣೋ ರಾಜಾತ್ರಿಂ ಅಭಿಗಮ್ಯ ಪ್ರಸಾದ್ಯ ಚ ॥**
**ಆತ್ಮಾನಂ ಕಾರ್ಯಮರ್ಥಂ ಚ ಖ್ಯಾಪಯನ್ಪ್ರಾಂಜಲಿಃ ಸ್ಥಿತಃ ।**
**ಅವೃಣೀತರ್ಷಿಮಾತ್ರೇಯಂ ಆರ್ತ್ವಿಜ್ಯಾಯಾರ್ಚನಾನಸಂ ॥**

ಸ ಸಪುತ್ರೋಽಭ್ಯಗಚ್ಛತ್ತಂ ರಾಜಾನಂ ಯಜ್ಞಸಿದ್ಧಯೇ ।
ಶ್ಯಾವಾಶ್ವಶ್ಚಾತ್ರಿಪುತ್ರಸ್ಯ ಪುತ್ರಃ ಖಲ್ವರ್ಚನಾನಸಃ ॥
ಸಾಂಗೋಪಾಂಗಾನ್ಸರ್ವವೇದಾನ್ ಯಃ ಪಿತ್ರಾಧ್ಯಾಪಿತೋ ಮುದಾ ।
ಅರ್ಚನಾನಾಃ ಸಪುತ್ರೋಽಥ ಗತ್ವಾ ನೃಪಮಯಾಜಯತ್ ।
ಯಜ್ಞೇ ಚ ವಿತತೇಽಪಶ್ಯದ್ರಾಜಪುತ್ರೀಂ ಯಶಸ್ವಿನೀಂ ।
ಸ್ನುಷಾ ಮೇ ರಾಜಪುತ್ರೀ ಸ್ಯಾದಿತಿ ತಸ್ಯ ಮನೋಽಭವತ್ ।
ಶ್ಯಾವಾಶ್ವಸ್ಯ ಚ ತಸ್ಯಾಂ ವೈ ಸಕ್ತಮಾಸೀತ್ತದಾ ಮನಃ ।
ಸಂಯುಜ್ಯಸ್ವ ಮಯಾ ರಾಜನ್ನಿತಿ ಯಾಜ್ಯಂ ಚ ಸೋಽಬ್ರವೀತ್ ॥
ಶ್ಯಾವಾಶ್ವಾಯ ಸುತಾಂ ದಿತ್ಸುರ್ಮಹಿಷೀಂ ಸ್ವಾಂ ನೃಪೋಽಬ್ರವೀತ್ ।
ಕಿಂ ತೇ ಮತಮಹಂ ಕನ್ಯಾಂ ಶ್ಯಾವಾಶ್ವಾಯ ದದಾಮಿ ಹಿ ॥
ಅತ್ರಿಪುತ್ರೋಽದುರ್ಬಲೋ ಹಿ ಜಾಮಾತಾ ತ್ವಾವಯೋರಿತಿ ।
ರಾಜಾನಮಬ್ರವೀತ್ಸಾಪಿ ನೃಪರ್ಷಿಕುಲಜಾ ಹ್ಯಹಂ ॥
ನಾನೃಷಿರ್ನೌ ತು ಜಾಮಾತಾ ನೈಷ ಮಂತ್ರಾನ್ ಹಿ ದೃಷ್ಟವಾನ್ ।
ಋಷಯೇ ದೀಯತಾಂ ಕನ್ಯಾ ವೇದಸ್ಯಾಂಬಾ ಭವೇತ್ತಥಾ ।
ಋಷಿರ್ಮಂತ್ರದೃಶಂ ವೇದಪಿತರಂ ಮನ್ಯತೇ ಯತಃ ।
ಪ್ರತ್ಯಾಚಷ್ಟೇ ಸ ತಂ ರಾಜಾ ಸಹ ಸಂಮಂತ್ರ್ಯ ಭಾರ್ಯಯಾ ॥
ಅನೃಷಿರ್ನೈವ ಜಾಮಾತಾ ಕಶ್ಚಿದ್ಭವಿತುಮರ್ಹತಿ ।
ಪ್ರತ್ಯಾಖ್ಯಾತ ಋಷಿಸ್ತೇನ ವೃತ್ತೇ ಯಜ್ಞೇ ನ್ಯವರ್ತತ ॥
ಶ್ಯಾವಾಶ್ವಸ್ಯ ತು ಕನ್ಯಾಯಾ ಮನೋ ನೈವ ನ್ಯವರ್ತತ ।
ತತಸ್ತೌ ತು ನಿವರ್ತೇತಾಂ ಉಭಾವೇವಾಭಿಜಗ್ಮತುಃ ॥
ಶಶೀಯಸೀಂ ತರಂತಂ ಚ ಪುರುಮೀಳ್ಹಂ ಚ ಪಾರ್ಥಿವಂ ।
ತರಂತಪುರುಮೀಳ್ಹೌ ತು ರಾಜಾನೌ ವೈದದಶ್ವ್ಯೃಷೀ ॥
ತಾಭ್ಯಾಂ ತೌ ಚಕ್ರತುಃ ಪೂಜಾಂ ಋಷಿಭ್ಯಾಂ ನೃಪತೀ ಸ್ವಯಂ ।
ಋಷಿಪುತ್ರಂ ಮಹಿಷ್ಯಾಶ್ಚ ದರ್ಶಯಾಮಾಸ ತಂ ನೃಪಃ ।
ಅಜಾವಿಕಂ ಗವಾಶ್ವಂ ಚ ಶ್ಯಾವಾಶ್ವಾಯ ಶಶೀಯಸೀ ।
ಅತ್ರಿಂ ಯಾಜ್ಯಾರ್ಚಿತೌ ಗತ್ವಾ ಪಿತಾಪುತ್ರೌ ಸ್ವಮಾಶ್ರಮಂ ॥
ಅಭ್ಯವಾದಯತಾಮತ್ರಿಂ ಮಹರ್ಷಿಂ ದೀಪ್ತತೇಜಸಂ ।
ಶ್ಯಾವಾಶ್ವಸ್ಯ ಮನಸ್ಯಾಸೀನ್ಮಂತ್ರಸ್ಯಾದರ್ಶನಾದಹಂ ॥
ನ ಲಬ್ಧವಾನಹಂ ಕನ್ಯಾಂ ಹಂತ ಸರ್ವಾಂಗಶೋಭನಾಂ ।
ಅಸ್ಯಹಂ ಮಂತ್ರದರ್ಶೀ ಸ್ಯಾಂ ಭವೇದ್ಧರ್ಷೋ ಮಹಾನ್ಮಮ ॥
ಇತ್ಯರಣ್ಯೇ ಚಿಂತಯತಃ ಪ್ರಾದುರಾಸೀನ್ಮರುದ್ಗಣಃ ।
ದದರ್ಶ ಸಂಸ್ಥಿನ್ಪಾರ್ಶ್ವೇ ತುಲ್ಯರೂಪಾನಿವಾತ್ಮನಃ ॥
ಸಮಾನವಯಸಶ್ಚೈವ ಮರುತೋ ರುಕ್ಮವಕ್ಷಸಃ ।

ತಾಂಸ್ತುಲ್ಯವಯಸೋ ದೃಷ್ಟ್ವಾ ದೇವಾನ್ಪುರುಷವಿಗ್ರಹಾನ್ ॥
ಶ್ಯಾವಾಶ್ವೋ ವಿಸ್ಮಿತೋಽಪೃಚ್ಛತ್ಕೇ ಸ್ಥೇತಿ ಮರುತಸ್ತದಾ ।
ತತಸ್ತು ಮರುತೋ ದೇವಾನ್ ರುದ್ರಸೂನೂನಬುಧ್ಯತ ॥
ಯ ಈಂ ವಹಂತ ಇತ್ಯಾಭಿರ್ಋಗ್ಭಿಸ್ತುಷ್ಟಾವ ತಾಂಸ್ತಥಾ ।
ಅತಿಕ್ರಮಂ ಹಿ ತಂ ಮೇನೇ ಋಷಿರ್ವಿಪುಲಮಾತ್ಮನಃ ॥
.... .... .... .... .... .... ....
ರಥವೀತೇರ್ದುಹಿತರಂ ಅಗಚ್ಛನ್ಮನಸಾ ತದಾ ।
ಸ ಸದ್ಯ ಋಷಿರಾತ್ಮಾನಂ ಪ್ರವಕ್ಷ್ಯನ್ ರಥವೀತಯೇ ॥
.... .... .... .... .... .... .... ।
ಆದಾಯ ಕನ್ಯಾಂ ತಾಂ ದಾರ್ಭ್ಯ ಉಪೇಯಾಯಾರ್ಚನಾನಸಂ ।
ಪಾದೌ ತಸ್ಯೋಪಸಂಗೃಹ್ಯ ಸ್ಥಿತ್ವಾ ಪ್ರಹ್ವಃ ಕೃತಾಂಜಲಿಃ ॥
ರಥವೀತಿರಹಂ ದಾರ್ಭ್ಯ ಇತಿ ನಾಮ ಶಶಂಸ ಚ ।
ಮಯಾ ಸಂಗತಿಮಿಚ್ಛಂತಂ ತ್ವಾಂ ಪ್ರತ್ಯಾಚಕ್ಷಿ ಯತ್ಪುರಾ ॥
ತತ್ಕ್ಷಮಸ್ವ ನಮಸ್ತೇಽಸ್ತು ಮಾ ಚ ಮೇ ಭಗವನ್ಕ್ರುಧಃ ।
ಋಷೇಃ ಪುತ್ರಃ ಸ್ವಯಮೃಷಿಃ ಪಿತಾಸಿ ಭಗವನ್ನೃಷೇಃ
ಹಂತ ಪ್ರತಿಗೃಹಾಣೇಮಾಂ ಸ್ನುಷಾಮಿತ್ಯೇವಮಬ್ರವೀತ್ ।
ಪಾದ್ಯಾರ್ಘ್ಯಮಧುಪರ್ಕೈಸ್ತು ಪೂಜಯಿತ್ವಾ ಸ್ವಯಂ ನೃಪಃ ॥
ಶುಕ್ಲಮಶ್ವಶತಂ ದತ್ವಾ ಅನುಜಜ್ಞೇ ಗೃಹಾನ್ಪ್ರತಿ ।
ಶಶೀಯಸೀಂ ತರಂತಂ ಚ ಪುರುಮೀಳ್ಹಂ ಚ ಪಾರ್ಥಿವಂ ॥
ಷಡ್ಭಿಃ ಸನದಿತಿ ಸ್ತುತ್ವಾ ಜಗಾಮರ್ಷಿರಪಿ ಕ್ಷಯಂ ।

( ಬೃ. ದೇ. ೫-೫೦ ರಿಂದ ೮೦ )

ರಥವೀತಿದಾರ್ಭ್ಯನೆಂಬ ರಾಜರ್ಷಿಯು ಯಾಗಮಾಡಲುದ್ದೇಶಿಸಿ ಅತ್ರಿಋಷಿಯಲ್ಲಿಗೆ ಹೋಗಿ ಆತನನ್ನು ಪೂಜಿಸಿ ಅವನ ಪುತ್ರನಾದ ಅರ್ಚನಾನಸನನ್ನು ತನ್ನ ಯಜ್ಞಕ್ಕೆ ಪೌರೋಹಿತ್ಯವನ್ನು ಸ್ವೀಕರಿಸಿ ತನಗೆ ಯಜ್ಞಕಾರದಲ್ಲಿ ಸಹಾಯಮಾಡಬೇಕೆಂದು ಪ್ರಾರ್ಥಿಸಿದನು. ಅವನು ಅದಕ್ಕೆ ಒಪ್ಪಿಕೊಂಡು ತನ್ನ ಪುತ್ರನಾದ ಶ್ಯಾವಾಶ್ವನೊಡನೆ ದೊರೆಯ ಗೃಹಕ್ಕೆ ಯಜ್ಞಕಾರ್ಯಕ್ಕಾಗಿ ಹೋದನು ಮತ್ತು ಯಜ್ಞವನ್ನು ನೆರವೇರಿಸಿದನು. ಯಾಗಮಾಡತಕ್ಕ ಕಾಲದಲ್ಲಿ ಅರ್ಚನಾನಸನು ದೊರೆಯ ಮಗಳನ್ನು ನೋಡಿ ಆಕರ್ಷಿತನಾಗಿ ಅವಳನ್ನು ಶ್ಯಾವಾಶ್ವನಿಗೆ ಮದುವೆಮಾಡಿಕೊಳ್ಳಬೇಕೆಂದು ಆಸೆಪಟ್ಟನು. ಶ್ಯಾವಾಶ್ವನೂ ಸಹ ಅವಳಲ್ಲಿ ಮೋಹಗೊಂಡನು. ಆಗ ತಂದೆಮಕ್ಕಳಿಬ್ಬರೂ ರಾಜನಿಗೆ ತಮ್ಮ ಆಸೆಯನ್ನು ತಿಳಿಸಲು ಅವನೂ ಸಹ ಆ ಸಂಬಂಧಕ್ಕೆ ಒಪ್ಪಿ ತನ್ನ ಪತ್ನಿಯನ್ನು ಕೇಳಿ ಅನಂತರ ಉತ್ತರವನ್ನು ಕೊಡುವೆನೆಂದು ಹೇಳಲು ಅವನ ಪತ್ನಿಯು ಅದಕ್ಕೊಪ್ಪಲಿಲ್ಲ. ಶ್ಯಾವಾಶ್ವನು ಋಷಿಯಲ್ಲವೆಂದೂ, ಋಷಿಸಂತತಿಯಲ್ಲಿ ಹುಟ್ಟಿದ ತಮ್ಮ ಪುತ್ರಿಯನ್ನು ಅನೃಷಿಗೆ ಕೊಡಲು ಸಮ್ಮತಿಯಿಲ್ಲವೆಂದೂ ಅವಳು ತಿಳಿಸಿಬಿಟ್ಟಳು. ಅದೇ ರೀತಿಯಲ್ಲಿ ದೊರೆಯೂ ಸಹ ತಂದೆಮಕ್ಕಳಿಬ್ಬರಿಗೂ ಉತ್ತರವನ್ನು ಕೊಟ್ಟನಂತರ ಅವರು ತಮ್ಮ ಊರಿಗೆ ಹಿಂತಿರುಗಿದರು. ಅದರ

ಶ್ಯಾವಾಶ್ವನು ಮಾತ್ರ ರಾಜಕನ್ಯೆಯಲ್ಲಿಯೇ ನೆಟ್ಟಮನಸ್ಸುಳ್ಳವನಾದನು. ಹಿಂತಿರುಗುವಾಗ ದಾರಿಯಲ್ಲಿ ಶಶೀಯಸಿ ನನ್ನೂ, ತರಂತನನ್ನೂ, ಮತ್ತು ರಾಜನಾದ ಪುರುಮೀಳ್ಹನನ್ನೂ ಸಂಧಿಸಿದರು. ತರಂತ ಮತ್ತು ಪುರುಮೀಳ್ಹ ಇವರಿಬ್ಬರೂ ಸಹ ವಿದದಶ್ವನೆಂಬ ರಾಜನ ಪುತ್ರರೂ ಸ್ವಯಂ ಋಷಿಗಳೂ ಆಗಿದ್ದರು. ಇವರಿಬ್ಬರೂ ಸಹ ಆಗಂತುಕ ರಾದ ತಂದೆಮಕ್ಕಳಿಬ್ಬರಿಗೂ ನಮಸ್ಕರಿಸಿ ಅವರನ್ನು ಸತ್ಕರಿಸಿ ಪೂಜಿಸಿದರು. ಆಗ ಅಂತಃಪುರದ ಸ್ತ್ರೀಯರೂ ಸಹ ಇವರನ್ನು ಗವಾಶ್ವಾದಿದಾನಗಳಿಂದ ಸತ್ಕರಿಸಿದರು. ಶ್ಯಾವಾಶ್ವನು ಮಾತ್ರ ತನಗೆ ಸುಂದರಸ್ತ್ರೀಯು ಲಭಿಸಲಿಲ್ಲವಲ್ಲ ಎಂದು ಕೊರಗುತ್ತಾ ಕಾಡಿನಲ್ಲಿ ಸಂಚರಿಸುತ್ತಿದ್ದಾಗ ಮರುತ್ತುಗಳ ಸಂಘವನ್ನು ಸಂಧಿಸಿದನು. ಆಗ ಅವರು ರುದ್ರ ಪುತ್ರರೂ, ದೈವಾಂಶರೂ ಆದ ಮರುತ್ತುಗಳೆಂದು ತಿಳಿದು ಅವರನ್ನು ಸ್ತುತಿಸಿದನು. ಕೇ ಷ್ಠಾ ನರಃ (೫-೬೧) ಎಂಬ ಸೂಕ್ತದ ದ್ರಷ್ಟೃವಾದನು. ಇದನ್ನು ತಿಳಿದು ದರ್ಭನ ಮಗನಾದ ರಥವೀತಿಯು ತನ್ನ ಪುತ್ರಿಯನ್ನು ಕರೆದು ಕೊಂಡು ಬಂದು ತಾನು ಹಿಂದೆ ತನ್ನ ಮಗಳನ್ನು ಕೊಡಲು ನಿರಾಕರಿಸಿದುದನ್ನು ಕ್ಷಮಿಸಬೇಕೆಂದೂ, ಈಗ ಶ್ಯಾವಾಶ್ವನು ಋಷಿಯಾದುದರಿಂದಲೂ ತನ್ನ ಮಗಳನ್ನು ಪರಿಗ್ರಹಿಸಲು ಅರ್ಹನಾದುದರಿಂದಲೂ ಅವಳನ್ನು ಸ್ವೀಕರಿಸ ಬೇಕೆಂದೂ ಪ್ರಾರ್ಥಿಸಿದನು. ಶ್ಯಾವಾಶ್ವನೂ ಅವನ ತಂದೆಯೂ ಇದಕ್ಕೆ ಒಪ್ಪಲು ಆಗ ಅರ್ಘ್ಯಪಾದ್ಯಾದಿಗಳ ಪೂರ್ವಕ ವಾಗಿ ಕನ್ಯಾದಾನವನ್ನು ಮಾಡಿದನು. ಆಗ ಶ್ಯಾವಾಶ್ವನು ಪುರುಮೀಳ್ಹಾದಿಗಳು ತನಗೆ ಮಾಡಿದ ಸಹಾಯಕ್ಕಾಗಿ ಅವರನ್ನು ವಂದಿಸಿ ಅವರನ್ನು ಸ್ತುತಿಸತಕ್ಕ ಆರು ಋಕ್ಕುಗಳನ್ನು ರಚಿಸಿದನು. ಅವುಗಳಲ್ಲಿ,

> ಉತ ಮೇಽರಪದ್ಯುವತಿರ್ಮಮಂದುಷೀ ಪ್ರತಿ ಶ್ಯಾವಾಯ ವರ್ತನಿಂ ।
> ವಿ ರೋಹಿತಾ ಪುರುಮೀಳ್ಹಾಯ ಯೇಮತುರ್ವಿಪ್ರಾಯ ದೀರ್ಘಯಶಸೇ ॥
>
> (ಋ. ಸಂ. ೫-೬೧-೯)

ಎಂಬ ಋಕ್ಕು ಪುರುಮೀಳ್ಹನನ್ನು ಸ್ತುತಿಸತಕ್ಕನ್ನು.

> ಯುವಾಂ ಗೋತಮಃ ಪುರುಮೀಳ್ಹೋ ಅತ್ರಿರ್ದಸ್ರಾ ಹವತೇಽವಸೇ ಹವಿಷ್ಮಾನ್ ।
> ದಿಶಂ ನ ದಿಷ್ಟಾಮೃಜೂಯೇವ ಯಂತಾ ಮೇ ಹವಂ ನಾಸತ್ಯೋಪ ಯಾತಂ ॥
>
> (ಋ. ಸಂ. ೧-೧೮೩-೫)

ಎಂಬ ಋಕ್ಕಿನಲ್ಲಿ ಪುರುಮೀಳ್ಹನು ಅಶ್ವಿನೀದೇವತೆಗಳನ್ನು ಸ್ತುತಿಸಿ ಅವರ ರಕ್ಷಣೆಯನ್ನು ಪಡೆದನೆಂದು ತಿಳಿಸಿದೆ. ಇದೇ ಕಥೆಯನ್ನು ಸಾಯಣರು ಕೊಂಚ ವ್ಯತ್ಯಾಸಮಾಡಿ ಈರೀತಿ ತಿಳಿಸಿದ್ದಾರೆ.

> ಅತ್ರಾಶ್ಚರ್ಯಂ ಪುರಾವೃತ್ತಮಾಹುರಾಗಮಪಾರಗಾಃ ।
> ಅರ್ಚನಾನಾಃ ಪುರಾತ್ರೇಯೋ ದಾರ್ಭ್ಯೇಣ ರಥವೀತಿನಾ ॥
> ಆರ್ತ್ವಿಜ್ಯಾಯ ವೃತೋ ಯಜ್ಞೇ ವಿತತೇ ಹೌತ್ರ ಆಸ್ಥಿತಃ ।
> ರಥವೀತಿಸುತಾಂ ಕನ್ಯಾಂ ದದರ್ಶ ಪಿತುರಂತಿಕೇ ॥
> ಯಯಾಚೇ ಸ್ವಕುಮಾರಾಯ ಶ್ಯಾವಾಶ್ವಾಯ ಚ ತಾಂ ಸುತಾಂ ।

ಸ ಪ್ರದಾನಮನಾ ಭಾರ್ಯಾಮಪೃಚ್ಛತ್ಕಿಂ ಪ್ರಯಚ್ಛಸಿ ||
ಇತಿ ಪೃಷ್ಟಾ ಪುನಃ ಪ್ರಾಹ ಕಥಮಸ್ಮೈ ಪ್ರದಾಸ್ಯಸಿ |
ಇತಃ ಪೂರ್ವಂ ಸುತಾ ದತ್ತಾ ನಾಸೀದನೃಷಯೇ ಕ್ವಚಿತ್ ||
ತತ್ರಥೈವೇತಿ ನಿಶ್ಚಿತ್ಯ ಪ್ರತ್ಯಾಚಷ್ಟಾರ್ಚನಾನಸಂ |
ಶ್ಯಾವಾಶ್ವಃ ಸಂಸ್ಥಿತೇ ಯಜ್ಞೇ ತೇನ ರಾಜ್ಞಾ ನಿರಾಕೃತಃ ||
ತತ್ಪ್ರತ್ಯಾಶಾನ್ವಿತೋ ವಿಪ್ರಸ್ತಪಸ್ತೇಪೇ ಸುದಾರುಣಂ |
ಬ್ರಹ್ಮಚರ್ಯರತಃ ಶಾಂತೋ ಭಿಕ್ಷಾರ್ಥಂ ಪರ್ಯಟನ್ ದ್ವಿಜಃ ||
ತರಂತಮಹಿಷೀಂ ಸಾಧ್ವೀಂ ಬಿಭಿಕ್ಷೇಽಸೌ ಶಶೀಯಸೀಂ |
ಸಾ ಸಂಪ್ರಾಪ್ಯಾಂತಿಕೇ ಪತ್ಯುಃ ಪ್ರೋವಾಚಾಗತವಾನೃಷಿಃ |
ಇತ್ಯುಕ್ತೋ ನೃಪತಿರ್ಭಾರ್ಯಾಂ ಪ್ರತ್ಯಾಹೈನಂ ಪ್ರಪೂಜಯ |
ಸಾನುಜ್ಞಾತಾ ಗವಾಂ ಯೂಥಂ ಪಾದಾದಾಭರಣಾನಿ ಚ ||
ತರಂತೋಽಪಿ ಪುನಸ್ತಸ್ಮೈ ಪ್ರಾದಾದ್ಧನಮಪೇಕ್ಷಿತಂ |
ದತ್ವಾ ಚ ಪುರುಮೀಳ್ಹಸ್ಯ ಸ್ವಾನುಜಸ್ಯಾಂತಿಕಂ ಪ್ರತಿ ||
ಪ್ರೇರಯಾಮಾಸ ತಮೃಷಿಂ ಸೋಽಪಿ ತ್ವಾಂ ಮಾನಯಿಷ್ಯತಿ |
ತಥೇತಿ ರಾಜ್ಞೋ ವಚನಂ ನಿಶಮ್ಯ ತದ್ಭಾರ್ಯಯಾ ದರ್ಶಿತಸರ್ವಮಾರ್ಗಃ ||
ಗಚ್ಛನ್ ಶನೈರರ್ಧಪಥೇ ಮರುದ್ಗಣಾನ್ ಸಮಾನರೂಪಾನ್ ಸ್ವದಿದೃಕ್ಷಯಾಗತಾನ್ |
ವಿಲೋಕ್ಯ ವಿಪ್ರಃ ಸಭಯಃ ಪ್ರಣಮ್ಯ ಕೃತಾಂಜಲಿಃ ಕಂಟಕಿತಾಂಗಸಂಘಃ ||
ತುಷ್ಟಾವ ಹೃಷ್ಟಾನ್ ಮರುತೋ ವಿಶಿಷ್ಟೈರಥೈರ್ವಚೋಭಿಃ ಪರಿತುಷ್ಟಚಿತ್ತಃ |
ಸಂಪ್ರಾಪ್ಯ ಸರ್ವಂ ಸ್ವಮನೀಷಿತಂ ತದಾ ಮರುದ್ಗಣೇಭ್ಯೋ ಮುದಿತಾತ್ಮವದ್ಭ್ಯಃ ||
ತದಾಭವದೃಷಿಃ ಸೂಕ್ತದ್ರಷ್ಟಾ ಶ್ಯಾವಾಶ್ವನಾಮಕಃ |
ಪಶ್ಚಾತ್ಪುನರ್ಗೃಹಂ ಗತ್ವಾ ಭೂಯೋ ಲಬ್ಧ್ವಾ ಗವಾಂ ಶತಂ ||
ದಾರ್ಭ್ಯೋ ಮಂತ್ರದೃಶೇ ರಾಜ್ಞ್ಯಾ ಚೋದಿತಃ ಸ್ವಸುತಾಂ ದವಾ |
ಪುರುಮೀಳ್ಹಸ್ತರಂತಶ್ಚ ತದ್ಭಾರ್ಯಾ ಚ ಶಶೀಯಸೀ ||
ದಾರ್ಭ್ಯೋ ಯೋ ರಥವೀತ್ಯಾಖ್ಯಃ ಸಪ್ತ ಯೇ ಮರುತಾಂ ಗಣಾಃ |
ತೇ ತಸ್ಮೈ ಯದ್ದದು ಸ್ತುಷ್ಟಾಸ್ತತ್ಕ್ಷೇತ್ರೇತ್ಯತ್ರ ವರ್ಣ್ಯತೇ ||

(೫ನೇ ಮಂಡಲದ ೬೧ನೇ ಸೂಕ್ತದ ಸಾಯಣಭಾಷ್ಯದ ಪೂರ್ವಪೀಠಿಕೆ)

ಬೃಹದ್ದೇವತೆಯಲ್ಲಿ ಹೇಳಿರುವಂತೆಯೇ ಇಲ್ಲಿಯೂ ಕಥಾವಿವರಣೆಯಿದ್ದರೂ ಸಹ ಶ್ಯಾವಾಶ್ವನು ತರಂತನ ಪತ್ನಿಯ ಹತ್ತಿರ ಭಿಕ್ಷಾಟನೆಗೆ ಹೋದನೆಂಬುದು ವಿಶೇಷವಿಷಯ. ಈ ಕಥೆಯು ಮುಖ್ಯವಾಗಿ ಶ್ಯಾವಾಶ್ವನ ವಿಷಯ

ವನ್ನು ಹೇಳಿವರೂ ಸಹ **ಪುರುಮಿಳ್ಹನಿಂದ ಶ್ಯಾವಾಶ್ವನಿಗೆ** ಆದ ಸಹಾಯವನ್ನು ತಿಳಿಸಿ ಅವನ ಇಷ್ಟಾರ್ಥವು ಈ ಸಹಾಯದಿಂದ ಕೈಗೂಡಿದುದರಿಂದ **ಪುರುಮೀಳ್ಹನ** ಮಹಿಮೆಯನ್ನೂ ಸ್ತುತಿಸಿದ ಸಂದರ್ಭವಾಗಿದೆ. ಈ ಸೂಕ್ತ ದಲ್ಲಿ (ಋ ಸಂ. ೫-೬೧) ಶ್ಯಾವಾಶ್ವನು ಪುರುಮೀಳ್ಹನನ್ನು ಸ್ತುತಿಸುವ ಋಕ್ಕನ್ನು ಮೇಲೆ ಉದಹರಿಸಿದೆ.

**ಪಸ್ತ್ಯಾವತಃ—ಪಸ್ತ್ಯ, ದುರೋಣೇ** (ನಿ. ೩-೪) ಇತ್ಯಾದಿ ಗೃಹನಾಮಗಳಲ್ಲಿ ಪಠಿತವಾಗಿದೆ. ಯಜ್ಞ ಸಂಪತ್ತುಗಳಿಂದ ಕೂಡಿದ ಯಜ್ಞಗೃಹವುಳ್ಳ ಎಂದರ್ಥ.

ಇಂದ್ರಜ್ಯೇಷ್ಠಾನ್ ಬೃಹದ್ಭ್ಯಃ ಪರ್ವತೇಭ್ಯಃ ಕ್ಷಯಾँ ಏಭ್ಯಃ ಸುವಸಿ ಪಸ್ತ್ಯಾವತಃ ।
ಯಥಾಯಥಾ ಪತಯಂತೋ ವಿಯೇಮಿರ ಏವೈವ ತಸ್ಥುಃ ಸವಿತಃ ಸವಾಯ ತೇ ॥

( ಋ. ಸಂ. ೪-೫೪-೫ )

ಇತ್ಯಾದಿ ಋಕ್ಕುಗಳಲ್ಲಿ **ಪಸ್ತ್ಯಾವತಃ** ಎಂದರೆ **ಗೃಹವತಃ** ಎಂಬರ್ಥವಾಗುವಂತೆ ಪ್ರಕೃತವಾದ ಋಕ್ಕಿನಲ್ಲಿಯೂ ಅರ್ಥವಾಗುತ್ತದೆ.

॥ ವ್ಯಾಕರಣಪ್ರಕ್ರಿಯಾ ॥

**ಪುರುಮೀಢಸ್ಯ**—ಮಿಹ ಸೇಚನೇ. ಧಾತು. ಇದಕ್ಕೆ ನಿಷ್ಠಾಪ್ರತ್ಯಯ ಪರವಾದಾಗ **ಹೋಢಃ** ಎಂಬುದರಿಂದ ಹಕಾರಕ್ಕೆ ಢತ್ವ. **ಝಷಸ್ತ**—ಎಂಬುದರಿಂದ ಪ್ರತ್ಯಯತಕಾರಕ್ಕೆ ಧತ್ವ ಬಂದಾಗ ಷ್ಟುತ್ವದಿಂದ ಅದಕ್ಕೆ ಢಕಾರಾದೇಶ. **ಢೋಢೇ ಲೋಪಃ** (ಪಾ. ಸೂ ೮-೩-೧೦) ಎಂಬುದರಿಂದ ಪೂರ್ವಢಕಾರಕ್ಕೆ ಲೋಪ. **ಢ್ರಲೋಪೇ ಪೂರ್ವಸ್ಯ**—(ಪಾ. ಸೂ. ೬-೩-೧೧೧) ಎಂಬುದರಿಂದ ಪೂರ್ವಕ್ಕೆ ದೀರ್ಘ. ಕೃದುತ್ತರಪದ ಪ್ರಕೃತಿ ಸ್ವರ ಬರುತ್ತದೆ.

**ಸೋಮಿನಃ**—ಸೋಮಃ ಅಸ್ಯ ಅಸ್ತಿ ಇತಿ ಸೋಮೀ. ತಸ್ಯ **ಅತ ಇನಿ ಠನೌ** (ಪಾ. ಸೂ. ೫-೨-೧೧೫) ಎಂಬುದರಿಂದ ಮತ್ವರ್ಥದಲ್ಲಿ ಇನಿ ಪ್ರತ್ಯಯ. ಷಷ್ಠೀ ಏಕವಚನಾಂತರೂಪ.

**ಮಿತ್ರಾಸಃ—ಆಜ್ಜಸೇರಸುಕ್** (ಪಾ. ಸೂ. ೭-೧-೫೦) ಎಂಬುದರಿಂದ ಜಸಿಗೆ ಅಸುಕಾಗಮ.

**ದಧಿರೇ**—ಡುಧಾಞ್ ಧಾರಣಪೋಷಣಯೋಃ ಧಾತು. ಛಾಂದಸವಾಗಿ ಲಿಟ್. ಪ್ರಥಮಪುರುಷ ಬಹು ವಚನಾಂತರೂಪ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. **ಚಿತಃ** (ಪಾ. ಸೂ. ೬-೧-೧೬೩) ಎಂಬು ದರಿಂದ ಅಂತೋದಾತ್ತಸ್ವರ ಬರುತ್ತದೆ.

**ಸ್ವಾಭುವಃ**—ಭೂ ಸತ್ತಾಯಾಂ. ಧಾತು. ಕ್ವಿಪ್. **ಕರ್ತೃಕರ್ಮಣೋಃ ಕೃತಿ** ಎಂಬುದರಿಂದ ಕರ್ಮಣಿ ಯಲ್ಲಿ ಷಷ್ಠೀ ಬಂದಿದೆ.

**ವಿದತಮ್**—ವಿದ ಜ್ಞಾನೇ. ಧಾತು. **ಲೋಟ್** ಮಧ್ಯಮಪುರುಷ ದ್ವಿವಚನದಲ್ಲಿ ಲಙ್ವದ್ಭಾವವಿರುವುದರಿಂದ ತಮಾದೇಶ **ವ್ಯತ್ಯಯೋ ಬಹುಲಂ** ಎಂಬುದರಿಂದ ಶ ವಿಕರಣ ಬರುತ್ತದೆ. ಅದಕ್ಕೆ **ಸಾರ್ವಧಾತುಕಮಪಿತ್** ಎಂಬುದರಿಂದ ಙಿದ್ವದ್ಭಾವ ಬರುವುದರಿಂದ ಲಘೂಪಧ ಗುಣ ಬರುವುದಿಲ್ಲ. ತಿಙಂತ ನಿಘಾತಸ್ವರ ಬರುತ್ತದೆ.

**ಗಾತುಮ್**—ಗಾ ಸ್ತುತೌ ಧಾತು. **ತುಮುಣ್ಣ್ವುಲೌಕ್ರಿ**— (ಪಾ. ಸೂ. ೩-೩-೧೦) ಎಂಬುದರಿಂದ ತುಮುನ್ ಪ್ರತ್ಯಯ. ಮಾಂತವಾದುದರಿಂದ ಅವ್ಯಯಸಂಜ್ಞಾ ಬರುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತ ವಾಗುತ್ತದೆ.

**ಅರ್ಚತೇ**—ಅರ್ಚ ಪೂಜಾಯಾಂ ಧಾತು. ಲಡರ್ಥದಲ್ಲಿ ಶತೃ ಪ್ರತ್ಯಯ. ಲಸಾರ್ವಧಾತುಕವು ಅನು ದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ. ಚತುರ್ಥೀಏಕವಚನಾಂತರೂಪ. ಷಷ್ಠ್ಯರ್ಥದಲ್ಲಿ ಚತುರ್ಥೀ ಬಂದಿದೆ.

**ಶ್ರುತಮ್**—ಶ್ರು ಶ್ರವಣೇ. ಲೋಟ್ ಮಧ್ಯಮಪುರುಷ ದ್ವಿವಚನದಲ್ಲಿ ತಮಾದೇಶ. **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಲುಕ್. ಪ್ರತ್ಯಯಕ್ಕೆ ಙಿದ್ವದ್ಭಾವವಿರುವುದರಿಂದ ಗುಣ ಬರುವುದಿಲ್ಲ. ಅತಿಙಂತದ ಪರ ದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ವೃಷಣಾ**—ವೃಷು ಸೇಚನೇ ಧಾತು. ಔಣಾದಿಕ ಕನಿನ್ ಪ್ರತ್ಯಯ. **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ದ್ವಿವಚನಕ್ಕೆ ಆಕಾರಾದೇಶ.

**ಪಸ್ತ್ಯಾವತಃ**—ಪಸ್ತ್ಯಾ ಅಸ್ಯ ಅಸ್ತಿ ಇತಿ ಪಸ್ತ್ಯಾವಾನ್ ತಸ್ಯ. ಮತುಪ್ ಪ್ರತ್ಯಯ. **ಮಾದುಪಧಾ ಯಾಶ್ಚ**—ಎಂಬುದರಿಂದ ಮಕಾರಕ್ಕೆ ವತ್ವ. ಪಿತ್ತಾದುದರಿಂದ ಅನುದಾತ್ತವಾಗುತ್ತದೆ.

———:೦:———

ಸಂಹಿತಾಪಾಠಃ

ಆ ವಾಂ ಭೂಷನ್ಕ್ಷಿತಯೋ ಜನ್ಮ ರೋದಸ್ಯೋಃ ಪ್ರವಾಚ್ಯಂ ವೃಷಣಾ
ದಕ್ಷಸೇ ಮಹೇ ।
ಯದೀಮೃತಾಯ ಭರಥೋ ಯದರ್ವತೇ ಪ್ರ ಹೋತ್ರಯಾ ಶಿಮ್ಯಾ
ವೀಥೋ ಅಧ್ವರಂ ॥ ೩ ॥

। ಪದಪಾಠಃ ।

ಆ । ವಾಂ । ಭೂಷನ್ । ಕ್ಷಿತಯಃ । ಜನ್ಮ । ರೋದಸ್ಯೋಃ । ಪ್ರವಾಚ್ಯಂ । ವೃಷಣಾ । ದಕ್ಷಸೇ ।
ಮಹೇ ।

ಯತ್ । ಈಂ । ಋತಾಯ । ಭರಥಃ । ಯತ್ । ಅರ್ವತೇ । ಪ್ರ । ಹೋತ್ರಯಾ । ಶಿಮ್ಯಾ । ವೀಥಃ ।

ಅಧ್ವರಂ ॥ ೩ ॥

ಸಾಯಣಭಾಷ್ಯಂ

ಹೇ ವೃಷಣಾ ಕಾಮಾನಾಂ ವರ್ಷಿತಾರೌ ಹೇ ಮಿತ್ರಾವರುಣೌ ವಾಂ ಯುವಯೋಃ ಸಂಬಂಧಿ ಜನ್ಮ ಜನನಮುತ್ಪತ್ತಿಂ ರೋದಸ್ಯೋರ್ದ್ಯಾವಾಪೃಥಿವ್ಯೋಃ ಸಕಾಶಾತ್ । ದ್ಯಾವಾಪೃಥಿವೀಭ್ಯಾಮೇವ ಸರ್ವೇಷಾಮುತ್ಪತ್ತೇಃ । ಯದ್ವಾ । ಮಿತ್ರ ಇತಿ ಸರ್ವೋಪಕಾರ್ಯಗ್ನಿರುಚ್ಯತೇ ವರುಣ ಇತಿ ತಮೋ-ನಿವಾರಕ ಆದಿತ್ಯಃ । ಉಭಯೋಃ ಪೃಥಿವೀದ್ಯುಸ್ಥಾನತ್ವಾತ್ । ತತಃ ಪೂರ್ವಮಂತ್ರೇ ಮಿತ್ರದೃಷ್ಟಾಂತ-ತ್ವೇನಾಗ್ನಿಃ ಸ್ತುತಃ । ಅತ ಇದಮಧಿಗಮ್ಯತೇ ಅಗ್ನಿರೇವ ಮಿತ್ರ ಇತಿ । ತಥಾನ್ಯತ್ರಾಪಿ । ಅಗ್ನಿಂ ಮಿತ್ರಂ ನ ಕ್ಷಿತಿಷು ಪ್ರಶಂಸ್ಯಂ । ಋ. ೨-೨-೩ । ಮಿತ್ರಂ ನ ಯಂ ಸುಧಿತಂ ಭೃಗವೋ ದಧುಃ । ಋ. ೬-೧೫-೨ । ಇತಿ ಚ । ಪ್ರವಾಚ್ಯಂ ಸ್ತುತ್ಯಂ ತಾದೃಗ್ಯುವಯೋರ್ಜನ್ಮ ಮಹೇ ಮಹತೇ ದಕ್ಷಸೇ ಸರ್ವವಿಷಯಬಲಾಯ ಕ್ಷಿತಯೋ ಮನುಷ್ಯಾ ಯಜಮಾನಾ ಆ ಭೂಷನ್ । ಸರ್ವತೋಽಲಂಕುರ್ವಂತಿ । ಶ್ಲಾಘಂತ ಇತ್ಯರ್ಥಃ । ಜನ್ಮನಃ ಪ್ರವಾಚ್ಯತ್ವಮಾಹ । ಯದೀಂ ಯಸ್ಮಾದೇವ ಕಾರಣಾತ್ । ಅಥವಾ । ಈಮಿತ್ಯನರ್ಥಕಃ ಮಿತಾ-ಕ್ಷರೇಷ್ವನರ್ಥಕಾಃ ಕಮೀಮಿದ್ವಿತೀತ್ಯುಕ್ತತ್ವಾತ್ । ಋತಾಯ ಯಜ್ಞಾಯ ಭರಥಃ ಸಾಮರ್ಥ್ಯಂ । ಯಸ್ಮಾಚ್ಚ ಕಾರಣಾದರ್ವತೇ ಯುಷ್ಮಾನ್ ಪ್ರಾಪ್ತವತೇ ಯಜಮಾನಾಯ ಚ ಭರಥೋಽಭಿಮತಂ ಫಲಂ । ಅಥವಾ । ಉಭಯತ್ರ ಕರ್ಮಣಃ ಸಂಪ್ರದಾನತ್ವಾಚ್ಚತುರ್ಥೀ । ಯಜ್ಞಂ ಯಜಮಾನಂ ಚ ಭರಥ ಇತ್ಯರ್ಥಃ । ಯಸ್ಮಾಚ್ಚ ಹೋತ್ರಯಾ ಸ್ತುತಿರೂಪಯಾ ವಾಚಾ ಶಿಮ್ಯಾ ಹವಿಷ್ಪ್ರದಾನಾದಿಕರ್ಮಣಾ ಚ ಪ್ರ ವೀಥಃ ಪ್ರಕರ್ಷೇಣ ಪ್ರಾಪ್ನುಥಃ । ತಸ್ಮಾತ್ಪ್ರವಾಚ್ಯಂ ಜನ್ಮ ಭೂಷಯಂತೀತ್ಯರ್ಥಃ । ಹೋತ್ರೇತಿ ವಾಙ್ನಾಮ ಹೋತ್ರಾ ಗೀರಿತಿ ತನ್ನಾಮಸು ಪಾಠಾತ್ ॥

ಪ್ರತಿಪದಾರ್ಥ

**ವೃಷಣಾ**—(ಇಷ್ಟಾರ್ಥಗಳನ್ನು) ಸುರಿಸಿಕೊಡುವ ಎಲೈ ಮಿತ್ರಾವರುಣರೇ । **ಯದೀಂ**—ಯಾವಕಾರಣದಿಂದ । **ಅರ್ವತೇ**—(ನಿಮ್ಮನ್ನು) ಪೂಜಿಸುವ ಯಜಮಾನನಿಗಾಗಿ । **ಋತಾಯ**—ಯಜ್ಞಕ್ಕೆ (ಫಲವನ್ನು) । **ಭರಥಃ**—ಭರಿಸಿರುತ್ತೀರೋ । (ಮತ್ತು) **ಯತ್**—ಯಾವ ಕಾರಣದಿಂದ । **ಹೋತ್ರಯಾ**—ಸ್ತುತಿರೂಪವಾದ ವಾಕ್ಕಿನಿಂದಲೂ । **ಶಿಮ್ಯಾ**—(ಹವಿಷ್ಪ್ರದಾನಾದಿ) ಕರ್ಮಗಳಿಂದಲೂ (ಕೂಡಿದ) । **ಅಧ್ವರಂ**—ಯಜ್ಞವನ್ನು । **ಪ್ರವೀಥಃ**—ಸ್ವೀಕರಿಸುತ್ತೀರೋ (ಅದ್ದರಿಂದಲೇ) । **ವಾಂ**—ನಿಮ್ಮಿಬ್ಬರ । **ಪ್ರವಾಚ್ಯಂ**—ಶ್ಲಾಘ್ಯವಾದುದೂ । **ರೋದಸ್ಯೋಃ**—ದ್ಯಾವಾಪೃಥಿವಿಗಳಿಂದ ಉಂಟಾದುದೂ ಆದ । **ಜನ್ಮ**—ಜನನವನ್ನು । **ಮಹೇ**—ಮಹತ್ತಾದ । **ದಕ್ಷಸೇ**—(ಸಕಲವಿಧವಾದ) ಶಕ್ತಿಗಾಗಿ । **ಕ್ಷಿತಯಃ**—ಮಾನವರಾದ ಯಜಮಾನರು । **ಆ ಭೂಷನ್**-ಅಲಂಕಾರ ಪೂರ್ವಕವಾದ ವಾಕ್ಕುಗಳಿಂದ ಶ್ಲಾಘಿಸುತ್ತಾರೆ.

॥ ಭಾವಾರ್ಥ ॥

ಇಷ್ಟಾರ್ಥಪ್ರದರಾದ ಎಲೈ ಮಿತ್ರಾವರುಣರೇ, ನೀವು ನಿಮ್ಮನ್ನು ಪೂಜಿಸುವ ಯಜಮಾನನು ನೆರವೇರಿಸುವ ಯಜ್ಞಕ್ಕೆ ಪ್ರತಿಯಾಗಿ ಅವನಿಗೆ ಅದರ ಫಲವನ್ನು ಭರಿಸಿದ್ದೀರಿ. ಮತ್ತು ಸ್ತುತಿವಾಕ್ಯಗಳಿಂದಲೂ ಹವಿಷ್ಪ್ರದಾನಾದಿ ಕರ್ಮಗಳಿಂದಲೂ ಕೂಡಿದ ಯಜ್ಞವನ್ನು ಸ್ವೀಕರಿಸುತ್ತೀರಿ. ಆದ್ದರಿಂದ ನಿಮ್ಮಿಬ್ಬರ ಶ್ಲಾಘ್ಯವಾದುದೂ, ದ್ಯಾವಾಪೃಥಿವಿಗಳಿಂದ ಉಂಟಾದುದೂ ಆದ ಜನನವನ್ನು ಮಹತ್ತಾದುದೂ, ಸಕಲವಿಧವಾದುದೂ ಆದ ಶಕ್ತಿಸಂಪಾದನೆಗಾಗಿ ಮಾನವರಾದ ಯಜಮಾನರು ತಮ್ಮ ಅಲಂಕಾರಪೂರ್ವಕವಾದ ವಾಕ್ಕುಗಳಿಂದ ಶ್ಲಾಘಿಸುತ್ತಾರೆ.

## English Translation

For the sake (of obtaining) great vigour, showerers (of benefits), men glorify your birth from heaven and earth, which is to be extolled, inasmuch as you bestow (his desires) upon the worshipper (as the reward) of his sacrifice, and accept the rite (that is solemnized) with praise and oblation.

ವಿಶೇಷವಿಷಯಗಳು

**ರೋದಸ್ಯೋಃ ಜನ್ಮ ಕ್ಷಿತಯಃ ಆ ಭೂಷನ್**—ದ್ಯಾವಾಪೃಥಿವಿಗಳಿಂದ ಉತ್ಪನ್ನವಾದ ನಿಮ್ಮಿಬ್ಬರ ಜನ್ಮವನ್ನು ಮಾನವರಾದ ಯಜಮಾನರು ಶ್ಲಾಘಿಸುತ್ತಾರೆ ಎಂದಿರುವಾಗ, ಯಾರ ಜನ್ಮವನ್ನು ಎಂಬ ಆಕಾಂಕ್ಷೆಗೆ ಮೊದಲು **ಮಿತ್ರಾವರುಣರ ಜನ್ಮವೆಂದು ವೃಷಣಾ** ಎಂಬ ಪದದ ಅರ್ಥವನ್ನು ಹೇಳುವಾಗ ತಿಳಿಸಿ ಅನಂತರ, **ಯದ್ವಾ ಮಿತ್ರ ಇತಿ ಸರ್ವೋಪಕಾರೀ ಅಗ್ನಿರುಚ್ಯತೇ, ವರುಣ ಇತಿ ತಮೋನಿವಾರಕ ಆದಿತ್ಯಃ ಉಭಯೋಃ ಪೃಥಿವೀದ್ಯು ಸ್ಥಾನತ್ವಾತ್** । ಅಥವಾ ಸರ್ವರಿಗೂ ಉಪಕಾರಕನಾದುದರಿಂದ **ಅಗ್ನಿಯನ್ನೇ ಮಿತ್ರನೆಂದು**ದ್ದೇಶಿಸಬಹುದೆಂದೂ, ತಮಸ್ಸನ್ನು ನಾಶಮಾಡುವುದರಿಂದ **ಆದಿತ್ಯನನ್ನು ವರುಣನೆಂದು** ಸಂಬೋಧಿಸಬಹುದೆಂದೂ ಶ್ರುತಿವಾಕ್ಯಗಳ ಆಧಾರವನ್ನು ಕೊಟ್ಟಿದ್ದಾರೆ.

**ತಂ ದೇವಾ ಬುಧ್ನೇ ರಜಸಃ ಸುದಂಸಸಂ ದಿವಸ್ಪೃಥಿವ್ಯೋರರತಿಂ ನ್ಯೇರಿರೇ ।**
**ರಥಮಿವ ವೇದ್ಯಂ ಶುಕ್ರಶೋಚಿಷಮಗ್ನಿಂ ಮಿತ್ರಂ ನ ಕ್ಷಿತಿಷು ಪ್ರಶಂಸ್ಯಂ ॥**
(ಋ. ಸಂ. ೨-೨-೩)

**ಮಿತ್ರಂ ನ ಯಂ ಸುಧಿತಂ ಭೃಗವೋ ದಧುರ್ವನಸ್ಪತಾವೀಡ್ಯಮೂರ್ಧ್ವಶೋಚಿಷಂ ।**
**ಸ ತ್ವಂ ಸುಪ್ರೀತೋ ವೀತಹವ್ಯೇ ಅದ್ಭುತ ಪ್ರಶಸ್ತಿಭಿರ್ಮಹಯಸೇ ದಿವೇದಿವೇ ॥**
(ಋ. ಸಂ. ೬-೧೫-೨)

ಈ ಋಕ್ಕುಗಳನ್ನು ಉದಹರಿಸಿ ಇವುಗಳಲ್ಲಿ **ಅಗ್ನಿಯನ್ನು ಮಿತ್ರನೆಂದು** ವರ್ಣಿಸಿರುವಂತೆಯೇ ಪ್ರಕೃತವಾದ ಋಕ್ಕಿನಲ್ಲಿಯೂ ಅದೇ ರೀತಿ ಅರ್ಥಮಾಡಬಹುದೆಂದು ತಿಳಿಸಿದ್ದಾರೆ. ಇದರಂತೆಯೇ,

**ಸ ಜಿಹ್ವಯಾ ಚತುರನೀಕ ಋಂಜತೇ ಚಾರು ವಸಾನೋ ವರುಣೋ ಯತನ್ನರಿಂ ।**
**ನ ತಸ್ಯ ವಿದ್ಮ ಪುರುಷತ್ವತಾ ವಯಂ ಯತೋ ಭಗಃ ಸವಿತಾ ದಾತಿ ವಾರ್ಯಂ ॥**
(ಋ. ಸಂ. ೫-೪೮-೫)

ಇತ್ಯಾದಿ ಋಕ್ಕುಗಳಲ್ಲಿ ಅಗ್ನಿಸ್ತುತಿಯನ್ನು ಮಾಡುವಾಗ **ಅಗ್ನಿಗೂ ವರುಣ**ನೆಂಬ ವಿಶೇಷಣವಿದ್ದು **ವರುಣಃ ತಮೋ ವಾರಕಃ ಸನ್** ತಮೋವಾರಕನೆಂದರ್ಥವು ಎಂದಿರುವುದರಿಂದಲೂ, ಪ್ರಕೃತವಾದ ಋಕ್ಕಿನಲ್ಲಿ **ವೃಷಣಾ** ಎಂಬುದಕ್ಕೆ **ಮಿತ್ರ, ವರುಣ** ಎಂದಾದರೂ ಅರ್ಥಮಾಡಬಹುದು ಅಥವಾ ಮಿತ್ರರೂಪನಾದ ಅಗ್ನಿ ಮತ್ತು ವರುಣರೂಪನಾದ ಆದಿತ್ಯ ಎಂದಾದರೂ ಅರ್ಥಮಾಡಬಹುದುದೆಂದು ಸಾಯಣರು ತೋರಿಸಿದ್ದಾರೆ.

**ಅರ್ವತೇ—ಯುಷ್ಮಾನ್ ಪ್ರಾಪ್ತವತೇ ಯಜಮಾನಾಯ** । ನಿಮ್ಮನ್ನು ಸಮೀಪಿಸತಕ್ಕ ಯಜಮಾನನಿಗೆ ಎಂದರ್ಥಮಾಡಿದೆ. **ಅರ್ವನ್** ಶಬ್ದವು **ಗತಿವಿಶೇಷವನ್ನು** ಸೂಚಿಸುವುದರಿಂದ ಸಾಧಾರಣವಾಗಿ ಅಶ್ವಪರ್ಯಾಯವಾಗಿ ಅದರ ಪ್ರಯೋಗವಿರುವುದನ್ನು ಹಿಂದೆ ವಿಶದವಾಗಿ ತಿಳಿಸಿದೆ. ಭಕ್ತಿಯಿಂದ ದೇವತೆಗಳನ್ನು ವೇಗವಾಗಿ ಸಮೀಪಿಸುವುದರಿಂದ ಹವಿಸ್ಸಿಗೂ, **ಯಜಮಾನನಿಗೂ** ಪರ್ಯಾಯವಾಗಿಯೂ ಈ ಪದವನ್ನು ಪ್ರಯೋಗಿಸಿದೆ.

**ಕ್ಷಿತಯಃ—ಮನುಷ್ಯಾಃ** (ಯಜಮಾನಾಃ). ನರಃ ಇತ್ಯಾದಿ ೨೫ ಮನುಷ್ಯನಾಮಗಳಲ್ಲಿ ಪಠಿತವಾಗಿರುವುದರಿಂದ ಮಾನವರೆಂದರ್ಥ. (ನಿ. ೩-೭).

**ಅಗ್ನಿರ್ನೇತಾ ಭಗ ಇವ ಕ್ಷಿತೀನಾಂ ದೈವೀನಾಂ ದೇವ ಋತುಪಾ ಋತಾವಾ ।**
**ಸ ವೃತ್ರಹಾ ಸನಯೋ ವಿಶ್ವವೇದಾಃ ಪರ್ಷದ್ವಿಶ್ವಾತಿ ದುರಿತಾ ಗೃಣಂತಂ ॥**
(ಋ. ಸಂ. ೩-೨೦-೪)

ಇತ್ಯಾದಿ ಕಡೆಗಳಲ್ಲಿ ಮಾನವರಿಗೂ ದೇವಸಂಬಂಧಿಗಳಾದ ಪ್ರಜೆಗಳಿಗೂ ವ್ಯತ್ಯಾಸವನ್ನು ತೋರಿಸುವಾಗ ಕ್ಷಿತಿಶಬ್ದದಿಂದ ಪೃಥ್ವಿಯ ಪ್ರಜೆಗಳಾದ ಮಾನವರೆಂದು ಸೂಚಿಸಿದೆ.

**ಶಿಮ್ಯಾ—ಶಿಮೀತಿ ಕರ್ಮನಾಮ । ಶಮಯತೇರ್ವಾ ಶಕ್ನೋತೇರ್ವಾ ।** (ನಿ. ೫-೧೨) ಪ್ರಯಾಸಪಡು ಅಥವಾ ಶ್ರಮಪಡು ಎಂಬರ್ಥವನ್ನು ಕೊಡುವ **ಶಮ್** ಧಾತುವಿನಿಂದಾಗಲಿ ಅಥವಾ **ಶಕ್ಯ**ವೆಂಬರ್ಥವನ್ನು ಕೊಡುವ **ಶಕ್** ಧಾತುವಿನಿಂದಾಗಲಿ ನಿಷ್ಪನ್ನವಾಗಿ ಕರ್ಮವೆಂದಾಗುತ್ತದೆ. ಇದು ಶಕ್ತಿಯನ್ನು ಪ್ರಕಾಶಗೊಳಿಸುವ ವೃತ್ರಹನನಾದಿ ಕರ್ಮಗಳಾಗಬಹುದು. ಅಥವಾ ವೃಷ್ಟಿವರ್ಷಣರೂಪವಾದ ಕರ್ಮಗಳಾಗಬಹುದು. ಪ್ರಕೃತವಾದ ಋಕ್ಕಿನಲ್ಲಿ **ಹವಿಷ್ಪ್ರದಾನಾದಿ** ಕರ್ಮಗಳಿಂದ ಎಂದರ್ಥ.

**ಹೋತ್ರಯಾ—ಹೋತ್ರಾ,** ಗೀಃ ಇತ್ಯಾದಿ **ವಾಙ್**ನಾಮಗಳಲ್ಲಿ ಪಠಿತವಾಗಿದೆ. (ನಿ. ೧-೧೧) ಸ್ತುತಿರೂಪವಾದ ವಾಕ್ಕೆಂದರ್ಥ.

॥ ವ್ಯಾಕರಣಪ್ರಕ್ರಿಯಾ ॥

**ಭೂಷನ್**—ಭೂಷ ಅಲಂಕಾರೇ. ಧಾತು, **ಛಂದಸಿ ಲುಙ್**—(ಪಾ. ಸೂ. ೩-೪-೬) ಎಂಬುದರಿಂದ ವರ್ತಮಾನಾರ್ಥದಲ್ಲಿ ಲಙ್. ಪ್ರಥಮಪುರುಷ ಬಹುವಚನಾಂತರೂಪ. ಛಾಂದಸವಾಗಿ ಅಡಾಗಮ ಬರುವುದಿಲ್ಲ. ತಿಙಂತನಿಘಾತಸ್ವರ ಬರುತ್ತದೆ.

ಕ್ಷಿತಯಃ-ಕ್ಷಿ ನಿವಾಸಗತ್ಯೋಃ ಧಾತು **ಕ್ತಿಚ್ ಕ್ತೌ ಚ ಸಂಜ್ಞಾಯಾಮ್** ಎಂಬುದರಿಂದ ಕ್ತಿಚ್ ಪ್ರತ್ಯಯ. ಅಂತೋದಾತ್ತಸ್ವರ ಬರುತ್ತದೆ. ಪ್ರಥಮಾ ಬಹುವಚನಾಂತರೂಪ.

**ಪ್ರವಾಚ್ಯಮ್**—ವಚ ಪರಿಭಾಷಣೇ. ಧಾತು. **ಋಹಲೋರ್ಣ್ಯತ್** (ಪಾ. ಸೂ ೩-೧-೧೨೪) ಎಂಬುದರಿಂದ ಣ್ಯತ್ ಪ್ರತ್ಯಯ. **ಅತ ಉಪಧಾಯಾಃ** (ಪಾ. ಸೂ. ೭-೨-೧೧೬) ಎಂಬುದರಿಂದ ಉಪಧಾವೃದ್ಧಿ. **ಯಜಯಾಚರುಚಪ್ರವಚರ್ಚಶ್ಚ**- (ಪಾ. ಸೂ. ೭-೩-೬೬) ಎಂಬುದರಿಂದ ಕುತ್ವ ಬರುವುದಿಲ್ಲ. ತಿತ್‌ಸ್ವರಿತವು ಪ್ರಾಪ್ತವಾದರೆ ಪ್ರತ್ಯಯದಿಂದ ಆದ್ಯುದಾತ್ತಸ್ವರ ಬರುತ್ತದೆ ಅಥವಾ ಣಿಜಂತದ ಮೇಲೆ. **ಅಚೋ ಯತ್** (ಪಾ. ಸೂ ೩-೧-೯೭) ಎಂಬುದರಿಂದ ಯತ್ ಪ್ರತ್ಯಯ. **ಣೇರನಿಟಿ** (ಪಾ. ಸೂ. ೬-೪-೫೧) ಎಂಬುದರಿಂದ ಣಿಚಿಗೆ ಲೋಪ. **ಯತೋಽನಾವಃ** (ಪಾ. ಸೂ. ೬-೧-೨೧೩) ಎಂಬುದರಿಂದ ಆದ್ಯುದಾತ್ತ ಸ್ವರ ಬರುತ್ತದೆ. ಪ್ರಾದಿಸಮಾಸದಲ್ಲಿ ಕೃದುತ್ತರ ಪದ ಪ್ರಕೃತಿಸ್ವರ ಬರುತ್ತದೆ,

**ದಕ್ಷಸೇ**—ದಕ್ಷ ವೃದ್ಧೌ ಶೀಘ್ರಾರ್ಥೇ ಚ. ಧಾತು. ಭ್ವಾದಿ **ಸರ್ವಧಾತುಭ್ಯ ಅಸುನ್** ಎಂಬುದರಿಂದ ಅಸುನ್ ಪ್ರತ್ಯಯ- ನಿತ್ತ್ವಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಚತುರ್ಥೀಏಕವಚನಾಂತರೂಪ.

**ಮಹೇ**—**ಸಾವೇಕಾಚಸ್ತೃತೀಯಾದಿಃ** (ಪಾ. ಸೂ ೬-೧-೧೬೮) ಎಂಬುದರಿಂದ ಚತುರ್ಥೀವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಭರಥಃ**—ಭೃಞ್ ಭರಣೇ. ಧಾತು. ಭ್ವಾದಿ. ಲಟ್ ಪ್ರಥಮಪುರುಷ ದ್ವಿವಚನಾಂತರೂಪ. **ತಾಸ್ಯನುದಾತ್ತೇತ್**—(ಪಾ. ಸೂ. ೬-೧-೧೮೬) ಸೂತ್ರದಿಂದ ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ.

**ಅರ್ವತೇ**—ಋ ಗತೌ ಧಾತು ವನಿಪ್ ಪ್ರತ್ಯಯ. ಚತುರ್ಥೀಏಕವಚನಪರವಾದಾಗ **ಅರ್ವಣಸ್ತ್ರಸಾವನಞಃ** (ಪಾ. ಸೂ. ೬-೪-೧೨೭) ಎಂಬುದರಿಂದ ತೃ ಅಂತಾದೇಶ.

**ಹೋತ್ರಯಾ**—ಹು ದಾನಾದನಯೋಃ ಧಾತು. **ಹು ಯಾಮಾಶ್ರುಭಸಿಭ್ಯಸ್ತ್ರನ್** (ಉ. ಸೂ. ೪-೬೦೭) ಎಂಬುದರಿಂದ ತ್ರನ್ ಪ್ರತ್ಯಯ. **ಸಾರ್ವಧಾತುಕಾರ್ಧಧಾತುಕಯೋಃ** ಎಂಬುದರಿಂದ ಗುಣ. **ಞ್ನಿತ್ಯಾದಿರ್ನಿತ್ಯಮ್** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ತೃತೀಯಾ ಏಕವಚನಾಂತರೂಪ.

**ವೀಥಃ**—ವೀ ಗತ್ಯಾದಿಷು. ಧಾತು. ಅದಾದಿ. ಲಟ್ ಪ್ರಥಮಪುರುಷ ದ್ವಿವಚನಾಂತರೂಪ. ಅತಿಜಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ-

**ಅಧ್ವರಮ್**—ನ ವಿದ್ಯತೇ ಧ್ವರಃ (ಹಿಂಸಾ) ಯತ್ರ. ಅಧ್ವರಃ **ನಞ್ ಸುಭ್ಯಾಮ್** (ಪಾ. ಸೂ. ೬-೨-೧೭೨) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.



ಸಂಹಿತಾಪಾಠಃ

ಪ್ರ ಸಾ ಕ್ಷಿತಿರಸುರ ಯಾ ಮಹಿ ಪ್ರಿಯ ಋತಾವಾನಾವೃತಮಾ ಘೋಷಥೋ ಬೃಹತ್ ।

ಯುವಂ ದಿವೋ ಬೃಹತೋ ದಕ್ಷಮಾಭುವಂ ಗಾಂ ನ ಧುರ್ಯುಪ

ಯುಂಜಾಥೇ ಅಪಃ ॥ ೪ ॥

। ಪದಪಾಠಃ ।

ಪ್ರ । ಸಾ । ಕ್ಷಿತಿಃ । ಅಸುರಾ । ಯಾ । ಮಹಿ । ಪ್ರಿಯಾ । ಋತಾ್ಽವಾನೌ । ಋತಂ । ಆ । ಘೋಷಥಃ । ಬೃಹತ್ ।

ಯುವಂ । ದಿವಃ । ಬೃಹತಃ । ದಕ್ಷಂ । ಆ್ಽಭುವಂ । ಗಾಂ । ನ । ಧುರಿ । ಉಪ । ಯುಂಜಾಥೇ ಇತಿ । ಅಪಃ ॥ ೪ ॥

ಸಾಯಣಭಾಷ್ಯಂ

ಹೇ ಅಸುರಾಸುರೌ ಬಲವಂತೌ ಮಿತ್ರಾವರುಣೌ ಯುವಯೋರ್ಯಾ ಕ್ಷಿತಿರ್ದೇವಯಜನರೂಪಾ ಮಹಿ ಮಹದತ್ಯಧಿಕಂ ಪ್ರಿಯಾ ಪ್ರಿಯತರಾ ಪ್ರೀಣಯಿತ್ರೀ ವಾ ಸಾ ಕ್ಷಿತಿಃ ಪ್ರ। ಪ್ರಕರ್ಷೇಣ ಸಂಪಾದಿತಾ। ಉಪಸರ್ಗಶ್ರುತೇರ್ಯೋಗ್ಯಕ್ರಿಯಾಧ್ಯಾಹಾರಃ ॥ ತಾಮಾಸೀದತಮಿತಿ ಶೇಷಃ । ಯಾಗಭೂಮಿರ್ದೇವಾನಾಂ ಪ್ರಿಯೇತಿ ಪ್ರಸಿದ್ಧಂ । ಆಸಾದ್ಯ ಚ ಹೇ ಋತಾವಾನಾವೃತವಂತೌ ಯುವಾಂ ಬೃಹತ್ಪ್ರವೃದ್ಧಮಸ್ಮ-ದೀಯಂ ಯಜ್ಞಮಾ ಘೋಷಥಃ । ಅನ್ಯೈಕಲ್ಯೇನ ಸಂಪಾದಿತ ಇತಿ ಸ್ತುತಮಿತ್ಯರ್ಥಃ । ಯತೋ ಯುವಂ ಯುವಾಂ ಬೃಹತೋ ಮಹತೋ ದಿವೋ ದ್ಯುಲೋಕಸ್ಯ ಧುರಿ ದಕ್ಷಂ ತರ್ಪಣವಹನೇ ಸಮರ್ಥಂ । ಅಥವಾ ಬೃಹತೋ ದಿವೋ ಮಹತೋ ದ್ಯುಲೋಕಸ್ಥದೇವಾನ್ ದಕ್ಷಂ ಪ್ರೀಣಯಿತುಮಿತಿ ಶೇಷಃ । ಯದ್ವಾ । ಕರ್ಮಣಿ ಷಷ್ಠೀ । ದಿವೋ ದ್ಯೋತನಾತ್ಮಕಂ ಬೃಹತಃ ಪ್ರಭೂತಂ ದಕ್ಷಮಭಿಮತಸಾಧನ-ಸಮರ್ಥಂ । ಆಭುವಂ ಸರ್ವತೋ ಭವನಶೀಲಮಪಃ ಕರ್ಮ ಸೋಮಯಾಗರೂಪಮುಪ ಯುಂಜಾಥೇ ಸೇವೇಥೇ ತತ್ರತ್ಯಂ ಹವಿಃ ಸ್ವೀಕುರುಥ ಇತ್ಯರ್ಥಃ । ಉಪಯೋಗೇ ದೃಷ್ಟಾಂತಃ । ಧುರಿ ಶರೀರಬಲಸ್ಯ ನಿರ್ವಾಹೇ ತದರ್ಥಂ ಗಾಂ ನ ಧೇನುಮಿವ । ತಾಂ ಯಥೋಪಯುಂಜತೇ ತದ್ವತ್ । ಯದ್ವಾ । ವಿಕಾರೇ ಪ್ರಕೃತಿಶಬ್ದಃ । ಕ್ಷೀರಾದಿಕಮಿವ । ತಸ್ಮಾದೃತಮ ಘೋಷಥಃ ॥

ಪ್ರತಿಪದಾರ್ಥ

ಅಸುರಾ—ಶಕ್ತಿವಂತರಾದ ಮಿತ್ರಾವರುಣರೇ । ಯಾ—ಯಾವ ಯಜ್ಞಭೂಮಿಯು । ಮಹಿ—ಮಹತ್ತ್ವಾಗಿಯೂ । ಪ್ರಿಯಾ—ಪ್ರಿಯಕರವಾಗಿಯೂ । (ಇದೆಯೋ) । ಸಾ—ಆ ದೇವಯಜನರೂಪವಾದ ಭೂಮಿಯು । ಪ್ರ—ಅತ್ಯುತ್ಕೃಷ್ಟವಾಗಿ ಸಂಪಾದಿತವಾಗಿದೆ । ಋತಾವಾನೌ—ಯಜ್ಞವನ್ನು ಸ್ವೀಕರಿಸುವ ನೀವು । ಬೃಹತ್—ವಿಸ್ತಾರ

ವಾಗಿ ನೆರವೇರಿಸಿದ । ಋತಂ—(ನಮ್ಮ) ಯಜ್ಞವನ್ನು । ಆ ಘೋಷಥಃ—(ವೈಭವದಿಂದ ನೆರವೇರಿತು ಎಂಬುದಾಗಿ) ಪ್ರಕಟಪಡಿಸಿರಿ । ಯುವಂ—ನೀವಿಬ್ಬರೂ ಸಹ । ಬೃಹತಃ—ವಿಸ್ತಾರವಾದ । ದಿವಃ—ದ್ಯುಲೋಕದ ಪ್ರದೇಶದೊಂದಿಗೆ । ದಕ್ಷಂ—(ದೇವತೆಗಳನ್ನು ತೃಪ್ತಿಪಡಿಸಲು) ಸಮರ್ಥವಾದುದೂ । ಅಭುವಂ—ಸಕಲಪ್ರದೇಶದಲ್ಲಿಯೂ ವ್ಯಾಪಿಸಿರುವುದೂ ಆದ । ಅಪಃ—(ಸೋಮಯಾಗ ರೂಪವಾದ) ಕರ್ಮವನ್ನು । [ ಅಥವಾ ದಿವಃ—ಪ್ರಕಾಶವಾನವಾದುದೂ । ಬೃಹತಃ—ಅತ್ಯಧಿಕವಾಗಿ । ದಕ್ಷಂ (ಅಭಿಮತಾರ್ಥವನ್ನು ಒದಗಿಸಲು) ಸಮರ್ಥವಾದುದೂ । ಅಭುವಂ ಅಪಃ—ಸರ್ವವ್ಯಾಪಿಯಾದ ಯಜ್ಞಕರ್ಮವನ್ನು ] । ಧುರಿ—ಹೊರುವ ಭಾರದೊಡನೆ । ಗಾಂ ನ—ಗೋವನ್ನು ಸೇರಿಸುವಂತೆ । (ಅಥವಾ) ಕ್ಷೀರಾದಿಗಳನ್ನು ಗೋವಿನೊಡನೆ ಯೋಜಿಸುವಂತೆ । ಉಪ ಯುಂಜಾಥೇ—ಒಟ್ಟಿಗೆ ಸೇರಿಸುತ್ತೀರಿ.

ಭಾವಾರ್ಥ

ಶಕ್ತಿವಂತರಾದ ಮಿತ್ರಾವರುಣರೇ, ಮಹತ್ತಾಗಿಯೂ ಪ್ರಿಯಕರವಾಗಿಯೂ ಇರುವಯಜ್ಞಪ್ರದೇಶವು ಅತ್ಯುತ್ಕೃಷ್ಟವಾಗಿ ಸಂಪಾದಿತವಾಗಿದೆ. ಯಜ್ಞವನ್ನು ಸ್ವಿಕರಿಸುವ ನೀವು ವಿಸ್ತಾರವಾಗಿ ನೆರವೇರಿಸಿದ ನಮ್ಮ ಯಜ್ಞವನ್ನು ಯಜ್ಞವು ವೈಭವದಿಂದ ನೆರವೇರಿತು ಎಂದು ಪ್ರಕಟಪಡಿಸಿ ಹೇಳಿರಿ. ನೀವಿಬ್ಬರೂ ಸಹ ಅಭಿಮತಾರ್ಥವನ್ನು ಒದಗಿಸಲು ಸಮರ್ಥವಾದುದೂ ಸಕಲಪ್ರದೇಶದಲ್ಲಿಯೂ ವ್ಯಾಪಿಸಿರುವುದೂ ಆದ ಯಜ್ಞಕರ್ಮವನ್ನು ವಿಸ್ತಾರವಾದ ದ್ಯುಲೋಕದೊಡನೆ ದೇವತೆಗಳ ತೃಪ್ತ್ಯರ್ಥವಾಗಿ ಗೋವಿನೊಡನೆ ಕ್ಷೀರವನ್ನು ಸೇರಿಸುವಂತೆ ಒಟ್ಟಿಗೆ ಸೇರಿಸುತ್ತೀರಿ.

## English Translation

Powerful divinities, most acceptable to you both is that spot, (where you are worshipped) : accepters of sacrifice, proclaim the great ceremoney (as duly performed) ; for you two connect the efficacious and comprehensive rite with the vast heaven, like a cow with a burthen.

ವಿಶೇಷವಿಷಯಗಳು

ಅಸುರಾ—ಅಸುರೌ ಬಲವಂತೌ ಮಿತ್ರಾವರುಣೌ । ಎಂದು ಅಸುರ ಶಬ್ದಕ್ಕೆ ಶಕ್ತಿಯುತರಾದವರು ಎಂದರ್ಥವಾಗಿದೆ. ಈ ಶಕ್ತಿಯನ್ನು ಪ್ರಕಾಶಪಡಿಸತಕ್ಕ ಸಂದರ್ಭಗಳಲ್ಲಿ ಆಯಾ ಸನ್ನಿವೇಶಕ್ಕನುಗುಣವಾದ ಅರ್ಥವನ್ನು ಕೊಡುವಂತೆ ಈ ಶಬ್ದದ ಪ್ರಯೋಗವಿದೆ. ಉದಾಹರಣೆಗೆ—

ಅರ್ಚಾ ದಿವೇ ಬೃಹತೇ ಶೂಷ್ಯಂ೧ ವಚಃ ಸ್ವಕ್ಷತ್ರಂ ಯಸ್ಯ ಧೃಷತೋ ಧೃಷನ್ಮನಃ ।
ಬೃಹಚ್ಛ್ರವಾ ಅಸುರೋ ಬರ್ಹಣಾ ಕೃತಃ ಪುರೋ ಹರಿಭ್ಯಾಂ ವೃಷಭೋ ರಥೋ ಹಿ ಷಃ ।
(ಋ. ಸಂ. ೧-೫೪-೩)

ಎಂಬ ಋಕ್ಕಿನಲ್ಲಿ ಅಸುರಶಬ್ದವು ಇಂದ್ರನಿಗೆ ವಿಶೇಷಣವಾಗಿದೆ. ಇಲ್ಲಿ ಅಸುರಃ ಶತ್ರೂಣಾಂ ನಿರಸಿತಾ । ಯದ್ವಾ । ಅಸುಃ ಪ್ರಾಣೋ ಬಲಂ ವಾ ತದ್ವಾನ್ । ರೋ ಮತ್ವರ್ಥೀಯಃ ತಾನ್ ರಾತಿ ದದಾತೀತ್ಯರ್ಥಃ ।

ಶತ್ರುಗಳನ್ನು ದೂಡುವವನು ಎಂದರ್ಥ. ಅಥವಾ **ಅಸು** ಶಬ್ದಕ್ಕೆ ಪ್ರಾಣ, ಬಲ ಎಂಬರ್ಥಗಳಿರುವುದರಿಂದ ಪ್ರಾಣವುಳ್ಳವನು ಬಲವುಳ್ಳವನು ಎಂದೂ ಅರ್ಥ. ಅಥವಾ **ಅಸವಃ** ಎಂದರೆ ಉದಕಗಳು. ಅವುಗಳನ್ನು ಕೊಡುವವನಾದುದರಿಂದ ಅಸುರ ಎಂದು ಇಂದ್ರನಿಗೆ ವಿಶೇಷಣವಾಗಿದೆ. ಇಂದ್ರನಿಗೆ ಈ ವಿಧವಾದ ನಾನಾಶಕ್ತಿಗಳು ಇರುವುದರಿಂದ ಈ ಎಲ್ಲಾ ಅರ್ಥಗಳಲ್ಲಿಯೂ ಈ ಶಬ್ದವು ಇವನಿಗೆ ವಿಶೇಷಣವಾಗಬಹುದು.

**ಪ್ರ ವೇಧಸೇ ಕವಯೇ ವೇದ್ಯಾಯ ಗಿರಂ ಭರೇ ಯಶಸೇ ಪೂರ್ವ್ಯಾಯ ।**
**ಘೃತಪ್ರಸತ್ತೋ ಅಸುರಃ ಸುಶೇವೋ ರಾಯೋ ಧರ್ತಾ ಧರುಣೋ ವಸ್ವೋ ಅಗ್ನಿಃ ।**

(ಋ. ಸಂ. ೫-೧೫-೧)

**ಅಹಾ ಯದಿಂದ್ರ ಸುದಿನಾ ವ್ಯುಚ್ಛಾನ್ದಧೋ ಯತ್ಕೇತುಮುಪಮಂ ಸಮತ್ಸು ।**
**ನ್ಯ೧ಗ್ನಿಃ ಸೀದದಸುರೋ ನ ಹೋತಾ ಹುವಾನೋ ಅತ್ರ ಸುಭಗಾಯ ದೇವಾನ್ ॥**

(ಋ, ಸಂ. ೭-೩೦-೩)

ಇತ್ಯಾದಿ ಋಕ್ಕುಗಳಲ್ಲಿ **ಬಲವಾನ್** ಎಂಬರ್ಥದಲ್ಲಿ ಅಗ್ನಿಗೆ ವಿಶೇಷಣವಾಗಿ ಉಪಯೋಗಿಸಲ್ಪಟ್ಟಿದೆ.

ಋ. ಸಂ. ೭-೫೬-೨೪ ಇತ್ಯಾದಿ ಋಕ್ಕುಗಳಲ್ಲಿ **ಪ್ರಜ್ಞಾವಾನ್** ಎಂದೂ, ೧-೧೨೬-೨ ಇತ್ಯಾದಿಗಳಲ್ಲಿ **ದಾನಶೀಲ**ನೆಂದೂ, ೩-೫೬-೮ ಇತ್ಯಾದಿಗಳಲ್ಲಿ **ಕಾಲಾತ್ಮಾ ಸಂವತ್ಸರಃ** ಎಂದು ಕಾಲಪರ್ಯಾಯವಾಗಿಯೂ, ೮-೨೦-೧೭ ಇತ್ಯಾದಿಗಳಲ್ಲಿ **ಮೇಘ** ಪರ್ಯಾಯವಾಗಿಯೂ. ೧೦-೮೨-೫ ಇವೇ ಮುಂತಾದ ಋಕ್ಕುಗಳಲ್ಲಿ **ದೈತ್ಯ** ಪರ್ಯಾಯವಾಗಿಯೂ ಈ ಪದದ ಪ್ರಯೋಗವಿದೆ.

**ವಿ ಸುಪರ್ಣೋ ಅಂತರಿಕ್ಷಾಣ್ಯಖ್ಯದ್ಗಭೀರವೇಪಾ ಅಸುರಃ ಸುನೀಥಃ ।**
**ಕ್ವೇ೩ದಾನೀಂ ಸೂರ್ಯಃ ಕಶ್ಚಿಕೇತ ಕತಮಾಂ ದ್ಯಾಂ ರಶ್ಮಿರಸ್ಯಾ ತತಾನ ॥**

(ಋ. ಸಂ. ೧-೩೫-೭)

ಎಂಬಲ್ಲಿ **ಅಸುರಃ ಸರ್ವೇಷಾಂ ಪ್ರಾಣದಃ** । ಸಕಲರಿಗೂ ಪ್ರಾಣದಾತನು ಎಂದು ಸೂರ್ಯನಿಗೆ ವಿಶೇಷಣವಾಗಿದೆ.

**ಅವ ತೇ ಹೇಳೋ ವರುಣ ನಮೋಭಿರವ ಯಜ್ಞೇಭಿರೀಮಹೇ ಹವಿರ್ಭಿಃ ।**
**ಕ್ಷಯನ್ನಸ್ಮಭ್ಯಮಸುರ ಪ್ರಚೇತಾ ರಾಜನ್ನೇನಾಂಸಿ ಶಿಶ್ರಥಃ ಕೃತಾನಿ ॥**

(ಋ. ಸಂ ೧-೨೪-೧೪)

ಎಂಬ ಋಕ್ಕಿನಲ್ಲಿ **ಅನಿಷ್ಟಕ್ಷೇಪಣಶೀಲಃ** । ಅನಿಷ್ಟವನ್ನು ನಾಶಮಾಡುವ ಶಕ್ತಿಯಿರುವುದರಿಂದ **ವರುಣನಿಗೆ ಅಸುರನೆಂಬ** ವಿಶೇಷಣವಿರುವಂತೆ, ಪ್ರಕೃತವಾದ ಋಕ್ಕಿನಲ್ಲಿಯೂ ಬಲವಂತೌ **ಮಿತ್ರಾವರುಣೌ** ನಾನಾ ವಿಧವಾದ ಶಕ್ತಿಯುಳ್ಳ **ಮಿತ್ರಾವರುಣರೇ** ಎಂದು ಸಂಬೋಧಿಸಿದೆ.

**ಋತಾವಾನಾ — ಋತವಂತೌ** । ಋತವುಳ್ಳವರು ಎಂದರೆ. **ಋತ** ರೂಪವಾದ ನಿಯಮವುಳ್ಳವರೆಂದಾಗಲಿ ಯಜ್ಞವುಳ್ಳವರೆಂದಾಗಲಿ ಅರ್ಥವಾಗುತ್ತದೆ. **ಮಿತ್ರಾವರುಣರಿಗೂ ಋತಕ್ಕೂ** ಇರತಕ್ಕ ಸಂಬಂಧವನ್ನು ಹಿಂದೆ ವಿಸ್ತಾರವಾಗಿ ತಿಳಿಸಿದೆ.

### ವ್ಯಾಕರಣಪ್ರಕ್ರಿಯಾ

ಅಸುರಾ—ಅಸು ಕ್ಷೇಪಣೇ. ಧಾತು. **ಅಸೇರುರನ್** (ಉ. ಸೂ. ೧-೪೨) ಎಂಬುದರಿಂದ ಉರನ್ ಪ್ರತ್ಯಯ. ಸಂಬೋಧನಾ ದ್ವಿವಚನ ಪರವಾದಾಗ **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಅದಕ್ಕೆ ಆಕಾರಾದೇಶ. **ಆಮಂತ್ರಿತಸ್ಯ ಚ** (ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

ಮಹಿ—ಮಹ ಪೂಜಾಯಾಂ ಧಾತು. ಇದಕ್ಕೆ **ಸರ್ವಧಾತುಭ್ಯ ಇನ್** ಎಂಬುದರಿಂದ ಇನ್ ಪ್ರತ್ಯಯ. **ಞ್ನಿತ್ಯಾದಿರ್ನಿತ್ಯಮ್** ಎಂಬುದರಿಂದ ಆದ್ಯುದಾತ್ತ ಸ್ವರ ಬರುತ್ತದೆ.

**ಋತವಾನೌ**—ಋತಂ ಅನಯೋಃ ಅಸ್ತಿ ಇತಿ ಋತಾವಾನೌ. **ಛಂದಸೀ ವನಿಪೌ** ಎಂಬ ವಚನದಿಂದ ಮತ್ವರ್ಥದಲ್ಲಿ ವನಿಪ್ ಪ್ರತ್ಯಯ. **ಅನ್ಯೇಷಾಮಪಿ ದೃಶ್ಯತೇ** (ಪಾ. ಸೂ. ೬-೩-೧೩೭) ಎಂಬುದರಿಂದ ದೀರ್ಘ. ಪಾದಾದಿಯಲ್ಲಿರುವುದರಿಂದ ಆಮಂತ್ರಿತನಿಘಾತಸ್ವರ ಬರುವುದಿಲ್ಲ. **ಆಮಂತ್ರಿತಸ್ಯ** (ಪಾ. ಸೂ. ೬-೧-೧೯೮) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಘೋಷಥಃ**—ಘುಷಿರ್ ವಿಶಬ್ದನೇ. ಧಾತು. ಲಟ್ ಮಧ್ಯಮಪುರುಷ ದ್ವಿವಚನಾಂತರೂಪ. ಅತಿಜಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಯುವಮ್—ಪ್ರಥಮಾಯಾಶ್ಚ ದ್ವಿವಚನೇ ಭಾಷಾಯಾಮ್** (ಪಾ. ಸೂ. ೭-೨-೮೮) ಎಂಬಲ್ಲಿ ಲೋಕದಲ್ಲಿ ಮಾತ್ರ ಆತ್ವ ಎಂದುದರಿಂದ ಇಲ್ಲಿ ಆತ್ವ ಬರುವುದಿಲ್ಲ. **ಶೇಷೇ ಲೋಪಃ** (ಪಾ. ಸೂ. ೭-೨-೯೦) ಎಂಬುದರಿಂದ ಮಪರ್ಯಂತ ಪರಕ್ಕೆ ಲೋಪ.

**ಬೃಹತಃ**—ಷಷ್ಠೀ ಏಕವಚನಾಂತರೂಪ. **ಬೃಹನ್ಮಹತೋರುಪಸಂಖ್ಯಾನಮ್** ಎಂಬ ವಚನದಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಧುರಿ—ಸಾವೇಕಾಚಸ್ತೃತೀಯಾದಿಃ** (ಪಾ. ಸೂ. ೬-೧-೧೬೮) ಎಂಬುದರಿಂದ ಸಪ್ತಮೀ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಯುಂಜಾಥೇ**—ಯುಜಿರ್ ಯೋಗೇ. ಧಾತು. ರುಧಾದಿ. ಲಟ್ ಪ್ರಥಮಪುರುಷ ದ್ವಿವಚನದಲ್ಲಿ ಆಥಾಮ್ ಪ್ರತ್ಯಯ. ಟಿಗೆ ಏತ್ವ. **ರುಧಾದಿಭ್ಯಃ ಶ್ನಮ್** (ಪಾ. ಸೂ. ೩-೧-೭೮) ಎಂಬುದರಿಂದ. ಶ್ನಮ್ ವಿಕರಣ. ಮಿತ್ತಾದುದರಿಂದ ಅಂತ್ಯಾಚಿನ ಪರವಾಗಿ ಬರುತ್ತದೆ. **ಶ್ನಸೋರಲ್ಲೋಪಃ** (ಪಾ. ಸೂ. ೬-೪-೧೧೧) ಎಂಬುದರಿಂದ ಅದರ ಅಕಾರಕ್ಕೆ ಲೋಪ. ನಕಾರಕ್ಕೆ ಅನುಸ್ವಾರ, ಪರಸವರ್ಣ. ತಿಜಂತ ನಿಘಾತಸ್ವರ ಬರುತ್ತದೆ.

———— :o: ————

ಸಂಹಿತಾಪಾಠಃ

ಮಹೀ ಅತ್ರ ಮಹಿನಾ ವಾರಮೃಣ್ವಥೋಽರೇಣವಸ್ತುಜ ಆ ಸದ್ಮನ್ಧೇನವಃ ।
ಸ್ವರಂತಿ ತಾ ಉಪರತಾತಿ ಸೂರ್ಯಮಾ ನಿಮ್ರುಚ ಉಷಸಸ್ತಕ್ವವೀರಿವ॥೫॥

ಪದಪಾಠಃ

ಮಹೀ ಇತಿ । ಅತ್ರ । ಮಹಿನಾ । ವಾರಂ । ಋಣ್ವಥಃ । ಅರೇಣವಃ । ತುಜಃ । ಆ । ಸದ್ಮನ್ । ಧೇನವಃ ।
ಸ್ವರಂತಿ । ತಾಃ । ಉಪರಽತಾತಿ । ಸೂರ್ಯಂ । ಆ । ನಿಽಮ್ರುಚಃ । ಉಷಸಃ । ತಕ್ವವೀಃಽಇವ ॥ ೫ ॥

॥ ಸಾಯಣಭಾಷ್ಯಂ ॥

ಹೇ ಮಿತ್ರಾವರುಣೌ ಯುವಾಂ ಮಹೀ ಮಹತ್ಯಾಂ ॥ ಸಪ್ತಮ್ಯೇಕವಚನೇ ಪೂರ್ವಸವರ್ಣದೀರ್ಘಃ । ಈದೂತೌ ಚ ಸಪ್ತಮ್ಯರ್ಥೇ । ಪಾ. ೧-೧-೧೯ । ಇತಿ ಪ್ರಗೃಹ್ಯತಾ ॥ ಅತ್ರಾಸ್ಯಾಂ ಪೃಥಿವ್ಯಾಂ ಮಹಿನಾ ಮಹತ್ತ್ವೇನ ಯಾ ಧೇನೂರ್ವಾರಂ ವರಣೀಯಂ ಪ್ರದೇಶಮೃಣ್ವಥಃ ಗಮಯಥಃ ॥ ಅಂತರ್ಭಾವಿತಣ್ಯರ್ಥೋಽಯಂ ॥ ಗಮನಾದಿವ್ಯವಹಾರಸ್ಯ ತಯೋರಧೀನತ್ವಾತ್ ದ್ಯಾವಾಪೃಥಿವ್ಯೋರಭಿಮಾನಿದೇವತ್ವಾಚ್ಚ ಮಿತ್ರಾವರುಣಯೋಃ । ತಾ ಏತಾ ಧೇನವೋ ಗಾವಃ ಸಾಯಂಕಾಲೇ ಯುಷ್ಮನ್ಮಹತ್ತ್ವೇನಾರೇಣವೋಽನವದ್ಯಾಸ್ತಸ್ಕರಾದ್ಯನಪಹಾರೇಣಾನಷ್ಟಾ ವಾ ತುಜಃ ಕ್ಷೀರಾಣಾಂ ಪ್ರದಾತ್ರ್ಯಃ ॥ ತುಜತಿರ್ದಾನಕರ್ಮಾ ॥ ಸದ್ಮನ್ ಸದ್ಮನಿ ಗೋಷ್ಠ ಆ । ಆಶ್ರಿತಾ ಆಗಚ್ಛಂತಿ ವಾ ॥ ಉಪಸರ್ಗಶ್ರುತೇರ್ಯೋಗ್ಯಕ್ರಿಯಾಧ್ಯಾಹಾರಃ ॥ ತಾ ಏವಂಕಾರಿತಾ ಧೇನವ ಉಪರತಾತ್ಯುಪರತಾತೌ ॥ ಸಪ್ತಮ್ಯಾ ಲುಕ್ ॥ ಮೇಘಾನಾಂ ವಿಸ್ತಾರವತ್ಯಂತರಿಕ್ಷೇ ಮೇಘಾಚ್ಛನ್ನೇ ಸತಿ ಸೂರ್ಯಂ ಸರ್ವಸ್ಯ ಪ್ರಸವಿತಾರಂ ಸುವೀರ್ಯಂ ಶೋಭನಸಾಮರ್ಥ್ಯಂ ವಾ । ಸುವೀರ್ಯೋ ಮರ್ಯಾ ಯಥಾ ಗೋಪಾಯತ ಇತಿ ತತ್ಸೂರ್ಯಸ್ಯ ಸೂರ್ಯತ್ವಮಿತಿ ಶ್ರುತ್ಯಂತರಾತ್ । ಆದಿತ್ಯಮಭಿಲಕ್ಷ್ಯ ಸ್ವರಂತಿ । ಶಬ್ದಯಂತಿ ಸುಖಸಂಚಾರಾಯ । ಸ್ವೃ ಶಬ್ದೋಪತಾಪಯೋಃ । ಭೌವಾದಿಕಃ ॥ ಕಸ್ಮಿನ್ಕಾಲ ಇತಿ ತದುಚ್ಯತೇ । ನಿಮ್ರುಚ ಉಷಸಃ । ಸರ್ವೇಷ್ವಪಿ ಸಾಯಂಕಾಲೇಷೂಷಃಕಾಲೇಷು ಚ । ತತ್ರ ದೃಷ್ಟಾಂತಃ । ತಕ್ವವೀರಿವ । ತಕ್ವಾ ಸ್ತೇನಃ । ತಸ್ಯ ವೇತಾ ಗಂತಾ ಮನುಷ್ಯಃ । ಸ ಯಥಾ ಕ್ರೋಶತಿ ತದ್ವತ್ । ಏವಂ ನಿರುದ್ಧಾನಾಂ ಗವಾಂ ಸುಖಚಾರೋ ಯುಷ್ಮದಾಯತ್ತ ಇತಿ ತಯೋಃ ಸ್ತುತಿಃ ॥

ಪ್ರತಿಪದಾರ್ಥ

(ಎಲೈ ಮಿತ್ರಾವರುಣರೇ) ಮಹೀ—ವಿಸ್ತಾರವಾದ । ಅತ್ರ—ಈ ಪೃಥಿವಿಯಲ್ಲಿ । ಮಹಿನಾ—ನಿಮ್ಮ ಮಾಹಾತ್ಮ್ಯದಿಂದ । (ಧೇನೂಃ— ಗೋವುಗಳನ್ನು) । ವಾರಂ—(ಅವುಗಳಿಗೆ) ಪ್ರಿಯವಾದ ಕೊಟ್ಟಿಗೆಗೆ ।

ಋಣ್ವಥಃ—ಸೇರಿಸುತ್ತೀರಿ | ಧೇನವಃ—ಆ ಗೋವುಗಳು | ಅರೇಣವಃ—(ತಸ್ಕರಾದಿಗಳಿಂದ) ಹಿಂಸಿಸಲ್ಪಡದೇ ಅಥವಾ ಕವಿಯಲ್ಪಡದೇ | ತುಜಃ—ಕ್ಷೀರಗಳನ್ನು ಕೊಡತಕ್ಕವುಗಳಾಗಿ | ಸದ್ಮನ್—ಕೊಟ್ಟಿಗೆಗಳಲ್ಲಿ | ಆ ಬಂದು ಸೇರುತ್ತವೆ | ತಾಃ—ಇಂತಹ ಧೇನುಗಳು | ಉಪರತಾತಿ—ಅಂತರಿಕ್ಷವು ಮೇಘಗಳಿಂದ ಆವೃತವಾದ ಕಾಲದಲ್ಲಿ | ನಿಮ್ರುಚಃ—ಸಾಯಂಕಾಲಗಳಲ್ಲಿಯೂ | ಉಷಸಃ—ಉಷಃಕಾಲಗಳಲ್ಲಿಯೂ ಸಹ | ಆ ಸೂರ್ಯಂ—ಸೂರ್ಯನನ್ನು ಕುರಿತು | ತಕ್ವವೀರಿವ—ಕಳ್ಳನನ್ನು ಹುಡುಕುವವನು (ಇತರರ ಸಹಾಯಕ್ಕಾಗಿ) ಗಟ್ಟಿಯಾಗಿ ಕೂಗಿಕೊಳ್ಳುವಂತೆ | ಸ್ವರಂತಿ—(ತಮ್ಮ ಸುಖವಾದ ಸಂಚಾರಕ್ಕೆ ಬೇಕಾದ ಬೆಳಕಿಗಾಗಿ) ಕೂಗಿಕೊಳ್ಳುತ್ತವೆ.

ಭಾವಾರ್ಥ

ಎಲೈ ಮಿತ್ರಾವರುಣರೇ, ವಿಸ್ತಾರವಾದ ಈ ಪೃಥಿವಿಯಲ್ಲಿ ಮೇಯಲು ಹೋದ ಗೋವುಗಳನ್ನು ನಿಮ್ಮ ಮಾಹಾತ್ಮ್ಯದಿಂದ ಅವುಗಳಿಗೆ ಪ್ರಿಯವಾದ ಕೊಟ್ಟಿಗೆಗೆ ತಂದು ಸೇರಿಸುತ್ತೀರಿ. ಆ ಗೋವುಗಳು ತಸ್ಕರಾದಿಗಳಿಂದ ಕವಿಯಲ್ಪಡದೆಯೂ, ದುಷ್ಟಪ್ರಾಣಿಗಳಿಂದ ಹಿಂಸಿಸಲ್ಪಡದೆಯೂ ಕ್ಷೀರಗಳನ್ನು ಕೊಡತಕ್ಕವುಗಳಾಗಿ ಕೊಟ್ಟಿಗೆಗಳಲ್ಲಿ ಬಂದು ಸೇರುತ್ತವೆ ಇಂತಹ ಧೇನುಗಳು ಅಂತರಿಕ್ಷವು ಮೇಘಗಳಿಂದ ಆವೃತವಾದ ಕಾಲದಲ್ಲಿಯೂ ಸಾಯಂಕಾಲಗಳಲ್ಲಿಯೂ, ಉಷಃಕಾಲಗಳಲ್ಲಿಯೂ ಸಹ ಸೂರ್ಯನನ್ನು ಕುರಿತು ಬೆಳಕಿಗಾಗಿ, ಕಳ್ಳನನ್ನು ಹುಡುಕುವವನು ಸಹಾಯಕ್ಕಾಗಿ ಕೂಗಿಕೊಳ್ಳುವಂತೆ ಕೂಗಿಕೊಳ್ಳುತ್ತವೆ.

## English Translation

you bring (the cattle) to their acceptable (pasture) upon earth, whence the milk-yielding cows, protected by your power, return unharmed to their stalls : they cry to the sun (in heaven) above, both at evening and at dawn, as one (cries aloud) who detects a thief.

ವಿಶೇಷ ವಿಷಯಗಳ

ಅರೇಣವಃ—ರೇಣು ಶಬ್ದಕ್ಕೆ ಧೂಳು ಎಂದರ್ಥ. ಇದೇ ಅರ್ಥವು ವಿಸ್ತೃತವಾಗಿ ಕೊಳೆ, ಮಾಲಿನ್ಯ, ಪಾಪ ಇತ್ಯಾದ್ಯರ್ಥಗಳಲ್ಲೂ ಈ ಪದದ ಪ್ರಯೋಗವಿದೆ. ಅರೇಣವಃ ಎಂಬ ಪದವು ಅಂತರಿಕ್ಷಕ್ಕೆ ವಿಶೇಷಣವಾಗಿ ಧೂಳಿಲ್ಲದೆ ಇರುವ ಅಂತರಿಕ್ಷವೆಂದು ವರ್ಣಿಸುವುದು ವಾಡಿಕೆಯಾಗಿದೆ. ಅಹಿಂಸ್ಯಾಃ ಹಿಂಸಾಪಾತ್ರರಾಗದಿರುವವರು ಎಂಬರ್ಥವಲ್ಲೂ ಈ ಪದವು ಉಪಯೋಗಿಸಲ್ಪಟ್ಟಿದೆ.

ಅವ ಸ್ವಯುಕ್ತಾ ದಿವ ಆ ವೃಥಾ ಯಯುರಮರ್ತ್ಯಾಃ ಕಶಯಾ ಚೋದತ ತ್ಮನಾ |
ಅರೇಣವಸ್ತುವಿಜಾತಾ ಅಚುಚ್ಯವುರ್ದೃಳ್ಹಾನಿ ಚಿನ್ಮರುತೋ ಭ್ರಾಜದೃಷ್ಟಯಃ ||

(ಋ. ಸಂ. ೧-೧೬೮-೪)

ಎಂಬಲ್ಲಿ ಅರೇಣವಃ ಎಂಬ ಪದವು ಮರುತ್ತುಗಳಿಗೆ ವಿಶೇಷಣವಾಗಿ ಅಪಾಪಾಃ ಪಾಪರಹಿತರು, ಶುದ್ಧಾತ್ಮರು ಎಂದರ್ಥವಾಗಿದೆ.

**ತ್ಯಂ ಚಿದಶ್ವಂ ನ ವಾಜಿನಮರೇಣವೋ ಯಮತ್ನತ ।**
**ದೃಳ್ಹಂ ಗ್ರಂಥಿಂ ನ ವಿಷ್ಯತಮತ್ರಿಂ ಯವಿಷ್ಠಮಾ ರಜಃ ॥**

(ಋ. ಸಂ. ೧೦-೧೪೩-೨)

ಇತ್ಯಾದಿ ಋಕ್ಕುಗಳಲ್ಲಿ **ಅಹಿಂಸ್ಯಮಾನಾಃ** ಹಿಂಸೆಗೆ ಸಿಲುಕದವರೂ ಪ್ರಬಲರೂ ಆದ ಅಸುರರು ಎಂದು ಅಸುರರ ಶಕ್ತಿಯನ್ನು ತೋರಿಸುತ್ತದೆ. ಅದರಂತೆ ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಈ ಪದವು **ಧೇನವಃ** ಎಂಬ ಪದಕ್ಕೆ ವಿಶೇಷಣವಾಗಿ **ಅನವದ್ಯಾಃ** ಪಾಪರಹಿತವಾದವು ಎಂದರೆ ಶುದ್ಧವಾದವು ಎಂದು ಒಂದು ವಿಧವಾದ ಅರ್ಥವನ್ನೂ ಅಥವಾ **ತಸ್ಕರಾದ್ಯನಪಹಾರೇಣ ಅನಷ್ಟಾ ವಾ** ಚೋರಾದಿಗಳಿಂದ ಅಪಹರಿಸಲ್ಪಡದಿರುವುವು ಎಂದು ಇನ್ನೊಂದು ವಿಧವಾದ ಅರ್ಥವನ್ನೂ ಹೇಳಿದೆ.

**ತುಜಃ**—ತುಜಶಬ್ದವು ಹಿಂಸಾರ್ಥಕವಾದುದರಿಂದ **ವಜ್ರನಾಮ**ಗಳಲ್ಲಿ ಪಠಿತವಾಗಿದೆ. (ನಿ. ೩-೧೧). **ತುಜತಿಃ ದಾನಕರ್ಮಾ** ಎಂದು ದಾನಾರ್ಥಕವೂ ಆಗಿದೆ.

**ಆ ನಸ್ತುಜಂ ರಯಿಂ ಭರಾಂಶಂ ನ ಪ್ರತಿಜಾನತೇ ।**
**ವೃಕ್ಷಂ ಪಕ್ವಂ ಫಲಮಂಕೀವ ಧೂನುಹೀಂದ್ರ ಸಂಪಾರಣಂ ವಸು ॥**

(ಋ. ಸಂ. ೩-೪೫-೪)

ಇತ್ಯಾದಿ ಋಕ್ಕುಗಳಲ್ಲಿ **ತುಜಃ** ಎಂದರೆ **ಶತ್ರೂಣಾಂ ಬಾಧಕಂ** ಶತ್ರುಗಳನ್ನು ಹಿಂಸಿಸತಕ್ಕ ಎಂದು ಸಂಪದ್ಯುಕ್ತನಾದ ಪುತ್ರನಿಗೆ ವಿಶೇಷಣವಾಗಿದೆ.

**ಜ್ಯೋತಿರ್ಯಜ್ಞಾಯ ರೋದಸೀ ಅನು ಷ್ಯಾದಾರೇ ಸ್ಯಾಮ ದುರಿತಸ್ಯ ಭೂರೇಃ ।**
**ಭೂರಿ ಚಿದ್ಧಿ ತುಜತೋ ಮರ್ತ್ಯಸ್ಯ ಸುಪಾರಾಸೋ ವಸವೋ ಬರ್ಹಣಾವತ್ ॥**

(ಋ ಸಂ. ೩-೩೯-೮)

ಇತ್ಯಾದಿ ಋಕ್ಕುಗಳಲ್ಲಿ **ತುಜತಃ** ಎಂದರೆ **ಭೂರಿಪ್ರದಸ್ಯ** ಅರ್ಹನಾದ ಯಜಮಾನನಿಗೆ ಪ್ರಭೂತವಾದ ಧನವನ್ನು ದಾನಮಾಡು ಎಂದರ್ಥವಾಗಿದೆ. ಪ್ರಕೃತವಾದ ಋಕ್ಕಿನಲ್ಲಿಯೂ ಸಹ ದಾನಾರ್ಥಕವಾದ **ತುಜಃ** ಎಂಬ ಪದವು ಕ್ಷೀರಾದಿಗಳನ್ನು ಕೊಡತಕ್ಕ ಎಂದು ಧೇನುಗಳಿಗೆ ವಿಶೇಷಣವಾಗಿದೆ.

**ಋಣ್ವಥಃ**—ಗತ್ಯರ್ಥಕವಾದ ರಿವಿ ಧಾತುವಿನಿಂದ ನಿಷ್ಪನ್ನವಾಗಿ ಹೊಂದಿಸು, ತಲಪಿಸು, ಹೋಗುವಂತೆ ಮಾಡು ಇತ್ಯಾದ್ಯರ್ಥಗಳಾಗುತ್ತವೆ.

**ಪವಮಾನೋ ಅಭಿ ಸ್ಪೃಧೋ ವಿಶೋ ರಾಜೇವ ಸೀದತಿ ।**
**ಯದೀಮೃಣ್ವಂತಿ ವೇಧಸಃ ।**

(ಋ. ಸಂ. ೯-೭-೫)

ಇತ್ಯಾದಿ ಋಕ್ಕುಗಳಲ್ಲಿ **ಗಮಯತಿ ಪ್ರೇರಯತಿ ।** ಹೋಗುವಂತೆ ಮಾಡುತ್ತಾನೆ ಎಂದರ್ಥವಿರುವಂತೆ ಪ್ರಕೃತವಾದ ಋಕ್ಕಿನಲ್ಲಿಯೂ ಸಹ (**ಗೋವು**ಗಳನ್ನು ಕೊಟ್ಟಿಗೆಗೆ) ಸೇರಿಸುತ್ತೀರಿ ಎಂದರ್ಥವಾಗುತ್ತದೆ.

**ನಿಮ್ರುಚಃ**—**ಮ್ರುಚಿಃ ಗತ್ಯರ್ಥಃ । ಸೂರ್ಯಸ್ಯ ನಿಮ್ರೋಚನೇ ನಿತರಾಂ ಗಮನೇ । ಸಾಯ ಮಿತ್ಯರ್ಥಃ ।** ಗತ್ಯರ್ಥಕವಾದ **ಮ್ರುಚ್** ಧಾತುವಿಗೆ ನಿ ಎಂಬ ಉಪಸರ್ಗವು ಸೇರಿ ಸೂರ್ಯನ ಅಂತ್ಯಗಮನವು ಎಂದರ್ಥವಾಗಿ ಸಾಯಂಕಾಲವೆಂಬ ಅರ್ಥವನ್ನು ಕೊಡುತ್ತದೆ.

**ಯದದ್ಯ ಸೂರ್ಯ ಉದ್ಯತಿ ಪ್ರಿಯಕ್ಷತ್ರಾ ಋತಂ ದಧ ।**
**ಯನ್ನಿಮ್ರುಚಿ ಪ್ರಬುಧಿ ವಿಶ್ವವೇದಸೋ ಯದ್ವಾ ಮಧ್ಯಂದಿನೇ ದಿವಃ ॥**

(ಋ. ಸಂ. ೮-೨೭-೧೯)

**ಶ್ರದ್ಧಾಂ ಪ್ರಾತರ್ಹವಾಮಹೇ ಶ್ರದ್ಧಾಂ ಮಧ್ಯಂದಿನಂ ಪರಿ ।**
**ಶ್ರದ್ಧಾಂ ಸೂರ್ಯಸ್ಯ ನಿಮ್ರುಚಿ ಶ್ರದ್ಧೇ ಶ್ರದ್ಧಾಪಯೇಹ ನಃ ॥**

(ಋ. ಸಂ. ೧೦-೧೫೧-೫)

ಇತ್ಯಾದಿಋಕ್ಕುಗಳಲ್ಲಿ **ಅಸ್ತಮಯವೇಲಾಯಾಂ ಸಾಯಂ ಸಮಯೇ** ಸೂರ್ಯಾಸ್ತಮಯಕಾಲವಾದ ಸಾಯಂಕಾಲ ವೇಳೆಯಲ್ಲಿ ಎಂದರ್ಥವಾಗುವಂತೆ ಪ್ರಕೃತವಾದ ಋಕ್ಕಿನಲ್ಲಿಯೂ ಅದೇ ಅರ್ಥವಾಗುತ್ತದೆ.

**ತಕ್ವವೀಃ**—**ತೃಪುಃ, ತಕ್ವಾ** ಇತ್ಯಾದಿ **ಸ್ತೇನ** ನಾಮಗಳಲ್ಲಿ ಪಠಿತವಾಗಿ (ನಿ. ೩-೧೯) **ತಕ್ವನ್** ಶಬ್ದಕ್ಕೆ ಕಳ್ಳನೆಂದರ್ಥ. **ತಸ್ಯ ವೇತಾ ಗಂತಾ ಮನುಷ್ಯಃ ।** ಅಂತಹ ಕಳ್ಳನನ್ನು ಹುಡುಕಿಕೊಂಡು ಹೋಗತಕ್ಕ ಪುರುಷ ನೆಂದರ್ಥ.

**ತ್ವಾಂ ತ್ಸಾರೀ ದಸಮಾನೋ ಭಗಮೀಟ್ಟೇ ತಕ್ವವೀಯೇ ।**

(ಋ. ಸಂ. ೧-೧೩೪-೫)

ಎಂಬಲ್ಲಿ **ತಸ್ಕರಾಣಾಂ ಗಮನಂ** ಎಂದಿರುವಂತೆ ಪ್ರಕೃತವಾದ ಋಕ್ಕಿನಲ್ಲಿ **ತಸ್ಕರಾನುವ್ರಿಶ್ಯಾಗಮನಂ** ಎಂದರ್ಥ.

ವ್ಯಾಕರಣಪ್ರಕ್ರಿಯಾ

**ಮಹೀ ಅತ್ರ**—ಮಹೀ ಶಬ್ದಕ್ಕೆ ಸಪ್ತಮೀ ಏಕವಚನ ಪರವಾದಾಗ **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಪೂರ್ವಸವರ್ಣದೀರ್ಘ ಬರುತ್ತದೆ ಆಗ **ಈದೂತೌ ಚ ಸಪ್ತಮ್ಯರ್ಥೇ** (ಪಾ. ಸೂ. ೧-೧-೧೯) ಎಂಬುದರಿಂದ ಅದಕ್ಕೆ ಪ್ರಗೃಹ್ಯಸಂಜ್ಞಾ ಬರುವುದರಿಂದ **ಪ್ಲುತಪ್ರಗೃಹ್ಯಾ ಅಚಿನಿತ್ಯಮ್** (ಪಾ. ಸೂ. ೬-೧-೧೨೫) ಎಂಬುದರಿಂದ ಪ್ರಕೃತಿಭಾವಸಂಧಿ ಬರುತ್ತದೆ.

**ಮಹಿನಾ**—ಮಹತ್ ಶಬ್ದವು ಪೃಥ್ವಾದಿಗಣದಲ್ಲಿ ಪಠಿತವಾದುದರಿಂದ ತಸ್ಯ ಭಾವಃ ಎಂಬ ಅರ್ಥದಲ್ಲಿ **ಪೃಥ್ವಾದಿಭ್ಯ ಇಮನಿಚ್ ವಾ** (ಪಾ. ಸೂ. ೫-೧-೧೨೨) ಎಂಬುದರಿಂದ ಇಮನಿಚ್ ಪ್ರತ್ಯಯ. **ಟೇಃ** ಎಂಬುದ ರಿಂದ ಟಿಗೆ ಲೋಪ. ಆಗ ಚಿತಃ (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ತೃತೀಯಾ ಏಕವಚನದಲ್ಲಿ ಅಲ್ಲೋಪ ಬಂದಾಗ ಉದಾತ್ತನಿವೃತ್ತಿ ಸ್ವರದಿಂದ ಆದಕ್ಕೆ ಉದಾತ್ತಸ್ವರ ಬರುತ್ತದೆ. ಛಾಂದಸವಾಗಿ ಮಹಾದ ಲೋಪ ಬರುತ್ತದೆ.

ಋಣ್ವಥಃ—ಋವಿ ಗತೌ ಧಾತು. **ಇದಿತೋ ನುಮ್ ಧಾತೋಃ** ಎಂಬುದರಿಂದ ನುಮಾಗಮ. ವ್ಯತ್ಯಯದಿಂದ ಸಂಪ್ರಸಾರಣ ಬರುತ್ತದೆ. ಲಟ್ ಮಧ್ಯಮಪುರುಷ ದ್ವಿವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ. ಪ್ರಯೋಜಕ ವ್ಯಾಪಾರ ತೋರುವುದರಿಂದ ಅಂತರ್ಭಾವಿತ ಣ್ಯರ್ಥಕವಾದ ಧಾತು.

**ಅರೇಣವಃ**—ನ ವಿದ್ಯಂತೇ ರೇಣುಃ ಯೇಷಾಂ ತೇ ಅರೇಣವಃ **ನಞ್‌ಸುಭ್ಯಾಮ್** (ಪಾ. ಸೂ. ೬-೨-೧೭೨) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ಪ್ರಥಮಾ ಬಹುವಚನಾಂತರೂಪ.

**ತುಜಃ**—ತುಜಧಾತುವು ದಾನಾರ್ಥದಲ್ಲಿ ಪ್ರಯುಕ್ತವಾಗಿದೆ. **ಕ್ವಿಪ್ ಚ** (ಪಾ. ಸೂ. ೩-೨-೭೬) ಎಂಬುದರಿಂದ ಕ್ವಿಪ್ ಪ್ರತ್ಯಯ ಪ್ರಥಮಾ ಬಹುವಚನಾಂತರೂಪ.

**ಸದ್ಮನ್— ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಸಪ್ತಮಿಗೆ ಲುಕ್ ಬರುತ್ತದೆ

ಅ—ಉಪಸರ್ಗವು ಶ್ರುತವಾದುದರಿಂದ ಗಚ್ಛಂತಿ ಎಂದು ಅಧ್ಯಾಹಾರ ಮಾಡಿಕೊಳ್ಳಬೇಕು.

**ಸ್ವರಂತಿ**—ಸ್ವೃ ಶಬ್ದೋಪತಾಪಯೋಃ ಧಾತು. ಭ್ವಾದಿ. ಲಟ್ ಪ್ರಥಮಪುರುಷ ಬಹುವಚನಾಂತ ರೂಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. **ತಾಸ್ಯನುದಾತ್ತೇತ್**—(ಪಾ. ಸೂ. ೬-೧-೧೮೬) ಸೂತ್ರದಿಂದ ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಉಪರತಾತಿ—ಸುಪಾಂ ಸುಲುಕ್** — (ಪಾ. ಸೂ. ೭-೧-೩೯) ಎಂಬುದರಿಂದ ಸಪ್ತಮೀವಿಭಕ್ತಿ ಬಂದಾಗ ಅದಕ್ಕೆ ಲುಕ್.

**ನಿಮ್ರುಚಃ**—ಮ್ರುಚು ಗತೌ ಧಾತು- ಭ್ವಾದಿ **ಕ್ವಿಪ್‌ಚ** ಎಂಬುದರಿಂದ ಕ್ವಿಪ್ ಪ್ರತ್ಯಯ. ಕೃದುತ್ತರ ಪದ ಪ್ರಕೃತಿಸ್ವರ ಬರುತ್ತದೆ.

**ತಕ್ವವೀಃ**—ತಕ್ವಂ ಸ್ತೇನಂ ವೇತಿ ಗಚ್ಛತಿ ಇತಿ ತಕ್ವವೀಃ ಹಿಂದಿನಂತೆ ವೀಧಾತುವಿಗೆ ಕ್ವಿಪ್ ಬಂದಾಗ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ॥ ೫ ॥



। ಸಂಹಿತಾಪಾಠಃ ।

ಆ ವಾಮೃತಾಯ ಕೇಶಿನೀರನೂಷತ ಮಿತ್ರ ಯತ್ರ ವರುಣ ಗಾತುಮರ್ಚಥಃ ।

ಅವ ತ್ಮನಾ ಸೃಜತಂ ಪಿನ್ವತಂ ಧಿಯೋ ಯುವಂ ವಿಪ್ರಸ್ಯ ಮನ್ಮನಾಮಿರಜ್ಯಥಃ ॥ ೬ ॥

ಪದಪಾಠಃ

ಆ । ವಾಂ । ಋತಾಯ । ಕೇಶಿನೀಃ । ಅನೂಷತ । ಮಿತ್ರ । ಯತ್ರ । ವರುಣ । ಗಾತುಂ । ಅರ್ಚಥಃ ।

ಅವ । ತ್ಮನಾ । ಸೃಜತಂ । ಪಿನ್ವತಂ । ಧಿಯಃ । ಯುವಂ । ವಿಪ್ರಸ್ಯ । ಮನ್ಮನಾಂ । ಇರಜ್ಯಥಃ ॥ ೬ ॥

ಸಾಯಣಭಾಷ್ಯಂ

ಹೇ ಮಿತ್ರಾವರುಣೌ ಕೇಶಿನೀಃ ಕೇಶವತ್ಯೋಽಗ್ನೇರ್ಜ್ವಾಲಾ ವಾಂ ಯುವಾಮೃತಾಯ ಯಜ್ಞಾರ್ಥಮಾನೂಷತ । ಹವಿಃಸಮರ್ಪಣೇನಾಭಿಪೂಜಯಂತೀತ್ಯರ್ಥಃ । ಕುತ್ರೇತಿ ತದುಚ್ಯತೇ । ಹೇ ಮಿತ್ರ ಹೇ ವರುಣ ಯುವಾಮುಭೌ ಯತ್ರ ಯಾಗೇ ಗಾತುಂ ಗಮನಂ ದೇವಯಜನದೇಶಂ ವಾ । ಗಾತುರಿತಿ ಪೃಥಿವೀನಾಮ ಗಾತುಃ ಪೂಷೇತ್ಯುಕ್ತತ್ವಾತ್ । ಅರ್ಚಥಃ ಪೂಜಯಥಃ । ಸ್ವೀಕುರುಥ ಇತ್ಯರ್ಥಃ । ಆಗತ್ಯ ಚ ತ್ಮನಾತ್ಮನೈವಾವ ಸೃಜತಂ ವೃಷ್ಟಿಮವಾಙ್ಮುಖಂ ವಿಸೃಜತಂ । ತಥಾ ಕೃತ್ವಾ ಧಿಯೋಽಸ್ಮದೀಯಾನಿ ಕರ್ಮಾಣಿ ಪಿನ್ವತಂ । ವರ್ಧಯತಮಿತ್ಯರ್ಥಃ । ಏವಂ ಕೃತ್ವಾ ವಿಪ್ರಸ್ಯ ಮೇಧಾವಿನೋ ಯಜಮಾನಸ್ಯ ಮನ್ಮನಾಂ ಮನನವತೀನಾಂ ಸ್ತುತೀನಾಂ ಯುವಂ ಯುವಾಮಿರಜ್ಯಥಃ । ಈಶ್ವರೌ ಸ್ವಾಮಿನೌ ಭವಥಃ । ಇರಜ್ಯತಿರೈಶ್ವರ್ಯಕರ್ಮಾ ಇರಜ್ಯತಿ ಪತ್ಯತ ಇತಿ ತನ್ನಾಮಸೂಕ್ತತ್ವಾತ್ ॥

ಪ್ರತಿಪದಾರ್ಥ

ಮಿತ್ರ—ಎಲೈ ಮಿತ್ರನೇ । ವರುಣ—ಎಲೈ ವರುಣನೇ, (ನೀವಿಬ್ಬರೂ ಸಹ) । ಯತ್ರ—ಯಾವ ಯಾಗದಲ್ಲಿ । ಗಾತುಂ—(ನಿಮ್ಮ) ಗಮನವನ್ನು ಅಥವಾ ಯಾಗಪ್ರದೇಶವನ್ನು । ಅರ್ಚಥಃ—ಅಂಗೀಕರಿಸಿ ಗೌರವಿಸುತ್ತೀರೋ (ಅಲ್ಲಿ) । ಕೇಶಿನೀಃ—ಕೂದಲಿನಂತಿರುವ ಅಗ್ನಿಜ್ವಾಲೆಗಳು । ವಾಂ—ನಿಮ್ಮಿಬ್ಬರನ್ನು । ಋತಾಯ—ಯಜ್ಞಾರ್ಥವಾಗಿ । ಆ ಅನೂಷತ—(ಹವಿಸ್ಸನ್ನು ಅರ್ಪಿಸುವುದರ ಮೂಲಕ) ಉಪಚರಿಸುತ್ತವೆ, (ನೀವು ಬಂದು) । ತ್ಮನಾ—ನಿಮ್ಮ ಸ್ವಪ್ರೇರಣೆಯಿಂದಲೇ । ಅವ ಸೃಜತಂ—(ಮಳೆಯನ್ನು) ಕೆಳಕ್ಕೆ ಸುರಿಯುವಂತೆ ಮಾಡಿರಿ । ಧಿಯಃ—ನಮ್ಮ ಕರ್ಮಗಳನ್ನು । ಪಿನ್ವತಂ—ವೃದ್ಧಿಯಾಗುವಂತೆ ಮಾಡಿರಿ, (ಏತಕ್ಕೆಂದರೆ) । ಯುವಂ—ನೀವಿಬ್ಬರೂ ಸಹ । ವಿಪ್ರಸ್ಯ—ಮೇಧಾವಿಯಾದ ಯಜಮಾನನ । ಮನ್ಮನಾಂ—ಶ್ರದ್ಧಾಪೂರ್ವಕವಾದ ಸ್ತೋತ್ರಗಳಿಗೆ । ಇರಜ್ಯಥಃ—ಸ್ವಾಮಿಗಳಾಗಿದ್ದೀರಿ

ಭಾವಾರ್ಥ

ಎಲೈ ಮಿತ್ರಾವರುಣರೇ, ನೀವು ಯಾವ ಯಾಗದಲ್ಲಿ ಯಾಗಪ್ರದೇಶವನ್ನು ನಿಮ್ಮ ಆಗಮನದಿಂದ ಅಲಂಕರಿಸಿ ಗೌರವಿಸುತ್ತೀರೋ, ಅಲ್ಲಿ ಕೂದಲಿನ ರೂಪದ ಅಗ್ನಿಜ್ವಾಲೆಗಳು ನಿಮ್ಮಿಬ್ಬರನ್ನೂ ಹವಿಸ್ಪ್ರದಾನಾದಿಗಳಿಂದ ಯಜ್ಞದಲ್ಲಿ ಉಪಚರಿಸುತ್ತವೆ. ನೀವು ಅಲ್ಲಿಗೆ ದಯಮಾಡಿ ನಿಮ್ಮ ಸ್ವಪ್ರೇರಣೆಯಿಂದಲೇ, ನಮಗೆ ಉಪಕಾರಕವಾದ ಮಳೆಯನ್ನು ಸುರಿಸುವಂತೆ ಮಾಡಿರಿ ಮತ್ತು ನಮ್ಮ ಕರ್ಮಗಳನ್ನು ವೃದ್ಧಿಯಾಗುವಂತೆ ಮಾಡಿ. ಏತಕ್ಕೆಂದರೆ ನೀವಿಬ್ಬರೂ ಸಹ ಮೇಧಾವಿಯಾದ ಯಜಮಾನನ ಶ್ರದ್ಧಾಪೂರ್ವಕವಾದ ಸ್ತೋತ್ರಗಳಿಗೆ ಸ್ವಾಮಿಗಳಾಗಿದ್ದೀರಿ.

## English Translation

The tresses of Agni minister, Mitra and Varuna, to your sacrifice, when you honour (with your presence) the sacrifical chamber : send down of your own accord (the rain) and prosper our offerings, for you have command over the praises of the pious men.

### ವಿಶೇಷವಿಷಯಗಳು

**ಗಾತುಂ—ಗಮನಂ ದೇವಯಜನದೇಶಂ ವಾ** । (ಮಿತ್ರಾವರುಣರ) ಗಮನ ಅಥವಾ ಯಾಗಪ್ರದೇಶ ಎಂದು ಎರಡು ವಿಧವಾದ ಅರ್ಥವನ್ನು ಮಾಡಿದೆ. ಗಮನವೆಂಬರ್ಥಮಾಡುವ ಕಾಲದಲ್ಲೂ, ಅನುಷ್ಠಾನಮಾರ್ಗ ಅಥವಾ **ದೇವಲೋಕಗಮನಮಾರ್ಗ** ಎಂದೂ ಎರಡು ವಿಧವಾದ ಅರ್ಥವು ಸಾಧ್ಯವಾಗುತ್ತದೆ. **ಸುಗಂ** ಎಂಬ ಶಬ್ದಕ್ಕಿರುವಂತೆಯೇ ಈ ಪದಕ್ಕೂ ಭೌತಿಕವಾದ ಮತ್ತು ನೈತಿಕವಾದ ಅರ್ಥಗಳಿರುವುವು.

**ಊರ್ಧ್ವೋ ವಾಂ ಗಾತುರಧ್ವರೇ ಅಕಾರ್ಯೂರ್ಧ್ವಾ ಶೋಚೀಂಷಿ ಪ್ರಸ್ಥಿತಾ ರಜಾಂಸಿ ।**
**ದಿವೋ ವಾ ನಾಭಾ ನ್ಯಸಾದಿ ಹೋತಾ ಸ್ತೃಣೀಮಹಿ ದೇವವ್ಯಚಾ ವಿ ಬರ್ಹಿಃ ॥**

(ಋ ಸಂ ೩-೪-೪)

ಇತ್ಯಾದಿ ಋಕ್ಕುಗಳಲ್ಲಿ ಮಾರ್ಗವೆಂಬುದಾಗಿಯೂ,

**ಅರ್ಯಮಾ ಣೋ ಅದಿತಿರ್ಯಜ್ಞಿಯಾಸೋಽದಬ್ಧಾನಿ ವರುಣಸ್ಯ ವ್ರತಾನಿ ।**
**ಯುಯೋತ ನೋ ಅನಪತ್ಯಾನಿ ಗಂತೋಃ ಪ್ರಜಾವಾನ್ನಃ ಪಶುಮಾँ ಅಸ್ತು ಗಾತುಃ ॥**

(ಋ. ಸಂ. ೩-೫೪-೧೮)

ಇತ್ಯಾದಿಗಳಲ್ಲಿ **ಸ್ತುವಂತೀಂದ್ರಾದೀನತ್ರೇತಿ ಗಾತುರ್ಗೃಹಂ** । ಇಂದ್ರಾದಿದೇವತೆಗಳನ್ನು ಸ್ತುತಿಸುವ ಗೃಹವೆಂದೂ.

**ನ್ಯಸ್ಮೈ ದೇವೀ ಸ್ವಧಿತಿರ್ಜಿಹೀತ ಇಂದ್ರಾಯ ಗಾತುರುಶತೀವ ಯೇಮೇ ।**
**ಸಂ ಯದೋಜೋ ಯುವತೇ ವಿಶ್ವಮಾಭಿರನು ಸ್ವಧಾವ್ನೇ ಕ್ಷಿತಯೋ ನಮಂತ ॥**

(ಋ. ಸಂ. ೫-೩೨-೧೦)

ಇತ್ಯಾದಿಗಳಲ್ಲಿ ಭೂಮಿಯೆಂದೂ (**ಗಾತು** ಶಬ್ದವು ಪೃಥ್ವೀ ನಾಮಗಳಲ್ಲಿ ಪಠಿತವಾಗಿದೆ. (ನಿ. ೨-೫).

**ಸ ತೇ ಜಾನಾತಿ ಸುಮತಿಂ ಯವಿಷ್ಠ ಯ ಈವತೇ ಬ್ರಹ್ಮಣೇ ಗಾತುಮೈರತ್ ।**
**ವಿಶ್ವಾನ್ಯಸ್ಮೈ ಸುದಿನಾನಿ ರಾಯೋ ದ್ಯುಮ್ನಾನ್ಯರ್ಯೋ ವಿ ದುರೋ ಅಭಿ ದ್ಯೌತ್ ॥**

(ಋ. ಸಂ. ೪-೪-೬)

ಎಂಬಲ್ಲಿ **ಗೀಯತೇ ಉಚ್ಚಾರ್ಯತೇ ಇತಿ ಗಾತುಃ ಸ್ತೋತ್ರಂ** ಎಂದು ಸ್ತೋತ್ರಪರ್ಯಾಯವಾಗಿಯೂ ಈ ಪದದ ಪ್ರಯೋಗವಿದೆ. ಪ್ರಕೃತವಾದ ಋಕ್ಕಿನಲ್ಲಿ **ಗಮನಂ ದೇವಯಜನದೇಶಂ ವಾ** ಎಂದು ದ್ವ್ಯರ್ಥರೂಪವಾದ ಅರ್ಥವನ್ನು ಮಾಡಿದೆ.

**ಇರಜ್ಯಥಃ**—ಇರಜ್ಯತಿ ಪದವು ಐಶ್ವರ್ಯಕರ್ಮನಾಮಗಳಲ್ಲಿಯೂ (ನಿ. ೩-೧೧) ಪರಿಚರಣಕರ್ಮನಾಮಗಳಲ್ಲಿಯೂ ಪಠಿತವಾಗಿದೆ. (ನಿ. ೩-೧೩) ಆದರೂ ಮೊದಲನೆಯ ಅರ್ಥದಲ್ಲಿಯೇ ಈ ಪದದ ಪ್ರಯೋಗವಿರುವುದು ಅಧಿಕ.

ಇರಜ್ಯನ್ನಗ್ನೇ ಪ್ರಥಯಸ್ವ ಜಂತುಭಿರಸ್ಮೇ ರಾಯೋ ಅಮರ್ತ್ಯ ।
ಸ ದರ್ಶತಸ್ಯ ವಪುಷೋ ವಿ ರಾಜಸಿ ಪೃಣಕ್ಷಿ ಸಾನಸಿಂ ಕ್ರತುಂ ॥

(ಋ. ಸಂ. ೧೦-೧೪೦-೪)

ಎಂಬ ಋಕ್ಕಿನಲ್ಲಿ ಇರಜ್ಯನ್ ಎಂಬ ಪದಕ್ಕೆ ಅರ್ಥವನ್ನು ಹೇಳುವಾಗ ಮೊದಲು ಈರ್ಷ್ಯಾರ್ಥಕವಾದ ಇರಜ್ ಧಾತುವಿನಿಂದ ನಿಷ್ಪನ್ನವಾಗಿ **ಈರ್ಷ್ಯನ್** ಎಂದರೆ ಸ್ಪರ್ಧಾಂ **ಕುರ್ವನ್** ಇತರ ಶಕ್ತಿಗಳೊಡನೆಯೂ ತೇಜಸ್ಸುಗಳೊಡನೆಯೂ ಸ್ಪರ್ಧಿಸುತ್ತಾ ಬೆಳಗುತ್ತೀಯೆ ಎಂದು ಒಂದರ್ಥವನ್ನೂ, ಎರಡನೆಯದಾಗಿ, **ಯದ್ವಾ ಇರಜ್ಯತಿರೈಶ್ವರ್ಯಕರ್ಮ ಜಂತುಭಿರ್ಜಾಯಮಾನೈರಾತ್ಮೀಯೈಸ್ತೇಜೋಭಿಃ ಇರಜ್ಯನ್ ಈಶ್ವರೋ ಭವನ್** । ನಿನ್ನ ಆತ್ಮತೇಜಸ್ಸಿನಿಂದ ಸಕಲಜಂತುಗಳಿಗೂ ಈಶ್ವರನಾಗಿರುತ್ತಾ ಎಂದೂ ವಿವರಿಸಿದೆ. ಹೀಗೆಯೇ,

**ಯಸ್ಯ ಶ್ವೇತಾ ವಿಚಕ್ಷಣಾ ತಿಸ್ರೋ ಭೂಮೀರಧಿಕ್ಷಿತಃ ।**
**ತ್ರಿರುತ್ತರಾಣಿ ಪಪ್ರತುರ್ವರುಣಸ್ಯ ಧ್ರುವಂ ಸದಃ ಸ ಸಪ್ತಾನಾಮಿರಜ್ಯತಿ ನಭಂತಾಮನ್ಯಕೇ ಸಮೇ ॥**

(ಋ. ಸಂ. ೮-೪೧-೯)

ಇತ್ಯಾದಿ ಋಕ್ಕುಗಳಲ್ಲಿಯೂ **ಇರಜ್ಯತಿ ಈಶ್ವರೋ ಭವತಿ** ಪ್ರಭುವಾಗಿರುತ್ತಾನೆ ಎಂದರ್ಥವಾಗಿರುವಂತೆ ಪ್ರಕೃತವಾದ ಋಕ್ಕಿನಲ್ಲಿಯೂ ಸಹ **ಮಿತ್ರಾವರುಣರು** ಸಕಲವಾದ ಸ್ತೋತ್ರಗಳಿಗೂ ಮತ್ತು ಸ್ತುತಿಕರ್ತರಿಗೂ ಸ್ವಾಮಿಗಳಾಗಿದ್ದಾರೆಂದು ವರ್ಣಿಸಿದೆ.

### ವ್ಯಾಕರಣಪ್ರಕ್ರಿಯಾ

**ಕೇಶಿನೀಃ**—ಕೇಶಾಃ ಆಸಾಂ ಸಂತೀತಿ ಕೇಶಿನ್ಯಃ ಇಲ್ಲಿ ಜಸ್ ಪರವಾದಾಗ **ಸುಪಾಂ ಸುಲುಕ್** (ಪಾ. ಸೂ. ೭-೧-೩೯) ಎಂಬುದರಿಂದ ಪೂರ್ವಸವರ್ಣದೀರ್ಘ ಬರುತ್ತದೆ.

**ಅನೂಷತ**—ಣು ಸ್ತುತೌ ಧಾತು. **ವ್ಯತ್ಯಯೋ ಬಹುಲಂ** ಎಂಬುದರಿಂದ ಆತ್ಮನೇಪದಿಯಾಗುತ್ತದೆ. ಛಾಂದಸವಾಗಿ ಲುಙ್. ಝ ಪ್ರತ್ಯಯಕ್ಕೆ ಅತ್ ಆದೇಶ. ಚ್ಲಿಗೆ ಸಿಚ್ ಬಂದಾಗ **ಗಾಂಕುಟಾದಿಭ್ಯಃ** (ಪಾ. ಸೂ. ೧-೨-೧) ಎಂಬುದರಿಂದ ಅದು ಙಿತ್ತಾಗುವುದರಿಂದ ಅದನ್ನು ನಿಮಿತ್ತೀಕರಿಸಿ ಗುಣ ಬರುವುದಿಲ್ಲ. ಛಾಂದಸವಾಗಿ ಧಾತುವಿಗೆ ದೀರ್ಘವೂ ಸಿಚಿಗೆ ಇಡಭಾವವೂ ಬರುತ್ತದೆ. ತಿಙಂತನಿಘಾತಸ್ವರ ಬರುತ್ತದೆ.

**ಗಾತುಮ್**—ಗೈ ಶಬ್ದೇ ಧಾತು. **ಕಮಿಮನಿಜನಿ**—(ಉ. ಸೂ. ೧-೭೩) ಎಂಬುದರಿಂದ ತು ಪ್ರತ್ಯಯ. **ಆದೇಚಉಪದೇಶೇಽಶಿತಿ** (ಪಾ. ಸೂ. ೬-೧-೪೫) ಎಂಬುದರಿಂದ ಧಾತುವಿಗೆ ಆತ್ವ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ದ್ವಿತೀಯಾಏಕವಚನಾಂತರೂಪ **ಗಾತುಃ ಪೂಷಾ** (ನಿರು. ೧-೧-೨೦) ಎಂದು ಪೃಥಿವೀಪರ್ಯಾಯದಲ್ಲಿ ಪಠಿತವಾಗಿದೆ.

**ಅರ್ಚಥಃ**—ಅರ್ಚ ಪೂಜಾಯಾಂ ಧಾತು. ಲಟ್ ಮಧ್ಯಮಪುರುಷದ್ವಿವಚನಾಂತರೂಪ. **ನಿಪಾತೈರ್ಯ-ದ್ಯದಿ** (ಪಾ. ಸೂ. ೮-೧-೩೦) ಎಂಬುದರಿಂದ ನಿಘಾತಸ್ವರಪ್ರತಿಷೇಧ ಬರುವುದರಿಂದ ಧಾತುಸ್ವರ ಉಳಿಯುತ್ತದೆ.

**ತ್ಮನಾ—ಮಂತ್ರೇಷ್ವಾಙ್ಯಾದೇರಾತ್ಮನಃ** (ಪಾ. ಸೂ. ೬-೪-೧೪೧) ಎಂಬುದರಿಂದ ಆಕಾರಕ್ಕೆ ಲೋಪ ಬರುತ್ತದೆ.

**ಸೃಜತಮ್**—ಸೃಜ ವಿಸರ್ಗೇ ಧಾತು. ಲೋಟ್ ಮಧ್ಯಮಪುರುಷದ್ವಿವಚನಾಂತರೂಪ. ಲಸಾರ್ವಧಾತುಕ ಅನುದಾತ್ತವಾಗುವುದರಿಂದ ಶ ವಿಕರಣಸ್ವರ ಉಳಿಯುತ್ತದೆ. **ಚಾದಿಲೋಪೇ ವಿಭಾಷಾ** (ಪಾ. ಸೂ. ೮-೧-೬೩)ಎಂಬುದರಿಂದ ನಿಘಾತಪ್ರತಿಷೇಧ ಬರುತ್ತದೆ.

**ಪಿನ್ವತಮ್**—ಪಿವಿ ಸೇಚನೇ ಧಾತು. ಲೋಟ್ ಮಧ್ಯಮಪುರುಷದ್ವಿವಚನಾಂತರೂಪ ಇದಿತ್ತಾದುದರಿಂದ ನುಮಾಗಮ ಬರುತ್ತದೆ. ತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಶಪ್ ಅನುದಾತ್ತವಾದುದರಿಂದ ಧಾತುಸ್ವರ ಉಳಿಯುತ್ತದೆ.

**ಮನ್ಮನಾಮ್**—ಮನ ಜ್ಞಾನೇ ಧಾತು. ಸರ್ವಧಾತುನಿಬಂಧನವಾಗಿ ಮನಿನ್ ಪ್ರತ್ಯಯ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಷಷ್ಠೀಬಹುವಚನಾಂತರೂಪ.

**ಇರಜ್ಯಥಃ**—ಇರಜ್ಯ ಧಾತುವು ಐಶ್ವರ್ಯಕ್ರಿಯಾವಾಚಿಯಾಗಿದೆ. ಲಟ್ ಪ್ರಥಮಪುರುಷದ್ವಿವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ. ॥ ೬ ॥

———— :C: ————

ಸಂಹಿತಾಪಾಠಃ

ಯೋ ವಾಂ ಯಜ್ಞೈಃ ಶಶಮಾನೋ ಹ ದಾಶತಿ ಕವಿರ್ಹೋತಾ ಯಜತಿ
ಮನ್ಮಸಾಧನಃ ।
ಉಪಾಹ ತಂ ಗಚ್ಛಥೋ ವೀಥೋ ಅಧ್ವರಮಚ್ಛಾ ಗಿರಃ ಸುಮತಿಂ ಗಂತ-
ಮಸ್ಮಯೂ ॥ ೭ ॥

ಪದಪಾಠಃ

ಯಃ । ವಾಂ । ಯಜ್ಞೈಃ । ಶಶಮಾನಃ । ಹ । ದಾಶತಿ । ಕವಿಃ । ಹೋತಾ । ಯಜತಿ । ಮನ್ಮಸಾಧನಃ ।

ಉಪ । ಅಹ । ತಂ । ಗಚ್ಛಥಃ । ವೀಥಃ । ಅಧ್ವರಂ । ಅಚ್ಛ । ಗಿರಃ । ಸುಽಮತಿಂ । ಗಂತಂ । ಅಸ್ಮಯೂ

ಇತ್ಯಸ್ಮಽಯೂ ॥ ೭ ॥

ಸಾಯಣಭಾಷ್ಯಂ

ಯೋ ಹ ಯಃ ಖಲು ಯಜಮಾನೋ ವಾಂ ಯುವಾಮುದ್ದಿಶ್ಯ ಯುವಾಭ್ಯಾಂ ವಾ ಯಜ್ಞೈ-ರ್ಯಾಗೈರ್ನಿಮಿತ್ತಭೂತೈಃ ಶಶಮಾನಃ ಶಂಸಮಾನೋ ದಾಶತಿ ಹವಿರಾದಿಕಂ ಸ್ವಸ್ವತ್ವಂ ನಿವರ್ತ್ಯ ಯುಷ್ಮ-ತ್ಸ್ವತ್ವಾಪಾದನಂ ಕರೋತಿ । ಯ ಏವ ಕವಿರನೂಚಾನಃ । ಯೇಽನೂಚಾನಾಸ್ತೇ ಕವಯ ಇತಿ ಶ್ರುತೇಃ । ಅಥವಾ ಕವಿರ್ಮೇಧಾವೀ ಹೋತಾ ಸಮ್ಯಗ್ಘೋಮನಿಷ್ಪಾದಕೋ ಯಜಮಾನೋ ಮನ್ಮಸಾಧನೋ ಮನನೀಯದ್ರವ್ಯದಕ್ಷಿಣಾದಿಸಾಧನೋಪೇತಃ ಸನ್ಯಜತಿ ಸೋಮಯಾಗಾದಿಕಂ ಕರೋತಿ । ತಮೇವ ಯಜಮಾನಂ ಸುಮತಿಂ ಶೋಭನಪ್ರಜ್ಞಮುಪೋಪಲಕ್ಷ್ಯ ಗಚ್ಛಥಃ । ಪ್ರಾಪ್ನುಥಃ ಖಲು । ಅಧ್ವರಂ ತದೀಯಂ ಯಜ್ಞಂ ವೀಥಃ । ಕಾಮಯೇಥೇ । ಕಿಂಚಾಸ್ಮಯೂ ಅಸ್ಮಾನ್ಕಾಮಯಮಾನೌ ಯುವಾಂ ಗಿರಃ ಸ್ತುತೀರಚ್ಛಾಭಿಲಕ್ಷ್ಯ ಗಂತಂ । ಗಚ್ಛತಂ । ತಾದೃಶಂ ಮಾಂ ಪ್ರಾಪ್ಯ ಸ್ತುತೀಃ ಸ್ವೀಕುರುತಮಿತ್ಯರ್ಥಃ । ಅತ್ರ ಯದ್ಯಪಿ ತಮಿತಿ ಸಾಮಾನ್ಯನಿರ್ದೇಶಃ ಪ್ರತಿಭಾತಿ ತಥಾಪ್ಯಸ್ಮಯೂ ಇತ್ಯುಕ್ತತ್ವಾದ್ದೀರ್ಘತಮಾಃ ಸ್ವಾತ್ಮಾನಮೇವ ಪರೋಕ್ಷತಯೋಕ್ತವಾನಿತಿ ಗಮ್ಯತೇ । ಯದ್ವಾ । ಯೋ ದಾಶತಿ ಯಶ್ಚ ಯಜತೇ ತಮುಪೇಕ್ಷ್ಯ ತದೀಯಂ ಯಜ್ಞಂ ಕಾಮಯೇಥೇ । ಅತೋಽಸ್ಮಯೂ ಯುವಾಂ ಸುಮತಿಂ ಮಾಂ ಮದೀಯಾ ಗಿರಃ ಸ್ತುತೀರಚ್ಛಾಭಿಲಕ್ಷ್ಯ ಗಚ್ಛತಂ ॥

ಪ್ರತಿಪದಾರ್ಥ

ಯಃ ಹ—ಯಾವನೇ ಆದರೂ ಯಜಮಾನನು । ವಾಂ—ನಿಮ್ಮಿಬ್ಬರನ್ನೂ ಉದ್ದೇಶಿಸಿ । **ಯಜ್ಞೈಃ**—ಯಜ್ಞಗಳಿಂದ । **ಶಶಮಾನಃ**—ಸ್ತುತಿಸುತ್ತಾ । **ದಾಶತಿ**—ಹವಿಸ್ಸನ್ನು ಅರ್ಪಿಸುತ್ತಾನೆಯೋ, (ಮತ್ತು) । **ಕವಿಃ**—ಮೇಧಾವಿಯೂ । **ಹೋತಾ**—ಹೋಮಸಂಪಾದಕನೂ ಆದ ಯಾವ ಯಜಮಾನನು । **ಮನ್ಮಸಾಧನಃ**—ರಮ್ಯವಾದ ದಕ್ಷಿಣಾದಿಸಾಧನಗಳಿಂದ ಕೂಡಿಕೊಂಡು । **ಯಜತಿ**—ಯಾಗವನ್ನು ಮಾಡುತ್ತಾನೆಯೋ, (ಅಂತಹ) । **ಸುಮತಿಂ** ಶ್ರೇಷ್ಠವಾದ ಪ್ರಜ್ಞಾವಂತನಾದ । **ತಂ ಉಪ**—ಆ ಯಜಮಾನನನ್ನೇ ಉಪಲಕ್ಷಿಸಿ । **ಗಚ್ಛಥಃ**—ಹೋಗಿರಿ । **ಅಧ್ವರಂ**—ಅವನ ಯಜ್ಞವನ್ನು । **ವೀಥಃ**—ಅಪೇಕ್ಷಿಸಿ ಸ್ವೀಕರಿಸಿರಿ (ಅದರಂತೆಯೇ) । **ಅಸ್ಮಯೂ**—ನಮ್ಮನ್ನು ಅನುಗ್ರಹಿಸುತ್ತಾ । **ಗಿರಃ ಅಚ್ಛ**—(ನನ್ನ) ಸ್ತೋತ್ರಗಳನ್ನೂ ಸಹ ಲಕ್ಷಿಸಿ । **ಗಂತಂ**—ದಯಮಾಡಿರಿ (ಅಂಗೀಕರಿಸಿರಿ).

ಭಾವಾರ್ಥ

ಯಾವ ಯಜಮಾನನಾಗಲಿ, ನಿಮ್ಮಿಬ್ಬರನ್ನು ಉದ್ದೇಶಿಸಿ ಯಜ್ಞಗಳಿಂದ ಸ್ತುತಿಸುತ್ತಾ ಹವಿಸ್ಸನ್ನು ಅರ್ಪಿಸುತ್ತಾನೆಯೋ, ಮತ್ತು ಮೇಧಾವಿಯೂ ಹೋಮಸಂಪಾದಕನೂ ಆದ ಯಾವ ಯಜಮಾನನು ರಮ್ಯವಾದ

ದಕ್ಷಿಣಾದಿ ಸಾಧನಗಳಿಂದ ಕೂಡಿಕೊಂಡು ಯಾಗವನ್ನು ಮಾಡುತ್ತಾನೆಯೋ ಅಂತಹ ಶ್ರೇಷ್ಠವಾದ ಪ್ರಜ್ಞಾವಂತನಾದ ಆ ಯಜಮಾನನನ್ನೇ ಉಪಲಕ್ಷಿಸಿ ಹೋಗಿರಿ. ಮತ್ತು ಅವನ ಯಜ್ಞವನ್ನು ಸ್ವೀಕರಿಸಿರಿ ಅದರಂತೆಯೇ ನಮ್ಮನ್ನು ಅನುಗ್ರಹಿಸುತ್ತಾ ನಮ್ಮ ಸ್ತೋತ್ರಗಳನ್ನೂ ಸಹ ಅಂಗೀಕರಿಸಿರಿ.

## English Translation

Come to the devout (worshipper), who, glorifying you, and providing (all that is) acceptable, presents you with oblations; (to him), the sage, the invoker, who offers you worship: accept his sacrifice; favourably disposed towards us, (accept) our praises.

॥ ವಿಶೇಷವಿಷಯಗಳು ॥

**ಶಶಮಾನಃ**—ಈ ಪದವು **ಅರ್ಚತಿ** ಕರ್ಮನಾಮಗಳಲ್ಲಿ ಪಠಿತವಾಗಿದೆ. **ಶಶಮಾನಃ ಶಂಶಮಾನಃ** (ಸ್ತುವನ್) ಎಂದು ನಿರುಕ್ತಕಾರರು ಪ್ರಕೃತವಾದ ಋಕ್ಕನ್ನೇ ಉದಹರಿಸಿ (೬-೮) ಈ ಪದಕ್ಕೆ ಸ್ತುತಿಸುವ ಯಜಮಾನನು ಎಂದರ್ಥಮಾಡಿದ್ದಾರೆ.

**ಮನ್ಮಸಾಧನಃ**—**ಮನ್ಮ** ಪದಕ್ಕೆ ಮನನೀಯ, ಧ್ಯಾನಾತ್ಮಕವಾದುದು, **ಸ್ತುತ್ಯ**ವಾದುದು ಎಂಬರ್ಥಗಳಿರುವುದನ್ನು ಹಿಂದೆ ತಿಳಿಸಿದೆ. **ಮನ್ಮಸಾಧನಃ** ಎಂದರೆ **ಮನನೀಯದ್ರವ್ಯದಕ್ಷಿಣಾದಿಸಾಧನೋಪೇತಃ ಸನ್** ಯಜ್ಞಕಾಲದಲ್ಲಿ ಅತ್ಯವಶ್ಯವಾಗಿ ಬೇಕಾದ ದಕ್ಷಿಣಾದಿ ದ್ರವ್ಯಗಳಿಂದ ಕೂಡಿದ ಯಜಮಾನನೆಂದು ಇಲ್ಲಿ ಅರ್ಥಮಾಡಿದೆ. ಈ ಋಕ್ಕಿನಲ್ಲಿ ಈ ಪದವು ಯಜ್ಞಕರ್ತನಿಗೆ ವಿಶೇಷಣವಾಗಿದೆ.

**ರಾಯೋ ಬುಧ್ನಃ ಸಂಗಮನೋ ವಸೂನಾಂ ಯಜ್ಞಸ್ಯ ಕೇತುರ್ಮನ್ಮಸಾಧನೋ ವೇಃ ।**
**ಅಮೃತತ್ವಂ ರಕ್ಷಮಾಣಾಸ ಏನಂ ದೇವಾ ಅಗ್ನಿಂ ಧಾರಯನ್ ದ್ರವಿಣೋದಾಂ ॥**

(ಋ. ಸಂ ೧-೯೬.೬)

ಎಂಬ ಋಕ್ಕಿನಲ್ಲಿ ಅಗ್ನಿಗೆ ವಿಶೇಷಣವಾಗಿ, **ಮನನೀಯಸ್ಯ ಅಭಿಲಷಿತಸ್ಯ ಸಾಧಯಿತಾ।** ಅಪೇಕ್ಷಿತಗಳಾದ ಅರ್ಥಗಳನ್ನೂ ಸಾಧಿಸಿ ಕೊಡುವವನು ಎಂದರ್ಥವೆಂದು ಹಿಂದೆ ಆ ಋಕ್ಕನ್ನು ವಿವರಿಸುವಾಗ ತಿಳಿಸಿದೆ.

ವ್ಯಾಕರಣಪ್ರಕ್ರಿಯಾ

**ಶಶಮಾನಃ**—ಶಶ ಪ್ಲುತಗತೌ ಧಾತು. ಧಾತುಗಳಿಗೆ ಅನೇಕಾರ್ಥವಿರುವುದರಿಂದ ಇಲ್ಲಿ ಸ್ತುತ್ಯರ್ಥದಲ್ಲಿ ಪ್ರಯುಕ್ತವಾಗಿದೆ. **ತಾಚ್ಛೀಲ್ಯವಯೋವಚನ**—(ಪಾ. ಸೂ. ೩-೨-೧೨೯) ಎಂಬುದರಿಂದ ಚಾನಶ್ ಪ್ರತ್ಯಯ. ಶಪ್ ವಿಕರಣ. **ಆನೇಮುಕ್** (ಪಾ. ಸೂ. ೭-೨-೮೨) ಎಂಬುದರಿಂದ ಮುಕಾಗಮ. **ಚಿತಃ** ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ದಾಶತಿ**—ದಾಶೃ ದಾನೇ ಧಾತು. ಲಟ್ ಪ್ರಥಮಪುರುಷೈಕವಚನಾಂತರೂಪ. **ಯದ್ವೃತ್ತಾನ್ನಿತ್ಯಮ್** ಎಂಬುದರಿಂದ ನಿಘಾತಸ್ವರಪ್ರತಿಷೇಧ ಬರುವುದರಿಂದ ಧಾತುಸ್ವರ ಉಳಿಯುತ್ತದೆ.

**ಕವಿಃ**— ಕು ಶಬ್ದೇ ಧಾತು. **ಅಚೇಇಃ** (ಉ. ಸೂ. ೪-೧೩೮) ಎಂಬುದರಿಂದ ಇ ಪ್ರತ್ಯಯ. **ಸಾರ್ವಧಾತುಕಾರ್ಧಧಾತುಕಯೋಃ** ಎಂಬುದರಿಂದ ಧಾತುವಿನ ಇಕಿಗೆ ಆದಾದೇಶ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಮನ್ಮಸಾಧನಃ**—ಸಾಧ ಸಂಸಿದ್ಧೌ ಧಾತು. ಲ್ಯುಟ್ ಪ್ರತ್ಯಯ. **ಯುವೋರನಾಕೌ** (ಪಾ. ಸೂ. ೭-೧-೧) ಎಂಬುದರಿಂದ ಅದಕ್ಕೆ ಅನಾದೇಶ. **ಲಿತಿ** (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ. ಮನ್ಮ ಸಾಧನಂ ಯಸ್ಯ ಸಃ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

**ಗಚ್ಛಥಃ**— ಗಮುಲೃ ಗತೌ ಧಾತು ಲಟ್ ಮಧ್ಯಮಪುರುಷದ್ವಿವಚನಾಂತರೂಪ. ಅಹ ಎಂಬುದು ಹಿಂದೆ ಇರುವುದರಿಂದ **ಅಹೇತಿವಿನಿಯೋಗೇ ಚ** (ಪಾ. ಸೂ. ೮-೧-೬೧) ಎಂಬುದರಿಂದ ನಿಘಾತಪ್ರತಿಷೇಧ ಬರುವುದರಿಂದ ಧಾತುಸ್ವರ ಉಳಿಯುತ್ತದೆ. ಲಸಾರ್ವಧಾತುಕವು **ತಾಸ್ಯನುದಾತ್ತೇತ್** ಸೂತ್ರದಿಂದ ಅನುದಾತ್ತವಾಗುತ್ತದೆ.

**ವೀಥಃ**— ವೀ ಗತ್ಯಾದಿಷು. ಅದಾದಿ ಇಲ್ಲಿ ಇಚ್ಛಾರ್ಥದಲ್ಲಿ ಪ್ರಯುಕ್ತವಾಗಿದೆ. ಲಟ್ ಮಧ್ಯಮಪುರುಷ ದ್ವಿವಚನಾಂತರೂಪ. ತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

ಅಚ್ಛ——**ನಿಪಾತಸ್ಯ ಚ** (ಪಾ. ಸೂ. ೬-೩-೧೩೬) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

**ಸುಮತಿಮ್**—ಶೋಭನಾ ಮತಿಃ ಯಸ್ಯ ಸಃ ಸುಮತಿಃ ತಮ್ **ನಞ್ಸುಭ್ಯಾಮ್** (ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ.

**ಗಂತವ್**--ಗಮುಲೃ ಗತೌ ಧಾತು ಲೋಟ್ ಮಧ್ಯಮಪುರುಷದ್ವಿವಚನದಲ್ಲಿ ಲಙ್ವದ್ಭಾವವಿರುವುದರಿಂದ ತಮಾದೇಶ, **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಲುಕ್. ಛಾಂದಸವಾಗಿ ಅನುನಾಸಿಕಲೋಪ ಬರುವುದಿಲ್ಲ. ತಿಙಂತನಿಘಾತಸ್ವರ ಬರುತ್ತದೆ.

**ಅಸ್ಮಯೂ**—ಅಸ್ಮಾನ್ ಆತ್ಮನಃ ಇಚ್ಛತಿ ಇತಿ ಎಂದು ಅರ್ಥವಿವಕ್ಷಾಮಾಡಿದಾಗ **ಸುಪ ಆತ್ಮನಃ ಕ್ಯಚ್** (ಪಾ. ಸೂ. ೩-೧-೮) ಎಂಬುದರಿಂದ ಕ್ಯಜಂತದ ಮೇಲೆ **ಕ್ಯಾಚ್ಛಂದಸಿ** (ಪಾ. ಸೂ. ೩-೨-೧೭೦) ಎಂಬುದರಿಂದ ಉ ಪ್ರತ್ಯಯ **ಅತೋಲೋಪಃ** ಎಂಬುದರಿಂದ ಕ್ಯಚಿನ ಅಕಾರಕ್ಕೆ ಲೋಪ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ದ್ವಿವಚನಾಂತರೂಪ. ||೭||



ಸಂಹಿತಾಪಾಠಃ

ಯುವಾಂ ಯಜ್ಞೈಃ ಪ್ರಥಮಾ ಗೋಭಿರಂಜತ ಋತಾವಾನಾ ಮನಸೋ

ನ ಪ್ರಯುಕ್ತಿಷು ।

ಭರಂತಿ ವಾಂ ಮನ್ಮನಾ ಸಂಯತಾ ಗಿರೋಽದೃಪ್ಯತಾ ಮನಸಾ ರೇವದಾ-
ಶಾಥೇ ॥ ೮ ॥

ಪದಪಾಠಃ

ಯುವಾಂ । ಯಜ್ಞೈಃ । ಪ್ರಥಮಾ । ಗೋಭಿಃ । ಅಂಜತೇ । ಋತಽವಾನಾ । ಮನಸಃ । ನ । ಪ್ರಽಯು-
ಕ್ತಿಷು ।

ಭರಂತಿ । ವಾಂ । ಮನ್ಮನಾ । ಸಂಽಯತಾ । ಗಿರಃ । ಅದೃಪ್ಯತಾ । ಮನಸಾ । ರೇವತ್ । ಆಶಾಥೇ ಇತಿ ।
॥ ೮ ॥

। ಸಾಯಣಭಾಷ್ಯಂ ॥

ಹೇ ಋತಾವಾನಾ ಯಜ್ಞವಂತೌ ವೃಷ್ಟ್ಯುದಕವಂತೌ ವಾ ಮಿತ್ರಾವರುಣೌ ಯುವಾಂ ಪ್ರಥಮಾ ಪ್ರಥಮೌ ಯಜ್ಞೈರ್ಯಜನಸಾಧನೈರ್ಗೋಭಿರ್ಗೋವಿಕಾರೈಃ ಪಯಆದಿಭಿರಂಜತೇ । ವ್ಯಂಜಯಂತಿ ಯಜಮಾನಾಃ । ದೇವಭಾಗಂ ಯಾಗೇಷು ಕ್ಷೀರಾದಿಭಿರ್ಯಜಂತ ಇತ್ಯರ್ಥಃ । ಯದ್ವಾ । ಗೋಭಿ-ರಂಜತೇ । ಸ್ತುವಂತಿ । ತತ್ರ ದೃಷ್ಟಾಂತಃ । ಪ್ರಯುಕ್ತಿಷು ಪ್ರಯೋಗೇಷು ಮನಸೋ ನ ॥ ಕರ್ಮಣಿ ಷಷ್ಠೀ ॥ ಮನ ಇವ । ತದ್ಯಥಾ ಪ್ರಥಮಂ ವ್ಯಂಜಯಂತಿ ಮುಖ್ಯಂ ಕುರ್ವಂತಿ ತತ್ಪೂರ್ವಕತ್ವಾತ್ಸರ್ವ-ವ್ಯವಹಾರಸ್ಯ । ಕಿಂ ಚ ವಾಂ ಯುವಾಂ ಮನ್ಮನಾ ಮನನವತಾ ಸಂಯತಾ ಯುವಾಮೇವ ಸಮ್ಯಗ್ಗಚ್ಛತಾ ಚಿತ್ತೇನ ಗಿರಃ ಸ್ತುತೀರ್ಭರಂತಿ । ಸಂಪಾದಯಂತಿ । ಯಸ್ಮಾದೇವಂ ತಸ್ಮಾದದೃಪ್ಯತಾನಭಿಭವತಾ ಮನಸಾ ಪ್ರಕೃಷ್ಟೇನ ಚೇತಸಾ ಯುಕ್ತೌ ಸಂತೌ ರೇವದ್ಧನವತ್ಕರ್ಮಾಸ್ಮದೀಯಮಾಶಾಥೇ । ಅಶ್ನು-ವಾಥೇ । ವ್ಯಾಪ್ನುಥಃ । ದದಾಥೇ ಇತ್ಯರ್ಥಃ । ಅಶ್ನೋತೇರ್ಲಿಟ್ಯನಿತ್ಯಮಾಗಮಶಾಸನಮಿತಿ ವಚನಾದಿಡ-ಭಾವಃ ॥

ಪ್ರತಿಪದಾರ್ಥ

ಋತಾವಾನಾ—ಯಜ್ಞವನ್ನು ಸ್ವೀಕರಿಸುವ ಅಥವಾ ವೃಷ್ಟ್ಯುದಕಗಳಿಗೆ ಒಡೆಯರಾದ ಮಿತ್ರಾವರುಣರೇ। **ಪ್ರಯುಕ್ತಿಷು**—(ಇಂದ್ರಿಯಗಳ ಮೂಲಕ ಯಾವ ಕೆಲಸವನ್ನಾಗಲಿ) ಪ್ರಯೋಗಕ್ಕೆ ತರಬೇಕಾದಾಗ । **ಮನಸೋ ನ**—(ಒಳ್ಳೆಯದು ಅಥವಾ ಕೆಟ್ಟದು ಎಂಬ ವಿವೇಚನೆಗಾಗಿ) ಮನಸ್ಸಿಗೆ ಪ್ರಥಮ ಪ್ರಾಶಸ್ತ್ಯವನ್ನು ಕೊಡುವಂತೆ । **ಯುವಾಂ**—ನಿಮ್ಮಿಬ್ಬರನ್ನೂ । **ಯಜ್ಞೈಃ**—ಯಜ್ಞಸಾಧನಗಳಾದ । **ಗೋಭಿಃ**—ಕ್ಷೀರಾದಿಗಳಿಂದ । **ಪ್ರಥಮಾ**—ಮುಖ್ಯರನ್ನಾಗಿ ಮಾಡಿ (ಅಗ್ರಸ್ಥಾನದಲ್ಲಿರಿಸಿ) । **ಅಂಜತೇ**—(ಯಜಮಾನರು) ಪೂಜಿಸುತ್ತಾರೆ । (ಮತ್ತು) **ವಾಂ**—ನಿಮ್ಮನ್ನು । **ಮನ್ಮನಾ**—ಶ್ರದ್ಧಾಪೂರ್ವಕವಾದ ಧ್ಯಾನದಿಂದ । **ಸಂಯತಾ**—ಕೂಡಿಕೊಳ್ಳುವ ಮನಸ್ಸಿನಿಂದ । **ಗಿರಃ**—ಸ್ತೋತ್ರಗಳನ್ನು । **ಭರಂತಿ**—ಸಂಪಾದಿಸುತ್ತಾರೆ । (ಆದುದರಿಂದ) **ಅದೃಪ್ಯತಾ**—ಸಿಟ್ಟಿಲ್ಲದೇ (ಅನುಗ್ರಹ ಪೂರ್ವಕವಾದ) **ಮನಸಾ**—ಮನಸ್ಸಿನಿಂದ । **ರೇವತ್**—ಧನಯುಕ್ತವಾದ ಕರ್ಮವನ್ನು । **ಆಶಾಥೇ** ವ್ಯಾಪಿಸಿ ಕೊಡಿರಿ

ಭಾವಾರ್ಥ

ಯಜ್ಞ ಸ್ವೀಕಾರಕ್ಕೆ ಯೋಗ್ಯರಾದ ಮಿತ್ರಾವರುಣರೇ, ಯಾವ ಕೆಲಸವನ್ನು ಮಾಡಬೇಕಾದರೂ ಸಹ ಒಳ್ಳೆಯದು ಅಥವಾ ಕೆಟ್ಟದ್ದು ಎಂಬ ವಿಮರ್ಶೆಮಾಡುವ ಮನಸ್ಸಿಗೆ ಪ್ರಥಮ ಪ್ರಾಶಸ್ತ್ಯವನ್ನು ಕೊಡುವಂತೆ ನಿಮ್ಮಿಬ್ಬರನ್ನು ಸಹ ಯಜಮಾನನು ಅಗ್ರಸ್ಥಾನದಲ್ಲಿರಿಸಿ ಪ್ರಥಮದಲ್ಲಿ ಪೂಜಿಸುತ್ತಾರೆ. ಮತ್ತು ನಿಮ್ಮನ್ನು ಶ್ರದ್ಧಾಪೂರ್ವಕವಾದ ಧ್ಯಾನದಿಂದ ಕೂಡಿಕೊಳ್ಳುವ ಮನಸ್ಸಿನಿಂದ ಸ್ತೋತ್ರಗಳನ್ನು ನಿರ್ಮಿಸುತ್ತಾರೆ. ಆದುದರಿಂದ ನೀವಿಬ್ಬರೇ ಅನುಗ್ರಹ ಪೂರ್ವಕವಾದ ಮನಸ್ಸಿನಿಂದ ಅವರಿಗೆ ಧನಯುಕ್ತವಾದ ಕರ್ಮವನ್ನು ಹೊಂದಿಸಿ ಕೊಡಿರಿ.

## English Translation

Accepters of sacrifices, you are the first whom (worshippers) propiate with offerings, the produce of the cow, like (the application) of the mind (in the first instance) to the results (of the senses), hymns (prompted) by thoughts wholly intent upon you, celebrate (your praise): do you with humble minds, bestow upoo us wealth.

ವಿಶೇಷವಿಷಯಗಳು

ಋತಾವಾನಾ—ಯಜ್ಞವಂತೌ ವೃಷ್ಟ್ಯುದಕವಂತೌ ವಾ ಮಿತ್ರಾವರುಣೌ ಯಜ್ಞವುಳ್ಳವರು ಅಥವಾ ವೃಷ್ಟ್ಯುದಕಗಳಿಗೆ ಒಡೆಯರಾದ ಎಂದು ಮಿತ್ರಾವರುಣರನ್ನು ಸಂಬೋಧಿಸಿದೆ.

ಅಧಾರಯತಂ ಪೃಥಿವೀಮುತ ದ್ಯಾಂ ಮಿತ್ರರಾಜಾನಾ ವರುಣಾ ಮಹೋಭಿಃ ।
ವರ್ಧಯತಮೋಷಧೀಃ ಪಿನ್ವತಂ ಗಾ ಅವ ವೃಷ್ಟಿಂ ಸೃಜತಂ ಜೀರದಾನೂ ॥
(ಋ. ಸಂ. ೫-೬೨-೩)

ಋತಸ್ಯ ಗೋಪಾವಧಿ ತಿಷ್ಠಥೋ ರಥಂ ಸತ್ಯಧರ್ಮಾಣಾ ಪರಮೇ ವ್ಯೋಮನಿ ।
ಯಮತ್ರ ಮಿತ್ರಾವರುಣಾವಥೋ ಯುವಂ ತಸ್ಮೈ ವೃಷ್ಟಿರ್ಮಧುಮತ್ಪಿನ್ವತೇ ದಿವಃ ॥
(ಋ. ಸಂ. ೫-೬೩-೧)

ಇತ್ಯಾದಿ ಋಕ್ಕುಗಳಲ್ಲಿ ಮಿತ್ರಾವರುಣರೇ ವೃಷ್ಟ್ಯಧಿದೇವತೆಗಳೆಂದೂ, ಅವರೇ ವೃಷ್ಟಿಯನ್ನು ಸುರಿಸಿ ಲೋಕವನ್ನು ರಕ್ಷಿಸಬೇಕೆಂದೂ ಪ್ರಾರ್ಥಿಸಿದೆ. ಇಲ್ಲಿಯೂ ಅಂತಹ ವೃಷ್ಟ್ಯಧಿದೇವತೆಗಳಾದ ಮಿತ್ರಾವರುಣರನ್ನು ಸಹಾಯಕ್ಕಾಗಿ ಪ್ರಾರ್ಥಿಸಿದೆ.

ಗೋಭಿಃ—ಗೋವಿಕಾರೈಃ ಪಯಆದಿಭಿಃ । ಗೋವಿಕಾರವಾದ ಕ್ಷೀರಾದಿಗಳಿಗೂ ಗೋ ಶಬ್ದವೇ ಉಪಯೋಗಿಸಲ್ಪಟ್ಟಿದೆ. ನಿರುಕ್ತಕಾರರು ಗೋ ಶಬ್ದಕ್ಕೆ ಪೃಥಿವೀ (೨-೫), ಆದಿತ್ಯ (೨-೬) ಇತ್ಯಾದ್ಯರ್ಥಗಳಿರುವುದೆಂದು ತೋರಿಸಿದ್ದಾರೆ. ಪ್ರಕೃತದಲ್ಲಿ ಗೋ ಶಬ್ದಕ್ಕೆ ಧೇನುವೂ ಅದರಿಂದ ಲಭಿಸತಕ್ಕ ಕ್ಷೀರಾದಿಗಳೂ ಮುಖ್ಯವಾದ ಅರ್ಥವೆಂದು ತಿಳಿಯಬೇಕು. ನಿರುಕ್ತದಲ್ಲಿ,

ಆ ಧಾವತಾ ಸುಹಸ್ತ್ಯಃ ಶುಕ್ರಾ ಗೃಭ್ಣೀತ ಮಂಥಿನಾ । ಗೋಭಿಃ ಶ್ರೀಣೀತ ಮತ್ಸರಂ ॥
(ಋ. ಸಂ. ೯-೪೬-೪)

ಎಂಬ ಋಕ್ಕನ್ನು ದಸರಿಸಿ ಅಲ್ಲಿ **ಗೋಭಿಃ** ಎಂದರೆ **ಗೋಭ್ಯಃ ಅಭಿನಿಷ್ಪನ್ನೇನ ಕ್ಷೀರೇಣ** ಎಂದರ್ಥಮಾಡಿರುವಂತೆ ಪ್ರಕೃತವಾದ ಋಕ್ಕಿನಲ್ಲಿಯೂ ಗೋವಿಕಾರವಾದ ಕ್ಷೀರಾದಿಗಳಿಂದ ಎಂದರ್ಥ.

ಅಂಜತೇ—**ವ್ಯಂಜಯಂತಿ** । ಪ್ರಕಟಿಸುತ್ತಾರೆ. ಯಜ್ಞಕರ್ತರು ಪೂಜಾದಿಗಳಿಂದ ತಮ್ಮ ಭಕ್ತಿಯನ್ನು ಪ್ರಕಾಶಗೊಳಿಸುತ್ತಾರೆಂದರ್ಥ. ಈ ಪದಕ್ಕೆ ನಿಷ್ಕೃಷ್ಟವಾದ ಅರ್ಥವು,

**ಏತಾ ಉತ್ಯಾ ಉಷಸಃ ಕೇತುಮಕ್ರತ ಪೂರ್ವೇ ಅರ್ಧೇ ರಜಸೋ ಭಾನುಮಂಜತೇ ।**
**ನಿಷ್ಕೃಣ್ವಾನಾ ಆಯುಧಾನೀವ ಧೃಷ್ಣವಃ ಪ್ರತಿ ಗಾವೋಽರುಷೀರ್ಯಂತಿ ಮಾತರಃ ॥**
(ಋ. ಸಂ- ೧-೯೨-೧)

ಎಂಬ ಋಕ್ಕಿನಲ್ಲಿ ರಜಸೋ **ಭಾನುಮಂಜತೇ** ಎನ್ನುವುದರಿಂದ ಉಷಸ್ಸು ತನ್ನ ಪ್ರಭೆಯಿಂದ ಅಂತರಿಕ್ಷವನ್ನೆಲ್ಲಾ ಪ್ರಕಾಶಗೊಳಿಸುತ್ತಾಳೆ ಎಂಬ ವರ್ಣನೆಯಿಂದ ಸರಿಯಾಗಿ ತಿಳಿಯುವುದು. ಆದರಂತೆಯೇ ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಪೂಜಾಸಾಧನಗಳಿಂದ ಅಂತಸ್ಥವಾದ ಭಕ್ತಿಯನ್ನು ವ್ಯಕ್ತಪಡಿಸುತ್ತಾರೆಂದು ತಾತ್ಪರ್ಯ.

ವ್ಯಾಕರಣಪ್ರಕ್ರಿಯಾ

**ಪ್ರಥಮಾ**—ಪ್ರಥ ಪ್ರಖ್ಯಾನೇ ಧಾತು. **ಪ್ರಥೇರಮಚ್** (ಉ. ಸೂ. ೫-೭೪೬) ಎಂಬುದರಿಂದ ಅಮಚ್ ಪ್ರತ್ಯಯ. **ಚಿತಃ** ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ದ್ವಿವಚನ ಔ ಪರವಾದಾಗ **ಸುಪಾಂ ಸುಲುಕ್** (ಪಾ. ಸೂ. ೭-೧-೩೯) ಎಂಬುದರಿಂದ ಅದಕ್ಕೆ ಆಕಾರಾದೇಶ.

**ಅಂಜತೇ**—ಅಂಜೂ ವ್ಯಕ್ತಿಮ್ರಕ್ಷಣಕಾಂತಿಗತಿಷು. ಧಾತು. ಲಟ್ ಪ್ರಥಮಪುರುಷಬಹುವಚನಾಂತ ರೂಪ. ಅತಿಜಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಋತವಾನಾ**—**ಛಂದಸೀವನಿಪೌ** ಎಂಬುದರಿಂದ ಮತ್ವರ್ಥದಲ್ಲಿ ವನಿಪ್ ಪ್ರತ್ಯಯ. **ಅನ್ಯೇಷಾಮಪಿ ದೃಶ್ಯತೇ** (ಪಾ. ಸೂ ೬-೩-೧೩೭) ಎಂಬುದರಿಂದ ಪೂರ್ವಕ್ಕೆ ದೀರ್ಘ. ದ್ವಿವಚನ ಪರವಾದಾಗ **ಸುಪಾಂ ಸುಲುಕ್** (ಪಾ ಸೂ. ೭-೧-೩೯) ಎಂಬುದರಿಂದ ಆಕಾರಾದೇಶ.

**ಪ್ರಯುಕ್ತಿಷು**—ಯುಜಿರ್ ಯೋಗೇ ಧಾತು. **ಸ್ತ್ರಿಯಾಂ ಕ್ತಿನ್** ಎಂಬುದರಿಂದ ಭಾವಾರ್ಥದಲ್ಲಿ ಕ್ತಿನ್ ಪ್ರತ್ಯಯ. **ಚೋಃಕುಃ** ಎಂಬುದರಿಂದ ಧಾತುಜಕಾರಕ್ಕೆ ಕುತ್ವ. ಚರ್ತ್ವ. **ತಾದೌ ಚ ನಿತಿ** (ಪಾ. ಸೂ. ೬-೨-೫೦) ಎಂಬುದರಿಂದ ಪೂರ್ವದ ಗತಿಗೆ ಉದಾತ್ತಸ್ವರ ಬರುತ್ತದೆ.

**ಭರಂತಿ**—ಭೃಞ್ ಭರಣೇ. ಧಾತು. ಭ್ವಾದಿ. ಲಟ್ ಪ್ರಥಮಪುರುಷ ಬಹುವಚನಾಂತರೂಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಲಸಾರ್ವಧಾತುಕ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ. ಅಂತರ್ಭಾವಿತಣ್ಯರ್ಥಕವಾದ ಧಾತು.

**ಸಂಯತಾ**—ಯತೀ ಪ್ರಯತ್ನೇ ಧಾತು. **ಕ್ವಿಪ್ ಚ** ಎಂಬುದರಿಂದ ಕ್ವಿಪ್ ಪ್ರತ್ಯಯ ತೃತೀಯಾಏಕವಚನಾಂತರೂಪ. **ಗತಿಕಾರಕೋಪಪದಾತ್ ಕೃತ್** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಅದೃಪ್ಯತಾ**—ನ ದೃಪ್ಯತ್ ಅದೃಪ್ಯತ್ ತೇನ. ದೃಪ ಹರ್ಷಮೋಹನಯೋಃ ಧಾತು. ಮೋಹನಂ ಗರ್ವಃ ಇದಕ್ಕೆ ಲಡರ್ಥದಲ್ಲಿ ಶತೃ ಪ್ರತ್ಯಯ. **ತತ್ಪುರುಷೇ ತುಲ್ಯಾರ್ಥ** ಎಂಬುದರಿಂದ ನಞ್‌ಪ್ರಕೃತಿಸ್ವರ ಬರುತ್ತದೆ. ತೃತೀಯಾಏಕವಚನಾಂತರೂಪ.

**ರೇವತ್**—ರಯಿಃ ಅಸ್ಯ ಅಸ್ತಿ ಇತಿ ರೇವತ್. **ರಯೇರ್ಮತೌ ಬಹುಲಮ್** ಎಂಬ ವಚನದಿಂದ ಮತುಪ್ ಪರವಾದಾಗ ಸಂಪ್ರಸಾರಣ. **ನ ಸಂಪ್ರಸಾರಣೇ ಸಂಪ್ರಸಾರಣಮ್** ಎಂಬುದರಿಂದ ಯಕಾರಕ್ಕೆ ಸಂಪ್ರಸಾರಣ ಇಕಾರ ಬರುತ್ತದೆ. ಗುಣ. **ರೇಶಬ್ದಾಚ್ಚ** (ಪಾ ಸೂ. ೬-೧-೧೭೬-೧) ಎಂಬುದರಿಂದ ಮತುಪಿಗೆ ಉದಾತ್ತಸ್ವರ ಬರುತ್ತದೆ.

**ಆಶಾಥೇ**—ಅಶೂ ವ್ಯಾಪ್ತೌ ಧಾತು. ಲಿಟ್ ಮಧ್ಯಮಪುರುಷದ್ವಿವಚನದಲ್ಲಿ ಆಥಾಮ್ ಪ್ರತ್ಯಯ ಟಿಗೆ ಏತ್ವ. **ಆಗಮಾನುಶಾಸನಮನಿತ್ಯಮ್** ಎಂಬ ವಚನದಿಂದ ದ್ವಿತ್ವ ಬಂದಾಗ ನುಡಾಗಮ ಬರುವುದಿಲ್ಲ. ಅತಿ ಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೮ ॥

———:O:———

ಸಂಹಿತಾಪಾಠಃ

ರೇವದ್ವಯೋ ದದಾಥೇ ರೇವದಾಶಾಥೇ ನರಾ ಮಾಯಾಭಿರಿತಊತಿ ಮಾಹಿನಂ ।
ನ ವಾಂ ದ್ಯಾವೋಽಹಭಿರ್ನೋತ ಸಿಂಧವೋ ನ ದೇವತ್ವಂ ಪಣಯೋ ನಾನಶುರ್ಮಘಂ ॥ ೯ ॥

। ಪದಪಾಠಃ ।

ರೇವತ್ । ವಯಃ । ದದಾಥೇ ಇತಿ । ರೇವತ್ । ಆಶಾಥೇ ಇತಿ । ನರಾ । ಮಾಯಾಭಿಃ । ಇತಃಊತಿ । ಮಾಹಿನಂ ।
ನ । ವಾಂ । ದ್ಯಾವಃ । ಅಹಃಭಿಃ । ನ । ಉತ । ಸಿಂಧವಃ । ನ । ದೇವಃತ್ವಂ । ಪಣಯಃ । ನ । ಆನಶುಃ । ಮಘಂ ॥ ೯ ॥

### ಸಾಯಣಭಾಷ್ಯಂ

ಹೇ ಮಿತ್ರಾವರುಣೌ ಯುವಾಂ ರೇವದ್ಧನವದ್ವಯೋಽನ್ನಂ ದಧಾಥೇ । ಉಭಯಂ ಚ ಧಾರಯಥಃ । ಯಸ್ಮಾದೇವಂ ತಸ್ಮಾದ್ರೇವದ್ಧನವತ್ । ಸಹದೃಷ್ಟತ್ವಾದ್ವಯ ಇತಿ ಗಮ್ಯತೇ । ಧನವಿಶಿಷ್ಟಮನ್ನಂ ಹೇ ನರಾ ನೇತಾರೌ ಯುವಾಮಾಶಾಥೇ । ಅಶ್ನುವಾಥೇ । ಅಸ್ಮಭ್ಯಂ ದದಾಥೇ ಇತ್ಯರ್ಥಃ । ಕೀದೃಶಂ । ಮಾಯಾಭಿರ್ಯುವಯೋಃ ಪ್ರಜ್ಞಾಭಿರಿತಊತೀತೋಽಸ್ಮದಭಿಮುಖಂ ಗಮನವತ್ ಇತೋ ರಕ್ಷಣವದ್ವಾ ಮಾಹಿನಂ । ಮಹನ್ನಾಮೈತತ್ । ಅತಿಮಹತ್ । ಈದೃಶೋರ್ಯುವಯೋರೇತಾದೃಶಂ ಸಾಮರ್ಥ್ಯಂ ಕುತ ಇತ್ಯತ ಆಹ । ವಾಂ ಯುವಯೋರ್ದೇವತ್ವಮಹಭಿರಹೋಭೀ ರಾತ್ರಿಭಿಃ । ಅತ್ರಾಹಃಶಬ್ದೇನ ರಾತ್ರಿರಭಿಧೀಯತೇ ದ್ಯೋಶಬ್ದೇನಾಹಃಪೃಥಗಭಿಧಾನಾತ್ । ತಾಭಿಃ ಸಹಿತಾ ದ್ಯಾವೋ ದಿವಸಾ ನಾನಶುಃ । ನ ಪ್ರಾಪ್ನುವಂತಿ । ಅಹಶ್ಚ ರಾತ್ರಿಶ್ಚೋಭೇ ನ ತರತ ಇತ್ಯರ್ಥಃ । ಉತಾಪಿ ಚ ಸಿಂಧವಃ ಸ್ಯಂದನಶೀಲಾ ನದ್ಯೋ ನ ಚೈವಾನಶುಃ । ತಥಾ ಯುವಯೋರ್ದೇವತ್ವಂ ಪಣಯೋಽಸುರಾ ಅಪಿ ನಾನಶುಃ । ಮಘಂ ಧನಂ ಚ ನಾನಶಿರೇ । ಲೋಕತ್ರಯೇ ಯುವಯೋಃ ಪರಾಭವಿತಾರೋ ನ ಕೇಽಪಿ ಸಂತೀತ್ಯರ್ಥಃ ॥

### ಪ್ರತಿಪದಾರ್ಥ

(ಎಲೈ ಮಿತ್ರಾವರುಣರೇ) **ರೇವತ್**—ಧನಯುಕ್ತವಾದ । **ವಯಃ**—ಅನ್ನವನ್ನು । **ದಧಾಥೇ**—ಹೊಂದಿದ್ದೀರಿ (ಆದುದರಿಂದ) **ನರಾ**—ಮಾರ್ಗದರ್ಶಕರಾದ ನೀವು । **ಮಾಯಾಭಿಃ**—ನಿಮ್ಮ ಪ್ರಜ್ಞೆಗಳಿಂದ । **ಇತಊತಿ**—ನಿಮ್ಮ ರಕ್ಷಣೆಯೊಡನೆ ನಮ್ಮಲ್ಲಿಗೆ ಬರುತ್ತಿರುವುದೂ । **ಮಾಹಿನಂ**—ಮಹತ್ತಾದುದೂ । **ರೇವತ್**—ಧನಯುಕ್ತವಾದುದೂ ಆದ ಅನ್ನವನ್ನು । **ಆಶಾಥೇ**—(ನಮಗೆ) ಒದಗಿಸಿಕೊಡಿರಿ । **ವಾಂ**—ನಿಮ್ಮಿಬ್ಬರ । **ದೇವತ್ವಂ**—ದಿವ್ಯವಾದ ಪೂಜ್ಯತ್ವವನ್ನು । **ಅಹಭಿಃ**—ರಾತ್ರಿಗಳೊಡನೆ ಕೂಡಿರುವ । **ದ್ಯಾವಃ**—ಹಗಲುಗಳು । **ನ ಆನಶುಃ**—ಹೊಂದಿರುವುದಿಲ್ಲ । **ಉತ**—ಮತ್ತು । **ಸಿಂಧವಃ**—ನದಿಗಳೂ । **ನ**—ಹೊಂದಿರುವುದಿಲ್ಲ । **ಪಣಯಃ**—ಅಸುರರೂ ಕೂಡ । **ನ**—ಹೊಂದಿರುವುದಿಲ್ಲ (ಅಲ್ಲದೇ) । **ಮಘಂ**—(ನಮ್ಮಲ್ಲಿರುವ) ಧನವನ್ನೂ ಸಹ ಹೊಂದಿರುವುದಿಲ್ಲ.

### ॥ ಭಾವಾರ್ಥ ॥

ಎಲೈ ಮಿತ್ರಾವರುಣರೇ, ನೀವು ಧನಯುಕ್ತವಾದ ಅನ್ನಕ್ಕೆ ಅಧಿಪತಿಗಳಾಗಿದ್ದೀರಿ. ಆದುದರಿಂದ ಯಜ್ಞಕ್ಕೆ ಮಾರ್ಗದರ್ಶಕರಾದ ನೀವು ನಿಮ್ಮ ಪ್ರಜ್ಞೆಗಳ ನೆರವಿನೊಡನೆಯೂ ನಿಮ್ಮ ರಕ್ಷಣೆಯೊಡನೆಯೂ ನಮ್ಮಲ್ಲಿಗೆ ಬರುತ್ತಿರುವುದೂ ಮಹತ್ತಾದುದೂ ಮತ್ತು ಧನಯುಕ್ತವಾದುದೂ ಆದ ಅನ್ನವನ್ನು ನಮಗೆ ಒದಗಿಸಿಕೊಡಿರಿ. ನಿಮ್ಮಿಬ್ಬರ ದಿವ್ಯವಾದ ಪೂಜ್ಯತ್ವವನ್ನು ಹಗಲು ಅಥವಾ ರಾತ್ರಿಗಳಾಗಲಿ, ಪ್ರವಹಿಸುವ ನದಿಗಳಾಗಲಿ ಅಥವಾ ಅಸುರರಾಗಲಿ ಹೊಂದಿರುವುದಿಲ್ಲ. ನಿಮ್ಮ ಧನವನ್ನು ಸಹ ಅವು ಹೊಂದಿರುವುದಿಲ್ಲ. ನಿಮ್ಮನ್ನು ಮೀರಿಸುವವರು ಮೂರುಲೋಕದಲ್ಲಿಯೇ ಇರುವುದಿಲ್ಲ

### English Translation

You distribute food, accompanied by riches; you bestow upon us, leaders (of sacrifice); wealth, ample, and defended by your wise provisions

the days with the nights have not attained your divinity; neither have the rivers, nor have the Asuras, and they have not obtained (your) wealth.

ವಿಶೇಷವಿಷಯಗಳು

**ಮಾಯಾಭಿಃ**—**ಮಾಯೇತಿ ಪ್ರಜ್ಞಾನಾಮ । ಮಾಯಾ, ವಯುನಂ ಇತಿ ತನ್ನಾಮಸು ಪಾಠಾತ್.** (ನಿ. ೩-೯) ಎಂದು ನಿರುಕ್ತಕಾರರು **ಮಾಯಾಮೂ ತು ಯಜ್ಞಿಯಾನಾಂ** (೧೦-೮೮-೬) ಎಂಬ ಋಕ್ಕನ್ನುದಹರಿಸಿ **ಸ ಏವ ಪ್ರಜ್ಞಾಂ ತ್ವೇತಾಂ ಮನ್ಯಂತೇ ।** ಎಂದು ವಿವರಿಸಿ **ಮಾಯಾ** ಎಂಬ ಪದಕ್ಕೆ ಪ್ರಜ್ಞೆ ಎಂಬ ಅರ್ಥವೆಂದು ತಿಳಿಸಿದ್ದಾರೆ. (ನಿ. ೭-೨೭). ಅಲ್ಲದೇ.

**ಶುಕ್ರಂ ತೇ ಅನ್ಯದ್ಯಜತಂ ತೇ ಅನ್ಯದ್ವಿಷುರೂಪೇ ಅಹನೀ ದ್ಯೌರಿವಾಸಿ ।**
**ವಿಶ್ವಾ ಹಿ ಮಾಯಾ ಅವಸಿ ಸ್ವಧಾವೋ ಭದ್ರಾ ತೇ ಪೂಷನ್ನಿಹ ರಾತಿರಸ್ತು ॥**

(ಋ. ಸಂ. ೬-೫೮-೧)

ಎಂಬ ಋಕ್ಕನ್ನುದಹರಿಸಿ (ನಿ. ೧೨-೧೭) ಇಲ್ಲಿಯೂ ಸಹ ಮಾಯಾ ಶಬ್ದಕ್ಕೆ ಪ್ರಜ್ಞೆಯೆಂದೇ ಅರ್ಥಮಾಡಿದ್ದಾರೆ.

ಈ ಪದವು ಋಕ್ಸಂಹಿತೆಯಲ್ಲಿ ಸುಮಾರು ತ್ತೊಂಭತ್ತುಸಲ ಪ್ರಯೋಗಿಸಲ್ಪಟ್ಟಿದೆ. ಈ ಪದವು ನಾಲ್ಕು ಮುಖ್ಯವಾದ ಅರ್ಥಗಳಲ್ಲಿ ಉಪಯೋಗಿಸಲ್ಪಟ್ಟಿರುವುದಾಗಿ ಸ್ಥೂಲವಾಗಿ ಹೇಳಬಹುದು. ಅಲೌಕಿಕವಾದ ಸೃಷ್ಟಿ ಶಕ್ತಿಯೆಂದೂ, ಕೇವಲ ಭೌತಿಕವಾದ ಶಕ್ತಿಯೆಂದೂ ಅಥವಾ ಕುತಂತ್ರನೆಂದೂ ಅಥವಾ ಇಂದ್ರಜಾಲ ವಿದ್ಯೆಯೆಂದೂ ಸಹ ನಾಲ್ಕು ವಿಧವಾಗಿ ಅರ್ಥಮಾಡಬಹುದು. ಸೃಷ್ಟ್ಯರ್ಥಕವಾದ **ಮಾ** ಧಾತುವಿನಿಂದ ನಿಷ್ಪನ್ನವಾಗಿದೆಯೆನ್ನಬಹುದು.

ಈ ಪದವು ಮಿತ್ರಾವರುಣರ ವಿಶೇಷಶಕ್ತಿಯನ್ನು ತೋರಿಸುವುದಾಗಿ ಅನೇಕ ಕಡೆ ಅವರಿಗೆ **ವಿಶೇಷಣ**ವಾಗಿದೆ.

**ಋತಸ್ಯ ಬುಧ್ನ ಉಷಸಾಮಿಷಣ್ಯನ್ವೃಷಾ ಮಹೀ ರೋದಸೀ ಆ ವಿವೇಶ ।**
**ಮಹೀ ಮಿತ್ರಸ್ಯ ವರುಣಸ್ಯ ಮಾಯಾ ಚಂದ್ರೇವ ಭಾನುಂ ವಿ ದಧೇ ಪುರುತ್ರಾ ॥**

(ಋ. ಸಂ. ೩-೬೧-೭)

ಎಂಬಲ್ಲಿ **ಉಷಸ್ಸು ಮಿತ್ರಾವರುಣರ** ಅಲೌಕಿಕವಾದ ಸೃಷ್ಟಿಯಾಗಿದೆ.

**ಮಾಯಾ ವಾಂ ಮಿತ್ರಾವರುಣಾ ದಿವಿ ಶ್ರಿತಾ ಸೂರ್ಯೋ ಜ್ಯೋತಿಶ್ಚರತಿ ಚಿತ್ರಮಾಯುಧಂ ।**
**ತಮಭ್ರೇಣ ವೃಷ್ಟ್ಯಾ ಗೂಹಥೋ ದಿವಿ ಪರ್ಜನ್ಯ ದ್ರಪ್ಸಾ ಮಧುಮಂತ ಈರತೇ ॥**

(ಋ. ಸಂ. ೫-೬೩-೪)

ಎಂಬಲ್ಲಿಯೂ ಮಿತ್ರಾವರುಣರ ಅಸಾಧಾರಣವಾದ ಪ್ರಜ್ಞೆಯೂ ಸೃಷ್ಟಿಶಕ್ತಿಯೂ ವರ್ಣಿತವಾಗಿದೆ. ಹೀಗೆಯೇ,

ಪೂರ್ವಾಪರಂ ಚರತೋ ಮಾಯಯೈತೌ ಶಿಶೂ ಕ್ರೀಳಂತೌ ಪರಿ ಯಾತೋ ಅಧ್ವರಂ ।
ವಿಶ್ವಾನ್ಯನ್ಯೋ ಭುವನಾಭಿಚಷ್ಟ ಋತೂಁರನ್ಯೋ ವಿದಧಜ್ಜಾಯತೇ ಪುನಃ ॥

(ಋ. ಸಂ. ೧೦-೮೫-೧೮)

ಎಂಬಲ್ಲಿ ಸೂರ್ಯ ಮತ್ತು ಚಂದ್ರರು ತಮ್ಮ ವಿಶೇಷವಾದ ಪ್ರಜ್ಞಾಶಕ್ತಿಯಿಂದ ಅಂತರಿಕ್ಷದಲ್ಲಿ ಸಂಚರಿಸುತ್ತಾರೆಂದಿದೆ. ಹೀಗೆ ಅನೇಕ ಋಕ್ಕುಗಳಲ್ಲಿ ಈ ಪದವು ದೇವತೆಗಳ ಲೋಕಕಲ್ಯಾಣವನ್ನುಂಟುಮಾಡುವ ಶಕ್ತಿಯಸ್ವರೂಪವನ್ನು ತಿಳಿಸುತ್ತದೆ. ಆದರೆ ಇನ್ನೂ ಕೆಲವು ಕಡೆಗಳಲ್ಲಿ ಅಸುರರ ವಂಚನೆ, ಕಾಪಟ್ಯ ಇತ್ಯಾದಿ ಶಕ್ತಿಗಳನ್ನು ತೋರಿಸುವ ವಿಶೇಷಣವಾಗಿದೆ.

ತ್ವಂ ಮಾಯಾಭಿರನವದ್ಯ ಮಾಯಿನಂ ಶ್ರವಸ್ಯತಾ ಮನಸಾ ವೃತ್ರಮರ್ದಯಃ ।
ತ್ವಾಮಿನ್ನರೋ ವೃಣತೇ ಗವಿಷ್ಟಿಷು ತ್ವಾಂ ವಿಶ್ವಾಸು ಹವ್ಯಾಸ್ವಿಷ್ಟಿಷು ॥

(ಋ. ಸಂ. ೧೦-೧೪೭-೨)

ಎಂಬಲ್ಲಿ ವಂಚಕನಾದ ಶತ್ರುವನ್ನು ನಿನ್ನ ಪ್ರಜ್ಞಾವಿಶೇಷದಿಂದ ನಾಶಮಾಡಿದೆ ಎಂದು ಇಂದ್ರನನ್ನು ಸ್ತುತಿಸಿದೆ. ಇದರಂತೆಯೇ ಪ್ರಕೃತವಾದ ಋಕ್ಕಿನಲ್ಲಿ ಮಿತ್ರಾವರುಣರ ಅತಿಶಯವಾದ ಶಕ್ತಿಯನ್ನು ತೋರುವುದಕ್ಕಾಗಿ **ಮಾಯಾಭಿಃ** ಎಂಬ ವಿಶೇಷಣವಿದೆ. ಈ ಪ್ರಜ್ಞೆಯಿಂದ ಅವರು **ಸಿಂಧುಗಳಿಗಿಂತಲೂ, ನದಿಗಳಿಗಿಂತಲೂ,** ಅಸುರರಿಗಿಂತಲೂ ಅತ್ಯತಿಶಯವಾದ ಶಕ್ತಿಯನ್ನು ಪಡೆದಿದ್ದರೆಂದು ತಿಳಿಸಿದೆ.

॥ ವ್ಯಾಕರಣಪ್ರಕ್ರಿಯಾ ॥

**ದಧಾಥೇ**—ಡುಧಾಞ್ ಧಾರಣಪೋಷಣಯೋಃ ಧಾತು. ಛಾಂದಸವಾಗಿ ಲಟ್. ಮಧ್ಯಮಪುರುಷ ದ್ವಿವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

ನರಾ—ನೄ ನಯೇ ಧಾತು. **ಕ್ವಿಪ್ ಚ** ಎಂಬುದರಿಂದ ಕ್ವಿಪ್ ಪ್ರತ್ಯಯ. ದ್ವಿವಚನ ಪರವಾದಾಗ **ಋತೋಙಿಸರ್ವನಾಮಸ್ಥಾನಯೋಃ** ಎಂಬುದರಿಂದ ಗುಣ. **ಸುಪಾಂ ಸುಲುಕ್** (ಪಾ. ಸೂ. ೭-೧-೩೯) ಎಂಬುದರಿಂದ ವಿಭಕ್ತಿಗೆ ಆಕಾರಾದೇಶ.

**ಇತಊತಿ**—ಇತಃ ಊತಿಃ ಯಸ್ಯ ತತ್. ಇತಊತಿ. **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್** (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಮಾಹಿನಮ್**—ಮಹ ಪೂಜಾಯಾಂ ಧಾತು. **ಮಹೇರಿನಣ್ ಚ** (ಉ. ಸೂ. ೨-೫೬) ಎಂಬುದರಿಂದ ಇನಣ್ ಪ್ರತ್ಯಯ. **ಅತಉಪಧಾಯಾಃ** (ಪಾ. ಸೂ ೭-೨-೧೧೬) ಎಂಬುದರಿಂದ ಉಪಧಾವೃದ್ಧಿ. ವ್ಯತ್ಯಯದಿಂದ ಆಕಾರ ಉದಾತ್ತವಾಗುತ್ತದೆ.

**ದೇವತ್ವಮ್**—ದೇವಾನಾಂ ಭಾವಃ ದೇವತ್ವಮ್. **ತಸ್ಯಭಾವಸ್ತ್ವತಲೌ** ಎಂಬುದರಿಂದ ಭಾವಾರ್ಥದಲ್ಲಿ ತ್ವ ಪ್ರತ್ಯಯ, ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

ಅನಶುಃ—ಅಶೂ ವ್ಯಾಪ್ತೌ ಧಾತು. ಲಿಟ್ ಪ್ರಥಮಪುರುಷಬಹುವಚನದಲ್ಲಿ ಉಸಾದೇಶ. ದ್ವಿತ್ವ ಬಂದಾಗ ಅತ ಆದೇಃ (ಪಾ. ಸೂ. ೭-೪-೭೦) ಎಂಬುದರಿಂದ ಅಭ್ಯಾಸಕ್ಕೆ ದೀರ್ಘ. ಅಶ್ನೋತೇಶ್ಚ (ಪಾ. ಸೂ. ೭-೪-೭೨) ಎಂಬುದರಿಂದ ನುಡಾಗಮ. ಅತಿಜಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ‖ ೯ ‖

## ನೂರಐವತ್ತೆರಡನೆಯ ಸೂಕ್ತವು

**ಯುವಂ ವಸ್ತ್ರಾಣೀತಿ ಸಪ್ತರ್ಚಂ ದ್ವಾದಶಂ ಸೂಕ್ತಂ ದೈರ್ಘತಮಸಂ। ಅನಾದೇಶಪರಿಭಾಷಯಾ ತ್ರೈಷ್ಟುಭಂ। ಮೈತ್ರಾವರುಣಂ ಪೂರ್ವತ್ರ ಮೈತ್ರಾವರುಣಂ ಹೀತ್ಯುಕ್ತತ್ವಾತ್ ‖ ಸೂಕ್ತವಿನಿಯೋಗೋ ಲೈಂಗಿಕಃ‖ ಮೈತ್ರಾವರುಣೇ ಪಶಾವಾದ್ಯಾ ವಪಾಯಾಜ್ಯಾ। ಪ್ರದಾನಾನಾಮಿತಿಖಂಡೇ ಸೂತ್ರಿತಂ। ಯುವಂ ವಸ್ತ್ರಾಣಿಪೀವಸಾ ವಸಾಥೇ ಪ್ರ ಬಾಹವಾ ಸಿಸೃತಂ ಜೀವಸೇ ನಃ। ಆ. ೩-೮। ಇತಿ ‖ ಸೈವ ಸಮಾವರ್ತನೇ ನವ ವಸ್ತ್ರಧಾರಣೇ ವಿನಿಯುಕ್ತಾ। ಸೂತ್ರಿತಂ ಚ। ಯುವಂ ವಸ್ತ್ರಾಣಿ ಪೀವಸಾ ವಸಾಥೇ ಇತ್ಯಹತೇ ವಾಸಸೀ ಆಚ್ಛಾದ್ಯ। ಆ. ಗೃ. ೩-೮-೯। ಇತಿ ‖**

ಅನುವಾದವು—**ಯುವಂ ವಸ್ತ್ರಾಣಿ** ಎಂಬ ಈ ಸೂಕ್ತವು ಇಪ್ಪತ್ತೊಂದನೆಯ ಅನುವಾಕದಲ್ಲಿ ಹನ್ನೆರಡನೆಯ ಸೂಕ್ತವು. ಇದರಲ್ಲಿ ಏಳು ಋಕ್ಕುಗಳಿರುವವು. ಈ ಸೂಕ್ತಕ್ಕೆ ಉಚಥ್ಯಪುತ್ರನಾದ ದೀರ್ಘತಮಾಃ ಎಂಬುವನು ಋಷಿಯು. ಹಿಂದೆಯೇ ಹೇಳಿದಂತೆ ಮಿತ್ರಾವರುಣರು ದೇವತೆಯು. ತ್ರಿಷ್ಟುಪ್ ಛಂದಸ್ಸು. ವಿನಿಯೋಗವು ಲೈಂಗಿಕವು ಮತ್ತು ಮಿತ್ರಾವರುಣರನ್ನುದ್ದೇಶಿಸಿ ಮಾಡುವ ಪಶುಯಾಗದಲ್ಲಿ ಈ ಸೂಕ್ತದ ಮೊದಲನೆಯ ಋಕ್ಕನ್ನು ವಪಾಹೋಮ ಮಾಡುವಾಗ ಯಾಜ್ಯಾಮಂತ್ರವನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ **ಪ್ರದಾನಾನಾಂ** ಎಂಬ ಖಂಡದಲ್ಲಿ **ಯುವಂ ವಸ್ತ್ರಾಣಿ ಪೀವಸಾ ವಸಾಥೇ ಪ್ರ ಬಾಹವಾ ಸಿಸೃತಂ ಜೀವಸೇ ನಃ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೩-೮) ಮತ್ತು ಇದೇ ಋಕ್ಕನ್ನು ಸಮಾವರ್ತನವೆಂಬ ಗೃಹ್ಯಕರ್ಮದಲ್ಲಿ ಹೊಸ ವಸ್ತ್ರವನ್ನು ಧಾರಣಮಾಡುವಾಗ ಪಠಿಸಬೇಕೆಂದು ಆಶ್ವಲಾಯನಶ್ರೌತ ಸೂಕ್ತದ **ಯುವಂ ವಸ್ತ್ರಾಣಿ ಪೀವಸಾ ವಸಾಥೇ ಇತ್ಯಹತೇ ವಾಸಸೀ ಆಚ್ಛಾದ್ಯ** ಎಂಬ ಸೂತ್ರದಿಂದ ನಿರ್ದಿಷ್ಟವಾಗಿರುವುದು. (ಆ. ಗೃ. ೩-೮-೯).

‖ ಓಂ ‖

### ಸೂಕ್ತ—೧೫೦

‖ ಮಂಡಲ—೧ ‖ ಅನುವಾಕ—೨೧ ‖ ಸೂಕ್ತ— ೧೫೨ ‖
‖ ಅಷ್ಟಕ—೨ ‖ ಅಧ್ಯಾಯ—೨ ‖ ವರ್ಗ—೨೨ ‖
‖ ಸೂಕ್ತದಲ್ಲಿರುವ ಋಕ್ಸಂಖ್ಯೆ—೭ ‖
‖ ಋಷಿಃ—ದೀರ್ಘತಮಾ ಔಚಥ್ಯಃ ‖
‖ ದೇವತಾ—ಮಿತ್ರಾವರುಣೌ ।
‖ ಛಂದಃ— ತ್ರಿಷ್ಟುಪ್ ‖

ಸಂಹಿತಾಪಾಠಃ

ಯುವಂ ವಸ್ತ್ರಾಣಿ ಪೀವಸಾ ವಸಾಥೇ ಯುವೋರಚ್ಛಿದ್ರಾ ಮಂತವೋ ಹ ಸರ್ಗಾಃ ।
ಅವಾತಿರತಮನೃತಾನಿ ವಿಶ್ವ ಋತೇನ ಮಿತ್ರಾವರುಣಾ ಸಚೇಥೇ ॥ ೧ ॥

ಪದಪಾಠಃ

ಯುವಂ । ವಸ್ತ್ರಾಣಿ । ಪೀವಸಾ । ವಸಾಥೇ ಇತಿ । ಯುವೋಃ । ಅಚ್ಛಿದ್ರಾಃ । ಮಂತವಃ । ಹ । ಸರ್ಗಾಃ ।
ಅವ । ಅತಿರತಂ । ಅನೃತಾನಿ । ವಿಶ್ವಾ । ಋತೇನ । ಮಿತ್ರಾವರುಣಾ । ಸಚೇಥೇ ಇತಿ ॥ ೧ ॥

ಸಾಯಣಭಾಷ್ಯಂ

ಹೇ ಮಿತ್ರಾವರುಣೌ ಪೀವಸಾ ಪೀನೌ ಯುವಂ ಯುವಾಂ । ಯದ್ವಾ । ಪೀವಸಾ ಪೀನಾನ್ಯಚ್ಛಿನ್ನಾನಿ । ವಸ್ತ್ರಾಣ್ಯಾಚ್ಛಾದನಯೋಗ್ಯಾನಿ ವಾಸಾಂಸಿ ವಸಾಥೇ । ಆಚ್ಛಾದಯಥಃ । ಯದ್ವಾ । ಪೀವಸಾ ಸ್ಥೂಲೇನ ಪ್ರಭೂತೇನ ತೇಜಸಾ ವಸ್ತ್ರಾಣಿ ದಧಾಥೇ । ಅವಿಚ್ಛಿನ್ನಾನಿ ವಸ್ತ್ರಸ್ಥಾನೀಯಾನಿ ತೇಜಾಂಸಿ ಧಾರಯಥ ಇತ್ಯರ್ಥಃ । ಕಿಂಚ ಯುವಯೋಃ ಸರ್ಗಾಃ ಸೃಷ್ಟಯ ಅಚ್ಛಿದ್ರಾ ಅಚ್ಛಿನ್ನಾ ಮಂತವೋ ಹ ಮನನೀಯಾಶ್ಚ । ಈದೃಶೌ ಯುವಾಂ ವಿಶ್ವಾ ವಿಶ್ವಾನಿ ಸರ್ವಾಣ್ಯನೃತಾನ್ಯಸತ್ಯಾನ್ಯಪ್ರಿಯಾಣಿ ಪಾಪಾನ್ಯವಾತಿರತಂ । ನಾಶಯತಂ ॥ ವಿಶ್ವೇತ್ಯತ್ರ ಸಂಹಿತಾಯಾಮೃತ್ಯಕ ಇತಿ ಪ್ರಕೃತಿಭಾವೋ ಹ್ರಸ್ವತ್ವಂ ಚ ॥ ಋತೇನ ಫಲೇನ ತತ್ಸಾಧನೇನ ಯಜ್ಞೇನ ವಾ ಸಚೇಥೇ । ಸಂಗಚ್ಛೇಥೇ । ಅಸ್ಮಭ್ಯಂ ಯೋಜಯಥ ಇತ್ಯರ್ಥಃ ॥

ಪ್ರತಿಪದಾರ್ಥ

**ಮಿತ್ರಾವರುಣಾ**—ಎಲೈ ಮಿತ್ರಾವರುಣರೇ । **ಪೀವಸಾ**—ಪೃಥುಕಾಯರಾದ । **ಯುವಂ**—ನೀವಿಬ್ಬರೂ । [ (ಅಥವಾ) **ಯುವಂ**—ನೀವಿಬ್ಬರೂ । **ಪೀವಸಾ**—ಹರಿಯದೇ ಆಚ್ಛಾದನಯೋಗ್ಯಗಳಾದ । **ವಸ್ತ್ರಾಣಿ**—ವಸ್ತ್ರಗಳನ್ನು । (ಅಥವಾ) **ಪೀವಸಾ**—ಅತ್ಯಧಿಕವಾದ (ತೇಜಸ್ಸಿನಿಂದ) (ತೇಜೋರೂಪವಾದ) । **ವಸ್ತ್ರಾಣಿ**—ವಸ್ತ್ರಗಳನ್ನು । ] **ವಸಾಥೇ**—ಧರಿಸಿದ್ದೀರಿ । **ಯುವೋಃ**—ನಿಮ್ಮಿಬ್ಬರ । **ಸರ್ಗಾಃ**—ಸೃಷ್ಟಿಗಳು । **ಅಚ್ಛಿದ್ರಾಃ**—ದೋಷರಹಿತವಾಗಿಯೂ । **ಮಂತವೋ ಹ**—ಮನೋಹರವಾಗಿಯೂ ಇವೆಯಲ್ಲವೆ (ನೀವಿಬ್ಬರೂ ಸಹ) । **ವಿಶ್ವಾ**—ಸಮಸ್ತವಾದ । **ಅನೃತಾನಿ**—ಅಸತ್ಯಗಳನ್ನು ಅಥವಾ ಅಪ್ರಿಯವಾದ ಪಾಪಗಳನ್ನು । **ಅವ ಅತಿರತಂ**—ನಾಶಮಾಡುತ್ತೀರಿ । **ಋತೇನ**—ಯಜ್ಞದೊಡನೆ ಅಥವಾ ಅದರ ಫಲದೊಡನೆ । **ಸಚೇಥೇ**-(ನಮ್ಮನ್ನು) ಯೋಜಿಸುತ್ತೀರಿ (ಸೇರಿಸುತ್ತೀರಿ)

### ಭಾವಾರ್ಥ

ಎಲೈ ಮಿತ್ರಾವರುಣರೇ, ದೃಢಕಾಯರಾದ ನೀವಿಬ್ಬರೂ ಸಹ ನಿಮ್ಮ ಅತ್ಯಧಿಕವಾದುದೂ ತೇಜೋರೂಪವಾದುದೂ ಆದ ವಸ್ತ್ರಗಳನ್ನು ಧರಿಸಿದ್ದೀರಿ. ನಿಮ್ಮ ಸ್ವರೂಪಗಳು ದೋಷರಹಿತವಾಗಿಯೂ ಮನೋಹರವಾಗಿಯೂ ಇವೆ. ನೀವಿಬ್ಬರೂ ಸಹ ಸಕಲವಾದ ಪಾಪಗಳನ್ನೂ ನಾಶಮಾಡುತ್ತೀರಿ ಯಜ್ಞದೊಡನೆ ನಮ್ಮನ್ನು ಸೇರಿಸಿ ನಾವು ಅದರ ಫಲವನ್ನು ಅನುಭವಿಸುವಂತೆ ಮಾಡುತ್ತೀರಿ.

### English Translation

Robust Mitra and Varuna, you wear vestiments (of light); your natures are to be regarded as without defect; you annihilate all untruths; you associate (us) with sacrifice.

### ವಿಶೇಷವಿಷಯಗಳು

ಸಾಯಣರು **ಪೀವಸಾ** ಎಂಬ ಪದದ ಅನ್ವಯವನ್ನು ಮೂರು ವಿಧವಾಗಿ ತೋರಿಸಿದ್ದಾರೆ. ಮೊದಲನೆಯದಾಗಿ **ಯುವಂ** ಎಂಬುದಕ್ಕೆ ವಿಶೇಷಣವನ್ನಾಗಿ ಮಾಡಿ ಸಂಬೋಧಿಸಿದೆ. ಎರಡನೆಯದಾಗಿ **ವಸ್ತ್ರಾಣಿ** ಎಂಬುದಕ್ಕೆ ವಿಶೇಷಣವನ್ನಾಗಿ ಮಾಡಿ ಆಗಲೂ ಎರಡುವಿಧವಾದ ಅರ್ಥವನ್ನು ಮಾಡಿದೆ. **ಪೀವಸಾ ವಸ್ತ್ರಾಣಿ ಪೀನಾ ಅಚ್ಛಿನ್ನಾನಿ ಆಚ್ಛಾದನಯೋಗ್ಯಾನಿ ವಾಸಾಂಸಿ ವಸಾಥೇ ।** ಹರಿಯದೇ ಆಚ್ಛಾದನಯೋಗ್ಯಗಳಾದ ವಸ್ತ್ರಗಳೆಂದು ಒಂದು ವಿಧವಾಗಿಯೂ. ಅಥವಾ **ಪೀವಸಾ ಸ್ಥೂಲೇನ ಪ್ರಭೂತೇನ ತೇಜಸಾ ವಸ್ತ್ರಾಣಿ ದಧಾಥೇ ಅವಿಚ್ಛಿನ್ನಾನಿ ವಸ್ತ್ರಸ್ಥಾನೀಯಾನಿ ತೇಜಾಂಸಿ ಧಾರಯಥ ಇತ್ಯರ್ಥಃ ।** ಅತ್ಯಂತ ಪ್ರಭೂತವಾದುದೂ ತಮ್ಮ ತೇಜೋರೂಪವಾದುದೂ ಆದ ವಸ್ತ್ರಗಳನ್ನು ಧರಿಸಿದ್ದ ಮಿತ್ರಾವರುಣರೆಂದು ಇನ್ನೊಂದು ವಿಧವಾಗಿಯೂ ವಿವರಿಸಿದೆ. ಸಾಧಾರಣವಾಗಿ **ಪೀವಸ್** ಶಬ್ದವು **ಸ್ಥೂಲ**ವೆಂಬರ್ಥದಲ್ಲಿಯೇ ಉಪಯೋಗಿಸಲ್ಪಟ್ಟಿದೆ.

**ಅಗ್ನೇರ್ವರ್ಮ ಪರಿ ಗೋಭಿರ್ವ್ಯಯಸ್ವ ಸಂ ಪ್ರೋರ್ಣುಷ್ವ ಪೀವಸಾ ಮೇದಸಾ ಚ ।**
**ನೇತ್ತ್ವಾ ಧೃಷ್ಣುರ್ಹರಸಾ ಜರ್ಹೃಷಾಣೋ ದಧೃಗ್ವಿಧಕ್ಷ್ಯನ್ಪರ್ಯಂಖಯಾತೇ ॥**
(ಋ. ಸಂ. ೧೦-೧೬-೭)

ಇತ್ಯಾದಿ ಋಕ್ಕುಗಳಲ್ಲೆಲ್ಲಾ **ಪೀವಸಾ-ಸ್ಥೂಲೇನ** ಎಂದೇ ಅರ್ಥಮಾಡಿದೆ. ಪ್ರಕೃತವಾದ ಋಕ್ಕಿನಲ್ಲಿ ಅತ್ಯಂತ ವಿಸ್ತೃತವಾದುದೂ ತೇಜೋರೂಪವೂ ಆದ ವಸ್ತ್ರಗಳೆಂದರ್ಥ.

**ಅವ ಅತಿರತಂ—ಅವತಿರತೀ—ವಧಕವರ್ಾ ।** ಅಸತ್ಯಗಳನ್ನು ಅಪ್ರಿಯಗಳಾದ ಪಾಪಗಳನ್ನೂ ನಾಶಮಾಡುತ್ತೀರೆಂದರ್ಥ.

ಋಕ್ಕಿನಲ್ಲಿ ಮಿತ್ರಾವರುಣರ ರೂಪವು ತೇಜೋಮಯವಾಗಿದೆ. ಅವರ ಸೃಷ್ಟಿಗಳು ದೋಷರಹಿತವಾಗಿಯೂ ಮನೋಹರವಾಗಿಯೂ ಇವೆ. ಅವರು ಅಸತ್ಯಗಳನ್ನು ನಾಶಮಾಡಿ ಲೋಕದಲ್ಲಿ ಸತ್ಯವನ್ನೂ ಶುದ್ಧಿಯನ್ನೂ ಹರಡುತ್ತಾರೆ.

ವ್ಯಾಕರಣಪ್ರಕಿಯಾ

**ಯುವಮ್—ಪ್ರಥಮಾಯಾಶ್ಚದ್ವಿವಚನೇ ಭಾಷಾಯಾಂ** ಎಂಬಲ್ಲಿ ಲೋಕದಲ್ಲಿ ಮಾತ್ರ ಆತ್ವವಿಧಾನ ಮಾಡಿರುವುದರಿಂದ ಇಲ್ಲಿ ಆತ್ವ ಬರುವುದಿಲ್ಲ.

**ವಸ್ತ್ರಾಣಿ**—ವಸ ಆಚ್ಛಾದನೇ ಧಾತು. **ಸರ್ವಧಾತುಭ್ಯಃಷ್ಟ್ರನ್** (ಉ. ಸೂ. ೪-೫೯-೯೮) ಎಂಬುದರಿಂದ ಷ್ಟ್ರನ್ ಪ್ರತ್ಯಯ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಪೀವಸಾ—ಶೇಶ್ಛಂದಸಿ ಬಹುಲಮ್** (ಪಾ. ಸೂ. ೬-೧-೭೦) ಎಂಬುದರಿಂದ ಶಿಗೆ ಲುಕ್.

**ವಸಾಥೇ**—ವಸ ಆಚ್ಛಾದನೇ ಧಾತು. ಅದಾದಿ. ಆತ್ಮನೇ ಪದೀ. ಲಟ್ ಮಧ್ಯಮಪುರುಷದ್ವಿವಚನದಲ್ಲಿ ವಸಾಥೇ ಎಂದು ರೂಪವಾಗುತ್ತದೆ. ತಿಙಂತನಿಘಾತಸ್ವರ ಬರುತ್ತದೆ.

**ಯುವೋಃ**—ಯುಷ್ಮದ್ ಶಬ್ದ. ಇದಕ್ಕೆ ಷಷ್ಠೀದ್ವಿವಚನ ಪರವಾದಾಗ **ಸುಪಾಂ ಸುಪೋಭವಂತಿ** ಎಂಬ ವಚನದಿಂದ ಷಷ್ಠೀದ್ವಿವಚನ ಆದೇಶವೇ ಬರುತ್ತದೆ. ಆಗ ಆದೇಶವಾಗುವುದರಿಂದ **ಯೋಚಿ** (ಪಾ. ಸೂ. ೭-೨-೮೯) ಎಂಬುದರಿಂದ ಯತ್ವ ಬರುವುದಿಲ್ಲ. **ಶೇಷೇಲೋಪಃ** ಎಂಬುದರಿಂದ ಟಿಗೆ (ಅದ್) ಲೋಪ. ಉದಾತ್ತ ನಿವೃತ್ತಿಸ್ವರದಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ. ಅಂತ್ಯಲೋಪ ಪಕ್ಷದಲ್ಲಿ **ಏಕಾದೇಶಉದಾತ್ತೇನೋದಾತ್ತಃ** ಎಂಬುದರಿಂದ ಉದಾತ್ತಸ್ವರ ಬರುತ್ತದೆ.

**ಅಚ್ಛಿದ್ರಾಃ**—ನ ಛಿದ್ರಾಃ ಅಚ್ಛಿದ್ರಾಃ **ತತ್ಪುರುಷೇ ತುಲ್ಯಾರ್ಥ**—(ಪಾ. ಸೂ. ೬-೨-೨) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಮಂತವಃ**—ಮನ ಜ್ಞಾನೇ ಧಾತು. **ಕಮಿಮನಿಜನಿ**—(ಉ. ಸೂ. ೧-೭೨) ಎಂಬುದರಿಂದ ತು ಪ್ರತ್ಯಯ. ನಕಾರಕ್ಕೆ ಅನುಸ್ವಾರ ಪರಸವರ್ಣ. ಪ್ರಥಮಾಬಹುವಚನಾಂತರೂಪ.

**ಸರ್ಗಾಃ**—ಸೃಜ ವಿಸರ್ಗೇ ಧಾತು. ಇದಕ್ಕೆ ಘಞ್ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಲಘೂಪಧಗುಣ ರಪರವಾಗಿ ಬರುತ್ತದೆ. **ಚಜೋಃಕುಘಿಣ್ಯತೋಃ** (ಪಾ. ಸೂ. ೭-೨-೫೨) ಎಂಬುದರಿಂದ ಕುತ್ವ. ಞಿತ್ ಪ್ರತ್ಯಯವಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಅತಿರತಮ್**—ತಿರ ಧಾತುವು ವಧಾರ್ಥದಲ್ಲಿ ಪ್ರಯುಕ್ತವಾಗಿದೆ ಲಙ್ ಮಧ್ಯಮಪುರುಷದ್ವಿವಚನಾಂತ ರೂಪ. ತಿಙಂತನಿಘಾತಸ್ವರ ಬರುತ್ತದೆ.

**ವಿಶ್ವ**—ವಿಶ್ವ+ಋತೇನ ಎಂದಿರುವಾಗ **ಋತ್ಯಕಃ** (ಪಾ. ಸೂ. ೬-೧-೧೨೮) ಎಂಬುದರಿಂದ ಪ್ರಕೃತಿ ಭಾವ ಬರುತ್ತದೆ. ಛಾಂದಸವಾಗಿ ಹ್ರಸ್ವ ಬರುತ್ತದೆ.

**ಮಿತ್ರಾವರುಣಾ—ದೇವತಾದ್ವಂದ್ವೇಚ** (ಪಾ. ಸೂ. ೬-೩-೨೬) ಎಂಬುದರಿಂದ ದ್ವಂದ್ವದಲ್ಲಿ ಆನಙಾ ದೇಶ. ದ್ವಿವಚನಕ್ಕೆ **ಸುಪಾಂ ಸುಲುಕ್** ಎಂಬುದರಿಂದ ಆಕಾರಾದೇಶ. **ಆಮಂತ್ರಿತಸ್ಯ ಚ** (ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

ಸಚೇಥೇ—ಷಚ ಸಮವಾಯೇ ಧಾತು. ಲಟ್ ಮಧ್ಯಮಪುರುಷದ್ವಿವಚನಾಂತರೂಪ. ತಿಙಂತನಿಘಾತ ಸ್ವರ ಬರುತ್ತದೆ.

———:○:———

ಸಂಹಿತಾಪಾಠಃ

ಏತಚ್ಚನ ತ್ವೋ ವಿ ಚಿಕೇತದೇಷಾಂ ಸತ್ಯೋ ಮಂತ್ರಃ ಕವಿಶಸ್ತ ಋಘಾವಾನ್ ।

ತ್ರಿರಶ್ರಿಂ ಹಂತಿ ಚತುರಶ್ರಿರುಗ್ರೋ ದೇವನಿದೋ ಹ ಪ್ರಥಮಾ ಅಜೂರ್ಯನ್ ॥ ೨ ॥

। ಪದಪಾಠಃ ।

ಏತತ್ । ಚನ । ತ್ವಃ । ವಿ । ಚಿಕೇತತ್ । ಏಷಾಂ । ಸತ್ಯಃ । ಮಂತ್ರಃ । ಕವಿಽಶಸ್ತಃ । ಋಘಾವಾನ್ ।

ತ್ರಿಃಽಅಶ್ರಿಂ । ಹಂತಿ । ಚತುಃಽಅಶ್ರಿಃ । ಉಗ್ರಃ । ದೇವಽನಿದಃ । ಹ । ಪ್ರಥಮಾಃ । ಅಜೂರ್ಯನ್ ॥ ೨ ॥

ಸಾಯಣಭಾಷ್ಯಂ

ಏಷಾಮೇತಯೋರ್ಮಧ್ಯೇ ॥ ಬಹುವಚನಂ ಪೂಜಾರ್ಥಂ । ಯದ್ವಾ । ತದನುಚರಾಪೇಕ್ಷಯಾ ಬಹುವಚನಂ ॥ ಏತಯೋರ್ಮಧ್ಯೇ ತ್ವಶ್ಚನೈಕ ಏವೈತದ್ವಕ್ಷ್ಯಮಾಣಂ ಸಾಮರ್ಥ್ಯರೂಪಂ ಕರ್ಮ ವಿ ಚಿಕೇತತ್ । ವಿಶೇಷೇಣ ಚೇತತಿ । ಅನುತಿಷ್ಠತೀತ್ಯರ್ಥಃ । ಸ ವಿಶೇಷ್ಯತೇ । ಸ ಏಕಃ ಸತ್ಯೋಽಬಾಧ್ಯಃ ಸತ್ಸು ಭವೋ ವಾ ಮಂತ್ರೋ ಮನನವಾನ್ ಕವಿಶಸ್ತಃ ಕವಿಭಿರ್ಮೇಧಾವಿಭಿಃ ಶಂಸನೀಯ ಋಘಾವಾನ್ ಹಿಂಸಾವಾನ್ । ಅನೇನ ವಕ್ಷ್ಯಮಾಣಸ್ಯ ಸಾಮರ್ಥ್ಯಸ್ಯ ಸಂಭಾವಿತಾ ಪ್ರತಿಪಾದಿತಾಭವದಿತ್ಯುಕ್ತಂ । ಕಿಂ ತದಿತ್ಯಾಶಂಕ್ಯಾಹ। ತ್ರಿರಶ್ರಿಂ । ಅಶ್ರಿತ್ರಯೋಪೇತಮಾಯುಧಂ ತ್ರಿರಶ್ರಿ। ತದ್ವಂತಂ ॥ ಮತ್ವರ್ಥೋ ಲುಪ್ಯತೇ । ಉಪಲಕ್ಷಣಮೇತತ್ ಸರ್ವಾಯುಧಸಂಪನ್ನಮಿತ್ಯರ್ಥಃ । ಏತನ್ನಾಮಾನಂ ವಾ । ಚತುರಶ್ರಿಸ್ತತೋಽಪ್ಯಧಿಕಾಯುಧವಾನ್ । ನ ಕೇವಲಮಾಯುಧಸಾಮರ್ಥ್ಯಂ ಕಿಂತೂಗ್ರಃ ಸ್ವಯಮುದ್ಗೂರ್ಣಬಲೋ ಹಂತಿ । ಹಿನಸ್ತ್ಯತಿಬಲಂ ಶತ್ರುಂ । ಕಿಂಚ ಯುವಯೋರೇಕಸ್ಯೈವ ಸಾಮರ್ಥ್ಯೇನ ದೇವನಿದೋ ಹ ದೇವನಿಂದಕಾಸ್ತು ಪ್ರಥಮಾಃ ಸಮರ್ಥಾಃ ಸಂತೋಽಪ್ಯಜೂರ್ಯನ್ । ಸ್ವಯಮೇವ ಜೀರ್ಣಾ ಭವಂತಿ ॥

ಜೀರ್ಯತೇಃ ಶ್ಯನಿ ಬಹುಲಂ ಛಂದಸೀತ್ಯುತ್ವಂ ॥ ಯುವಯೋರ್ಮಧ್ಯ ಏಕೋಽಪಿ ಮಹಾಬಲಃ। ಮಿಲಿತಯೋಸ್ತು ಸಾಮರ್ಥ್ಯೇ ಕಿಮು ವಕ್ತವ್ಯಮಿತಿ ಭಾವಃ। ಅಥವಾ।ವಿಷಾಂ ಯುವಯೋರೇತದುತ್ತ-ರತ್ರ ವಕ್ಷ್ಯಮಾಣಂ ಸಾಮರ್ಥ್ಯಮೇಕಃ ಸತ್ಯಾದಿಲಕ್ಷಣೋ ವಿ ಚಿಕೇತತ್ । ವಿಶೇಷೇಣ ಜಾನಾತಿ । ಶೇಷಂ ಪೂರ್ವವತ್ ॥

ಪ್ರತಿಪದಾರ್ಥ

ವಿಷಾಂ—ಈ ಮಿತ್ರಾವರುಣರ ನಡುವೆ (ಅಥವಾ) ಇವರ ಭಕ್ತರ ಗುಂಪಿನಲ್ಲಿ । ಸತ್ಯಃ—ಸತ್ಯಸ್ವರೂಪನೂ (ಅಥವಾ) ಸತ್ಯಮಾರ್ಗಾವಲಂಬಿಯೂ (ಅಥವಾ) ಸಜ್ಜನರ ಗುಂಪಿಗೆ ಸೇರಿದವನೂ । ಮಂತ್ರಃ—ವಿಚಾರಪರನೂ । ಕವಿಶಸ್ತಃ—ಮೇಧಾವಿಗಳಿಂದ ಪ್ರಶಂಸಿಸಲ್ಪಡುವವನೂ । ಋಘಾವಾನ್—(ಶತ್ರುಗಳನ್ನು) ಹಿಂಸಿಸತಕ್ಕವನೂ ಆದ । ತ್ವಃ ಚನ—ಒಬ್ಬನೇನೇ । ಏತತ್—ಈ ಸಾಮರ್ಥ್ಯದಿಂದ ಕೂಡಿದ ಕರ್ಮವನ್ನು । ವಿ ಚಿಕೇತತ್—ವಿಶೇಷರೀತಿಯಲ್ಲಿ ನಿರ್ವಹಿಸುತ್ತಾನೆ । (ಆದಾದರೋ) ತ್ರಿರಶ್ರಿಂ—ಸರ್ವಾಯುಧ ಸಂಪನ್ನನಾದರೂಸಹ (ಅಥವಾ) ತ್ರಿರಶ್ರಿಯೆಂಬ ಶತ್ರುವನ್ನು । ಚತುರಶ್ರಿಃ—ಅದಕ್ಕಿಂತಲೂ ಅಧಿಕವಾದ ಆಯುಧವುಳ್ಳವನಾಗಿಯೂ । ಉಗ್ರಃ—ಭಯಂಕರನಾಗಿಯೂ । ಹಂತಿ—ಕೊಲ್ಲುತ್ತಾನೆ । ದೇವನಿದೋ ಹ—ದೇವನಿಂದಕರಾದರೋ । ಪ್ರಥಮಾಃ—ಪ್ರಾರಂಭದಲ್ಲಿ ಸಮರ್ಥರಾಗಿದ್ದರೂ ಸಹ । ಅಜೂರ್ಯನ್—(ಕೊನೆಯಲ್ಲಿ ತಾವಾಗಿಯೇ) ಕ್ಷೀಣಿಸುತ್ತಾರೆ.

ಭಾವಾರ್ಥ

ಈ ಮಿತ್ರಾವರುಣರ ನಡುವೆ, ಸತ್ಯಸ್ವರೂಪನೂ, ವಿಚಾರಪರನೂ, ಮೇಧಾವಿಗಳಿಂದ ಪ್ರಶಂಸಿಸಲ್ಪಡುವವನೂ, ಶತ್ರುಗಳನ್ನು ಹಿಂಸಿಸತಕ್ಕವನೂ ಆದ ಒಬ್ಬನೇನೇ ಸಾಮರ್ಥ್ಯದಿಂದ ಕೂಡಿದ ಈ ಕರ್ಮವನ್ನು ವಿಶೇಷ ರೀತಿಯಲ್ಲಿ ನಿರ್ವಹಿಸುತ್ತಾನೆ. ಉದಾಹರಣೆಗೆ, ಶತ್ರುವು ಸರ್ವಾಯುಧಸಂಪನ್ನನಾದರೂ ಸಹ ಇವನು ಅದಕ್ಕಿಂತಲೂ ಹೆಚ್ಚು ಆಯುಧವುಳ್ಳವನಾಗಿಯೂ, ಭಯಂಕರನಾಗಿಯೂ ಇದ್ದು ಶತ್ರುವನ್ನು ಕೊಲ್ಲುತ್ತಾನೆ. ದೇವನಿಂದಕರೆಲ್ಲರೂ ಸಹ ಪ್ರಾರಂಭದಲ್ಲಿ ಸಮರ್ಥರಾಗಿದ್ದರೂ ಸಹ ಇವನ ಪ್ರಭಾವದಿಂದ ಕೊನೆಯಲ್ಲಿ ತಾವಾಗಿಯೇ ಕ್ಷೀಣಿಸುತ್ತಾರೆ.

English Translation

He amongst those (who are your followers), who observes truth, who is considerate, who is commended by the wise, who is able to (inflict) harm carefully weighs (the means whereby), fierce and well-armed, he slays (a foe) less efficiently accoutred, and (by which) the revilers of the gods, however mighty, may perish.

। ವಿಶೇಷವಿಷಯಗಳು ।

ಸತ್ಯಃ—ಅಬಾಧ್ಯಃ ಸತ್ಸು ಭವೋ ವಾ । ಬಾಧಾತೀತನೂ ಅಥವಾ ಸತ್ಪುರುಷರ ನಡುವೆ ಇರತಕ್ಕವನೂ ಎಂದೂ ಈ ಪದದ ತಾತ್ಪರ್ಯವನ್ನು ವಿವರಿಸಿದೆ. ಬಾಧಾತೀತನಾಗಬೇಕಾದರೂ ಸಹ ಅವನು ಅಸತ್ಯಾತ್ಮಕನಾಗಿರದೆ, ಸತ್ಯಸ್ವರೂಪನೂ ಸತ್ಯಮಾರ್ಗಾವಲಂಬಿಯಾಗಿಯೂ ಇರಬೇಕು. ಸತ್ಯಶಬ್ದವು ಋಕ್ಸಂಹಿತೆಯಲ್ಲೆಲ್ಲಾ ಶ್ರೇಷ್ಠವಾದುದೂ ನೈತಿಕವಾದುದೂ ಆದ ಅರ್ಹತೆಯನ್ನೂ ಶಕ್ತಿಯನ್ನೂ ತೋರಿಸುವ ಅರ್ಥವನ್ನು ಮೂಡಿಸಿಟ್ಟುಕೊಂಡೇ

ಉಪಯೋಗಿಸಲ್ಪಟ್ಟಿದೆ. ಇಂತಹ ಉತ್ತಮವಾದ ಅರ್ಹತೆಯುಳ್ಳವರು ಆಚರಿಸುವ ಕ್ರಿಯೆಗಳೂ ಸತ್ಯರೂಪವಾಗಿಯೇ ಇರುವುವು. ಈ ಅರ್ಥವನ್ನೇ ವ್ಯಕ್ತಪಡಿಸಿ ನಿರುಕ್ತಕಾರರೂ ಸಹ ಸತ್ಯಶಬ್ದದ ನಿರ್ವಚನವನ್ನು ಮಾಡಿರುತ್ತಾರೆ.

**ಸತ್ಯಂ ಕಸ್ಮಾತ್ ಸತ್ಸು ತಾಯತೇ ಸತ್ಪ್ರಭವಂ ಭವತೀತಿ ವಾ ।**

(ನಿ. ೩-೧೩)

ಸಜ್ಜನರಲ್ಲಿ ಹರಡಿರುತ್ತದೆ ಅಥವಾ ಸಜ್ಜನರಲ್ಲಿ ಉತ್ಪನ್ನವಾಗುತ್ತದೆ. ಆದುದರಿಂದ ಸತ್ಯವೆಂದು ಕರೆಯಲ್ಪಟ್ಟಿದೆಯೆಂದು ನಿರುಕ್ತಕಾರರು ವಿವರಿಸಿದ್ದಾರೆ. ಈ ನಿರ್ವಚನದ ಪ್ರಕಾರ ಸತ್ಯಾತ್ಮಕವಾದ ಫಲವೂ ಸಹ ಸಜ್ಜನರಿಗೇ ಲಭಿಸಬೇಕಾಗಿರುವುದರಿಂದ ಸದ್ಗುಣಿಗಳ ಸತ್ಯಕರ್ಮಕ್ಕೆ ತಕ್ಕ ಸದಾತ್ಮಕವಾದ ಫಲ ಎಂಬಭಿಪ್ರಾಯವು ಈ ಋಕ್ಕಿನ ವರ್ಣನೆಯಿಂದ ಸೂಚಿತವಾಗಿದೆ. ಸತ್ಯಮಾರ್ಗಾವಲಂಬಿಯಾದ ದೈವಭಕ್ತನಿಗೂ ಅಸತ್ಯಮಾರ್ಗಾವಲಂಬಿಯಾದ ದೈವನಿಂದಕನಿಗೂ ಇಳ್ಲಿ ವ್ಯತ್ಯಾಸವನ್ನು ತೋರಿಸಿ ದೈವನಿಂದಕನ ಶಕ್ತಿಯು ಪ್ರಾರಂಭದಲ್ಲಿ ಎಷ್ಟೇ ಅಧಿಕವಾಗಿದ್ದರೂ ಸಹ ಕೊನೆಯಲ್ಲಿ ತಾನಾಗಿಯೇ ಕ್ಷೀಣಿಸುತ್ತದೆಂದೂ, ದೈವಭಕ್ತನ ಸಾಮರ್ಥ್ಯಗಳು ವೃದ್ಧಿಯನ್ನು ಹೊಂದುವುವೆಂದೂ ಆ ವೃದ್ಧಿಯು ಅವನ ಸತ್ಯಜೀವನದ ಫಲವೆಂದೂ ತಿಳಿಸಿದೆ. ಹೀಗೆ ಇಲ್ಲಿ ಸತ್ಯಶಬ್ದವು ಕರ್ಮಪರವಾಗಿಯೂ, ಫಲಪರವಾಗಿಯೂ ಉಪಯೋಗಿಸಲ್ಪಟ್ಟಿರುವುದರಿಂದ ಈ ಎರಡು ಸನ್ನಿವೇಶಗಳಲ್ಲೂ ಸಹ ಈ ಭಾವವು ಯಾವ ವಿಶ್ವತತ್ತ್ವವನ್ನು ಪ್ರತಿಬಿಂಬಿಸುತ್ತದೆ ಎಂಬುದನ್ನು ವಿವರಿಸಬೇಕಾಗಿದೆ.

**ತೇ ದೇವಾ ಉತ್ಸೃಜ್ಯಾನೃತಂ । ಸತ್ಯಮನ್ವಾಲೇಭಿರೇ ।**

(ಶ. ಬ್ರಾ. ೯-೫-೧-೧೩)

**ತದ್ಯತ್ತತ್ಸತ್ಯಂ । ತ್ರಯೀ ಸಾ ವಿದ್ಯಾ ತೇ ದೇವಾ ಅಬ್ರುವನ್ ಯಜ್ಞಂ ಕೃತ್ವೇದಂ ಸತ್ಯಂ ತನವಾಮಹಾ ಇತಿ ।**

(ಶ. ಬ್ರಾ ೯-೫-೧-೧೮)

ದೇವತೆಗಳು ಅಸತ್ಯವನ್ನು ತ್ಯಜಿಸಿ ಸತ್ಯವನ್ನೇ ದೃಢವಾಗಿ ಅವಲಂಬಿಸಿದರು. ತ್ರಯೀ ಎಂದು ಕರೆಸಿಕೊಳ್ಳುವ ವೇದಗಳೇ ಈ ಸತ್ಯಸ್ವರೂಪಗಳಾಗಿವೆಯಾದ್ದರಿಂದ ವೇದೋಕ್ತವಾದ ಕರ್ಮಗಳನ್ನಾಚರಿಸಿ ಸತ್ಯವನ್ನು ಹರಡೋಣ ಎಂದು ದೇವತೆಗಳು ಆಶಿಸಿದರು ಇತ್ಯಾದಿಯಾಗಿ ಸತ್ಯಕ್ಕೂ ಆಚರಣೆಗೂ ಇರತಕ್ಕ ತಾತ್ತ್ವಿಕವಾದ ಸಂಬಂಧವನ್ನು ತೋರಿಸುವುದಲ್ಲದೆ ಇಂತಹ ಶುದ್ಧವಾದ ಕರ್ಮಾಚರಣೆಗಳಿಂದ ಪೂರ್ಣವಾದವನ್ನೂ, ಸಕಲಸಂಪದ್ಯುಕ್ತವಾದದ್ದೂ ಆದ ಶ್ರೇಯಸ್ಸನ್ನೂ ಪಡೆಯಬಹುದೆಂದೂ ಆಶಿಸಿದೆ.

ನಾಭಿರ್ಋತಸ್ಯ ಸಪ್ರಥಾ ಇತಿ । ಸತ್ಯಂ ವಾ ಋತಂ ವಾ ಋತಂ ಸತ್ಯಸ್ಯ ನಾಭಿಃ ಸಪ್ರಥಾ ಇತ್ಯೇವೈತದಾಹ ಸ ನೋ ವಿಶ್ವಾಯುಃ ಸಪ್ರಥಾ ಇತಿ ಸ ನಃ ಸರ್ವಾಯುಃ ಇತ್ಯೇವೈತದಾಹ ।

(ಶ. ಬ್ರಾ. ೧೪-೩-೧-೧೮)

ಇತ್ಯಾದಿ ವಿವರಣೆಗಳಿಂದ ವಿಶ್ವನಿಯಮಕ್ಕೂ ಸತ್ಯಕ್ಕೂ ಇರುವ ತಾದಾತ್ಮ್ಯವನ್ನು ತೋರಿಸಿ ಇಂತಹ ಸತ್ಯವನ್ನು ಅನುಸರಿಸುವುದರಿಂದಲೂ ಸತ್ಯಕರ್ಮಗಳನ್ನು ಆಚರಿಸುವುದರಿಂದಲೂ ಪೂರ್ಣಾಯುಸ್ಸು ಫಲರೂಪವಾಗಿ ದೊರಕುವುದೆಂದೂ ಸತ್ಫಲಕ್ಕೂ ಸತ್ಕರ್ಮಕ್ಕೂ ಇರುವ ಕಾರ್ಯಕಾರಣ ಸಂಬಂಧವನ್ನು ತಿಳಿಸಿದೆ.

ಸತ್ಯಾತ್ಮಕವಾದ ಕರ್ಮಾಚರಣೆಗೂ ಸಹ ವಿಶ್ವನಿಯಮವನ್ನೂ ಅದಕ್ಕೆ ಕಾರಣವಾದ ದೇವತೆಗಳ ಸ್ವರೂಪವನ್ನೂ ತಿಳಿಯಬೇಕಾದುದು ಅತ್ಯವಶ್ಯವಾದುದರಿಂದ ಆ ಜ್ಞಾನವೂ ಸಹ **ಸತ್ಯ**ದಿಂದಲೇ ಸಾಧ್ಯವೆಂಬುದನ್ನೂ ಸಹ ಅನೇಕ ಸನ್ನಿವೇಶಗಳಲ್ಲಿ ವಿಶದವಾಗಿ ತಿಳಿಸಿದೆ.

**ಸಖಾ ಹ ಯತ್ರ ಸಖಿಭಿರ್ನವಗ್ವೈರಭಿಜ್ಞ್ವಾ ಸತ್ವಭಿರ್ಗಾ ಅನುಗ್ಮನ್ ।**
**ಸತ್ಯಂ ತದಿಂದ್ರೋ ದಶಭಿರ್ದಶಗ್ವೈಃ ಸೂರ್ಯಂ ವಿವೇದ ತಮಸಿ ಕ್ಷಿಯಂತಂ ।**

(ಋ. ಸಂ. ೩-೩೯-೫)

**ಸ ಇದ್ದೇವಾನಾಂ ಸಧಮಾದ ಆಸನ್ನೃತಾವಾನಃ ಕವಯಃ ಪೂರ್ವ್ಯಾಸಃ ।**
**ಗೂಳ್ಹಂ ಜ್ಯೋತಿಃ ಪಿತರೋ ಅನ್ವವಿಂದನ್ತ್ಸತ್ಯಮಂತ್ರಾ ಅಜನಯನ್ನುಷಾಸಂ ॥**

(ಋ. ಸಂ. ೭-೭೬-೪)

ಇತ್ಯಾದಿ ಋಕ್ಕುಗಳಲ್ಲೆಲ್ಲಾ ಋಷಿಗಳೆಲ್ಲರೂ ಸಹ ಸತ್ಯಾತ್ಮಕರಾದ ದೇವತೆಗಳ ಸ್ವರೂಪವನ್ನು ತಿಳಿದು ಕರ್ಮಗಳನ್ನು ಆಚರಿಸಿದುದರ ಫಲವಾಗಿ ಸಂಪತ್ತನ್ನು ಪಡೆದರೆಂಬ ಹಿಂದಿನ ಸಂದರ್ಭಗಳನ್ನು ಸೂಚಿಸುವ ವಾಕ್ಯಗಳು ಬಹಳವಾಗಿವೆ ಮತ್ತು ಸತ್ಯದಿಂದಲೇ ನಮಗೆ ಶುಭವಾಗಲಿ ಎಂಬ ಪ್ರಾರ್ಥನೆಯೂ ಜೊತೆಯಲ್ಲಿಯೇ ಇದೆ.

**ಅಧಾ ಯಥಾ ನಃ ಪಿತರಃ ಪರಾಸಃ ಪ್ರತ್ನಾಸೋ ಅಗ್ನ ಋತಮಾಶುಷಾಣಾಃ ।**
**ಶುಚೀದಯನ್ದೀಧಿತಿಮುಕ್ಥಶಾಸಃ ಕ್ಷಾಮಾ ಭಿಂದಂತೋ ಅರುಣೀರಪ ವ್ರನ್ ॥**

(ಋ. ಸಂ. ೪-೨-೧೬)

ನಮ್ಮ ಪಿತೃಗಳು ಸತ್ಯಾತ್ಮಕವಾದ ಯಜ್ಞಾಚರಣೆಯಿಂದ ಯಾವ ಒಳ್ಳೆಯ ಫಲಗಳನ್ನು ಪಡೆದರೋ ಅದೇ ರೀತಿ ಈಗಲೂ ಸಹ ನಮ್ಮ ಕರ್ಮಗಳೆಲ್ಲವೂ **ತತ್ಸತ್ಯಮಸ್ತು** ಸತ್ಯವಾದ ಫಲಗಳನ್ನು ಕೊಡುವುದಾಗಲಿ ಇತ್ಯಾದಿ ಪ್ರಾರ್ಥನೆಗಳಲ್ಲಿ **ಸತ್ಯಧರ್ಮರಾದ** ಅಗ್ನ್ಯಾದಿದೇವತೆಗಳ ಸತ್ಯಸ್ವರೂಪವೂ ವರ್ಣಿತವಾಗಿದೆ.

**ಅಜೋ ನ ಕ್ಷಾಂ ದಾಧಾರ ಪೃಥಿವೀಂ ತಸ್ತಂಭ ದ್ಯಾಂ ಮಂತ್ರೇಭಿಃ ಸತ್ಯೈಃ ।**

(ಋ. ಸಂ. ೧-೬೭-೩)

**ಕವಿಮಗ್ನಿಮುಪಸ್ತುಹಿ ಸತ್ಯಧರ್ಮಾಣಮಧ್ವರೇ । ದೇವಮಮೀವಚಾತನಂ ।**

(ಋ. ಸಂ. ೧-೧೨-೭)

**ದೇವೋ ನ ಯಃ ಸವಿತಾ ಸತ್ಯಮನ್ಮಾ ಕ್ರತ್ವಾ ನಿಪಾತಿ ವೃಜನಾನಿ ವಿಶ್ವಾ ।**
**ಪುರುಪ್ರಶಸ್ತೋ ಅಮತಿರ್ನ ಸತ್ಯ ಆತ್ಮೇವ ಶೇವೋ ದಿಧಿಷಾಯ್ಯೋ ಭೂತ್ ॥**

(ಋ. ಸಂ. ೧-೭೩-೨)

ಮುಂತಾದ ಅನೇಕ ಕಡೆಗಳಲ್ಲಿ **ಅಗ್ನ್ಯಾದಿದೇವತೆಗಳೂ ಸತ್ಯ**ದಿಂದಲೇ ಪೃಥಿವ್ಯಾದಿಲೋಕಗಳನ್ನು ಧರಿಸಿರುವನ್ನೂ, ಲೋಕರಕ್ಷಣೆಯನ್ನು ನಿರ್ವಹಿಸಿರುವನ್ನೂ ಮಾನವರೂ ಅದೇ ಸತ್ಯಮಾರ್ಗವನ್ನನುಸರಿಸಬೇಕೆಂದೂ ತಿಳಿಸಿದೆ.

ಈ ಮಾರ್ಗವನ್ನನುಸರಿಸಿದರೆ **ತ್ವಃ ಚನ ಏತತ್ ವಿ ಚಿಕೇತತ್ ।** ಇತರರ ಸಹಾಯವೂ ಬೇಕಿಲ್ಲದೇ ಒಬ್ಬನೇ ಸಕಲಸಾಮರ್ಥ್ಯಗಳಿಂದಲೂ ಕೂಡಿ ಜಯವನ್ನು ಹೊಂದುತ್ತಾನೆ. ಇತ್ಯಾದಿಯಾಗಿ ಪ್ರಕೃತವಾದ ಋಕ್ಕಿನಲ್ಲಿ ಭರವಸೆಯಿದೆ.

**ಋಘಾವಾನ್**—**ಋಘಾ** ಎಂಬ ಶಬ್ದಕ್ಕೆ Monier Williams, Dictionry ಯಲ್ಲಿ Violence, passion ಎಂಬುದಾಗಿ ಅರ್ಥವಿದೆ. ಒಂದು ತೀವ್ರವಾದ ಶಕ್ತಿಯೆಂದು ತಾತ್ಪರ್ಯವಾಗಬಹುದು. **ಋಘಾವಾನ್** ಎಂಬ ಪದವು ಈ ಋಕ್ಕಿನಲ್ಲಲ್ಲದೆ,

**ಇಂದ್ರಃ ಸುಶಿಪ್ರೋ ಮಘವಾ ತರುತ್ರೋ ಮಹಾವ್ರಾತಸ್ತುವಿಕೂರ್ಮಿರ್ಋಘಾವಾನ್ ।**
**ಯದುಗ್ರೋ ಧಾ ಬಾಧಿತೋ ಮರ್ತ್ಯೇಷು ಕ್ವ೧ ತ್ಯಾ ತೇ ವೃಷಭ ವೀರ್ಯಾಣಿ ॥**

(ಋ. ಸಂ. ೩-೩೦-೩)

ಎಂಬ ಋಕ್ಕಿನಲ್ಲಿಯೂ ಸಹ ಪ್ರಕೃತವಾದ ಋಕ್ಕಿನಲ್ಲಿ ಹೇಳಿರುವಂತೆ ಸಾಯಣರು **ಶತ್ರುವಿಷಯಹಿಂಸಾವಾನ್ ।** ಶತ್ರುಗಳನ್ನು ಹಿಂಸಿಸಲು ಸಾಮರ್ಥ್ಯವನ್ನು ಪಡೆದಿರುವವನು ಎಂದರ್ಥಮಾಡಿದ್ದಾರೆ. ಹಿಂಸೆಮಾಡತಕ್ಕ ಸಾಮರ್ಥ್ಯದಲ್ಲಿ ತಾತ್ಪರ್ಯವಿರಬಹುದು.

**ತ್ವಃ**—**ತ್ವ ಇತಿ ವಿನಿಗ್ರಹಾರ್ಥೀಯಂ ಸರ್ವನಾಮಾನುದಾತ್ತಂ ಅರ್ಧನಾಮೇತ್ಯೇಕೇ ।** (ನಿ. ೧-೭) ಎಂದು ನಿರುಕ್ತಕಾರರು,

**ಋಚಾಂ ತ್ವಃ ಪೋಷಮಾಸ್ತೇ ಪುಪುಷ್ವಾನ್ ಗಾಯತ್ರಂ ತ್ವೋ ಗಾಯತಿ ಶಕ್ವರೀಷು ।**
**ಬ್ರಹ್ಮಾ ತ್ವೋ ವದತಿ ಜಾತವಿದ್ಯಾಂ ಯಜ್ಞಸ್ಯ ಮಾತ್ರಾಂ ವಿ ಮಿಮೀತ ಉ ತ್ವಃ ॥**

(ಋ. ಸಂ. ೧೦-೭೧-೧೧)

ಎಂಬ ಋಕ್ಕನ್ನುದಹರಿಸಿ **ತ್ವಃ** ಎಂಬ ಪದಕ್ಕೆ ಏಕಃ ಎಂಬರ್ಥವನ್ನು ಮಾಡಿದ್ದಾರೆ.

ಇದಲ್ಲದೆ **ಅಥಾಪಿ ಸಮುಚ್ಚಯಾರ್ಥೇ ಭವತಿ ।** ಸಮುಚ್ಚಯಾರ್ಥದಲ್ಲಿಯೂ ಈ ಪದದ ಪ್ರಯೋಗವಿದೆಯೆಂದು ನಿರುಕ್ತಕಾರರು ತಿಳಿಸಿದ್ದಾರೆ. (ನಿ. ೧-೯).

**ತ್ರಿರಶ್ರಿಂ**—ಅಶ್ರಿತ್ರಯವುಳ್ಳ ಶತ್ರುವೆಂದು ಒಂದರ್ಥವನ್ನೂ ಅಥವಾ ತ್ರಿರಶ್ರಿಯೆಂಬ ಹೆಸರುಳ್ಳ ಶತ್ರುವನ್ನು ಎಂದಿನ್ನೊಂದರ್ಥವನ್ನು ಸಾಯಣರು ಹೇಳಿದ್ದಾರೆ. ಈ ಪದವು ಅಂಕಿತನಾಮವಾಗಿ ಒಬ್ಬ ವ್ಯಕ್ತಿಯ ಹೆಸರನ್ನು ಹೇಳುವುದಕ್ಕೆ ಯಾವ ಆಧಾರವೂ ಕಾಣಲಿಲ್ಲ

**ದೇವನಿದಃ**—ನಿರುಕ್ತಕಾರರು,

**ಸ್ವಯಂ ಸೋ ಅಸ್ಮದಾ ನಿದೋ ವಧೈರಜೇತ ದುರ್ಮತಿಂ ।**

**ಅವ ಸ್ರವೇದಘಶಂಸೋಽವತರಮವ ಕ್ಷುದ್ರಮಿವ ಸ್ರವೇತ್ ॥**

(ಋ. ಸಂ. ೧-೧೨೯-೬)

ಎಂಬ ಋಕ್ಕನ್ನು ವಿವರಿಸುವಾಗ **ನಿದಃ** ಎಂಬ ಪದಕ್ಕೆ **ನಿಂದಿತಾರಂ** ದೂಷಿಸುವವರನ್ನು ಎಂದರ್ಥಮಾಡಿದ್ದಾರೆ. **ಕುತ್ಸಾರ್ಥಕವಾದ ಣಿದ್** ಧಾತುವಿನಿಂದ ನಿಷ್ಪನ್ನವಾಗಿದೆ. ಪ್ರಕೃತವಾದ ಋಕ್ಕಿನಲ್ಲಿ **ದೇವನಿದಃ** ಎಂದರೆ ದೇವತೆಗಳನ್ನು ನಿಂದಿಸುವವರು ಎಂದರ್ಥ.

**ಅಜೂರ್ಯನ್—ಸ್ವಯಮೇವ ಜೀರ್ಣಾ ಭವಂತಿ। ತಮ್ಮಷ್ಟಕ್ಕೆ ತಾವೇ ಕ್ಷೀಣಿಸುತ್ತಾರೆ.**

ವ್ಯಾಕರಣಪ್ರಕ್ರಿಯಾ

**ಚಿಕೇತತ್**—ಕಿತ ಜ್ಞಾನೇ. ಲೇಟ್ ಪ್ರಥಮಪುರುಷಏಕವಚನದಲ್ಲಿ ತಿಪ್ ಪ್ರತ್ಯಯ. **ಇತಶ್ಚಲೋಪಃ ಪ** (ಪಾ. ಸೂ. ೩-೪-೯೭) ಎಂಬುದರಿಂದ ಇಕಾರ ಲೋಪ. **ಲೇಟೋಡಾಟೌ** (ಪಾ. ಸೂ. ೩-೪-೯೪) ಸೂತ್ರದಿಂದ ಅದಕ್ಕೆ ಅಡಾಗಮ. ಶ್ಲು ವಿಕರಣ. ಧಾತುವಿಗೆ ದ್ವಿತ್ವಾದಿ. ಲಘೂಪಧಗುಣ. ತಿಙಂತನಿಘಾತಸ್ವರ ಬರುತ್ತದೆ.

**ಏಷಾಮ್**—ಪೂಜಾರ್ಥದಲ್ಲಿ ಬಹುವಚನ ಬಂದಿದೆ. ಅಥವಾ ಅನುಚರರನ್ನು ನಿಮಿತ್ತೀಕರಿಸಿ ಬಹುವಚನ ಬಂದಿದೆ.

**ಸತ್ಯಃ**—ಸತ್ಸು ಭವಃ ಸತ್ಯಃ. **ಭವೇಛಂದಸೀ** (ಪಾ. ಸೂ. ೪-೪-೧೧೦) ಎಂಬುದರಿಂದ ಯ ಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ

**ಕವಿಶಸ್ತಃ**—ಶಂಸು ಸ್ತುತೌ ಧಾತು ಕ್ತ ಪ್ರತ್ಯಯ. **ಅನಿದಿತಾಂ ಹಲ** ಎಂಬುದರಿಂದ ಉಪಧಾನಕಾರ **ಲೋಪ.** ಕವಿಭಿಃ ಶಸ್ತಃ ಕವಿಶಸ್ತಃ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

**ಋಘಾವಾನ್**—ನ್ಯಾನ್ ಹಂತೀತಿ ಋಘಾ. ಋಘಾ ಅಸ್ಯ ಅಸ್ತಿ ಇತಿ ಋಘಾವಾನ್. ಮತುಪ್ ಪ್ರತ್ಯಯ.

**ತ್ರಿರಶ್ರಿಮ್**—ತ್ರಯಃ ಅಶ್ರಯಃ ಯಸ್ಯ ತತ್ ತ್ರಿರಶ್ರಿ. ತದಸ್ಯ ಅಸ್ತಿ ಇತಿ ತ್ರಿರಶ್ರಿಃ ಛಾಂದಸವಾಗಿ ಮತ್ವರ್ಥ ಪ್ರತ್ಯಯಕ್ಕೆ ಲೋಪ ಬಂದಿದೆ.

**ಹಂತಿ**—ಹನ ಹಿಂಸಾಗತ್ಯೋಃ ಧಾತು. ಅದಾದಿ. ಲಟ್ ಪ್ರಥಮಪುರುಷಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ಉಗ್ರಃ**—ಉಚ ಸಮವಾಯೇ ಧಾತು. **ಋಜ್ರೇಂದ್ರ**—(ಉ. ಸೂ. ೨-೧೮೬) ಎಂಬುದರಿಂದ ರನ್ನಂತವಾಗಿ ನಿಪಾತಿತವಾಗಿದೆ. ಚಕಾರಕ್ಕೆ ಗಕಾರವೂ ಅದರಿಂದಲೇ ಸಿದ್ಧವಾಗಿದೆ. ವ್ಯತ್ಯಯದಿಂದ ಅಂತೋದಾತ್ತವಾಗುತ್ತದೆ.

**ದೇವನಿದಃ**—ದೇವಾನ್ ನಿಂದಂತಿ ಇತಿ ದೇವನಿದಃ ಣಿದಿ ಕುತ್ಸಾಯಾಂ ಧಾತು. ಕ್ವಿಪ್ ಚ ಎಂಬುದರಿಂದ ಕ್ವಿಪ್ ಪ್ರತ್ಯಯ. **ಅಗಮಾನುಶಾಸನಮನಿತ್ಯಮ್** ಎಂಬ ವಚನದಿಂದ ನುಮಾಗಮ ಬರುವುದಿಲ್ಲ. ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. ಪ್ರಥಮಾಬಹುವಚನಾಂತರೂಪ.

**ಅಜೂರ್ಯನ್**—ಜ್ವೃಷ್ ವಯೋಹಾನೌ ಧಾತು. ಛಾಂದಸವಾಗಿ ಲಙ್. ಪ್ರಥಮಪುರುಷಬಹುವಚನದಲ್ಲಿ ಝಿ ಪ್ರತ್ಯಯ. ಅಂತ್ಯಲೋಪ. **ದಿವಾದಿಭ್ಯಃ ಶ್ಯನ್** (ಪಾ. ಸೂ. ೩-೧-೬೯) ಎಂಬುದರಿಂದ ಶ್ಯನ್ ವಿಕರಣ. **ಬಹುಲಂ ಛಂದಸಿ** ಎಂಬುದರಿಂದ ಧಾತುವಿಗೆ ಉತ್ವ. ರ ಪರವಾಗಿ ಬರುತ್ತದೆ. ಹಲಿ ಚ ಎಂಬುದರಿಂದ ದೀರ್ಘ. ಅಂಗಕ್ಕೆ ಅಡಾಗಮ. ತಿಙಂತನಿಘಾತಸ್ವರ ಬರುತ್ತದೆ. ॥ ೨ ॥

———:o:———

ಸಂಹಿತಾಪಾಠಃ

ಅಪಾದೇತಿ ಪ್ರಥಮಾ ಪದ್ವತೀನಾಂ ಕಸ್ತದ್ವಾಂ ಮಿತ್ರಾವರುಣಾ ಚಿಕೇತ ।
ಗರ್ಭೋ ಭಾರಂ ಭರತ್ಯಾ ಚಿದಸ್ಯ ಋತಂ ಪಿಪರ್ತ್ಯನೃತಂ ನಿ ತಾರೀತ್ ॥೨॥

ಪದಪಾಠಃ

ಅಪಾತ್ । ಏತಿ । ಪ್ರಥಮಾ । ಪತ್ ಽ ವತೀನಾಂ । ಕಃ । ತತ್ । ವಾಂ । ಮಿತ್ರಾವರುಣಾ । ಆ । ಚಿಕೇತ ।
ಗರ್ಭಃ । ಭಾರಂ । ಭರತಿ । ಆ । ಚಿತ್ । ಅಸ್ಯ । ಋತಂ । ಪಿಪರ್ತಿ । ಅನೃತಂ । ನಿ । ತಾರೀತ್ ॥ ೨ ॥

ಸಾಯಣಭಾಷ್ಯಂ

ಹೇ ಮಿತ್ರಾವರುಣಾ ಮಿತ್ರಾವರುಣೌ ಪದ್ವತೀನಾಂ ಮನುಷ್ಯಾದೀನಾಂ ಪ್ರಜಾನಾಂ ಪ್ರಥಮಾ ಪ್ರಥಮಭಾವಿನ್ಯಪಾತ್ ಪಾದರಹಿತೋಷಾಃ । ಪ್ರತಿದಿನಂ ಸೂರ್ಯಚಂದ್ರಾದಿವತ್ ಸ್ವಸ್ಯಾಃ ಪರಿಭ್ರಮಣಾಭಾವಾತ್ ಸೂರ್ಯಗಮನೇಸ್ಯೈವ ಸ್ವಗಮನಾದಪಾದಿತಿ ಚೈತೀತಿ ಚೋಪಚರ್ಯತೇ । ತತ್ತಾದೃಶಂ ಯುವಯೋಃ ಪ್ರಸಿದ್ಧಂ ಕರ್ಮ ಕ ಆ ಚಿಕೇತ । ಕ ಆಭಿಮುಖ್ಯೇನ ಜಾನಾತಿ ॥ ಕಿತ ಜ್ಞಾನೇ ॥ ತತ್ಪ್ರತ್ಯಮಿತ್ಯರ್ಥಃ । ಮಿತ್ರಾವರುಣಯೋರಹೋರಾತ್ರದೇವತ್ವಾದಹೋರಾತ್ರಯೋರಂತರಾಲಸ್ಯೈವೋಷಸ್ತ್ವಾದೇತತ್ಕರ್ಮತ್ವಂ । ಕಿಂಚಾಸ್ಯ ಲೋಕಸ್ಯ ಭಾರಂ ನಿರ್ವಾಹಂ ಗರ್ಭೋ ಯುವಯೋರ್ಗರ್ಭಸ್ಥಾನೀಯಃ ಶಿಶುರಾದಿತ್ಯಃ । ಅಹೋರಾತ್ರಯೋರ್ಮಧ್ಯಕಾಲ ಉತ್ಪತ್ತೇಸ್ತಾಭ್ಯಾಮೇವ ಮಿತ್ರಾವರುಣತ್ವಾತ್ ಅಹೋರಾತ್ರೇ ವೈ ಮಿತ್ರಾವರುಣಾವಿತಿ ಶ್ರುತೇಃ । ಸ ಆಹರತಿ ಚಿತ್ । ಸಮಂತಾನ್ನಿರ್ವಹತ್ಯೇವ । ಹರತಿ ವಾಸ್ಯ ಭಾರಂ ಜಾಡ್ಯಂ । ಚಿದಿತ್ಯವಧಾರಣೇ । ತತ್ಕಥಮಿತಿ ತದುಚ್ಯತೇ ಋತಂ ಸತ್ಯಂ ಜಗತಃ ಪ್ರಕಾಶಗಮನಾದಿರೂಪಂ ಪಿಪರ್ತಿ । ಪೂರಯತಿ । ಅನೃತಮುಕ್ತವಿಲಕ್ಷಣಮಂಧಕಾರಂ ಗಮನಾದಿನಿರೋಧಂ ಚ ನಿ ತಾರೀತ್ । ನಿತರತಿ । ನಿಮಜ್ಜಯತಿ । ನಾಶಯತೀತ್ಯರ್ಥಃ । ಶಿಶೋರ್ಜಗದ್ಭಾರವಹನರೂಪಂ ಕರ್ಮ ಯುಷ್ಮತ್ಸಾಮರ್ಥ್ಯಾದಿತಿ ॥

ಪ್ರತಿಪದಾರ್ಥ

ಮಿತ್ರಾವರುಣಾ—ಎಲೈ ಮಿತ್ರಾವರುಣರೇ । ಪದ್ವತೀನಾಂ—ಪಾದಗಳುಳ್ಳ ಮಾನವಾದಿ ಪ್ರಾಣಿಗಳಿಗೆ । ಪ್ರಥಮಾ—ಪೂರ್ವಭಾವಿಯಾದ ಸೂಚಕಳು । ಅಪಾತ್—ಪಾದರಹಿತಳಾದ ಉಷೋದೇವತೆಯು । ತತ್—ಈ ಸತ್ಯಾಂಶವು । ವಾಂ—ನಿಮ್ಮಿಬ್ಬರ ಕರ್ಮವು (ಎಂಬುದಾಗಿ) । ಕಃ—ಯಾವನು । ಆ ಚಿಕೇತ—ಚೆನ್ನಾಗಿ ತಿಳಿಯುತ್ತಾನೆ । (ಅದೂ ಇಲ್ಲವೆ) ಅಸ್ಯ—ಈ ಲೋಕದ । ಭಾರಂ—ನಿರ್ವಹಣದ ಭಾರವನ್ನು । ಗರ್ಭಃ—(ನಿಮ್ಮಿಬ್ಬರ) ಗರ್ಭಸ್ಥಾನದ ಶಿಶುವಾದ ಆದಿತ್ಯನು । ಆ ಭರತಿ ಚಿತ್—ಸಂಪೂರ್ಣವಾಗಿಯೇ ನಿರ್ವಹಿಸುತ್ತಾನೆ ।

(ಹೇಗೆಂದರೆ) **ಋತಂ**—(ಜಗತ್ತಿಗೆ) ಪ್ರಕಾಶನಾದಿ ಸತ್ಯವನ್ನು । **ಪಿಪರ್ತಿ**—ತುಂಬುತ್ತಾನೆ । **ಅನೃತಂ**—ಅಂಧಕಾರ ರೂಪವಾದ ಅಸತ್ಯವನ್ನು । **ನಿ ತಾರೀತ್**—ನಾಶಮಾಡುತ್ತಾನೆ.

**ಭಾವಾರ್ಥ**

ಎಲೈ ಮಿತ್ರಾವರುಣರೇ, ಪಾದಗಳುಳ್ಳ ಮಾನವಾದಿ ಸಕಲಪ್ರಾಣಿಗಳಿಗೂ ಪೂರ್ವಭಾವಿಯಾದ ಸೂಚಕಳು ಪಾದರಹಿತಳಾದ ಉಷೋದೇವತೆಯು ಎಂಬ ಈ ಸಂತ್ಯಾಂಶವು ನಿಮ್ಮಿಬ್ಬರ ಕೆಲಸವು ಎಂಬುದಾಗಿ ಯಾವನು ತಿಳಿಯ ಬಲ್ಲನು ? ಅದೂ ಅಲ್ಲದೇ, ಜಗತ್ತಿಗೆ ಪ್ರಕಾಶನಾದಿ ಸತ್ಯವನ್ನು ತುಂಬುತ್ತಲೂ, ಅಂಧಕಾರ ರೂಪವಾದ ಅಸತ್ಯವನ್ನು ನಾಶಪಡಿಸುತ್ತಲೂ ಸಹ ನಿಮ್ಮಿಬ್ಬರ ಗರ್ಭರೂಪದ ಶಿಶುವಾದ ಆದಿತ್ಯನು ಈ ಲೋಕದ ನಿರ್ವಹಣದ ಭಾರವನ್ನು ವಹಿಸಿ ಸಂಪೂರ್ಣವಾಗಿ ನಿರ್ವಹಿಸುತ್ತಾನೆ.

English Tranlation

Who knows, Mitra and Varuna, that it is your doing, that the footless dawn is the precursor of footed beings; and that your infant (progeny, the sun), sustains the burthen of this (world): he diffuses (the) truth (of light) and disperses the falsehood (of darkness.)

**ವಿಶೇಷವಿಷಯಗಳು**

**ಪದ್ವತೀನಾಂ ಪ್ರಥಮಾ—ಪಾದವತೀನಾಂ ಮನುಷ್ಯಾದೀನಾಂ ಪ್ರಜಾನಾಂ ಪ್ರಥಮಭಾವಿನೀ ।** ಪೃಥ್ವಿಯ ಮೇಲಾಗಲಿ ಅಂತರಿಕ್ಷದಲ್ಲಾಗಲಿ ಸಂಚರಿಸತಕ್ಕ ಸಕಲ ಪ್ರಾಣಿಗಳಿಗಿಂತಲೂ ಪೂರ್ವಭಾವಿಯಾಗಿ ಆವಿರ್ಭವಿಸಿ ಅವುಗಳನ್ನೆಬ್ಬಿಸುವವಳು.

**ಆ ಘಾ ಯೋಷೇವ ಸೂನರ್ಯುಷಾ ಯಾತಿ ಪ್ರಭುಂಜತೀ ।**
**ಜರಯಂತೀ ವೃಜನಂ ಪದ್ವದೀಯತ ಉತ್ಪಾತಯತಿ ಪಕ್ಷಿಣಃ ॥**
(ಋ. ಸಂ. ೧-೪೮-೫)

ಇತ್ಯಾದಿ ಋಕ್ಕುಗಳಲ್ಲಿ ಗೃಹಕಾರ್ಯಗಳಲ್ಲಿ ಕುಶಲಳಾದ ಗೃಹಿಣಿಯು ಎಲ್ಲರಿಗಿಂತಲೂ ತಾನು ಮೊದಲು ಎದ್ದು ಇತರರನ್ನು ಎಚ್ಚರಗೊಳಿಸುವಂತೆ ಉಷಸ್ಸು ಉದಯಕಾಲಕ್ಕೆ ಮುಂಚೆ ಆವಿರ್ಭವಿಸಿ ಸುಪ್ತವಾಗಿರತಕ್ಕ ಸಕಲ ಪಕ್ಷಿಮೃಗಮಾನವಾದಿಗಳನ್ನೂ ಎಚ್ಚರಗೊಳಿಸುತ್ತಾಳೆ ಎಂದು ವರ್ಣಿಸಿರುವ ಅಂಶವನ್ನು ಸೂಚಿಸಿದೆ.

**ಅಪಾತ್—ಪಾದರಹಿತಾ ಉಷಾಃ । ಪ್ರತಿದಿನಂ ಸೂರ್ಯಚಂದ್ರಾದಿವತ್ ಸ್ವಸ್ಯಾಃ ಪರಿಭ್ರಮಣಾಭಾವಾತ್ ಸೂರ್ಯಗಮನೇನೈವ ಸ್ವಗಮನಾತ್ ಅಪಾತ್ ಇತಿ ಚ ಏತಿ ಚ ಉಪಚರ್ಯತೇ ।** ಪ್ರತಿದಿನವೂ ಸೂರ್ಯಚಂದ್ರರಂತೆ ಸ್ವಯಂ ಸಂಚಾರವಿಲ್ಲದೇ ಸೂರ್ಯಭ್ರಮಣದೊಂದಿಗೇ ತನ್ನ ಭ್ರಮಣವನ್ನೂ ತೋರಿಸುವುದರಿಂದ ಈ ವಿಶೇಷಣವೆಂದು ಸಾಯಣರು ತಿಳಿಸಿರುತ್ತಾರೆ

**ಅಸ್ಯ ಭಾರಂ ಗರ್ಭಃ ಆ ಭರತಿ ಚಿತ್** । ಈ ಲೋಕದ ಭಾರವನ್ನೆಲ್ಲಾ ಮಿತ್ರಾವರುಣರ ಗರ್ಭಸ್ಥಾನದ ಶಿಶುರೂಪನಾದ ಆದಿತ್ಯನು ಸಂಪೂರ್ಣವಾಗಿ ನಿರ್ವಹಿಸುತ್ತಾನೆ. **ಅಹೋರಾತ್ರಯೋರ್ಮಧ್ಯಕಾಲೇ ಉತ್ಪತ್ತೇಃ ತಾಭ್ಯಾಂ ಏವ ಮಿತ್ರಾವರುಣತ್ವಾತ್** ।

**ಅಹೋರಾತ್ರೇ ವೈ ಮಿತ್ರಾವರುಣೌ** ।

(ತೈ. ಸಂ. ೩-೪-೧೦-೧)

**ಇತಿ ಶ್ರುತೇಃ** । **ಮಿತ್ರನು** ಅಹರಭಿಮಾನದೇವತೆಯೆಂದೂ **ವರುಣನು** ರಾತ್ರ್ಯಭಿಮಾನದೇವತೆಯೆಂದೂ ಪ್ರಸಿದ್ಧವಾಗಿದೆ. ಈ ದೇವತೆಗಳೂ ಸಹ

**ತ್ರೀ ರೋಚನಾ ವರುಣ ತ್ರೀಁರುತ ದ್ಯೂನ್ ತ್ರೀಣಿ ಮಿತ್ರ ಧಾರಯಥೋ ರಜಾಂಸಿ ।**
**ವಾವೃಧಾನಾವಮತಿಂ ಕ್ಷತ್ರಿಯಸ್ಯಾನು ವ್ರತಂ ರಕ್ಷಮಾಣಾವಜುರ್ಯಂ ॥**

(ಋ. ಸಂ. ೫-೬೯-೧)

ಇತ್ಯಾದಿ ಋಕ್ಕುಗಳಲ್ಲಿ ಮಿತ್ರಾವರುಣರು ಮೂರು ಲೋಕಗಳ ಭಾರವನ್ನೂ ನಿರ್ವಹಿಸುತ್ತಾರೆ. ಮತ್ತು ಆದಿತ್ಯಾದಿ ಗ್ರಹಗಳು ಲೋಕಪ್ರಮಾಣವನ್ನು ಮಾಡಿ ಲೋಕವ್ಯವಹಾರಗಳಿಗೆ ಸಹಾಯಮಾಡುವುದಕ್ಕೂ ಇವರೇ ಕಾರಣರು ಇತ್ಯಾದಿಯಾಗಿ ವರ್ಣಿಸಿರುವ ಅಂಶವು ಇಲ್ಲಿ ಹೇಳಲ್ಪಟ್ಟಿದೆ.

**ಋತಂ—ಜಗತಃ ಪ್ರಕಾಶಗಮನಾದಿರೂಪಂ ಸತ್ಯಂ** । **ಋತ**ಶಬ್ದಕ್ಕೆ ಇತರತ್ರ **ಯಜ್ಞ, ಉದಕ.** ಇತ್ಯಾದ್ಯನೇಕಾರ್ಥಗಳಲ್ಲಿ ಇಲ್ಲಿ **ಸತ್ಯ**ವೆಂದರ್ಥವಾಗುತ್ತದೆ. ಜಗತ್ತಿನ ಪ್ರಕಾಶ, ಸಕಲವಿಧವಾದ ವ್ಯವಹಾರಗಳು ಇವುಗಳಿಂದ ಪ್ರತಿಬಿಂಬಿಸಲ್ಪಡುವ **ಸತ್ಯ**ವೆಂದು ಸಾಯಣರು ವಿವರಿಸಿದ್ದಾರೆ. ಸತ್ಯದ ವೃದ್ಧಿಗೂ ಅನೃತದ ನಾಶಕ್ಕೂ ಮಿತ್ರಾವರುಣರ ಪ್ರತಿನಿಧಿಯಾದ ಆದಿತ್ಯನು ಕಾರಣವಾಗಿದ್ದಾನೆ.

**ಪಿಪರ್ತಿ—ಪಿಪರ್ತಿ ಪಪುರೀರಿತಿ ಪೃಣಾತಿನಿಗಮೌ ವಾ ಪ್ರೀಣಾತಿನಿಗಮೌ ವಾ** । ವೃದ್ಧಿಪಡಿಸು ಅಥವಾತೃಪ್ತಿಪಡಿಸು ಎಂಬರ್ಥದಲ್ಲಿ ಈ ಶಬ್ದಗಳ ಪ್ರಯೋಗವಿದೆಯೆಂದು ನಿರುಕ್ತದ ಆಧಾರದೊಡನೆ (ನಿ.-೫-೨೪) ಹಿಂದೆ ತಿಳಿಸಿದೆ.

॥ **ವ್ಯಾಕರಣಪ್ರಕ್ರಿಯಾ** ॥

**ಅಪಾತ್**—ನ ವಿದ್ಯತೇ ಪಾದಃ ಯಸ್ಯ ಅಪಾತ್. ಬಹುವ್ರೀಹಿಯಲ್ಲಿ ಛಾಂದಸವಾಗಿ ಅಂತ್ಯಲೋಪ ಬರುತ್ತದೆ. **ನಞ್‌ಸುಭ್ಯಾಮ್** ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಏತಿ**—ಇಣ್ ಗತೌ ಧಾತು. ಲಟ್ ಪ್ರಥಮಪುರುಷಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ಪದ್ವತೀನಾಮ್**—ಪತ್ ಪಾದಃ ತತ್ ಅಸ್ಯ ಅಸ್ತಿ ಇತಿ ಪದ್ವತ್. **ಝಯಃ** ಎಂಬ ಸೂತ್ರದಿಂದ ಮತುಪಿನ ಮಕಾರಕ್ಕೆ ವತ್ವ. ಪ್ರತ್ಯಯದಿಂದ ಮತುಪಿಗೆ ಉದಾತ್ತಸ್ವರ ಬರುತ್ತದೆ.

**ಚಿಕೇತ**—ಕಿತ ಜ್ಞಾನೇ ಧಾತು. ಛಾಂದಸವಾಗಿ ಲಿಟ್. ಪ್ರಥಮಪುರುಷಏಕವಚನದಲ್ಲಿ ತಿಪ್ ಪ್ರತ್ಯಯಕ್ಕೆ ಣಲಾದೇಶ. ಧಾತುವಿಗೆ ದ್ವಿತ್ವಾದಿ. ತಿಙಂತನಿಘಾತಸ್ವರ ಬರುತ್ತದೆ.

ಭರತಿ—ಭೃಞ್ ಭರಣೇ ಧಾತು. ಲಟ್ ಪ್ರಥಮಪುರುಷಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

ಪಿಪರ್ತಿ—ಪೄ ಪಾಲನಪೂರಣಯೋಃ ಧಾತು. ಜುಹೋತ್ಯಾದಿ. ಲಟ್ ಪ್ರಥಮಪುರುಷಏಕವಚನ ದಲ್ಲಿ ತಿಪ್ ಪ್ರತ್ಯಯ. ಶ್ಲು ವಿಕರಣ. **ಶ್ಲೌ** ಎಂಬುದರಿಂದ ಧಾತುವಿಗೆ ದ್ವಿತ್ವ. **ಅರ್ತಿಪಿಪರ್ತ್ಯೋಶ್ಚ** (ಪಾ. ಸೂ. ೭-೪-೭೭) ಎಂಬುದರಿಂದ ಅಭ್ಯಾಸಕ್ಕೆ ಇತ್ವ. ತಿಪ್ ನಿಮಿತ್ತವಾಗಿ ಧಾತುವಿನ ಇಕಿಗೆ ಗುಣ. ಚಿತ್ ಯೋಗ ವಿರುವುದರಿಂದ ನಿಘಾತಸ್ವರ ಬರುವುದಿಲ್ಲ. **ಅಭ್ಯಸ್ತಾನಾಮಾದಿಃ** (ಪಾ ಸೂ. ೬-೧-೧೮೯) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ತಾರೀತ್**—ತೄ ಪ್ಲವನತರಣಯೋಃ ಧಾತು. **ಛಂದಸಿಲುಙ್‌ಲಙ್‌ಲಿಟಃ** ಎಂಬುದರಿಂದ ಲುಙ್ ತಿಪ್ ಪ್ರತ್ಯಯ. **ಇತಶ್ಚ** ಎಂಬುದರಿಂದ ಇಕಾರ ಲೋಪ. ಚ್ಲಿಗೆ ಸಿಚ್ ಬಂದಾಗ, **ಅಸ್ತಿಸಿಚೋಽಪೃಕ್ತೇ** (ಪಾ. ಸೂ. ೭-೩-೯೬) ಎಂಬುದರಿಂದ ಪ್ರತ್ಯಯಕ್ಕೆ ಈಡಾಗಮ. ಸಿಚಿಗೆ ಇಡಾಗಮ. **ಸಿಚಿ ವೃದ್ಧಿಃಪ**—(ಪಾ. ಸೂ. ೭-೨-೧) ಎಂಬುದರಿಂದ ಧಾತುವಿಗೆ ವೃದ್ಧಿ. **ಇಟಈಟಿ** ಎಂಬುದರಿಂದ ಸಿಚಿಗೆ ಲೋಪ. ಛಾಂದಸವಾಗಿ ಅಡಾಗಮ ಬರುವುದಿಲ್ಲ. ತಿಙಂತನಿಘಾತಸ್ವರ ಬರುತ್ತದೆ. ॥ ೩ ॥

———— :O: ————

**ಸಂಹಿತಾಪಾಠಃ**

ಪ್ರಯಂತಮಿತ್ಪರಿ ಜಾರಂ ಕನೀನಾಂ ಪಶ್ಯಾಮಸಿ ನೋಪನಿಷದ್ಯಮಾನಂ ।
ಅನವಪೃಗ್ಣಾ ವಿತತಾ ವಸಾನಂ ಪ್ರಿಯಂ ಮಿತ್ರಸ್ಯ ವರುಣಸ್ಯ ಧಾಮ ॥೪॥

**ಪದಪಾಠಃ**

ಪ್ರ ಽ ಯಂತಂ । ಇತ್ । ಪರಿ । ಜಾರಂ । ಕನೀನಾಂ । ಪಶ್ಯಾಮಸಿ । ನ । ಉಪ ಽ ನಿಷದ್ಯಮಾನಂ ।
ಅನವ ಽ ಪೃಗ್ಣಾ । ವಿ ಽ ತತಾ । ವಸಾನಂ । ಪ್ರಿಯಂ । ಮಿತ್ರಸ್ಯ । ವರುಣಸ್ಯ । ಧಾಮ ॥ ೪ ॥

**ಸಾಯಣಭಾಷ್ಯಂ**

ಕನೀನಾಂ ಕಮನೀಯಾನಾಂ ದೀಪ್ತಾನಾಂ ಕನ್ಯಕಾಸ್ಥಾನೀಯಾನಾಮುಷಸಾಂ ॥ ಕನತೇಃ ಕಾಂತಿಕರ್ಮಣ ಇಞ್ । ಕೃದಿಕಾರಾದಕ್ತಿನ ಇತಿ ಙೀಷ್ । ಅಪಿ ಕನ್ಯಾಶಬ್ದಸ್ಯ ವಾ ಛಾಂದಸಂ ಸಂಪ್ರಸಾರಣಂ॥ ತಾಸಾಂ ಜಾರಮಾದಿತ್ಯಂ ಪ್ರಯಂತಮಿತ್ ಪ್ರಗಚ್ಛಂತಮೇವ ಪರಿ ಪಶ್ಯಾಮಸಿ । ವಯಂ ಪರಿಪಶ್ಯಾಮಃ । ಉಪನಿಷದ್ಯಮಾನಂ ಕ್ಷಣಮಾತ್ರಮಪಿ ನಿಷೀದಂತಂ ನ ಪಶ್ಯಾಮಃ । ಏತದಪಿ ತಯೋಃ ಸಾಮರ್ಥ್ಯಂ ।

ಪುನಸ್ತದೇವ ವಿಶೇಷ್ಯತೇ । ಅನವಪೃಗ್ಣಾನವಪೃಗ್ಣಾನಿ ಅತ ಏವ ವಿತತಾನಿ ತೇಜಾಂಸಿ ವಸಾನಮಾಚ್ಛಾದಯಂತಂ ಪ್ರಿಯಂ ಸರ್ವೇಷಾಂ ಪ್ರಿಯಭೂತಂ ಮಿತ್ರಸ್ಯ ವರುಣಸ್ಯ ಚ ಧಾಮ ತೇಜಃಸ್ಥಾನಭೂತಂ । ಯದ್ವಾ । ಪ್ರಿಯಂ ಧಾಮೇತಿ ಸಂಬಧ್ಯತೇ । ತಯೋಃ ಪ್ರೇಮಸ್ಥಾನಂ । ಈದೃಶಮಾದಿತ್ಯಂ ಯುಷ್ಮದನುಜ್ಞಯಾ ಸಂಚರಂತಂ ಪಶ್ಯಾಮಸಿ ॥

ಪ್ರತಿಪದಾರ್ಥ

ಕನೀನಾಂ—ಕನ್ಯಕಾರೂಪದಲ್ಲಿ ಮನೋಹರವಾಗಿರತಕ್ಕ ಉಷಸ್ಸುಗಳಿಗೆ । ಜಾರಂ—ಪ್ರಿಯನಾದವನೂ । ಅನವಪೃಗ್ಣಾ—ಒಂದಕ್ಕೊಂದು ಅಂಟಿಕೊಳ್ಳದೆ । ವಿತತಾ—ವಿಸ್ತೃತವಾಗಿ ಹರಡಿರುವ ರಶ್ಮಿಗಳನ್ನು । ವಸಾನಂ—ಧರಿಸಿರುವವನೂ । ಪ್ರಿಯಂ—ಸಕಲರಿಗೂ ಬೇಕಾದವನೂ । ಮಿತ್ರಸ್ಯ ವರುಣಸ್ಯ — ಮಿತ್ರಾವರುಣರಿಗೆ । ಧಾಮ—ವಾಸಸ್ಥಾನವಾಗಿರುವವನೂ । [ (ಅಥವಾ) ಪ್ರಿಯಂ ಧಾಮ—(ಮಿತ್ರಾವರುಣರಿಗೆ) ಪ್ರೀತಿಪಾತ್ರವಾದ ವಾಸಸ್ಥಾನವಾದವನೂ] ಆದ ಆದಿತ್ಯನನ್ನು । ಪ್ರಯಂತೆ ಮಿತ್—(ಸರ್ವದಾ) ಸಂಚರಿಸುವವನನ್ನಾಗಿಯೇ । ಪರಿಪಶ್ಯಾಮಸಿ—ಯಾವಾಗಲೂ ನೋಡುತ್ತೇವೆ । ಉಪನಿಷದ್ಯಮಾನಂ—(ಕ್ಷಣಮಾತ್ರವಾದರೂ) ವಿಶ್ರಾಂತಿಗಾಗಿ ಕುಳಿತಿರುವಂತೆ । ನ—ನಾವು ನೋಡುವುದೇ ಇಲ್ಲ.

ಭಾವಾರ್ಥ

ಮನೋಹರವಾಗಿ ಕನ್ಯಕಾರೂಪದಲ್ಲಿರುವ ಉಷಸ್ಸುಗಳಿಗೆ ಪ್ರಿಯತಮನೂ, ಒಂದಕ್ಕೊಂದು ಅಂಟಿಕೊಳ್ಳದೆ ವಿಸ್ತಾರವಾಗಿ ಹರಡಿರುವ ರಶ್ಮಿಗಳನ್ನು ಧರಿಸಿರುವವನೂ, ಮಿತ್ರಾವರುಣರಿಗೆ ಪ್ರಿಯವಾದ ವಾಸಸ್ಥಾನನಾದವನೂ, ಆದ ಆದಿತ್ಯನನ್ನು ನಾವು ಸರ್ವದಾ ಸಂಚರಿಸುವವನನ್ನಾಗಿಯೇ ನೋಡುತ್ತೇವೆ. ಕ್ಷಣಮಾತ್ರವಾದರೂ ಅವನು ವಿಶ್ರಾಂತಿಗಾಗಿ ಕುಳಿತುಕೊಳ್ಳುವುದನ್ನು ನಾವು ನೋಡುವುದೇ ಇಲ್ಲ.

English Translation

We behold the lover of the maiden (dawns), ever in movement, never resting for an instant, wearing inspearable and diffusive (radiance), the beloved abode of Mitra and Varuna.

ವಿಶೇಷವಿಷಯಗಳು

ಕನೀನಾಂ—ಕನ್ಯಕಾನಾಂ । ಕನ್ಯಾ ಕಮನೀಯಾ ಭವತಿ । ಕ್ವೇಯಂ ನೇತವ್ಯೇತಿ ವಾ । ಕಮನೇನಾನೀಯತ ಇತಿ ವಾ । ಕನತೇರ್ವಾ ಸ್ಯಾತ್ಕಾಂತಿಕರ್ಮಣಃ । (ನಿ. ೪-೧೫). ಆಕರ್ಷಕವಾದ ದೇಹವಿರುವುದರಿಂದಲಾಗಲಿ, ಯಾರಿಂದ ಕೈಹಿಡಿಯಲ್ಪಡುವಳು (ಅಥವಾ ಅವಳ ಪ್ರಿಯನಿಂದ ಕೈಹಿಡಿಯಲ್ಪಡುವಳು) ಎಂಬುವುದರಿಂದಾಗಲಿ, ಅಥವಾ ಕಾಂತ್ಯರ್ಥಕವಾದ ಕನ್ ಎಂಬ ಧಾತುವಿನಿಂದ ಕನ್ಯಾ ಪದವು ನಿಷ್ಪನ್ನವಾಗಿ ಶೋಭಿಸುವವಳು ಎಂಬರ್ಥವಿರುವುದರಿಂದಾಗಲೀ ಕನ್ಯಾ ಎಂಬ ಹೆಸರೆಂದು ನಿರುಕ್ತಕಾರರು ಈ ಪದದ ನಿರ್ವಚನವನ್ನು ತೋರಿದ್ದಾರೆ ಮತ್ತು,

ಕನೀನಕೇವ ವಿದ್ರಧೇ ನವೇ ದ್ರುಪದೇ ಅರ್ಭಕೇ । ಬಭ್ರೂ ಯಾಮೇಷು ಶೋಭೇತೇ ॥
(ಋ. ಸಂ. ೪-೩೨-೨೩)

ಎಂಬ ಋಕ್ಕನ್ನನುಸರಿಸಿ **ಕನೀನಕಾ** ಶಬ್ದಕ್ಕೆ ಮೇಲ್ಕಂಡ ನಿರ್ವಚನವು ಉಚಿತವಾಗಿರುವುದೆಂದು ತೋರಿಸಿದ್ದಾರೆ.

ಇಂತಹ ಚಿತ್ತಾಕರ್ಷಕಳೂ, ಕನ್ಯಾರೂಪದವಳೂ ಆದ ಉಷಸ್ಸಿಗೆ ಆದಿತ್ಯನು ಪ್ರಿಯನಾದ ಜಾರನಾಗಿದ್ದಾನೆಂದೂ ಅವಳು ಆದಿತ್ಯನಿಗೆ ಮೋಹಿತಳಾದ ಸ್ತ್ರೀಯೆಂದೂ,

**ವಾಜಿನೀವತೀ ಸೂರ್ಯಸ್ಯ ಯೋಷಾ ಚಿತ್ರಾಮಘಾ ರಾಯ ಈಶೇ ವಸೂನಾಂ ।**
**ಋಷಿಷ್ಟುತಾ ಜರಯಂತೀ ಮಘೋನ್ಯುಷಾ ಉಚ್ಛತಿ ವಹ್ನಿಭಿರ್ಗೃಣಾನಾ ॥**
(ಋ. ಸಂ. ೭-೭೫-೫)

ಇತ್ಯಾದಿ ಋಕ್ಕುಗಳಲ್ಲಿ ವರ್ಣಿಸಿದೆ.

**ಅನವಪೃಗ್ಣಾ**—ಒಂದಕ್ಕೊಂದು ಅಂಟಿಕೊಂಡು ಒಂದೆ ಕಡೆಯಲ್ಲಿರದೆ ವಿಸ್ತೃತವಾಗಿ ಹರಡಿರುವುದೆಂದರ್ಥ. (Not closely united but spreading all around). ಈ ಪದದಿಂದಲೇ ಹರಡಿರುವುದು ಎಂಬರ್ಥವೂ ಸೂಚಿತವಾಗಿರುವುದೆಂದು ಹೇಳಿದೆ. ಆದರೂ **ವಿತತಾ** ಎಂಬ ಪದವು ಪ್ರಸರದ ಆಧಿಕ್ಯವನ್ನು ತೋರಿಸುತ್ತದೆ.

### ವ್ಯಾಕರಣಪ್ರಕ್ರಿಯಾ

**ಪ್ರಯಂತಂ**—ಇಣ್ ಗತೌ ಧಾತು. ಲಡರ್ಥದಲ್ಲಿ ಶತೃ ಪ್ರತ್ಯಯ. **ಇಣೋ ಯಣ್** (ಪಾ. ಸೂ. ೬-೪-೮೧) ಎಂಬುದರಿಂದ ಧಾತುವಿಗೆ ಯಣ್. ದ್ವಿತೀಯಾ ಏಕವಚನದಲ್ಲಿ ನುಮಾಗಮ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ. ಪ್ರಾದಿಸಮಾಸವಾದಾಗ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

**ಜಾರಮ್**—ಜರಯತೀತಿ ಜಾರಃ ಆದಿತ್ಯಃ **ದಾರಜಾರೌ ಕರ್ತರಿ ಣಿಲುಕ್ ಚ** (ಪಾ. ಸೂ. ೩-೩-೨೦-೪) ಎಂಬುದರಿಂದ ಘಞಂತವಾಗಿ ನಿಪಾತಿತವಾಗಿದೆ. **ಕರ್ಷಾತ್ವತಃ**-(ಪಾ. ಸೂ. ೬-೧-೧೫೯) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ದ್ವಿತೀಯಾಏಕವಚನಾಂತರೂಪ.

**ಕನೀನಾಮ್**—ಕನ ಕಾಂತ್ಯಾದಿಷು ಧಾತು. **ಸರ್ವಧಾತುಭ್ಯ ಇನ್** ಎಂಬುದರಿಂದ ಇದಕ್ಕೆ ಇನ್ ಪ್ರತ್ಯಯ. ಇದಕ್ಕೆ ಸ್ತ್ರೀತ್ವವಿವಕ್ಷಾಮಾಡಿದಾಗ **ಕೃದಿಕಾರಾದಕ್ತಿನಃ** ಎಂಬ ವಚನದಿಂದ ಙೀಪ್. ಅಥವಾ ಕನ್ಯಾ ಶಬ್ದಕ್ಕೆ ಷಷ್ಠೀಬಹುವಚನ ಆಮ್ ಪರವಾದಾಗ ಛಾಂದಸವಾಗಿ ಸಂಪ್ರಸಾರಣ ಬರುತ್ತದೆ.

**ಪಶ್ಯಾಮಸಿ**—ದೃಶಿರ್ ಪ್ರೇಕ್ಷಣೇ ಧಾತು. ಲಟ್ ಉತ್ತಮಪುರುಷಬಹುವಚನದಲ್ಲಿ ಮಸ್ ಪ್ರತ್ಯಯ. ಶಪ್ ವಿಕರಣ. **ಪಾಘ್ರಾಧ್ಮಾ**-(ಪಾ. ಸೂ. ೭-೩-೭೮) ಎಂಬುದರಿಂದ ಧಾತುವಿಗೆ ಪಶ್ಯಾದೇಶ. **ಅತೋದೀರ್ಘೋಯಞಿ** (ಪಾ. ಸೂ. ೭-೩-೧೦೧) ಎಂಬುದರಿಂದ ಅದಂತಕ್ಕೆ ದೀರ್ಘ. **ಇದಂತೋಮಸಿ** (ಪಾ. ಸೂ. ೭-೧-೪೬) ಎಂಬುದರಿಂದ ಪ್ರತ್ಯಯಕ್ಕೆ ಇಕಾಗಮ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. **ತಾಸ್ಯನುದಾತ್ತೇತ್**—(ಪಾ. ಸೂ. ೬-೧-೧೮೬) ಎಂಬುದರಿಂದ ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಉಪನಿಪದ್ಯಮಾನಮ್**—ಉಪ, ನಿ, ಎಂಬ ಉಪಸರ್ಗಗಳಿಂದ ಕೂಡಿದ ಗತ್ಯರ್ಥವಾದ ಪದ ಧಾತುವಿಗೆ ಲಡರ್ಥದಲ್ಲಿ ಶಾನಚ್ ಪ್ರತ್ಯಯ. ದಿವಾದಿಯಾದುದರಿಂದ ಶ್ಯನ್ ವಿಕರಣ. ಲಸಾರ್ವಧಾತುಕವು ಹಿಂದಿನಂತೆ ಅನುದಾತ್ತವಾಗುವುದರಿಂದ ವಿಕರಣ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಪ್ರಾದಿಸಮಾಸವಾದಾಗ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

**ಅನವಪೃಗ್ಣಾ**—ನಞ್ ತತ್ಪುರುಷಸಮಾಸ. **ತತ್ಪುರುಷೇ**-(ಪಾ. ಸೂ. ೬-೨-೨) ಎಂಬುದರಿಂದ ಅವ್ಯಯ ಪೂರ್ವಪದಪ್ರಕೃತಿಸ್ವರ ಬರುತ್ತದೆ. ನಪುಂಸಕದಲ್ಲಿ **ಶೇಶ್ಛಂದಸಿ ಬಹುಲಮ್** (ಪಾ. ಸೂ. ೬-೧-೭೦) ಎಂಬುದರಿಂದ ಶಿಗೆ ಲೋಪ.

**ವಿತತಾ**—ತನು ವಿಸ್ತಾರೇ ಧಾತು. ಇದಕ್ಕೆ ನಿಷ್ಠಾ ಪ್ರತ್ಯಯ ಪರವಾದಾಗ **ಅನುದಾತ್ತೋಪದೇಶವ**-(ಪಾ. ಸೂ. ೬-೪-೩೭) ಎಂಬುದರಿಂದ ಧಾತುವಿನ ಅನುನಾಸಿಕವಾದ ನಕಾರಕ್ಕೆ ಲೋಪ. **ಗತಿರನಂತರಃ** (ಪಾ. ಸೂ. ೬-೨-೪೯) ಎಂಬುದರಿಂದ ಗತಿಗೆ (ವಿ) ಪ್ರಕೃತಿಸ್ವರ ಬರುತ್ತದೆ. ಹಿಂದಿನಂತೆ ನಪುಂಸಕದಲ್ಲಿ ಶಿಗೆ ಲೋಪ.

**ವಸಾನಮ್**—ವಸ ಆಚ್ಛಾದನೇ ಧಾತು. ಲಟಿಗೆ ಶಾನಚಾದೇಶ. ಅನುದಾತ್ತೇತ್ತಾದ ಧಾತುವಿನ ಪರದಲ್ಲಿರುವುದರಿಂದ ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಧಾಮ**—**ನಾಮನ್ ಸೀಮನ್ ವ್ಯೋಮನ್ ರೋಮನ್** (ಉ. ಸೂ. ೪-೧೫೦) ಎಂಬುದರಿಂದ ಮನಿನಂತವಾಗಿ ನಿಪಾತಿತವಾಗಿದೆ. ॥ ೪ ॥

---

ಸಂಹಿತಾಪಾಠಃ

ಅನಶ್ವೋ ಜಾತೋ ಅನಭೀಶುರರ್ವಾ ಕನಿಕ್ರದತ್ಪತಯದೂರ್ಧ್ವಸಾನುಃ ।
ಅಚಿತ್ತಂ ಬ್ರಹ್ಮ ಜುಜುಷುರ್ಯುವಾನಃ ಪ್ರ ಮಿತ್ರೇ ಧಾಮ ವರುಣೇ
ಗೃಣಂತಃ ॥ ೫ ॥

ಪದಪಾಠಃ

ಅನಶ್ವಃ । ಜಾತಃ । ಅನಭೀಶುಃ । ಅರ್ವಾ । ಕನಿಕ್ರದತ್ । ಪತಯತ್ । ಊರ್ಧ್ವಽಸಾನುಃ ।
ಅಚಿತ್ತಂ । ಬ್ರಹ್ಮ । ಜುಜುಷುಃ । ಯುವಾನಃ । ಪ್ರ । ಮಿತ್ರೇ । ಧಾಮ । ವರುಣೇ । ಗೃಣಂತಃ ॥ ೫ ॥

॥ ಸಾಯಣಭಾಷ್ಯಂ ॥

ಸ ಏವಾದಿತ್ಯೋಽನಶ್ವೋ ಯದ್ಯಪಿ ಶೀಘ್ರಗಾಮ್ಯಶ್ವರಹಿತಃ ತಥಾನಭೀಶುರಾಲಂಬನಾಧಾರಪ್ರಗ್ರಹಸ್ಥಾನೀಯರಶ್ಮಿರಹಿತಃ ತಥಾಪ್ಯರ್ವಾ ಜಾತಃ ಶೀಘ್ರಗಮನವಾನ್ ಸಂಪನ್ನಃ । ತಥಾವಿಧೋಽಯಮಾದಿತ್ಯಃ ಕನಿಕ್ರದದತ್ಯರ್ಥಂ ಕ್ರಂದಯನ್ ॥ ಕ್ರಂದೇರ್ಯಙ್ಲುಗಂತಾಚ್ಛತರಿ ದಾಧರ್ತ್ಯಾದೌ ನಿಪಾತ್ಯತೇ ॥ ಊರ್ಧ್ವಸಾನುರುಪರ್ಯುಪರಿ ಸಮುಚ್ಛ್ರಯಣಃ ಸನ್ ಪತಯತ್ । ಗಚ್ಛತಿ । ಅಚಿತ್ತಂ ಚಿತ್ತಾವಿಷಯಂ ಬ್ರಹ್ಮ ಪರಿವೃಢಮುಕ್ತರೂಪಂ ಕರ್ಮ ಮಿತ್ರೇ ವರುಣೇ ಚ ಉಭಯೋರ್ಧಾಮ ತೇಜಃಸ್ಥಾನಂ ಯುವಾನೋ ಮಿಶ್ರಯಂತಸ್ತಯೋರ್ಧಾಮ್ನ್ಯಾರೋಪಯಂತಃ ತಥಾ ಪ್ರ ಗೃಣಂತೋ ಯುವಯೋಸ್ತೇಜಃ ಪ್ರಭವಮಿತಿ ಪ್ರಕರ್ಷೇಣ ಸ್ತುವಂತೋ ಜುಜುಷುಃ । ಸೇವಂತೇ । ಮನುಷ್ಯಾಃ ಸೂರ್ಯಸ್ಯ ನಿರಾಲಂಬಾಂತರಿಕ್ಷಸಂಚಾರಾತ್ಮಕಂ ಕರ್ಮ ವರುಣಮಿತ್ರಯೋರಧೀನಮಿತಿ ಸ್ತುವಂತೀತ್ಯರ್ಥಃ ॥

ಪ್ರತಿಪದಾರ್ಥ

**ಅನಶ್ವಃ**—(ಆದಿತ್ಯನು) ಅಶ್ವರಹಿತನಾಗಿಯೂ । **ಅನಭೀಶುಃ**—ಕಡಿವಾಣದಂತೆ ಆಲಂಬನರೂಪವಾದ ರಶ್ಮಿಗಳಿಲ್ಲದವನಾಗಿಯೂ (ಆದರೂ ಕೂಡ) । **ಅರ್ವಾ ಜಾತಃ**—ಶೀಘ್ರವಾಗಿ ಸಂಚಾರಮಾಡತಕ್ಕವನಾಗಿಯೂ । **ಕನಿಕ್ರದತ್**—ಗಟ್ಟಿಯಾಗಿ ಶಬ್ದವನ್ನು ಮಾಡುವವನಾಗಿಯೂ । **ಊರ್ಧ್ವಸಾನುಃ**—ಮೇಲೆ ಮೇಲೆ ಹತ್ತುವವನಾಗಿಯೂ । **ಪತಯತ್**—ಸಂಚರಿಸುತ್ತಾನೆ । **ಅಚಿತ್ತಂ**—ಮನಸ್ಸಿಗೆ ಗೋಚರವಾಗದೇ ಗೂಢವಾದ ತತ್ತ್ವವುಳ್ಳ । **ಬ್ರಹ್ಮ**—ಯಜ್ಞಕರ್ಮವನ್ನು । **ಮಿತ್ರೇ ವರುಣೇ**—ಮಿತ್ರಾವರುಣರ । **ಧಾಮ**—ತೇಜೋರೂಪದ ವಾಸಸ್ಥಾನದೊಂದಿಗೆ । **ಯುವಾನಃ**—ಒಂದುಗೂಡಿಸುತ್ತಲೂ । **ಪ್ರ ಗೃಣಂತಃ**—(ಸಕಲವೂ ಮಿತ್ರಾವರುಣರ ಪ್ರಭಾವವು ಎಂಬುದಾಗಿ) ಹೊಗಳುತ್ತಲೂ । **ಜುಜುಷುಃ**—(ಮಾನವರು) ಸೇವಿಸುತ್ತಾರೆ ॥

ಭಾವಾರ್ಥ

ಆದಿತ್ಯನು ಅಶ್ವರಹಿತನಾಗಿಯೂ, ಕಡಿವಾಣದಂತೆ ಆಲಂಬನರೂಪವಾದ ರಶ್ಮಿಗಳಿಲ್ಲದವನಾಗಿಯೂ ಆದರೂ ಕೂಡ ಶೀಘ್ರವಾಗಿ ಸಂಚಾರಮಾಡತಕ್ಕವನಾಗಿಯೂ ಗಟ್ಟಿಯಾಗಿ ಶಬ್ದವನ್ನು ಮಾಡುವವನಾಗಿಯೂ, ಮೇಲೆ ಮೇಲೆ ಹತ್ತುವವನಾಗಿಯೂ ಸಂಚರಿಸುತ್ತಾನೆ. ಮನಸ್ಸಿಗೆ ಗೋಚರವಾಗದೇ ಇರುವ ಗೂಢವಾದ ತತ್ತ್ವವುಳ್ಳ ಯಜ್ಞಕರ್ಮವನ್ನು ಮಿತ್ರಾವರುಣರ ತೇಜೋರೂಪವಾದ ವಾಸಸ್ಥಾನವಾದ ಈ ಆದಿತ್ಯನೊಂದಿಗೆ ಒಂದುಗೂಡಿಸುತ್ತಲೂ, ಈ ಸಕಲವೂ ಮಿತ್ರಾವರುಣರ ಪ್ರಭಾವವು ಎಂಬುದಾಗಿ ಹೊಗಳುತ್ತಲೂ ಸಹ ಮಾನವರು ಈ ಮಿತ್ರಾವರುಣರನ್ನು ಸೇವಿಸುತ್ತಾರೆ.

English Translation

Without steeds, without stay, (he is nevertheless) borne swift-moving and loud-sounding; he travels, ascending higher and higher, connecting the inconceivable mystery (of sacred rites) with the radiance (abiding) in Mitra and Varuna, (which men), eulogizing, glorify.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಆದಿತ್ಯನ ವರ್ಣನೆಯಿದೆ. ಅನಶ್ವಃ ಇತ್ಯಾದಿ ವಿಶೇಷಣಗಳು ಆದಿತ್ಯನ ಸ್ವರೂಪವನ್ನು ತಿಳಿಸುತ್ತವೆ. ಮತ್ತು ಆದಿತ್ಯನ ಮಹಿಮೆಯೂ ಮತ್ತು ಅವನಿಂದ ಲೋಕಕ್ಕೆ ಆದ ಉಪಕಾರಗಳೂ ಮಿತ್ರಾವರುಣರ ಪ್ರಭಾವದಿಂದಲೇ ಆಗಿದೆ ಎಂಬ ಸ್ತುತಿಯೂ ಇದೆ. ಈ ಋಕ್ಕಿನ ವಿಷಯದಲ್ಲಿ Bloomfield ಎಂಬ ಪಂಡಿತನು ಕೊಟ್ಟಿರುವ ಅಭಿಪ್ರಾಯವು ಈರೀತಿಯಿದೆ. ಮೊದಲು ಆತನು ಈ ಋಕ್ಕಿನ ಪೂರ್ವಾರ್ಧದ ಆನುಪೂರ್ವಿಯಿಂದ ಪ್ರಾರಂಭಿಸುವ

ಅನಶ್ವೋ ಜಾತೋ ಅನಭೀಶುರುಕ್ಥ್ಯೋ೩ ರಥಸ್ತ್ರಿಚಕ್ರಃ ಪರಿ ವರ್ತತೇ ರಜಃ ।
ಮಹತ್ತದ್ವೋ ದೇವ್ಯಸ್ಯ ಪ್ರವಾಚನಂ ದ್ಯಾಮೃಭವಃ ಪೃಥಿವೀಂ ಯಚ್ಚ ಪುಷ್ಯಥ ॥

(ಋ. ಸಂ. ೪-೩೬-೧)

ಎಂಬ ಋಕ್ಕನ್ನುದಹರಿಸಿ ಈ ಎರಡು, ಋಕ್ಕುಗಳಿಗೂ ಇರತಕ್ಕ ಸಾದೃಶ್ಯವನ್ನು ಈರೀತಿ ವಿವರಿಸಿದ್ದಾನೆ.

These two stanzas seem to me to offer a clear case of relative date· In IV· 36-I The Ribhus are said to have fashioned a chariot, fit to be praised in hymns, because without horse and bridle it courses with three wheels about the air· Because it is three-wheeled it seems to be the chariot of the Asvins. (cf. I· 120-10) That sort of a Vehicle is, the lord knows, marvellous enough, but it will readily pass in the light of mythic fancies and ethnological parellels elsewhere. Similarly in VI· 66-7, the Maruts are described along the same line of fancy, even more energetically, as crossing the air without span of deer or horses, without charioteer and without bridle· In I. 152-5, the mystery is heightened to the second power, as it were·

Any attempt to extract a picture with clear outline out of I· 152-5, will prove quite futile· The Pada is built by a secondary Poetaster upon the previously existing Pada of IV· 36-1, he 'goes' his model 'one better' and loses himself in mock mythic fatuity—one of the standard failings of his class· Something like "the steed, which is after all no horse, and goes without bridle"; or, 'the steed which is born of no horse' Etc.

( Rig-Veda Repetitions Vol· I P. 146-147 )·

ಮೇಲೆ ಉದಹರಿಸಿದ VI. 36-1ನೇ ಋಕ್ಕಿನಲ್ಲಿಯೂ ಮತ್ತು,

ಅನೇನೋ ವೋ ಮರುತೋ ಯಾಮೋ ಅಸ್ತ್ವನಶ್ವಶ್ಚಿದ್ಯಮಜತ್ಯರಥೀಃ ।
ಅನವಸೋ ಅನಭೀಶೂ ರಜಸ್ತೂರ್ವಿ ರೋದಸೀ ಪಥ್ಯಾ ಯಾತಿ ಸಾಧನ್ ॥

(ಋ. ಸಂ. ೬-೬೬-೭)

ಎಂಬ ಋಕ್ಕಿನಲ್ಲಿಯೂ ವರ್ಣಿಸಿರುವ ಭಾವಗಳಷ್ಟು ಉತ್ತಮವಾದ ರೀತಿಯಲ್ಲಿ ಪ್ರಕೃತವಾದ ಋಕ್ಕಿನ ವರ್ಣನೆಯಲ್ಲಿ ಭಾವವು ಅಭಿವ್ಯಕ್ತವಾಗಿಲ್ಲ. ವರ್ಣನೆಯೂ ಸಹ ಅಂತಹ ಉತ್ತಮವಾದ ಶ್ರೇಣಿಗೆ ಸೇರತಕ್ಕದ್ದಲ್ಲ. ಈ ವರ್ಣನೆಯಿಂದ ಒಂದು ಸಿಷ್ಕೃಷ್ಟವಾದ ಚಿತ್ರವೂ ಮನಸ್ಸಿಗೆ ಹೊಳೆಯುವುದಿಲ್ಲ ಎಂಬುದೇ ಈ ಅಭಿಪ್ರಾಯದ ಮುಖ್ಯವಾದ ಸಾರಾಂಶ

ಮೇಲಿನ ಅಭಿಪ್ರಾಯದಲ್ಲಿ ಕೊಂಚಮಟ್ಟಿಗೆ ಸತ್ಯಾಂಶವಿದ್ದರೂ ಸಹ, "any attempt to extract· a picture with clear outline out of I· 152-5, will prove quite futile" ಈ ಋಕ್ಕಿನ ವರ್ಣನೆಯಿಂದ ಒಂದು ನಿರ್ದಿಷ್ಟವಾದ ಚಿತ್ರವೇ ಗೋಚರಿಸುವುದಿಲ್ಲ ಎಂದು ಹೇಳುವಷ್ಟು ಬೀಳಾಗಿಲ್ಲ.

**ಅಚಿತ್ತಂ ಬ್ರಹ್ಮ ಮಿತ್ರಾವರುಣೇ ಧಾಮ ಯುವಾನಃ**—ಮನಸ್ಸಿಗೆ ಗೋಚರವಾಗದೇ ಗೂಢವಾದ ತತ್ತ್ವವುಳ್ಳ ಯಜ್ಞಕರ್ಮವನ್ನು ಮಿತ್ರಾವರುಣರ ತೇಜೋರೂಪವಾದ ಸ್ಥಾನದೊಂದಿಗೆ ಒಂದುಗೂಡಿಸುತ್ತಾ ಎಂಬ ವರ್ಣನೆಯಲ್ಲಿ ಒಂದು ಆಧ್ಯಾತ್ಮಿಕವಾದ ತತ್ತ್ವವು ಹೇಳಲ್ಪಟ್ಟಿದೆ. **ಅಚಿತ್ತಂ** ಗೂಢವಾಗಿರುವುದೂ ಸಾಧಾರಣವಾದ ದೃಷ್ಟಿಗೆ ಗೋಚರವಾಗದಿರುವುದೂ ಆದ ತತ್ತ್ವದ ವಿಷಯವನ್ನು ಹೇಳಿದೆ ಎಂದು ಋಷಿಯೇ ಹೇಳಿದ್ದಾನೆ.

**ಬ್ರಹ್ಮ**—ಬ್ರಹ್ಮ ಶಬ್ದಕ್ಕೆ ಹಿಂದೆ ಹೇಳಿರುವ ನಾನಾರ್ಥಗಳಲ್ಲಿ ಇಲ್ಲಿ ಯಜ್ಞಕರ್ಮವೆಂದರ್ಥಮಾಡಿದೆ. ನಿರುಕ್ತಕಾರರು ಉದಹರಿಸಿರುವ,

**ಯಾಮಥರ್ವಾ ಮನುಷ್ಪಿತಾ ದಧ್ಯಙ್ ಧಿಯಮತ್ನತ ।**
**ತಸ್ಮಿನ್ ಬ್ರಹ್ಮಾಣಿ ಪೂರ್ವಥೇಂದ್ರ ಉಕ್ಥಾ ಸಮಗ್ಮತಾರ್ಚನ್ನನು ಸ್ವರಾಜ್ಯಂ ।**
(ಋ. ಸಂ. ೧-೮೦-೧೬)

ಎಂಬ ಋಕ್ಕಿನಲ್ಲಿ **ಬ್ರಹ್ಮಾಣಿ** ಎಂಬುದಕ್ಕೆ ಯಾಸ್ಕರು **ಕರ್ಮಾಣಿ** ಎಂದರ್ಥಮಾಡಿರುವಂತೆ ಇಲ್ಲಿಯೂ ಯಜ್ಞಕರ್ಮವೆಂದರ್ಥ.

ವ್ಯಾಕರಣಪ್ರಕ್ರಿಯಾ

**ಅನಶ್ವಃ**—ನ ವಿದ್ಯಂತೇ ಅಶ್ವಾಃ ಯಸ್ಯ ಸಃ **ನಞ್ಸುಭ್ಯಾಮ್** (ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ. ಹೀಗೆಯೇ ನ ವಿದ್ಯತೆ ಅಭೀಶುಃ ಎಂಬಲ್ಲಿಯೂ ಉತ್ತರಪದಾಂತೋದಾತ್ತ ಸ್ವರ ಬರುತ್ತದೆ.

**ಜಾತಃ**-ಜನೀ ಪ್ರಾದುರ್ಭಾವೇ ಧಾತು ನಿಷ್ಠಾ ಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ

**ಕನಿಕ್ರದತ್**—ಕ್ರದಿ ಆಹ್ವಾನೇ ರೋದನೇ ಚ ಧಾತು. ಅತಿಶಯಾರ್ಥತೋರುವಾಗ **ಧಾತೋರೇಕಾಚಃ**ಕ್ರಿ (ಪಾ. ಸೂ. ೩-೧-೨೨) ಎಂಬುದರಿಂದ ಯಙ್ ಬಂದಾಗ **ಯಙೋಚಿಚ** ಎಂಬುದರಿಂದ ಅದಕ್ಕೆ ಲುಕ್. ಯಙ್ ಲುಗಂತದ ಮೇಲೆ ಶತೃ ಪ್ರತ್ಯಯ ವಿವಕ್ಷಾಮಾಡಿದಾಗ **ದಾಧರ್ತಿದರ್ಧರ್ತಿ**-(ಪಾ. ಸೂ. ೭-೪-೬೫) ಎಂಬುದರಿಂದ ನಿಪಾತಿತವಾಗಿದೆ. **ಅಭ್ಯಾಸ್ತಾನಾಮಾದಿಃ**(ಪಾ. ಸೂ ೬-೧-೧೮೯)ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಪತಯೆತ್**—ಪತ್ಲೃ ಗತೌ ಧಾತು. ಚುರಾದಿ. ಅದಂತವಾದ ಧಾತು. **ಸತ್ಯಾಪಪಾಶ** ಎಂಬುದರಿಂದ ಸ್ವಾರ್ಥದಲ್ಲಿ ಣಿಚ್ ಣಿಜಂತದ ಮೇಲೆ ಲೇಟ್. ಪ್ರಥಮಪುರುಷಏಕವಚನದಲ್ಲಿ ತಿಪ್. ಇತಶ್ಚ ಲೋಪಃ (ಪಾ. ಸೂ. ೩-

೪-೯೭) ಎಂಬುದರಿಂದ ಇಕಾರ ಲೋಪ. **ಲೇಟೋಽಡಾಟೌ** (ಪಾ. ಸೂ. ೩-೪-೯೪) ಎಂಬುದರಿಂದ ಅದಕ್ಕೆ ಅಡಾಗಮ. ಶಪ್ ನಿಮಿತ್ತವಾಗಿ ಣಿಚಿಗೆ ಗುಣ. ಅಯಾದೇಶ. ಅಲ್ಲೋಪಕ್ಕೆ ಸ್ಥಾನಿವದ್ಭಾವವಿರುವುದರಿಂದ ಣಿಚ್ ನಿಮಿತ್ತವಾಗಿ ಉಪಧಾವೃದ್ಧಿ ಬರುವುದಿಲ್ಲ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಊರ್ಧ್ವಸಾನುಃ**—ಬಹುವ್ರೀಹಿಸಮಾಸ. **ಬಹುವ್ರೀಹೌ ಪ್ರಕೃತ್ಯಾ**-(ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಅಚಿತ್ತಮ್**—ನಞ್ಸ್ವರಕ್ಕೆ ಬಾಧಕವಾಗಿ **ಪರಾದಿಶ್ಛಂದಸಿ ಬಹುಲಮ್** (ಪಾ. ಸೂ. ೬-೨-೧೯೯) ಎಂಬುದರಿಂದ ಉತ್ತರಪದ ಆದ್ಯುದಾತ್ತಸ್ವರ ಬರುತ್ತದೆ.

**ಬ್ರಹ್ಮ**—ಬೃಹಿ ವೃದ್ಧೌ ಧಾತು **ಬೃಂಹೇರ್ನೋಽಚ್ಚ** (ಉ. ಸೂ. ೪-೫೮೫) ಎಂಬುದರಿಂದ ಮನಿನ್ ಪ್ರತ್ಯಯ. ನುಮಿನಿಂದ ಬಂದ ನಕಾರಕ್ಕೆ ಅತ್ವ. ನಕಾರಕ್ಕೆ ಅಕಾರ ಬಂದಾಗ ಯಣಾದೇಶ. ನಿತ್ ಪ್ರತ್ಯಯವಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಜುಜುಷುಃ**—ಜುಷೀ ಪ್ರೀತಿಸೇವನಯೋಃ ಧಾತು. ಛಾಂದಸವಾಗಿ ವರ್ತಮಾನಾರ್ಥದಲ್ಲಿ ಲಿಟ್. ಪ್ರಥಮಪುರುಷಬಹುವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ಯುವಾನಃ**—ಯು ಮಿಶ್ರಣೇ ಧಾತು. ವ್ಯತ್ಯಯದಿಂದ ಲಡರ್ಥದಲ್ಲಿ ಶಾನಚ್ ಪ್ರತ್ಯಯ. **ಅಚಿಶ್ನುಧಾತುಭ್ರುವಾಂ** ಎಂಬುದರಿಂದ ಉವಙಾದೇಶ. ವೃಷಾದಿ ಪಠಿತವಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಗೃಣಂತಃ**—ಗೄ ಶಬ್ದೇ ಧಾತು. ಕ್ರ್ಯಾದಿ. ಲಡರ್ಥದಲ್ಲಿ ಶತೃಪ್ರತ್ಯಯ. ಶ್ನಾ ವಿಕರಣ. **ಪ್ವಾದೀನಾಂ ಹ್ರಸ್ವಃ** (ಪಾ. ಸೂ. ೭-೩-೮೦) ಎಂಬುದರಿಂದ ಧಾತುವಿಗೆ ಹ್ರಸ್ವ. **ಶ್ನಾಭ್ಯಸ್ತಯೋರಾತಃ** (ಪಾ. ಸೂ. ೬-೪-೧೧೨) ಎಂಬುದರಿಂದ ವಿಕರಣದ ಆಕಾರಕ್ಕೆ ಲೋಪ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ. ಪ್ರಥಮಾಬಹುವಚನಾಂತರೂಪ. ॥ ೫ ॥



ಸಂಹಿತಾಪಾಠಃ

ಆ ಧೇನವೋ ಮಾಮತೇಯಮವಂತೀರ್ಬ್ರಹ್ಮಪ್ರಿಯಂ ಪೀಪಯನ್ತ್ಸಸ್ಮಿ-
ನ್ನೂಧನ್ ।
ಪಿತ್ವೋ ಭಿಕ್ಷೇತ ವಯುನಾನಿ ವಿದ್ವಾನಾಸಾವಿವಾಸನ್ನದಿತಿಮುರುಷ್ಯೇತ್ ।
॥ ೬ ॥

ಪದಪಾಠಃ

ಆ । ಧೇನವಃ । ಮಾಮತೇಯಂ । ಅವಂತೀಃ । ಬ್ರಹ್ಮಽಪ್ರಿಯಂ । ಪೀಪಯನ್ । ಸಸ್ಮಿನ್ । ಊಧನ್ ।

ಪಿತ್ವಃ । ಭಕ್ಷೀತ । ವಯುನಾನಿ । ವಿದ್ವಾನ್ । ಆಸಾ । ಅ ಽ ವಿವಾಸನ್ । ಅದಿತಿಂ । ಉರುಷ್ಯೇತ್ ॥ ೬ ॥

ಸಾಯಣಭಾಷ್ಯಂ

ಮಾಮತೇಯಂ ಮಮತಾಯಾಃ ಪುತ್ರಂ ದೀರ್ಘತಮಸಂ ಮಾಂ ಬ್ರಹ್ಮಪ್ರಿಯಂ ಪರಿವೃಢಸ್ಯ ಕರ್ಮಣಃ ಪ್ರಿಯತಮಂ ಪರಿವೃಢಸ್ಯಾಗ್ನೇಃ ಪ್ರೀಣಯಿತಾರಂ ವಾ ಅವಂತೀರವಂತ್ಯಃ ಪ್ರೀಣಯಂತ್ಯೋ ಧೇನವೋ ಗಾವಃ ಸಸ್ಮಿನ್ ಸ್ವಕೀಯ ಊಧನ್ನೂಧಸ್ಯಾ ಪೀಪಯನ್ । ಸರ್ವತ ಆಪ್ಯಾಯಯಂತು ॥ ಪ್ಯಾಯತೇರ್ಣಿಚಿ ಚ್ಛಾಂದಸಃ ಪೀಭಾವಃ ॥ ಊಧೋಗತೇನ ಕ್ಷೀರೇಣ ಯುವಾಭ್ಯಾಂ ಪ್ರದೇಯೇನ ನೋಽಸ್ಮಾನ್ರಕ್ಷಂತ್ವಿತ್ಯರ್ಥಃ ಮಿತ್ರಾವರುಣಾಭ್ಯಾಂ ಪಯಸ್ಯೇತಿ ಶ್ರುತೇಃ । ಏವಂ ಪ್ರವೃತ್ತಹವಿರ್ವಯುನಾನ್ಯನುಷ್ಠಾನವಿಷಯಜ್ಞಾನಾನಿ ವಿದ್ವಾಞ್ಜಾನನ್ ಹುತಶೇಷೋ ಭಕ್ಷಣೀಯ ಇತ್ಯವಗಚ್ಛನ್ ದೀರ್ಘತಮಾಃ ಪಿತ್ವಃ ಪಿತೋರ್ಹುತಶಿಷ್ಟಸ್ಯಾನ್ನಸ್ಯ ತಾದೃಗನ್ನಮಾಸಾಸ್ಯೇನ ಭಕ್ಷಯಿತುಂ ಭಿಕ್ಷೇತ । ಯಾಚೇತ ಯುಷ್ಮಾನ್ । ಕಿಂಚ ವಿವಾಸನ್ ಯುವಾಂ ಪರಿಚರನ್ನದಿತಿಮಖಂಡಿತಮನ್ಯೂನಮೇತತ್ಕರ್ಮೋರುಷ್ಯೇತ್ । ಯಥಾ ಶಿಷ್ಟಂ ಭಿಕ್ಷೇತ ಯಥಾ ಚ ಕರ್ಮ ಸಮಾಪನೇನ ರಕ್ಷೇತ್ ತಥಾಪೀಪಯನ್ನಿತ್ಯರ್ಥಃ ॥

ಪ್ರತಿಪದಾರ್ಥ

**ಬ್ರಹ್ಮಪ್ರಿಯಂ**—ಯಜ್ಞಕರ್ಮದಲ್ಲಿ ಶ್ರದ್ಧೆಯುಳ್ಳವನೂ (ಅಥವಾ) ಅಗ್ನಿಯನ್ನು ತೃಪ್ತಿಪಡಿಸುವವನೂ । **ಮಾಮತೇಯಂ**—ಮಮತೆಯ ಪುತ್ರನೂ ಆದ ದೀರ್ಘತಮಸ್ಸನ್ನು । **ಅವಂತೀಃ**—ರಕ್ಷಿಸಿ ಸಂತೋಷಗೊಳಿಸುವ । **ಧೇನವಃ**—ಗೋವುಗಳು । **ಸಸ್ಮಿನ್**—ತಮ್ಮ ತಮ್ಮ । **ಊಧನ್**—ಕೆಚ್ಚಲುಗಳಲ್ಲಿ । **ಆ ಪೀಪಯನ್**—(ಮಿತ್ರಾವರುಣರ ಪೂಜೆಗೆ ಬೇಕಾದ) ಕ್ಷೀರಗಳನ್ನು ತುಂಬಿಕೊಳ್ಳಲಿ । (ಈ ಸಹಾಯದಿಂದ) । **ವಯುನಾನಿ**—(ನೆರವೇರಿಸಬೇಕಾದ) ಯಜ್ಞಕ್ರಿಯೆಗಳ ಜ್ಞಾನಗಳನ್ನು । **ವಿದ್ವಾನ್**—ಪಡೆದುಕೊಂಡು (ಹುತಶೇಷವನ್ನು ತಿನ್ನಬೇಕೆಂಬ ತಿಳಿವಳಿಕೆಯನ್ನು ಹೊಂದಿ) । **ಪಿತ್ವಃ**—ಹುತಮಾಡಿದಮೇಲೆ ಉಳಿದ ಅನ್ನವನ್ನು । **ಆಸಾ**—ಸ್ವಂತವಾಗಿ ಬಾಯಿಂದ ತಿನ್ನುವುದಕ್ಕೆ । **ಭಿಕ್ಷೇತ**—ಬೇಡಲಿ । (ಮತ್ತು) ಆ **ವಿವಾಸನ್**—(ನಿಮ್ಮನ್ನು) ಪೂಜಿಸುತ್ತಾ । **ಅದಿತಿಂ**-ನ್ಯೂನವಿಲ್ಲದೇ ಪೂರ್ಣವಾದ ಯಜ್ಞಕ್ರಿಯೆಯನ್ನು । **ಉರುಷ್ಯೇತ್** – ಮುಗಿಸಿ ರಕ್ಷಿಸಲಿ.

ಭಾವಾರ್ಥ

ಯಜ್ಞಕರ್ಮದಲ್ಲಿ ಶ್ರದ್ಧೆಯುಳ್ಳವನೂ, ಮಮತೆಯಪುತ್ರನೂ ಆದ ದೀರ್ಘತಮಸ್ಸನ್ನು ರಕ್ಷಿಸಿ ಸಂತೋಷಗೊಳಿಸುವ ಗೋವುಗಳು ತಮ್ಮ ತಮ್ಮ ಕೆಚ್ಚಲುಗಳಲ್ಲಿ ಮಿತ್ರಾವರುಣರ ಪೂಜೆಗೆ ಬೇಕಾದ ಕ್ಷೀರಗಳನ್ನು ತುಂಬಿಕೊಳ್ಳಲಿ. ಈ ಸಹಾಯದಿಂದ ನೆರವೇರಿಸಬೇಕಾದ ಯಜ್ಞಕ್ರಿಯೆಗಳ ಜ್ಞಾನವನ್ನು ಹೊಂದಿ ಹುತಾನಂತರ ಉಳಿದ ಅನ್ನವನ್ನು ತಾನು ತಿನ್ನುವುದಕ್ಕೆ ನಿಮ್ಮ ಅನುಮತಿಯನ್ನು ಬೇಡಲಿ. ಮತ್ತು ನಿಮ್ಮನ್ನು ಪೂಜಿಸುತ್ತಾ ಅಖಂಡವಾದ ಯಜ್ಞಕ್ರಿಯೆಯನ್ನು **ಮುಗಿಸಲಿ.**

English Translation

May the milch cows, propitious to the devout son of Mamata, be possessed of well-filled udders: knowing the rites (necessary to be performed),

let him beg (the residue) of the offerings for his eating, and worhsipping (you both) complete the perfect (ceremony).

ವಿಶೇಷವಿಷಯಗಳು

ಬ್ರಹ್ಮಪ್ರಿಯಂ—ಪರಿವೃಢಸ್ಯ ಕರ್ಮಣಃ ಪ್ರಿಯತಮಂ, ಪರಿವೃಢಸ್ಯ ಅಗ್ನೇಃ ಪ್ರೀಣಯಿತಾರಂ ವಾ । ಬ್ರಹ್ಮ ಶಬ್ದಕ್ಕೆ ಅನ್ನ, ಕರ್ಮ, ಸ್ತುತಿ, ಇತ್ಯಾದ್ಯರ್ಥಗಳಿರುವುದೆಂದು ಹಿಂದೆ ತಿಳಿಸಿದೆ. ಇಲ್ಲಿ ಪೌಷ್ಕಲ್ಯ ವನ್ನು ಪಡೆದ ಕರ್ಮಪರವಾಗಿಯಾಗಲಿ, ಅಗ್ನಿಪರವಾಗಿಯಾಗಲಿ ಅರ್ಥಮಾಡಬಹುದೆಂದು ಸಾಯಣರು ತಿಳಿಸಿದ್ದಾರೆ. ವೃದ್ಧಿಯನ್ನು ಹೊಂದು ಎಂಬರ್ಥವುಳ್ಳ ಬೃಹಿ ಧಾತುವಿನಿಂದ ಪ್ರಕೃತವಾದ ಬ್ರಹ್ಮಶಬ್ದವು ನಿಷ್ಪನ್ನವಾಗಿ ವೃದ್ಧಿಯನ್ನು ಪಡೆದ ಕರ್ಮ ಅಥವಾ ಅಗ್ನಿಯೆಂದರ್ಥ. ಇಂತಹ ಕರ್ಮದಲ್ಲಿ ಆಸಕ್ತಿಯುಳ್ಳವನು ಅಥವಾ ಅಗ್ನಿಯನ್ನು ತನ್ನ ಪೂಜೆಗಳಿಂದ ತೃಪ್ತಿಗೊಳಿಸುವವನು ಆದುದರಿಂದ ಬ್ರಹ್ಮಪ್ರಿಯನೆಂದು ದೀರ್ಘತಮಸ್ಸಿಗೆ ವಿಶೇಷಣವಾಗಿದೆ. ಅಥವಾ ಅಗ್ನಿಪೂಜಾ ವಿಷಯಕವಾದ ಕರ್ಮಪ್ರಿಯನೆಂದೂ ಹೇಳಬಹುದು. ದೀರ್ಘತಮಸ್ಸಿಗೆ ಅಗ್ನಿಯಲ್ಲಿ ವಿಶೇಷವಾದ ಭಕ್ತಿಯಿರಲು ಕಾರಣವನ್ನು ತೋರಿಸುವ ಹಿಂದಿನ ಕಥೆಯಿದೆ.

ಸ ವ್ಯಾಜಹಾರ ತಂ ಗರ್ಭಂ ತಮಸ್ತೇ ದೀರ್ಘಮಸ್ತ್ವಿತಿ ।
ಸ ಚ ದೀರ್ಘತಮಾ ನಾಮ ಬಭೂವರ್ಷಿರುಚಥ್ಯಜಃ ॥
ಸ ಜಾತೋಽಭ್ಯಪತದ್ದೇವಾನಕಸ್ಮಾದಂಧತಾಂ ಗತಃ ।
ದದುರ್ದೇವಾಸ್ತು ತನ್ನೇತ್ರೇ ತತೋಽನಂಧೋ ಬಭೂವ ಸಃ ॥
ಸ ವೇದಿಷದ ಇತ್ಯಸ್ತೌಚ್ಚತುರ್ಭಿರ್ಜಾತವೇದಸಂ ।

(ಬೃ. ದೇ. ೪-೧೪-ರಿಂದ-೧೭)

ಗರ್ಭಿಣಿಯಾದವಳೂ ಉಚಥ್ಯಭಾರ್ಯೆಯೂ ಆದ ಮಮತೆಯಲ್ಲಿ ಮೋಹಿತನಾಗಿ ಉಚಥ್ಯನ ಭ್ರಾತೃವಾದ ಬೃಹಸ್ಪತಿಯು ಮಮತೆಯಲ್ಲಿ ರಮಿಸುತ್ತಿರುವಾಗ ಒಳಗಿದ್ದ ಗರ್ಭವು ಬೃಹಸ್ಪತಿಯ ರೇತಸ್ಸನ್ನು ತಡೆದುದೂ ಅದಕ್ಕಾಗಿ ಬೃಹಸ್ಪತಿಯು ಆ ಗರ್ಭಕ್ಕೆ ನೀನು ದೀರ್ಘತಮಸ್ಸಾಗಿ (ಎಂದರೆ ಹುಟ್ಟು ಕುರುಡನಾಗಿ) ಹುಟ್ಟು ಎಂದು ಶಾಪಕೊಟ್ಟ ವಿಷಯವನ್ನೂ ಹಿಂದೆ ತಿಳಿಸಿದೆ. ಆ ಶಾಪದ ಶಕ್ತಿಯಿಂದ ಅಂಧನಾಗಿ ಉತ್ಪನ್ನನಾದೊಡನೆಯೇ ದೀರ್ಘತಮಸ್ಸು ಅಗ್ನಿಯನ್ನೂ ಇತರ ದೇವತೆಗಳನ್ನೂ ಸ್ತುತಿಸಲು ಅವರು ಬಂದು ಇವನನ್ನು ಅನಂಧನನ್ನಾಗಿ ಮಾಡಿದರು. ಒಡನೆಯೇ ವೇದಿಷದೇ ಪ್ರಿಯಧಾಮಾಯ ಋ. ಸಂ. ೧-೧೪೦, ೧೪೧ ಎಂಬ ವಾಕ್ಯದಿಂದ ಪ್ರಾರಂಭಿಸಿದ ಜಾತವೇದಸ್ಸನ್ನು ಪ್ರೀತಿಸಿದ ನಾಲ್ಕು ಸೂಕ್ತಗಳಿಂದ ಅಗ್ನಿಯನ್ನು ಸ್ತುತಿಸಿದನು. ಅಗ್ನಿಯಿಂದ ವಿಶೇಷವಾದ ಸಹಾಯವನ್ನು ಪಡೆದುದಕ್ಕಾಗಿ ಅವನ ಪೂಜೆಯಲ್ಲಿ ನಿರತನಾಗಿ ಅವನಿಗೆ ಸಂತೃಪ್ತಿಯನ್ನುಂಟುಮಾಡುವವನು ಎಂಬುದನ್ನು ತಿಳಿಸುವುದಕ್ಕಾಗಿ ಬ್ರಹ್ಮಪ್ರಿಯಂ ಎಂಬ ಪದವನ್ನು ಮಾಮತೇಯಂ ಎಂಬುದರ ವಿಶೇಷಣವನ್ನಾಗಿ ಉಪಯೋಗಿಸಿದೆ.

ಧೇನವಃ—ಧೇನುರ್ಧಯತೇರ್ವಾ, ಧಿನೋತೇರ್ವಾ। ಧಯತೇಽಸೌ ವತ್ಸೇನೇತಿ ; ತರ್ಪಯತ್ಯೇಷಾ ಪಯಸಾ । (ನಿ. ೧೧-೪೩) ಕರುವಿನಿಂದ ಹಾಲು ಹೀರಲ್ಪಡುತ್ತದೆ ಎಂಬುದರಿಂದಾಗಲಿ ಅಥವಾ ಕ್ಷೀರವನ್ನು ಕೊಟ್ಟು ತೃಪ್ತಿಯನ್ನುಂಟುಮಾಡುತ್ತದೆ ಎಂಬುದರಿಂದಾಗಲಿ ಗೋವುಗಳಿಗೆ ಧೇನುಗಳೆಂದು ಹೆಸರು.

**ಯುವಂ ತಾಸಾಂ ದಿವ್ಯಸ್ಯ ಪ್ರಶಾಸನೇ ವಿಶಾಂ ಕ್ಷಯಥೋ ಅಮೃತಸ್ಯ ಮಜ್ಮನಾ ।**
**ಯಾಭಿರ್ಧೇನುಮಸ್ವಂ೧ಪಿನ್ವಥೋ ನರಾ ತಾಭಿರೂಷು ಊತಿಭಿರಶ್ವಿನಾ ಗತಂ ॥**

(ಋ ಸಂ. ೧-೧೧೨-೩)

ಎಂಬ ಋಕ್ಕಿನಲ್ಲಿ ಅಸ್ವವಾದ ಗೋವನ್ನು ಅಶ್ವಿನೀದೇವತೆಗಳು ಧೇನುವಾಗುವಂತೆ ಮಾಡಿದರು ಎಂದರೆ ಬಂಜೆ ಯಾಗಿದ್ದ ಹಸುವನ್ನು ಕ್ಷೀರದಿಂದ ತುಂಬಿಕೊಳ್ಳುವಂತೆಯೂ ಕರುವಿನೊಡನೆ ಕೂಡಿಕೊಂಡಿರುವಂತೆಯೂ ಮಾಡಿದರು ಎಂದು **ಧೇನು** ಶಬ್ದದ ಪ್ರಯೋಗವನ್ನೂ ಅರ್ಥವನ್ನೂ ತಿಳಿಸಿದೆ. ನಿರುಕ್ತಕಾರರೂ ಸಹ,

**ಉಪ ಹ್ವಯೇ ಸುದುಘಾಂ ಧೇನುಮೇತಾಂ ಸುಹಸ್ತೋ ಗೋಧುಗುತ ದೋಹದೇನಾಂ ।**
**ಶ್ರೇಷ್ಠಂ ಸವಂ ಸವಿತಾ ಸಾವಿಷನ್ನೋಽಭೀದ್ಧೋ ಘರ್ಮಸ್ತದು ಷು ಪ್ರ ವೋಚಂ ॥**

(ಋ. ಸಂ. ೧-೧೬೪-೨೬)

ಎಂಬ ಋಕ್ಕನ್ನುದಹರಿಸಿ **ಸುದುಘಾಂ** ಪ್ರಭೂತವಾಗಿ ಕರೆಯುತಕ್ಕ ಇತ್ಯಾದಿವಿಶೇಷಣಗಳಿಂದ ಕೂಡಿದ **ಧೇನು** ಶಬ್ದದ ಅರ್ಥವನ್ನು ವಿವರಿಸಿದ್ದಾರೆ.

(ಆ) **ಪೀಪಯನ್—ಆಪ್ಯಾಯಯಂತು ।** ತುಂಬಿಕೊಳ್ಳಲಿ ವೃದ್ಧ್ಯರ್ಥಕವಾದ **ಪ್ಯೈ** ಧಾತುವಿನಿಂದ ನಿಷ್ಪನ್ನವಾಗಿ ತೃಪ್ತಿಯನ್ನುಂಟುಮಾಡುವಂತೆ ಪುಷ್ಕಲವಾಗಿ ಕೆಚ್ಚಲುಗಳಲ್ಲಿ ಕ್ಷೀರವು ತುಂಬಿಕೊಳ್ಳಲಿ ಎಂದು ತಾತ್ಪರ್ಯ ವನ್ನು ಕೊಡುತ್ತದೆ.

**ಮಿತ್ರಾವರುಣಾಭ್ಯಾಮಾಗೋಮುಗ್ಭ್ಯಾಂ ಪಯಸ್ಯಾ ।**

(ತೈ. ಸಂ. ೭-೫-೨೨-೧)

ಇತ್ಯಾದಿ ವಾಕ್ಯಗಳಲ್ಲಿ ಉಕ್ತವಾಗಿರುವಂತೆ ಕೆಚ್ಚಲಿನ ಕ್ಷೀರದಿಂದ ಮಿತ್ರಾವರುಣರನ್ನು ಆರಾಧಿಸಿ ತೃಪ್ತಿಗೊಳಿಸಬೇಕಾ ಗಿರುವುದರಿಂದ ಅಂತಹ ಕ್ಷೀರಗಳನ್ನು ಧೇನುಗಳು ಪುಷ್ಕಲವಾಗಿ ಪಡೆದಿರುವಂತಾಗಲಿ ಮತ್ತು ಆರೀತಿಯಾಗುವುದಕ್ಕೆ ಮಿತ್ರಾವರುಣರು ಅನುಗ್ರಹಿಸಬೇಕು ಎಂಬುದಾಗಿ ಪ್ರಾರ್ಥಿಸಿದೆ.

**ವಯುನಾನಿ—ವಯುನ** ಶಬ್ದವು ಪ್ರಜ್ಞಾನಾಮಗಳಲ್ಲಿ ಪಠಿತವಾಗಿದೆ. (ನಿ. ೩-೧೩). **ವಯುನಂ ವೇತೇಃ ಕಾಂತಿರ್ವಾ ಪ್ರಜ್ಞಾ ವಾ ।** (ನಿ. ೫-೧೫) ಹೆಣೆದುಹಾಕು ಎಂಬರ್ಥವನ್ನು ಕೊಡತಕ್ಕ ವೀ ಧಾತುವಿನಿಂದ ನಿಷ್ಪನ್ನವಾಗಿ ಅಪೇಕ್ಷೆ ಅಥವಾ ಪ್ರಜ್ಞೆ ಎಂಬರ್ಥವನ್ನು ಕೊಡುತ್ತದೆ. ನಿರುಕ್ತಕಾರರು,

**ಸ ಇತ್ತಮೋಽವಯುನಂ ತತನ್ವತ್ಸೂರ್ಯೇಣ ವಯುನವಚ್ಚಕಾರ ।**
**ಕದಾ ತೇ ಮರ್ತಾ ಅಮೃತಸ್ಯ ಧಾಮೇಯಕ್ಷಂತೋ ನ ಮಿನಂತಿ ಸ್ವಧಾವಃ ॥**

(ಋ. ಸಂ ೬-೨೧-೩)

ಎಂಬ ಋಕ್ಕನ್ನುದಹರಿಸಿ **ಸ ತಮೋಽಪ್ರಜ್ಞಾನಂ ತತನ್ವತ್ಸೂತಂ ಸೂರ್ಯೇಣ ಪ್ರಜ್ಞಾನವಚ್ಚಕಾರ** (ನಿ. ೫-೧೫) ಕತ್ತಲಿನ ರೂಪದಲ್ಲಿದ್ದ ಗೋಚರಾತೀತವಾದುದನ್ನು ಪ್ರಜ್ಞಾವಿಷಯವನ್ನಾಗಿ ಮಾಡಿದನು ಎಂಬರ್ಥವನ್ನು ಕೊಡು ವುದೆಂದು ವಿವರಿಸಿದ್ದಾರೆ. ಪ್ರಕೃತವಾದ ಋಕ್ಕಿನಲ್ಲಿ ನೆರವೇರಿಸಬೇಕಾದ ಯಜ್ಞಕ್ರಿಯೆಗಳ ಜ್ಞಾನಗಳನ್ನು ಎಂದರ್ಥ.

**ಪಿತ್ವಃ**—ಪಿತು ಶಬ್ದವು ಅನ್ನನಾಮಗಳಲ್ಲಿ ಪಠಿತವಾಗಿದೆ. (ನಿ. ೩-೯)ಇಲ್ಲಿ **ಹುತಶಿಷ್ಟಮನ್ನಂ** । ಹೋಮ ಮಾಡಿದನಂತರ ಉಳಿದ ಅನ್ನವನ್ನು ಎಂದರ್ಥ.

**ಅದಿತಿಂ**—ಅದಿತಿ ಶಬ್ದಕ್ಕೆ ಅದೀನಾ (ನಿ. ೪-೨೨) ಎಂಬ ನಿರುಕ್ತಕಾರರ ವಚನದಂತೆ ದೀನವಲ್ಲದ್ದು, ಖಂಡಾತ್ಮಕವಾಗದೇ ಇರತಕ್ಕದ್ದು, ಕ್ಷಯಿಸದಿರುವುದು ಎಂಬರ್ಥವಾಗುತ್ತದೆ. ಅಗ್ನಿ, ಅದಿತಿಯೆಂಬ **ದೇವಮಾತಾ** ಇತ್ಯಾದಿ ದೇವತೆಗಳ ಸ್ವರೂಪವನ್ನು ತಿಳಿಸತಕ್ಕ ವಿಶೇಷಣವಾಗಿದೆ. ಆದರೆ ಪ್ರಕೃತವಾದ ಋಕ್ಕಿನಲ್ಲಿ **ಅಖಂಡಿತಮ ನ್ಯೂನಮೇತತ್ಕರ್ಮ** । ನ್ಯೂನವಿಲ್ಲದೇ ಪೂರ್ಣವಾದ ಈ ಯಜ್ಞಕ್ರಿಯೆಯನ್ನು ಎಂದು ವಿವರಿಸಿದೆ.

ವ್ಯಾಕರಣಪ್ರಕ್ರಿಯಾ

**ಮಾಮತೇಯಮ್**—ಮಮತಾಯಾಃ ಅಪತ್ಯಂ ಪುಮಾನ್ ಮಾಮತೇಯಃ **ಸ್ತ್ರೀಭ್ಯೋಢಕ್** (ಪಾ. ಸೂ. ೪-೧-೧೨೦) ಎಂಬುದರಿಂದ ಅಪತ್ಯಾರ್ಥದಲ್ಲಿ ಢಕ್ ಪ್ರತ್ಯಯ. **ಆಯನೇಯೀ**-(ಪಾ. ಸೂ. ೭-೧-೨) ಎಂಬು ದರಿಂದ ಅದಕ್ಕೆ ಏಯಾದೇಶ. **ಕಿತಿಚ** (ಪಾ. ಸೂ. ೭-೨-೧೧೮) ಎಂಬುದರಿಂದ ಆದಿವೃದ್ಧಿ. ದ್ವಿತೀಯಾ ಏಕವಚನಾಂತರೂಪ-

**ಅವಂತೀಃ**-ಅವ ರಕ್ಷಣೇ ಧಾತು. ಲಡರ್ಥದಲ್ಲಿ ಶತೃ ಬಂದಾಗ ಸ್ತ್ರೀತ್ವದಲ್ಲಿ **ಉಗಿತಶ್ಚ** ಎಂಬುದರಿಂದ ಙೀಪ್. ಇದಕ್ಕೆ ಜಸ್ ಪರವಾದಾಗ **ಸುಪಾಂ ಸುಲುಕ್**(ಪಾ.ಸೂ. ೭-೧-೩೯)ಎಂಬುದರಿಂದ ಪೂರ್ವಸವರ್ಣದೀರ್ಘ ಬರುತ್ತದೆ.

**ಪೀಪಯನ್**—ಓಪ್ಯಾಯೀ ವೃದ್ಧೌ ಧಾತು. **ಹೇತುಮತಿ ಚ** (ಪಾ.ಸೂ. ೩-೧-೨೬) ಎಂಬುದರಿಂದ ಣಿಚ್. ಛಾಂದಸವಾಗಿ ಲೋಡರ್ಥದಲ್ಲಿ ಲುಙ್. ಛಾಂದಸವಾಗಿ ಧಾತುವಿಗೆ ಪೀಭಾವ ಬರುತ್ತದೆ. **ಣಿಶ್ರಿದ್ರುಸ್ರುಭ್ಯಃ**-ಎಂಬುದರಿಂದ ಚ್ಲಿಗೆ ಚಙ್. **ಚಙಿ** ಎಂಬುದರಿಂದ ದ್ವಿತ್ವ. **ಣೇರನಿಟಿ** ಎಂಬುದರಿಂದ ಣಿಚಿಗೆ ಲೋಪ. ಛಾಂದಸ ವಾಗಿ ಅಡಾಗಮ ಬರುವುದಿಲ್ಲ. ಅತಿಙಂತದಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಸಸ್ಮಿನ್**—ಸ್ವಸ್ಮಿನ್ ಎಂಬಲ್ಲಿ ಛಾಂದಸವಾಗಿ ವರ್ಣಲೋಪ ಬರುತ್ತದೆ.

**ಊಧನ್**—**ಸುಪಾಂ ಸುಲುಕ್**-(ಪಾ. ಸೂ. ೭-೧-೩೯) ಎಂಬುದರಿಂದ ಸಪ್ತಮಿಗೆ ಲುಕ್

**ಪಿತ್ವಃ**—ಪಾ ಪಾನೇ ಧಾತು. **ಪಃಕಿಚ್ಚ** (ಉ. ಸೂ. ೧-೭೦) ಎಂಬುದರಿಂದ ತುನ್ ಪ್ರತ್ಯಯ. **ತನ್ವಾ ದೀನಾಂ ಛಂದಸ್ಯುಪಸಂಖ್ಯಾನಮ್** ಎಂಬ ವಚನದಿಂದ ಷಷ್ಠೀಏಕವಚನ ಪರವಾದಾಗ ಯಣಾದೇಶ.

**ಭಿಕ್ಷೇತ**—ಭಿಕ್ಷ ಯಾಚನೇ ಧಾತು. ಲಿಙ್ ಪ್ರಥಮಪುರುಷಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ವಯುನಾನಿ**—ಅಜ ಗತಿಕ್ಷೇಪಣಯೋಃ ಧಾತು. **ಅಜಿಯಮಿ**-(ಉ. ಸೂ. ೩-೩೪೧) ಎಂಬುದರಿಂದ ಉನನ್ ಪ್ರತ್ಯಯ. **ಅಜೇರ್ವ್ಯಘಞಪೋಃ** (ಪಾ. ಸೂ ೨-೪-೫೬) ಎಂಬುದರಿಂದ ಧಾತುವಿಗೆ ವೀಭಾವ ಅದಕ್ಕೆ ಗುಣ. ಅಯಾದೇಶ. ವ್ಯತ್ಯಯದಿಂದ ಪ್ರತ್ಯಯಾದ್ಯುದಾತ್ತಸ್ವರ ಬರುತ್ತದೆ.

ಅಸಾ—ಅಸ್ಮ ಶಬ್ದಕ್ಕೆ ತೃತೀಯಾಏಕವಚನ ಪರವಾದಾಗ **ಪದ್ದನ್ನೋಮಾಸ್**—ಎಂಬುದರಿಂದ ಅಸನ್ ಆದೇಶ **ಸುಪಾಂ ಸುಲುಕ್** -(ಪಾ. ಸೂ. ೭-೧-೩೯) ಎಂಬುದರಿಂದ ವಿಭಕ್ತಿಗೆ ಡಾದೇಶ ಇತ್ಯಾದಿಯಿಂದ ಟಿಗೆ

ಲೋಪ. ಅನುದಾತ್ತ ಪರವಾದಾಗ ಉದಾತ್ತಲೋಪವಾದುದರಿಂದ **ಅನುದಾತ್ತಸ್ಯಚ ಯತ್ರೋದಾತ್ತಲೋಪಃ** (ಪಾ. ಸೂ. ೬-೧-೧೬೧) ಎಂಬುದರಿಂದ ಅನುದಾತ್ತವಾದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಆ ವಿವಾಸನ್**—ವಿವಾಸ ಪರಿಚರಣಕ್ರಿಯಾಯಾಂ. ಧಾತು ಲಡರ್ಥದಲ್ಲಿ ಶತೃ ಪ್ರತ್ಯಯ. ಪ್ರಾದಿಸಮಾಸವಾದಾಗ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

**ಉರುಷ್ಯೇತ್**—ಉರುಷ್ಯತೀ ರಕ್ಷಾಕರ್ಮಾ (ನಿ. ರು ೫-೨೩) ಎಂದು ಯಾಸ್ಕರು ಹೇಳಿರುತ್ತಾರೆ. ಲಿಙ್ ಪ್ರಥಮಪುರುಷಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ. ॥ ೬ ॥



ಸಂಹಿತಾಪಾಠಃ

ಆ ವಾಂ ಮಿತ್ರಾವರುಣಾ ಹವ್ಯಜುಷ್ಟಿಂ ನಮಸಾ ದೇವಾವವಸಾ ವವೃತ್ಯಾಂ।
ಅಸ್ಮಾಕಂ ಬ್ರಹ್ಮ ಪೃತನಾಸು ಸಹ್ಯಾ ಅಸ್ಮಾಕಂ ವೃಷ್ಟಿರ್ದಿವ್ಯಾ ಸುಪಾರಾ।
॥ ೭ ॥

ಪದಪಾಠ

ಆ । ವಾಂ । ಮಿತ್ರಾವರುಣಾ । ಹವ್ಯ ಽ ಜುಷ್ಟಿಂ । ನಮಸಾ । ದೇವಾ । ಅವಸಾ । ವವೃತ್ಯಾಂ ।
ಅಸ್ಮಾಕಂ । ಬ್ರಹ್ಮ । ಪೃತನಾಸು । ಸಹ್ಯಾಃ । ಅಸ್ಮಾಕಂ । ವೃಷ್ಟಿಃ । ದಿವ್ಯಾ । ಸುಽಪಾರಾ ॥ ೭ ॥

ಸಾಯಣಭಾಷ್ಯಂ

ಮೈತ್ರಾವರುಣಪಶೌ ವಪಾಯಾ ಏಷಾನುವಾಕ್ಯಾ । ಸೂತ್ರಿತಂ ಚ । ಆ ವಾಂ ಮಿತ್ರಾವರುಣಾ ಹವ್ಯಜುಷ್ಟಿಮಾ ಯಾತಂ ಮಿತ್ರಾವರುಣಾ । ಆ. ೩ ೮ । ಇತಿ ॥

ಹೇ ದೇವೌ ದೇವನಶೀಲೌ ಮಿತ್ರಾವರುಣಾ ಮಿತ್ರಾವರುಣೌ ವಾಂ ಯುವಾಂ ಹವ್ಯಜುಷ್ಟಿಂ ಹವಿಃಸೇವಾಂ ನಮಸಾ ನಮಸ್ಕಾರೋಪಲಕ್ಷಿತೇನ ಸ್ತೋತ್ರೇಣಾವಸಾ ರಕ್ಷಣೇನ ನಿಮಿತ್ತಭೂತೇನಾ ವವೃತ್ಯಾಂ । ಆವರ್ತಯೇಯಂ । ಯದ್ವಾ । ನಮಸ್ಕಾರೇಣಾವಸಾನ್ನೇನ ಚಾ ವವೃತ್ಯಾಂ । ಕಿಂಚ ಹೇ ಮಿತ್ರಾವರುಣೌ ಅಸ್ಮಾಕಂ ಸಂಬಂಧಿ ಬ್ರಹ್ಮೇದಾನೀಂ ಕ್ರಿಯಮಾಣಂ ಪರಿವೃಢಂ ಕರ್ಮ ಪೃತನಾಸು ಸಂಗ್ರಾಮೇಷು ಸಹ್ಯಾಃ । ಸಹ್ಯಾತ್ । ಶತ್ರೂನಭಿಭೂಯಾತ್ । ಅನೇನ ಕರ್ಮಣಾ ಶತ್ರೂನಭಿಭವೇಯಮಿತ್ಯರ್ಥಃ । ಕಿಂಚಾಸ್ಮಾಕಂ ದಿವ್ಯಾ ದಿವಿ ಭವಾ ವೃಷ್ಟಿಃ ಸುಪಾರಾ ಸುಷ್ಠು ಪಾರಯಿತ್ರೀ ಭವತ್ವಿತಿ ಶೇಷಃ। ವೃಷ್ಟ್ಯಾ ಸತ್ಯಾಂ ವ್ರೀಹ್ಯಾದಿದ್ವಾರಾ ಕರ್ಮಸಮಾಪ್ತೇರಿತಿ ಭಾವಃ ॥

॥ ಪ್ರತಿಪದಾರ್ಥ ॥

**ದೇವಾ**— ದೇವತಾತ್ಮರಾದ । **ಮಿತ್ರಾವರುಣಾ**— ಎಲೈ ಮಿತ್ರಾವರುಣರೇ । **ವಾಂ**—ನಿಮಗೆ । **ಹವ್ಯಜುಷ್ಟಿಂ**—ತೃಪ್ತಿದಾಯಕವಾದ ಹವಿಸ್ಸಿನ ಅರ್ಪಣೆಯನ್ನು । **ನಮಸಾ**—ನಮಸ್ಕಾರಪೂರ್ವಕವಾದ ಸ್ತೋತ್ರದೊಡನೆಯೂ । **ಅವಸಾ**—ರಕ್ಷಣಾನಿಮಿತ್ತವಾಗಿಯೂ । ಅಥವಾ [**ನಮಸಾ**—ನಮಸ್ಕಾರದೊಡನೆಯೂ । **ಅವಸಾ**—ಅನ್ನದೊಡನೆಯೂ] । **ಆ ವವೃತ್ಯಾಂ**—( ನಾನು ) ನೆರವೇರಿಸುವ ಶಕ್ತಿಯುಳ್ಳವನಾಗಿ ಆಗಲಿ । **ಅಸ್ಮಾಕಂ**—ನಮ್ಮ । **ಬ್ರಹ್ಮ**—ಈ ಕರ್ಮವು । **ಪೃತನಾಸು**—ಯುದ್ಧಗಳಲ್ಲಿ । **ಸಹ್ಯಾಃ**—(ಶತ್ರುಗಳನ್ನು) ಸೋಲಿಸಲು ಸಹಾಯಕವಾಗಲಿ । **ಅಸ್ಮಾಕಂ**—ನಮಗೆ । **ದಿವ್ಯಾ**—ದ್ಯುಲೋಕದಲ್ಲಿರುವ । **ವೃಷ್ಟಿಃ**—ಮಳೆಯು । **ಸುಪಾರಾ**—ಪ್ರಭೂತವಾಗಿ ತೃಪ್ತಿಯನ್ನುಂಟುಮಾಡುವಂತೆ ( ಬೀಳಲಿ) ॥

ಭಾವಾರ್ಥ

ದೇವತಾತ್ಮರಾದ ಎಲೈ ಮಿತ್ರಾವರುಣರೇ, ನಿಮಗೆ ತೃಪ್ತಿದಾಯಕವಾದ ಹವಿಸ್ಸನ್ನು ನಮಸ್ಕಾರಪೂರ್ವಕವಾಗಿ ಅರ್ಪಿಸುವ ಸುಯೋಗವುಳ್ಳವನಾಗಿ ಆಗುವಂತೆ ನನ್ನನ್ನು ಅನುಗ್ರಹಿಸಿ. ನಮ್ಮ ಈ ಕರ್ಮವು ಯುದ್ಧಗಳಲ್ಲಿ ಶತ್ರುಗಳನ್ನು ಸೋಲಿಸಲು ಸಹಾಯಕವಾಗಲಿ. ನಮಗೆ ದ್ಯುಲೋಕದಲ್ಲಿರುವ ಮಳೆಯು ತೃಪ್ತಿಯನ್ನುಂಟುಮಾಡುವಂತೆ ಪ್ರಭೂತವಾಗಿ ಬೀಳಲಿ.

English Translation

Divine Mitra and Varuna, may I render the oblation acceptable to you with reverence and prayer; may the sacred rite enable us (to overcome) in battles, and may the heavenly rain be to us the means of satisfying our wants.

ವಿಶೇಷವಿಷಯಗಳು

ಮಿತ್ರಾವರುಣರನ್ನುದ್ದೇಶಿಸಿ ಮಾಡುವ ಪಶುವಿನ ವಪಾಹೋಮದಲ್ಲಿ ಈ ಋಕ್ಕನ್ನು ಪುರೋನುವಾಕ್ಯಾಮಂತ್ರವನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ— **ಆ ವಾಂ ಮಿತ್ರಾವರುಣಾ ಹವ್ಯಜುಷ್ಟಿಮಾ ಯಾತಂ ಮಿತ್ರಾವರುಣಾ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೩-೮).

**ಹವ್ಯಜುಷ್ಟಿಂ**— ಹವಿಸ್ಸನ್ನರ್ಪಿಸುವುದರಿಂದ ಲಭಿಸತಕ್ಕ ತೃಪ್ತಿದಾಯಕವಾದ ಹವಿಸ್ಸಿನ ಅರ್ಪಣೆಯೆಂದಾಗಲಿ ಅರ್ಥವಾಗಬಹುದು.

**ಆ ನೋ ಮಿತ್ರಾವರುಣಾ ಹವ್ಯಜುಷ್ಟಿಂ ಘೃತೈರ್ಗವ್ಯೂತಿಮುಕ್ಷತಮಿಳಾಭಿಃ ।**
**ಪ್ರತಿ ವಾಮತ್ರ ವರಮಾ ಜನಾಯ ಪೃಣೀತಮುದ್ನೋ ದಿವ್ಯಸ್ಯ ಚಾರೋಃ ॥**

(ಋ. ಸಂ. ೭-೬೫-೪)

ಎಂಬಲ್ಲಿ **ಹವ್ಯಜುಷ್ಟಿಂ ಹವಿಃಸೇವನವಂತಂ ಯಜ್ಞಂ** । ಹವಿಸ್ಸನ್ನು ಸೇವಿಸತಕ್ಕ ಯಜ್ಞವೆಂದರ್ಥಮಾಡಿದ್ದಾರೆ.

**ಇಮಾ ಹವ್ಯಾ ಜಾತವೇದೋ ಜುಷಸ್ವೇತಿ ಹವ್ಯಜುಷ್ಟಿಮಾಶಾಸ್ತೇ ।**

(ಐ. ಬ್ರಾ. ೨-೧೨)

ಎಂಬಲ್ಲಿ ಎಲೈ ಜಾತವೇದಸ್ಸೇ, ಹವಿಸ್ಸುಗಳನ್ನು ಸೇವಿಸಿ ತೃಪ್ತಿಯನ್ನು ಹೊಂದು ಎಂಬುದಾಗಿ ಪ್ರಾರ್ಥಿಸುವಾಗ ಹವ್ಯಜುಷ್ಟಿಯು ಅಂತಹ ಪ್ರಾರ್ಥನೆಯನ್ನು ತೋರಿಸತಕ್ಕ ಪಾರಿಭಾಷಿಕವಾದ ಪದವಾಗಿದೆ.

ನಮಸಾ—ಎಂಬುದಕ್ಕೆ ಮೊದಲು **ನಮಸ್ಕಾರೋಪಲಕ್ಷಿತೇನ ಸ್ತೋತ್ರೇಣ।** ನಮಸ್ಕಾರಪೂರ್ವಕವಾದ ಸ್ತೋತ್ರದೊಡನೆ ಎಂದರ್ಥಮಾಡಿ ಅನಂತರ ಯದ್ವಾ **ನಮಸ್ಕಾರೇಣ** (ಕೇವಲ) ನಮಸ್ಕಾರದಿಂದ ಎಂದು ಹೇಳಿದೆ.

**ಅವಸಾ**—ಎಂಬುದಕ್ಕೆ ಮೊದಲು ರಕ್ಷಣೆಯೆಂದೂ ಅನಂತರ **ಯದ್ವಾ ಅನ್ನೇನ ಚ।** ಅಥವಾ ಅನ್ನವೆಂದೂ ಹೇಳಿದೆ.

ಬ್ರಹ್ಮ—ಬ್ರಹ್ಮಶಬ್ದವು ಇಲ್ಲಿ ವೃದ್ಧ್ಯರ್ಥಕವಾದ ಬೃಹಿ ಧಾತುವಿನಿಂದ ನಿಷ್ಪನ್ನವಾಗಿದೆಯೆಂದು ತೋರಿಸಿ ಎಲ್ಲಾ ವಿಧದಲ್ಲಿಯೂ ಪುಷ್ಕಲ್ಯವನ್ನು ಹೊಂದಿದ **ಕರ್ಮ**ವೆಂದರ್ಥಮಾಡಿದೆ.

**ಪೃತನಾಸು—ವ್ಯಾಪ್ರಿಯಂತೇ ಅತ್ರ ಯೋದ್ಧಾರಃ ಇತಿ ಪೃತನಾಃ ಸಂಗ್ರಾಮಾಃ।** ಯೋಧರು ಸೇರಿ ಗುಂಪುಮಾಡುವ ಸ್ಥಾನವಾದುದರಿಂದ ಯುದ್ಧಕ್ಕೆ ಪೃತನಾ ಎಂಬ ಹೆಸರೆಂದು ಒಂದು ಕಡೆಯೂ (ಋ. ಸಂ. ೩-೪೯-೨).

**ಇಮಂ ನರೋ ಮರುತಃ ಸಶ್ಚತಾ ವೃಧಂ ಯಸ್ಮಿನ್ರಾಯಃ ಶೇವೃಧಾಸಃ।**
**ಅಭಿ ಯೇ ಸಂತಿ ಪೃತನಾಸು ದೂಢ್ಯೋ ವಿಶ್ವಾಹಾ ಶತ್ರುಮಾದಭುಃ॥**

(ಋ. ಸಂ. ೩-೧೬-೨)

ಎಂಬಲ್ಲಿ **ಪೃತನಾಸು ಸೇನಾಸು ತದುಪಲಕ್ಷಿತೇಷು ಸಂಗ್ರಾಮೇಷು।** **ಪೃತನಾ** ಎಂದರೆ ಸೇನೆಗಳೆಂದೂ ಅವುಗಳಿಂದ ಉಪಲಕ್ಷಿತಗಳಾದುದರಿಂದ **ಸಂಗ್ರಾಮಕ್ಕೂ** ಪೃತನಾ ಎಂಬ ಹೆಸರೆಂದೂ **ಸಾಯಣರು** ಈ ಶಬ್ದದ ನಿರ್ವಚನವನ್ನು ತಿಳಿಸಿದ್ದಾರೆ. ನಿರುಕ್ತಕಾರರು ಈ ಪದವನ್ನು **ಸಂಗ್ರಾಮ** ನಾಮಗಳಲ್ಲಿ ಸೇರಿಸಿದ್ದಾರೆ. (ನಿ. ೩-೯).

**ಸುಪಾರಾ—ಸುಷ್ಠು ಪಾರಯಿತ್ರೀ।** ನಮ್ಮ ಕರ್ಮಗಳೆಲ್ಲವೂ ಪೂರ್ಣವಾಗಿ ನೆರವೇರುವಂತೆಯೂ, ಈ ನಿರ್ವಹಣಕಾರ್ಯದಲ್ಲಿ ಪ್ರಭೂತವಾದ ತೃಪ್ತಿಯನ್ನುಂಟುಮಾಡುವುದಾಗಿಯೂ ವೃಷ್ಟಿಯು ಸಾಧಕವಾಗಲಿ ಎಂದು ಪ್ರಾರ್ಥಿಸಿದೆ.

ವ್ಯಾಕರಣಪ್ರಕ್ರಿಯಾ

**ಹವ್ಯಜುಷ್ಟಿಮ್**—ಜುಷೀ ಪ್ರೀತಿಸೇವನಯೋಃ ಧಾತು. **ಸ್ತ್ರಿಯಾಂ ಕ್ತಿನ್** ಎಂಬುದರಿಂದ ಭಾವಾರ್ಥದಲ್ಲಿ ಕ್ತಿನ್ ಪ್ರತ್ಯಯ. ಷ್ಟುತ್ವದಿಂದ ಅದಕ್ಕೆ ಟಕಾರಾದೇಶ. **ತಾದೌ ಚನಿತಿ** (ಪಾ. ಸೂ. ೬-೨-೫೦) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ನಮಸಾ**—ಣಮು ಪ್ರಹ್ವತ್ವೇ ಶಬ್ದೇ ಚ ಧಾತು. ಇದಕ್ಕೆ ಅಸುನ್ ಪ್ರತ್ಯಯ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ತೃತೀಯಾಏಕವಚನಾಂತರೂಪ. ಅವಸಾ ಎಂಬಲ್ಲಿಯೂ ಹೀಗೆಯೇ ಪ್ರತ್ಯಯಸ್ವರಗಳು ಬರುತ್ತವೆ.

**ವವೃತ್ಯಾಮ್**—ವೃತು ವರ್ತನೇ ಧಾತು. ಲಿಙ್ ಉತ್ತಮಪುರುಷಏಕವಚನಕ್ಕೆ **ತಸ್ ಥಸ್ ಥಮಿಪಾಂ**—ಎಂಬುದರಿಂದ ಅಮಾದೇಶ. ವ್ಯತ್ಯಯದಿಂದ ಪರಸ್ಮೈಪದಿಯಾಗುತ್ತದೆ. **ಬಹುಲಂ ಛಂದಸಿ** ಎಂಬುದರಿಂದ ಶಪಿಗೆ ಶ್ಲು ಆದೇಶ. ಶ್ಲು ನಿಮಿತ್ತವಾಗಿ ಧಾತುವಿಗೆ ದ್ವಿತ್ವಾದಿ. ಪ್ರತ್ಯಯಕ್ಕೆ ಯಾಸುಟಾಗಮ. ಅದು ಙಿತ್ತಾದುದರಿಂದ ಲಘೂಪಧಗುಣ ಬರುವುದಿಲ್ಲ. **ತಿಙ್ಙತಿಙಃ** ಎಂಬುದರಿಂದ ನಿಘಾತಸ್ವರ ಬರುತ್ತದೆ

**ಸಹ್ಯಾಃ**— ಷಹ ಮರ್ಷಣೇ ಧಾತು. ವ್ಯತ್ಯಯದಿಂದ ತಿಪಿಗೆ ಸಿಪ್ ಪ್ರತ್ಯಯ ಬರುತ್ತದೆ. ಅದಕ್ಕೆ ಯಾಸುಡಾಗಮ. **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಲುಕ್. ಪ್ರತ್ಯಯ ಸಕಾರಕ್ಕೆ ರುತ್ವವಿಸರ್ಗ. ತಿಙಂತನಿಘಾತಸ್ವರ ಬರುತ್ತದೆ.

**ವೃಷ್ಟಿಃ**—ವೃಷು ಸೇಚನೇ ಧಾತು **ಸ್ತ್ರಿಯಾಂಕ್ತಿನ್** ಎಂಬುದರಿಂದ ಕ್ತಿನ್. **ಮಂತ್ರೇವೃಷೇಷಪಚ**— (ಪಾ. ಸೂ. ೩-೩-೯೬) ಎಂಬುದರಿಂದ ಕ್ತಿನ್ ಉದಾತ್ತವಾಗುತ್ತದೆ.

**ದಿವ್ಯಾ** — ದಿವಿ ಭವಾ ದಿವ್ಯಾ. **ಭವೇಛಂದಸಿ** (ಪಾ. ಸೂ. ೪-೪-೧೧೦) ಎಂಬುದರಿಂದ ಯ ಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಸ್ತ್ರೀತ್ವ ವಿವಕ್ಷಾಮಾಡಿದಾಗ ಅದಂತನಿಬಂಧನವಾಗಿ ಟಾಪ್.

**ಸುಪಾರಾ**— ಪೄ ಪಾಲನಪೂರಣಯೋಃ ಧಾತು, ಇದಕ್ಕೆ ಣಿಚ್ ಬಂದಾಗ **ನಂದಿಗ್ರಹಪಚಾದಿಭ್ಯಃ**— (ಪಾ. ಸೂ. ೩-೧-೧೩೪) ಎಂಬುದರಿಂದ ಕರ್ತರಿಯಲ್ಲಿ ಅಚ್ ಪ್ರತ್ಯಯ ಣಿಚ್ ನಿಮಿತ್ತವಾಗಿ ಧಾತುವಿನ ಇಕಿಗೆ ವೃದ್ಧಿ. ರ ಪರವಾಗಿ ಬರುತ್ತದೆ. **ಣೇರನಿಟಿ** (ಪಾ ಸೂ. ೬-೪-೫೧) ಎಂಬುದರಿಂದ ಣಿಚಿಗೆ ಲೋಪ. **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ॥ ೭ ॥



## ನೂರಐವತ್ತಮೂರನೆಯ ಸೂಕ್ತವು

---

**ಯಜಾಮಹೇ ವಾಮಿತಿ ಚತುರ್‌ಋಚಂ ಚತುರ್ದಶಂ ಸೂಕ್ತಂ ದೈರ್ಘತಮಸಂ ತ್ರೈಷ್ಟುಭಂ ಮೈತ್ರಾವರುಣಂ। ಯಜಾಮಹೇ ಚತುಷ್ಕಮಿತ್ಯನುಕ್ರಮಣಿಕಾ ॥ ವಿನಿಯೋಗೋ ಲೈಂಗಿಕಃ ॥**

ಅನುವಾದವು—**ಯಜಾಮಹೇ ವಾಂ** ಎಂಬ ಈ ಸೂಕ್ತವು ಇಪ್ಪತ್ತೊಂದನೆಯ ಅನುವಾಕದಲ್ಲಿ ಹದಿನಾಲ್ಕನೆಯ ಸೂಕ್ತವು. ಇದರಲ್ಲಿ ನಾಲ್ಕು ಋಕ್ಕುಗಳಿರುವುವು. ಈ ಸೂಕ್ತಕ್ಕೆ ದೀರ್ಘತಮನು ಋಷಿಯು. ಮಿತ್ರಾವರುಣರು ದೇವತೆಯು. ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ **ಯಜಾಮಹೇ ಚತುಷ್ಕಂ** ಎಂದು ಹೇಳಿರುವುದು. ವಿನಿಯೋಗವು ಲೈಂಗಿಕವು.

॥ ಓಂ ॥

## ಸೂಕ್ತ—೧೫೩

---

॥ ಮಂಡಲ—೧ ॥ ಅನುವಾಕ—೨೧ ॥ ಸೂಕ್ತ—೧೫೩ ॥

॥ ಅಷ್ಟಕ— ೨ ॥ ಅಧ್ಯಾಯ— ೨ ॥ ವರ್ಗ— ೨೩ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ-೪ ॥

॥ ಋಷಿಃ—ದೀರ್ಘತಮಾ ಔಚಥ್ಯಃ ॥

॥ ದೇವತಾ—ಮಿತ್ರಾವರುಣೌ ॥

॥ ಛಂದಃ— ತ್ರಿಷ್ಟುಪ್ ॥

ಸಂಹಿತಾಪಾಠಃ

ಯಜಾಮಹೇ ವಾಂ ಮಹಃ ಸಜೋಷಾ ಹವ್ಯೇಭಿರ್ಮಿತ್ರಾವರುಣಾ ನಮೋಭಿಃ ।
ಘೃತೈರ್ಘೃತಸ್ನೂ ಅಧ ಯದ್ವಾಮಸ್ಮೇ ಅಧ್ವರ್ಯವೋ ನ ಧೀತಿಭಿರ್ಭರಂತಿ ॥ ೧ ॥

ಪದಪಾಠಃ

ಯಜಾಮಹೇ । ವಾಂ । ಮಹಃ । ಸ್ಽಜೋಷಾಃ । ಹವ್ಯೇಭಿಃ । ಮಿತ್ರಾವರುಣಾ । ನಮಃಽಭಿಃ ।
ಘೃತೈಃ । ಘೃತಸ್ನೂ ಇತಿ ಘೃತಽಸ್ನೂ । ಅಧ । ಯತ್ । ವಾಂ । ಅಸ್ಮೇ ಇತಿ । ಅಧ್ವರ್ಯವಃ । ನ ।
ಧೀತಿಽಭಿಃ । ಭರಂತಿ ॥ ೧ ॥

ಸಾಯಣಭಾಷ್ಯಂ

ಹೇ ಘೃತಸ್ನೂ ಘೃತಸ್ಯ ಸ್ರಾವಯಿತಾರೌ ಮಿತ್ರಾವರುಣೌ ಮಹೋ ಮಹಾಂತೌ ವಾಂ ಯಜಾಮಹೇ । ಪೂಜಯಾಮೋ ಯಜಮಾನಾ ಋತ್ವಿಜಶ್ಚ । ಕೀದೃಶಾಃ । ಸಜೋಷಾಃ ಸಮಾನಪ್ರೀತಿಯುಕ್ತಾಃ । ಕೇನ ಸಾಧನೇನೇತಿ ತದುಚ್ಯತೇ । ಹವ್ಯೇಭಿಃ ಪುರೋಡಾಶಾದಿಭಿರ್ನಮೋಭಿರ್ನಮಸ್ಕಾರೋಪಲಕ್ಷಿತೈಃ । ಅಧಾಪಿ ಚ ಯದ್ಯಸ್ಮಾತ್ಕಾರಣಾದ್ವಾಂ ಯುವಮಧ್ವರ್ಯವೋಽಸ್ಮದೀಯಾ ಅಧ್ವರ್ಯವೋಽಪಿ । ಅತ್ರ ನಶಬ್ದೋಽಪ್ಯರ್ಥೇ । ತೇಽಪಿ ಧೀತಿಭಿಃ ಕರ್ಮಭಿಃ ಸ್ವಕೀಯೈರ್ಭರಂತಿ ಪೋಷಯಂತಿ ತಸ್ಮಾದ್ಯಜಾಮಹೇ ॥

ಪ್ರತಿಪದಾರ್ಥ

**ಘೃತಸ್ನೂ**—ಘೃತವನ್ನು ( ಉದಕವನ್ನು ) ಸುರಿದು ಹರಿಯುವಂತೆ ಮಾಡುವವರೂ । **ಮಹಃ**—ಮಹಾತ್ಮರೂ ಆದ ಮಿತ್ರಾವರುಣರೇ । **ಸಜೋಷಾಃ**—( ನಿಮ್ಮನ್ನು ಪೂಜಿಸುವುದರಲ್ಲಿ ) ಒಂದೇವಿಧವಾದ ಪ್ರೀತಿಯುಳ್ಳ ನಾವು **ನಮೋಭಿಃ**— ನಮಸ್ಕಾರಪೂರ್ವಕಗಳಾದ । **ಘೃತೈಃ**— ಉದಕಗಳಿಂದಲೂ । **ಹವ್ಯೇಭಿಃ**—ಪುರೋಡಾಶಾದಿ ಗಳಿಂದಲೂ । **ಮಹಃ**—ಮಹಾತ್ಮರಾದ । **ವಾಂ**—ನಿಮ್ಮನ್ನು । **ಯಜಾಮಹೇ**—ಪೂಜಿಸುತ್ತೇವೆ । **ಅಧ**—ಅದೂ ಅಲ್ಲದೆ । **ಯತ್**—ಯಾವ ಅದೇ ಕಾರಣದಿಂದ (ಅನ್ವರಿಂದಲೇ) । **ವಾಂ**—ನಿಮ್ಮನ್ನು । **ಅಸ್ಮೇ ಅಧ್ವರ್ಯವಃ ನ**—ನಮ್ಮ ಯಾಗದಲ್ಲಿ ನಿರತರಾದ ಅಧ್ವರ್ಯುಗಳೂ ಕೂಡ । **ಧೀತಿಭಿಃ**—ತಮ್ಮ ಕರ್ಮಗಳಿಂದ । **ಭರಂತಿ**—ಪೋಷಿಸುತ್ತಾರೆ ॥

### ಭಾವಾರ್ಥ

ಘೃತವನ್ನು ಸುರಿಸಿ ಹಂಚುವವರೂ ಮಹಾತ್ಮರೂ ಆದ ಮಿತ್ರಾವರುಣರೇ, ನಿಮ್ಮನ್ನು ಪೂಜಿಸುವುದರಲ್ಲಿ ಒಂದೇವಿಧವಾದ ಭಕ್ತಿಶ್ರದ್ಧೆಯುಳ್ಳ ನಾವು ನಮಸ್ಕಾರಪೂರ್ವಕಗಳಾದ ಉದಕಗಳಿಂದಲೂ, ಪುರೋಡಾಶಾದಿಗಳಿಂದಲೂ ನಿಮ್ಮನ್ನು ಪೂಜಿಸುತ್ತೇವೆ. ಅಲ್ಲದೆ ಆ ಕಾರಣದಿಂದಲೇ, ನಿಮ್ಮನ್ನು ನಮ್ಮ ಯಾಗದಲ್ಲಿ ನಿರತರಾದ ಅಧ್ವರ್ಯುಗಳೂ ಕೂಡ ತಮ್ಮ ಕರ್ಮಗಳಿಂದ ಪೋಷಿಸುತ್ತಾರೆ.

### English Translation

Mighty Mitra and Varuna, dispensers of butter, we worship you, rejoicing, with oblations; with reverential homage, and with (offerings of) water; so that our ministrant priests may propitiate you by (our) devotions.

### । ವಿಶೇಷವಿಷಯಗಳು ।

**ಘೃತಸ್ನೂ**—ಘೃತಶಬ್ದವು ಉದಕನಾಮಗಳಲ್ಲಿ ಪಠಿತವಾಗಿದೆ. (ನಿ. ೨-೨೪) ಘೃತಸ್ಯ ಸ್ನಾವಯಿತಾರೌ **ಮಿತ್ರಾವರುಣೌ ।** ಉದಕವನ್ನು ಸುರಿದು ಹರಿಯುವಂತೆ ಮಾಡತಕ್ಕ ಮಿತ್ರಾವರುಣರೆಂದರ್ಥ. ಇದೇ ಪದವು,

**ಅರ್ಚಾಮಿ ವಾಂ ವರ್ಧಯಾಪೋ ಘೃತಸ್ನೂ ದ್ಯಾವಾಭೂಮೀ ಶೃಣುತಂ ರೋದಸೀ ಮೇ ।**
**ಅಹಾ ಯದ್ದ್ಯಾವೋಽಸುನೀತಿ ಮಯನ್ಮಧ್ವಾ ನೋ ಅತ್ರ ಪಿತರಾ ಶಿಶೀತಾಂ ।**
(ಋ. ಸಂ. ೧೦-೧೨-೪)

ಎಂಬಲ್ಲಿ **ವೃಷ್ಟ್ಯುದಕಸ್ಯ ಪ್ರಸವಿತ್ರ್ಯೌ ।** ಎಂದು ದ್ಯಾವಾಪೃಥಿವಿಗಳಿಗೆ ವಿಶೇಷಣವಾಗಿದೆ.

**ಧೀತಿಭಿಃ—ಸ್ವಕೀಯೈಃ ಕರ್ಮಭಿಃ ।** ತಮ್ಮ ಕರ್ಮಗಳಿಂದ. **ಧೀತಿ**ಶಬ್ದಕ್ಕೆ **ಕರ್ಮ, ಪ್ರಜ್ಞಾ** ಎಂಬ ಎರಡರ್ಥಗಳೂ ಉಂಟು. [ನಿರುಕ್ತದಲ್ಲಿ ಅಂಗುಳಿ ನಾಮಗಳಲ್ಲೂ ಈ ಪದವು ಪಠಿತವಾಗಿದೆ. ನಿ. ೩-೮] ನಿರುಕ್ತಕಾರರು **ಕರ್ಮ, ಪ್ರಜ್ಞೆ** ಎಂಬೆರಡರ್ಥಗಳೂ ಇರತಕ್ಕ ಎರಡು ಋಕ್ಕುಗಳನ್ನು ಉದಹರಿಸಿ ವಿವರಿಸಿರುವುದನ್ನು ಇದೇ ಭಾಗದಲ್ಲಿ ೧-೧೪೩-೧ನೇ ಋಕ್ಕಿನ ವಿಶೇಷ ವಿಷಯಗಳಲ್ಲಿ (p. 295) ತಿಳಿಸಿದೆ. ಪ್ರಕೃತವಾದ ಋಕ್ಕಿನಲ್ಲಿ ಯಾಗ ರೂಪವಾದ ಕರ್ಮವೆಂದರ್ಥ.

### ವ್ಯಾಕರಣಪ್ರಕ್ರಿಯಾ

**ಯಜಾಮಹೇ**—ಯಜ ದೇವಪೂಜಾಸಂಗತಿಕರಣದಾನೇಷು ಧಾತು. **ಲಟ್** ಉತ್ತಮಪುರುಷಬಹುವಚನಾಂತರೂಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅದುಪದೇಶದ ಪರವಲ್ಲಿರುವುದರಿಂದ **ತಾಸ್ಯನುದಾತ್ತೇ**-(ಪಾ. ಸೂ. ೬-೧-೧೮೬) ಎಂಬುದರಿಂದ ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಮಹಃ**—ಮಹ ಪೂಜಾಯಾಂ ಧಾತು. **ಕ್ವಿಪ್ ಚ** ಎಂಬುದರಿಂದ ಕ್ವಿಪ್ ಪ್ರತ್ಯಯ. **ಸುಪಾಂ ಸುಪೋ ಭವಂತಿ** ಎಂಬ ವಚನದಿಂದ ದ್ವಿವಚನಕ್ಕೆ ಬಹುವಚನಪ್ರತ್ಯಯ ಬಂದಿದೆ.

**ಸಜೋಷಾಃ**—ಸಮಾನಂ ಜೋಷಃ ಯೇಷಾಂ ತೇ । ಸಜೋಷಾಃ ಜುಷೀ ಪ್ರೀತಿಸೇವನಯೋಃ ಧಾತು. ಅಸುನ್ ಪ್ರತ್ಯಯ ಪ್ರತ್ಯಯನಿಮಿತ್ತವಾಗಿ ಲಘೂಪಧಗುಣ. **ಸಮಾನಸ್ಯ ಛಂದಸ್ಯ**-ಎಂಬುದರಿಂದ ಸಮಾನಶಬ್ದಕ್ಕೆ ಸಭಾವ. ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

**ಹವ್ಯೇಭಿಃ**—**ಬಹುಲಂ ಛಂದಸಿ** ಎಂಬುದರಿಂದ ಭಿಸಿಗೆ ಐಸ್ ಭಾವ ವಿಕಲ್ಪವಾದುದರಿಂದ ಬರುವುದಿಲ್ಲ. ಏತ್ವ.

**ಘೃತಸ್ನೂ**—ಘೃತಂ ಸ್ನಾವಯತಃ ಇತಿ ಘೃತಸ್ನೂ. ಸ್ನು ಪ್ರಸ್ರವಣೇ ಧಾತು. ಕ್ವಿಪ್ ಪ್ರತ್ಯಯ. ಸಂಬೋಧನಾದ್ವಿವಚನಾಂತರೂಪ. **ಆಮಂತ್ರಿತಸ್ಯಚ** ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಭರಂತಿ**—ಭೃಇಞ್ ಭರಣೇ ಧಾತು. ಲಟ್ ಪ್ರಥಮಪುರುಷಬಹುವಚನಾಂತರೂಪ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. **ತಾಸ್ಯನುದಾತ್ತೇತ್** (ಪಾ. ಸೂ. ೬-೧-೧೮೬) ಎಂಬುದರಿಂದ ಲಸಾರ್ವಧಾತುಕ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ. ॥ ೧ ॥



ಸಂಹಿತಾಪಾಠಃ

ಪ್ರಸ್ತುತಿರ್ವಾಂ ಧಾಮ ನ ಪ್ರಯುಕ್ತಿರಯಾಮಿ ಮಿತ್ರಾವರುಣಾ
ಸುವೃಕ್ತಿಃ ।
ಅನಕ್ತಿ ಯದ್ವಾಂ ವಿದಥೇಷು ಹೋತಾ ಸುಮ್ನಂ ವಾಂ ಸೂರಿರ್ವೃಷಣಾ-
ವಿಯಕ್ಷನ್ ॥ ೨ ॥

। ಪದಪಾಠಃ ।

ಪ್ರಸ್ತುತಿಃ । ವಾಂ । ಧಾಮ । ನ । ಪ್ರಯುಕ್ತಿಃ । ಅಯಾಮಿ । ಮಿತ್ರಾವರುಣಾ । ಸುವೃಕ್ತಿಃ ।
ಅನಕ್ತಿ । ಯತ್ । ವಾಂ । ವಿದಥೇಷು । ಹೋತಾ । ಸುಮ್ನಂ । ವಾಂ । ಸೂರಿಃ । ವೃಷಣೌ ।
ಇಯಕ್ಷನ್ ॥ ೨ ॥

॥ ಸಾಯಣಭಾಷ್ಯಂ ॥

ಹೇ ಮಿತ್ರಾವರುಣೌ ವಾಂ ಯುವಯೋಃ ಸಂಬಂಧಿನೋ ಯಾಗಸ್ಯ ಪ್ರಸ್ತುತಿಃ ಪ್ರಸ್ತಾವನಾ ಕರೋಮೀತಿ ಸಂಕಲ್ಪ ಏವ ನ ಪ್ರಯುಕ್ತಿಃ ಕೃತ್ಸ್ನಪ್ರಯೋಗೋ ನ ಸಂಪನ್ನಃ । ತಾವತೈವ ಯುವಯೋ-

ರ್ಧಾಮ ತೇಜಃಸ್ಥಾನಮಯಾಮಿ । ಪ್ರಾಪ್ನೋಮಿ । ಸುವೃಕ್ತಿರ್ಯುವಯೋಃ ಶೋಭನಾವರ್ಜಕಶ್ಚ ಯುಷ್ಮತ್ಪರಿಗ್ರಹಾದಸ್ಮಿ । ಯದ್ಯದಾ ತು ವಿದಥೇಷು ಯಜ್ಞೇಷು ವಾಂ ಯುವಾಂ ಹೋತಾ ಹೋಮನಿಷ್ಪಾದಕೋಽಯಮಧ್ವರ್ಯುರನಕ್ತಿ ಹವಿಷಾಗಚ್ಛತಿ । ಹೋಮಂ ಕರೋತೀತ್ಯರ್ಥಃ । ಯದ್ವಾ । ಹೋತಾ ದೇವಾನಾಮಾಹ್ವಾತೃೈತನ್ನಾಮಕ ಋತ್ವಿಕ್ ಶಸ್ತ್ರಾದಿನಾ ವಾಮನಕ್ತಿ ವ್ಯಂಜಯತಿ । ತದಾ ಸೂರಿರ್ಯುಷ್ಮನ್ಮಾಹಾತ್ಮ್ಯವಿದಿಯಕ್ಷನ್ ಯಾಗಂ ಕರ್ತುಮಿಚ್ಛನ್ನಹಂ ಹೇ ವೃಷಣೌ ಕಾಮಾನಾಂ ವರ್ಷಿತಾರೌ ವಾಂ ಯುವಯೋಃ ಸುಮ್ನಂ ಯುಷ್ಮತ್ಸಂಬಂಧಿ ಸುಖಂ ದೇವತ್ವಲಕ್ಷಣಮಯಾಮೀತಿ ಶೇಷಃ ॥

। ಪ್ರತಿಪದಾರ್ಥ ।

**ವಾಂ**—(ಎಲೈ ಮಿತ್ರಾವರುಣರೇ)ನಿಮ್ಮನ್ನುದ್ದೇಶಿಸಿ (ಮಾಡಬೇಕಾದ ಯಾಗದ) । **ಪ್ರಸ್ತುತಿಃ**—ಪ್ರಸ್ತಾವನಾರೂಪವಾದ ಸಂಕಲ್ಪಮಾತ್ರವೇ, । **ನ ಪ್ರಯುಕ್ತಿಃ**—ಸಂಪೂರ್ಣವಾದ ವಿಧಿಯನ್ನು ನೆರವೇರಿಸಿದಂತೆ ಆಗುವುದಿಲ್ಲ. (ಆದರೆ, ಅಷ್ಟುಮಾತ್ರದಿಂದಲೇ) । **ಧಾಮ**—(ನಿಮ್ಮ ತೇಜೋರೂಪವಾದ ಸ್ಥಾನವನ್ನು । **ಅಯಾಮಿ**—ಹೊಂದುತ್ತೇನೆ. । **ಯತ್**—ಯಾವಾಗ । **ವಿದಥೇಷು**—ಯಜ್ಞಗಳಲ್ಲಿ । **ವಾಂ**—ನಿಮ್ಮನ್ನು । **ಹೋತಾ**—ಹೋಮಸಂಪಾದಕನಾದ ಅಧ್ವರ್ಯುವು ಅಥವಾ ಹೋತೃವೆಂಬ ಹೆಸರಿನ ಋತ್ವಿಕ್ಕು । **ಅನಕ್ತಿ**—ಹವಿಸ್ಸನ್ನು ಅರ್ಪಿಸಿ ಹೋಮವನ್ನು ಮಾಡುತ್ತಾನೆಯೋ (ಆಗ) । **ವೃಷಣೌ**—ಇಷ್ಟಾರ್ಥಪ್ರದರಾದ ಎಲೈ ಮಿತ್ರಾವರುಣರೇ । **ಸೂರಿಃ**—ನಿಮ್ಮ ಮಾಹಾತ್ಮ್ಯವನ್ನು ತಿಳಿದವನೂ । **ಇಯಕ್ಷನ್**—ಯಜ್ಞವನ್ನು ಮಾಡಲಿಚ್ಛೆಯುಳ್ಳವನೂ ಆದ ನಾನು । **ವಾಂ**—ನಿಮ್ಮಿಬ್ಬರ । **ಸುಮ್ನಂ**—(ದೇವತ್ವರೂಪವಾದ) ಸುಖವನ್ನು (ಹೊಂದುವೆನು.) ।

ಭಾವಾರ್ಥ

ಎಲೈ ಮಿತ್ರಾವರುಣರೇ, ನಿಮ್ಮನ್ನು ಉದ್ದೇಶಿಸಿ ಮಾಡಬೇಕಾದ ಯಾಗದ ಪ್ರಸ್ತಾವನಾರೂಪವಾದ ಸಂಕಲ್ಪಮಾತ್ರವೇ ಸಂಪೂರ್ಣವಾದ ವಿಧಿಯನ್ನು ನೆರವೇರಿಸಿದಂತೆ ಆಗುವುದಿಲ್ಲ. ಆದರೆ ಅಷ್ಟನ್ನು ಮಾಡಿದ ಮಾತ್ರದಿಂದಲೇ, ನಾನು ನಿಮ್ಮ ತೇಜೋರೂಪವಾದ ಸ್ಥಾನವನ್ನು ಹೊಂದುತ್ತೇನೆ. ಮತ್ತು ಯಾವಾಗ ಯಜ್ಞಗಳಲ್ಲಿ ನಿಮ್ಮನ್ನು ಹೋಮಸಂಪಾದಕನಾದ ಅಧ್ವರ್ಯುವು ಹವಿಸ್ಸನ್ನು ಅರ್ಪಿಸಿ ಹೋಮವನ್ನು ಮಾಡುತ್ತಾನೆಯೋ ಆಗ, ಎಲೈ ಇಷ್ಟಾರ್ಥಪ್ರದರಾದ ಮಿತ್ರಾವರುಣರೇ, ನಿಮ್ಮ ಮಾಹಾತ್ಮ್ಯವನ್ನು ತಿಳಿದವನೂ ಯಜ್ಞವನ್ನು ಮಾಡಲಿಚ್ಛೆಯುಳ್ಳವನೂ ಆದ ನಾನು ನೀವಿಬ್ಬರೂ ಅನುಭವಿಸುತ್ತಿರುವ ಈ ದೇವತ್ವರೂಪದ ಸುಖವನ್ನು ಹೊಂದುವೆನು.

## English Translation

The purpose of worshipping you, Mitra and Varuna, is not the performance, but (even by so much) I may attain to your glory, and there is acquittance (of my duty); for when the priest offers you oblations in sacrifices, then the pious man, showers (of benefits), being desirous of worshipping you, (obtains) felicity.

ವಿಶೇಷವಿಷಯಗಳು

**ಪ್ರಸ್ತುತಿಃ ನ ಪ್ರಯುಕ್ತಿಃ**—ಪ್ರಸ್ತುತಿಯು ಪ್ರಯುಕ್ತಿಯಾಗಲಾರದು ಎಂದು ಅಪೇಕ್ಷಕರ್ಮ್ಮ ಇರತಕ್ಕ ವ್ಯತ್ಯಾಸವನ್ನು ತೋರಿಸಿ ಅವರೂ ಸಹ ಕೇವಲ **ಪ್ರಸ್ತುತಿ**ಮಾತ್ರದಿಂದಲೇ ಮಿತ್ರಾವರುಣರ ಅನುಗ್ರಹವನ್ನು ಸಂಪಾದಿಸಿ ಅವರ ಧಾಮವನ್ನು ಪಡೆಯಬಹುದೆಂಬ ಭರವಸೆಯನ್ನು ಸೂಚಿಸಿದೆ. ಕರ್ಮದಲ್ಲಿ ಕೇವಲ ಒಂದು ಅಂಗವಾದ **ಪ್ರಸ್ತುತಿಯ** ಸಹಾಯದಿಂದಲೇ ಮಿತ್ರಾವರುಣರ ಧಾಮವನ್ನು ಪಡೆಯಬಹುದಾದರೆ, ಕರ್ಮವನ್ನು ಪೂರ್ಣವಾಗಿ ನಿರ್ವಹಿಸಿದರೆ ಅದರ ಫಲವು ಇನ್ನೂ ಅತ್ಯಧಿಕವಾಗುವುದೆಂದು ತಾತ್ಪರ್ಯ.

**ಪ್ರಸ್ತುತಿಃ ಪ್ರಸ್ತಾವನಾ;** ಕರೋಮೀತಿ ಸಂಕಲ್ಪ ಏವ—ಕರ್ಮವನ್ನು ಪೂರ್ತಿಯಾಗಿ ನೆರವೇರಿಸುತ್ತೇನೆ ಎಂಬ **ಪ್ರಸ್ತಾವನಾ**ರೂಪವಾದ ಸಂಕಲ್ಪವೆಂದು ಸಾಯಣರು ಅರ್ಥಮಾಡಿದ್ದಾರೆ. ಪ್ರಸ್ತಾವವೆಂದರೇನು. ಕರ್ಮದಲ್ಲಿ ಅದಕ್ಕೆ ಯಾವ ಸ್ಥಾನ ಎಂಬುದನ್ನು ಐತರೇಯಬ್ರಾಹ್ಮಣದ ಭಾಷ್ಯದಲ್ಲಿ ಸಾಯಣರು ವಿವರಿಸಿದ್ದಾರೆ. ಮತ್ತು ಇಂತಹ **ಪ್ರಸ್ತಾವ**ವನ್ನು ಪಠಿಸುವವರು **ಪ್ರಸ್ತುತಿ**ಕಾಮರೆಂದು ಛಾಂದೋಗ್ಯಾದಿಗಳಲ್ಲಿ ಉಕ್ತವಾಗಿದೆ. **ಪ್ರಸ್ತಾವದ** ಉತ್ಪತ್ತಿಯನ್ನೂ ಸ್ವರೂಪವನ್ನೂ ಐತರೇಯಬ್ರಾಹ್ಮಣದಲ್ಲಿ ಈ ರೀತಿ ಕಥಾರೂಪದಲ್ಲಿ ತಿಳಿಸಿದೆ.

**ಋಕ್ಚ ವಾ ಇದಮಗ್ರೇ ಸಾಮ ಚಾಸ್ತಾಂ ಸೈವ ನಾಮ ಋಗಾಸೀದಮೋ ನಾಮ ಸಾಮ ಸಾ ವಾ ಋಕ್ಸಾಮೋಪಾವದನ್ಮಿಥುನಂ ಸಂಭವಾವ ಪ್ರಜಾತ್ಯಾ ಇತಿ ನೇತ್ಯಬ್ರವೀತ್ಸಾಮ ಜ್ಯಾಯಾನ್ವಾ ಅತೋ ಮಮ ಮಹಿಮೇತಿ ತೇ ದ್ವೇ ಭೂತ್ವೋಪಾವದತಾಂ ತೇನ ಪ್ರತಿಚನ ಸಮವದತ ತಾಸ್ತಿಸ್ರೋ ಭೂತ್ವೋಪಾವದಂಸ್ತತ್ತಿಸೃಭಿಃ ಸಮಭವದ್ಯತ್ತಿಸೃಭಿಃ ಸಮಭವತ್ತಸ್ಮಾತ್ತಿಸೃಭಿಃ ಸ್ತುವಂತಿ ತಿಸೃಭಿರುದ್ಗಾಯಂತಿ ತಿಸೃಭಿರ್ಹಿ ಸಾಮ ಸಂಮಿತಂ ತಸ್ಮಾದೇಕಸ್ಯ ಬಹ್ವ್ಯೋ ಜಾಯಾ ಭವಂತಿ ನೈಕಸ್ಯೈ ಬಹವಃ ಸಹ ಪತಯೋ ಯದ್ವೈ ತತ್ಸಾ ಚಾಮಶ್ಚ ಸಮಭವತಾಂ ತತ್ಸಾಮಾಭವತ್ತತ್ಸಾಮ್ನಃ ಸಾಮತ್ವಂ, ಸಾಮನ್ಭವತಿ ಯ ಏವಂ ವೇದ ಯೋ ವೈ ಭವತಿ ಯಃ ಶ್ರೇಷ್ಠತಾಮಶ್ನುತೇ ಸ ಸಾಮನ್ಭವತ್ಯಸಾಮನ್ಯ ಇತಿ ಹಿ ನಿಂದಂತಿ । ತೇ ವೈ ಪಂಚಾನ್ಯದ್ಭೂತ್ವಾ ಪಂಚಾನ್ಯದ್ಭೂತ್ವಾ ಕಲ್ಪೇತಾಮಾಹಾವಶ್ಚ ಹಿಂಕಾರಶ್ಚ ಪ್ರಸ್ತಾವಶ್ಚ ಪ್ರಥಮಾ ಚ ಋಗುದ್ಗೀಥಶ್ಚ ಮಧ್ಯಮಾ ಚ ಪ್ರತಿಹಾರಶ್ಚೋತ್ತಮಾ ಚ ನಿಧನಂ ಚ ವಷಟ್ಕಾರಶ್ಚ ಇತಿ ॥** (ಐ. ಬ್ರಾ. ೧೨-೧೩)

ಪ್ರಾರಂಭದಲ್ಲಿ **ಋಕ್ಕು** ಸ್ತ್ರೀರೂಪದಲ್ಲಿಯೂ, **ಸಾಮವು** ಪುಂರೂಪದಲ್ಲಿಯೂ ಇದ್ದು ಸಂತಾನೋತ್ಪತ್ತಿಯಲ್ಲಿ ಇಷ್ಟವುಳ್ಳದ್ದಾಗಿ **ಋಕ್ಕು ಸಾಮ**ದೊಂದಿಗೆ ಒಂದಾಗಿ ಸೇರಲು ಬಯಸಿತು. ಆಗ **ಸಾಮವು** ತನ್ನ ಪುಂಸ್ತ್ವದ ಹಿರಿಮೆಯನ್ನು ತೋರಿಸಲು ಆದಾಗದೆಂದಿತು. ತಾನು ಎರಡು ರೂಪವನ್ನು ಹೊಂದಿಕೊಂಡು **ಋಕ್ಕು** ಪುನಃ **ಸಾಮ**ವನ್ನು ಪ್ರಾರ್ಥಿಸಲು ಆಗಲೂ **ಸಾಮವು** ಅದನ್ನು ನಿರಾಕರಿಸಿತು ಪುನಃ ಮೂರಾಗಿ ಬೆಳೆದು **ಸಾಮ**ವನ್ನು ಪ್ರಾರ್ಥಿಸಲು ಆಗ ಅದರ ಒಪ್ಪಿಗೆಯಿಂದ ಎರಡೂ ಕಲೆತಾಗ ಪಂಚಾವಯವಗಳುಳ್ಳ ಎರಡು ಶಸ್ತ್ರಗಳ ಸಮೂಹಗಳ ಉತ್ಪತ್ತಿಯಾಯಿತು. ಅವೇ ಪ್ರಸ್ತಾವಾದಿಗಳು. ಇವು ಯಾವವೆಂದರೆ,

ತೇ ವೈ ತ ಏವ ವಕ್ಷ್ಯಮಾಣಾಃ ಶಸ್ತ್ರಾವಯವಾಃ ಪಂಚಸಂಖ್ಯಾತಾ ಅನ್ಯತ್ಪೃಥಗೇವ ಶಸ್ತ್ರರೂಪಂ ಭೂತ್ವಾ ವರ್ತಂತೇ । ತಥಾ ಹಿಂಕಾರಾದಯಃ ಪಂಚ ಸಾಮಾಂಶಾ ಪೃಥಗೇವಾವಯವಾ

ಅಸ್ಮತ್ಪೃಥಕ್ಸಾಮರೂಪಂ ಭೂತ್ವಾ ವರ್ತಂತೇ ಚ । ..............ತದೇತತ್ಪಂಚಕಂ ಶಸ್ತ್ರಸ್ವರೂಪಂ । ಉದ್ಗಾತ್ರಾ ಪಠಿತವ್ಯಃ ಸಾಮ್ನ ಆದೌ ಹಿಮಿತ್ಯೇವಂಶಬ್ದೋ ಹಿಂಕಾರಃ । ಗಾತವ್ಯ ಸಾಮಾವಯವಃ ಪ್ರಸ್ತಾವಃ । ಉದ್ಗಾತ್ರಾ ಗಾತವ್ಯ ಉದ್ಗೀಥಃ । ಪ್ರತಿಹರ್ತ್ರಾ ಗಾತವ್ಯಃ ಪ್ರತಿಹಾರಃ । ಅಂತೇ ಸರ್ವೈರ್ಗಾತವ್ಯೋ ಭಾಗೋ ನಿಧನಂ । ತದೇತತ್ಪಂಚಕಂ ಸ್ತೋತ್ರಸ್ವರೂಪಂ ।

(ಐ ಬ್ರಾ ೧೨-೧೩ ರ ಸಾಯಣಭಾಷ್ಯ)

ಇವುಗಳಲ್ಲಿ ಉದ್ಗಾತೃವಿನಿಂದ ಆದಿಯಲ್ಲಿ **ಹಿಂ** ಎಂಬ ಶಬ್ದರೂಪದಲ್ಲಿ ಪಠಿಸಲ್ಪಡುವ ಹಿಂಕಾರವು ಮೊದಲನೆಯದು. ಸಾಮಾವಯವರೂಪವಾದುದೂ, ಪ್ರಸ್ತೋತೃವಿನಿಂದ ಗಾನಮಾಡತಕ್ಕದ್ದೂ ಆದ **ಪ್ರಸ್ತಾವವು** ಎರಡನೆಯದು. ಉದ್ಗಾತೃವು ಪಠಿಸಬೇಕಾದುದು ಉದ್ಗೀಥವೆಂಬ ಮೂರನೆಯದು. ಪ್ರತಿಹಾರವೆಂಬುದು ಪ್ರತಿಹರ್ತೃವು ಪಠಿಸಬೇಕಾದ ನಾಲ್ಕನೆಯದು. ಕೊನೆಯಲ್ಲಿ ಎಲ್ಲರೂ ಒಟ್ಟಿಗೆ ಸೇರಿ ಗಾನಮಾಡಬೇಕಾದ ಐದನೆಯದಕ್ಕೆ **ನಿಧನವೆಂದು** ಹೆಸರು. ಈ ಐದು ಅವಯವಗಳಲ್ಲಿ ಎರಡನೆಯದಾದ **ಪ್ರಸ್ತಾವವನ್ನು** ಪ್ರಸ್ತೋತೃವು ಪಠಿಸಬೇಕು ಎಂದು ಉದಾಹರಣೆಯನ್ನು ತೆಗೆದುಕೊಂಡರೆ

ಅಭಿ ತೇ ಮಧುನಾ ಪಯೋಽಥರ್ವಾಣೋ ಅಶಿಶ್ರಯುಃ । ದೇವಂ ದೇವಾಯ ದೇವಯು ॥

(ಋ. ಸಂ. ೯-೧೧-೨)

ಎಂಬ ಋಕ್ಕಿನಲ್ಲಿ **ಅಭಿ ತೇ ಮಧುನಾ ಪಯ (ಓಂ)** ಎಂಬುದು ಪ್ರಸ್ತೋತೃವಿನಿಂದ ಪಠಿಸಲ್ಪಡಬೇಕಾದ **ಪ್ರಸ್ತಾವ**ವೆಂಬ ಅವಯವ. ಇದು ಸೋಮದೇವತೆಯನ್ನುದ್ದೇಶಿಸಿದ ಮಂತ್ರವಾಗಿದೆ. ಇಲ್ಲಿ ಈ ಮಂತ್ರಭಾಗವನ್ನುಮಾತ್ರ ತಿಳಿದು ಯಾವ ದೇವತೆಯನ್ನುದ್ದೇಶಿಸಿರುವುದೋ ಆ ದೇವತೆಯ ಸ್ವರೂಪವನ್ನು ತಿಳಿಯದೇ ಇದ್ದರೆ ಯಾವ ಪ್ರಯೋಜನವೂ ಇಲ್ಲ ; ಅಷ್ಟೇ ಅಲ್ಲದೇ ಅದರಿಂದ ಅನರ್ಥವೂ ಉಂಟು ಎಂದು ಹೇಳಿದೆ ಈ ಸಂದರ್ಭದಲ್ಲಿ ಉಶಸ್ತಿ ಚಾಕ್ರಾಯಣನು **ಪ್ರಸ್ತಾವಾದಿ** ಪಂಚಾವಯವಗಳಿಂದ ಕೂಡಿದ **ಸಾಮದ** ಸ್ವರೂಪವನ್ನು ವಿವರಿಸಿ **ಪ್ರಸ್ತುತಿಗೂ** ಅದರಿಂದ ನಿರ್ದೇಶಿಸಲ್ಪಟ್ಟ **ದೇವತೆಗೂ** ಇರತಕ್ಕ ಸಂಬಂಧಜ್ಞಾನದ ಮಹತ್ತ್ವವನ್ನೂ ಆ ಜ್ಞಾನಾಭಾವವಿದ್ದು ಕೇವಲ ಮಂತ್ರವನ್ನು ಮಾತ್ರ ಪಠಿಸಿದರೆ ಅದರಿಂದ ಉಂಟಾಗತಕ್ಕ ತೊಂದರೆಯನ್ನೂ ತಿಳಿಸಿದ್ದಾನೆ. ಪ್ರಸ್ತಾವದ ಸ್ವರೂಪವನ್ನೂ ಪ್ರಸ್ತುತಿಕಾಮನ ಲಕ್ಷಣವನ್ನೂ ತಿಳಿಸುವುದಕ್ಕಾಗಿ ಆ ಕಥಾಭಾಗವು ಉಕ್ತವಾಗಿರುವುದರಿಂದ ಇಲ್ಲಿಯೂ ಅದನ್ನು ಸೂಕ್ಷ್ಮವಾಗಿ ತಿಳಿಸಲಾಗುತ್ತದೆ. ಶಂಕರಾಚಾರ್ಯರೂ ಸಹ—

ಉದ್ಗೀಥೋಪಾಸನಪ್ರಸಂಗೇನ ಪ್ರಸ್ತಾವಪ್ರತಿಹಾರವಿಷಯಮಪ್ಯುಪಾಸನಂ ವಕ್ತವ್ಯಮಿತೀದಮಾರಭ್ಯತೇ ।

(ಛಾ. ಉ ೧-೧೦-೧ ಶಾಂಕರಭಾಷ್ಯ)

ಉದ್ಗೀಥದ ಉಪಾಸನಾಪ್ರಸಂಗವಾಗಿ ಅದರ ಅಂಗಗಳಾದ **ಪ್ರಸ್ತಾವಾದಿಗಳ** ಉಪಾಸನೆಯೂ ಆಗತ್ಯವೆಂದು ತಿಳಿಸಲು **ಚಾಕ್ರಾಯಣನ** ಕಥೆಯನ್ನು ಹೇಳಿದೆ ಎಂದು ತಮ್ಮ ಉಪೋದ್ಘಾತದಲ್ಲಿ ಹೇಳಿದ್ದಾರೆ. ಆ ಕಥಾಭಾಗವು ಈರೀತಿಯಿದೆ.

ಮಟಚೀಹತೇಷು ಕುರುಷ್ವಾಟಿಕ್ಯಾ ಸಹ ಜಾಯಯೋಷಸ್ತಿರ್ಹ ಚಾಕ್ರಾಯಣ ಇಭ್ಯಗ್ರಾಮೇ ಪ್ರದ್ರಾಣಕ ಉವಾಸ । ಸ ಹೇಭ್ಯಂ ಕುಲ್ಮಾಷಾನ್ಖಾದಂತಂ ಬಿಭಿಕ್ಷೇ ತಂ ಹೋವಾಚ ।

ನೇತೋಽನ್ಯೇ ವಿದ್ಯಂತೇ ಯಚ್ಚ ಯೇ ಮ ಇಮ ಉಪನಿಹಿತಾ ಇತಿ । ಏತೇಷಾಂ ಮೇ ದೇಹೀತಿ ಹೋವಾಚ । ತಾನಸ್ಮೈ ಪ್ರದದೌ ಹಂತಾನುಪಾನಮಿತ್ಯುಚ್ಛಿಷ್ಟಂ ವೈ ಮೇ ಪೀತಂ ಸ್ಯಾದಿತಿ ಹೋವಾಚ ॥ ನ ಸ್ವಿದೇತೇಽಪ್ಯುಚ್ಛಿಷ್ಟಾ ಇತಿ ನ ವಾ ಅಜೀವಿಷ್ಯಮಿಮಾನಖಾದನ್ನಿತಿ ಹೋವಾಚ ಕಾಮೋ ಮ ಉದಪಾನಮಿತಿ । ಸ ಹ ಖಾದಿತ್ವಾತಿಶೇಷಾಞ್ಜಾಯಾಯಾ ಆಜಹಾರ ಸಾಗ್ರ ಏವ ಸುಭಿಕ್ಷಾ ಬಭೂವ ತಾನ್ಪ್ರತಿಗೃಹ್ಯ ನಿದಧೌ । ಸ ಹ ಪ್ರಾತಃ ಸಞ್ಜಿಹಾನ ಉವಾಚ ಯದ್ಬತಾನ್ನಸ್ಯ ಲಭೇಮಹಿ ಲಭೇಮಹಿ ಧನಮಾತ್ರಾಂ ರಾಜಾಸೌ ಯಕ್ಷ್ಯತೇ ಸ ಮಾಸರ್ವೈರಾರ್ತ್ವಿಜ್ಯೈರ್ವೃಣೀತೇತಿ । ತಂ ಜಾಯೋವಾಚ ಹಂತ ಪತ ಇಮ ಏವ ಕುಲ್ಮಾಷಾ ಇತಿ ತಾನ್ಖಾದಿತ್ವಾಮುಂ ಯಜ್ಞಂ ವಿತತಮೇಯಾಯ ।

ತತ್ರೋದ್ಗಾತೄನಾಸ್ತಾವೇ ಸ್ತೋಷ್ಯಮಾಣಾನುಪೋಪವಿವೇಶ ಸ ಹ ಪ್ರಸ್ತೋತಾರಮುವಾಚ । ಪ್ರಸ್ತೋತರ್ಯಾ ದೇವತಾ ಪ್ರಸ್ತಾವಮನ್ವಾಯತ್ತಾ ತಾಂ ಚೇದವಿದ್ವಾನ್ ಪ್ರಸ್ತೋಷ್ಯಸಿ ಮೂರ್ಧಾ ತೇ ವಿಪತಿಷ್ಯತೀತಿ ।

ಏವಮೇವೋದ್ಗಾತಾರಮುವಾಚೋದ್ಗಾತರ್ಯಾ ದೇವತೋದ್ಗೀಥಮನ್ವಾಯತ್ತಾ ತಾಂ ಚೇದವಿದ್ವಾನುದ್ಗಾಸ್ಯಸಿ ಮೂರ್ಧಾ ತೇ ವಿಪತಿಷ್ಯತೀತಿ । ಏವಮೇವ ಪ್ರತಿಹರ್ತಾರಮುವಾಚ ಪ್ರತಿಹರ್ತರ್ಯಾ ದೇವತಾ ಪ್ರತಿಹಾರಮನ್ವಾಯತ್ತಾ ತಾಂ ಚೇದವಿದ್ವಾನ್ಪ್ರತಿಹರಿಷ್ಯಸಿ ಮೂರ್ಧಾ ತೇ ವಿಪತಿಷ್ಯತೀತಿ ತೇ ಹ ಸಮಾರತಾಸ್ತೂಷ್ಣೀಮಾಸಾಂಚಕ್ರಿರೇ ॥

(ಛಾ. ಉ. ೧-೧೦, ೧೧)

ಕುರುದೇಶದಲ್ಲಿ ಆಟಿಕಿಯೆಂಬ ಪತ್ನಿಯೊಡಗೂಡಿದ ಉಷಸ್ತಿಚಾಕ್ರಾಯಣನೆಂಬ ಒಬ್ಬ ದರಿದ್ರನು ಇದ್ದನು. ಒಂದುಸಲ ಬಿರುಗಾಳಿಯಿಂದ ತೊಂದರೆಯುಂಟಾಗಲು ಚಾಕ್ರಾಯಣನು ದಾರಿದ್ರ್ಯಪೀಡಿತನಾಗಿ ತನ್ನ ಊರಿನಲ್ಲಿದ್ದ ಒಬ್ಬ ಧನಿಕನಲ್ಲಿಗೆ ಹೋಗಿ ತಿನ್ನುವುದಕ್ಕೆ ಏನಾದರೂ ಕೊಡಬೇಕೆಂದು ಬೇಡಿದನು. ಆಗ ಅಲಸಂದಿಯನ್ನು ತಿನ್ನುತ್ತಿದ್ದ ಆ ಧನಿಕನು ತನ್ನಲ್ಲಿ ಅಲ್ಪಪ್ರಮಾಣದಲ್ಲಿದ್ದ ಆ ಧಾನ್ಯವನ್ನುಳಿದು ಇನ್ನೇನೂ ಇಲ್ಲವೆಂದನು. ಆಗ ಚಾಕ್ರಾಯಣನು ಅದರಲ್ಲೇ ಕೊಂಚ ಕೊಡಬೇಕೆಂದು ನಿರ್ಬಂಧಿಸಲು ಧನಿಕನು ಕೊಂಚ ಮಾತ್ರ ಕೊಟ್ಟನು. ಅನಂತರ ಕುಡಿಯಲು ನೀರಿದೆಯೆಂದು ಪಕ್ಕದಲ್ಲಿದ್ದ ಪಾತ್ರೆಯನ್ನು ತೋರಿದನು. ಚಾಕ್ರಾಯಣನು ಅದು ಕುಡಿದು ಮಿಕ್ಕ ಎಂಜಲು ನೀರೆಂದೂ ತನಗೆ ಬೇಡವೆಂದೂ ಹೇಳಿದಾಗ ಧನಿಕನು ಅಲಸಂದಿಯೂ ತಾನು ತಿಂದುಳಿದ ಶಿಷ್ಟವಲ್ಲವೇ ಎಂದು ಪ್ರಶ್ನಿಸಲಾಗಿ, ಅತ್ಯಗತ್ಯವಿದ್ದುದರಿಂದ ಜೀವನಾಧಾರಕ್ಕಾಗಿ ಮಾತ್ರ ಶಿಷ್ಟವಾದರೂ ಬಾಧಕವಿಲ್ಲವೆಂದು ತಾನು ಧಾನ್ಯವನ್ನು ತೆಗೆದುಕೊಂಡುದಾಗಿಯೂ, ಅದೇ ನ್ಯಾಯವು ನೀರಿಗೆ ಸೇರುವುದಿಲ್ಲವೆಂದೂ ಹೇಳಿ ತನ್ನ ಪತ್ನಿಗೂ ಸಹ ಕೊಂಚ ಧಾನ್ಯವನ್ನು ಕೊಟ್ಟನು. ಅಷ್ಟರಲ್ಲಿಯೇ ಅವಳು ತನ್ನ ಆಹಾರವನ್ನು ಸಂಪಾದಿಸಿಕೊಂಡದ್ದರಿಂದ ತನಗೆ ಬೇಡವೆಂದಳು. ಮಾರನೆಯ ದಿನ ದೊರೆಯು ಯಜ್ಞಮಾಡುವನೆಂದು ತಿಳಿಯಲು ಚಾಕ್ರಾಯಣನು ಅಲ್ಲಿ ತನಗೆ ಪೌರೋಹಿತ್ಯವು ದೊರೆಯಬಹುದೆಂದು ತಿಳಿದು ಅಲ್ಲಿಗೆ ಹೋದನು. ಅಲ್ಲಿ ಸ್ತೋತ್ರವನ್ನು ಪಠಿಸುತ್ತಿದ್ದ ಉದ್ಗಾತೃಗಳಲ್ಲಿಗೆ ಹೋಗಿ, " ಯಾವ ದೇವತೆಯನ್ನುದ್ದೇಶಿಸಿ ಪ್ರಸ್ತಾವರೂಪವಾದ ಸ್ತೋತ್ರವನ್ನು ಪಠಿಸಬೇಕೋ ಆ ದೇವತೆಯ ಪೂರ್ಣವಾದ ಸ್ವರೂಪವನ್ನು ತಿಳಿಯದೇ ಪ್ರಸ್ತಾವನನ್ನು ಪಠಿಸಿದರೆ ನಿನ್ನ ತಲೆಯು ಒಡೆದು ಬೀಳುವುದು."

ಎಂದು ಪ್ರಶ್ನೋತ್ತರವಿಗೂ, ಹೀಗೆಯೇ "ದೇವತಾಸ್ವರೂಪವನ್ನರಿಯದೇ ಉದ್ಗೀಥ ಮತ್ತು ಪ್ರತಿಹಾರಗಳನ್ನುಚ್ಚರಿಸಿ ದರೂ ಅವರವರ ತಲೆಯು ಸಿಡಿದು ಬೀಳುವುದು" ಎಂದು ಎಚ್ಚರಿಸಿ ಪ್ರಸ್ತಾವಾದಿ ಮಂತ್ರಪಠನಕ್ಕೂ ದೇವತಾದಿ ವಿಷಯಕವಾದ ಜ್ಞಾನಕ್ಕೂ ಇರತಕ್ಕ ಸಂಬಂಧವನ್ನು ತಿಳಿಸುತ್ತಾನೆ. ಈ ಸಂದರ್ಭದಲ್ಲಿ ಕರ್ಮಕ್ಕೂ ।ಆಧ್ಯಾತ್ಮಿಕ ಜ್ಞಾನಕ್ಕೂ ಇರುವ ಅನ್ಯೋನ್ಯವಾದುದೂ ಅವಿನಾಭಾವವಾದುದೂ ಆದ ಸಂಬಂಧವೂ ತಿಳಿಯುತ್ತದೆ. ಹೀಗೆಯೇ ರಾಜಸಭೆಯಲ್ಲಿರತಕ್ಕ ತಾತ್ತ್ವಿಕರ ಸಂವಾದದಲ್ಲಿ **ಸಾಮದ** ಸ್ವರೂಪವು ವಿಶದವಾಗಿ ವಿವರಿಸಲ್ಪಡುತ್ತದೆ ಕೊನೆ ಯಲ್ಲಿ ಭೌತಿಕತತ್ತ್ವಗಳಿಗೂ, ಆಧ್ಯಾತ್ಮಿಕತತ್ತ್ವಗಳಿಗೂ **ಸಾಮಾವಯವಗಳಿಗೂ** ಇರತಕ್ಕ ತಾದಾತ್ಮ್ಯವನ್ನು ವಿವರಿಸಿದೆ.

ಲೋಕೇಷು ಪಂಚವಿಧಂ ಸಾಮೋಪಾಸೀತ ಪೃಥಿವೀ ಹಿಂಕಾರಃ, ಅಗ್ನಿಃ ಪ್ರಸ್ತಾವೋಽಂತರಿಕ್ಷ ಮುದ್ಗೀಥಃ।ಆದಿತ್ಯಃ ಪ್ರತಿಹಾರೋ ದ್ಯೌರ್ನಿಧನಮಿತ್ಯೂರ್ಧ್ವೇಷು। ಅಥಾವೃತ್ತೇಷು ದ್ಯೌರ್ಹಿಂ ಕಾರ ಆದಿತ್ಯಃ ಪ್ರಸ್ತಾವಃ।

ವೃಷ್ಟೌ ಪಂಚವಿಧಂ ಸಾಮೋಪಾಸೀತ ಪುರೋವಾತೋ ಹಿಂಕಾರೋ ಮೇಘೋ ಜಾಯತೇ ಸ ಪ್ರಸ್ತಾವಃ।

ಋತುಷು ಪಂಚವಿಧಂ ಸಾಮೋಪಾಸೀತ ವಸಂತೋ ಹಿಂಕಾರೋ ಗ್ರೀಷ್ಮಃ ಪ್ರಸ್ತಾವಃ ........ ।
ಪಶುಷು ಪಂಚವಿಧಂ ಸಾಮೋಪಾಸೀತ ಅಜಾ ಹಿಂಕಾರೋಽವಯಃ ಪ್ರಸ್ತಾವಃ ............ ।
ಪ್ರಾಣೇಷು ಪಂಚವಿಧಂ ಪರೋವರೀಯಃ ಸಾಮೋಪಾಸೀತ ಪ್ರಾಣೋ ಹಿಂಕಾರಃ ವಾಕ್ಪ್ರಸ್ತಾವಃ ........... ।

(ಛಾ. ಉ. ೨-೪-೨. ರಿಂದ ೭)

ಪೃಥ್ವೀತತ್ತ್ವಗಳಲ್ಲಿ ಅಗ್ನಿಯೂ, ವೃಷ್ಟಿತತ್ತ್ವಗಳಲ್ಲಿ ಮೇಘವೂ, ಋತುಗಳಲ್ಲಿ ಗ್ರೀಷ್ಮವೂ, ಪಶುಗಳಲ್ಲಿ ಮೇಷಗಳೂ, ಪ್ರಾಣಿಗಳಲ್ಲಿ ವಾಕ್ಕೂ ಸಹ ಪ್ರಸ್ತಾವರೂಪಗಳಾಗಿವೆ.

ಅಥ ಯತ್ಪ್ರಥಮೋದಿತೇ ಸ ಪ್ರಸ್ತಾವಸ್ತದಸ್ಯ ಮನುಷ್ಯಾ ಅನ್ವಾಯತ್ತಾಸ್ತಸ್ಮಾತ್ತೇ ಪ್ರಸ್ತುತಿ- ಕಾಮಾಃ ಪ್ರಸ್ತಾವಭಾಜಿನೋ ಹ್ಯೇತಸ್ಯ ಸಾಮ್ನಃ॥

(ಛಾ. ಉ. ೨-೯-೨)

ಸೂರ್ಯೋದಯವಾದನಂತರ ಪಠಿಸತಕ್ಕ ಮಂತ್ರಕ್ಕೆ ಪ್ರಸ್ತಾವವೆಂದು ಹೆಸರು. ಮಾನವನಿಗೂ ಇದಕ್ಕೂ ಬಹಳ ನಿಕಟವಾದ ಸಂಬಂಧವಿದೆ. ಆದುದರಿಂದಲೇ ಅವರು **ಪ್ರಸ್ತುತಿಕಾಮರಾಗಿದ್ದಾರೆ. ಸಾಮದ** ಅವಯವವಾದ **ಪ್ರಸ್ತಾವದ** ಪಠನದಲ್ಲಿಯೂ ನಿರತರಾಗಿದ್ದಾರೆ. ಹೀಗೆ **ಭೌತಿಕತತ್ತ್ವಗಳಿಗೂ ಪ್ರಸ್ತಾವಾದಿ** ಸಾಮಾವಯವಗಳಿಗೂ ಇರುವ ತಾದಾತ್ಮ್ಯವನ್ನು ತೋರಿಸಿ ಅನಂತರ ಆಧ್ಯಾತ್ಮಿಕತತ್ತ್ವಗಳಿಗೂ ಪ್ರಸ್ತಾವಾದಿಗಳಿಗೂ ಇರುವ ತಾದಾತ್ಮ್ಯ ಸಂಬಂಧವನ್ನೂ ತೋರಿಸಿದೆ.

ಮನೋ ಹಿಂಕಾರೋ ವಾಕ್ಪ್ರಸ್ತಾವಃ .................... । ಸ ಯ ಏವಮೇತದ್ವಾಯತ್ರಂ ಪ್ರಾಣೇಷು ಪ್ರೋತಂ।

ಅಭಿಮಂಥತಿ ಸ ಹಿಂಕಾರೋ ಧೂಮೋ ಜಾಯತೇ ಸ ಪ್ರಸ್ತಾವಃ .... .... .... । ಸ ಯ ಏವ-
ಮೇತದ್ರಥಂತರಮಗ್ನೌ ಪ್ರೋತಂ ।

ಉಪಮಂತ್ರಯತೇ ಸ ಹಿಂಕಾರೋ ಜ್ಞಪಯತೇ ಸ ಪ್ರಸ್ತಾವಃ .... .... .... । ಸ ಯ ಏವಮೇ-
ತದ್ವಾಮದೇವ್ಯಂ ಮಿಥುನೇ ಪ್ರೋತಂ ।

ಉದ್ಯನ್ಹಿಂಕಾರ ಉದಿತಃ ಪ್ರಸ್ತಾವಃ .... .... । ಸ ಯ ಏವ ಮೇತದ್ಬೃಹದಾದಿತ್ಯೇ ಪ್ರೋತಂ ।
.... .... .... .... .... .... ।

ತ್ರಯೀ ವಿದ್ಯಾ ಹಿಂಕಾರಸ್ತ್ರಯ ಇಮೇ ಲೋಕಾಃ ಸ ಪ್ರಸ್ತಾವೋಽಗ್ನಿರ್ವಾಯುರಾದಿತ್ಯಃ ಸ
ಉದ್ಗೀಥೋ ನಕ್ಷತ್ರಾಣಿ ವಯಾಂಸಿ ಮರೀಚಯಃ ಸ ಪ್ರತಿಹಾರಃ ಸರ್ಪಾ ಗಂಧರ್ವಾಃ ಪಿತರ-
ಸ್ತನ್ನಿಧನಮೇತತ್ಸಾಮ ಸರ್ವಸ್ಮಿನ್ ಪ್ರೋತಂ । ಸ ಯ ಏವಮೇತತ್ಸಾಮ ಸರ್ವಸ್ಮಿನ್
ಪ್ರೋತಂ ವೇದ ಸರ್ವಂ ಹ ಭವತಿ ॥

(ಛಾ. ಎ. ೨-೧೧ರಿಂದ ೨೧)

ಪ್ರಾಣಗಳಲ್ಲಿ ಪ್ರೋತವಾದ (ಹೆಣೆದಂತೆ ಸೇರಿಕೊಂಡಿರುವ) ಗಾಯತ್ರೀಸಾಮಕ್ಕೆ ವಾಕ್ಕೂ, ಅಗ್ನಿಯಲ್ಲಿ ಪ್ರೋತವಾದ ರಥಂತರಸಾಮಕ್ಕೆ ಧೂಮವೂ, ಮಿಥುನದಲ್ಲಿ ಪ್ರೋತವಾದ ವಾಮದೇವ್ಯಸಾಮಕ್ಕೆ ಪ್ರಾರ್ಥನೆಯೂ, ಆದಿತ್ಯನಲ್ಲಿ ಪ್ರೋತವಾದ ಬೃಹತ್ಸಾಮಕ್ಕೆ ಉದಿತನಾದ ಸೂರ್ಯನೂ, .... .... .... ಹೀಗೆಯೇ ವಿಶ್ವದಲ್ಲೆಲ್ಲಾ ವ್ಯಾಪಿಸಿ ಪ್ರೋತವಾದ ಸಾಮಕ್ಕೆ ಅಗ್ನಿ, ವಾಯು ಮತ್ತು ಆದಿತ್ಯ (ಪೃಥ್ವೀ, ಅಂತರಿಕ್ಷ ಮತ್ತು ದ್ಯುಲೋಕ) ಇವೂ ಪ್ರಸ್ತಾವಗಳೆಂದು ಪರಿಗಣಿತವಾಗಿದೆ. ಇದು ಪ್ರಸ್ತಾವದ ಮಹಿಮೆ.

ಈ ವಿಧವಾಗಿ ವಿಶ್ವತತ್ತ್ವವನ್ನೇ ಪ್ರತಿಬಿಂಬಿಸತಕ್ಕದ್ದೂ, ಪ್ರಸ್ತೋತೃವಿನಿಂದ ಪಠಿಸಲ್ಪಡಬೇಕಾದುದೂ ಮತ್ತು ಕರ್ಮಾರಂಭಕ್ಕೆ ಪ್ರಧಾನವಾಗಿ ಪಠಿಸಬೇಕಾದುದೂ ಆದ ಸ್ತುತಿಮಂತ್ರವನ್ನು ಪ್ರಕೃತವಾದ ಋಕ್ಕಿನಲ್ಲಿ **ಪ್ರಸ್ತುತಿ**ಯೆಂದು ಕರೆದಿದೆ. ಆದರೆ ಈ ಪ್ರಸ್ತುತಿಯ ಮಹತ್ತ್ವವೆಷ್ಟೇ ಇದ್ದರೂ ಸಹ ಅದರೊಂದಿಗೆ **ಪ್ರಯುಕ್ತಿ**ಯ ಪರಿಪೂರ್ಣತೆಯಿಲ್ಲದಿದ್ದರೆ ಅದರಿಂದ ಆಗುವ ಕೇವಲ ನಷ್ಟಮಾತ್ರವೇ ಅಲ್ಲದೆ, "**ಯಾ ದೇವತಾ ಪ್ರಸ್ತಾವಮನ್ವಾಯತ್ತಾ ತಾಂ ಚೇದವಿದ್ವಾನ್ಪ್ರಸ್ತೋಷ್ಯಸಿ ಮೂರ್ಧಾ ತೇ ವಿಪತಿಷ್ಯತಿ**" ಯಾವ ದೇವತೆಯೊಡನೆ **ಪ್ರಸ್ತಾವವು** ನಿಕಟವಾದ ಸಂಬಂಧವನ್ನು ಹೊಂದಿದೆಯೋ ಅಂತಹ ದೇವತಾಜ್ಞಾನವಿಲ್ಲದಿದ್ದರೆ ಪಠಿಸಿದವನ ತಲೆಯು ಸಿಡಿದು ಬೀಳುವುದು ಎಂದು ಹಿಂದೆಯೇ ಹೇಳಿದಂತೆ ಇಲ್ಲಿಯೂ ಸಹ **ಪ್ರಯುಕ್ತಿಯಿಂದ** ಪರಿಸಮಾಪ್ತಿಯಿಲ್ಲದಿದ್ದರೆ **ಪ್ರಸ್ತುತಿ**ಗೆ ಪ್ರಯೋಜನವಿಲ್ಲವೆಂಬುದು ಸಾಮಾನ್ಯನಿಯಮವಾಗಿದೆ. ಆದರೆ **ಮಿತ್ರಾವರುಣರನ್ನು**ದ್ದೇಶಿಸಿ ಪಠಿಸಿದ ಕೇವಲ **ಪ್ರಸ್ತುತಿಪಠನ**ಕ್ಕೂ ಅಸಾಧಾರಣವಾದ ಶಕ್ತಿಯಿರುವುದೆಂದು ತೋರಿಸಲು ಈ ಮಂತ್ರವು ಪ್ರಯುಕ್ತಿಯಿಲ್ಲದಿದ್ದರೂ ಸಹ **ವಾಂ ಧಾಮ ಅಯಾಮಿ ।** ನಿಮ್ಮ ತೇಜೋರೂಪವಾದ ಸ್ಥಾನವನ್ನು ಪಡೆಯುತ್ತೇನೆ ಎಂದು ಹೇಳಿದೆ.

**ಪ್ರಯುಕ್ತಿಃ—ಪ್ರಯುಕ್ತಿಃ ಕೃತ್ಸ್ನಪ್ರಯೋಗಃ ।** ಕರ್ಮಕಾಲಗಳಲ್ಲಿ ಪಠಿಸತಕ್ಕ ಮಂತ್ರಗಳ ಪ್ರತ್ಯೇಕವಾದ ಸ್ಥಾನಗಳನ್ನೂ, ಹಾಗೆಯೇ ಅವುಗಳೆಲ್ಲದರ ಪರಸ್ಪರಸಂಬಂಧವನ್ನೂ ಅರಿತು ಅವುಗಳೆಲ್ಲದರ ಸಾಮರಸ್ಯದಿಂದ ಕರ್ಮವನ್ನಾಚರಿಸಿ ಕರ್ಮಕ್ಕೆ ಪರಿಪೂರ್ಣತೆಯನ್ನು ಉಂಟುಮಾಡುವುದಕ್ಕೆ **ಪ್ರಯುಕ್ತಿ**ಯೆಂದು ಹೆಸರು. ವಿಧ್ಯುಕ್ತ

ವಾದ ಕರ್ಮವನ್ನು ಪೂರ್ಣಗೊಳಿಸುವುದರಲ್ಲಿ ತಾತ್ಪರ್ಯ. ಇದಿಲ್ಲದೆ, ಕೇವಲ ವೈಯಕ್ತಿಕವಾದ ಒಂದೊಂದು ಮಂತ್ರ ಪಠನದಿಂದ ಪ್ರಯೋಜನವಿಲ್ಲವೆಂಬುದನ್ನು ಸ್ಪಷ್ಟವಾಗಿ ಹೇಳಿದೆ. ಪ್ರಶ್ನೋಪನಿಷತ್ತಿನಲ್ಲಿ ಓಂಕಾರದ ಮಹಿಮೆಯನ್ನು ತಿಳಿಸುವಾಗಲೂ ಸಹ

ತಿಸ್ರೋ ಮಾತ್ರಾ ಮೃತ್ಯುಮತ್ಯಃ ಪ್ರಯುಕ್ತಾ ಅನ್ಯೋನ್ಯಸಕ್ತಾ ಅನವಿಪ್ರಯುಕ್ತಾಃ ।
ಕ್ರಿಯಾಸು ಬಾಹ್ಯಾಭ್ಯಂತರಮಧ್ಯಮಾಸು ಸಮ್ಯಕ್ಪ್ರಯುಕ್ತಾಸು ನ ಕಂಪತೇ ಜ್ಞಃ ॥
(ಪ್ರಶ್ನ-ಉ. ೫-೬)

ಈ ಮೂರು ಮಾತ್ರೆಗಳನ್ನು (ಅಕಾರ ಉಕಾರ ಮಕಾರ) ಒಂದಕ್ಕೊಂದರ ಪರಸ್ಪರ ಸಂಬಂಧವನ್ನರಿಯದೆ ಒಂದಾದ ಮೇಲೊಂದನ್ನು ಬೇರೆ ಬೇರೆ ಪ್ರಯೋಗಿಸಿದರೆ ಅದರಿಂದ ಅನರ್ಥವಾಗುವುದು. ಬಾಹ್ಯಕ್ರಿಯೆಯಾಗಲಿ ಆಂತರಿಕವಾದ ಕ್ರಿಯೆಯಾಗಲಿ, ಇವುಗಳಿಗೆ ಮಧ್ಯವರ್ತಿಯಾದ ಕ್ರಿಯೆಯಾಗಲಿ, ಅದರೊಂದಿಗೆ ಪೂರ್ಣವಾಗಿ ಬೆರೆಸಿ ಆಂತರಿಕವಾದ ಧ್ಯಾನಾದಿಗಳಿಗೂ, ಬಾಹ್ಯವಾದ ಆಚರಣೆಗಳಿಗೂ ಐಕ್ಯವನ್ನು ಸಂಪಾದಿಸಿದಾಗ ಮಾತ್ರ ಅದರ ಮಹತ್ವವಿರುವುದು ಎಂದು ತೋರಿಸುವಂತೆ ಪ್ರಕೃತವಾದ ಋಕ್ಕಿನಲ್ಲಿಯೂ ಸಹ **ಪ್ರಯುಕ್ತಿ**ಯೆಂದರೆ **ಕೃತ್ಸ್ನಃ ಪ್ರಯೋಗಃ** ಪರಿಪೂರ್ಣತೆಯನ್ನು ಹೊಂದುವ ಅಥವಾ ಹೊಂದಿದ ಕರ್ಮಾಚರಣೆಯೆಂದರ್ಥ.

**ಧಾಮ—ತೇಜಃಸ್ಥಾನಂ** । ಹಿಂದೆ ಹೇಳಿರುವಂತೆ **ಧಾಮ**ಶಬ್ದಕ್ಕೆ ಇರುವ ಅನೇಕಾರ್ಥಗಳಲ್ಲಿ ಇಲ್ಲಿ ಮಿತ್ರಾವರುಣರ ತೇಜೋರೂಪವಾದುದೂ ಸುಖದಾಯಕವಾದುದೂ ಆದ ಸ್ಥಾನವೆಂದರ್ಥ.

ಅನಕ್ತಿ—ಈ ಶಬ್ದಕ್ಕೆ ಎರಡು ವಿಧವಾದ ಅರ್ಥವನ್ನು ಮಾಡಿದ್ದಾರೆ. ಮೊದಲನೆಯದಾಗಿ, **ಹವಿಷಾ ಆಗಚ್ಛತಿ । ಹೋಮಂ ಕರೋತಿ ।** ಹವಿರ್ದಾನಾದಿಗಳಿಂದ ಹೋಮವನ್ನು ಮಾಡುತ್ತಾನೆಂದೂ, ಎರಡನೆಯದಾಗಿ, **ಹೋತಾ ಶಸ್ತ್ರಾದಿನಾ ವಾಂ ಅನಕ್ತಿ ವ್ಯಂಜಯತಿ ।** ಹೋತೃವಾದವನು ಶಸ್ತ್ರಾದಿಗಳಿಂದ ನಿಮ್ಮ ಗುಣಕಥನವನ್ನು ಮಾಡಿ ನಿಮ್ಮ ಸ್ವರೂಪವು ಪ್ರಕಾಶಗೊಳ್ಳುವಂತೆ ಮಾಡುತ್ತಾನೆ ಎಂದೂ ಅರ್ಥವಾಗುತ್ತದೆ.

**ಸೂರಿಃ—ಯುಷ್ಮನ್ಮಾಹಾತ್ಮ್ಯವಿತ್ ।** ನಿಮ್ಮ ಮಾಹಾತ್ಮ್ಯವನ್ನು ತಿಳಿದ ಎಂದು ಶ್ರೇಷ್ಠವಾದ ಜ್ಞಾನವನ್ನು ತೋರಿಸಲು **ಸೂರಿ** ಎಂಬ ಪದವನ್ನು ಪ್ರಯೋಗಿಸಿದೆ. **ರೇಭಃ, ಜರಿತಾ, ಕಾರುಃ** ಇತ್ಯಾದಿ ಸ್ತೋತೃನಾಮಗಳಲ್ಲಿ (ನಿ. ೩-೧೬) ಪಠಿಸಿದೆ. ಪ್ರಾಜ್ಞರು, ವಿವೇಕಿಗಳು, ಮೇಧಾವಿಗಳು ಎನ್ನುವ ಅರ್ಥವನ್ನು ಕೊಡತಕ್ಕ ಸಂದರ್ಭದಲ್ಲಿ **ಸೂರಿ**ಶಬ್ದವನ್ನು ಅನೇಕ ಕಡೆಗಳಲ್ಲಿ ಪ್ರಯೋಗಿಸಿದೆ. ದೇವತೆಗಳ ತತ್ತ್ವಸ್ವರೂಪವನ್ನೂ, ವಿಶ್ವದ ರಹಸ್ಯತತ್ತ್ವಗಳನ್ನೂ ಗ್ರಹಿಸುವ ಅಲೌಕಿಕವಾದ ಚಾಕ್ಷುಷವೂ ಮಾನಸಿಕವೂ ಆದ ದರ್ಶನಶಕ್ತಿಯನ್ನು ಪಡೆದಿರುವ ಋಷಿಗಳ ಪರವಾಗಿ ಉಪಯೋಗಿಸಿದಾಗ ಈ ವಿಶೇಷಣವು ಒಂದು ವಿಶೇಷಾರ್ಥವನ್ನು ಕೊಡುತ್ತದೆ.

ತದ್ವಿಷ್ಣೋಃ ಪರಮಂ ಪದಂ ಸದಾ ಪಶ್ಯಂತಿ ಸೂರಯಃ । ದಿವೀವ ಚಕ್ಷುರಾತತಂ ॥
(ಋ. ಸಂ. ೧-೨೨-೨೦)

ಇತ್ಯಾದಿ ಕಡೆಗಳಲ್ಲಿ ಕೇವಲ ಸ್ತೋತ್ರಮಾತ್ರಕರ್ತರೆಂದು ಮಾತ್ರವಲ್ಲದೇ ಋಷಿಗಳ ಅಸಾಧಾರಣವಾದ ದರ್ಶನಶಕ್ತಿಯನ್ನೂ ಸೂಚಿಸುತ್ತದೆ. ಈ ಪದಕ್ಕೆ ಇರತಕ್ಕ ಇನ್ನೂ ಇತರ ಅರ್ಥಗಳನ್ನು ಹಿಂದೆ ವಿಶದವಾಗಿ ತಿಳಿಸಿದೆ.

ಇಯಕ್ಷನ್—ಯಾಗಂ ಕರ್ತುಮಿಚ್ಛನ್ । ಯಜ್ಞಮಾಡಬಿಚ್ಛಿಸುವವನಾಗಿ,

ವ್ಯಾಕರಣಪ್ರಕ್ರಿಯಾ

**ಪ್ರಸ್ತುತಿಃ**—ಷ್ಟುಞ್ ಸ್ತುತೌ ಧಾತು. ಭಾವಾರ್ಥದಲ್ಲಿ **ಸ್ತ್ರಿಯಾಂ ಕ್ತಿನ್** ಎಂಬುದರಿಂದ ಕ್ತಿನ್ ಪ್ರತ್ಯಯ **ತಾದೌ ಚ ನಿತಿ** (ಪಾ. ಸೂ. ೬-೨-೫೦) ಎಂಬುದರಿಂದ ಗತಿಗೆ ಪ್ರಕೃತಿಸ್ವರ ಬರುತ್ತದೆ.

**ಪ್ರಯುಕ್ತಿಃ**—ಯುಜಿರ್ ಯೋಗೆ ಧಾತು. ಹಿಂದಿನಂತೆ ಕ್ತಿನ್ ಪ್ರತ್ಯಯ. ಕೃದುತ್ತರಪದಸ್ವರಕ್ಕೆ ಬಾಧಕ ವಾಗಿ ಹಿಂದಿನಂತೆ ಗತಿಗೆ ಪ್ರಕೃತಿಸ್ವರ ಬರುತ್ತದೆ.

**ಅಯಾಮಿ**—ಅಯ ಗತೌ ಧಾತು. **ವ್ಯತ್ಯಯೋ ಬಹುಲಮ್** ಎಂಬುದರಿಂದ ಪರಸ್ಮೈಪದಿಯಾಗುತ್ತದೆ. ಲಟ್ ಉತ್ತಮಪುರುಷಏಕವಚನಾಂತರೂಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಶಪ್ ಮಿಪ್ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಸುವೃಕ್ತಿಃ**—ವೃಜೀ ವರ್ಜನೇ ಧಾತು. ಕ್ತಿನ್ ಪ್ರತ್ಯಯ. **ಚೋಃಕುಃ** ಎಂಬುದರಿಂದ ಧಾತು ಜಕಾರಕ್ಕೆ ಕುತ್ವ, ಚರ್ತ್ವ. ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

**ಅನಕ್ತಿ**—ಅಂಜೂ ವ್ಯಕ್ತಿಮ್ರಕ್ಷಣಕಾಂತಿಗತಿಷು ಧಾತು. ಲಟ್ ಪ್ರಥಮಪುರುಷಏಕವಚನದಲ್ಲಿ ತಿಪ್ ಪ್ರತ್ಯಯ. **ರುಧಾದಿಭ್ಯಃ ಶ್ನಮ್** (ಪಾ. ಸೂ. ೩-೧-೭೮) ಎಂಬುದರಿಂದ ಶ್ನಮ್ ವಿಕರಣ. **ಮಿದಚೋಂತ್ಯಾತ್ಪರಃ** ಎಂಬುದರಿಂದ ಅಂತ್ಯಾಚಿನಪರವಾಗಿ ಬರುತ್ತದೆ. **ಶ್ನಾನ್ನಲೋಪಃ** (ಪಾ. ಸೂ. ೬-೪-೨೩) ಎಂಬುದರಿಂದ ಧಾತುನಕಾರಕ್ಕೆ ಲೋಪ. **ಚೋಃಕುಃ** ಎಂಬುದರಿಂದ ಜಕಾರಕ್ಕೆ ಕುತ್ವ. ಚರ್ತ್ವ. ಅನಕ್ತಿ ಎಂದು ರೂಪವಾಗುತ್ತದೆ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ವಿಕರಣಸ್ವರ ಉಳಿಯುತ್ತದೆ.

**ವಿದಥೇಷು**—ವಿದ ಜ್ಞಾನೇ ಧಾತು. ಇದಕ್ಕೆ ಔಣಾದಿಕ ಅಥ ಪ್ರತ್ಯಯ. ಕಿತ್ವ ಅತಿದೇಶವಿರುವುದರಿಂದ ಲಘೂಪಧಗುಣ ಬರುವುದಿಲ್ಲ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

**ಸೂರಿಃ**—ಷೂಙ್ ಪ್ರಾಣಿಪ್ರಸವೇ ಧಾತು. **ಸೂಙಃ ಕ್ರಿಃ** (ಉ. ಸೂ. ೪-೫೦೪) ಎಂಬುದರಿಂದ ಕ್ರಿಪ್ರತ್ಯಯ ಕಿತ್ತಾದುದರಿಂದ ಗುಣ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಇಯಕ್ಷನ್**—ಯಜ ದೇವಪೂಜಾಸಂಗತಿಕರಣದಾನೇಷು ಧಾತು. ಯಷ್ಟುಂ ಇಚ್ಛತಿ ಇಯಕ್ಷತಿ. ಇಯಕ್ಷತೀತಿ ಇಯಕ್ಷನ್ **ಧಾತೋಃ ಕರ್ಮಣಃ ಸ**—(ಪಾ. ಸೂ ೩-೧-೭) ಎಂಬುದರಿಂದ ಇಚ್ಛಾರ್ಥದಲ್ಲಿ ಸನ್. **ಸನ್ಯಙೋಃ** ಎಂಬುದರಿಂದ ದ್ವಿತ್ವ. **ಬಹುಲಂ ಛಂದಸಿ** ಎಂಬುದರಿಂದ ಅಭ್ಯಾಸಕ್ಕೆ ಸಂಪ್ರಸಾರಣ ಬರುತ್ತದೆ. ಸನ್ನಂತದ ಮೇಲೆ ಲಟ್ ಬಂದಾಗ ಅದಕ್ಕೆ ಶತ್ರಾದೇಶ. **ಅಭ್ಯಸ್ತಾನಾಮಾದಿಃ** (ಪಾ. ಸೂ. ೬-೧-೧೮೯) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ‖ ೨ ‖

ಸಂಹಿತಾಪಾಠಃ

ಶೀಪಾಯ ಧೇನುರದಿತಿರ್ಋತಾಯ ಜನಾಯ ಮಿತ್ರಾವರುಣಾ ಹವಿರ್ದೇ।

ಹಿನೋತಿ ಯದ್ವಾಂ ವಿದಥೇ ಸಪರ್ಯನ್ತ್ಸ ರಾತಹವ್ಯೋ ಮಾನುಷೋ

ನ ಹೋತಾ ॥ ೩ ॥

ಪದಪಾಠಃ

ಪೀಪಾಯ । ಧೇನುಃ । ಅದಿತಿಃ । ಋತಾಯ । ಜನಾಯ । ಮಿತ್ರಾವರುಣಾ । ಹವಿಃಽದೇ ।

ಹಿನೋತಿ । ಯತ್ । ವಾಂ । ವಿದಥೇ । ಸಪರ್ಯನ್ । ಸಃ । ರಾತಽಹವ್ಯಃ । ಮಾನುಷಃ

ನ । ಹೋತಾ ॥ ೩ ॥

ಸಾಯಣಭಾಷ್ಯಂ

ಹೇ ಮಿತ್ರಾವರುಣಾ ಮಿತ್ರಾವರುಣೌ ಋತಾಯ ಯುಷ್ಮತ್ಸಂಬಂಧಿಯಜ್ಞಾಯ ಹವಿರ್ದೇ ಹವಿಷೋ ದಾತ್ರೇ ॥ ಆತೋ ಮನಿನ್ನಿತಿ ವಿಚ್ । ಭತ್ವ ಆತೋ ಧಾತೋರಿತ್ಯಾಕಾರಲೋಪಃ ॥ ಜನಾಯ ಯಜಮಾನಾಯ ಚ ಧೇನುಃ ಪ್ರೀಣಯಿತ್ರೀ ಗೌರದಿತಿರದೀನಾ ಬಹುಕ್ಷೀರಾ ಸತೀ ಪೀಪಾಯ । ಕ್ಷೀರೇಣ ಪುನಃಪುನರಾಪ್ಯಾಯತಾಂ ॥ ಪ್ಯಾಯತೇಶ್ಛಾಂದಸಃ ಪ್ರಾರ್ಥನಾಯಾಂ ಲಿಟ್ । ಲಿಡ್ಯಙೋಶ್ಚೇತಿ ಪೀಭಾವಃ ॥ ಪಯಸ್ಯಾದಿಹವಿಷ್ಕಂ ಯಜ್ಞಂ ಪಯೋವ್ರತಾದಿಷು ಯಜಮಾನಂ ಚೇತ್ಯರ್ಥಃ । ಕಸ್ಮಿನ್ಕಾಲ ಇತಿ ಚೇತ್ ತತ್ರಾಹ । ಯದ್ಯದಾ ಸ ಪ್ರಸಿದ್ಧೋ ರಾತಹವ್ಯ ಏತನ್ನಾಮಾ ರಾಜಾ ಸಪರ್ಯನ್ ಸ್ತುತ್ಯಾ ಪೂಜಯನ್ ಮಾನುಷೋ ಹೋತಾ ನ ಮನುಷ್ಯಸ್ಯ ಯಜಮಾನಸ್ಯ ಸಂಬಂಧ್ಯೇತನ್ನಾಮಕ ಋತ್ವಿಗಿವ ವಿದಥೇ ಯಜ್ಞೇ ವಾಂ ಹಿನೋತಿ ಹವಿರಾದಿನಾ ಪ್ರೀಣಯತಿ । ತದಾ ಪೀಪಾಯೇತ್ಯಾಹ ॥

ಪ್ರತಿಪದಾರ್ಥ

ಮಿತ್ರಾವರುಣೌ—ಎಲೈ ಮಿತ್ರಾವರುಣರೇ, । ಯತ್—ಯಾವಾಗ । ಸಃ ರಾತಹವ್ಯಃ—ಪ್ರಸಿದ್ಧನಾದ ರಾತಹವ್ಯನೆಂಬ ದೊರೆಯು । ಸಪರ್ಯನ್—ಸ್ತುತಿಯಿಂದ ಪೂಜಿಸುತ್ತಾ । ಮಾನುಷಃ ಹೋತಾ ನ—ಮಾನವನಾದ ಯಜಮಾನನಿಗೆ ಸಂಬಂಧಿಯಾದ ಹೋತಾ ಎಂಬ ಋತ್ವಿಕ್ಕಿನಂತೆ । ವಿದಥೇ—ಯಜ್ಞದಲ್ಲಿ । ವಾಂ—ನಿಮ್ಮಿಬ್ಬರನ್ನೂ । ಹಿನೋತಿ—(ಹವಿರಾದಿಗಳನ್ನು ಅರ್ಪಿಸುವುದರಿಂದ) ಸಂತೋಷಗೊಳಿಸುತ್ತಾನೆಯೋ, (ಆಗ) । ಋತಾಯ—ಯಜ್ಞಕ್ಕಾಗಿ । ಹವಿರ್ದೇ—ಹವಿಸ್ಸನ್ನು ಅರ್ಪಿಸುವ । ಜನಾಯ—ಯಜಮಾನನಿಗೆ । ಧೇನುಃ—ಧೇನುವು । ಅದಿತಿಃ—ಪ್ರಭೂತವಾದ ಕ್ಷೀರವುಳ್ಳದ್ದಾಗಿ । ಪೀಪಾಯ—(ಆ ಕ್ಷೀರದಿಂದ) ತುಂಬಿಕೊಳ್ಳಲಿ ।

ಭಾವಾರ್ಥ

ಎಲೈ ಮಿತ್ರಾವರುಣರೇ, ಪ್ರಸಿದ್ಧನಾದ ರಾತಹವ್ಯನೆಂಬ ದೊರೆಯು ಸ್ತುತಿಯೊಡನೆ ನಿಮ್ಮನ್ನು ಪೂಜಿಸುತ್ತಾ ಋತ್ವಿಕ್ಕಾದ ಹೋತೃವಿನಂತೆ ಯಜ್ಞದಲ್ಲಿ ಹವಿರಾದಿಗಳನ್ನು ಅರ್ಪಿಸುವುದರಿಂದ ನಿಮ್ಮಿಬ್ಬರನ್ನೂ ಸಂತೋಷಗೊಳಿಸತಕ್ಕ ಕಾರ್ಯದಲ್ಲಿ ಅವನ ಸಹಾಯಕ್ಕಾಗಿರುವ ಧೇನುವು ಪ್ರಭೂತವಾದ ಕ್ಷೀರಗಳಿಂದ ತುಂಬಿಕೊಳ್ಳಲಿ.

## English Translation

Let the productive milch cow, Mitra and Varuna, furnish abundant nutriment to the pious man who presents you with oblations, as when Ratahavya, glorifying you, propitates you in the solemnity, like the ministrant priest of a man (who institutes the rite).

### ವಿಶೇಷವಿಷಯಗಳು

**ರಾತಹವ್ಯಃ**—ಸಾಧಾರಣವಾಗಿ **ರಾತಹವ್ಯಃ** ಎಂಬ ಪದವು ದಾನಾರ್ಥಕವಾದ ರೈಧಾತುವಿನಿಂದ ನಿಷ್ಪನ್ನವಾಗಿ ದಾನಮಾಡಲ್ಪಟ್ಟ ಹವಿಸ್ಸುಳ್ಳ ಎಂದು ಹವಿಸ್ಸನ್ನು ಅರ್ಪಿಸಿದ ಯಜಮಾನನಿಗಾಗಲಿ ಅಥವಾ ಅರ್ಪಿಸಲ್ಪಟ ಹವಿಸ್ಸುಳ್ಳ ದೇವತೆಗಾಗಲಿ ವಿಶೇಷಣವಾಗಿರುತ್ತದೆ. ಪ್ರಕೃತವಾದ ಋಕ್ಕಿನಲ್ಲಿ **ಏತನ್ನಾಮಾ ರಾಜಾ** ಈ ಹೆಸರಿನ ದೊರೆಯು ಎಂದರ್ಥಮಾಡಿದೆ. ಈತನ ವಿಷಯವನ್ನು ಸರಿಯಾಗಿ ತಿಳಿಯಲು ಸಾಕಾದಷ್ಟು ಆಧಾರಗಳಿಲ್ಲ. ರಾತಹವ್ಯನೆಂಬ ಋಷಿಯು ಐದನೇ ಮಂಡಲದ ೬೫ ಮತ್ತು ೬೬ನೇ ಸೂಕ್ತಗಳ ದ್ರಷ್ಟೃವೆಂದು ಹೇಳಿದೆ. **ರಾತಹವ್ಯಸ್ಯಾತ್ರೇಯಸ್ಯಾರ್ಷಂ ಮೈತ್ರಾವರುಣಂ ।** ಎಂದು ಭಾಷ್ಯಕಾರರು ಆತ್ರೇಯವಂಶದವನಾದ ರಾತಹವ್ಯನೆಂಬ ಋಷಿಯಿಂದ ರಚಿತವಾದದ್ದು ಎಂದು ಹೇಳಿದ್ದಾರೆ.

**ತಾ ವಾಮೇಷೇ ರಥಾನಾಮುರ್ವೀಂ ಗವ್ಯೂತಿಮೇಷಾಂ ।**
**ರಾತಹವ್ಯಸ್ಯ ಸುಷ್ಟುತಿಂ ದಧೃಕ್ ಸ್ತೋಮೈರ್ಮನಾಮಹೇ ॥**
(ಋ. ಸಂ. ೫-೬೬-೩)

ಎಂಬ ಋಕ್ಕಿನಲ್ಲಿ ಋಷಿಯು ತನ್ನ ಹೆಸರನ್ನು ನಿರ್ದೇಶಿಸಿ ತನ್ನ ಭಕ್ತಿಯನ್ನು ಪ್ರಕಾಶಪಡಿಸುತ್ತಾನೆ.

**ಕಸ್ಮಾ ಅದ್ಯ ಸುಜಾತಾಯ ರಾತಹವ್ಯಾಯ ಪ್ರ ಯಯುಃ । ಏನಾ ಯಾಮೇನ ಮರುತಃ ॥**
(ಋ. ಸಂ ೫-೫೩-೧೨)

ಇತ್ಯಾದಿ ಕಡೆಗಳಲ್ಲೆಲ್ಲಾ **ದತ್ತಹವಿಷ್ಕ**ನೆಂದೇ ಅರ್ಥಮಾಡಿದೆ.

**ವಿದಥೇ**—ವಿದಥಶಬ್ದದ ನಿರ್ವಚನವನ್ನೂ, ಈ ಪದಕ್ಕಿರುವ ಬೇರೆಬೇರೆ ಅರ್ಥಗಳನ್ನು ಸಹ ಇದೇ ಭಾಗದಲ್ಲಿ ೧-೧೪೩-೭ನೇ ಋಕ್ಕಿನ ವಿಶೇಷವಿಷಯಗಳಲ್ಲಿ ತಿಳಿಸಿದೆ. ( pp. 331—324 ). ವಿದಥೇ-ಯಜ್ಞೇ । ಯಜ್ಞದಲ್ಲಿ ಎಂದು ಇಲ್ಲಿ ಅರ್ಥಮಾಡಿದೆ.

**ಅದಿತಿಃ**—ನ್ಯೂನವಿಲ್ಲದ ಪೌಷ್ಕಲ್ಯವನ್ನು ಹೊಂದಿರುವುದು ಎಂದರ್ಥ. ಈ ಪದದ ನಿರ್ವಚನಾದಿಗಳನ್ನು ಹಿಂದೆ ತಿಳಿಸಿದೆ.

**ಪೀಪಾಯ**—**ಕ್ಷೀರೇಣ ಪುನಃಪುನಃ ಆಪ್ಯಾಯತಾಂ ।** ಕ್ಷೀರವನ್ನು ಪ್ರಭೂತವಾಗಿ ತುಂಬಿಕೊಳ್ಳುವುದರಿಂದ ಕ್ಷೀರದಿಂದಲೇ ನಿರ್ವಹಿಸಲ್ಪಡಬೇಕಾದ ಯಜ್ಞವನ್ನೂ, ಹವಿರ್ದಾನಕ್ಕಾಗಿ ಇದನ್ನೇ ನಂಬಿರುವ ಯಜಮಾನನನ್ನೂ ತೃಪ್ತಿಪಡಿಸಲಿ ಎಂದು ಪ್ರಾರ್ಥಿಸಿದೆ. ವೃದ್ಧಿ ಮತ್ತು ಅದರಿಂದುಂಟಾಗುವ ತೃಪ್ತಿ ಈ ಎರಡರ್ಥಗಳನ್ನೂ ಈ ಪದವು ಸೂಚಿಸುತ್ತದೆ.

ಪೀಪಾಯ ಸ ಶ್ರವಸಾ ಮರ್ತ್ಯೇಷು ಯೋ ಅಗ್ನಯೇ ದದಾಶ ವಿಪ್ರ ಉಕ್ಥೈಃ ।
ಚಿತ್ರಾಭಿಸ್ತಮೂತಿಭಿಶ್ಚಿತ್ರಶೋಚಿರ್ವ್ರಜಸ್ಯ ಸಾತಾ ಗೋಮತೋ ದಧಾತಿ ॥
(ಋ. ಸಂ. ೬-೧೦-೩)

ಇತ್ಯಾದಿ ಋಕ್ಕುಗಳಲ್ಲೆಲ್ಲಾ ಈ ಎರಡರ್ಥವೂ ಸೂಚಿತವಾಗಿರುವಂತೆ ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಧೇನುಗಳಲ್ಲಿ ಕ್ಷೀರದ ಪೌಷ್ಕಲ್ಯವೂ ಅದರಿಂದ ಯಜಮಾನಾದಿಗಳ ಹರ್ಷವೂ ಸೂಚಿತವಾಗುತ್ತದೆ.

ವ್ಯಾಕರಣಪ್ರಕ್ರಿಯಾ

**ಪೀಪಾಯ**—ಓಪ್ಯಾಯೀ ವೃದ್ಧೌ ಧಾತು. **ಛಂದಸಿ ಲುಙ್‌ಲಙ್‌ಲಿಟಃ** (ಪಾ. ಸೂ. ೩-೪-೬) ಎಂಬುದರಿಂದ ಲೋಡರ್ಥದಲ್ಲಿ ಲಿಟ್, ಪ್ರಥಮಪುರುಷಏಕವಚನದಲ್ಲಿ **ಪರಸ್ಮೈಪದಾನಾಂಣಲ**—ಎಂಬುದರಿಂದ ಣಲಾದೇಶ. **ಲಿಡ್ಯಙೋಶ್ಚ** (ಪಾ. ಸೂ ೬-೧-೨೯) ಎಂಬುದರಿಂದ ಧಾತುವಿಗೆ ಪೀಭಾವ. ದ್ವಿತ್ವ ಬಂದಾಗ **ಅಚೋಞ್ಣಿತಿ** ಎಂಬುದರಿಂದ ಈಕಾರಕ್ಕೆ ವೃದ್ಧಿ. ಅದಕ್ಕೆ ಅಯಾದೇಶ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಣಲ್ ಲಿತ್ತಾದುದರಿಂದ **ಲಿತಿ** (ಪಾ.ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ.

**ಅದಿತಿಃ**—ನ ದಿತಿಃ ಅದಿತಿಃ **ತತ್ಪುರುಷೇ ತುಲ್ಯಾರ್ಥ**—(ಪಾ. ಸೂ. ೬-೨-೨) ಎಂಬುದರಿಂದ ಅವ್ಯಯ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಹವಿರ್ದೇ**—ಹವಿಃ ದದಾತಿ ಇತಿ ಹವಿರ್ದಾಃ **ಆತೋ ಮನಿನ್‌ವನಿಪ್‌ಕ್ವನಿಪಶ್ಚ** (ಪಾ.ಸೂ. ೩-೨-೭೪) ಎಂಬುದರಿಂದ ಡುದಾಞ್ ದಾನೇ ಈ ಧಾತುವಿಗೆ ವಿಚ್ ಪ್ರತ್ಯಯ. ಆಕಾರಾಂತಶಬ್ದವಾಗುತ್ತದೆ. ಸಮಾಸದಲ್ಲಿ **ಗತಿಕಾರಕೋಪಪದಾತ್‌ಕೃತ್** ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. ಇದಕ್ಕೆ ಚತುರ್ಥೀ ಏಕವಚನ ಪರವಾದಾಗ ಭಸಂಜ್ಞಾ ಇರುವುದರಿಂದ **ಆತೋಧಾತೋಃ** (ಪಾ. ಸೂ. ೬-೪-೧೪೦) ಎಂಬುದರಿಂದ ಆಕಾರಕ್ಕೆ ಲೋಪ. ಉದಾತ್ತನಿವೃತ್ತಿಸ್ವರದಿಂದ ವಿಭಕ್ತಿಗೆ ಉದಾತ್ತಸ್ವರ ಉಳಿಯುತ್ತದೆ.

**ಹಿನೋತಿ**—ಹಿ ಗತೌ ವೃದ್ಧೌ ಚ ಧಾತು ಸ್ವಾದಿ. ಶ್ನುವಿಕರಣ. ಲಟ್ ಪ್ರಥಮಪುರುಷಏಕವಚನಾಂತ ರೂಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ವಿಕರಣಸ್ವರ ಉಳಿಯುತ್ತದೆ.

**ಸಪರ್ಯನ್**—ಸಪರ ಪೂಜಾಯಾಂ ಧಾತು. ಕಂಡ್ವಾದಿ. **ಕಂಡ್ವಾದಿಭ್ಯೋಯಕ್** (ಪಾ.ಸೂ. ೩-೧-೨೭) ಎಂಬುದರಿಂದ ಸ್ವಾರ್ಥದಲ್ಲಿ ಯಕ್ ಪ್ರತ್ಯಯ. ಲಟಿಗೆ ಶತ್ರಾದೇಶ. ಪ್ರಥಮಾಏಕವಚನಾಂತರೂಪ. ಯಕ್ ಸ್ವರ ಉಳಿಯುತ್ತದೆ.

**ರಾತಹವ್ಯಃ**—ರಾತಂ ಹವ್ಯಂ ಯೇನ ರಾತಹವ್ಯಃ **ಬಹುವ್ರೀಹೌ ಪ್ರಕೃತ್ಯಾಪೂರ್ವಪದಮ್** ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಮಾನುಷಃ**—ಮನೋಃ ಸಂಬಂಧೀ ಮಾನುಷಃ **ಮನೋರ್ಜಾತಾವಞ್ಯತೌಷುಕ್‌ಚ** ಎಂಬುದರಿಂದ ಅಞ್ ಪ್ರತ್ಯಯ. ತತ್ಸನ್ನಿಯೋಗದಿಂದ ಷುಕಾಗಮ. ಆದಿವೃದ್ಧಿ. ಞಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ॥ ೩ ॥

———:o:———

ಸಂಹಿತಾಪಾಠಃ

ಉತ ವಾಂ ವಿಕ್ಷು ಮದ್ಯಾಸ್ವಂಧೋ ಗಾವ ಆಪಶ್ಚ ಪೀಪಯಂತ ದೇವೀಃ ।
ಉತೋ ನೋ ಅಸ್ಯ ಪೂರ್ವ್ಯಃ ಪತಿರ್ದನ್ವೀತಂ ಪಾತಂ ಪಯಸ
ಉಸ್ರಿಯಾಯಾಃ ॥ ೪ ॥

ಪದಪಾಠ

ಉತ । ವಾಂ । ವಿಕ್ಷು । ಮದ್ಯಾಸು । ಅಂಧಃ । ಗಾವಃ । ಆಪಃ । ಚ । ಪೀಪಯಂತ । ದೇವೀಃ।
ಉತೋ ಇತಿ । ನಃ । ಅಸ್ಯ । ಪೂರ್ವ್ಯಃ । ಪತಿಃ । ದನ್ । ವೀತಂ । ಪಾತಂ । ಪಯಸಃ। ಉಸ್ರಿ-
ಯಾಯಾಃ ॥ ೪ ॥

। ಸಾಯಣಭಾಷ್ಯಂ ।

ಉತಾಪಿ ಚ ಹೇ ಮಿತ್ರಾವರುಣೌ ವಾಂ ಯುವಾಮಂಧೋಽದನೀಯಮನ್ನಂ ಪಯೋರೂಪಂ ಪುರೋಡಾಶಾದಿರೂಪಂ ವಾ ದೇವೀರ್ದ್ಯೋತನಶೀಲಾ ಗಾವ ಆಪಶ್ಚ ವ್ರೀಹ್ಯಾದಿಪ್ರವರ್ಧಕಾನ್ಯುದಕಾನಿ ಚ ಮದ್ಯಾಸು ಯುಷ್ಮಾಭಿರ್ಮದನೀಯಾಸು ವಿಕ್ಷು ಪ್ರಜಾಸು ಯಜಮಾನಲಕ್ಷಣಾಸು ತಾಸಾಮಭಿವೃದ್ಧ್ಯರ್ಥಂ ಪೀಪಯಂತ । ಅಪ್ಯಾಯಯಂತು । ಉತೋ ಅಪಿ ಚ ನೋಽಸ್ಮತ್ಸಂಬಂಧಿನೋಽಸ್ಯ ಯಜ್ಞಸ್ಯ ಪೂರ್ವ್ಯಃ ಪೂರ್ವಕಾಲೀನಃ ಪತಿಃ ಪಾಲಕೋಽಗ್ನಿರ್ದನ್ ದಾತಾ ಭವತ್ವಿತಿ ಶೇಷಃ। ಅಗ್ನೌ ಹೂಯಮಾನತ್ವಾತ್ಸರ್ವೇಷಾಮಪಿ ಹವಿಷಾಂ । ಯಸ್ಮಾದೇವಂ ತಸ್ಮಾದ್ಧೇ ಮಿತ್ರಾವರುಣೌ ವೀತಂ। ಭಕ್ಷಯತಂ ಪುರೋಡಾಶಾದಿಕಂ। ಉಸ್ರಿಯಾಯಾಃ -ಕ್ಷೀರಾದ್ಯುತ್ಸ್ರಾವಿಣ್ಯಾ ಗೋಃ ಪಯಸಃ ಪಯಃ ಪಾತಂ। ಯದ್ವಾ। ಘನೀಭೂತಂ ಪಯಸ್ಯಾಯಾ ವೀತಂ ಸ್ರವದ್ರೂಪಂ ಪಾತಂ ॥

ಪ್ರತಿಪದಾರ್ಥ

ಉತ—(ಎಲೈ ಮಿತ್ರಾವರುಣರೇ) ಅದೂ ಅಲ್ಲದೇ,। ದೇವೀಃ—ಪ್ರಕಾಶಮಾನಗಳಾದ। ಗಾವಃ—ಗೋವುಗಳೂ,। ಆಪಶ್ಚ—ಉದಕಗಳೂ ಸಹ। ಮದ್ಯಾಸು—(ನಿಮ್ಮನ್ನು) ಹರ್ಷಗೊಳಿಸತಕ್ಕ। ವಿಕ್ಷು—ಯಜಮಾನರೂಪರಾದ ಪ್ರಜೆಗಳ ಅಭಿವೃದ್ಧಿಗಾಗಿ। ಅಂಧಃ—ಭಕ್ಷಿಸಲು ಯೋಗ್ಯವಾದ ಅನ್ನದಿಂದ। ವಾಂ—ನಿಮ್ಮಿಬ್ಬರನ್ನೂ । ಪೀಪಯಂತ—ತುಂಬಿಸಲಿ । ಉತೋ—ಅದೂ ಅಲ್ಲದೆ । ನಃ—ನಮ್ಮ। ಅಸ್ಯ—ಈ ಯಜ್ಞದ। ಪೂರ್ವ್ಯಃ—ಪ್ರಾಚೀನನಾದವನೂ । ಪತಿಃ—ಪಾಲಕನೂ ಆದ ಅಗ್ನಿಯು। ದನ್—(ಹವಿಸ್ಸನ್ನು) ದಾನಮಾಡುವವನಾಗಲಿ। ವೀತಂ—(ಪುರೋಡಾಶಾದಿಗಳನ್ನು) ಭಕ್ಷಿಸಲಿ । ಉಸ್ರಿಯಾಯಾಃ—ಕ್ಷೀರಾದಿಗಳನ್ನು ಸುರಿಸುವ ಗೋವಿನ। ಪಯಸಃ—ಕ್ಷೀರವನ್ನು । ಪಾತಂ—ಕುಡಿಯಲಿ.

ಭಾವಾರ್ಥ

ಎಲೈ ಮಿತ್ರಾವರುಣರೇ, ಪ್ರಕಾಶಮಾನಗಳಾದ ಗೋವುಗಳೂ, ಉದಕಗಳೂ ಸಹ ನಿಮ್ಮನ್ನು ಹರ್ಷಗೊಳಿಸ ತಕ್ಕ ಯಜಮಾನರೂಪರಾದ ಪ್ರಜೆಗಳ ಅಭಿವೃದ್ಧಿಗಾಗಿ ಭಕ್ಷಿಸಲು ಯೋಗ್ಯವಾದ ಅನ್ನದಿಂದ ನಿಮ್ಮಿಬ್ಬರನ್ನೂ ತುಂಬಿಸಲಿ. ಅಲ್ಲದೆ, ನಮ್ಮ ಈ ಯಜ್ಞದ ಪ್ರಾಚೀನನಾದವನೂ ಪಾಲಕನೂ ಆದ ಅಗ್ನಿಯು ಹವಿಸ್ಸನ್ನು ದಾನ ಮಾಡುವವನಾಗಲಿ ; ಪುರೋಡಾಶಾದಿಗಳನ್ನು ಭಕ್ಷಿಸಲಿ. ಮತ್ತು ಗೋವಿನ ಕ್ಷೀರವನ್ನು ಕುಡಿಯಲಿ.

## English Translation

May the devine cows, and the waters, supply you with (sacrifical) food, for the prosperty of the people whom you favour ; or may (Agni) the former protector of this (our patron), be the donor (of the oblation): eat (of the butter and curds), drink of the milk of the cows.

॥ ವಿಶೇಷವಿಷಯಗಳು ॥

**ದೇವೀಃ— ದ್ಯೋತನಶೀಲಾಃ ।** ಪ್ರಕಾಶಮಾನಗಳಾದ ಎಂದು ಅರ್ಥಮಾಡಿದೆ. **ದೇವೋ ದಾನಾದ್ವಾ, ದ್ಯೋತನಾದ್ವಾ, ದ್ಯುಸ್ಥಾನೋ ಭವತೀತಿ ವಾ ।** ದಾನಾರ್ಥಕವಾಗಿರುವುದರಿಂದಾಗಲಿ, ಪ್ರಕಾಶ ಪಡಿಸು ಎಂಬರ್ಥವನ್ನು ಕೊಡುವುದರಿಂದಾಗಲಿ, ತೇಜೋಯುತನಾಗಿರುವುದು ಎಂದಾಗಿರುವುದರಿಂದಾಗಲಿ ಅಥವಾ ದ್ಯುಲೋಕವಾಸಿಯಾಗಿರುವುದರಿಂದಾಗಲಿ **ದೇವ** ಎಂದಾಗುತ್ತದೆಂದು ಈ ಶಬ್ದಕ್ಕೆ ನಿರುಕ್ತಕಾರರ ನಿರ್ವಚನವಿದೆ. (ನಿ. ೭-೧೫) ಅಗ್ನ್ಯಾದಿ ದೇವತೆಗಳಿಗೆ ವಿಶೇಷಣವಾದರೆ ಈ ಎಲ್ಲಾ ಅರ್ಥಗಳೂ ಹೊಂದಿಕೊಳ್ಳುತ್ತವೆ. ಪ್ರಭೂತವಾಗಿ ಕ್ಷೀರವನ್ನು ಕೊಡುವುದರಿಂದ ದಾನಾರ್ಥಕವಾಗಲಿ, ಅಥವಾ ದ್ಯೋತನಾರ್ಥವಾಗಲಿ ಆಗುತ್ತದೆ. ಸಾಯಣರು **ಪ್ರಕಾಶಮಾನವಾದ** ಎಂದರ್ಥಮಾಡಿದ್ದಾರೆ.

**ವಿಕ್ಷು—ಪ್ರಜಾಸು । ಯಜಮಾನಲಕ್ಷಣಾಸು ।** ಯಜ್ಞಕರ್ತರಾದ ಮಾನವರ (ಅಭಿವೃದ್ಧಿಗಾಗಿ). ಈ ಪದವು ನಿರುಕ್ತದಲ್ಲಿ ಮನುಷ್ಯನಾಮಗಳಲ್ಲಿ ಪಠಿತವಾಗಿದೆ. (೩-೭).

**ಪೀಪಯಂತ—ಆಪ್ಯಾಯಯಂತು ।** ಮೊದಲು ಪ್ರಭೂತವಾಗಿ ಅನ್ನವು ವೃದ್ಧಿಯಾಗಿ ಅನಂತರ ಅದರಿಂದ ತೃಪ್ತಿಯೂ ಹರ್ಷವೂ ಲಭಿಸಲಿ ಎಂದು ಆಶಿಸಿದೆ. ಈ ಪದಕ್ಕೆ **ವೃದ್ಧಿ, ಹರ್ಷ** ಎಂಬ ಎರಡರ್ಥಗಳೂ ಉಂಟೆಂದು ಹಿಂದಿನ ಋಕ್ಕಿನ ವಿಶೇಷವಿಷಯಗಳಲ್ಲಿ ತಿಳಿಸಿದೆ.

**ಅಂಧಃ—ಅಂಧಃ, ವಾಜಃ** ಇತ್ಯಾದ್ಯನ್ನನಾಮಗಳಲ್ಲಿ ಈ ಪದವನ್ನು ಪಠಿಸಿದೆ. (ನಿ. ೨-೭) **ಅಂಧ ಇತ್ಯನ್ನನಾಮಾಧ್ಯಾನೀಯಂ ಭವತಿ । ಅಧ್ಯಾನೀಯಂ ಪ್ರಾರ್ಥನೀಯಂ ।** ಅತ್ಯಂತವಾದ ಆವಶ್ಯಕತೆಯುಳ್ಳುದರಿಂದಲೂ ಸಹ ಅನ್ನಕ್ಕೆ **ಅಂಧಃ** ಎಂಬ ಹೆಸರು ಎಂದು ಈ ನಿರ್ವಚನದ ಸಮರ್ಥನೆಗೆ ನಿರುಕ್ತಕಾರರು (ನಿ. ೫-೧).

**ಅಧ್ವರ್ಯವೋ ಭರತೇಂದ್ರಾಯ ಸೋಮಮಾಮತ್ರೇಭಿಃ ಸಿಂಚತಾ ಮದ್ಯಮಂಧಃ ।**
**ಕಾಮೀ ಹಿ ವೀರಃ ಸದಮಸ್ಯ ಪೀತಿಂ ಜುಹೋತ ವೃಷ್ಣೇ ತದಿದೇಷ ವಷ್ಟಿ ॥**

(ಋ. ಸಂ ೨-೧೪-೧)

ಎಂಬ ಋಕ್ಕನ್ನುದಹರಿಸಿ ಅಲ್ಲಿ **ಅಥ** ಶಬ್ದದ ಅರ್ಥವನ್ನು ಮೇಲ್ಕಂಡಂತೆ ವಿವರಿಸಿದ್ದಾರೆ.

**ತಮೋಽಪ್ಯಂಧ ಉಚ್ಯತೇ ನಾಸ್ಮಿನ್ ಧ್ಯಾನಂ ಭವತಿ** । ತಮಸ್ಸಿನಲ್ಲಿ ಏಕಾಗ್ರಚಿತ್ತನಾಗಿರಲು ಸಾಧ್ಯವಿಲ್ಲವಾದುದರಿಂದ **ತಮಸ್ಸಿಗೂ** ಅಂಧವೆಂಬ ಹೆಸರು ಎಂದು ವಿವರಿಸಿ,

**ಸ್ತ್ರಿಯಃ ಸತೀಸ್ತಾঁ ಉ ಮೇ ಪುಂಸ ಆಹುಃ ಪಶ್ಯದಕ್ಷಣ್ವಾನ್ನ ವಿ ಚೇತದಂಧಃ ।**
**ಕವಿರ್ಯಃ ಪುತ್ರಃ ಸ ಈಮಾ ಚಿಕೇತ ಯಸ್ತಾ ವಿಜಾನಾತ್ಸ ಪಿತುಷ್ಪಿತಾ ಸತ್ ॥**
(ಋ. ಸಂ. ೧-೧೬೪-೧೬)

ಎಂಬ ಋಕ್ಕನ್ನುದಹರಿಸಿ ಅಲ್ಲಿ **ಅಂಧ** ಶಬ್ದಕ್ಕೆ ತಮಸ್ಸೆಂದರ್ಥವೆಂದು ತೋರಿಸಿದ್ದಾರೆ. ಪ್ರಕೃತವಾದ ಋಕ್ಕಿನಲ್ಲಿ **ಪಯೋರೂಪಂ ಪುರೋಡಾಶಾದಿ ರೂಪಂ ವಾ** । ಪಯೋರೂಪವಾದ ಅನ್ನವೆಂದಾಗಲಿ ಪುರೋಡಾಶಾದಿರೂಪವಾದ ಅನ್ನವೆಂದಾಗಲಿ ಅರ್ಥವೆಂದು ಸಾಯಣರು ವಿವರಿಸಿದ್ದಾರೆ.

**ಪೂರ್ವ್ಯಃ** – ಈ ಪದವು **ಪುರಾಣ**ನಾಮಗಳಲ್ಲಿ ಪಠಿತವಾಗಿದೆ. (ನಿ. ೩-೧೯).
**ಲೋಕಾದಿಮಗ್ನಿಂ ತಮುವಾಚ ತಸ್ಮೈ ಯಾ ಇಷ್ಟಕಾ ಯಾವತೀರ್ವಾ ಯಥಾ ವಾ** ।
(ಕಠೋಪನಿಷತ್. ೧-೧೫)

ಇತ್ಯಾದಿ ಶ್ರುತಿವಾಕ್ಯಗಳು **ಅಗ್ನಿಯನ್ನು** ಸಮಸ್ತಲೋಕಕ್ಕೂ ಆದಿಭೂತನೆಂದು ಸ್ತುತಿಸುವುವು. ಈ ವಾಕ್ಯಕ್ಕೆ ಶಂಕರಾಚಾರ್ಯರು **ಲೋಕಾನಾಮಾದಿಂ ಪ್ರಥಮಶರೀರತ್ವಾದಗ್ನಿಂ** ಸಕಲಲೋಕಕ್ಕೂ ಪ್ರಥಮಶರೀರವಾದ ಅಗ್ನಿಯನ್ನು ಎಂದರ್ಥಮಾಡಿದ್ದಾರೆ. ಅಗ್ನಿಯ ಈ ಮಹತ್ತ್ವವೇ ಪ್ರಕೃತವಾದ ಋಕ್ಕಿನಲ್ಲಿಯೂ ಹೇಳಿದೆ.

**ಉಸ್ರಿಯಾಯಾಃ**—**ಅಘ್ನ್ಯಾ**, **ಉಸ್ರಾ**, **ಉಸ್ರಿಯಾ** ಇತ್ಯಾದಿ **ಗೋ** ನಾಮಗಳಲ್ಲಿ ಈ ಪದವು ಪಠಿತವಾಗಿದೆ. (ನಿ. ೨-೧೧) **ಉಸ್ರಿಯೇತಿ ಗೋನಾಮ** । **ಉಸ್ರಾವಿಣೋಽಸ್ಯಾಂ ಭೋಗಾಃ** । ಸುಖಸಾಧನವಾದ ಕ್ಷೀರವು ಹರಿಯುವುದರಿಂದ **ಉಸ್ರಿಯಾಃ** ಎಂಬ ಹೆಸರು ಪ್ರಸಿದ್ಧವಾಗಿದೆಯೆಂದು ನಿರುಕ್ತಕಾರರು ಇದೇ ಋಕ್ಕನ್ನುದಹರಿಸಿ ಈ ಪದದ ಅರ್ಥವನ್ನು ವಿವರಿಸಿದ್ದಾರೆ. (ನಿ. ೪-೧೯).

ವ್ಯಾಕರಣಪ್ರಕ್ರಿಯಾ

**ವಿಕ್ಷು**—ವಿಶ್‌ಶಬ್ದ. ಸಪ್ತಮೀ ಬಹುವಚನಾಂತರೂಪ. **ಸಾವೇಕಾಚಸ್ತೃತೀಯಾದಿಃ** ( ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಮದ್ಯಾಸು**—ಮದ ತೃಪ್ತಿಯೋಗೇ. ಧಾತು. **ಗದಮದಚರಯಮಶ್ಚಾನುಪಸರ್ಗೇ** ( ಪಾ. ಸೂ. ೩-೧-೧೦೦) ಎಂಬುದರಿಂದ ಯತ್ ಪ್ರತ್ಯಯ. **ಯತೋಽನಾವಃ** (ಪಾ. ಸೂ. ೬-೧-೨೧೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಸ್ತ್ರೀತ್ವವಿವಕ್ಷಾಮಾಡಿದಾಗ **ಟಾಪ್** ಬರುತ್ತದೆ.

**ಪೀಪಯಂತ**—ಓಪ್ಯಾಯೀ ವೃದ್ಧೌ. ಧಾತು. ಪ್ರಯೋಜಕವ್ಯಾಪಾರ ತೋರುವುದರಿಂದ **ಹೇತುಮತಿ ಚ** (ಪಾ. ಸೂ. ೩-೧-೨೬) ಎಂಬುದರಿಂದ ಣಿಚ್. ಣಿಚ್ ಪರವಾದಾಗ ಛಾಂದಸವಾಗಿ ಪೀಭಾವ. **ಛಂದಸಿ ಲುಙ್‌ಲಙ್‌ಲಿಟಃ** ( ಪಾ. ಸೂ. ೩-೪-೬ ) ಎಂಬುದರಿಂದ ಲೋಡರ್ಥದಲ್ಲಿ ಣಿಜಂತದಮೇಲೆ ಲುಙ್. ಪ್ರಥಮಪುರುಷ

ಬಹುವಚನದಲ್ಲಿ ಝಿಪ್ರತ್ಯಯಕ್ಕೆ ಅಂತಾದೇಶ. ಚ್ಲಿಗೆ **ಣಿಶ್ರಿದ್ರುಸ್ರು**—ಎಂಬುದರಿಂದ ಚಙ್. ಚಙ್ ನಿಮಿತ್ತವಾಗಿ ಧಾತುವಿಗೆ ದ್ವಿತ್ವಾದಿ. **ಬಹುಲಂ ಛಂದಸ್ಯಮಾಙ್ಯೋಗೇಽಪಿ** ಎಂಬುದರಿಂದ ಅಡಾಗಮ ಬರುವುದಿಲ್ಲ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ದೇವೀಃ**- ಇದಕ್ಕೆ ಜಸ್ ಪರವಾದಾಗ **ಸುಪಾಂ ಸುಲುಕ್** ಎಂಬುದರಿಂದ ಪೂರ್ವಸವರ್ಣದೀರ್ಘ ಬರುತ್ತದೆ.

**ಪೂರ್ವ್ಯಃ**—ಪೂರ್ವೇ ಭವಃ ಪೂರ್ವ್ಯಃ **ಪೂರ್ವೈಃ ಕೃತಮಿನಯೌಚ** (ಪಾ. ಸೂ. ೪-೪-೧೩೩) ಎಂಬುದರಿಂದ ಯ ಪ್ರತ್ಯಯ. **ಯಸ್ಯೇತಿ ಚ** ಎಂಬುದರಿಂದ ಅಕಾರ ಲೋಪ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ದಸ್**—ಡುದಾಞ್ ದಾನೇ ಧಾತು. ಇದಕ್ಕೆ ಲಟ್ ಬಂದಾಗ ಅದಕ್ಕೆ ಥಸ್ಸಾದೇಶ. **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ (ಶ್ಲು) ಲುಕ್. ಪ್ರತ್ಯಯಕ್ಕೆ ಙಿತ್ವವಿರುವುದರಿಂದ **ಆತೋಲೋಪಇಟಿಚ** (ಪಾ. ಸೂ. ೬-೪-೬೪) ಎಂಬುದರಿಂದ ಅಕಾರ ಲೋಪ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

**ವೀತಮ್**—ವೀ ಗತ್ಯಾದಿಷು ಧಾತು. ಅದಾದಿ. ಇಲ್ಲಿ ಭಕ್ಷಣಾರ್ಥದಲ್ಲಿ ಪ್ರಯುಕ್ತವಾಗಿದೆ. ಲೋಟ್ ಮಧ್ಯಮಪುರುಷದ್ವಿವಚನದಲ್ಲಿ ವೀತಮ್ ಎಂದು ರೂಪವಾಗುತ್ತದೆ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಪಾತಮ್**—ಪಾ ಪಾನೇ ಧಾತು. ಲೋಟ್ ಮಧ್ಯಮಪುರುಷದ್ವಿವಚನದಲ್ಲಿ ತಮಾದೇಶ. **ಬಹುಲಂ ಛಂದಸಿ** ಎಂಬುದರಿಂದ ಶಪಿಗೆ ಲುಕ್. ಶಪ್ ಪರವಾಗುವುದರಿಂದ ಪಿಬಾದೇಶಬರುವುದಿಲ್ಲ. ತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಹಿಂದಿನಂತೆ ಪ್ರತ್ಯಯಸ್ವರದಿಂದ ಅಂತೋದಾತ್ತಸ್ವರ ಬರುತ್ತದೆ.

**ಉಸ್ರಿಯಾಯಾಃ**—ವಸಂತೀತಿ ಉಸ್ರಿಯಾಃ ವಸ ನಿವಾಸೇ. ಇದಕ್ಕೆ ಕರ್ತರಿಯಲ್ಲಿ ರಿಯಕ್ ಪ್ರತ್ಯಯ. ಛಾಂದಸವಾಗಿ ಷತ್ವ ಬರುವುದಿಲ್ಲ. ಕಿತ್ತಾದುದರಿಂದ ಸಂಪ್ರಸಾರಣಂ ಪೂರ್ವರೂಪ. ಪ್ರತ್ಯಯಸ್ವರದಿಂದ ಇಕಾರ ಉದಾತ್ತವಾಗುತ್ತದೆ. ಷಷ್ಠೀ ಏಕವಚನಾಂತರೂಪ ॥ ೪ ॥

ಇಲ್ಲಿಗೆ ೧೫೩ನೇ ಸೂಕ್ತ ಮುಗಿದುದು.

———:o:———

# ನೂರ ಐವತ್ತನಾಲ್ಕನೆಯ ಸೂಕ್ತವು

---

**ವಿಷ್ಣೋರ್ನು ಕಮಿತಿ ಷಡೃಚಂ ಪಂಚದಶಂ ಸೂಕ್ತಂ ದೈರ್ಘತಮಸಂ ತ್ರೈಷ್ಟುಭಂ ವೈಷ್ಣವಂ । ಅತ್ರಾನುಕ್ರಮಣಿಕಾ । ವಿಷ್ಣೋಃ ಷಡ್ವೈಷ್ಣವಂ ಹೀತಿ ॥ ಅಭಿಪ್ಲವಷಡಹೇಷೂಕ್ಥ್ಯೇಷು ತೃತೀಯಸವನೇ ಸ್ತೋಮವೃದ್ಧಾವಚ್ಛಾವಾಕಸ್ಯ ಸ್ತೋಮಾತಿಶಂಸನಾರ್ಥಮಿದಮಾದಿಸೂಕ್ತದ್ವಯಂ ವಿನಿಯುಕ್ತಂ । ಸ್ತೋಮೇ ವರ್ಧಮಾನ ಇತಿ ಖಂಡೇ ಸೂತ್ರಿತಂ । ವಿಷ್ಣೋರ್ನು ಕಮಿತಿ ಸೂಕ್ತೇ ಪರೋ ಮಾತ್ರಯೇತ್ಯಚ್ಛಾವಾಕಃ । ಆ. ೭-೯ । ಇತಿ ॥ ತಥಾ ತೃತೀಯಸವನೇ ಸೋಮಾತಿರೇಕ ಉತ್ತರೋತ್ತರಸಂಸ್ಥೋಪಗಂತವ್ಯಾ ಅತಿರಾತ್ರಾತ್ ತತೋಽಪ್ಯತಿರಿಕ್ತೇ ತದರ್ಥಮೇವ ಶಸ್ತ್ರಮುಪಜನಯಿತವ್ಯಂ । ತತ್ರೈತದೇವ ಸೂಕ್ತಂ ಸೋಮಾತಿರೇಕ ಇತಿ ಖಂಡೇ ಸೂತ್ರಿತಂ । ಮಹಾಁ ಇಂದ್ರೋ ನೃವದ್ವಿಷ್ಣೋರ್ನು ಕಂ । ಆ. ೬-೭ । ಇತಿ ॥ ಆಗ್ನಿಮಾರುತಶಸ್ತ್ರ ಆದ್ಯಾ ವಿನಿಯುಕ್ತಾ । ಅಥ ಯಥೇತಮಿತಿ ಖಂಡೇ ಸೂತ್ರಿತಂ । ವಿಷ್ಣೋರ್ನು ಕಂ ವೀರ್ಯಾಣಿ ಪ್ರ ವೋಚಂ ತಂತುಂ ತನ್ವನ್ರಜಸೋ ಭಾನುಮನ್ವಿಹಿ । ಆ. ೫-೨೦ । ಇತಿ ॥**

ಅನುವಾದವು—**ವಿಷ್ಣೋರ್ನುಕಂ** ಎಂಬ ಈ ಸೂಕ್ತವು ಇಪ್ಪತ್ತೊಂದನೆಯ ಅನುವಾಕದಲ್ಲಿ ಹದಿನೈದನೆಯ ಸೂಕ್ತವು. ಇದರಲ್ಲಿ ಆರು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಉಚಥ್ಯಪುತ್ರನಾದ ದೀರ್ಘತಮಸ್ಸೆಂಬುವನು ಋಷಿಯು. ವಿಷ್ಣುವು ದೇವತೆಯು. ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ–**ವಿಷ್ಣೋಃ ಷಡ್ವೈಷ್ಣವಂ ಹೀತಿ** ಎಂದು ಹೇಳಿರುವುದು. ಅಭಿಪ್ಲವಷಡಹವೆಂಬ ಯಾಗದಲ್ಲಿಯೂ ಉಕ್ಥ್ಯಯಾಗದಲ್ಲಿಯೂ ತೃತೀಯಸವನದಲ್ಲಿ ಸ್ತೋಮವೃದ್ಧಿಗಾಗಿ ಋಕ್ಕುಗನ್ನು ಪಠಿಸುವಾಗ ಅಚ್ಛಾವಾಕನೆಂಬ ಋತ್ವಿಜನು ಸ್ತೋಮಾತಿಶಂಸನಾರ್ಥವಾಗಿ ಈ ಸೂಕ್ತವನ್ನೂ ಮುಂದಿನ ಸೂಕ್ತವನ್ನೂ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಸ್ತೋಮೇ ವರ್ಧಮಾನೇ** ಎಂಬ ಖಂಡದ **ವಿಷ್ಣೋರ್ನು ಕಮಿತಿ ಸೂಕ್ತೇ ಪರೋ ಮಾತ್ರಯೇತ್ಯಚ್ಛಾವಾಕಃ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೭-೯) ಮತ್ತು ತೃತೀಯಸವನಕಾಲದಲ್ಲಿ ಸೋಮಾತಿರೇಕವೆಂಬ ಕರ್ಮದಲ್ಲಿ ಮುಂದೆ ನಡೆಯಬೇಕಾಗಿರುವ ಅತಿರಾತ್ರಸಂಬಂಧವಾದ ಶಸ್ತ್ರಮಂತ್ರಪಠನದಲ್ಲಿಯೂ ಈ ಸೂಕ್ತದ ವಿನಿಯೋಗವಿರುವುದೆಂದು, ಆಶ್ವಲಾಯನಶ್ರೌತಸೂತ್ರದ–**ತತ್ರೈತದೇವ ಸೂಕ್ತಂ ಸೋಮಾತಿರೇಕೆ** ಎಂಬ ಖಂಡದ **ಮಹಾಁ ಇಂದ್ರೋ ನೃವದ್ವಿಷ್ಣೋರ್ನು ಕಂ** ಎಂಬ ಸೂತ್ರದಿಂದ ನಿರ್ದಿಷ್ಟವಾಗಿರುವುದು. ಮತ್ತು ಆಗ್ನಿಮಾರುತಶಸ್ತ್ರಮಂತ್ರಗಳಲ್ಲಿ ಈ ಸೂಕ್ತದ ಮೊದಲನೆಯ ಋಕ್ಕಿನ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ–**ಅಥ ಯಥೇತಂ** ಎಂಬ ಖಂಡದ **ವಿಷ್ಣೋರ್ನುಕಂ ವೀರ್ಯಾಣಿ ಪ್ರ ವೋಚಂ ತಂತುಂ ತನ್ವನ್ರಜಸೋ ಭಾನುಮನ್ವಿಹಿ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೫-೨೦).



॥ ಓಂ ॥

## ಸೂಕ್ತ—೧೫೪

॥ ಮಂಡಲ—೧ ॥ ಅನುವಾಕ—೨೧ ॥ ಸೂಕ್ತ—೧೫೪ ॥

॥ ಅಷ್ಟಕ— ೨ ॥ ಅಧ್ಯಾಯ— ೨ ॥ ವರ್ಗ— ೨೪ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ-೬ ॥

॥ ಋಷಿಃ—ದೀರ್ಘತಮಾ ಔಚಥ್ಯಃ ॥

॥ ದೇವತಾ—ವಿಷ್ಣುಃ ॥

॥ ಛಂದಃ—ತ್ರಿಷ್ಟುಪ್ ॥

ಸಂಹಿತಾಪಾಠಃ

ವಿಷ್ಣೋರ್ನು ಕಂ ವೀರ್ಯಾಣಿ ಪ್ರ ವೋಚಂ ಯಃ ಪಾರ್ಥಿವಾನಿ
ವಿಮಮೇ ರಜಾಂಸಿ ।
ಯೋ ಅಸ್ಕಭಾಯದುತ್ತರಂ ಸಧಸ್ಥಂ ವಿಚಕ್ರಮಾಣಸ್ತ್ರೇಧೋರುಗಾಯಃ ।
॥ ೧ ॥

ಪದಪಾಠಃ

ವಿಷ್ಣೋಃ । ನು । ಕಂ । ವೀರ್ಯಾಣಿ । ಪ್ರ । ವೋಚಂ । ಯಃ । ಪಾರ್ಥಿವಾನಿ । ವಿಽಮಮೇ । ರಜಾಂಸಿ ।
ಯಃ । ಅಸ್ಕಭಾಯತ್ । ಉತ್ಽತರಂ । ಸಧಽಸ್ಥಂ । ವಿಽಚಕ್ರಮಾಣಃ । ತ್ರೇಧಾ । ಉರುಽಗಾಯಃ ॥ ೧ ॥

ಸಾಯಣಭಾಷ್ಯಂ

ಹೇ ನರಾಃ ವಿಷ್ಣೋರ್ವ್ಯಾಪನಶೀಲಸ್ಯ ದೇವಸ್ಯ ವೀರ್ಯಾಣಿ ವೀರಕರ್ಮಾಣಿ ನು ಕಮತಿಶೀಘ್ರಂ ಪ್ರ ವೋಚಂ । ಪ್ರಬ್ರವೀಮಿ । ಅತ್ರ ಯದ್ಯಪಿ ನು ಕಮಿತಿ ಪದದ್ವಯಂ ತಥಾಪಿ ಯಾಸ್ಕೇನ ನವೋತ್ತರಾಣಿ ಪದಾನಿ । ನೈ. ೩-೧೨ । ಇತ್ಯುಕ್ತತ್ವಾತ್ । ಶಾಖಾಂತರ ಏಕತ್ವೇನ ಪಾಠಾಚ್ಚ ನು ಇತ್ಯೇತಸ್ಮಿನ್ನೇವಾರ್ಥೇ ನು ಕಮಿತಿ ಪದದ್ವಯಂ । ಕಾನಿ ತಾನೀತಿ ತತ್ರಾಹ । ಯೋ ವಿಷ್ಣುಃ ಪಾರ್ಥಿವಾನಿ ಪೃಥಿವೀಸಂಬಂಧೀನಿ

ರಜಾಂಸಿ ರಂಜನಾತ್ಮಕಾನಿ ಕ್ಷಿತ್ಯಾದಿಲೋಕತ್ರಯಾಭಿಮಾನೀನ್ಯಗ್ನಿವಾಯ್ವಾದಿತ್ಯರೂಪಾಣಿ ರಜಾಂಸಿ ವಿಮಮೇ ವಿಶೇಷೇಣ ನಿರ್ಮಮೇ । ಅತ್ರ ತ್ರಯೋ ಲೋಕಾ ಅಪಿ ಪೃಥಿವೀಶಬ್ದವಾಚ್ಯಾಃ । ತಥಾ ಚ ಮಂತ್ರಾಂತರಂ । ಯದಿಂದ್ರಾಗ್ನೀ ಅವಮಸ್ಯಾಂ ಪೃಥಿವ್ಯಾಂ ಮಧ್ಯಮಸ್ಯಾಂ ಪರಮಸ್ಯಾ ಮುತ ಸ್ಥಃ । ಋ. ೧-೧೦೮-೯ । ಇತಿ । ತೈತ್ತಿರೀಯೇಽಪಿ । ಯೋಽಸ್ಯಾಂ ಪೃಥಿವ್ಯಾಮಸ್ಯಾಯುಷೇತ್ಯುಪಕ್ರಮ್ಯ ಯೋ ದ್ವಿತೀಯಸ್ಯಾಂ ತೃತೀಯಸ್ಯಾಂ ಪೃಥಿವ್ಯಾಮಿತಿ । ತೈ. ಸಂ. ೧-೨-೧೨-೧ । ತಸ್ಮಾಲ್ಲೋಕತ್ರಯಸ್ಯ ಪೃಥಿವೀಶಬ್ದವಾಚ್ಯತ್ವಂ । ಕಿಂಚ ಯಶ್ಚ ವಿಷ್ಣುರುತ್ತರಮುದ್ಗತತರಮತಿವಿಸ್ತೀರ್ಣಂ ಸಧಸ್ಥಂ ಸಹ-ಸ್ಥಾನಂ ಲೋಕತ್ರಯಾಶ್ರಯಭೂತಮಂತರಿಕ್ಷಮಸ್ಕಭಾಯತ್ ತೇಷಾಮಾಧಾರತ್ವೇನ ಸ್ತಂಭಿತವಾನ್ । ನಿರ್ಮಿತವಾನಿತ್ಯರ್ಥಃ । ಅನೇನಾಂತರಿಕ್ಷಾಶ್ರಿತಂ ಲೋಕತ್ರಯಮಪಿ ಸೃಷ್ಟವಾನಿತ್ಯುಕ್ತಂ ಭವತಿ । ಯದ್ವಾ । ಯೋ ವಿಷ್ಣುಃ ಪಾರ್ಥಿವಾನಿ ಪೃಥಿವೀಸಂಬಂಧೀನಿ ರಜಾಂಸಿ ಪೃಥಿವ್ಯಾ ಅಧಸ್ತನಸಪ್ತಲೋಕಾನ್ವಿಮಮೇ ವಿವಿಧಂ ನಿರ್ಮಿತವಾನ್ । ರಜಃಶಬ್ದೋ ಲೋಕವಾಚೀ ಲೋಕಾ ರಜಾಂಸ್ಯುಚ್ಯಂತ ಇತಿ ಯಾಸ್ಕೇ-ನೋಕ್ತತ್ವಾತ್ । ಕಿಂಚ । ಯಶ್ಚೋತ್ತರಮುದ್ಗತತರಮುತ್ತರಭಾವಿನಂ ಸಧಸ್ಥಂ ಸಹಸ್ಥಾನಂ ಪುಣ್ಯಕೃತಾಂ ಸಹನಿವಾಸಯೋಗ್ಯಂ ಭೂರಾದಿಲೋಕಸಪ್ತಕಮಸ್ಕಭಾಯತ್ ಸ್ಕಂಭಿತವಾನ್ । ಸೃಷ್ಟವಾನಿತ್ಯರ್ಥಃ ॥ ಸ್ಕಂಭೇಃ ಸ್ತಂಭುಸ್ತುಂಭ್ವಿತಿ ವಿಹಿತಸ್ಯ ಶ್ನಃ ಛಂದಸಿ ಶಾಯಜಪೀತಿ ವ್ಯತ್ಯಯೇನ ಶಾಯಜಾದೇಶಃ ॥ ಅಥವಾ ಪಾರ್ಥಿವಾನಿ ಪೃಥಿವೀನಿಮಿತ್ತಕಾನಿ ರಜಾಂಸಿ ಲೋಕಾನ್ ವಿಮಮೇ । ಭೂರಾದಿಲೋಕತ್ರಯ-ಮಿತ್ಯರ್ಥಃ । ಭೂಮ್ಯಾಮುಪಾರ್ಜಿತಕರ್ಮಭೋಗಾರ್ಥತ್ವಾದಿತರಲೋಕಾನಾಂ ತತ್ಕಾರಣತ್ವಂ । ಕಿಂಚ ಯಶ್ಚೋತ್ತರಮುತ್ಕೃಷ್ಟತರಂ ಸರ್ವೇಷಾಂ ಲೋಕಾನಾಮುಪರಿಭೂತಂ । ಅಪುನರಾವೃತ್ತೇಸ್ತಸ್ಯೋ-ತ್ಕೃಷ್ಟತ್ವಂ । ಸಧಸ್ಥಮುಪಾಸಕಾನಾಂ ಸಹಸ್ಥಾನಂ ಸತ್ಯಲೋಕಮಸ್ಕಭಾಯತ್ । ಸ್ಕಂಭಿತವಾನ್ । ಧ್ರುವಂ ಸ್ಥಾಪಿತವಾನಿತ್ಯರ್ಥಃ । ಕಿಂ ಕುರ್ವನ್ । ತ್ರೇಧಾ ವಿಚಕ್ರಮಾಣಸ್ತ್ರಿಪ್ರಕಾರಂ ಸ್ವಸೃಷ್ಟಾಂಲ್ಲೋ-ಕಾನ್ವಿವಿಧಂ ಕ್ರಮಮಾಣಃ ॥ ವಿಷ್ಣೋಸ್ತ್ರೇಧಾ ಕ್ರಮಣಮಿದಂ ವಿಷ್ಣುರ್ವಿ ಚಕ್ರಮೇ । ಋ. ೧-೨೨-೧೭ । ಇತ್ಯಾದಿಶ್ರುತಿಷು ಪ್ರಸಿದ್ಧಂ । ಅತವಿವೋರುಗಾಯ ಉರುಭಿರ್ಮಹದ್ಭಿರ್ಗೀಯಮಾನಃ ಅತಿಪ್ರಭೂತಂ ಗೀಯಮಾನೋ ವಾ । ಯ ಏವಂ ಕೃತವಾನ್ ತಾದೃಶಸ್ಯ ವಿಷ್ಣೋರ್ವೀರ್ಯಾಣಿ ಪ್ರ ವೋಚಂ ॥

ಪ್ರತಿಪದಾರ್ಥ

ಯಃ—ಯಾವ ವಿಷ್ಣುವು । ಪಾರ್ಥಿವಾನಿ—ಪೃಥಿವಿಗೆ ಸೇರಿದ । ರಜಾಂಸಿ—ರಂಜನಾತ್ಮಕರಾದವರೂ ಮತ್ತು ಅಗ್ನಿ, ವಾಯು ಮತ್ತು ಆದಿತ್ಯರೂಪದಲ್ಲಿರುವವರೂ ಆದ ಮೂರು ಲೋಕದ ಅಭಿಮಾನಿದೇವತೆಗಳನ್ನೂ । ಅಥವಾ [ಪೃಥಿವಿಗೆ ಅಧೋಭಾಗದಲ್ಲಿರುವ ಸಪ್ತಲೋಕಗಳನ್ನೂ] ಅಥವಾ [ಪೃಥಿವೀನಿಮಿತ್ತಕಗಳಾದ ಭೂಲೋಕ, ಭುವರ್ಲೋಕ ಮತ್ತು ಸ್ವರ್ಲೋಕಗಳನ್ನೂ । ವಿಮಮೇ—ವಿಶೇಷರೀತಿಯಿಂದ ನಿರ್ಮಿಸಿದನೋ, (ಮತ್ತು) ಯಃ—ಯಾವ ವಿಷ್ಣುವು । ತ್ರೇಧಾ—ಮೂರುಸಲ । ವಿಚಕ್ರಮಾಣಃ—(ತಾನು ಸೃಷ್ಟಿಸಿದ ಸಕಲ ಲೋಕಗಳನ್ನೂ) ವಿಧವಿಧವಾಗಿ ಸಂಚರಿಸುತ್ತಲೂ । ಉರುಗಾಯಃ—ಮಹಾತ್ಮರಿಂದ ಸ್ತುತಿಸಲ್ಪಡುತ್ತಲೂ । ಉತ್ತರಂ—ಅತಿವಿಸ್ತಾರವಾದ । ಸಧಸ್ಥಂ—ಲೋಕತ್ರಯಕ್ಕೂ ಆಶ್ರಯವಾದ ಅಂತರಿಕ್ಷವನ್ನು । ಅಸ್ಕಭಾಯತ್—ನಿರ್ಮಿಸಿದನೋ (ಅಂತಹ) । ವಿಷ್ಣೋಃ—(ಸಕಲ ವಿಶ್ವವನ್ನೂ) ವ್ಯಾಪಿಸುವ ವಿಷ್ಣುವಿನ । ವೀರ್ಯಾಣಿ—ವೀರ್ಯಕರ್ಮಗಳನ್ನು (ಪಾದವಿಕ್ಷೇಪಗಳನ್ನು) । ನು ಕಂ—ಅತಿ ಶೀಘ್ರವಾಗಿ । ಪ್ರವೋಚಂ—ಹೊಗಳುತ್ತಾ ಪಠಿಸುತ್ತೇನೆ ॥

ಭಾವಾರ್ಥ

ಪೃಥಿವ್ಯಾದಿಸಮಸ್ತಲೋಕಗಳನ್ನೂ ವಿಶೇಷರೀತಿಯಿಂದ ನಿರ್ಮಿಸಿದವನೂ, ಮತ್ತು ಮೂರುಸಲ ತಾನು ಸೃಷ್ಟಿಸಿದ ಸಕಲ ಲೋಕಗಳನ್ನೂ ವಿಧವಿಧವಾಗಿ ಸಂಚರಿಸುತ್ತಲೂ ಮತ್ತು ಮಹಾತ್ಮರಿಂದ ಸ್ತುತಿಸಲ್ಪಡುತ್ತಲೂ ಅತಿ ವಿಸ್ತಾರವಾದ ಅಂತರಿಕ್ಷವನ್ನು ನಿರ್ಮಿಸಿದವನೂ, ಸರ್ವವ್ಯಾಪಕನೂ ಆದ ವಿಷ್ಣುವಿನ ವೀರ್ಯಕರ್ಮಗಳನ್ನು ನಾನು ಅತಿ ಶೀಘ್ರವಾಗಿ ಪಠಿಸಿ ಹೊಗಳುತ್ತೇನೆ.

## English Translation

Earnestly I glorify the exploits of Vishnu, who made the three worlds; who sustained the lofty aggregate site (of the spheres); thrice traversing (the whole); who is praised by the exalted.

ವಿಶೇಷವಿಷಯಗಳು

ತೃತೀಯಸವನದಲ್ಲಿ ಸೋಮಾತಿರೇಕದಲ್ಲಿ ಪ್ರ ತದ್ವಿಷ್ಣುಃ ಎಂದು ಮೊದಲಾಗುವ ಮೂರು ಋಕ್ಕುಗಳು (ತೃಚಃ) ಶಸ್ತ್ರಮಂತ್ರದಲ್ಲಿ ಅನುರೂಪ ಋಕ್ಕುಗಳನ್ನಾಗಿ ಸೇರಿಕೊಳ್ಳಬೇಕೆಂದು ಆಶ್ವಲಾಯನ ಶ್ರೌತಸೂತ್ರದ- **ಸೋಮಾತಿರೇಕೇ** ಎಂಬ ಖಂಡದಲ್ಲಿ-**ಪ್ರ ತದ್ವಿಷ್ಣುಸ್ತವತೇ** ವೀರ್ಯೇಣೇತಿ **ಸ್ತೋತ್ರಿಯಾನುರೂಪೌ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೬-೭) ಮತ್ತು ವಾಜಪೇಯೇನಾಧಿಪತ್ಯ ಎಂಬ ಖಂಡದಲ್ಲಿ ಪ್ರ ತತ್ತ್ವೇ **ಅದ್ಯ ಶಿಪಿವಿಷ್ಟನಾಮ** ಪ್ರ ತದ್ವಿಷ್ಣುಃ **ಸ್ತವತೇ** ವೀರ್ಯೇಣ ಎಂಬ ಸೂತ್ರದಿಂದ ಆದೇಶರೀತಿ ನಿರ್ದೇಶಿಸಲ್ಪಟ್ಟಿರುವುದು. ( ಆ. ೯-೯ ).

ಋಕ್ಸಂಹಿತೆಯಲ್ಲೆಲ್ಲಾ ವಿಷ್ಣುಪರವಾದ ಪ್ರತ್ಯೇಕವಾದ ಸೂಕ್ತಗಳಲ್ಲಿ ಇದೇ ಮೊದಲನೆಯದು. ಹಿಂದೆ ೧-೨೨ನೇ ಸೂಕ್ತದ ೧೬ರಿಂದ ೨೧ನೇ ಋಕ್ಕುಗಳಲ್ಲಿ **ವಿಷ್ಣುಸ್ತುತಿ**ಯಿದ್ದು ಆ ವರ್ಣನೆಯಿಂದ ತಿಳಿಯತಕ್ಕ **ವಿಷ್ಣು**ವಿನ ಸ್ವರೂಪವನ್ನೂ ಮಹತ್ತ್ವವನ್ನೂ ಋಗ್ವೇದ ಸಂಹಿತೆಯ ೩ನೇ ಭಾಗದ ೧೧೯, ೧೨೪-೧೨೬, ೧೩೨ರಿಂದ ೧೩೪ನೇ ಪೇಜುಗಳಲ್ಲಿ ಆಯಾ ಸಂದರ್ಭಗಳಿಗನುಸಾರವಾಗಿ ವಿವರಿಸಿದೆ. ಈ ಭಾಗದಲ್ಲಿ ಕೇವಲ **ವಿಷ್ಣು**ಪರವಾದ ೨ ಸೂಕ್ತಗಳೂ **ಇಂದ್ರವಿಷ್ಣು**ವನ್ನುದ್ದೇಶಿಸಿದ ೧ ಸೂಕ್ತವೂ ಇರುವುದರಿಂದ ಹಿಂದೆ ಹೇಳಿಲ್ಲದೇ ಇರತಕ್ಕ ಇನ್ನೂ ಕೆಲವು ಅಧಿಕವಾದ ವಿಶೇಷಗುಣಗಳು ಇಲ್ಲಿ **ಉಕ್ತವಾಗಿವೆ.** ಈ ವರ್ಣನೆಗಳಿಂದ **ವಿಷ್ಣುವಿನ** ಮಹತ್ತ್ವವೇನು, ಋಕ್ಸಂಹಿತೆಯಲ್ಲಿ ವಿಷ್ಣುವಿನ ಸ್ಥಾನವೇನು ಎಂಬ ವಿಷಯಗಳನ್ನು ತಿಳಿಯಬಹುದು. ವಿಷ್ಣುವಿನ ಸ್ವರೂಪ ಮತ್ತು ಇಂದ್ರಾದಿದೇವತೆಗಳ ನಡುವೆ ಈ ದೇವತೆಯ ಸ್ಥಾನ ಇತ್ಯಾದಿ ವಿಷಯಗಳಲ್ಲಿ ವಿಪ್ರತಿಪತ್ತಿಗಳಿರುವುದರಿಂದ ವೈದಿಕ ಮತ್ತು ಪಾಶ್ಚಾತ್ಯ ಪಂಡಿತರುಗಳ ವೈಯಕ್ತಿಕವಾದ ಅಭಿಪ್ರಾಯಗಳನ್ನು ಇದೇ ಭಾಗದ ಪೂರ್ವಪೀಠಿಕಾಪ್ರಕರಣದಲ್ಲಿ ತಿಳಿಸಿದೆ. ಪ್ರಕೃತದಲ್ಲಿ ಆಯಾ ಋಕ್ಕುಗಳಲ್ಲಿ ವರ್ಣಿಸಿರುವ ಅಂಶಗಳನ್ನು ವಿವರಿಸಲಾಗುತ್ತದೆ ಹಿಂದೆ ೧-೩೨-೧ನೇ ಋಕ್ಕಿನಲ್ಲಿ **ಇಂದ್ರಸ್ಯ ನು ವೀರ್ಯಾಣಿ ಪ್ರವೋಚಂ** ಎಂದು **ಹಿರಣ್ಯಸ್ತೂಪ** ಆಂಗಿರಸನು ಸಂಕಲ್ಪಮಾಡಿದಂತೆ ಈ ಋಕ್ಕಿನಲ್ಲಿ **ವಿಷ್ಣೋರ್ನು ಕಂ ವೀರ್ಯಾಣಿ ಪ್ರವೋಚಂ |** ಎಂದು ದೀರ್ಘತಮ ಔಚಥ್ಯನು ಸಂಕಲ್ಪಮಾಡಿದ್ದಾನೆ. **ಆಗ್ನಿಮಾರುತಶಸ್ತ್ರೇ ಆದ್ಯಾ ವಿನಿಯುಕ್ತಾ |** ಈ ಸೂಕ್ತಗಳಲ್ಲಿ ಮೊದಲನೆಯ ಋಕ್ಕಿಗೆ **ಆಗ್ನಿಮಾರುತ** ಶಸ್ತ್ರದಲ್ಲಿ ವಿನಿಯೋಗವೆಂದು ಆಶ್ವಲಾಯನ ಶ್ರೌತಸೂತ್ರದಲ್ಲಿ (೫-೨೦) ಹೇಳಿದೆ. ಈ ಋಕ್ಕಿನ ಮಹತ್ತ್ವವನ್ನು ಐತರೇಯ ಬ್ರಾಹ್ಮಣದಲ್ಲಿ ಈರೀತಿ ತಿಳಿಸಿದೆ.

ಯಯೋರೋಜಸಾ ಸ್ಕಭಿತಾ ರಜಾಂಸೀತಿ ವೈಷ್ಣುವಾರುಣೀಮೃಚಂ ಶಂಸತಿ ವಿಷ್ಣುರ್ವೈ
ಯಜ್ಞಸ್ಯ ದುರಿಷ್ಟಂ ಪಾತಿ ವರುಣಃ ಸ್ವಿಷ್ಟಂ ತಯೋರುಭಯೋರೇವ ಶಾಂತ್ಯೈ |

" ವಿಷ್ಣೋರ್ನು ಕಂ ವೀರ್ಯಾಣಿ ಪ್ರವೋಚ "ಮಿತಿ ವೈಷ್ಣವೀಂ ಶಂಸತಿ ಯಥಾ ವೈಮತ್ಯಮೇವಂ ಯಜ್ಞಸ್ಯ ವಿಷ್ಣುಸ್ತದ್ಯಥಾ ದುಷ್ಕೃಷ್ಟಂ ದುರ್ಮತೀಕೃತಂ ಸುಕೃಷ್ಟಂ ಸುಮತೀಕೃತಂ ಕುರ್ವನ್ನಿಯಾದೇವಮೇವೈತದ್ಯಜ್ಞಸ್ಯ ದುಷ್ಟುತಂ ದುಃಶಸ್ತಂ ಸುಷ್ಟುತಂ ಸುಶಸ್ತಂ ಕುರ್ವನ್ನೇತಿ ಯದೇತಾಂ ಹೋತಾ ಶಂಸತಿ ।

(ಐ ಬ್ರಾ. ೧೩-೧೪)

ಪ್ರಾಪಂಚಿಕವ್ಯವಹಾರಗಳಲ್ಲಿ ಮತ್ಯವು ಎಂದರೆ, ಮತ್ಯಾ ಬುದ್ಧ್ಯಾ ಸಮ್ಯಕ್ತ್ವೇನ ಪ್ರತಿಭಾತಂ ಕಾರ್ಯಂ ಮತ್ಯಂ । ಯಥಾ ಮತ್ಯಂ ಕಾರ್ಯಂ ಲೋಕೇ ಫಲಪರ್ಯವಸಾಯಿ ಭವತಿ ತಥಾ ವಿಷ್ಣುರಪಿ ಫಲಪರ್ಯವಸಾಯೀತ್ಯರ್ಥಃ । ಸರಿಯಾದ ವಿವೇಚನೆಯಿಂದ ಕೂಡಿದ ಕಾರ್ಯವು ಯಾವ ರೀತಿ ಫಲಸಾಧಕವಾಗುತ್ತದೆಯೋ ಆದರಂತೆಯೇ ವಿಷ್ಣುವೂ ಸಹ ಯಜ್ಞಕಾರ್ಯಗಳಲ್ಲಿ ಫಲವನ್ನು ಪಡೆಯಲು ಸಹಾಯಕನಾಗುತ್ತಾನೆ ಅಲ್ಲದೆ, ಶ್ರೇಷ್ಠವಾದ ಮತಿಯುಳ್ಳವನು ಕ್ಷೇತ್ರದ ದೋಷಗಳನ್ನು ನಾಶಮಾಡಿ ಯಾವರೀತಿ ಉತ್ತಮವಾದ ಸಸ್ಯಗಳ ಬೆಳೆವಣಿಗೆಗೆ ಕಾರಣನಾಗುತ್ತಾನೆಯೋ ಮತ್ತು ಯಾವ ರೀತಿ ಸನ್ಮಂತ್ರಿಯು ದುರ್ಮಂತ್ರಿಯಿಂದ ಕೆಡಿಸಲ್ಪಟ್ಟ ರಾಜಕಾರ್ಯಗಳನ್ನು ಸರಿಪಡಿಸುತ್ತಾನೆಯೋ ಆದರಂತೆಯೇ ವಿಷ್ಣುವೂ ಸಹ ಯಜ್ಞಕಾರ್ಯಗಳಲ್ಲಿ ಪ್ರಾಪ್ತವಾಗತಕ್ಕ ದೋಷಗಳನ್ನೆಲ್ಲಾ ಪರಿಹರಿಸಿ ಯಜ್ಞವು ಸಫಲವಾಗುವಂತೆ ಮಾಡುತ್ತಾನೆ. ಆದುದರಿಂದಲೇ, ಯದ್ವದಾ ವೈಷ್ಣವೀಮೇತಾಂ ಹೋತಾ ಶಂಸತಿ । " ವಿಷ್ಣೋರ್ನು ಕಂ ವೀರ್ಯಾಣಿ " ಎಂಬ ವಿಷ್ಣುಪ್ರಶಂಸಾತ್ಮಕವಾದ ಋಕ್ಕನ್ನು ಹೋತೃವು ಪಠಿಸುತ್ತಾನೆ ಎಂದಿದೆ. ಯಃ ಪಾರ್ಥಿವಾನಿ ವಿಮಮೇ ರಜಾಂಸಿ । ಇತ್ಯಾದಿಗಳು ವಿಷ್ಣುವಿನ ವೀರ್ಯಕರ್ಮಗಳು.

ಪಾರ್ಥಿವಾನಿ ರಜಾಂಸಿ— ಇದಕ್ಕೆ ಸಾಯಣರು ಮೂರು ವಿಧವಾಗಿ ಅರ್ಥವನ್ನು ಮಾಡಿದ್ದಾರೆ. ಮೊದಲನೆಯದಾಗಿ, ಪೃಥಿವೀ ಸಂಬಂಧೀನಿ ರಂಜನಾತ್ಮಕಾನಿ ಕ್ಷಿತ್ಯಾದಿಲೋಕತ್ರಯಾಭಿಮಾನೀನಿ ಅಗ್ನಿವಾಯ್ವಾದಿತ್ಯರೂಪಾಣಿ । ಪೃಥಿವಿಗೆ ಸೇರಿದವರೂ, ರಂಜನಾತ್ಮಕರಾದವರೂ, ಮತ್ತು ಅಗ್ನಿ, ವಾಯು ಮತ್ತು ಆದಿತ್ಯ ರೂಪದಲ್ಲಿರುವವರೂ ಆದ ಮೂರುಲೋಕದ ಅಭಿಮಾನಿದೇವತೆಗಳನ್ನೂ ವಿಮಮೇ— ನಿರ್ಮಿಸಿದನು ಎಂದು ವಿವರಿಸಿದೆ. ಮತ್ತು ಲೋಕತ್ರಯಕ್ಕೂ ಪಾರ್ಥಿವಾನಿ ಎಂಬ ವಿಶೇಷಣವು ಹೇಗೆ ಯುಕ್ತವಾಗುತ್ತದೆ ಎಂಬ ಆಶಂಕೆಗೆ ಶ್ರುತಿವಾಕ್ಯಗಳ ಆಧಾರವನ್ನು ತೋರಿಸಿ ಸಮಾಧಾನವನ್ನು ಹೇಳಿದ್ದಾರೆ.

ಯದಿಂದ್ರಾಗ್ನೀ ಅವಮಸ್ಯಾಂ ಪೃಥಿವ್ಯಾಂ ಮಧ್ಯಮಸ್ಯಾಂ ಪರಮಸ್ಯಾಮುತ ಸ್ಥಃ ।
ಅತಃ ಪರಿ ವೃಷಣಾವಾ ಹಿ ಯಾತಮಥಾ ಸೋಮಸ್ಯ ಪಿಬತಂ ಸುತಸ್ಯ ॥

(ಋ. ಸಂ. ೧-೧೦೮-೯)

ಎಂಬ ಋಕ್ಕನ್ನುದಹರಿಸಿ, ಅಲ್ಲಿ ಅವಮಸ್ಯಾಂ ಪೃಥಿವ್ಯಾಂ ಎಂಬುದಕ್ಕೆ ಭೂಮಿಯ ಮೇಲೆ ಎಂದೂ, ಮಧ್ಯಮಸ್ಯಾಂ ಪೃಥಿವ್ಯಾಂ । ಎಂದರೆ ಅಂತರಿಕ್ಷದಲ್ಲಿ ಎಂದೂ ಪರಮಸ್ಯಾಂ ಪೃಥಿವ್ಯಾಂ ಎಂದರೆ ದೂರದಲ್ಲಿರುವ ದ್ಯುಲೋಕದಲ್ಲಿ ಎಂದೂ ಸಹ ಅರ್ಥಮಾಡಿದ್ದಾರೆ. ಅತ್ರ ಪೃಥಿವೀಶಬ್ದಃ ತ್ರಿಷ್ವಪಿ ಲೋಕೇಷು ವರ್ತತೇ । ಇಲ್ಲಿ ಪೃಥಿವೀ ಶಬ್ದವು ಲೋಕಗಳಿಗೂ ಅನ್ವಯಿಸುತ್ತದೆಂದು ಪುನಃ ವಿಶದಪಡಿಸಿದೆ. ಅದೂ ಅಲ್ಲದೆ,

ವಿತ್ತಾಯನೀ ಮೇಽಸಿ ತಿಕ್ತಾಯನೀ ಮೇಽಸ್ಯವತಾನ್ಮಾ ನಾಥಿತಮವತಾನ್ಮಾ ವ್ಯಥಿತಂ ವಿದೇರಗ್ನಿರ್ನಭೋ ನಾಮಾಗ್ನೇ ಅಂಗಿರೋ ಯೋಽಸ್ಯಾಂ ಪೃಥಿವ್ಯಾಮಸ್ಯಾಯುಷಾ ನಾಮ್ನೇಹಿ ಯತ್ತೇಽನಾಧೃಷ್ಟಂ ನಾಮ ಯಜ್ಞಿಯಂ ತೇನ ತ್ವಾ ದಧೇಽಗ್ನೇ ಅಂಗಿರೋ ಯೋ ದ್ವಿತೀ-

ಯಸ್ಯಾಂ ಪೃಥಿವ್ಯಾಮಸ್ಯಾಯುಷಾ ನಾಮ್ನೇಹಿ ಯತ್ತೇನಾ ಧೃಷ್ಟಂ ನಾಮ ।

(ತೈ. ಸಂ. ೧-೨-೧೨-೧)

ಎಂಬ ತೈತ್ತಿರೀಯಸಂಹಿತಾವಾಕ್ಯವನ್ನುದಹರಿಸಿ ಅಲ್ಲಿಯೂ ಸಹ ಅಸ್ಯಾಂ ಪೃಥಿವ್ಯಾಂ ; ದ್ವಿತೀಯಸ್ಯಾಂ ಪೃಥಿವ್ಯಾಂ ; ತೃತೀಯಸ್ಯಾಂ ಪೃಥಿವ್ಯಾಂ ಎಂದು ಮೂರು ಲೋಕಗಳೂ ಪೃಥಿವೀಶಬ್ದವಾಚ್ಯವಾಗಿರುವುದನ್ನು ತೋರಿಸಿದ್ದಾರೆ. ಆದುದರಿಂದ ಪಾರ್ಥಿವಾನಿ ರಜಾಂಸಿ ಎಂದರೆ ಮೂರು ಲೋಕಗಳಿಗೂ ರಂಜನಾತ್ಮಕರಾದವರೂ, ಅಭಿಮಾನಿದೇವತೆಗಳೂ ಆದ ಅಗ್ನಿವಾಯ್ವಾದಿತ್ಯರನ್ನು ವಿಮಮೇ ನಿರ್ಮಿಸಿದನು ಎಂದರ್ಥವಾಗುತ್ತದೆ ಎಂದೂ,

ಎರಡನೆಯದಾಗಿ, ಲೋಕಾ ರಜಾಂಸ್ಯುಚ್ಯಂತೇ । ಲೋಕಗಳಿಗೆ ರಜಸ್ಸೆಂದು ಹೆಸರು ರೂಢಿಯಲ್ಲಿದೆ ಎಂಬ ನಿರುಕ್ತಕಾರರ ವಾಕ್ಯವನ್ನುದಹರಿಸಿ, ಪಾರ್ಥಿವಾನಿ ಪೃಥಿವೀಸಂಬಂಧೀನಿ ಪೃಥಿವ್ಯಾ ಅಧಸ್ತನ ಸಪ್ತಲೋಕಾನ್ ವಿಮಮೇ ಪೃಥ್ವಿಯ ಅಧೋಭಾಗದಲ್ಲಿರುವ ಅತಲ, ವಿತಲ, ಸುತಲ, ರಸಾತಲ, ತಲಾತಲ, ಮಹಾತಲ ಮತ್ತು ಪಾತಾಳಗಳೆಂಬ ಏಳು ಲೋಕಗಳನ್ನೂ ಸೃಷ್ಟಿಸಿದನು ಎಂದೂ ಅಥವಾ,

ಮೂರನೆಯದಾಗಿ, ಪಾರ್ಥಿವಾನಿ ಪೃಥಿವೀನಿಮಿತ್ತಕಾನಿ ರಜಾಂಸಿ ಲೋಕಾನ್ ವಿಮಮೇ । ಭೂರಾದಿ ಲೋಕತ್ರಯಮಿತ್ಯರ್ಥಃ । ಭೂಮ್ಯಾಂ ಉಪಾರ್ಜಿತಕರ್ಮಭೋಗಾರ್ಥತ್ವಾತ್ ಇತರಲೋಕಾನಾಂ ತತ್ಕಾರಣತ್ವಂ। ಪೃಥ್ವಿಯ ಮೇಲೆ ನೆರವೇರಿಸಿದ ಸಕಲ ಕರ್ಮಗಳಿಗೂ ಫಲಗಳನ್ನನುಭವಿಸುವುದಕ್ಕಾಗಿಯೂ ಆಯಾ ಕರ್ಮಗಳಿಗನುಗುಣವಾಗಿಯೂ ಭೂರಾದಿ ಲೋಕಗಳ ಸೃಷ್ಟಿಯಾಗಿರುವುದರಿಂದ ಆ ಲೋಕಗಳ ಸೃಷ್ಟಿಗೆಲ್ಲಾ ಪೃಥ್ವಿಯೇ ಹೇತುವಾದಂತಾಯಿತು । ಆದುದರಿಂದ ಪೃಥ್ವೀನಿಮಿತ್ತಕಗಳಾದ ಭೂರಾದಿಲೋಕತ್ರಯಗಳನ್ನು ವಿಮಮೇ ನಿರ್ಮಿಸಿದನು ಎಂದೂ ಸಹ ಮೂರು ವಿಧಗಳಾದ ಅರ್ಥಗಳು ಸಾಧ್ಯವೆಂದು ಸಾಯಣರು ವಿವರಿಸಿದ್ದಾರೆ.

ರಜಾಂಸಿ—ರಜೋ ರಜತೇರ್ಜ್ಯೋತೀ ರಜ ಉಚ್ಯತೇ । ಉದಕಂ ರಜ ಉಚ್ಯತೇ । ಲೋಕಾ ರಜಾಂಸ್ಯುಚ್ಯಂತೇ ॥

(ನಿ. ೪-೧೯)

ಬೆಳಗು ಎಂಬರ್ಥವನ್ನು ಕೊಡುವ ರಂಜ್‌ಧಾತುವಿನಿಂದ ನಿಷ್ಪನ್ನವಾಗಿ ರಜಸ್ ಶಬ್ದಕ್ಕೆ ಜ್ಯೋತಿಯೆಂದೂ, ಉದಕವೆಂದೂ, ಲೋಕಗಳೆಂದೂ ಅರ್ಥವಾಗುತ್ತದೆ. ಹೀಗೆಯೇ ಈ ಪದಕ್ಕೆ ಸಾಧ್ಯವಾಗತಕ್ಕ ಇನ್ನೂ ಇತರ ಅರ್ಥಗಳನ್ನೂ ಸಹ ಉದಾಹರಣೆಗಳೊಂದಿಗೆ ಇದೇ ಭಾಗದ ೫೮ನೇ ಪೇಜಿನಲ್ಲಿ ವಿಶದವಾಗಿ ತಿಳಿಸಿದೆ. ಪ್ರಕೃತವಾದ ಋಕ್ಕಿನಲ್ಲಿ ಪ್ರಕಾಶಮಾನವಾದ ಲೋಕಗಳೆಂದು ಹೇಳಬಹುದು.

ತ್ರೀಣಿ ಭಾಂತಿ ರಜಾಂಸ್ಯಸ್ಯ ಯತ್ಪದಾನಿ ತು ತೇಜಸಾ ।
ತೇನ ಮೇಧಾತಿಥಿಃ ಪ್ರಾಹ ವಿಷ್ಣುಮೇನಂ ತ್ರಿವಿಕ್ರಮಂ ॥

(ಬೃ. ದೇ. ೨-೨೪)

ವಿಷ್ಣುವಿನ ಮೂರು ಪಾದಗಳಾದ ಮೂರು ಲೋಕಗಳು ಪ್ರಕಾಶಿಸುತ್ತವೆಯೆಂದು ರಜಃಶಬ್ದಕ್ಕೆ ಲೋಕವೆಂದರ್ಥವಾಗುವಂತೆ ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಅದೇ ಅರ್ಥವಾಗುವುದು ಸಹಜವಾಗಿದೆ.

**ತ್ರೇಧಾ ವಿಚಕ್ರಮಾಣಃ—ಸ್ವಸೃಷ್ಟಾನ್ ಲೋಕಾನ್ ವಿವಿಧಂ ಕ್ರಮಮಾಣಃ** । ತಾನು ಸೃಷ್ಟಿಸಿದ ಲೋಕಗಳನ್ನು ವಿಧವಿಧವಾಗಿ ಸಂಚರಿಸುತ್ತಾ ಎಂದರ್ಥ.

**ಇದಂ ವಿಷ್ಣುರ್ವಿಚಕ್ರಮೇ ತ್ರೇಧಾ ನಿ ದಧೇ ಪದಂ । ಸಮೂಳ್ಹಮಸ್ಯ ಪಾಂಸುರೇ ॥**
(ಋ. ಸಂ. ೧-೨೨-೧೭)

ಇತ್ಯಾದಿಋಕ್ಕುಗಳಲ್ಲಿ ವರ್ಣಿಸಿರುವಂತೆ **ತ್ರಿಭಿಃ ಪ್ರಕಾರೈಃ ಪಾದಂ ಪ್ರಕ್ಷಿಪ್ತವಾನ್** । ಮೂರು ಪ್ರಕಾರಗಳಿಂದ ಪಾದಗಳನ್ನಿಟ್ಟು ಸಂಚರಿಸಿದನು ಅಥವಾ ವ್ಯಾಪಿಸಿದನು ಎಂದು ತಾತ್ಪರ್ಯವೆಂದು ಸಾಯಣರು ವಿವರಿಸಿದ್ದಾರೆ. ಈ ಅಂಶವನ್ನು ಮುಂದಿನ ಋಕ್ಕಿನ ವಿಶೇಷ ವಿಷಯಗಳಲ್ಲಿ ವಿಶದವಾಗಿ ವಿವರಿಸಲಾಗುತ್ತದೆ

**ಉರುಗಾಯಃ—ಉರುಭಿಃ ಮಹದ್ಭಿಃ ಗೀಯಮಾನಃ** । ಮಹಾತ್ಮರುಗಳಿಂದ ಸ್ತುತಿಸಲ್ಪಡುವವನು ಎಂದೊಂದರ್ಥವನ್ನೂ ಮತ್ತು **ಉರು**ಶಬ್ದಕ್ಕೆ ಪ್ರಭೂತವೆಂದರ್ಥವನ್ನಾಡಿ **ಅತಿಪ್ರಭೂತಂ ಗೀಯಮಾನೋ ವಾ** । ಅತ್ಯತಿಶಯವಾಗಿಯೂ ಪ್ರಭೂತವಾಗಿಯೂ ಸ್ತುತಿಸಲ್ಪಡುವವನೆಂದೂ ಎರಡು ವಿಧವಾಗಿ ಅರ್ಥಮಾಡಿದ್ದಾರೆ.

**ಉತ್ತರಂ—ಉತ್ತರ ಉದ್ಧತತರೋ ಭವತಿ** । **ಉದ್ಧತತರೋಽಸೌ ಉಪರಿಷ್ಟಾದವಸ್ಥಾನಾತ್** । ಅತ್ಯಂತ ಎತ್ತರವಾಗಿರತಕ್ಕದ್ದೆಂದು ನಿರುಕ್ತಕಾರರು ಅರ್ಥಮಾಡಿರುತ್ತಾರೆ. (ನಿ. ೨-೧೧). ಮತ್ತು,

**ಆರ್ಷ್ಟಿಷೇಣೋ ಹೋತ್ರಮೃಷಿರ್ನಿಷೀದನ್ ದೇವಾಪಿರ್ದೇವಸುಮತಿಂ ಚಿಕಿತ್ವಾನ್ ।**
**ಸ ಉತ್ತರಸ್ಮಾದಧರಂ ಸಮುದ್ರಮಪೋ ದಿವ್ಯಾ ಅಸೃಜದ್ವರ್ಷ್ಯಾ ಅಭಿ ॥**
(ಋ. ಸಂ. ೧೦-೯೮-೫)

ಎಂಬ ಋಕ್ಕನ್ನುದಹರಿಸಿ ಇಲ್ಲಿ **ಸಮುದ್ರ** ಶಬ್ದಕ್ಕೆ ಅಂತರಿಕ್ಷವೆಂಬರ್ಥವನ್ನು ತೋರಿಸುವುದಕ್ಕಾಗಿ **ಉತ್ತರಸಮುದ್ರ, ಅಧರ ಸಮುದ್ರ**ವೆಂಬ ಎರಡು ವಿಭಾಗವನ್ನುಮಾಡಿ **ಉತ್ತರ**ಶಬ್ದಕ್ಕೆ **ಉಪರಿವರ್ತಮಾನಾತ್** ಮೇಲ್ಭಾಗ ದಲ್ಲಿರತಕ್ಕ ಎಂದರ್ಥವೆಂದು ತೋರಿಸಿದ್ದಾರೆ. ಪ್ರಕೃತವಾದ ಋಕ್ಕಿನಲ್ಲಿಯೂ ಸಹ **ಉದ್ಗತತರಂ** ಊರ್ಧ್ವಭಾಗಕ್ಕೆ ಪ್ರಸರಿಸಿರತಕ್ಕ ಎಂದರ್ಥವಾಗಿ **ಸಧಸ್ಥಂ** ಎಂಬ ಪದಕ್ಕೆ ವಿಶೇಷಣವಾಗಿದೆ. ಅಥವಾ **ಅತಿವಿಸ್ತೀರ್ಣಂ** ಅತ್ಯಂತ ವಿಸ್ತೃತವಾಗಿ ಪ್ರಸರಿಸಿರತಕ್ಕ ಎಂದೂ ಅರ್ಥವಾಗಬಹುದು.

**ಸಧಸ್ಥಂ— ಸಹಸ್ಥಾನಂ ಲೋಕತ್ರಯಾಶ್ರಯಭೂತಮಂತರಿಕ್ಷಂ** । **ಸಧಸ್ಥ**ಶಬ್ದಕ್ಕೆ ಸಹಸ್ಥಾನ ವೆಂದರ್ಥ. ಇಲ್ಲಿ ಮಾತ್ರ ಅಂತರಿಕ್ಷಪರ್ಯಾಯವಾಗಿರುವುದು. ಋತ್ವಿಕ್ಕುಗಳೆಲ್ಲರೂ ಒಟ್ಟುಗೂಡಿ ಸೇರುವ ವೇದಿಕಾ ರೂಪವಾದ ಸ್ಥಾನಕ್ಕೂ **ಸಧಸ್ಥ**ವೆಂದು ಹೇಳುವ ರೂಢಿಯಿದೆ. ನಿರುಕ್ತಕಾರರು (೩-೧೫).

**ಕುಹ ಸ್ವಿದ್ದೋಷಾ ಕುಹ ವಸ್ತೋರಶ್ವಿನಾ ಕುಹಾಭಿಪಿತ್ವಂ ಕರತಃ ಕುಹೋಷತುಃ ।**
**ಕೋ ವಾಂ ಶಯುತ್ರಾ ವಿಧವೇವ ದೇವರಂ ಮರ್ಯಂ ನ ಯೋಷಾ ಕೃಣುತೇ ಸಧಸ್ಥ ಆ ॥**
(ಋ. ಸಂ. ೧೦-೪೦-೨)

ಎಂಬ ಋಕ್ಕನ್ನುದಹರಿಸಿ ಅಲ್ಲಿ **ಸಧಸ್ಥ**ಶಬ್ದಕ್ಕೆ **ಸಹಸ್ಥಾನ**ವೆಂಬರ್ಥವನ್ನು ಮಾಡಿದ್ದಾರೆ. ವೇದಿರೂಪವಾದ ಸಧಸ್ಥ ವೆಂದು ಸಾಯಣರೂ, ಸಾಧಾರಣವಾಗಿ ಎಲ್ಲರೂ ಒಟ್ಟಿಗೆ ವಾಸಿಸುವ ಗೃಹರೂಪವಾದ ವಾಸಸ್ಥಾನವೆಂದು ನಿರುಕ್ತಕಾ ರರೂ ಅಭಿಪ್ರಾಯಪಟ್ಟಿದ್ದಾರೆ. ಇದರಂತೆಯೇ **ತ್ರಿಷಧಸ್ಥಃ** ಎಂಬ ಪದಕ್ಕೂ ಸಹ (೬-೮-೭ : ೬-೧೨-೨ ಇತ್ಯಾದಿ

ಋಕ್ಕುಗಳಲ್ಲಿ) ಲೋಕೇಷು ಸಹಾವಸ್ಥಾನಂ ಎಂದರ್ಥಮಾಡಿದೆ. ಪ್ರಕೃತವಾದ ಋಕ್ಕಿನಲ್ಲಿ ಲೋಕತ್ರಯಕ್ಕೂ ಒಟ್ಟಿಗೆ ಆಶ್ರಯಭೂತವಾದ ಅಂತರಿಕ್ಷವೆಂದೂ ಅಥವಾ, **ಸಹಸ್ಥಾನಂ ಪುಣ್ಯಕೃತಾಂ ಸಹನಿವಾಸಯೋಗ್ಯಂ ಭೂರಾದಿಲೋಕಸಪ್ತಕಂ** । ಸುಕೃತಿಗಳು ಒಟ್ಟಿಗೆ ವಾಸಮಾಡಬಹುದಾದ ಏಳುಲೋಕಗಳೆಂದೂ, ಅಥವಾ **ಉತ್ತರಂ ಉತ್ಕೃಷ್ಟತರಂ ಸರ್ವೇಷಾಂ ಲೋಕಾನಾಮುಪರಿಭೂತಂ ಸಹಸ್ಥಾನಂ ಸತ್ಯಲೋಕಂ** । ಸಕಲ ಲೋಕಗಳಿಗೂ ಮೇಲ್ಭಾಗದಲ್ಲಿರುವುದೂ ಎಲ್ಲಕ್ಕಿಂತಲೂ ಶ್ರೇಷ್ಠವಾದುದೂ ಆದ **ಸತ್ಯಲೋಕ**ವೆಂದೂ ಸಹ ಸಾಯಣರು ಅರ್ಥಮಾಡಿದ್ದಾರೆ.

**ವಿಷ್ಣೋಃ**—**ಅಥ ಯದ್ವಿಷಿತೋ ಭವತಿ ತದ್ವಿಷ್ಣುರ್ಭವತಿ ವಿಷ್ಣುರ್ವಿಶತೇರ್ವಾ ವ್ಯಶ್ನೋತೇರ್ವಾ** । ವ್ಯಾಪಿಸು ಅಥವಾ ಎಲ್ಲದರಲ್ಲಿಯೂ ಸೇರಿಕೊಂಡು ಐಕ್ಯವಾಗುವಂತೆ ಪ್ರವೇಶಿಸು ಎಂಬರ್ಥವನ್ನು ಕೊಡುವ **ವಿಶ್** ಧಾತು ವಿನಿಂದಾಗಲಿ ಅಥವಾ **ವ್ಯಶ್** (ವಿ + ಅಶೂ) ಧಾತುವಿನಿಂದಾಗಲಿ ನಿಷ್ಪನ್ನವಾಗಿದೆಯೆಂದು ನಿರುಕ್ತಕಾರರು ಈ ಪದದ ನಿರ್ವಚನವನ್ನು ತೋರಿಸಿ--

ಇದಂ ವಿಷ್ಣುರ್ವಿಚಕ್ರಮೇ ತ್ರೇಧಾ ನಿ ದಧೇ ಪದಂ ।
**ಸಮೂಳ್ಹಮಸ್ಯ ಪಾಂಸುರೇ** ॥

(ಋ. ಸಂ. ೧-೨೨-೧೭)

ಎಂಬ ಋಕ್ಕನ್ನುದಹರಿಸಿ ಅಲ್ಲಿ ವರ್ಣಿತವಾಗಿರುವ ವಿಷ್ಣುವಿನ ವ್ಯಾಪನಶೀಲತ್ವವನ್ನು ವಿವರಿಸಿದ್ದಾರೆ.

**ನು ಕಂ**—ಈ ನಿಪಾತಗಳಿಗೆ ಬೇರೆಬೇರೆ ಅರ್ಥಗಳಲ್ಲಿರುವ ಪ್ರಯೋಗಗಳನ್ನು ಹಿಂದೆ ತಿಳಿಸಿದೆ ಇಲ್ಲಿ **ಅತಿಶೀಘ್ರಂ** ಎಂದು ಸಾಯಣರು ಅರ್ಥಮಾಡಿದ್ದಾರೆ. ಮತ್ತು **ನು ಕಂ ಇತಿ ಪದದ್ವಯಂ । ತಥಾಪಿ ಯಾಸ್ಕೇನ 'ನವೋತ್ತರಾಣಿ ಪದಾನಿ' (ನಿ. ೩-೧೩) ಇತ್ಯುಕ್ತತ್ವಾತ್ ಶಾಖಾಂತರೇ ಏಕತ್ವೇನ ಪಾಠಾಚ್ಚ ನು ಇತ್ಯೇತಸ್ಮಿನ್ನೇವಾರ್ಥೇ ನು ಕಂ ಇತಿ ಪದದ್ವಯಂ** । **ನು ಕಂ** ಎಂಬ ನಿಪಾತದ್ವಯವಿದ್ದರೂ ಸಹ ನಿರುಕ್ತಕಾರರು **ನುಕಂ** ಎಂದು **ಸರ್ವಪದಸಮಾಮ್ನಾತ**ವೆಂದು ಸೇರಿಸಿರುವ ಒಂಭತ್ತು ಪದಗಳಲ್ಲಿ ಇದೂ ಸೇರಿರುವುದರಿಂದ ಇಲ್ಲಿ ಅದೇ ನಿಯಮವನ್ನನುಸರಿಸಿ **ನುಕಂ** ಎಂದು ಒಂದೇ ಪದವನ್ನಾಗಿಮಾಡಿ ಕೇವಲ **ನು** ಎನ್ನು ವುದಕ್ಕೆ ಯಾವ ಅರ್ಥವೋ ಅದನ್ನೇ **ನುಕಂ** ಎನ್ನುವುದಕ್ಕೂ ಹೇಳಬಹುದೆಂದು. ತಿಳಿಸಿದ್ದಾರೆ.

### ವ್ಯಾಕರಣಪ್ರಕ್ರಿಯಾ

**ವಿಷ್ಣೋಃ**—ವಿಷ್ಲೃ ವ್ಯಾಪ್ತೌ. ಧಾತು. **ವಿಷೇಃ ಕಿಚ್ಚ** (ಉ. ಸೂ. ೩-೩೯) ಎಂಬುದರಿಂದ ನು ಪ್ರತ್ಯಯ. ಕಿತ್ವ ವಿಧಾನದಿಂದ ಲಘೂಪಧಗುಣ ಬರುವುದಿಲ್ಲ. ನಿತ್ ಎಂದು ಹಿಂದಿನ ಸೂತ್ರದಿಂದ ಅನು ವೃತ್ತವಾಗುವುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಷಷ್ಠೀ ಏಕವಚನಾಂತರೂಪ.

**ವೀರ್ಯಾಣಿ**—ಶೂರ ವೀರ ವಿಕ್ರಾಂತೌ ಧಾತು. ಇದಕ್ಕೆ ಣಿಚ್ ಬಂದಾಗ **ಅಚೋಯತ್** (ಪಾ. ಸೂ. ೩-೧-೯೭) ಎಂಬುದರಿಂದ ಯತ್ ಪ್ರತ್ಯಯ **ಣೇರನಿಟಿ** (ಪಾ. ಸೂ. ೬-೪-೫೧) ಎಂಬುದರಿಂದ ಣಿಚಿಗೆ ಲೋಪ. **ತಿತ್ ಸ್ವರಿತಮ್** (ಪಾ. ಸೂ. ೬-೧-೧೮೫) ಎಂಬುದರಿಂದ ಸ್ವರಿತಸ್ವರ ಬರುತ್ತದೆ. ವೀರ್ಯವು ವಿಷಯದಲ್ಲಿ **ಯತೋಽನಾವಃ** ಎಂಬುದರಿಂದ ಆದ್ಯುದಾತ್ತಸ್ವರ ಬರುವುದಿಲ್ಲವೆಂದು (ಋ. ಸ. ೧-೩೨-೧) ರಲ್ಲಿ ಹೇಳಿದೆ

**ವೋಚಮ್**—ವಚ ಪರಿಭಾಷಣೇ ಧಾತು. (ಅಥವಾ) ಬ್ರೂಞ್ ವ್ಯಕ್ತಾಯಾಂ ವಾಚಿ ಧಾತು. ಇದಕ್ಕೆ ಆರ್ಧಧಾತುಕವಿಷಯದಲ್ಲಿ ವಚ್ಯಾದೇಶ.) ಲುಙ್ ಉತ್ತಮಪುರುಷಏಕವಚನದಲ್ಲಿ ಅಮಾದೇಶ. **ಅಸ್ಯತಿವಕ್ತಿ**—ಎಂಬುದರಿಂದ ಚ್ಲಿಗೆ ಚಙಾದೇಶ **ವಚ ಉಮ್** (ಪಾ. ಸೂ. ೭-೪-೨೦) ಎಂಬುದರಿಂದ ಚಙ್ ಪರವಾದಾಗ ಉಮಾಗಮ. ಗುಣ. ತಿಙಂತನಿಘಾತಸ್ವರ ಬರುತ್ತದೆ.

**ಪಾರ್ಥಿವಾನಿ**—ಪೃಥಿವ್ಯಾಃ ಇಮಾನಿ ಪಾರ್ಥಿವಾನಿ. **ಪೃಥಿವ್ಯಾ ಞಾಞೌ** ಎಂಬುದರಿಂದ ಅಞ್ ಪ್ರತ್ಯಯ. **ತದ್ಧಿತೇಷ್ವಚಾಮಾದೇಃ** ಎಂಬುದರಿಂದ ಆದಿವೃದ್ಧಿ. **ಞ್ನಿತ್ಯಾದಿರ್ನಿತ್ಯಮ್** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ವಿಮಮೇ**—ಮಾಙ್ ಮಾನೇ ಧಾತು. ಲಿಟ್ ಪ್ರಥಮಪುರುಷಏಕವಚನದಲ್ಲಿ ಮಮೇ ಎಂದು ರೂಪ ವಾಗುತ್ತದೆ. **ಯದ್ವೃತ್ತಾನ್ನಿತ್ಯಮ್** (ಪಾ. ಸೂ. ೮-೧-೬೬) ಎಂಬುದರಿಂದ ನಿಘಾತಪ್ರತಿಷೇಧ ಬರುವುದರಿಂದ ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. **ತಿಙಿಚೋದಾತ್ತವತಿ** (ಪಾ. ಸೂ. ೮-೧-೭೧) ಸೂತ್ರದಿಂದ ಗತಿಗೆ (ವಿ) ಅನುದಾತ್ತಸ್ವರ ಬರುತ್ತದೆ

**ಅಸ್ಕಭಾಯತ್**—ಸ್ಕಭಿ ಪ್ರತಿಬಂಧೇ ಧಾತು. ಲಙ್ ಪ್ರಥಮಪುರುಷಏಕವಚನದಲ್ಲಿ ತಿಪ್ ಪ್ರತ್ಯಯ. **ಇತಶ್ಚ** ಎಂಬುದರಿಂದ ಇಕಾರಲೋಪ. **ಸ್ತಂಭು ಸ್ತುಂಭು ಸ್ಕಂಭು**—(ಪಾ. ಸೂ. ೩-೧-೮೨) ಎಂಬುದರಿಂದ ವಿಹಿತವಾದ ಶ್ನಾ ವಿಕರಣಕ್ಕೆ **ಛಂದಸಿ ಶಾಯಜಪಿ** (ಪಾ. ಸೂ. ೩-೧-೮೪) ಎಂಬುದರಿಂದ ವ್ಯತ್ಯಯದಿಂದ ಶಾಯ ಚಾದೇಶ. **ಆಗಮಾನುಶಾಸನಮನಿತ್ಯಮ್** ಎಂಬ ವಚನದಿಂದ ನುಮಾಗಮ ಬರುವುದಿಲ್ಲ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ.

**ಸಧಸ್ಥಮ್**—ಷ್ಠಾ ಗತಿನಿವೃತ್ತೌ ಧಾತು. **ಸುಪಿ ಸ್ಥಃ** (ಪಾ. ಸೂ. ೩-೨-೪) ಎಂಬುದರಿಂದ ಕ ಪ್ರತ್ಯಯ. **ಆತೋ ಲೋಪ ಇಟಿ ಚ** (ಪಾ. ಸೂ. ೬-೪-೬೪) ಎಂಬುದರಿಂದ ಆಕಾರ ಲೋಪ. **ಸಧಮಾದಸ್ಥಯೋಶ್ಛಂದಸಿ** (ಪಾ. ಸೂ. ೬-೩-೯೬) ಎಂಬುದರಿಂದ ಸಹ ಎಂಬುದಕ್ಕೆ ಸಧಾದೇಶ. ದ್ವಿತೀಯಾ ಏಕವಚನಾಂತರೂಪ.

**ವಿಚಕ್ರಮಾಣಃ**—ಕ್ರಮು ಪಾದವಿಕ್ಷೇಪೇ ಧಾತು. ಇದಕ್ಕೆ ಲಡರ್ಥದಲ್ಲಿ ಕಾನಚ್ ಪ್ರತ್ಯಯ. **ಬಹುಲಂ ಛಂದಸಿ** ಎಂಬುದರಿಂದ ಶಪಿಗೆ ಶ್ಲು ವಿಕರಣ. ಶ್ಲು ನಿಮಿತ್ತವಾಗಿ ಧಾತುವಿಗೆ ದ್ವಿತ್ವಾದಿ. **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ಪ್ರಾದಿಸಮಾಸವಾದಾಗ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

**ತ್ರೇಧಾ**—ತ್ರಿಶಬ್ದಕ್ಕೆ **ವಿಧಾಚ್ಚ** (ಪಾ. ಸೂ ೫-೩-೪೬) ಎಂಬುದರಿಂದ ಪ್ರಕಾರಾರ್ಥದಲ್ಲಿ ಏಧಾಚ್ ಪ್ರತ್ಯಯ. ಚಿತ್ತಾದುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಉರುಗಾಯಃ**—ಗಾ ಸ್ತುತೌ ಧಾತು. **ಅಚೋ ಯತ್** (ಪಾ ಸೂ. ೩-೧-೯೭) ಎಂಬುದರಿಂದ ಯತ್ ಪ್ರತ್ಯಯ. ವ್ಯತ್ಯಯದಿಂದ ಅಂತೋದಾತ್ತವಾಗುತ್ತದೆ. ಪ್ರಾದಿಸಮಾಸವಾದಾಗ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. ॥ ೧ ॥



ಸಂಹಿತಾಪಾಠಃ

ಪ್ರ ತದ್ವಿಷ್ಣುಃ ಸ್ತವತೇ ವೀರ್ಯೇಣ ಮೃಗೋ ನ ಭೀಮಃ ಕುಚರೋ ಗಿರಿಷ್ಠಾಃ ।
ಯಸ್ಯೋರುಷು ತ್ರಿಷು ವಿಕ್ರಮಣೇಷ್ವಧಿಕ್ಷಿಯಂತಿ ಭುವನಾನಿ ವಿಶ್ವಾ ॥೨॥

ಪದಪಾಠಃ

ಪ್ರ । ತತ್ । ವಿಷ್ಣುಃ । ಸ್ತವತೇ । ವೀರ್ಯೇಣ । ಮೃಗಃ । ನ । ಭೀಮಃ । ಕುಚರಃ । ಗಿರಿಽಸ್ಥಾಃ ।
ಯಸ್ಯ । ಉರುಷು । ತ್ರಿಷು । ವಿಽಕ್ರಮಣೇಷು । ಅಧಿಽಕ್ಷಿಯಂತಿ । ಭುವನಾನಿ । ವಿಶ್ವಾ ॥ ೨ ॥

॥ ಸಾಯಣಭಾಷ್ಯಂ ॥

ತೃತೀಯಸವನೇ ಸೋಮಾತಿರೇಕ ಏವ ಶಸ್ತ್ರಮುಪಜನಯಿತವ್ಯಂ । ತತ್ರ ಪ್ರ ತದಿತ್ಯಯಮನುರೂಪಸ್ತೃಚಃ । ಸೋಮಾತಿರೇಕ ಇತಿ ಖಂಡೇ ಸೂತ್ರಿತಂ । ಪ್ರ ತದ್ವಿಷ್ಣುಃ ಸ್ತವತೇ ವೀರ್ಯೇಣೇತಿ ಸ್ತೋತ್ರಿಯಾನುರೂಪೌ । ಆ. ೬-೭ । ಇತಿ ॥ ವಾಜಪೇಯೇನಾಧಿಪತ್ಯಕಾಮ ಇತಿ ಖಂಡೇ ಸೂತ್ರಿತಂ । ಪ್ರ ತತ್ತೇ ಅದ್ಯ ಶಿಪಿವಿಷ್ಟ ನಾಮ ಪ್ರ ತದ್ವಿಷ್ಣುಃ ಸ್ತವತೇ ವೀರ್ಯೇಣ । ಆ. ೯-೯ । ಇತಿ ॥

ಯಸ್ಯೇತಿ ವಕ್ಷ್ಯಮಾಣತ್ವಾತ್ ಸ ಇತಿ ಅವಗಮ್ಯತೇ । ಸ ಮಹಾನುಭಾವೋ ವೀರ್ಯೇಣ ಸ್ವಕೀಯೇನ ವೀರಕರ್ಮಣಾ ಪೂರ್ವೋಕ್ತರೂಪೇಣ ಸ್ತವತೇ । ಸ್ತೂಯತೇ ಸರ್ವೈಃ ॥ ಕರ್ಮಣಿ ವ್ಯತ್ಯಯೇನ ಶಪ್ ॥ ವೀರ್ಯೇಣ ಸ್ತೂಯಮಾನತ್ವೇ ದೃಷ್ಟಾಂತಃ । ಮೃಗೋ ನ ಸಿಂಹಾದಿರಿವ । ಯಥಾ ಸ್ವವಿರೋಧಿನೋ ಮೃಗಯಿತಾ ಸಿಂಹೋ ಭೀಮೋ ಭೀತಿಜನಕಃ ಕುಚರಃ ಕುತ್ಸಿತಹಿಂಸಾದಿಕರ್ತಾ ದುರ್ಗಪ್ರದೇಶಗಂತಾ ವಾ ಗಿರಿಷ್ಠಾಃ ಪರ್ವತಾದ್ಯುನ್ನತಪ್ರದೇಶಸ್ಥಾಯೀ ಸರ್ವೈಃ ಸ್ತೂಯತೇ । ಅಸ್ಮಿನ್ನರ್ಥೇ ನಿರುಕ್ತಂ । ಮೃಗೋ ನ ಭೀಮಃ ಕುಚರೋ ಗಿರಿಷ್ಠಾಃ । ಮೃಗ ಇವ ಭೀಮಃ ಕುಚರೋ ಗಿರಿಷ್ಠಾ ಮೃಗೋ ಮಾರ್ಷ್ಟೇರ್ಗತಿಕರ್ಮಣೋ ಭೀಮೋ ಬಿಭ್ಯತ್ಯಸ್ಮಾದ್ಭೀಷ್ಮೋಽಪ್ಯೇತಸ್ಮಾದೇವ । ಕುಚರ ಇತಿ ಚರತಿಕರ್ಮ ಕುತ್ಸಿತಮಥ ಚೇದ್ದೇವತಾಭಿಧಾನಂ ಕ್ವಾಯಂ ನ ಚರತೀತಿ ವಾ । ಗಿರಿಷ್ಠಾ ಗಿರಿಸ್ಥಾಯೀ ಗಿರಿಃ ಪರ್ವತಃ ಸಮುದ್ಗೀರ್ಣೋ ಭವತಿ ಪರ್ವವಾನ್ ಪರ್ವತಃ ಪರ್ವ ಪುನಃ ಪೃಣಾತೇಃ ಪ್ರೀಣಾತೇರ್ವಾ । ನಿ. ೧-೨೦ । ಇತಿ ॥ ತದ್ವದಯಮಪಿ ಮೃಗೋಽನ್ವೇಷ್ಟಾ ಶತ್ರೂಣಾಂ ಭೀಮೋ ಭಯಾನಕಃ ಸರ್ವೇಷಾಂ ಭೀತ್ಯಪಾದಾನಭೂತಃ । ಪರಮೇಶ್ವರಾದ್ಭೀತಿರ್ಭೀಷಾಸ್ಮಾದ್ವಾತಃ ಪವತೇ । ತೈ. ಆ. ೮-೮-೧ । ಇತ್ಯಾದಿಶ್ರುತಿಷು ಪ್ರಸಿದ್ಧಾ । ಕಿಂಚ ಕುಚರಃ ಶತ್ರುವಧಾದಿಕುತ್ಸಿತಕರ್ಮಕರ್ತಾ ಕುಷು ಸರ್ವಾಸು ಭೂಮಿಷು

**ಲೋಕತ್ರಯೇ ಸಂಚಾರೀ ವಾ ತಥಾ ಗಿರಿಷ್ಠಾ ಗಿರಿವದುಚ್ಛ್ರಿತಲೋಕಸ್ಥಾಯೀ । ಯದ್ವಾ । ಗಿರಿ ಮಂತ್ರಾದಿರೂಪಾಯಾಂ ವಾಚಿ ಸರ್ವದಾ ವರ್ತಮಾನಃ । ಈದೃಶೋಽಯಂ ಸ್ವಮಹಿಮ್ನಾ ಸ್ತೂಯತೇ । ಕಿಂಚ ಯಸ್ಯ ವಿಷ್ಣೋರುರುಷು ವಿಸ್ತೀರ್ಣೇಷು ತ್ರಿಸಂಖ್ಯಾಕೇಷು ವಿಕ್ರಮಣೇಷು ಪಾದಪ್ರಕ್ಷೇಪೇಷು ವಿಶ್ವಾ ಸರ್ವಾಣಿ ಭುವನಾನಿ ಭೂತಜಾತಾನ್ಯಧಿಕ್ಷಿಯಂತಿ ಆಶ್ರಿತ್ಯ ನಿವಸಂತಿ ಸ ವಿಷ್ಣುಃ ಸ್ತೂಯತೇ ॥**

ಪ್ರತಿಪದಾರ್ಥ

**ಯಸ್ಯ**—ಯಾವ ವಿಷ್ಣುವಿನ । **ಉರುಷು**—ಅತ್ಯಂತ ವಿಸ್ತಾರವಾದವೂ । **ತ್ರಿಷು**—ಮೂರು ಸಂಖ್ಯೆಗಳುಳ್ಳವೂ ಆದ । **ವಿಕ್ರಮಣೇಷು**—ಪಾದಗಳ ಪ್ರಕ್ಷೇಪಗಳಲ್ಲಿ । **ವಿಶ್ವಾ**—ಸಮಸ್ತವಾದ । **ಭುವನಾನಿ**—ಭೂತಜಾತಗಳೂ (ಅಥವಾ) ಸಕಲ ಪ್ರಪಂಚಗಳೂ । **ಅಧಿ ಕ್ಷಿಯಂತಿ**—ನೆಲೆಸಿ ನಿಂತಿವೆಯೋ । (ಮತ್ತು) **ಯಃ**—ಯಾವ ವಿಷ್ಣುವು । **ಮೃಗೋ ನ**—ಸಿಂಹಾದಿ ವನಮೃಗದಂತೆ । **ಭೀಮಃ**—(ಶತ್ರುಗಳಿಗೆ) ಭಯಂಕರನೂ । **ಕುಚರಃ**—(ಶತ್ರುಗಳನ್ನು) ನೀಚವಾದ ರೀತಿಯಲ್ಲಿ ಹಿಂಸಿಸುವವನೂ ಅಥವಾ ದುರ್ಗಮವಾದ ಪ್ರದೇಶಗಳಲ್ಲಿ ಸಂಚರಿಸುವವನೂ । **ಗಿರಿಷ್ಠಾಃ**—ಪರ್ವತಗಳ ಎತ್ತರವಾದ ಪ್ರದೇಶಗಳಲ್ಲಿ ಇರುವವನೂ । [ (ಅಥವಾ) **ಕುಚರಃ**—ಮೂರುಲೋಕಗಳಲ್ಲೂ ಸಂಚರಿಸುವವನೂ । **ಗಿರಿಷ್ಠಾಃ**—ಮಂತ್ರರೂಪಗಳಾದ ವಾಕ್ಕುಗಳಲ್ಲಿರುವವನೂ ಆಗಿರುವನೋ] । **ತದ್ವಿಷ್ಣುಃ**—ಅಂತಹ ವಿಷ್ಣುವು । **ವೀರ್ಯೇಣ**—(ತನ್ನ) ವೀರ್ಯಕರ್ಮಗಳೊಡನೆ । **ಪ್ರಸ್ತವತೇ**—ಉತ್ಕೃಷ್ಟವಾಗಿ ಹೊಗಳಲ್ಪಡುತ್ತಾನೆ.

ಭಾವಾರ್ಥ

ಯಾವ ವಿಷ್ಣುವಿನ ಅತ್ಯಂತ ವಿಸ್ತಾರವಾದವೂ ಮೂರು ಸಂಖ್ಯೆಗಳುಳ್ಳವೂ ಆದ ಪಾದಗಳ ಪ್ರಕ್ಷೇಪಗಳಲ್ಲಿ ಸಮಸ್ತವಾದ ಭೂತಜಾತಗಳೂ ನೆಲೆಸಿ ನಿಂತಿವೆಯೋ, ಮತ್ತು ಯಾವ ವಿಷ್ಣುವು ಸಿಂಹಾದಿ ವನಮೃಗದಂತೆ ಶತ್ರುಗಳಿಗೆ ಭಯಂಕರನೂ, ಶತ್ರುಗಳನ್ನು ಅತಿಯಾಗಿ ಹಿಂಸಿಸುವವನೂ ಮತ್ತು ಪರ್ವತಗಳ ಎತ್ತರವಾದ ಪ್ರದೇಶದಲ್ಲಿರುವವನೂ ಆಗಿರುವನೋ ಆ ವಿಷ್ಣುವು ತನ್ನ ವೀರ್ಯಕರ್ಮಗಳೊಡನೆ ವಿಶೇಷವಾಗಿ ಹೊಗಳಲ್ಪಡುತ್ತಾನೆ.

English Translation

Vishnu is therefore glorified, that by his prowess he is like a fearful, ravenous, and mountain-haunting wild beast, and because that in his three paces all worlds abide.

। ವಿಶೇಷವಿಷಯಗಳು ।

**ಮೃಗೋ ನ ಭೀಮಃ ಕುಚರೋ ಗಿರಿಷ್ಠಾಃ** । ಇಲ್ಲಿ ವಿಷ್ಣುವನ್ನು ಕುಚರವಾದುದೂ, ಗಿರಿಷ್ಠವಾದುದೂ ಆದ ಮೃಗಕ್ಕೆ ಹೋಲಿಸಿದೆ. **ಕುಚರ, ಗಿರಿಷ್ಠ** ಎಂಬ ಪದಗಳಿಗೆ ಎರಡು ವಿಧವಾದ ಅರ್ಥಗಳನ್ನು ಹೇಳಿದ್ದಾರೆ. ಮೊದಲನೆಯದಾಗಿ,

**ಕುಚರಃ—ಕುತ್ಸಿತಹಿಂಸಾದಿಕರ್ತಾ, ದುರ್ಗಮಪ್ರದೇಶಗಂತಾ ವಾ**-ಶತ್ರುಗಳನ್ನು ಬಹುವಾಗಿ ಹಿಂಸೆ ಮಾಡತಕ್ಕ ಅಥವಾ ಇತರರಿಂದ ಸಂಚರಿಸಲಸಾಧ್ಯವಾದ ದುರ್ಗಾದಿಗಳಲ್ಲಿ ಸಂಚರಿಸತಕ್ಕ ಎಂದು ಮೃಗಕ್ಕೆ ವಿಶೇಷಣ

ವಾಗಿದೆ. ನಿರುಕ್ತಕಾರರು ಇದೇ ವಾಕ್ಯವನ್ನುದಹರಿಸಿ ಈ ಪದಕ್ಕೆ ಈರೀತಿ ನಿರ್ವಚನವನ್ನು ತೋರಿಸಿದ್ದಾರೆ. **ಕುಚರ ಇತಿ ಚರತಿಕರ್ಮ ಕುತ್ಸಿತಂ । ಅಥ ಚೇದ್ದೇವತಾಭಿಧಾನಂ । ಕ್ವಾಯಂ ನ ಚರತೀತಿ** ।(ನಿ. ೧-೨೦) ಇದು ಮೃಗಕ್ಕೆ ವಿಶೇಷಣವಾದರೆ ವಕ್ರನಾಗಿ ಸಂಚರಿಸತಕ್ಕವನೆಂದರ್ಥ. ದೇವತಾಪರವಾಗಿ ಅರ್ಥಮಾಡಿದರೆ ಎಲ್ಲಿ ತಾನೇ ಸಂಚರಿಸಲಾರ ಎಂದರ್ಥವಾಗುತ್ತದೆ. ವಿಷ್ಣುವು ಸರ್ವವ್ಯಾಪಕನಾದುದರಿಂದ ಅವನ ಸಂಚಾರಕ್ಕೆ ಎಲ್ಲೂ ತಡೆಯಿರಲಾರದು. ಆದುದರಿಂದ ಈ ವಿಶೇಷಣವು ವಿಷ್ಣುವಿಗೆ ಅತ್ಯುಚಿತವಾಗಿದೆ.

ಗಿರಿಷ್ಠಾಃ—**ಗಿರಿಃ ಪರ್ವತಃ ಸಮುದ್ಗೀರ್ಣೋ ಭವತಿ** । ಊರ್ಧ್ವಮುಖವಾಗಿಯೂ ಎತ್ತರವಾಗಿಯೂ ಪ್ರಸರಿಸಿರುವುದರಿಂದ ಪರ್ವತಕ್ಕೆ ಗಿರಿ ಯೆಂಬ ಹೆಸರು. [ಮೇಘೋಽಪಿ ಗಿರಿರೇತಸ್ಮಾದೇವ–ಇದೇ ಕಾರಣದಿಂದ ಮೇಘಕ್ಕೂ ಗಿರಿಯೆಂದು ಹೆಸರು. ನಿ. ೧-೨೦] ಮೃಗವು **ಗಿರಿಸ್ಥಾಯಿ**ಯಾದುದರಿಂದ **ಗಿರಿಷ್ಠಾಃ** ಎಂಬ ವಿಶೇಷಣವಿದೆ. **ವಿಷ್ಣುವೂ** ಸಹ **ಕುಚರನೂ ಗಿರಿಷ್ಠನೂ** ಆಗಿರುವುದರಿಂದ ಮೃಗಕ್ಕೆ ಹೋಲಿಸಿದೆ. ಎರಡನೆಯದಾಗಿ—

**ಕುಷು ಸರ್ವಾಸು ಭೂಮಿಷು ಲೋಕತ್ರಯೇ ಸಂಚಾರೀ** । **ಕು** ಶಬ್ದಕ್ಕೆ **ಲೋಕ**ವೆಂದರ್ಥವಾಗುವುದರಿಂದ ಸಕಲಲೋಕದಲ್ಲಿಯೂ ಸಂಚರಿಸತಕ್ಕವನೆ ದೂ. ಗಿರಿಷ್ಠಃ—**ಮಂತ್ರಾದಿರೂಪಾಯಾಂ ವಾಚಿ ಸರ್ವದಾ ವರ್ತಮಾನಃ** ॥ **ಗೀರ್** ಶಬ್ದಕ್ಕೆ ಮಂತ್ರರೂಪವಾದ ವಾಕ್ಕೆಂದರ್ಥವಾಗುವುದರಿಂದಲೂ ವಿಷ್ಣುವು ಮಂತ್ರರೂಪವಾದ ವಾಕ್ಕಿನಲ್ಲಿ ಪ್ರತಿಷ್ಠಾಪಿತನಾಗಿರುವುದರಿಂದಲೂ ಗಿರಿಷ್ಠನೆಂದೂ ಸಹ ವಿವರಿಸಿದೆ.

**ಗಿರಿಷ್ಠಾಃ** ಎಂಬ ಪದವು ವಿಷ್ಣುವಿಗೆ ವಿಶೇಷಣವಾಗಿ ಇದೊಂದು ಋಕ್ಕಿನಲ್ಲಿ ಮಾತ್ರ ಉಪಯೋಗಿಸಿದೆ. ಉಳಿದೆಡೆಗಳಲ್ಲಿ ಈ ಪದವು ಸೋಮಲತೆಗೆ ವಿಶೇಷಣವಾಗಿರುವುದೇ ಹೆಚ್ಚು.

**ಪರಿ ಸುವಾನೋ ಗಿರಿಷ್ಠಾಃ ಪವಿತ್ರೇ ಸೋಮೋ ಅಕ್ಷಾಃ । ಮದೇಷು ಸರ್ವಧಾ ಅಸಿ ।**

(ಋ. ಸಂ. ೯-೧೮-೧)

ಇತ್ಯಾದಿ ಋಕ್ಕುಗಳಲ್ಲಿ **ಗಿರಿ** ಶಬ್ದಕ್ಕೆ ಸೋಮರಸವನ್ನು ಹಿಂಡುವ ಕಲ್ಲು ಎಂದರ್ಥಮಾಡಿ ಇಂತಹ ಗಿರಿಗಳ ಎಂದರೆ ರಸವನ್ನು ಹಿಂಡುವ ಕಲ್ಲುಗಳ ನಡುವೆ ಇರತಕ್ಕ ಸೋಮವೆಂದೂ,

**ಆಸಾವ್ಯಂಶುರ್ಮದಾಯಾಪ್ಸು ದಕ್ಷೋ ಗಿರಿಷ್ಠಾಃ । ಶ್ಯೇನೋ ನ ಯೋನಿಮಾಸದತ್** ॥

(ಋ. ಸಂ. ೯-೬೨-೪)

ಇತ್ಯಾದಿ ಕಡೆಗಳಲ್ಲಿ **ಗಿರಿ** ಶಬ್ದಕ್ಕೆ ಪರ್ವತವೆಂದರ್ಥಮಾಡಿ **ಪರ್ವತೇ ಜಾತಃ** ಇಂತಹ ಪರ್ವತದಲ್ಲಿ ಹುಟ್ಟಿದ ಸೋಮವೆಂದೂ ಅರ್ಥವಾಗಿದೆ. ಪ್ರಕೃತವಾದ ಋಕ್ಕಿನಲ್ಲಿ ಪರ್ವತಸ್ಥಾಯಿಯೆಂದಾಗಲಿ ಅಥವಾ **ಮೇಘೋಽಪಿ ಗಿರಿಃ** (ನಿ. ೧-೨೦) ಎಂದಿರುವುದರಿಂದ ಮೇಘಸ್ಥಾಯಿಯೆಂದಾಗಲಿ ಅರ್ಥವಾಗಿ **ವಿಷ್ಣು**ವಿಗೆ ವಿಶೇಷಣವಾಗಿದೆ.

ಮೃಗೋ ನ—**ಮೃಗೋ ಮಾರ್ಷ್ಟೇರ್ಗತಿಕರ್ಮಣಃ** । **ಮೃಗ ಅನ್ವೇಷಣೇ** ಎಂಬ ಗತ್ಯರ್ಥಕವಾದ **ಮೃಗ್** ಧಾತುವಿನಿಂದ ನಿಷ್ಪನ್ನವಾಗಿ ಸರ್ವದಾ ಸಂಚಾರಿಯೆಂಬರ್ಥವನ್ನು ಕೊಡುತ್ತದೆ.

ಭೀಮಃ—ಭೀತಿಜನಕಃ । ಭಯಂಕರನು. **ಮೃಗವದಯಮಪಿ ಮೃಗೋಽನ್ವೇಷ್ಟಾ ಶತ್ರೂಣಾಂ ಭೀಮೋ ಭಯಾನಕಃ ಸರ್ವೇಷಾಂ ಭೀತ್ಯಪಾದಾನಭೂತಃ** । ವನಚರವಾದ ಮೃಗವು ಇತರ ಪ್ರಾಣಿಗಳಿಗೆ

ಭೀತಿಜನಕನಾಗಿರುವಂತೆಯೂ ಮತ್ತು ತನ್ನ ಶತ್ರುಪ್ರಾಣಿಗಳನ್ನು ಹುಡುಕಿಕೊಂಡು ಸಂಚರಿಸುವಂತೆಯೂ **ವಿಷ್ಣುವೂ** ಸಹ ಶತ್ರುಗಳನ್ನು ಅನ್ವೇಷಣಮಾಡುವವನು ಮತ್ತು ಶತ್ರುಗಳಿಗೆ ಭಯಕಾರಕನು. ಕೇವಲ ಶತ್ರುಗಳು ಮಾತ್ರ ಇವನಿಗೆ ಭಯಪಡವೆ ಸಕಲಲೋಕಗಳೂ ಸಹ ಇವನಿಗೆ ಭಯಪಟ್ಟು ತಮ್ಮ ತಮ್ಮ ನಿಯಮವನ್ನು ಪಾಲಿಸುತ್ತವೆ.

**ಭೀಷಾಸ್ಮಾದ್ವಾತಃ ಪವತೇ । ಭೀಷೋದೇತಿ ಸೂರ್ಯಃ । ಭೀಷಾಸ್ಮಾದಗ್ನಿಶ್ಚೇಂದ್ರಶ್ಚ । ಮೃತ್ಯು-ರ್ಧಾವತಿ ಪಂಚಮ ಇತಿ ॥**

(ತೈ. ಆ. ೮-೮-೧)

ಇತ್ಯಾದಿ ವಾಕ್ಯಗಳಲ್ಲಿ **ವಾಯ್ವಾದಿ** ಸಕಲ ದೇವತೆಗಳೂ ಸಹ ಈ ವಿಶ್ವವ್ಯಾಪಕನಾದ ವಿಷ್ಣುವಿಗೆ ಭಯಪಟ್ಟು ತಮ್ಮ ತಮ್ಮ ನಿಯತವಾದ ಕರ್ತವ್ಯಗಳನ್ನು ಮಾಡುತ್ತಾರೆಂದು ವರ್ಣಿಸಿದೆ. ಅದೇ ಅಂಶವನ್ನು ಇಲ್ಲಿಯೂ ತಿಳಿಸಿದೆ.

**ತ್ರಿಷು ವಿಕ್ರಮಣೇಷು—ತ್ರಿಸಂಖ್ಯಾಕೇಷು ಪಾದಪ್ರಕ್ಷೇಪೇಷು**—ಮೂರು ವಿಧವಾದ ಪಾದಪ್ರಕ್ಷೇಪಗಳಲ್ಲಿ (ವಿಶ್ವಾ ಭುವನಾನಿ ಅಧಿಕ್ಷಿಯಂತಿ). ಈ ಮೂರು ವಿಧವಾದ ಪಾದಪ್ರಕ್ಷೇಪಗಳು ಯಾವುವು ? ಎಲ್ಲೆಲ್ಲಿ ಎಂಬ ವಿಷಯಗಳಲ್ಲಿ ವಿಪ್ರತಿಪತ್ತಿಯಿದೆ. ಪಾಶ್ಚಾತ್ಯಪಂಡಿತರು ಇದಕ್ಕೆ (ಸೂರ್ಯನ) ಉದಯ, ಉಚ್ಚಸ್ಥನಾಗಿರುವುದು. ಅಸ್ತ ಎಂಬ ಸೂರ್ಯನ ಮೂರು ಅವಸ್ಥೆಗಳೆಂದರ್ಥಮಾಡಿದ್ದಾರೆ.

This stepping of Vishnu is emblamatic of the rising, the culminating and setting of the sun.

[Max Muller. Sacred Books of the East. Vol. XXXII. p. 133]

**ಔರ್ಣವಾಭಾದಿ** ಪ್ರಾಚೀನಪಂಡಿತರೂ ಸಹ ಈ ಅರ್ಥವನ್ನು ಸಮರ್ಥಿಸಿದ್ದಾರೆಂದು ನಿರುಕ್ತವಾಕ್ಯದಿಂದ ತಿಳಿಯುತ್ತದೆ.

**ಸಮಾರೋಹಣೇ ವಿಷ್ಣುಪದೇ ಗಯಶಿರಸೀತ್ಯೌರ್ಣವಾಭಃ ।**

(ನಿ. ೧೨-೧೯)

ಎಂದು **ಔರ್ಣವಾಭರ** ಮತವನ್ನು ತಿಳಿಸಿದ್ದಾರೆ. ಈ ವಾಕ್ಯಕ್ಕೆ ದುರ್ಗಾಚಾರ್ಯರು **ಸಮಾರೋಹಣೇ—ಉದಯಗಿರಾವುದ್ಯನ್ ಪದಮೇಕಂ ನಿಧತ್ತೇ । ವಿಷ್ಣುಪದೇ ಮಾಧ್ಯಂದಿನೇಽಂತರಿಕ್ಷೇ । ಗಯಶಿರಸಿ—ಅಸ್ತಂಗಿರೌ ।** ಉದಯಾಚಲದಲ್ಲಿ ಸೂರ್ಯೋದಯಕಾಲದಲ್ಲಿ ಉದಯರೂಪದಲ್ಲಿಡತಕ್ಕ ಒಂದು ಪಾದವೂ, ಮಧ್ಯಾಹ್ನಕಾಲದಲ್ಲಿ ಅಂತರಿಕ್ಷದಲ್ಲಿ ಉಚ್ಚಸ್ಥವಾಗಿರತಕ್ಕ ಇನ್ನೊಂದು ಪಾದವೂ, ಅಸ್ತಕಾಲದಲ್ಲಿ ಅಸ್ತಾಚಲದಲ್ಲಿಡತಕ್ಕ ಮೂರನೆಯ ಪಾದವೂ ಸಹ **ತ್ರೇಧಾ ನಿದಧೇ ಪದಂ** ಎಂಬ ವಾಕ್ಯದಿಂದ ಸೂಚಿತವಾಗುತ್ತದೆಂದು ಔರ್ಣವಾಭರ ಮತವೆಂದು ನಿರುಕ್ತಕಾರರು ತಿಳಿಸಿದ್ದಾರೆ. ಅಲ್ಲದೇ,

**ವಿಷ್ಣುಸ್ತ್ರಿಧಾ ನಿಧತ್ತೇ ಪದಂ ತ್ರೇಧಾಭಾವಾಯ ಪೃಥಿವ್ಯಾಮಂತರಿಕ್ಷೇ ದಿವೀತಿ ಶಾಕಪೂಣಿಃ ।**

(ನಿ. ೧೨-೧೯)

**ಪೃಥಿವೀ, ಅಂತರಿಕ್ಷ** ಮತ್ತು **ದ್ಯುಲೋಕ** ಎಂಬ ಮೂರು ಲೋಕಗಳಲ್ಲೂ ಸಂಚರಿಸುವ ಸೂರ್ಯನ ಮೂರು ಅವಸ್ಥೆಗಳನ್ನು ಈ ಮೂರು ವಿಧವಾದ ಪಾದಪ್ರಕ್ಷೇಪವು ಸೂಚಿಸುತ್ತದೆ ಎಂಬುದು **ಶಾಕಪೂಣಿಯ** ಮತವೆಂದೂ ತಿಳಿಸಿದೆ.

ಇದಕ್ಕೆ ಮಹಾಭಾಷ್ಯದ ಪಾರ್ಥಿವೋಽಗ್ನಿರ್ಭೂತ್ವಾ ಪೃಥಿವ್ಯಾಂ ಯತ್ಕಿಂಚಿದಸ್ತಿ ತದ್ವಿಕ್ರಮತೇ । ಅಂತರಿಕ್ಷೇ ವಿದ್ಯುದಾತ್ಮನಾ, ದಿವಿ ಸೂರ್ಯಾತ್ಮನಾ । ಅಗ್ನಿ, ವಾಯು ಮತ್ತು ಸೂರ್ಯ ಈ ರೂಪಗಳಿಂದ ಮೂರು ಲೋಕಗಳನ್ನು ಆಕ್ರಮಿಸುತ್ತಾನೆಂದರ್ಥಮಾಡಿದ್ದಾರೆ. ಇದೇ ಅರ್ಥವನ್ನು ಸಮರ್ಥಿಸುವ,

> ವಿಷ್ಣುಮುಖಾ ವೈ ದೇವಾಶ್ಛಂದೋಭಿ ರಿಮಾಂಲ್ಲೋಕಾನನಪಜಯ್ಯಮಭ್ಯಜಯನ್ ಯದ್ವಿಷ್ಣುಕ್ರಮಾನ್ಕ್ರಮತೇ ವಿಷ್ಣುರೇವ ಭೂತ್ವಾ ಯಜಮಾನಶ್ಛಂದೋಭಿರಿಮಾಂಲ್ಲೋಕಾನನಪಜಯ್ಯಮಭಿಜಯತಿ ವಿಷ್ಣೋಃ ಕ್ರಮೋಽಸ್ಯಭಿಮಾತಿಹೇತ್ಯಾಹ ಗಾಯತ್ರೀ ವೈ ಪೃಥಿವೀ ತ್ರೈಷ್ಟುಭಮಂತರಿಕ್ಷಂ ಜಾಗತೀ ದ್ಯೌರಾನುಷ್ಟುಭೀರ್ದಿಶಶ್ಛಂದೋಭಿರೇವೇಮಾಂಲ್ಲೋಕಾನ್ ಯಥಾಪೂರ್ವಮಭಿ ಜಯತಿ ।
>
> (ತೈ. ಸಂ. ೧-೭-೫-೪)

> ಅನ್ಯಾ ದೇವತಾಸೀಭ್ಯೋಽಬ್ರವೀದ್ವಿಷ್ಣವೇಹೀದಮಾ ಹರಿಷ್ಯಾವೋ ಯೇನಾಯಮಿದಮಿತಿ ಸ ವಿಷ್ಣುಸ್ತ್ರೇಧಾತ್ಮಾನಂ ವಿ ನ್ಯಧತ್ತ ಪೃಥಿವ್ಯಾಂ ತೃತೀಯಮಂತರಿಕ್ಷೇ ತೃತೀಯಂ ದಿವಿ ತೃತೀಯಮಭಿಪರ್ಯಾವರ್ತಾದ್ಧ್ಯಬಿಭೇದ್ಯತ್ಪೃಥಿವ್ಯಾಂ ತೃತೀಯಮಾಸೀತ್ತೇನೇಂದ್ರೋ ವಜ್ರಮುದಯಚ್ಛದ್ವಿಷ್ಣ್ವನುಸ್ಥಿತಸ್ಸೋಽಬ್ರವೀನ್ಮಾ ಮೇ ಪ್ರ ಹಾರಸ್ತಿ ವಾ ಇದಂ ॥
>
> (ತೈ. ಸಂ. ೨-೪-೧೨-೩)

ಇತ್ಯಾದಿ ಸಂಹಿತಾವಾಕ್ಯಗಳಲ್ಲಿಯೂ,

> ಯದ್ವೇವ ವಿಷ್ಣುಕ್ರಮಾನ್ಕ್ರಮತೇ । ಯಜ್ಞೋ ವೈ ವಿಷ್ಣುಃ ಸ ದೇವೇಭ್ಯ ಇಮಾಂ ವಿಕ್ರಾಂತಿಂ ವಿಚಕ್ರಮೇ ಯೈಷಾಮಿಯಂ ವಿಕ್ರಾಂತಿರಿದಮೇವ ಪ್ರಥಮೇನ ಪದೇನ ಪಸ್ಪಾರಾಥೇದಮಂತರಿಕ್ಷಂ ದ್ವಿತೀಯೇನ ದಿವಮುತ್ತಮೇನೈತಾಮ್ವೇವೈಷ ಏತಸ್ಮೈ ವಿಷ್ಣುರ್ಯಜ್ಞಂ ವಿಕ್ರಾಂತಿಂ ವಿಕ್ರಮತೇ ತಸ್ಮಾದ್ವಿಷ್ಣುಕ್ರಮಾನ್ಕ್ರಮತೇ ।
>
> (ಶ. ಬ್ರಾ. ೧-೯-೩-೯)

> ಯದ್ವೇವ ವಿಷ್ಣುಕ್ರಮವಾತ್ಸಪ್ರೇ ಭವತಃ । ವಿಷ್ಣುಕ್ರಮೈರ್ವೈ ಪ್ರಜಾಪತಿರಿಮಂ ಲೋಕಮಸೃಜತ ವಾತ್ಸಪ್ರೇಣಾಗ್ನಿಂ ವಿಷ್ಣುಕ್ರಮೈರ್ವೈ ಪ್ರಜಾಪತಿರಂತರಿಕ್ಷಮಸೃಜತ ವಾತ್ಸಪ್ರೇಣ ವಾಯುಂ ವಿಷ್ಣುಕ್ರಮೈರ್ವೈ ಪ್ರಜಾಪತಿರ್ದಿವಮಸೃಜತ ವಾತ್ಸಪ್ರೇಣಾದಿತ್ಯಂ ।
>
> (ಶ. ಬ್ರಾ. ೬-೭-೪-೭)

ಇತ್ಯಾದಿಬ್ರಾಹ್ಮಣವಾಕ್ಯಗಳಲ್ಲೂ ಪಹ ಶಾಕಪೂಣಿಯವರ ಮತದಂತೆ ವಿಷ್ಣುವಿನ ಮೂರುಪಾದಗಳಿಗೂ, ಪೃಥಿವೀ, ಅಂತರಿಕ್ಷ ಮತ್ತು ದ್ಯುಲೋಕಗಳಿಗೂ, ಅಗ್ನಿ, ವಾಯು, ಮತ್ತು ಸೂರ್ಯ ಈ ದೇವತೆಗಳಿಗೂ ಸಂಬಂಧವನ್ನು ತೋರಿಸಿದೆ. ಮತ್ತು

> ಆ ಯೋ ವಿವಾಯ ಸಚಥಾಯ ದೈವ್ಯ ಇಂದ್ರಾಯ ವಿಷ್ಣುಃ ಸುಕೃತೇ ಸುಕೃತ್ತರಃ ।
> ವೇಧಾ ಅಜಿನ್ವತ್ತ್ರಿಷಧಸ್ಥ ಆರ್ಯಮೃತಸ್ಯ ಭಾಗೇ ಯಜಮಾನಮಾಭಜತ್ ॥
>
> (ಋ. ಸಂ. ೧-೧೫೬-೫)

ಎಂಬ ಋಕ್ಕಿನಲ್ಲಿ ವಿಷ್ಣುವೇ ಕ್ಷಿತ್ಯಾದಿಮೂರು ಲೋಕಗಳನ್ನೂ ಆಕ್ರಮಿಸುತ್ತಾನೆಂದೂ ಹೇಳಿದೆ. ಮೇಲೆ ಉವಹರಿಸಿರುವ ಶತಪಥಬ್ರಾಹ್ಮಣದ ೬-೭-೪-೭ ನೇ ಮಂತ್ರದಲ್ಲಿ ಉಕ್ತವಾಗಿರುವಂತೆ ವಿಷ್ಣುವಿನ ಪಾದತ್ರಯವೇ ಕ್ಷಿತ್ಯಾದಿ ಲೋಕಗಳ ಸೃಷ್ಟಿಗೂ ಸ್ಥಿತಿಗೂ ಹೇತುವಾಗಿರುವುದು ಎಂಬ ಅಂಶವನ್ನು ಪ್ರಕೃತವಾದ ಋಕ್ಕಿನಲ್ಲಿ **ಅಧಿಕ್ಷಿಯಂತಿ ಭುವನಾನಿ ವಿಶ್ವಾ ।** ಸಕಲ ಲೋಕಗಳಿಗೂ ವಿಷ್ಣುವಿನ ಮೂರು **ವಿಕ್ರಮಗಳ** ರೂಪದಲ್ಲಿರುವ ಆಧಾರವನ್ನು ಆಶ್ರಯಿಸಿವೆ ಎಂದು ವಿಷ್ಣುವಿಕ್ರಮಗಳ ಮಹತ್ತ್ವವನ್ನು ಸ್ತುತಿಸಿದೆ.

### ವ್ಯಾಕರಣಪ್ರಕ್ರಿಯಾ

**ಸ್ತವತೇ**—ಷ್ಟುಇ್ ಸ್ತುತೌ ಧಾತು. ಕರ್ಮಣಿಯಲ್ಲಿ ಲಟ್ ಪ್ರಥಮಪುರುಷಏಕವಚನದಲ್ಲಿ ತ ಪ್ರತ್ಯಯ. ಟಿಗೆ ಏತ್ವ. **ವ್ಯತ್ಯಯೋ ಬಹುಲಮ್** ಎಂಬುದರಿಂದ ಯಕಿಗೆ ಬದಲಾಗಿ ಶಪ್ ವಿಕರಣ ಬರುತ್ತದೆ. **ಸಾರ್ವಧಾತುಕಾರ್ಧಧಾತುಕಯೋಃ** ಎಂಬುದರಿಂದ ಇಕಿಗೆ ಗುಣ. ಅವಾದೇಶ. ತಿಙಂತನಿಘಾತಸ್ವರ ಬರುತ್ತದೆ.

**ಭೀಮಃ—ಭೀಮಾದಯೋ ಅಪಾದಾನೇ** (ಪಾ. ಸೂ. ೩-೪-೭೪) ಎಂಬುದರಿಂದ ಔಣಾದಿಕ ಮಕ್ ಪ್ರತ್ಯಯದಿಂದ ಸಿದ್ಧವಾಗುತ್ತದೆ.

**ಕುಚರಃ**—ಕುತ್ಸಿತಂ ಚರತೀತಿ ಕುಚರಃ ಚರ ಗತಿಭಕ್ಷಣಯೋಃ ಪಚಾದಿಯಲ್ಲಿ ಸೇರಿರುವುದರಿಂದ ಅಚ್ ಪ್ರತ್ಯಯ. ಚಿತ್ತಾದುದರಿಂದ ಅಂತೋದಾತ್ತಸ್ವರ ಬರುತ್ತದೆ. ಕುಷು ಚರತೀತಿ ವಾ ಕುಚರಃ,

**ಗಿರಿಷ್ಠಾಃ**—ಷ್ಠಾ. ಗತಿನಿವೃತ್ತೌ ಧಾತು **ಕ್ವಿಪ್ ಚ** ಎಂಬುದರಿಂದ ಇದಕ್ಕೆ ಕ್ವಿಪ್ ಪ್ರತ್ಯಯ. ಗಿರೌ ತಿಷ್ಠತಿ ಇತಿ ಗಿರಿಷ್ಠಾಃ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

**ವಿಕ್ರಮಣೇಷು**—ಕ್ರಮು ಪಾದವಿಕ್ಷೇಪೇ ಧಾತು. ಭಾವಾರ್ಥದಲ್ಲಿ ಲ್ಯುಟ್ ಪ್ರತ್ಯಯ **ಯುವೋರನಾಕೌ** (ಪಾ. ಸೂ ೭-೧-೧) ಎಂಬುದರಿಂದ ಅದಕ್ಕೆ ಅನಾದೇಶ. **ಅಟ್ ಕುಪ್ವಾಙ್**—ಸೂತ್ರದಿಂದ ಪ್ರತ್ಯಯ ನಕಾರಕ್ಕೆ ಣತ್ವ. **ಲಿತಿ** (ಪಾ. ಸೂ ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ. ಪ್ರಾದಿಸಮಾಸವಾದಾಗ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

**ಅಧಿಕ್ಷಿಯಂತಿ**—ಕ್ಷಿ ನಿವಾಸಗತ್ಯೋಃ ಧಾತು ತುದಾದಿ. ಲಟ್ ಪ್ರಥಮಪುರುಷಬಹುವಚನಾಂತರೂಪ ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ವಿಕರಣಸ್ವರ ಉಳಿಯುತ್ತದೆ. ಉದಾತ್ತವುಳ್ಳ ತಿಙಂತ ಪರವಾದುದರಿಂದ **ತಿಙಿಚೋದಾತ್ತವತಿ** (ಪಾ. ಸೂ ೮-೧-೭೧) ಎಂಬುದರಿಂದ ಗತಿಗೆ (ಅಧಿ) ನಿಘಾತಸ್ವರ ಬರುತ್ತದೆ.

**ವಿಶ್ವಾ**—ನಪುಂಸಕದಲ್ಲಿ ಶಿ ಆದೇಶ ಬಂದು ರೂಪವಾದಾಗ **ಶೇಶ್ಛಂದಸಿ ಬಹುಲಂ** (ಪಾ. ಸೂ ೬-೧-೭೦) ಎಂಬುದರಿಂದ ಶಿಗೆ ಲೋಪ. ॥ ೨ ॥

———:o:———

ಸಂಹಿತಾಪಾಠಃ

ಪ್ರ ವಿಷ್ಣವೇ ಶೂಷಮೇತು ಮನ್ಮ ಗಿರಿಕ್ಷಿತ ಉರುಗಾಯಾಯ ವೃಷ್ಣೇ ।
ಯ ಇದಂ ದೀರ್ಘಂ ಪ್ರಯತಂ ಸಧಸ್ಥಮೇಕೋ ವಿಮಮೇ ತ್ರಿಭಿರಿತ್ಪದೇಭಿಃ ।
॥ ೩ ॥

ಪದಪಾಠಃ

ಪ್ರ । ವಿಷ್ಣವೇ । ಶೂಷಂ । ಏತು । ಮನ್ಮ । ಗಿರಿಽಕ್ಷಿತೇ । ಉರುಽಗಾಯಾಯ । ವೃಷ್ಣೇ ।
ಯಃ । ಇದಂ । ದೀರ್ಘಂ । ಪ್ರಽಯತಂ । ಸಧಽಸ್ಥಂ । ಏಕಃ । ವಿಽಮಮೇ । ತ್ರಿಽಭಿಃ । ಇತ್ । ಪದೇಭಿಃ ।
॥ ೩ ॥

। ಸಾಯಣಭಾಷ್ಯಂ ॥

ವಿಷ್ಣವೇ ಸರ್ವವ್ಯಾಪಕಾಯ ಶೂಷಮುಸ್ಮತ್ಕೃತ್ಯಾದಿಜನ್ಯಂ ಬಲಂ ಮಹತ್ತ್ವಂ ಮನ್ಮ ಮನನಂ ಸ್ತೋತ್ರಂ ಮನನೀಯಂ ಶೂಷಂ ಬಲಂ ವಾ ವಿಷ್ಣುಮೇತು । ಪ್ರಾಪ್ನೋತು ॥ ಕರ್ಮಣಃ ಸಂಪ್ರದಾನತ್ವಾಚ್ಚತುರ್ಥೀ । ಕೀದೃಶಾಯ । ಗಿರಿಕ್ಷಿತೇ ವಾಚಿ ಗಿರಿವದುನ್ನತಪ್ರದೇಶೇ ವಾ ತಿಷ್ಠತೇ ಉರುಗಾಯಾಯ ಬಹುಭಿರ್ಗೀಯಮಾನಾಯ ವೃಷ್ಣೇ ವರ್ಷಿತ್ರೇ ಕಾಮಾನಾಂ । ಏವಂ ಮಹಾನುಭಾವಂ ಶೂಷಂ ಪ್ರಾಪ್ನೋತು । ಕೋಽಸ್ಯ ವಿಶೇಷ ಇತಿ ಉಚ್ಯತೇ। ಯೋ ವಿಷ್ಣುರಿದಂ ಪ್ರಸಿದ್ಧಂ ದೃಶ್ಯಮಾನಂ ದೀರ್ಘಮತಿವಿಸ್ತೃತಂ ಪ್ರಯತಂ ನಿಯತಂ ಸಧಸ್ಥಂ ಸಹಸ್ಥಾನಂ ಲೋಕತ್ರಯಮೇಕ ಇದೇಕ ಏವಾದ್ವಿತೀಯಃ ಸನ್ ತ್ರಿಭಿಃ ಪದೇಭಿಃ ಪಾದೈರ್ವಿಮಮೇ ವಿಶೇಷೇಣ ನಿರ್ಮಿತವಾನ್ ॥

ಪ್ರತಿಪದಾರ್ಥ

ಯಃ— ಯಾವ ವಿಷ್ಣುವು । ಇದಂ—ಪ್ರಸಿದ್ಧವಾಗಿ ಗೋಚರವಾಗತಕ್ಕ । ದೀರ್ಘಂ—ಅತಿವಿಸ್ತಾರವಾದುದೂ । ಪ್ರಯತಂ—ದೀರ್ಘಕಾಲವಿರತಕ್ಕದ್ದೂ । ಸಧಸ್ಥಂ—ಒಟ್ಟಿಗೆ ಸೇರಿಕೊಂಡು ಇರುವುದೂ ಆದ ಮೂರು ಲೋಕಗಳನ್ನೂ । ಏಕ ಇತ್—(ಯಾರ ಸಹಾಯವೂ ಇಲ್ಲದೆ) ಒಬ್ಬನೇನೆ । ತ್ರಿಭಿಃ ಪದೇಭಿಃ—ಮೂರು ಪಾದಗಳಿಂದ । ವಿಮಮೇ—ನಿರ್ಮಿಸಿದನೋ ಅಂತಹ । ಗಿರಿಕ್ಷಿತೇ—ಸ್ತೋತ್ರರೂಪವಾದ ವಾಕ್ಕಿನಲ್ಲಿರುವವನೂ ಅಥವಾ ಗಿರಿಯಂತೆ ಉನ್ನತಪ್ರದೇಶದಲ್ಲಿರುವವನೂ । ಉರುಗಾಯಾಯ—ಅನೇಕರಿಂದ ಸ್ತುತಿಸಲ್ಪಡುವವನೂ । ವೃಷ್ಣೇ—(ಇಷ್ಟಾರ್ಥಗಳನ್ನು) ಸುರಿಸುವವನೂ ಆದ । ವಿಷ್ಣವೇ—ವಿಷ್ಣುವನ್ನು । ಶೂಷಂ—ಮಹತ್ತಾದ ಬಲವೂ । ಮನ್ಮ—ಮನನೀಯವಾದ ಸ್ತೋತ್ರವೂ । ಏತು—ಸಮೀಪಿಸಿ ಸೇರಿಕೊಳ್ಳಲಿ. (ವಿಷ್ಣುವಿಗೆ ಅರ್ಪಿತವಾಗಲಿ) ।

ಭಾವಾರ್ಥ

ಯಾವ ವಿಷ್ಣುವು ಪ್ರಸಿದ್ಧವಾಗಿ ಗೋಚರವಾಗತಕ್ಕ ಅತಿವಿಸ್ತಾರವಾದುದೂ, ದೀರ್ಘಕಾಲವಿರತಕ್ಕದ್ದೂ, ಒಟ್ಟಿಗೆ ಸೇರಿಕೊಂಡು ಇರುವುದೂ ಆದ ಮೂರುಲೋಕಗಳನ್ನೂ ಸಹ ಯಾರ ಸಹಾಯವೂ ಇಲ್ಲದೆ ಒಬ್ಬನೇ ಅದ್ವಿತೀಯನಾಗಿ ತನ್ನ ಮೂರು ಪಾದಗಳಿಂದ ನಿರ್ಮಿಸಿದನೋ ಅಂತಹ ವಿಷ್ಣುವಿಗೆ ಮಹತ್ತಾದ ಬಲವೂ,, ಮನನೀಯವಾದ ಸ್ತೋತ್ರವೂ ಅರ್ಪಿತವಾಗಲಿ.

English Translation

May acceptable vigour attend Vishnu, who abides in prayer, the hymned of many, the showerer (of benefits), who alone made, by three steps this spacious and durable aggregate (of the three worlds).

॥ ವಿಶೇಷವಿಷಯಗಳು ॥

**ಶೂಷಂ—ಅಸ್ಮತ್ಕೃತ್ಯಾದಿಜನ್ಯಂ ಬಲಂ ಮಹತ್ತ್ವಂ ।** ನಮ್ಮ (ಯಜ್ಞಕರ್ತರ) ಯಾಗಾದಿಕರ್ಮಜನ್ಯವಾದ ಬಲವೆಂದರ್ಥ. **ಶೂಷ**ಶಬ್ದವು **ಓಜಃ, ಪಾಜಃ** ಇತ್ಯಾದಿ ಬಲನಾಮಗಳಲ್ಲಿಯೂ ( ನಿ. ೩-೯ ), **ಶಿಂಬಾತಾ, ಶತರಾ,** ಇತ್ಯಾದಿ **ಸುಖನಾಮ**ಗಳಲ್ಲೂ (ನಿ. ೩-೧೩) ಪಠಿತವಾಗಿದೆ. ಋಕ್ಸಂಹಿತೆಯಲ್ಲಿ ಈ ಎರಡರ್ಥಗಳಲ್ಲಿಯೂ ಈ ಪದದ ಪ್ರಯೋಗವಿದೆ.

**ಸುತೇಸುತೇ ನ್ಯೋಕಸೇ ಬೃಹದ್ಬೃಹತ ಏದರಿಃ । ಇಂದ್ರಾಯ ಶೂಷಮರ್ಚತಿ ॥**

(ಋ. ಸಂ. ೧-೯-೧೦)

ಎಂಬ ಋಕ್ಕಿನಲ್ಲಿ **ಇಂದ್ರಸ್ಯ ಬಲಂ ಪರಾಕ್ರಮಂ ಸ್ತೌತಿ** ಇಂದ್ರನ ಪರಾಕ್ರಮವನ್ನು ಸ್ತುತಿಸುತ್ತಾನೆ ಎಂದು **ಶೂಷ**ಪದಕ್ಕೆ ಬಲವೆಂದೂ,

**ಪ್ರ ಮನ್ಮಹೇ ಶವಸಾನಾಯ ಶೂಷಮಾಂಗೂಷಂ ಗಿರ್ವಣಸೇ ಅಂಗಿರಸ್ವತ್ ।**
**ಸುವೃಕ್ತಿಭಿಃ ಸ್ತುವತ ಋಗ್ಮಿಯಾಯಾರ್ಚಾಮಾರ್ಕಂ ನರೇ ವಿಶ್ರುತಾಯ ॥**

(ಋ. ಸಂ. ೧-೬೨-೧)

ಎಂಬಲ್ಲಿ **ಶೂಷಂ ಆಂಗೂಷಂ,** ಸುಖಹೇತುಭೂತವಾದ ಸ್ತೋತ್ರವನ್ನು ಎಂದು **ಶೂಷ**ಶಬ್ದಕ್ಕೆ **ಸುಖ**ವೆಂದೂ ಅರ್ಥಮಾಡಿದೆ. ಪ್ರಕೃತವಾದ ಋಕ್ಕಿನಲ್ಲಿ ಬಲವೆಂದು ಅರ್ಥಮಾಡಿದೆ.

**ಮನ್ಮ—ಮನನೀಯಂ ।** ಧ್ಯಾನಾತ್ಮಕವಾದುದು. **ಮನನೀಯಂ ಸ್ತೋತ್ರಂ ಮನನೀಯಂ ಶೂಷಂ ವಾ ।** ಸ್ತೋತ್ರಕ್ಕಾಗಲಿ ಅಥವಾ **ಶೂಷ**ಕ್ಕಾಗಲಿ ವಿಶೇಷಣವಾಗಿರಬಹುದು

**ಪ್ರಯುತಂ—ಯಮ್** ಧಾತುವಿಗೆ **ಪ್ರ** ಎಂಬ ಉಪಸರ್ಗವು ಸೇರಿದರೆ **ವಿಸ್ತೃತಂ, ದತ್ತಂ, ನಿಯತಂ ।** ವಿಸ್ತಾರವಾಗಿರುವುದು, ಕೊಡಲ್ಪಟ್ಟಿರುವುದು ಮತ್ತು ನಿಯತವಾಗಿರತಕ್ಕದ್ದು ಎಂಬ ಅರ್ಥಗಳಾಗುತ್ತವೆ. ಪ್ರಕೃತವಾದ ಋಕ್ಕಿನಲ್ಲಿ **ನಿಯತಂ** ಎಂಬರ್ಥವನ್ನಾಡಿದೆ. ಇದು **ಸಧಸ್ಥಂ** ಎಂಬ ಪದಕ್ಕೆ ವಿಶೇಷಣವಾಗಿರುವುದರಿಂದ

ನಿಯಮದಿಂದ ಮನುಷ್ಯರೆಲ್ಲರಿಗೋಸ್ಕರವೂ ಸಹಸ್ಥಾನವಾಗಿರತಕ್ಕವೂ ಆದ ಮೂರು ಲೋಕಗಳ ಸಮೂಹವೆಂದು ತೋರಿಸುತ್ತದೆ.

ಗಿರಿಕ್ಷಿತೇ—ವಾಚಿ ಗಿರಿವದುನ್ನತದೇಶೇ ವಾ ತಿಷ್ಠತೇ । ಮಂತ್ರರೂಪವಾದ ವಾಕ್ಕಿನಲ್ಲಿ ಪ್ರತಿಷ್ಠಿತನೆಂದಾಗಲಿ ಅಥವಾ ಪರ್ವತದಂತೆ ಉನ್ನತವಾದ ಪ್ರದೇಶದಲ್ಲಿರುವವನೆಂದಾಗಲಿ ಅರ್ಥವಾಗಿ ವಿಷ್ಣವೇ ಎಂಬ ಪದಕ್ಕೆ ವಿಶೇಷಣವಾಗಿದೆ.

ಏಕ ಇತ್ ತ್ರಿಭಿಃ ಪದೇಭಿಃ ವಿಮಮೇ—ಅದ್ವಿತೀಯನಾಗಿ ಎಂದರೆ ಇತರರ ಸಹಾಯವಿಲ್ಲದೇ ತಾನೊಬ್ಬನೇ ತನ್ನ ಮೂರು ಪಾದಗಳಿಂದ ಸಮಸ್ತ ಲೋಕಗಳನ್ನು ಸೃಷ್ಟಿಸಿದನೆಂದು ತಾತ್ಪರ್ಯ. **ವಿಮಮೇ—ವಿಶೇಷೇಣ ನಿರ್ಮಮೇ** ಅತಿಶಯವಾದ ರೀತಿಯಲ್ಲಿ ನಿರ್ಮಿಸಿದನೆಂದರ್ಥ.

ವ್ಯಾಕರಣಪ್ರಕ್ರಿಯಾ

**ಏತು**—ಇಣ್ ಗತೌ ಧಾತು. ಲೋಟ್ ಮಧ್ಯಮಪುರುಷಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ವಿಷ್ಣವೇ**—ಕರ್ಮಕ್ಕೆ ಸಂಪ್ರದಾನತ್ವ ಬರುವುದರಿಂದ **ಸಂಪ್ರದಾನೇ ಚತುರ್ಥೀ** ಎಂಬುದರಿಂದ ಚತುರ್ಥೀ ಬಂದಿದೆ.

ಮನ್ಮ—ಮನ ಜ್ಞಾನೇ. ಸರ್ವಧಾತುಭ್ಯೋ ಮನ್ ಎಂಬುದರಿಂದ ಮನ್ ಪ್ರತ್ಯಯ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

ಗಿರಿಕ್ಷಿತೇ—ಕ್ಷಿ ನಿವಾಸಗತ್ಯೋಃ ಧಾತು. ಕ್ವಿಪ್ ಚ ಎಂಬುದರಿಂದ ಕ್ವಿಪ್ ಪ್ರತ್ಯಯ. ಹ್ರಸ್ವಸ್ಯ ಪಿತಿ ಕೃತಿ **ತುಕ್** (ಪಾ. ಸೂ. ೬-೧-೭೧) ಎಂಬುದರಿಂದ ತುಕಾಗಮ. ಪ್ರಥಮವ್ಯಾಖ್ಯಾನದಲ್ಲಿ **ತತ್ಪುರುಷೇ ಕೃತಿ ಬಹುಲಂ** ಎಂಬುದರಿಂದ ಸಪ್ತಮಿಗೆ ಅಲುಕ್. ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

ವೃಷ್ಣೇ—ವೃಷು ಸೇಚನೇ ಧಾತು. **ಕನಿನ್ ಯುವೃಷಿ-**(ಉ. ಸೂ. ೧-೧೫೪) ಎಂಬುದರಿಂದ ಕನಿನ್ ಪ್ರತ್ಯಯ. ಞ್ನಿತ್ಯಾದಿರ್ನಿತ್ಯಮ್ ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಚತುರ್ಥೀಏಕವಚನದಲ್ಲಿ ಅಲ್ಲೋಪೋಽನಃ ಎಂಬುದರಿಂದ ಅನಿನ ಅಕಾರಕ್ಕೆ ಲೋಪ.

ಪ್ರಯತಮ್—ಯಮು ಉಪರಮೇ ಧಾತು. ಕ್ತ ಪ್ರತ್ಯಯ. **ಅನುದಾತ್ತೋಪದೇಶವನತಿ-**(ಪಾ. ಸೂ. ೬-೪-೩೭) ಎಂಬುದರಿಂದ ಅನುನಾಸಿಕ ಮಕಾರಕ್ಕೆ ಲೋಪ. **ಗತಿರನಂತರಃ**-(ಪಾ. ಸೂ. ೬-೨-೪೯) ಎಂಬುದರಿಂದ ಗತಿಗೆ (ಪ್ರ) ಪ್ರಕೃತಿಸ್ವರ ಬರುತ್ತದೆ.

ವಿಮಮೇ, ಸಧಸ್ಥಮ್—ಇದೇ ಸೂಕ್ತದ ಮೊದಲನೇ ಮಂತ್ರದಲ್ಲಿ ವ್ಯಾಖ್ಯಾತವಾಗಿದೆ.

ಪದೇಭಿಃ—ಬಹುಲಂ ಛಂದಸಿ ಎಂಬುದರಿಂದ ಭಿಸಿಗೆ ಐಸ್ ಭಾವ ವಿಕಲ್ಪವಾದುದರಿಂದ ಇಲ್ಲಿ ಬರುವುದಿಲ್ಲ. ಬಹುವಚನೇ ಝಲ್ಯೇತ್ ಎಂಬುದರಿಂದ ಏತ್ವ. || ೩ ||

———— :o: ————

ಸಂಹಿತಾಪಾಠಃ

ಯಸ್ಯ ತ್ರೀ ಪೂರ್ಣಾ ಮಧುನಾ ಪದಾನ್ಯಕ್ಷೀಯಮಾಣಾ ಸ್ವಧಯಾ ಮದಂತಿ ।

ಯ ಉ ತ್ರಿಧಾತು ಪೃಥಿವೀಮುತ ದ್ಯಾಮೇಕೋ ದಾಧಾರ ಭುವನಾನಿ ವಿಶ್ವಾ ॥ ೪ ॥

। ಪದಪಾಠಃ ।

ಯಸ್ಯ । ತ್ರೀ । ಪೂರ್ಣಾ । ಮಧುನಾ । ಪದಾನಿ । ಅಕ್ಷೀಯಮಾಣಾ । ಸ್ವಧಯಾ । ಮದಂತಿ ।

ಯಃ । ಊಂ ಇತಿ । ತ್ರಿऽಧಾತು । ಪೃಥಿವೀಂ । ಉತ । ದ್ಯಾಂ । ಏಕಃ । ದಾಧಾರ । ಭುವನಾನಿ । ವಿಶ್ವಾ । ॥ ೪ ॥

ಸಾಯಣಭಾಷ್ಯಂ

ಯಸ್ಯ ವಿಷ್ಣೋರ್ಮಧುನಾ ಮಧುರೇಣ ದಿವ್ಯೇನಾಮೃತೇನ ಪೂರ್ಣಾ ಪೂರ್ಣಾನಿ ತ್ರೀಣಿ ಪದಾನಿ ಪಾದಪ್ರಕ್ಷೇಪಣಾನ್ಯಕ್ಷೀಯಮಾಣಾಕ್ಷೀಯಮಾಣಾನಿ ಸ್ವಧಯಾನ್ನೇನ ಮದಂತಿ ಮಾದಯಂತಿ ತದಾಶ್ರಿತ-ಜನಾನ್ । ಯ ಉ ಯ ಏವ ಪೃಥಿವೀಂ ಪ್ರಖ್ಯಾತಾಂ ಭೂಮಿಂ ದ್ಯಾಮುತ ದ್ಯೋತನಾತ್ಮಕಮಂತರಿಕ್ಷಂ ಚ ವಿಶ್ವಾ ಭುವನಾನಿ ಸರ್ವಾಣಿ ಭೂತಜಾತಾನಿ ಚತುರ್ದಶ ಲೋಕಾಂಶ್ಚ । ಯದ್ವಾ । ಪೃಥಿವೀಶಬ್ದೇ-ನಾಧೋವರ್ತೀನ್ಯತಲವಿತಲಾದಿಸಪ್ತಭುವನಾನ್ಯುಪಾತ್ತಾನಿ । ದ್ಯುಶಬ್ದೇನ ತದವಾಂತರರೂಪಾಣಿ ಭೂರಾದಿ ಸಪ್ತಭುವನಾನಿ। ಏವಂ ಚತುರ್ದಶ ಲೋಕಾನ್ ವಿಶ್ವಾ ಭುವನಾನಿ ಸರ್ವಾಣ್ಯಪಿ ತತ್ರತ್ಯಾನಿ ಭೂತಜಾತಾನಿ। ತ್ರಿಧಾತು। ತ್ರಯಾಣಾಂ ಧಾತೂನಾಂ ಸಮಾಹಾರಸ್ತ್ರಿಧಾತು । ಪೃಥಿವ್ಯಪ್ತೇಜೋರೂಪಧಾತುತ್ರಯ-ವಿಶಿಷ್ಟಂ ಯಥಾ ಭವತಿ ತಥಾ ದಾಧಾರ । ಧೃತವಾನ್ ॥ ತುಜಾದಿತ್ವಾದಭ್ಯಾಸಸ್ಯ ದೀರ್ಘತ್ವಂ । ಉತ್ಪಾದಿ-ತವಾನಿತ್ಯರ್ಥಃ । ಛಂದೋಗಾರಣ್ಯಕೇ । ತತ್ತೇಜೋऽಸೃಜತ ತದನ್ನಮಸೃಜತ ತಾ ಆಪ ಐಕ್ಷಂತೇತಿ ಭೂತತ್ರಯಸೃಷ್ಟಿಮುಕ್ತ್ವಾ ಹಂತಾಹಮಿಮಾಸ್ತಿಸ್ರೋ ದೇವತಾಸ್ತಾಸಾಂ ತ್ರಿವೃತಂ ತ್ರಿವೃತಮೇಕೈಕಾಂ ಕರವಾಣೀತ್ಯಾದಿನಾ ತ್ರಿವೃತ್ಕರಣಸೃಷ್ಟಿರುಪಪಾದಿತಾ । ಛಾ. ಉ. ೬-೨-೩ ; ೬-೩-೩ । ಯದ್ವಾ। ತ್ರಿಧಾತು ಕಾಲತ್ರಯಂ ಗುಣತ್ರಯಂ ವಾ ದಾಧಾರೇತ್ಯನ್ವಯಃ ॥

ಪ್ರತಿಪದಾರ್ಥ

ಯಸ್ಯ—ಯಾವ ಆದೇ ವಿಷ್ಣುವಿನ । ಮಧುನಾ—ಮಧುರವಾದ ಅಮೃತದೊಡನೆ । ಪೂರ್ಣಾ—ತುಂಬಿದ । ಪದಾನಿ—ಮೂರು ಪಾದಗಳ ಪ್ರಕ್ಷೇಪಣಗಳು । ಅಕ್ಷೀಯಮಾಣಾ—ನಾಶರಹಿತಗಳಾಗಿದ್ದುಕೊಂಡು ।

**ಸ್ವಧಯಾ**—ಪವಿತ್ರವಾದ ಅನ್ನದಿಂದ । **ಮದಂತಿ**—( ಆಶ್ರಿತಜನರನ್ನು ) ಸಂತೋಷಗೊಳಿಸುತ್ತವೆ । **ಯ ಉ**—ಯಾವ ಅದೇ ವಿಷ್ಣುವು । **ಪೃಥಿವೀಂ**—ಪ್ರಖ್ಯಾತವಾದ ಭೂಮಿಯನ್ನೂ । **ಉತ**—ಮತ್ತು । **ದ್ಯಾಂ**—ಪ್ರಕಾಶಮಾನವಾದ ಅಂತರಿಕ್ಷವನ್ನೂ । [ಅಥವಾ **ಪೃಥಿವೀಂ**—ಅಧೋವರ್ತಿಗಳಾದ ಅತಲವಿತಲಾದಿ ಸಪ್ತ ಲೋಕಗಳನ್ನೂ। **ದ್ಯಾಂ**—ಮೇಲುಭಾಗದ ಭೂರಾದಿ ಸಪ್ತಲೋಕಗಳನ್ನು ಹೀಗೆ । ] **ವಿಶ್ವಾ**—ಸಮಸ್ತವಾದ । **ಭುವನಾನಿ**—(ಹದಿನಾಲ್ಕು) ಲೋಕಗಳನ್ನೂ । **ತ್ರಿಧಾತು**—ಪೃಥಿವ್ಯಪ್ತೇಜೋರೂಪವಾದ ಮೂರುಧಾತುಗಳೊಡನೆ ಕೂಡಿಕೊಂಡಿರುವಂತೆ । **ಏಕಃ**—ಒಬ್ಬನೇ । **ದಾಧಾರ**—ಧರಿಸಿದ್ದಾನೆ (ಎತ್ತಿಹಿಡಿದಿದ್ದಾನೆ) ॥

### ಭಾವಾರ್ಥ

ಮಧುರವಾದ ಅಮೃತದೊಡನೆ ತುಂಬಿದವೂ, ನಾಶರಹಿತವಾಗಿರುವುವೂ ಆದ ವಿಷ್ಣುವಿನ ಮೂರು ಪಾದಪ್ರಕ್ಷೇಪಣೆಗಳೂ ಸಹ ತಮ್ಮ ಆಶ್ರಿತ ಜನರನ್ನು ಪವಿತ್ರವಾದ ಅನ್ನದಾನದಿಂದ ಸಂತೋಷಗೊಳಿಸುತ್ತವೆ. ಮತ್ತು ಅದೇ ವಿಷ್ಣುವು ಕೆಳಭಾಗದ ಸಪ್ತಲೋಕಗಳನ್ನೂ ಮತ್ತು ಮೇಲುಭಾಗದ ಸಪ್ತಲೋಕಗಳನ್ನೂ ಹೀಗೆ ಸಮಸ್ತವಾದ ಹದಿನಾಲ್ಕುಲೋಕಗಳನ್ನೂ ಸಹ ಪೃಥಿವ್ಯಪ್ತೇಜೋರೂಪವಾದ ಮೂರು ಧಾತುಗಳೊಡನೆ ಕೂಡಿಕೊಂಡಿರುವಂತೆ ಎತ್ತಿಹಿಡಿದಿದ್ದಾನೆ

### English Translation

Whose three imperishable paces, filled with ambrosia, delight (mankind) with sacred food; who verily alone upholds the three elements, and earth and heaven.

### ವಿಶೇಷವಿಷಯಗಳು

**ಮಧುನಾ ಪೂರ್ಣಾ ಪದಾನಿ ಸ್ವಧಯಾ ಮದಂತಿ-ದಿವ್ಯೇನ ಅಮೃತೇನ ಪೂರ್ಣಾನಿ ಪಾದಪ್ರಕ್ಷೇಪಣಾನಿ ಅನ್ನೇನ ಆಶ್ರಿತಜನಾನ್ ಮಾದಯಂತಿ** । ದಿವ್ಯವಾದ ಅಮೃತದಿಂದ ಅಥವಾ ಅಮೃತದಂತೆ ಮಧುರವಾದ ಪಾದಪ್ರಕ್ಷೇಪಣಗಳು ಭಕ್ತಾದಿಗಳನ್ನು ಅನ್ನದಿಂದ ಹರ್ಷಗೊಳಿಸುತ್ತವೆಯೆಂದು ಪಾದಪ್ರಕ್ಷೇಪಣೆಗಳ ಸ್ವರೂಪವನ್ನೂ ಅದರ ಫಲವನ್ನೂ ಸ್ತುತಿಸಿದೆ.

**ಸ್ವಧಯಾ**—ಈ ಪದಕ್ಕೆ ಅನ್ನದಿಂದ ಎಂದು ಅರ್ಥಮಾಡಿದ್ದಾರೆ. ಈ ಸಂದರ್ಭಕ್ಕೆ ಅನ್ನವೆಂಬರ್ಥವು ಅಷ್ಟು ಉಚಿತವಾಗಿ ಕಾಣುವುದಿಲ್ಲ. ಕೆಲವು ಕಡೆಗಳಲ್ಲಿ ಸಾಯಣರೇ **ಸ್ವಧಯಾ** ಎಂಬ ಪದಕ್ಕೆ **ಆತ್ಮೀಯೇನ ತೇಜಸಾ ಹವಿರ್ಲಕ್ಷಣೇನ ಅನ್ನೇನ ವಾ** ಎಂದು ಎರಡುವಿಧವಾದ ಅರ್ಥವನ್ನೂ ಮಾಡಿರುವುದರಿಂದ ಇಲ್ಲಿ ಮೊದಲನೆಯ ಅರ್ಥವೇ ಹೆಚ್ಚು ಹೊಂದಿಕೊಳ್ಳುತ್ತದೆ ನಿರುಕ್ತಕಾರರು ಈ ಪದವನ್ನು **ಉದಕನಾಮಗಳಲ್ಲಿಯೂ** (ನಿ. ೨-೨೩), **ಅನ್ನನಾಮಗಳಲ್ಲಿಯೂ** (ನಿ. ೩-೯) ಸೇರಿಸಿರುತ್ತಾರೆ. ಆದರೆ ಅನೇಕ ಸಂದರ್ಭಗಳಲ್ಲಿ **ಸ್ವಧಾಶಬ್ದಕ್ಕೆ ಸ್ವಮಹಿಮೆ**, **ಸ್ವತೇಜಸ್ಸು** ಅಥವಾ **ಸ್ವಾಶ್ರಯ** ಎಂದೂ ಸಹ ಅರ್ಥವಾಗುತ್ತದೆ. ಉದಾಹರಣೆಗೆ

**ಶಶ್ವತ್ಪುರೋಷಾ ವ್ಯುವಾಸ ದೇವ್ಯಥೋ ಅದ್ಯೇದಂ ವ್ಯಾವೋ ಮಘೋನೀ ।**
**ಅಥೋ ವ್ಯುಚ್ಛಾದುತ್ತರಾँ ಅನು ದ್ಯೂನಜರಾಮೃತಾ ಚರತಿ ಸ್ವಧಾಭಿಃ ।**
(ಋ. ಸಂ. ೧-೧೧೩-೧೩)

ಎಂಬ ಋಕ್ಕಿನಲ್ಲಿ ಉಷಸ್ಸಿನ ಪರವಾಗಿ ಉಪಯೋಗಿಸಲ್ಪಟ್ಟ ಈ ಪದಕ್ಕೆ **ಆತ್ಮೀಯೈಸ್ತೇಜೋಭಿಃ** । ತನ್ನ ಸ್ವತೇಜಸ್ಸುಗಳಿಂದ ಎಂದರ್ಥಮಾಡಿದ್ದಾರೆ. ಇದರಂತೆಯೇ,

**ಯದಂತರಿಕ್ಷೇ ಪತಥಃ ಪುರುಭುಜಾ ಯದ್ವೇಮೇ ರೋದಸೀ ಅನು ।**
**ಯದ್ವಾ ಸ್ವಧಾಭಿರಧಿತಿಷ್ಠಥೋ ರಥಮತ ಆ ಯಾತಮಶ್ವಿನಾ ॥**

(ಋ ಸಂ. ೮-೧೦-೬)

ಎಂಬಲ್ಲಿಯೂ ಸಹ **ಆತ್ಮೀಯೈಸ್ತೇಜೋಭಿರ್ಬಲೈರ್ವಾ ಸಾರ್ಧಂ** । ನಿಮ್ಮ ಸ್ವತೇಜಸ್ಸುಗಳಿಂದ ಅಥವಾ ಸ್ವಶಕ್ತಿಗಳೊಡನೆ ಎಂದರ್ಥವಾಗುತ್ತದೆ.

**ನ ಮೃತ್ಯುರಾಸೀದಮೃತಂ ನ ತರ್ಹಿ ನ ರಾತ್ರ್ಯಾ ಅಹ್ನ ಆಸೀತ್ಪ್ರಕೇತಃ ।**
**ಆನೀದವಾತಂ ಸ್ವಧಯಾ ತದೇಕಂ ತಸ್ಮಾದ್ಧಾನ್ಯನ್ನ ಪರಃ ಕಿಂ ಚನಾಸ ॥**

(ಋ. ಸಂ. ೧೦-೧೨೯-೨)

ಎಂಬ ಋಕ್ಕಿನಲ್ಲಿ ಸಾಯಣರು **ಸ್ವಸ್ಮಿನ್ ಧೀಯತೇ ಧ್ರಿಯತೇ ಆಶ್ರಿತ್ಯ ವರ್ತತೇ ಇತಿ ಸ್ವಧಾ** । ಸ್ವಾಶ್ರಯಾವಲಂಬಿಯಾಗಿರುವುದರಿಂದ **ಸ್ವಧಾ** ಎಂದು **ಈಶ್ವರನ** ( ಪರಬ್ರಹ್ಮನ ) ವಿಚಿತ್ರವಾದ ಶಕ್ತಿಯಾದ **ಮಾಯೆಗೆ** ವಿಶೇಷಣವಾಗಿದೆಯೆಂದು **ವಿವರಿಸಿದ್ದಾರೆ**. ಆದುದರಿಂದ ಪ್ರಕೃತವಾದ ಋಕ್ಕಿನಲ್ಲಿಯೂ ಸಹ **ವಿಷ್ಣುವು** ತನ್ನ **ತೇಜಸ್ಸು, ಮಹಿಮೆ** ಅಸಾಧಾರಣವಾದುದೂ ಲೋಕರಕ್ಷಕವಾದುದೂ ಆದ **ಶಕ್ತಿ** ಇವುಗಳಿಂದ ಲೋಕಗಳೆಲ್ಲವನ್ನೂ ಹರ್ಷಗೊಳಿಸುತ್ತಾನೆಂದು ಅರ್ಥಮಾಡಬಹುದು.

**ತ್ರೀಣ್ಯೇಕ ಉರುಗಾಯೋ ವಿ ಚಕ್ರಮೇ ಯತ್ರ ದೇವಾಸೋ ಮದಂತಿ ।**

(ಋ. ಸಂ ೮-೨೯-೭)

ಇತ್ಯಾದಿ ಋಕ್ಕುಗಳಲ್ಲಿ ದೇವತೆಗಳೂ ಸಹ ಹರ್ಷವನ್ನು ಹೊಂದುವ ಲೋಕಗಳಲ್ಲೆಲ್ಲಾ ವಿಷ್ಣುವಿನ ಪಾದಕ್ಷೇಪಣ ವಿದ್ದಿತು ಎಂದಿರುವಂತೆ ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಅದೇ ಅಂಶವನ್ನು ಸ್ತುತಿಸಿದೆ.

**ಸ್ವಧಾಂ ಅನು ;** ಅಥವಾ **ಅನು ಸ್ವಧಾಂ** ಎಂಬ ಪ್ರಯೋಗಗಳಿರುವಾಗ **ಸಹಜವಾಗಿ, ಸ್ವಭಾವತಃ ಪದ್ಧತಿಯಂತೆ** ಎಂಬರ್ಥಗಳಾಗುವುದೆಂಬುದನ್ನು ೮-೨೦-೭ ; ೭-೫೬-೧೩ ಇತ್ಯಾದಿ ಋಕ್ಕುಗಳನ್ನು ಉದಹರಿಸಿ ಹಿಂದೆ ತಿಳಿಸಿದೆ. ಮತ್ತು ೪-೨೬-೪. ಇತ್ಯಾದಿಗಳಲ್ಲಿ ರಥವೆಂದೂ ೧೦-೨೭-೧೯ರಲ್ಲಿ **ಸೇನೆಯೆಂದೂ** ಅರ್ಥವಾಗುವುದೆಂಬುದನ್ನೂ ತಿಳಿಸಿದೆ.

**ತ್ರಿಧಾತು—ತ್ರಯಾಣಾಂ ಧಾತೂನಾಂ ಸಮಾಹಾರಸ್ತ್ರಿಧಾತು । ಪೃಥಿವ್ಯಪ್ತೇಜೋರೂಪಧಾತುತ್ರಯುವಿಶಿಷ್ಟಂ ಯಥಾ ಭವತಿ ತಥಾ । ಪೃಥಿವೀ, ಅಪ್** ಮತ್ತು **ತೇಜಸ್ಸು** ಈ ಮೂರು ಭೂತಗಳ ಸಮಷ್ಟಿ ತತ್ತ್ವವೆಂದು ವಿವರಿಸಿದೆ. ಮತ್ತು, ಛಾಂದೋಗ್ಯೋಪನಿಷತ್ತಿನ

**ತದೈಕ್ಷತ ಬಹು ಸ್ಯಾಂ ಪ್ರಜಾಯೇಯೇತಿ ತತ್ತೇಜೋಽಸೃಜತ ತತ್ತೇಜ ಐಕ್ಷತ ಬಹು ಸ್ಯಾಂ ಪ್ರಜಾಯೇಯೇತಿ ತದಪೋಽಸೃಜತ । .... .... ತಾ ಆಪ ಐಕ್ಷಂತ ಬಹ್ವ್ಯಃ ಸ್ಯಾಮ ಪ್ರಜಾ-**

ಯೇಮಹೀತಿ ತಾ ಅನ್ನಮಸೃಜಂತ। ಸೇಯಂ ದೇವತೈಕ್ಷತ ಹಂತಾಹಮಿಮಾಸ್ತಿಸ್ರೋ ದೇವತಾ ಅನೇನ ಜೀವೇನಾತ್ಮನಾನುಪ್ರವಿಶ್ಯ ನಾಮರೂಪೇ ವ್ಯಾಕರವಾಣೀತಿ। ತಾಸಾಂ ತ್ರಿವೃತಂ ತ್ರಿವೃತಮೇಕೈಕಾಂ ಕರವಾಣೀತಿ ಸೇಯಂ ದೇವತೇಮಾಸ್ತಿಸ್ರೋ ದೇವತಾ ಅನೇನೈವ ಜೀವೇನಾತ್ಮನಾನುಪ್ರವಿಶ್ಯ ನಾಮರೂಪೇ ವ್ಯಾಕರೋತ್ ।

(ಛಾ. ಉ. ೬-೩-೨, ೩)

ಎಂಬ ವಾಕ್ಯಗಳನ್ನುದಹರಿಸಿ ಅಲ್ಲಿ ಅನ್ನ, ಅಪ್ ಮತ್ತು ತೇಜೋರೂಪಗಳ ತತ್ತ್ವತ್ರಯವನ್ನು ಸೃಷ್ಟಿಸಿ ಅವುಗಳನ್ನು ತನ್ನ ಮಹಿಮೆಯಿಂದ ಧರಿಸಿದ ಪರಬ್ರಹ್ಮನ ಮಹತ್ತ್ವವು ಇಲ್ಲೂ ಸ್ತುತಿಸಲ್ಪಟ್ಟಿದೆಯೆಂದು ಸಾಯಣರು ಹೇಳಿದ್ದಾರೆ. ಈ ವಿವರಣೆಯು ತ್ರಿಧಾತು ಶಬ್ದಕ್ಕೆ ಇರತಕ್ಕ ಅನೇಕ ವಿವರಣೆಗಳಲ್ಲಿ ಒಂದು ಮಾತ್ರ. ಇದೇ ಋಕ್ಕಿನಲ್ಲಿ ಸಾಯಣರೇ ಯದ್ವಾ । ತ್ರಿಧಾತು ಕಾಲತ್ರಯಂ ಗುಣತ್ರಯಂ ವಾ ದಾಧಾರೇತ್ಯನ್ವಯಃ । ಭೂತಭವಿಷ್ಯದ್ವರ್ತಮಾನಗಳೆಂಬ ಕಾಲತ್ರಯವನ್ನಾಗಲಿ, ಸತ್ತ್ವರಜಸ್ತಮೋಗುಣಗಳನ್ನಾಗಲಿ ತನ್ನ ವ್ಯಾಪಕತತ್ತ್ವದಲ್ಲಿ ಧರಿಸಿದನೆಂದು ಅರ್ಥವಾಗಬಹುದೆಂದೂ ತಿಳಿಸಿದ್ದಾರೆ.

ಅಗ್ನಿರಸ್ಮಿ ಜನ್ಮನಾ ಜಾತವೇದಾ ಘೃತಂ ಮೇ ಚಕ್ಷುರಮೃತಂ ಮ ಆಸನ್ ।
ಅರ್ಕಸ್ತ್ರಿಧಾತೂ ರಜಸೋ ವಿಮಾನೋಽಜಸ್ರೋ ಘರ್ಮೋ ಹವಿರಸ್ಮಿ ನಾಮ ॥

(ಋ. ಸಂ. ೩-೨೬-೭)

ಎಂಬ ಋಕ್ಕಿನಲ್ಲಿ ತ್ರಿಧಾತು ಶಬ್ದಕ್ಕೆ ಪ್ರಾಣಾಪಾನವ್ಯಾನಾತ್ಮನಾ ತ್ರಿಧಾ ವರ್ತಮಾನೋಽರ್ಕೋಽರ್ಚನೀಯೋ ಯಃ ಪ್ರಾಣೋಽಸ್ತಿ ಸೋಽಪಿ ಅಹಮೇವಾಸ್ಮಿ । ಪ್ರಾಣ, ಅಪಾನ ಮತ್ತು ವ್ಯಾನ ಈ ಮೂರು ರೂಪಗಳ ಪ್ರಾಣತತ್ತ್ವವೆಂದೂ,

ಯದ್ದೇವಾಃ ಶರ್ಮ ಶರಣಂ ಯದ್ಭದ್ರಂ ಯದನಾತುರಂ ।
ತ್ರಿಧಾತು ಯದ್ವರೂಥ್ಯಂ ೧ ತದಸ್ಮಾಸು ವಿ ಯಂತನಾನೇಹಸೋ ವ ಊತಯಃ ಸು ಊತಯೋ ವ ಊತಯಃ ॥

(ಋ. ಸಂ. ೮-೪೭-೧೦)

ಎಂಬಲ್ಲಿ ಸತ್ತ್ವರಜಸ್ತಮೋರೂಪವಾದ ತ್ರಿಗುಣವೆಂದೂ, ಅರ್ಥಮಾಡಿದ್ದಾರೆ. ಇದೇ ಅಲ್ಲದೇ

ಆ ಧರ್ಣಸಿರ್ಬೃಹದ್ದಿವೋ ರರಾಣೋ ವಿಶ್ವೇಭಿರ್ಗನ್ತ್ವೋಮಭಿರ್ಹುವಾನಃ ।
ಗ್ನಾ ವಸಾನ ಓಷಧೀರಮೃಧ್ರಸ್ತ್ರಿಧಾತುಶೃಂಗೋ ವೃಷಭೋ ವಯೋಧಾಃ ॥

(ಋ. ಸಂ. ೫-೪೩-೧೩)

ಎಂಬಲ್ಲಿ ಅಗ್ನಿಜ್ವಾಲೆಯ ವರ್ಣನೆಯಿದೆ. ಇಲ್ಲಿ ತ್ರಿಧಾತು ಶೃಂಗಃ ಎಂಬ ಪದಕ್ಕೆ ತ್ರಿಪ್ರಕಾರ ಶೃಂಗವದುನ್ನತ-ಲೋಹಿತಶುಕ್ಲಕೃಷ್ಣವರ್ಣಜ್ವಾಲಃ । ಶುಕ್ಲ, ಕೃಷ್ಣ ಮತ್ತು ಲೋಹಿತ ಎಂಬ ಮೂರುವಿಧವಾಗಿಯೂ ಉನ್ನತವಾಗಿಯೂ ಎದ್ದಿರುವ ಜ್ವಾಲೆಗಳುಳ್ಳವನು ಎಂದು ವಿವರಿಸಿದೆ.

ತ್ರಿರಾ ದಿವಃ ಸವಿತರ್ವಾರ್ಯಾಣಿ ದಿವೇದಿವ ಆ ಸುವ ತ್ರಿರ್ನೋ ಅಹ್ನಃ ।
ತ್ರಿಧಾತು ರಾಯ ಆ ಸುವಾ ವಸೂನಿ ಭಗ ತ್ರಾತರ್ಧಿಷಣೇ ಸಾತಯೇ ಧಾಃ ॥

(ಋ. ಸಂ. ೩-೫೬-೬)

ಎಂಬಲ್ಲಿ ವಸೂನಿ ಧನಾನಿ ಎಂಬುದಕ್ಕೆ ವಿಶೇಷಣವಾಗಿ ತ್ರಿಧಾತೂನಿ ಪಶುಕನಕರತ್ನಭೇದೇನ ತ್ರಿಪ್ರಕಾರಾಣಿ। ಪಶು, ಚಿನ್ನ ಮತ್ತು ರತ್ನ ಈ ಮೂರು ವಿಧವಾದ ಧನವೆಂದರ್ಥಮಾಡಿದೆ.

**ತವ ತ್ರಿಧಾತು ಪೃಥಿವೀ ಉತ ದ್ಯೌರ್ವೈಶ್ವಾನರ ವ್ರತಮಗ್ನೇ ಸಚಂತ।**
**ತ್ವಂ ಭಾಸಾ ರೋದಸೀ ಆ ತತಂಥಾಜಸ್ರೇಣ ಶೋಚಿಷಾ ಶೋಶುಚಾನಃ।**

(ಋ. ಸಂ. ೭-೫-೪)

ಎಂಬಲ್ಲಿ ವೈಶ್ವಾನರನ ವ್ರತವನ್ನು ಮೂರು ಲೋಕಗಳೂ ಸೇವಿಸುತ್ತವೆಯೆಂದು ವರ್ಣಿಸುವಾಗ ತ್ರಿಧಾತು, ಪೃಥಿವೀ, ದ್ಯೌಃ ಎಂದು ತ್ರಿಧಾತುವನ್ನು ಅಂತರಿಕ್ಷಪರ್ಯಾಯವಾಗಿ ಉಪಯೋಗಿಸಿದೆ.

**ತಸ್ಯ ಯೋ ಯೋನಿರಾಶಯ ಆಸ। ತಮನು ಪರಾಮೃಶ್ಯ ಸಂಲುಪ್ಯಾಚ್ಛಿನತ್ಸೈಷೇಷ್ಟಿರಭವತ್ತದ್ಯದೇತಸ್ಮಿನ್ನಾಶಯೇ ತ್ರಿಧಾತುರಿವೈಷಾ ವಿದ್ಯಾಶೇತ ತಸ್ಮಾತ್ತ್ರೈಧಾತವೀ ನಾಮ ॥**

(ಶ. ಬ್ರಾ. ೫-೫-೫-೬)

ವೃತ್ರಾಸುರನ ವಧಕಾಲದಲ್ಲಿ ತ್ರಯ್ಯಾತ್ಮಕವಾದ ವಿದ್ಯೆಯು ಆಧಾರವಿದ್ದುದರಿಂದ ಆ ಸಂದರ್ಭದಲ್ಲಿ ನೆರವೇರಿಸಿದ ಇಷ್ಟಿಗೆ ತ್ರೈಧಾತವೀ ಇಷ್ಟಿಯೆಂದು ಪ್ರಸಿದ್ಧವಾಗಿದೆಯೆಂಬ ಅಂಶವು ಶತಪಥಬ್ರಾಹ್ಮಣದ ವಾಕ್ಯಗಳಿಂದ ತಿಳಿಯುತ್ತದೆ.

**ತತೋ ವೈ ಸ ಇಮಾನ್ ಲೋಕಾಗ್ಸ್ತ್ರೇಧಾದುಹತ್ತ್ರಿಧಾತೋಸ್ತ್ರಿಧಾತುತ್ವಂ ಯಂ ಕಾಮಯೇತಾನ್ನಾದಸ್ಸ್ಯಾದಿತಿ ತಸ್ಮಾ ಏತಂ ತ್ರಿಧಾತುಂ ನಿರ್ವಪೇದಿಂದ್ರಾಯ ರಾಜ್ಞೇ ಪುರೋಡಾಶಂ।**

(ತೈ. ಸಂ. ೨-೩-೬-೧)

ಎಂಬ ತೈತ್ತಿರೀಯಸಂಹಿತಾವಾಕ್ಯಗಳಲ್ಲಿರುವ ತ್ರಿಧಾತು ಶಬ್ದಕ್ಕೆ **ತಿಸ್ರ ಏತಾಸ್ತ್ರಿಧಾತೋರ್ದೇವತಾ ಲೋಕತ್ರಯಾತ್ಮಿಕಾಃ। ತತಃ ಖಲು ತ್ರಿಧಾತು ದೇವತಾನಾಂ ತ್ರಿತ್ವಾತ್ಪ್ರಜಾಪತಿಃ ಲೋಕತ್ರಯವ್ಯಾಪೀ ವ್ಯಾಪ್ತಾನಿಮಾನ್ ಲೋಕಾಂಸ್ತ್ರೇಧಾದುಹತ್ ತ್ರಿಪ್ರಕಾರಮದುಹತ್। ತ್ರಯೋ ಧಾತವೋ ಧನಾನ್ಯಸ್ಮಿನ್ನಿತಿ ತ್ರಿಧಾತುಃ, ತ್ರೇಧಾ ಧಾತವ್ಯತ್ವಾತ್ಪುರೋಡಾಶಸ್ಯ। ಯದ್ವಾ ಸರ್ವಾಧಾರಲೋಕತ್ರಯಾತ್ಮಕತ್ವಾತ್ ತ್ರಿಧಾತುಃ॥**

( ತೈ. ಸಂ. ಭಾಷ್ಯ )

ಲೋಕತ್ರಯದಲ್ಲಿರತಕ್ಕವರೂ, ಮೂರು ರೂಪಗಳಲ್ಲಿರತಕ್ಕವರೂ ಆದ ದೇವತೆಗಳಿಗೆ ಪುರೋಡಾಶರೂಪ ಅನ್ನವನ್ನು ಪ್ರಜಾಪತಿಯು ಮೂರು ಕಾಲಗಳಲ್ಲಿ ಕಲ್ಪಿಸಿದನು, ಎಂದು ತ್ರಿಧಾತು ಶಬ್ದಕ್ಕೆ ಲೋಕ, ಅನ್ನ, ಭೂತತ್ರಯ ಇತ್ಯಾದ್ಯರ್ಥಗಳನ್ನು ಮಾಡಿದೆ.

ಹೀಗೆ ತ್ರಿಧಾತು ಶಬ್ದವನ್ನು ನಾನಾ ಕಡೆಗಳಲ್ಲಿ ಬೇರೆಬೇರೆ ಅರ್ಥಗಳಲ್ಲಿ ಉಪಯೋಗಿಸಿದೆ. ಪ್ರಕೃತವಾದ ಋಕ್ಕಿನಲ್ಲಿ ಪೃಥಿವ್ಯಪ್ತೇಜೋರೂಪವಾದ ತತ್ತ್ವಗಳಿಂದಾಗಲಿ, ಭೂತಭವಿಷ್ಯದ್ವರ್ತಮಾನಕಾಲಗಳಿಂದಾಗಲಿ,

ಸತ್ತ್ವರಜಸ್ತಮೋರೂಪವಾದ ಗುಣಗಳಿಂದಾಗಲಿ ಅರ್ಥವಾಗುತ್ತದೆ. ಸಕಲತತ್ತ್ವಗಳನ್ನೊಡಗೂಡಿದ ಸಕಲ ವಿಶ್ವವೂ ವಿಷ್ಣುವಿನ ಆಶ್ರಯದಲ್ಲಿದೆಯೆಂದು ತಾತ್ಪರ್ಯ.

ಅಥವಾ, ಮೇಲೆ ಉದಹರಿಸಿದ ೭-೫-೪ನೇ ಋಕ್ಕಿನಲ್ಲಿ **ತ್ರಿಧಾತು**ವೆಂಬ ಪದವು **ಪೃಥಿವೀ** ಮತ್ತು **ದ್ಯೌಃ** ಎಂಬುದರೊಂದಿಗೆ ಇದ್ದು **ಅಂತರಿಕ್ಷ**ಪರ್ಯಾಯವಾಗಿರುವಂತೆ ಪ್ರಕೃತವಾದ ಋಕ್ಕಿನಲ್ಲಿಯೂ ಸಹ **ತ್ರಿಧಾತು, ಪೃಥಿವೀಂ ಉತದ್ಯಾಂ** ಎಂದು ಮೂರು ಲೋಕಗಳ ಹೆಸರನ್ನೂ ನಿರ್ದೇಶಿಸಿರುವುದರಿಂದ ಇಲ್ಲಿಯೂ ಸಹ **ಅಂತರಿಕ್ಷ**ವೆಂಬ ಅರ್ಥವೇ ಆಗಿರಬಹುದು. ಪೃಥಿವ್ಯಾದಿಲೋಕಗಳೆಲ್ಲವೂ ವಿಷ್ಣುವಿನ ಆಶ್ರಯದಲ್ಲಿರುವುದೆಂದು ತಾತ್ಪರ್ಯ

॥ ವ್ಯಾಕರಣಪ್ರಕ್ರಿಯಾ ॥

**ತ್ರೀ**—ನಪುಂಸಕದಲ್ಲಿ ಶಿ ಆದೇಶ ಬಂದು ತ್ರೀಣಿ ಎಂದು ರೂಪವಾದಾಗ **ಶೇಶ್ಛಂದಸಿ ಬಹುಲಂ** ಎಂಬುದರಿಂದ ಶಿಗೆ ಲೋಪ. ಹೀಗೆಯೇ ಪೂರ್ಣಾ ಎಂಬಲ್ಲಿಯೂ ರೂಪವನ್ನು ಹೊಂದುತ್ತದೆ.

**ಅಕ್ಷೀಯಮಾಣಾ**—ನ ಕ್ಷೀಯಮಾಣಾನಿ ಅಕ್ಷೀಯಮಾಣಾನಿ. **ತತ್ಪುರುಷೇತುಲ್ಯಾರ್ಥ**—(ಪಾ. ಸೂ. ೬-೨-೨) ಎಂಬುದರಿಂದ ನಞ್‌ಪೂರ್ವಪದಪ್ರಕೃತಿಸ್ವರ ಬರುತ್ತದೆ. ನಪುಂಸಕರೂಪವಾದಾಗ ಶಿಗೆ ಲುಕ್.

**ಮದಂತಿ**—ಮದ ತೃಪ್ತಿಯೋಗೇ ಧಾತು. ಇದು ಅಂತರ್ಭಾವಿತಣ್ಯರ್ಥಕವಾಗಿ ಪ್ರಯುಕ್ತವಾಗಿದೆ. ಲಟ್ ಪ್ರಥಮಪುರುಷಬಹುವಚನಾಂತರೂಪ. ಯಚ್ಛಬ್ದ ಸಂಬಂಧವಿರುವುದರಿಂದ ನಿಘಾತಸ್ವರ ಬರುವುದಿಲ್ಲ. **ತಾಸ್ಯನುದಾತ್ತೇತ್** ಸೂತ್ರದಿಂದ ಲಸಾರ್ವಧಾತುಕ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ತ್ರಿಧಾತು**—ಡುಧಾಞ್ ಧಾರಣಪೋಷಣಯೋಃ ಧಾತು. **ಸಿತನಿಗಮಿಮಸಿ**—(ಉ. ಸೂ. ೧-೬೯) ಎಂಬುದರಿಂದ ತುನ್ ಪ್ರತ್ಯಯ. ನಿತ್ತಾದುದರಿಂದ ಆದ್ಯುದಾತ್ತವಾಗುತ್ತದೆ. ಸಮಾಸವಾದಾಗ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

**ದಾಧಾರ**—ಧೃಙ್ ಅವಸ್ಥಾನೇ ಧಾತು. ಲಿಟ್ ಪ್ರಥಮಪುರುಷಏಕವಚನದಲ್ಲಿ ಣಲಾದೇಶ. ಧಾತುವಿಗೆ ದ್ವಿತ್ವಾದಿ. **ತುಜಾದೀನಾಂ ದೀರ್ಘೋಽಭ್ಯಾಸಸ್ಯ** (ಪಾ. ಸೂ. ೬-೧-೭) ಎಂಬುದರಿಂದ ಅಭ್ಯಾಸಕ್ಕೆ ದೀರ್ಘ ಬರುತ್ತದೆ. ಯಚ್ಛಬ್ದ ಸಂಬಂಧವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯ ಲಿತ್ತಾದುದರಿಂದ **ಲಿತಿ** (ಪಾ.ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ.

**ವಿಶ್ವಾ**—ಹಿಂದಿನಂತೆ ಬಹುವಚನದಲ್ಲಿ ಶಿಗೆ ಲೋಪ. ॥೪॥

———:೦:———

ಸಂಹಿತಾಪಾಠಃ

ತದಸ್ಯ ಪ್ರಿಯಮಭಿ ಪಾಥೋ ಅಶ್ಯಾಂ ನರೋ ಯತ್ರ ದೇವಯವೋ
ಮದಂತಿ ।
ಉರುಕ್ರಮಸ್ಯ ಸ ಹಿ ಬಂಧುರಿತ್ಥಾ ವಿಷ್ಣೋಃ ಪದೇ ಪರಮೇ ಮಧ್ವ
ಉತ್ಸಃ ॥ ೫ ॥

ಪದಪಾಠ

ತತ್ । ಅಸ್ಯ । ಪ್ರಿಯಂ । ಅಭಿ । ಪಾಥಃ । ಅಶ್ಯಾಂ । ನರಃ । ಯತ್ರ । ದೇವಽಯವಃ । ಮದಂತಿ ।
ಉರುಽಕ್ರಮಸ್ಯ । ಸಃ । ಹಿ । ಬಂಧುಃ । ಇತ್ಥಾ । ವಿಷ್ಣೋಃ । ಪದೇ । ಪರಮೇ । ಮಧ್ವಃ । ಉತ್ಸಃ ॥೫॥

ಸಾಯಣಭಾಷ್ಯಂ

ಆತಿಥ್ಯಾಯಾಂ ತದಸ್ಯೇತ್ಯೇಷಾ ಪ್ರಧಾನಸ್ಯ ಯಾಜ್ಯಾ । ಅಥಾತಿಥ್ಯೇತಿ ಖಂಡೇ ಸೂತ್ರಿತಂ । ಇದಂ ವಿಷ್ಣುರ್ವಿ ಚಕ್ರಮೇ ತದಸ್ಯ ಪ್ರಿಯಮಭಿ ಪಾಥೋ ಅಶ್ಯಾಂ । ಆ. ೪-೫ । ಇತಿ ॥

ಅಸ್ಯ ಮಹತೋ ವಿಷ್ಣೋಃ ಪ್ರಿಯಂ ಪ್ರಿಯಭೂತಂ ತತ್ಸರ್ವೈಃ ಸೇವ್ಯತ್ವೇನ ಪ್ರಸಿದ್ಧಂ ಪಾಥಃ । ಅಂತರಿಕ್ಷನಾಮೈತತ್ ಪಾಥೋಽಂತರಿಕ್ಷಂ ಪಥಾ ವ್ಯಾಖ್ಯಾತಂ । ನಿ. ೬-೭ । ಇತಿ ಯಾಸ್ಕೇನೋಕ್ತತ್ವಾತ್ । ಅವಿನಶ್ವರಂ ಬ್ರಹ್ಮಲೋಕಮಿತ್ಯರ್ಥಃ । ಅಶ್ಯಾಂ । ವ್ಯಾಪ್ನುಯಾಂ । ತದೇವ ವಿಶೇಷ್ಯತೇ । ಯತ್ರ ಸ್ಥಾನೇ ದೇವಯವೋ ದೇವಂ ದ್ಯೋತನಸ್ವಭಾವಂ ವಿಷ್ಣುಮಾತ್ಮನ ಇಚ್ಛಂತೋ ಯಜ್ಞದಾನಾದಿಭಿಃ ಪ್ರಾಪ್ತುಮಿಚ್ಛಂತೋ ನರೋ ಮದಂತಿ ತೃಪ್ತಿಮನುಭವಂತಿ । ತದಶ್ಯಾಮಿತ್ಯನ್ವಯಃ । ಪುನರಪಿ ತದೇವ ವಿಶೇಷ್ಯತೇ । ಉರುಕ್ರಮಸ್ಯಾತ್ಯಧಿಕಂ ಸರ್ವಂ ಜಗದಾಕ್ರಮಮಾಣಸ್ಯ ತತ್ತದಾತ್ಮನಾ ಅತ ಏವ ವಿಷ್ಣೋರ್ವ್ಯಾಪಕಸ್ಯ ಪರಮೇಶ್ವರಸ್ಯ ಪರಮ ಉತ್ಕೃಷ್ಟೇ ನಿರತಿಶಯೇ ಕೇವಲಸುಖಾತ್ಮಕೇ ಪದೇ ಸ್ಥಾನೇ ಮಧ್ವೋ ಮಧುರಸ್ಯೋತ್ಸೋ ನಿಷ್ಯಂದೋ ವರ್ತತೇ । ತದಶ್ಯಾಂ । ಯತ್ರ ಕ್ಷುತ್ತೃಷ್ಣಾಜರಾಮರಣಪುನರಾವೃತ್ತ್ಯಾದಿಭಯಂ ನಾಸ್ತಿ ಸಂಕಲ್ಪಮಾತ್ರೇಣಾಮೃತಕುಲ್ಯಾದಿಭೋಗಾಃ ಪ್ರಾಪ್ಯಂತೇ ತಾದೃಶಮಿತ್ಯರ್ಥಃ । ತತೋಽಧಿಕಂ ನಾಸ್ತೀತ್ಯಾಹ ಇತ್ಥೇತ್ಥಮುಕ್ತಪ್ರಕಾರೇಣ ಸ ಹಿ ಬಂಧುಃ ಸ ಖಲು ಸರ್ವೇಷಾಂ ಸುಕೃತಿನಾಂ ಬಂಧುಭೂತೋ ಹಿತಕರೋ ವಾ ತಸ್ಯ ಪದಂ ಪ್ರಾಪ್ತವತಾಂ ನ ಪುನರಾವೃತ್ತೇಃ । ನ ಚ ಪುನರಾವರ್ತತ ಇತಿ ಶ್ರುತೇಸ್ತಸ್ಯ ಬಂಧುತ್ವಂ । ಹಿಶಬ್ದಃ ಸರ್ವಶ್ರುತಿಸ್ಮೃತಿಪುರಾಣಾದಿಪ್ರಸಿದ್ಧಿದ್ಯೋತನಾರ್ಥಃ ॥

ಪ್ರತಿಪದಾರ್ಥ

**ಉರುಕ್ರಮಸ್ಯ**— ವಿಸ್ತಾರವಾಗಿ ( ಜಗತ್ತನ್ನು ) ಆಕ್ರಮಿಸಿಕೊಳ್ಳುವ । **ವಿಷ್ಣೋಃ**— ವಿಷ್ಣುವಿನ । **ಪರಮೇ**—ಉತ್ಕೃಷ್ಟವಾದ । **ಪದೇ**—ಯಾವ ಸ್ಥಾನದಲ್ಲಿ । **ಮಧ್ವಃ**—ಮಧುರವಾದ ಆನಂದರಸದ । **ಉತ್ಸಃ**—ಪ್ರವಾಹವು ( ಇದೆಯೋ) (ಮತ್ತು) । **ಯತ್ರ**—ಯಾವ ಸ್ಥಾನದಲ್ಲಿ । **ದೇವಯವಃ**—ವಿಷ್ಣುವಿನ ಅನುಗ್ರಹವನ್ನು ಸಂಪಾದಿಸಿಕೊಳ್ಳಲು ಪ್ರಯತ್ನಿಸುವ । **ನರಃ**—ಮಾನವರು । **ಮದಂತಿ**—ಆನಂದವನ್ನನುಭವಿಸುತ್ತಾರೆಯೋ । **ಅಸ್ಯ**—ಅಂತಹ ವಿಷ್ಣುವಿನ । **ಪ್ರಿಯಂ**—(ಅವನಿಗೆ) ಅತ್ಯಂತ ಪ್ರಿಯವಾದದ್ದೂ । **ತತ್**—ಪ್ರಸಿದ್ಧವಾಗಿ (ಸಕಲರಿಂದಲೂ ಸೇವಿತವಾದದ್ದೂ ಆದ । **ಪಾಥಃ**—ಅಂತರಿಕ್ಷಮಾರ್ಗವನ್ನು । **ಅಶ್ಯಾಂ**—ನಾನೂ ಸಹ ಹೊಂದುವಂತಾಗಲಿ । **ಇತ್ಥಾ**—ಈ ವಿಧವಾಗಿ । **ಸ ಹಿ ಬಂಧುಃ**—ಆ ವಿಷ್ಣುವು (ಸಕಲ ಭಕ್ತರಿಗೂ) ಬಂಧುವಾಗಿದ್ದಾನೆ

ಭಾವಾರ್ಥ

ವಿಸ್ತಾರವಾಗಿ ಜಗತ್ತನ್ನೆಲ್ಲಾ ಆಕ್ರಮಿಸಿಕೊಳ್ಳುವ ವಿಷ್ಣುವಿನ ಉತ್ಕೃಷ್ಟವಾದ ಯಾವ ಸ್ಥಾನದಲ್ಲಿ ಮಧುರವಾದ ಆನಂದರಸದ ಪ್ರವಾಹವು ಇದೆಯೋ ಮತ್ತು ಯಾವ ಸ್ಥಾನದಲ್ಲಿ ವಿಷ್ಣುವಿನ ಅನುಗ್ರಹವನ್ನು ಸಂಪಾದಿಸಿಕೊಳ್ಳಲು ಪ್ರಯತ್ನಿಸುವ ಮಾನವರು ಆನಂದವನ್ನನುಭವಿಸುತ್ತಾರೆಯೋ ಅಂತಹ ವಿಷ್ಣುವಿನ ಅತ್ಯಂತ ಪ್ರಿಯವಾದ ಅಂತರಿಕ್ಷಮಾರ್ಗವನ್ನು ನಾನೂ ಸಹ ಹೊಂದುವಂತಾಗಲಿ. ವಿಷ್ಣುವು ಈ ವಿಧವಾಗಿ ಸಕಲ ಭಕ್ತರಿಗೂ ಸಹ ಬಂಧುವಾಗಿದ್ದಾನೆ.

English Translation

May I attain his favourite path, in which god-seeking men delight; (the path) of that wide-stepping Vishnu, in whose exalted station there is a (perpetual) flow of felicity; for to such a degree is he the friend (of the pious).

ವಿಶೇಷವಿಷಯಗಳು

ಸೋಮಯಾಗದಲ್ಲಿ ಸೋಮನನ್ನು ಯಜ್ಞಭೂಮಿಗೆ ತರುವಾಗ ಸೋಮನನ್ನು (ಸೋಮರಾಜನನ್ನು) ಅತಿಥಿಯೆಂದು ಭಾವಿಸಿ ಅತಿಥಿಸತ್ಕಾರಾದಿ ಸಂಸ್ಕಾರಾದಿಗಳನ್ನು ಮಾಡುವುದು ರೂಢಿಯಾಗಿರುವುದು. ಈ ವಿಷಯವು ತೈ. ಸಂ. ೬-೨-೧ ರಲ್ಲಿ ಹೇಳಿರುವುದದು. ಆಗ ತದಸ್ಯ ಪ್ರಿಯಂ ಎಂಬ ಋಕ್ಕನ್ನು ಪ್ರಧಾನಯಾಜ್ಯಾಮಂತ್ರವನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಅಥಾತಿಥ್ಯೇತಿ** ಎಂಬ ಖಂಡದ ಇದಂ ವಿಷ್ಣುರ್ವಿ ಚಕ್ರಮೇ ತದಸ್ಯ ಪ್ರಿಯಮಭಿ ಪಾಥೋ ಅಶ್ಯಾಂ ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೪-೫).

ವಿಷ್ಣುವಿನ **ಪರಮಪದದ** ಮಹತ್ತ್ವವನ್ನು ವರ್ಣಿಸಿ ಅಲ್ಲಿ ಲಭಿಸತಕ್ಕ ಆನಂದಾತಿಶಯವನ್ನು ಪಡೆಯಬೇಕೆಂಬ ಅತ್ಯುತ್ಕಟವಾದ ಇಚ್ಛೆಯನ್ನು ಈ ಋಕ್ಕಿನಲ್ಲಿ ಸೂಚಿಸಿದೆ.

**ಪಾಥಃ**—**ಪಾಥಃ ಅಂತರಿಕ್ಷಂ ಪಥಾ ವ್ಯಾಖ್ಯಾತಂ** (ನಿ. ೬-೭) ಪಾಥಃ ಎಂದರೆ ಅಂತರಿಕ್ಷವೆಂದೂ ಈ ಪದದ ನಿರ್ವಚನವನ್ನು **ಪಥಿನ್**ಶಬ್ದದ ನಿಷ್ಪತ್ತಿಯನ್ನು ಹೇಳುವಾಗಲೇ ತಿಳಿಸಿದೆಯೆಂದೂ ನಿರುಕ್ತಕಾರರು ಹೇಳಿ

ಯತ್ರಾ ಚಕ್ರುರಮೃತಾ ಗಾತುಮಸ್ಮೈ ಶ್ಯೇನೋ ನ ದೀಯನ್ನನ್ವೇತಿ ಪಾಥಃ ।
ಪ್ರತಿ ವಾಂ ಸೂರ ಉದಿತೇ ವಿಧೇಮ ನಮೋಭಿರ್ಮಿತ್ರಾವರುಣೋತ ಹವ್ಯೈಃ ॥
(ಋ ಸಂ ೭-೬೩-೫)

ಎಂಬ ಋಕ್ಕನ್ನುದಹರಿಸಿ ಇತ್ಯಪಿ ನಿಗಮೋ ಭವತಿ ಎಂದು ಪಾಥಃಶಬ್ದವು ಅಂತರಿಕ್ಷಪರ್ಯಾಯವಾಗಿದೆಯೆಂದು ತಿಳಿಸಿದ್ದಾರೆ.

ಪಂಥಾಃ ಪತತೇರ್ವಾ, ಪದ್ಯತೇರ್ವಾ, ಪಂಥತೇರ್ವಾ (ನಿ. ೨-೨೮) ಗತ್ಯರ್ಥಕಗಳಾದ **ಪತ್** ಅಥವಾ ಪದ ಅಥವಾ ಪಥಿ (ಪಂಥ್) ಧಾತುಗಳಲ್ಲಿ ಯಾವುದರಿಂದಾದರೂ ನಿಷ್ಪನ್ನವಾಗಿ **ಪಂಥಾ** ಎಂಬ ರೂಪವಾಗುವುದೆಂದು ಈ ಪದಕ್ಕೆ ನಿರ್ವಚನವನ್ನು ಹೇಳಿದೆ. **ಪಾಥಃ** ಎನ್ನುವ ಪದಕ್ಕೂ ಈ ಧಾತುಗಳೇ ಮೂಲವಾಗಿರುವುವು ಈ ಪದಕ್ಕೆ ಅಂತರಿಕ್ಷವೆಂಬರ್ಥಮಾತ್ರವಲ್ಲದೆ **ಉದಕ, ಅನ್ನ** ಎಂಬರ್ಥಗಳೂ ಉಂಟು.

**ಉದಕಮಪಿ ಪಾಥ ಉಚ್ಯತೇ ಪಾನಾತ್ ।** (ನಿ. ೬-೭)

ಪಾನಮಾಡಲ್ಪಡುವುದರಿಂದ **ಉದಕಕ್ಕೂ ಪಾಥ**ವೆಂದು ಹೆಸರು. ಎಂದು ತಿಳಿಸಿ,

**ಆ ಚಷ್ಟ ಆಸಾಂ ಪಾಥೋ ನದೀನಾಂ ವರುಣ ಉಗ್ರಃ ಸಹಸ್ರಚಕ್ಷಾಃ ।**

(ಋ. ಸಂ. ೭-೩೪-೧೦)

ಎಂಬ ಋಕ್ಕನ್ನುದಹರಿಸಿ ಅಲ್ಲಿ **ಪಾಥಃ** ಎಂದರೆ **ಜಲ**ವೆಂಬರ್ಥವೆಂದೂ,

**ಅನ್ನಮಪಿ ಪಾಥ ಉಚ್ಯತೇ ಪಾನಾದೇವ ।** (ನಿ. ೬-೭)

ಸೇವನೆಮಾಡು ಎಂಬರ್ಥವನ್ನು ಕೊಡುವ ಪಾ ಧಾತುವಿನಿಂದಲೇ ನಿಷ್ಪನ್ನವಾಗಿರುವುದರಿಂದ **ಅನ್ನಕ್ಕೂ** ಇದೇ ಹೆಸರೆಂದು ತಿಳಿಸಿ,

**ವನಸ್ಪತೇ ರಶನಯಾ ನಿಯೂಯಾ ದೇವಾನಾಂ ಪಾಥ ಉಪ ವಕ್ಷಿ ವಿದ್ವಾನ್ ।**
**ಸ್ವದಾತಿ ದೇವಃ ಕೃಣವದ್ಧವೀಂಷ್ಯವತಾಂ ದ್ಯಾವಾಪೃಥಿವೀ ಹವಂ ಮೇ ॥**

(ಋ. ಸಂ. ೧೦-೭೦-೧೦)

ಎಂಬ ಋಕ್ಕನ್ನುದಹರಿಸಿ ಅಲ್ಲಿ ಈ ಪದಕ್ಕೆ ಅನ್ನವೆಂಬರ್ಥವಿದೆಯೆಂದೂ ನಿರುಕ್ತಕಾರರು ಹೇಳಿದ್ದಾರೆ.

ಪ್ರಕೃತವಾದ ಋಕ್ಕಿನಲ್ಲಿ ಈ ಪದವು ಅಂತರಿಕ್ಷಪರ್ಯಾಯವಾಗಿದೆ. ಈ ಲೋಕವು ವಿಷ್ಣುವಿಗೆ **ಪ್ರಿಯಂ** ಪ್ರಿಯಭೂತವಾಗಿದೆಯೆಂದು ಹೇಳಿದೆ. ಅದುದರಿಂದಲೇ ದೇವಯವಃ ನರಃ **ಮದಂತಿ । ದೇವಂ ದ್ಯೋತನ ಸ್ವಭಾವಂ ವಿಷ್ಣುಂ ಆತ್ಮನ ಇಚ್ಛಂತೋ ಯಜ್ಞದಾನಾದಿಭಿಃ ಪ್ರಾಪ್ತುಮಿಚ್ಛಂತಃ ನರಃ ತೃಪ್ತಿಮನುಭವಂತಿ ।** ಯಜ್ಞ ದಾನಾದಿಗಳಿಂದ ಪ್ರಕಾಶಮಾನನಾದ ವಿಷ್ಣುವನ್ನು ಒಲಿಸಿಕೊಂಡು ಅವನ ಅನುಗ್ರಹವನ್ನು ಸಂಪಾದಿಸಲಿಚ್ಛಿಸುವ ಯಜ್ಞಕರ್ತರೆಲ್ಲರೂ ಈ ಲೋಕದಲ್ಲಿ ಆನಂದವನ್ನನುಭವಿಸುತ್ತಾರೆ.

**ಉರುಕ್ರಮಸ್ಯ ವಿಷ್ಣೋಃ—ಅತ್ಯಧಿಕಂ ಸರ್ವಂ ಜಗದಾಕ್ರಮಮಾಣಸ್ಯ ತತ್ತದಾತ್ಮನಾ ಅತ ಏವ ವ್ಯಾಪಕಸ್ಯ ಪರಮೇಶ್ವರಸ್ಯ ।** ಸಕಲ ವಿಶ್ವವನ್ನೂ ತನ್ನ ಆಕಾರದಿಂದಲೇ ವ್ಯಾಪಿಸಿರುವ ಜಗದೀಶ್ವರನ, ಎಂದು ಸರ್ವವ್ಯಾಪಕನಾದ ವಿಷ್ಣುವಿನ ಸ್ವರೂಪವನ್ನು ವರ್ಣಿಸಿದೆ.

**ಪರಮೇ ಪದೇ—ಉತ್ಕೃಷ್ಟೇ ನಿರತಿಶಯೇ ಕೇವಲಸುಖಾತ್ಮಕೇ ಸ್ಥಾನೇ ।** ದುಃಖದ ಅತ್ಯಂತಾಭಾವವಿದ್ದು ಕೇವಲ ಸುಖಮಯವಾಗಿರುವುದೂ ಅತ್ಯಂತ ಉತ್ಕೃಷ್ಟವಾಗಿರುವುದೂ ಆದ ಸ್ಥಾನವೆಂದು ಹೇಳಿರುವುದರಿಂದ

**ಪಾಥಃ** ಎಂಬ ಪದಕ್ಕೂ ಸಾಧಾರಣವಾಗಿ ರೂಢಿಯಲ್ಲಿರುವ **ಅಂತರಿಕ್ಷ**ವೆಂದರ್ಥಮಾಡದೆ ಉತ್ತಮವಾದ **ಊರ್ಧ್ವ** ಲೋಕವೆಂದರ್ಥಮಾಡಬೇಕಾಗುತ್ತದೆ. ಈ ಪರಮಪದದ ಸ್ವರೂಪವನ್ನು ಉಪನಿಷತ್ತುಗಳಲ್ಲಿ ಈ ರೀತಿ ವರ್ಣಿಸಿದೆ.

**ಯಸ್ತು ವಿಜ್ಞಾನವಾನ್ಭವತಿ ಸಮನಸ್ಕಃ ಸದಾ ಶುಚಿಃ ।**
**ಸ ತು ತತ್ಪದಮಾಪ್ನೋತಿ ಯಸ್ಮಾದ್ಭೂಯೋ ನ ಜಾಯತೇ ॥**
**ವಿಜ್ಞಾನಸಾರಥಿರ್ಯಸ್ತು ಮನಃ ಪ್ರಗ್ರಹವಾನ್ನರಃ ।**
**ಸೋಽಧ್ವನಃ ಪಾರಮಾಪ್ನೋತಿ ತದ್ವಿಷ್ಣೋಃ ಪರಮಂ ಪದಂ ॥**

(ಕಠ. ೩-೮-೯)

ಆಧ್ಯಾತ್ಮಿಕಜ್ಞಾನವನ್ನು ಸಂಪಾದಿಸಿ ಶಮದಮಾದಿಸಂಪತ್ತುಗಳಿಂದ ಕೂಡಿದ ಆತ್ಮಸಂಯಮಿಯು ವಿಷ್ಣುವಿನ **ಪರಮಪದ**ವನ್ನು ಪಡೆದು ಪುನಃ ಸಂಸಾರಿಯಾಗುವುದಿಲ್ಲ. ಎಂದು ಕಠೋಪನಿಷತ್ತಿನಲ್ಲಿ **ಪರಮಪದದ** ಮಹತ್ತ್ವವನ್ನು ಸ್ತುತಿಸಿದೆ. ಆದುದರಿಂದ ಇದು ಕೇವಲ ರೂಢವಾದ ಅಂತರಿಕ್ಷವಲ್ಲ. ಈ **ಪರಮಪದವನ್ನೇ** ಮುಂಡಕದಲ್ಲಿ

**ಸತ್ಯಮೇವ ಜಯತಿ ನಾನೃತಂ ಸತ್ಯೇನ ಪಂಥಾ ವಿತತೋ ದೇವಯಾನಃ ।**
**ಯೇನಾಕ್ರಮಂತ್ಯೃಷಯೋ ಹ್ಯಾಪ್ತಕಾಮಾ ಯತ್ರ ತತ್ಸತ್ಯಸ್ಯ ಪರಮಂ ನಿಧಾನಂ ॥**

(ಮುಂಡಕ. ೩-೧-೬)

ಆಪ್ತಕಾಮರೂ, ಪರಮಾರ್ಥತತ್ತ್ವವನ್ನು ತಿಳಿದವರೂ ಆದ ಋಷಿಗಳು ಅತ್ಯಂತ ಪ್ರಕೃಷ್ಟವಾದ ಈ ಸತ್ಯಲೋಕವನ್ನು ಪಡೆಯುತ್ತಾರೆಂದೂ, ಇದೇ **ಪರಮಪದ**ವೆಂದೂ ವರ್ಣಿಸಿದೆ. ಈ ಪರಮಪದದಲ್ಲಿ **ಮಧ್ವ ಉತ್ಸಃ ।** ಆತ್ಮಾನಂದದ ಪ್ರವಾಹವಿದೆ. ಈ ಆನಂದದ ಸ್ವರೂಪವನ್ನು ಉಪನಿಷತ್ತುಗಳಲ್ಲಿ,

**ಸಲಿಲ ಏಕೋ ದ್ರಷ್ಟಾಽದ್ವೈತೋ ಭವತ್ಯೇಷ ಬ್ರಹ್ಮಲೋಕಃ ಸಮ್ರಾಡಿತಿ ಹೈನಮನುಶಶಾಸ ಯಾಜ್ಞವಲ್ಕ್ಯ ಏಷಾಸ್ಯ ಪರಮಾ ಗತಿರೇಷಾಸ್ಯ ಪರಮಾ ಸಂಪದೇಷೋಽಸ್ಯ ಪರಮೋ ಲೋಕ ಏಷೋಽಸ್ಯ ಪರಮ ಆನಂದ ಏತಸ್ಯೈವ ಆನಂದಸ್ಯಾನ್ಯಾನಿ ಭೂತಾನಿ ಮಾತ್ರಾಮುಪಜೀವಂತಿ ।**

(ಬೃ. ಉ. ೪-೩-೩೨)

ಇತ್ಯಾದಿವಾಕ್ಯಗಳಿಂದ ವರ್ಣಿಸಿದೆ. ಇಂತಹ ಅದ್ವಿತೀಯವಾದ ಆನಂದವು ಈ ಪರಮಪದದಲ್ಲಲ್ಲದೆ ಇನ್ನಾವ ಲೋಕದಲ್ಲಿಯೂ ಸಾಧ್ಯವಿಲ್ಲ. ಆದರೆ ಈ ಆನಂದಲಾಭಕ್ಕೂ ಸಹ ವಿಷ್ಣುವಿನ ಅನುಗ್ರಹವು ಆಗತ್ಯ. ಆ ಅನುಗ್ರಹಕ್ಕೆ ಯಜ್ಞಾದಿಕರ್ಮಾಚರಣೆಯೂ ಶಮದಮಾದಿ ಆತ್ಮಶುದ್ಧಿಯೂ ಅತ್ಯವಶ್ಯವಾಗಿರುತ್ತವೆ.

ಉತ್ಸಃ—ಉತ್ಸ ಉತ್ಸರಣಾದ್ವೋತ್ಸದನಾದ್ವೋತ್ಸ್ಯಂದನಾದ್ವೋನತ್ತೇರ್ವಾ । ಊರ್ಧ್ವಮುಖವಾಗಿ ಚಿಮ್ಮುವುದು, ಇರುವುದು ಎಂಬರ್ಥವನ್ನು ಕೊಡುವ ಉತ್ ಎಂಬ ಉಪಸರ್ಗದೊಡನೆ ಕೂಡಿದ ಸೃ ಧಾತುವಿನಿಂದಾಗಲಿ, **ಸದ್** ಅಥವಾ **ಸ್ಯಂದ್** ಎಂಬ ಧಾತುವಿನಿಂದಾಗಲಿ ಅಥವಾ **ಉದ್** ಧಾತುವಿನಿಂದಲೇ ನಿಷ್ಪನ್ನವಾಗಿ **ಉತ್ಸಃ** ಎಂಬ ಪದವು ಸಾಧಾರಣವಾಗಿ **ಬುಗ್ಗೆ** ಅಥವಾ **ಊಟೆ** ಎಂಬರ್ಥವನ್ನು ಕೊಡುತ್ತದೆ. ಎಂದರೆ ಶ್ರಮವಿಲ್ಲದೇ ಸ್ವತಃ ಪ್ರವಾಹವುಳ್ಳದ್ದೆಂದು ತಾತ್ಪರ್ಯ. ನಿರುಕ್ತಕಾರರು (ನಿ. ೧೦-೮)-

**ಅವರ್ದಮುತ್ಸಮಸೃಜೋ ವಿ ಖಾನಿ ತ್ವಮರ್ಣವಾನ್ಬದ್ಬಧಾನಾ ಅರಮ್ಣಾಃ ।**
**ಮಹಾಂತಮಿಂದ್ರ ಪರ್ವತಂ ವಿ ಯದ್ವಃ ಸೃಜೋ ವಿ ಧಾರಾ ಅವ ದಾನವಂ ಹನ್ ॥**
(ಋ. ಸಂ. ೫-೩೨-೧)

ಎಂಬ ಋಕ್ಕನ್ನುದಹರಿಸಿ ಅಲ್ಲಿ **ಉತ್ಸಂ** ಎಂಬ ಪದಕ್ಕೆ **ಉತ್ಸ್ಯಂದಮಾನವಾದ ಮೇಘ** ಎಂದರೆ ಪ್ರಭೂತವಾಗಿ ಜಲವನ್ನು ಪ್ರವಹಿಸುವಂತೆ ಮಾಡತಕ್ಕ **ಮೇಘವೆಂದರ್ಥ**ಮಾಡಿದ್ದಾರೆ.

ಇದಲ್ಲದೆ **ಉತ್ಸಶಬ್ದವು ರೂಪನಾಮಗಳಲ್ಲಿಯೂ** ಪಠಿತವಾಗಿದೆ. (ನಿ. ೩-೧೯)

**ಪ್ರ ತೇ ನಾವಂ ನ ಸಮನೇ ವಚಸ್ಯುವಂ ಬ್ರಹ್ಮಣಾ ಯಾಮಿ ಸವನೇಷು ದಾಧೃಷಿಃ ।**
**ಕುವಿನ್ನೋ ಅಸ್ಯ ವಚಸೋ ನಿಬೋಧಿಷದಿಂದ್ರಮುತ್ಸಂ ನ ವಸುನಃ ಸಿಚಾಮಹೇ ।**
(ಋ. ಸಂ. ೨-೧೬-೭)

ಎಂಬ ಋಕ್ಕಿನಲ್ಲಿ ಜಲಸ್ಯ ನಿಧಾನಭೂತಂ ಕೂಪಂ । ಜಲಕ್ಕೆ ಸ್ವಾಶ್ರಯವಾಗಿರತಕ್ಕ ಕೂಪವೆಂದಾಗುತ್ತದೆ.

**ಶತಧಾರಮುತ್ಸಮಕ್ಷೀಯಮಾಣಂ ವಿಪಶ್ಚಿತಂ ಪಿತರಂ ವಕ್ತ್ವಾನಾಂ ।**
**ಮೇಳಿಂ ಮದಂತಂ ಪಿತ್ರೋರುಪಸ್ಥೇ ತಂ ರೋದಸೀ ಪಿಪೃತಂ ಸತ್ಯವಾಚಂ ॥**
(ಋ. ಸಂ. ೩-೨೬-೯)

ಎಂಬಲ್ಲಿ **ಸತತಪ್ರವಾಹೋಪೇತಂ ಸ್ರೋತಃ ।** ಅವಿಚ್ಛಿನ್ನವಾದ ಪ್ರವಾಹದಿಂದ ಕೂಡಿದ ನದಿಯೆಂದು ಅರ್ಥ.

ಪ್ರಕೃತವಾದ ಋಕ್ಕಿನಲ್ಲಿಯೂ ಸಹ **ಉತ್ಸವೆಂದರೆ** ಸ್ವಯಂ ಪ್ರವಹಿಸತಕ್ಕದ್ದೂ, ಪ್ರಭೂತವಾದದ್ದೂ, ಅವಿಚ್ಛಿನ್ನವಾಗಿರತಕ್ಕದ್ದೂ ಆದ **ಆನಂದಸ್ರೋತ**ವೆಂದರ್ಥವಾಗುತ್ತದೆ. ವಿಷ್ಣುಲೋಕದ ಆನಂದಾತಿಶಯದ ವರ್ಣನೆ. ಇಂತಹ ಆನಂದಕ್ಕೆ ಕಾರಣನಾದುದರಿಂದ ವಿಷ್ಣುವು ಸಕಲರಿಗೂ ಬಂಧುವೆಂದು ಪ್ರಸಿದ್ಧನಾಗಿದ್ದಾನೆ.

**ಸ ನೋ ಬಂಧುರ್ಜನಿತಾ ಸ ವಿಧಾತಾ ಧಾಮಾನಿ ವೇದ ಭುವನಾನಿ ವಿಶ್ವಾ ।**
(ತೈ. ಉ. ೪-೧-೬)

ಇತ್ಯಾದಿ ಉಪನಿಷದ್ವಾಕ್ಯಗಳಲ್ಲಿ ಸ್ತುತಿಸಿರುವ ಅಂಶವನ್ನು ಇಲ್ಲಿ ಹೇಳಿದೆ.

॥ ವ್ಯಾಕರಣಪ್ರಕ್ರಿಯಾ ॥

**ಪಾಥಃ**— ಪಾ ರಕ್ಷಣೇ ಧಾತು. **ಉದಕೇ ಥುಟ್ ಚ** (ಉ. ಸೂ. ೪-೬೪೩) ಎಂಬುದರಿಂದ ಅಸುನ್ ಪ್ರತ್ಯಯ. ಧಾತುವಿಗೆ ಥುಟಾಗಮ. ಇಲ್ಲಿ **ಪಾಥೋಂತರಿಕ್ಷಂ ಪಥಾ ವ್ಯಾಖ್ಯಾತಮ್** (ನಿರು. ೬-೭) ಎಂದು ನಿರ್ವಚನ ಮಾಡಿರುವುದರಿಂದ ಅಂತರಿಕ್ಷಾರ್ಥದಲ್ಲಿ ಪ್ರಯುಕ್ತವಾಗಿದೆ.

**ಅಶ್ಯಾಮ್**—ಅಶೂ ವ್ಯಾಪ್ತೌ ಧಾತು. ಲಿಙ್ ಉತ್ತಮಪುರುಷಏಕವಚನ ಪರವಾದಾಗ **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಲುಕ್ ಲಿಙಗೆ ಯಾಸುಟಾಗಮ. ತಿಙಂತನಿಘಾತಸ್ವರ ಬರುತ್ತದೆ.

**ದೇವಯವಃ**—ದೇವಾನ್ ಆತ್ಮನಃ ಇಚ್ಛತಿ ಎಂದು ಅರ್ಥವಿವಕ್ಷೆಮಾಡಿದಾಗ **ಸುಪ ಆತ್ಮನಃ ಕ್ಯಚ್** (ಪಾ. ಸೂ. ೩-೧-೮) ಎಂಬುದರಿಂದ ಕ್ಯಚ್ ದೇವಯತಿ ಇತಿ ದೇವಯುಃ **ಕ್ಯಾಚ್ಛಂದಸಿ** (ಪಾ. ಸೂ. ೩-೨-

೧೭೦) ಎಂಬುದರಿಂದ ಕೃಜಂತದ ಮೇಲೆ ಉ ಪ್ರತ್ಯಯ. **ಅತೋ ಲೋಪಃ** (ಪಾ. ಸೂ.೬-೪-೪೮) ಎಂಬುದರಿಂದ ಕೃತಿನಅಕಾರಕ್ಕೆ ಲೋಪ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಪ್ರಥಮಾಬಹುವಚನಾಂತರೂಪ.

**ಮದಂತಿ**—ಪೂರ್ವಮಂತ್ರದಲ್ಲಿ ವ್ಯಾಖ್ಯಾತವಾಗಿದೆ. ಯತ್ರ ಎಂಬುದು ಪೂರ್ವದಲ್ಲಿರುವುದರಿಂದ ನಿಘಾತ ಸ್ವರ ಬರುವುದಿಲ್ಲ ಧಾತುಸ್ವರ ಉಳಿಯುತ್ತದೆ.

ಬಂಧು—ಬಂಧ ಬಂಧನೇ ಧಾತು. **ಶೃಸ್ವೃಸ್ನಿಹಿ**-(ಉ. ಸೂ ೧-೧೦) ಎಂಬುದರಿಂದ ಉ ಪ್ರತ್ಯಯ **ಧಾನ್ಯೇನಿತ್** ಸೂತ್ರದಿಂದ ನಿತ್ ಎಂದು ಅನುವೃತ್ತವಾಗುವುದರಿಂದ **ಞ್ನಿತ್ಯಾದಿರ್ನಿತ್ಯಮ್** ಎಂಬುದರಿಂದ ಆದ್ಯು ದಾತ್ತಸ್ವರ ಬರುತ್ತದೆ.

**ಇತ್ಥಾ**—**ಇದಮುಸ್ಥಮುಃ** ಎಂಬುದರಿಂದ ಥಮುಪ್ರತ್ಯಯ. **ಸುಪಾಂ ಸುಲುಕ್**- ಎಂಬುದರಿಂದ ತೃತೀಯಾವಿಭಕ್ತಿ ಪರವಾದಾಗ ಅದಕ್ಕೆ ಡಾದೇಶ.

**ಮಧ್ವಃ**—**ಜಸಾದಿಷು ಛಂದಸಿ ವಾ ವಚನಮ್** ಎಂಬುದರಿಂದ ಷಷ್ಠೀಏಕವಚನ ಪರವಾದಾಗ ಗುಣಾದಿ ಗಳು ಬರುವುದಿಲ್ಲ. ಯಣಾದೇಶ. ॥ ೫ ॥



ಸಂಹಿತಾಪಾಠಃ

ತಾ ವಾಂ ವಾಸ್ತೂನ್ಯುಶ್ಮಸಿ ಗಮಧ್ಯೈ ಯತ್ರ ಗಾವೋ ಭೂರಿಶೃಂಗಾ ಅಯಾಸಃ ।
ಅತ್ರಾಹ ತದುರುಗಾಯಸ್ಯ ವೃಷ್ಣಃ ಪರಮಂ ಪದಮವ ಭಾತಿ ಭೂರಿ ॥೬॥

ಪದಪಾಠಃ

ತಾ । ವಾಂ । ವಾಸ್ತೂನಿ । ಉಶ್ಮಸಿ । ಗಮಧ್ಯೈ । ಯತ್ರ । ಗಾವಃ । ಭೂರಿऽಶೃಂಗಾಃ । ಅಯಾಸಃ ।
ಅತ್ರ । ಅಹ । ತತ್ । ಉರುऽಗಾಯಸ್ಯ । ವೃಷ್ಣಃ । ಪರಮಂ । ಪದಂ । ಅವ । ಭಾತಿ । ಭೂರಿ ॥ ೬ ॥

ಸಾಯಣಭಾಷ್ಯಂ

ಹೇ ಪತ್ನೀಯಜಮಾನೌ ವಾಂ ಯುಷ್ಮದರ್ಥಂ ತಾ ತಾನಿ ಗಂತವ್ಯತ್ವೇನ ಪ್ರಸಿದ್ಧಾನಿ ವಾಸ್ತೂನಿ ಸುಖನಿವಾಸಯೋಗ್ಯಾನಿ ಸ್ಥಾನಾನಿ ಗಮಧ್ಯೈ ಯುವಯೋರ್ಗಮನಾಯೋಶ್ಮಸಿ । ಕಾಮಯಾಮಹೇ ।

ತದರ್ಥಂ ವಿಷ್ಣುಂ ಪ್ರಾರ್ಥಯಾಮ ಇತ್ಯರ್ಥಃ । ತಾನೀತ್ಯುಕ್ತಂ ಕಾನೀತ್ಯಾಹ । ಯತ್ರ ಯೇಷು ವಾಸ್ತುಷು ಗಾವೋ ರಶ್ಮಯೋ ಭೂರಿಶೃಂಗಾ ಅತ್ಯಂತೋನ್ನತ್ಯುಪೇತಾ ಬಹುಭಿರಾಶ್ರಯಣೀಯಾ ವಾಯಾಸೋಽಯನಾ ಗಂತಾರೋಽತಿವಿಸ್ತೃತಾಃ । ಯದ್ವಾ । ಯಾಸೋ ಗಂತಾರಃ । ಅತಾದೃಶಾಃ । ಅತ್ಯಂತಪ್ರಕಾಶಯುಕ್ತಾ ಇತ್ಯರ್ಥಃ । ಅತ್ರಾಹಾತ್ರ ಖಲು ವಾಸ್ತ್ವಾಧಾರಭೂತೇ ದ್ಯುಲೋಕೇ ಉರುಗಾಯಸ್ಯ ಬಹುಭಿರ್ಮಹಾತ್ಮಭಿರ್ಗಾತವ್ಯಸ್ಯ ಸ್ತುತ್ಯಸ್ಯ ವೃಷ್ಣಃ ಕಾಮಾನಾಂ ವರ್ಷಿತುರ್ವಿಷ್ಣೋಃಸ್ತತ್ತಾದೃಶಂ ಸರ್ವತ್ರ ಪುರಾಣಾದಿಷು ಗಂತವ್ಯತ್ವೇನ ಪ್ರಸಿದ್ಧಂ ಪರಮಂ ನಿರತಿಶಯಂ ಪದಂ ಸ್ಥಾನಂ ಭೂರ್ಯತಿಪ್ರಭೂತಮವ ಭಾತಿ । ಸ್ವಮಹಿಮ್ನಾ ಸ್ಫುರತಿ । ಅಯಂ ಮಂತ್ರೋ ಯಾಸ್ಕೇನ ಗೋಶಬ್ದೋ ರಶ್ಮಿವಾಚಕ ಇತಿ ವ್ಯಾಚಕ್ಷಾಣೇನ ವ್ಯಾಖ್ಯಾತಃ । ತಾನಿ ವಾಂ ವಾಸ್ತೂನಿ ಕಾಮಯಾಮಹೇ ಗಮನಾಯ ಯತ್ರ ಗಾವೋ ಭೂರಿಶೃಂಗಾ ಬಹುಶೃಂಗಾ ಭೂರೀತಿ ಬಹುನೋ ನಾಮಧೇಯಂ ಪ್ರಭವತೀತಿ ಸತಃ ಶೃಂಗಂ ಶ್ರಯತೇರ್ವಾ ಶೃಣಾತೇರ್ವಾ ಶಮ್ನಾತೇರ್ವಾ ಶರಣಾಯೋದ್ಗತಮಿತಿ ವಾ ಶಿರಸೋ ನಿರ್ಗತಮಿತಿ ವಾಯಾಸೋಽಯನಾಃ । ತತ್ರ ತದುರುಗಾಯಸ್ಯ ವಿಷ್ಣೋರ್ಮಹಾಗತೇಃ ಪರಮಂ ಪದಂ ಪರಾರ್ಧ್ಯಸ್ಥಮವಭಾತಿ ಭೂರಿ । ಪಾದಃ ಪದ್ಯತೇಃ । ನಿ. ೨.೭ । ಇತಿ ॥

### ಪ್ರತಿಪದಾರ್ಥ

(ಎಲೈ ಯಜಮಾನಪತ್ನಿಯರೇ) **ವಾಂ**—ನಿಮಗಾಗಿ । **ಯತ್ರ**--ಯಾವ ಪ್ರದೇಶಗಳಲ್ಲಿ । **ಭೂರಿಶೃಂಗಾಃ**—ಅತ್ಯಂತ ಉನ್ನತವಾಗಿ ಏಳುವುವೂ । **ಅಯಾಸಃ**—ಅತ್ಯಂತ ವಿಸ್ತೃತವಾದವೂ ಅಥವಾ ಅತ್ಯಂತ ಪ್ರಕಾಶಮಾನವಾದವೂ ಆದ । **ಗಾವಃ**—ರಶ್ಮಿಗಳು (ಹರಡಿರುವುವೋ) । **ತಾ**—(ಎಲ್ಲರೂ ಹೋಗಬೇಕೆಂದಿಚ್ಛಿಸುವ) ಪ್ರಸಿದ್ಧವಾದ ಅಂತಹ । **ವಾಸ್ತೂನಿ**—ಸುಖನಿವಾಸಸ್ಥಾನಗಳನ್ನು । **ಗಮಧ್ಯೈ** ನೀವೂ ಸಹ ಅಲ್ಲಿ ಹೋಗಬೇಕೆಂದು । **ಉಶ್ಮಸಿ**—ಇಚ್ಛಿಸುತ್ತೇವೆ (ಅದಕ್ಕಾಗಿ ವಿಷ್ಣುವನ್ನು ಪ್ರಾರ್ಥಿಸುತ್ತೇವೆ) । **ಅತ್ರಾಹ** ಇಲ್ಲಾದರೋ । **ಉರುಗಾಯಸ್ಯ**—ಅನೇಕ ಮಹಾತ್ಮರಿಂದ ಸ್ತುತಿಸಲ್ಪಡುವವನೂ । **ವೃಷ್ಣಃ**—ಇಷ್ಟಾರ್ಥಗಳನ್ನು ಕೊಡುವವನೂ ಆದ ವಿಷ್ಣುವಿನ । **ಪರಮಂ**—(ಎಲ್ಲಕ್ಕಿಂತಲೂ) ಅತ್ಯಂತ ಅತಿಶಯವಾದ । **ಪದಂ**—ಸ್ಥಾನವು । **ಭೂರಿ**—ಅಧಿಕವಾಗಿ । **ಅವ ಭಾತಿ**—(ತನ್ನ ಮಹಿಮೆಯಿಂದ) ಪ್ರಕಾಶಿಸುತ್ತಿದೆ ॥

### ಭಾವಾರ್ಥ

ಎಲೈ ಯಜಮಾನಪತ್ನಿಯರೇ, ಅತ್ಯಂತ ಉನ್ನತವಾಗಿ ಏಳುವುವೂ ಅತ್ಯಂತ ಪ್ರಕಾಶಮಾನವಾದವೂ ಆದ ರಶ್ಮಿಗಳು ಹರಡಿರುವ ಮತ್ತು ಎಲ್ಲರೂ ಅಲ್ಲಿಗೆ ಹೋಗಬೇಕೆಂದಿಚ್ಛಿಸುವ ಸುಖನಿವಾಸ ಸ್ಥಾನಗಳಿಗೆ ನೀವೂ ಸಹ ಹೋಗಿ ಸೇರಬೇಕೆಂಬ ಉದ್ದಿಶ್ಯದಿಂದ ನಾವು ವಿಷ್ಣುವನ್ನು ಪ್ರಾರ್ಥಿಸುತ್ತೇವೆ. ಇಲ್ಲಿ ಅನೇಕ ಮಹಾತ್ಮರಿಂದ ಸ್ತುತಿಸಲ್ಪಡುವವನೂ ಇಷ್ಟಾರ್ಥಗಳನ್ನು ಸುರಿಸಿಕೊಡುವವನೂ ಆದ ವಿಷ್ಣುವಿನ ಅತ್ಯತಿಶಯವಾದ ಸ್ಥಾನವು ತನ್ನ ಮಹಿಮೆಯಿಂದ ಅಧಿಕವಾಗಿ ಪ್ರಕಾಶಿಸುತ್ತಿದೆ.

### English Translation

We pray (to Vishnu) that you may both go to those regions where the many-pointed and wide-spreading rays (of light expand); for here the supreme

station of the many-hymned, the showerer (of benefits), shines (with) great (splendour).

। ವಿಶೇಷವಿಷಯಗಳು ।

ಈ ಋಕ್ಕು ವಿಷ್ಣುಸೂಕ್ತದಲ್ಲಿರುವದಕ್ಕಿಂತ ಮಿತ್ರಾವರುಣರನ್ನುದ್ದೇಶಿಸಿದ ಸೂಕ್ತದಲ್ಲಿರುವುದು ಉಚಿತವಾಗಿರುವುದೆಂದು ಹೇಳಿ Roth ಎಂಬ ಪಂಡಿತನು ತನ್ನ ಅಭಿಪ್ರಾಯವನ್ನು ಈ ರೀತಿ ತಿಳಿಸಿರುವನು.

"This verse occurs in a hymn to Vishnu; consequently the dual ವಾಂ cannot refer to the deity of the hymn. Durga meets the difficulty, as the commentators frequently do with inconvenient duals, by saying ವಾಂ ಇತಿ ದಂಪತೀ ಅಭಿಪ್ರೇತ್ಯ Etc. But here we have rather a proof of the fact that, in the arrangement of the Veda, many verses have been inserted in wrong places. The verse is addressed to Mitra and Varuna; and perhaps, belonged to one of the hymns to those two Gods which immediately precede Riks in the Samhita. The verse has been introduced into the wrong place because Vishnu is referred to in it".

(Quoted in Muir's Original Sanskrit Texts Vol. IV. P. 73-74)

ಮಿತ್ರಾವರುಣರನ್ನುದ್ದೇಶಿಸಿ ವಾಂ ಎಂದು ಸಂಬೋಧಿಸಿರುವ ಈ ಋಕ್ಕು ಕೇವಲ ವಿಷ್ಣುವಿನ ಹೆಸರಿನ ಸೂಚನೆಯಿರುವುದರಿಂದಮಾತ್ರವೇ ವಿಷ್ಣು ಸೂಕ್ತದಲ್ಲಿ ಸೇರಿಸಲ್ಪಟ್ಟಿದೆ ನ್ಯಾಯವಾಗಿ ಇದು ಇಲ್ಲಿ ಸೇರಲು ಕಾರಣವಿಲ್ಲ. ಆದರೆ ದುರ್ಗಾಚಾರ್ಯರು ನಿರುಕ್ತವಾಕ್ಯದ ವಿವರಣೆಯಲ್ಲಿ ವಾಂ ಎಂದರೆ ಯಜ್ಞಕರ್ತರಾದ ದಂಪತಿಗಳನ್ನುದ್ದೇಶಿಸಿದೆಯೆಂದು ಹೇಳಿದ್ದಾರೆ. ಆದರೆ ಅದು ಅಷ್ಟು ಸಮಂಜಸವಾಗಿಲ್ಲವೆಂದು Roth ಎಂಬುವನ ಅಭಿಪ್ರಾಯವು.

ಸಾಯಣರೂ ಸಹ ಹೇ ಪತ್ನೀಯಜಮಾನೌ ವಾಂ ಯುಷ್ಮದರ್ಥಂ। ಎಲೈ ಪತ್ನೀಯಜಮಾನರೇ, ನಿಮಗಾಗಿ ಎಂದು ವಾಂ ಎಂಬ ಪದದಿಂದ ಸೂಚಿತವಾಗಬಹುದಾದ ಅರ್ಥವನ್ನು ದಂಪತಿಗಳ ಪರವಾಗಿದೆಯೆಂದು ತಿಳಿಸಿದ್ದಾರೆ. ಈ ಋಕ್ಕಿಗೆ ನಿರುಕ್ತಕಾರರು ಈರೀತಿಯಾಗಿ ಅರ್ಥವಿವರಣೆಯನ್ನು ಮಾಡಿದ್ದಾರೆ

> ತಾನಿ ವಾಂ ವಾಸ್ತೂನಿ ಕಾಮಯಾಮಹೇ ಗಮನಾಯ ಯತ್ರ ಗಾವೋ ಭೂರಿಶೃಂಗಾಃ। ಬಹುಶೃಂಗಾ ಭೂರೀತಿ ಬಹುನೋ ನಾಮಧೇಯಂ ಪ್ರಭವತೀತಿ ಸತಃ। ಶೃಂಗಂ ಶ್ರಯತೇರ್ವಾ, ಶೃಣಾತೇರ್ವಾ, ಶಮ್ನಾತೇರ್ವಾ ಶರಣಾಯೋದ್ಗತಮಿತಿ ವಾ ಶಿರಸೋ ನಿರ್ಗತಮಿತಿ ವಾಯಾಸೋಽಯನಾಃ। ತತ್ರ ತದುರುಗಾಯಸ್ಯ ವಿಷ್ಣೋರ್ಮಹಾಗತೇಃ ಪರಮಂ ಪದಂ ಪರಾರ್ಧ್ಯಸ್ಥಮವಭಾತಿ ಭೂರಿ। ಪಾದಃ ಪದ್ಯತೇಃ॥
>
> (ನಿ. ೨-೭)

ಅತ್ಯುತ್ಕೃಷ್ಟವಾದ ಸ್ಥಾನದಲ್ಲಿ ಪ್ರತಿಷ್ಠಾಪಿತವಾದ ವಿಷ್ಣುವಿನ ಪರಮಪದವು ಅತ್ಯಧಿಕವಾಗಿ ಪ್ರಕಾಶಿಸುತ್ತಿದೆಯೆಂದು ತಾತ್ಪರ್ಯ. ಗಾವಃ ಎಂಬ ಪದದ ಅರ್ಥವನ್ನು ತಿಳಿಸಲು ಆನುಷಂಗಿಕವಾಗಿ ಈ ಋಕ್ಕನ್ನು ನಿರುಕ್ತಕಾರರು ಉದಾಹರಿಸಿದ್ದಾರೆ.

**ಸರ್ವೇಽಪಿ ರಶ್ಮಯಃ ಗಾವ ಉಚ್ಯಂತೇ ।** ರಶ್ಮಿಗಳಿಗೆ **ಗಾವಃ** ಎಂಬ ಹೆಸರು ಪ್ರಸಿದ್ಧವಾಗಿವೆಯಾದ್ದರಿಂದ (ನಿ ೨-೭) ಇಲ್ಲಿಯೂ ಸಹ **ಗಾವಃ** ಎಂದರೆ ರಶ್ಮಿಗಳೆಂದರ್ಥ. [**ಗೋಶಬ್ದಕ್ಕೆ** ಇತರಕ್ಕೆ ಅದಿತ್ಯಾದಿ ಬೇರೆ ಬೇರೆ ಅರ್ಥಗಳನ್ನು ಉದಾಹರಣೆಗಳೊಂದಿಗೆ ಹಿಂದೆ ತಿಳಿಸಿದೆ. ಈ ಪದಕ್ಕೆ **ಭೂರಿಶೃಂಗಾಃ, ಅಯಾಸಃ** ಎಂಬ ಎರಡು ಪದಗಳೂ ವಿಶೇಷಣಗಳಾಗಿವೆ.

**ಭೂರಿಶೃಂಗಾಃ—ಭೂರೀತಿ ಬಹುನೋ ನಾಮಧೇಯಂ ।** ಬಹುಸಂಖ್ಯಾಕವಾದುದು ಎಂಬುದನ್ನು ತೋರಿಸಲು **ಭೂರಿ** ಎಂಬ ಶಬ್ದದ ಪ್ರಯೋಗವಿದೆ. ಮತ್ತು ಆಶ್ರಯಿಸು ಎಂಬರ್ಥವನ್ನು ಕೊಡುವ **ಶ್ರಿ** ಧಾತುವಿನಿಂದಾಗಲಿ, ಹಿಂಸೆಮಾಡು ಎಂದರ್ಥವನ್ನು ಕೊಡುವ **ಶೃ** ಧಾತುವಿನಿಂದಾಗಲಿ, ಅದೇ ಅರ್ಥವನ್ನು ತೋರಿಸುವ **ಶಂ** ಧಾತುವಿನಿಂದಾಗಲಿ, ಈ ಪದವು ನಿಷ್ಪನ್ನವಾಗಬಹುದು. ಇದು ಪ್ರಾಣಿಗಳಿಗೆ ರಕ್ಷಕವಾಗಿರುವುದರಿಂದಾಗಲಿ ಅಥವಾ ಶಿರಸ್ಸಿನಿಂದ ಬೆಳೆದು ಹೊರಚಾಚಿರುವುದರಿಂದಾಗಲಿ **ಶೃಂಗ**ವೆಂಬ ಹೆಸರು ಪ್ರಸಿದ್ಧವಾಗಿದೆಯೆಂದು ನಿರುಕ್ತಕಾರರು ವಿವರಿಸಿದ್ದಾರೆ. (೨-೭).

**ಅಯಾಸಃ—ಅಯನಾಃ ।** ಅತ್ಯಂತ ಚುರುಕುಗತಿಯುಳ್ಳ ಎಂದು ಕಿರಣಗಳಿಗೆ ವಿಶೇಷಣವಾಗಿದೆ. **ಅಯನಾ ಗಂತಾರೋಽತಿವಿಸ್ತೃತಾಃ । ಯದ್ವಾ ಯಾಸೋ ಗಂತಾರಃ । ಅತಾದೃಶಾಃ । ಅತ್ಯಂತಪ್ರಕಾಶಯುಕ್ತಾ ಇತ್ಯರ್ಥಃ ।** ಅತ್ಯಂತ ವಿಸ್ತಾರವಾಗಿ ಪ್ರಸರಿಸಿದ ಎಂದಾಗಲಿ; ಅಥವಾ ವಿಸ್ತೃತವಾದ ಪ್ರಕಾಶವುಳ್ಳದ್ದೆಂದಾಗಲಿ ಅರ್ಥವಾಗುವುದೆಂದು ಸಾಯಣರು ವಿವರಿಸಿದ್ದಾರೆ. ಸತತವಾಗಿ ಗಮನಶೀಲವುಳ್ಳವರು ಅಥವಾ ಸರ್ವತ್ರ ಗಮನಶೀಲವುಳ್ಳದ್ದು ಎಂಬರ್ಥದಲ್ಲಿ ಈ ವಿಶೇಷಣವನ್ನು ಬಹುವಾಗಿ ಪ್ರಯೋಗಿಸಿದೆ.

ತಪೋ ಷ್ವಗ್ನೇ ಅಂತರಾँ ಅಮಿತ್ರಾನ್ ತಪಾ ಶಂಸಮರರುಷಃ ಪರಸ್ಯ ।
ತಪೋ ವಸೋ ಚಿಕಿತಾನೋ ಅಚಿತ್ತಾನ್ವಿ ತೇ ತಿಷ್ಠಂತಾಮಜರಾ ಅಯಾಸಃ ॥

(ಋ. ಸಂ. ೩-೧೮-೨)

ಇತ್ಯಾದಿ ಋಕ್ಕುಗಳಲ್ಲಿ ರಶ್ಮಿಗಳಿಗೆ ವಿಶೇಷಣವಾಗಿ **ಸರ್ವತ್ರ ಗಮನಾಃ ಸಂತಃ** ಎಂದರ್ಥವಾಗುತ್ತದೆ. ಇದರಂತೆಯೇ ಇದೇ ಅರ್ಥದಲ್ಲಿ ಮರುತ್ತುಗಳಿಗೂ ವಿಶೇಷಣವಾಗಿ ಉಪಯೋಗಿಸಲ್ಪಟ್ಟಿದೆ.

**ಉಶ್ಮಸಿ—ವಶ್ಮಿ, ಉಶ್ಮಸಿ, ವೇತಿ** ಇತ್ಯಾದಿ ಹದಿನೆಂಟು ಕಾಂತಿಕರ್ಮನಾಮಗಳಲ್ಲಿ ಪಠಿತವಾಗಿದೆ. (ನಿ. ೩-೯). ಪ್ರಕೃತವಾದ ಋಕ್ಕಿನಲ್ಲಿ **ಕಾಮಯಾಮಹೇ । ವಿಷ್ಣುಂ ಪ್ರಾರ್ಥಯಾಮಹೇ ।** ನಿಮಗಾಗಿ ಪ್ರಾರ್ಥಿಸುತ್ತೇವೆ ಎಂದು ದಂಪತಿಗಳನ್ನುದ್ದೇಶಿಸಿವೆಯೆಂದು ಭಾಷ್ಯಕಾರರು ಅರ್ಥಮಾಡಿದ್ದಾರೆ.

**ವಾಸ್ತೂನಿ—ಸುಖನಿವಾಸಯೋಗ್ಯಾನಿ ।** ಅತ್ಯಂತ ಸುಖಕಾರಿಯಾದ ವಾಸಸ್ಥಾನವೆಂದರ್ಥ. **ಪದೇ ಪರಮೇ ಮಧ್ವ ಉತ್ಸಃ ।** ವಿಷ್ಣುವಿನ ಪರಮಪದದಲ್ಲಿ ಅತ್ಯಂತ ಅತಿಶಯವಾದುದೂ, ಅದ್ವಿತೀಯವಾದುದೂ ಆದ ಆನಂದವು ಅವಿಚ್ಛಿನ್ನವಾಗಿ ಲಭಿಸುವುದರಿಂದ ಅಂತಹ ನಿವಾಸಸ್ಥಾನವು ನಿಮಗೂ ಲಭಿಸುವಂತೆ ಪ್ರಾರ್ಥಿಸುತ್ತೇವೆಂದು ತಾತ್ಪರ್ಯ. **ಯತ್ರ ಭೂರಿಶೃಂಗಾ ಅಯಾಸಃ ಗಾವಃ (ವಿದ್ಯಂತೇ) ಅತ್ರಾಹ ಉರುಗಾಯಸ್ಯ ಪರಮಂ ಪದಂ ಭೂರಿ ಅವಭಾತಿ ।** ಎಲ್ಲಿ ಮೇಲೆ ವರ್ಣಿಸಿದಂತೆ ಅತ್ಯಂತ ಪ್ರಕಾಶಮಾನವಾದವೂ, ಅತ್ಯುನ್ನತವಾಗಿಯೂ ಊರ್ಧ್ವಮುಖವಾಗಿಯೂ ಪ್ರಸರಿಸುವುವೂ, ಬಹುಸಂಖ್ಯಾಕವುಳ್ಳವೂ ಆದ ರಶ್ಮಿಗಳಿವೆಯೋ ಅಲ್ಲಿಯೇ ಅತ್ಯಂತ ಆನಂದದಾಯಕವಾದ ವಿಷ್ಣುವಿನ ಪರಮಪದವೂ ಸ್ಥಾಪಿತವಾಗಿದೆಯೆಂದು ತಾತ್ಪರ್ಯ.

ಇದು ಪರಮಪದದ ವರ್ಣನೆಯಾದರೂ, ವಿಷ್ಣುವಿನ ಪಾದಪ್ರಕ್ಷೇಪಣೆಗಳ ಮೂರು ಸ್ಥಾನಗಳನ್ನೂ ಅವುಗಳ ಮಹತ್ತ್ವವನ್ನೂ ಈ ಪಾದಪ್ರಕ್ಷೇಪಣೆಗಳಿಂದಲೇ ಅಂತರ್ಗತವಾಗಿ ಮಾಡಲ್ಪಟ್ಟ ಸಕಲಲೋಕಗಳ ಧಾರಣವನ್ನೂ ವರ್ಣಿಸುವುದೇ ಈ ಸೂಕ್ತದ ಮುಖ್ಯವಸ್ತುವಾಗಿದೆ. ಈ ವರ್ಣನೆಗಳಲ್ಲಿ **ವಿಚಕ್ರಮಾಣಃ, ತ್ರಿಷು ವಿಕ್ರಮಣೇಷು, ತ್ರಿಭಿರಿತ್ಪದೇಭಿಃ, ತ್ರೀ ಪೂರ್ಣಾ ಮಧುನಾ ಪದಾನಿ,** ಇತ್ಯಾದಿ ವಿಶೇಷಣಗಳಿಂದ ವಿವರಿಸತಕ್ಕ ಅಂಶವು ವಿಚಾರಾರ್ಹವಾದುದು. ಏತಕ್ಕೆಂದರೆ, ಸಾಧಾರಣವಾಗಿ ಈ ವಿಶೇಷಣಗಳೆಲ್ಲವೂ ಸಹ ಪೌರಾಣಿಕವಾದ ಕೃತಿಗಳಲ್ಲಿ ವರ್ಣಿಸುವ ವಾಮನಾವತಾರದ ವಿಶೇಷಾಂಶವನ್ನೂ ಸೂಚಿಸುವುವಾಗಿವೆ. ಋಕ್ಸಂಹಿತೆಯಲ್ಲಿ **ವಾಮನಾವತಾರಕ್ಕೆ** ಸಂಬಂಧಿಸಿದ ಕಥೆಯಾಗಲಿ ಅಥವಾ ಮತ್ತಾವ ವಿಧವಾದ ನಿರ್ದೇಶವಾಗಲಿ ಸಾಕ್ಷಾತ್ತಾಗಿ ಕಾಣುವುದಿಲ್ಲ. ಆದರೂ ಸಹ ಇಲ್ಲಿ ವರ್ಣಿತವಾಗಿರುವ **ತ್ರಿವಿಕ್ರಮವು** ಪುರಾಣಗಳಲ್ಲಿ ಸ್ತುತಿಸುವ ವಾಮನಾವತಾರದ ಕಥೆಗೆ ಆಧಾರವಾದಂತಾಗಿದೆ. ಸಾಯಣರೂ ಸಹ,

**ಅತೋ ದೇವಾ ಅವಂತು ನೋ ಯತೋ ವಿಷ್ಣುರ್ವಿಚಕ್ರಮೇ । ಪೃಥಿವ್ಯಾಃ ಸಪ್ತ ಧಾಮಭಿಃ ॥**

(ಋ. ಸಂ. ೧-೨೨-೧೬)

ಎಂಬ ಋಕ್ಕಿನ ಭಾಷ್ಯದಲ್ಲಿ **ವಿಷ್ಣೋಃ ತ್ರಿವಿಕ್ರಮಾವತಾರೇ ಪಾದತ್ರಯಕ್ರಮಣಸ್ಯ ।** ಎಂದು ಇಲ್ಲಿ ಉದಹರಿಸಿರುವ ಋಕ್ಕಿನ ವರ್ಣನೆಯಲ್ಲಿ ತ್ರಿವಿಕ್ರಮಾವತಾರದ ಕಾಲದಲ್ಲಿ ಪ್ರಸರಿಸಿದ ಪಾದತ್ರಯದ ಕ್ರಮಣಕ್ಕೆ ನಿರ್ದೇಶವಿದೆಯೆಂದು ಹೇಳಿದ್ದಾರೆ. ಆದರೆ ಇದರ ಮುಂದಿನ ಋಕ್ಕನ್ನು (೧-೨೨-೧೭) ವಿವರಿಸುವಾಗ ನಿರುಕ್ತಕಾರರ ವಾಕ್ಯಗಳಲ್ಲಿ ಈ ಕಥೆಗೆ ಸಂಬಂಧಿಸಿದ ಯಾವ ಸೂಚನೆಯೂ ಇಲ್ಲ. ಅದಲ್ಲದೇ **ಯಾಸ್ಕರು** ಉದಹರಿಸಿರುವ **ಶಾಕಪೂಣಿಯ** ವಾಕ್ಯಗಳಲ್ಲಾಗಲಿ ಅಥವಾ **ಔರ್ಣವಾಭನ** ವಾಕ್ಯಗಳಲ್ಲಾಗಲಿ ಈ ಕಥೆಗೆ ಸಂಬಂಧಿಸಿದಂತೆ ಯಾವ ವಾಕ್ಯವೂ ಇಲ್ಲ.

ತೈತ್ತಿರೀಯ ಸಂಹಿತೆಯಲ್ಲಿಯೂ ಶತಪಥಬ್ರಾಹ್ಮಣದಲ್ಲಿಯೂ ಐತರೇಯಬ್ರಾಹ್ಮಣದಲ್ಲಿಯೂ ಸಹ ವಾಮನಾವತಾರದ ಕಥೆಗೆ ಸಂಬಂಧಿಸಿದ ವರ್ಣನೆಯಿದೆ. ಶತಪಥಬ್ರಾಹ್ಮಣದಲ್ಲಿ, ದೇವಾಸುರರ ಹೋರಾಟದ ಕಾಲದಲ್ಲಿ ವಾಮನರೂಪಿಯಾದ ವಿಷ್ಣುವು ದೇವತೆಗಳಿಗೆ ಸಹಾಯಮಾಡಿದ ವಿಷಯವನ್ನು ಈ ರೀತಿಯಾಗಿ ಹೇಳಿದೆ.

**ದೇವಾಶ್ಚ ವಾ ಅಸುರಾಶ್ಚ । ಉಭಯೇ ಪ್ರಾಜಾಪತ್ಯಾಃ ಪಸ್ಪೃಧಿರೇ ತತೋ ದೇವಾ ಅನುವ್ಯಮಿವಾಸುರಥ ಹಾಸುರಾ ಮೇನಿರೇಽಸ್ಮಾಕಮೇವೇದಂ ಖಲು ಭುವನಮಿತಿ ॥ ತೇ ಹೋಚುಃ । ಹಂತೇಮಾಂ ಪೃಥಿವೀಂ ವಿಭಜಾಮಹೈ ತಾಂ ವಿಭಜ್ಯೋಪಜೀವಾಮೇತಿ ತಾಮೌಕ್ಷ್ಣೈಶ್ಚರ್ಮಭಿಃ ಪಶ್ಚಾತ್ಪ್ರಾಂಚೋ ವಿಭಜಮಾನಾ ಅಭೀಯುಃ ॥ ತದ್ವೈ ದೇವಾಃ ಶುಶ್ರುವುಃ। ವಿಭಜಂತೇ ಹ ವಾ ಇಮಾಮಸುರಾಃ ಪೃಥಿವೀಂ ಪ್ರೇತ ತದೇಷ್ಯಾಮೋ ಯತ್ರೇಮಾಮಸುರಾ ವಿಭಜಂತೇ ಕೇ ತತಃ ಸ್ಯಾಮ ಯದಸ್ಯೈ ನ ಭಜೇಮಹೀತಿ ತೇ ಯಜ್ಞಮೇವ ವಿಷ್ಣುಂ ಪುರಸ್ಕೃತ್ಯೇಯುಃ ॥ ತೇ ಹೋಚುಃ । ಅನು ನೋಽಸ್ಯಾಂ ಪೃಥಿವ್ಯಾಮಾಭಜತಾಸ್ತ್ವೇವ ನೋಽಪ್ಯಸ್ಯಾಂ ಭಾಗ ಇತಿ ತೇ ಹಾಸುರಾ ಅಸೂಯಂತ ಇವೋಚುರ್ಯಾವದೇವೈಷ ವಿಷ್ಣುರಭಿಶೇತೇ ತಾವದ್ವೋ ದದ್ಮ ಇತಿ ॥ ವಾಮನೋ ಹ ವಿಷ್ಣುರಾಸ । ತದ್ದೇವಾ ನ ಜಿಹೀಡಿರೇ ಮಹದ್ವೈ ನೋಽದುರ್ಯೇ ನೋ ಯಜ್ಞಸಂಮಿತಮದುರಿತಿ । ತೇ ಪ್ರಾಂಚಂ ವಿಷ್ಣುಂ ನಿಪಾದ್ಯ । ಛಂದೋಭಿರಭಿತಃ ಪರ್ಯಗೃಹ್ಣನ್ ಗಾಯತ್ರೇಣ ತ್ವಾ**

ಛಂದಸಾ ಪರಿಗೃಹ್ಣಾಮೀತಿ ದಕ್ಷಿಣತಸ್ತ್ರೈಷ್ಟುಭೇನ ತ್ವಾ ಛಂದಸಾ ಪರಿಗೃಹ್ಣಾಮೀತಿ ಪಶ್ಚಾಜ್ಜಾ-
ಗತೇನ ತ್ವಾ ಚ್ಛಂದಸಾ ಪರಿಗೃಹ್ಣಾಮೀತ್ಯುತ್ತರತಃ ॥ ತಂ ಛಂದೋಭಿರಭಿತಃ ಪರಿಗೃಹ್ಯ ॥
.... .... .... .... .... ಸೌಮ್ಯಸ್ಯಾಧ್ವರಸ್ಯ ವೇದಿಂ ಚಕ್ರೇ ॥

(ಶ. ಬ್ರಾ. ೧-೨-೩-೧ ರಿಂದ ೯)

ಪ್ರಜಾಪತಿಪುತ್ರರಾದ ದೇವತೆಗಳೂ ಅಸುರರೂ ಒಂದೆ ಪರಸ್ಪರವಾದ ಮೇಲ್ಮೆಗಾಗಿ ಹೋರಾಟಮಾಡುತ್ತಿದ್ದಾಗ ಅಸುರರು ಪ್ರಬಲರಾಗಿ ಪೃಥ್ವಿಯೆಲ್ಲಾ ತಮಗೇ ಸೇರಿದುದೆಂದು ತಿಳಿದರು. ಅನಂತರ ವೃಷಭದ ಚರ್ಮದಿಂದ ಭೂಮಿಯನ್ನಳೆದು ತಮ್ಮತಮ್ಮಲ್ಲೇ ಹಂಚಿಕೊಳ್ಳುವ ಪ್ರಯತ್ನವನ್ನು ಮಾಡಿದರು. ಆಗ ದೇವತೆಗಳು ಸಾಕ್ಷಾದ್ಯಜ್ಞರೂಪಿಯಾದ ವಿಷ್ಣುವನ್ನು ತಮ್ಮ ಮುಂದಾಳಾಗಿರಿಸಿ ಅಸುರರಲ್ಲಿಗೆ ಹೋಗಿ ಪೃಥ್ವಿಯಲ್ಲಿ ಅವರೊಂದಿಗೆ ತಮಗೂ ಸ್ವಲ್ಪ ಭಾಗವು ಸೇರಬೇಕೆಂದು ಕೇಳಿಕೊಂಡಾಗ ಅಸುರರು ಅರ್ಧಮನಸ್ಸಿನೊಡನೆ ಒಪ್ಪಿಕೊಂಡು ಅವರ ಮುಂದಾಳಾಗಿರುವ ವಿಷ್ಣುವು ಆಕ್ರಮಿಸುವಷ್ಟು ಸ್ಥಾನವನ್ನು ಮಾತ್ರ ದೇವತೆಗಳಿಗೆ ಬಿಟ್ಟುಕೊಡುವುದಾಗಿಯೂ ಅದಕ್ಕಿಂತಲೂ ಅಧಿಕವಾಗಿ ಖಂಡಿತವಾಗಿಯೂ ಕೊಡುವುದಿಕ್ಕಾಗುವುದಿಲ್ಲವೆಂದೂ ತಿಳಿಸಿದರು. **ವಿಷ್ಣುವು ವಾಮನ**ರೂಪಿಯಾಗಿದ್ದನು. [ ಕೇವಲ ಕೊಂಚ ಸ್ಥಾನವನ್ನು ಮಾತ್ರ ಆಕ್ರಮಿಸುತ್ತಾನೆಂದು ಅಸುರರು ತಿಳಿದಿದ್ದರು. ] ಆದರೂ ದೇವತೆಗಳು ಅದರಿಂದ ಖಿನ್ನರಾಗದೇ **ಯಜ್ಞರೂಪಿಯಾದ** ವಿಷ್ಣುವು ಆಕ್ರಮಿಸುವಷ್ಟು ಸ್ಥಾನವನ್ನು ಮಾತ್ರ ಅವರಿಗೆ ಸಾಕೆಂದರು. ಆಗ ಅವನನ್ನು ಪೂರ್ವಾಭಿಮುಖವಾಗಿರಿಸಿ ದಕ್ಷಿಣದಲ್ಲಿ **ಗಾಯತ್ರೀ**ಛಂದಸ್ಸಿನಿಂದಲೂ, ಪಶ್ಚಿಮದ ಕಡೆ **ತ್ರಿಷ್ಟುಪ್**ಛಂದಸ್ಸಿನಿಂದಲೂ, ಉತ್ತರದ ಕಡೆ **ಜಗತೀ**ಛಂದಸ್ಸಿನಿಂದಲೂ, ಸಹ ಆವರಣವನ್ನು ಕಲ್ಪಿಸಿದರು. ಆಗ ಪೃಥ್ವಿಯೆಲ್ಲಾ ವೇದಿರೂಪವಾಗಿ ಕಲ್ಪಿತವಾದಂತಾಗಿ ಸಕಲ ಪೃಥ್ವಿಯೂ ಯಜ್ಞರೂಪಿಯಾದ ವಿಷ್ಣುವಿನಿಂದಲೇ ವ್ಯಾಪ್ತವಾಯಿತು. ಅದು ದೇವತೆಗಳಿಗೆ ಸುಲಭವಾಗಿ ಪೃಥ್ವಿಯನ್ನೆಲ್ಲಾ ಒದಗಿಸಿಕೊಟ್ಟಂತಾಯಿತು ಎಂದು ಮುಂದೆ ಪೌರಾಣಿಕವಾದ ವಾಮನಾವತಾರದ ಕಥೆಗೂ ಅಲ್ಲಿನ ದೇವಾಸುರರ ಹೋರಾಟಕಾಲದಲ್ಲಿ **ವಾಮನನು ಬಲಿಯನ್ನು** ವಂಚಿಸಿ ದೇವತೆಗಳಿಗೆ ಸಹಾಯಮಾಡಿದ ಕಥಾಭಾಗಕ್ಕೂ ಆಧಾರವಾದಂತಾಗಿದೆ. ಇದೇ ಸನ್ನಿವೇಶವನ್ನು ತೈತ್ತಿರೀಯಬ್ರಾಹ್ಮಣದಲ್ಲಿ,

ತೇಽಗ್ನಿನಾ ಪ್ರಾಂಚೋಽಜಯನ್ । ವಸುಭಿರ್ದಕ್ಷಿಣಾ । ರುದ್ರೈಃ ಪ್ರತ್ಯಂಚಃ । ಆದಿತ್ಯೈ-
ರುದಂಚಃ । ಯಸ್ಯೈವಂ ವಿದುಷೋ ವೇದಿಂ ಪರಿಗೃಹ್ಣಂತಿ ॥

(ತೈ. ಬ್ರಾ. ೩-೨-೯-೭)

ಎಂಬ ವಾಕ್ಯಗಳಿಂದ ಸೂಚಿಸಿದೆ. ಇದೇ ಅಂಶವನ್ನು ಐತರೇಯಬ್ರಾಹ್ಮಣದಲ್ಲಿ,

ನ ಹಿ ತಯೋಃ ಕತರಶ್ಚನ ಪರಾಜಿಗ್ಯೇ । ಇಂದ್ರಶ್ಚ ವಿಷ್ಣೋ ಯದಪಸ್ಪೃಧೇಥಾಂ ತ್ರೇಧಾ
ಸಹಸ್ರಂ ವಿ ತದೈರಯೇಥಾಮಿತಿ । ಇಂದ್ರಶ್ಚ ಹ ವೈ ವಿಷ್ಣುಶ್ಚಾಸುರೈರ್ಯುಯುಧಾತೇ
ತಾನ್ಹ ಸ್ಮ ಜಿತ್ವೋಚತುಃ ಕಲ್ಪಾಮಹಾ ಇತಿ ತೇ ಹ ತಥೇತ್ಯಸುರಾ ಊಚುಃ ಸೋಽಬ್ರ-
ವೀದಿಂದ್ರೋ ಯಾವದೇವಾಯಂ ವಿಷ್ಣುಸ್ತ್ರಿವಿಕ್ರಮತೇ ತಾವದಸ್ಮಾಕಮಥ ಯುಷ್ಮಾಕ-
ಮಿತರದಿತಿ ಸ ಇಮಾನ್ ಲೋಕಾನ್ವಿಚಕ್ರಮೇಽಥೋ ವೇದಾನಥೋ ವಾಚಂ ತದಾಹುಃ ಕಿಂ
ತತ್ಸಹಸ್ರಮಿತೀಮೇ ಲೋಕಾ ಇಮೇ ವೇದಾ ಅಥೋ ವಾಗಿತಿ ಬ್ರೂಯಾತ್ ॥

(ಐ. ಬ್ರಾ. ೬-೧೫)

ಇಂದ್ರನಾಗಲಿ ವಿಷ್ಣುವಾಗಲಿ ಅಪಜಯವನ್ನು ಕಂಡವರೇ ಅಲ್ಲ. ಒಂದೆ ಅಸುರರೊಂದಿಗೆ ಹೋರಾಡಿ ಅವರನ್ನು ಸೋಲಿಸಿದಾಗ ಪೃಥ್ವಿಯನ್ನು ಹಂಚಿಕೊಳ್ಳಬೇಕೆಂದು ಸಲಹೆ ಬಂದಾಗ ವಿಷ್ಣುವಿನ ಮೂರು ಪಾದಗಳಿಂದ ಆಕ್ರಮಿತವಾದ ಪ್ರದೇಶಗಳುಳಿದು ಮಿಕ್ಕ ಪ್ರದೇಶವೆಲ್ಲಾ ಅಸುರರದು ಎಂದು ಒಪ್ಪಿಗೆಗೆ ಬಂದಾಗ ಆಗ ವಿಷ್ಣುವಿನ ಮೂರು ಪಾದಗಳೂ ಆಕ್ರಮಿಸಿದ್ದ ಮೂರು ಲೋಕಗಳಿಗೂ ಇಂದ್ರನೇ ಸ್ವಾಮಿಯಾದನು. ಅಸುರರನ್ನು ಓಡಿಸಿ (ದೇವತೆಗಳೊಡನೇ) ತಾನೇ ಮೂರು ಲೋಕವನ್ನು ಆಕ್ರಮಿಸಿದನು ಎಂಬುದು ಇಲ್ಲಿ ವರ್ಣಿತವಾಗಿರುವ ಕಥೆ.

ಆದರೆ **ವಾಮನ** ಶಬ್ದಕ್ಕೆ ನಿಷ್ಕೃಷ್ಟವಾದ ಅರ್ಥವೇನೆಂಬುವನ್ನು ತಿಳಿಯುವುದು ಕಷ್ಟವಾದುದರಿಂದ ಆಧುನಿಕ ಪಂಡಿತರಲ್ಲಿ ಈ ವಿಷಯದಲ್ಲಿ ಅಭಿಪ್ರಾಯಭೇದಗಳಿರುವುವು. ಈ ವಿಷಯದಲ್ಲಿರುವ ಬೇರೆ ಬೇರೆ ಪಂಡಿತರ ಅಭಿಪ್ರಾಯಗಳನ್ನೆಲ್ಲಾ ಸಂಗ್ರಹಿಸಿ R. N. ದಂಡೇಕರ್ ಎಂಬ ಪಂಡಿತರು ಈರೀತಿ ತಿಳಿಸಿದ್ದಾರೆ.

What the primary notion underlying Vishnu's dwarf-form was, it is not easy to imagine. A. Khun thought that the dwarf represented the sun-light which shrinks inot dwarf size in the evening. Oldenberg Proposed that the idea evolved out of a fable about a wide-stepping giant who could turn himself into a dwarf. This is evidently far-fetched, since a fable-motive cannot be the centre of a myth. According to Keith, Macdonell, Hillebrandt Vishnu assumed the dwarf form only by way of a stratagem in order to mislead the Asura's An ethical interpretation of this ಅವತಾರ is given by Macnicol who believes that it is suggestive of strength and safety issuing out of smallness and weekness. N. Iyyengar thinks that Vishnu seen as a little dwarf in the form of the sacrificial fire on earth takes the giant strides in the forms of Vidyut and Surya. R. Shama Shastry refers to the 'dwarfish shadow' while explaining the Avataras on the basis of astronomical phenomena.

( A Volume of Studies in Indology. Presented to Prof. P. V. Kane. P. 105 ).

ಇವುಗಳಲ್ಲೆಲ್ಲಾ **ಎನ್. ಅಯ್ಯಂಗಾರ್** ಎಂಬುವರು ಹೇಳತಕ್ಕ ಅಭಿಪ್ರಾಯವು **ಶತಪಥಬ್ರಾಹ್ಮಣದಲ್ಲಿ** ವರ್ಣಿತವಾಗಿರುವ ಅಂಶಕ್ಕೆ ಹೊಂದಿಕೊಳ್ಳುತ್ತದೆ. ಈ ಪಂಡಿತರು ಹೇಳುವಂತೆ ಸೂಕ್ಷ್ಮರೂಪದಲ್ಲಿದ್ದ ಯಜ್ಞಾಗ್ನಿಯು ಕ್ರಮವಾಗಿ ವೃದ್ಧಿಗೊಂಡು ಪೃಥ್ವಿಯನ್ನೆಲ್ಲಾ ಆಕ್ರಮಿಸಿ ಅನಂತರ ವಿದ್ಯುದ್ರೂಪದಲ್ಲಿಯೂ ಸೂರ್ಯರೂಪದಲ್ಲಿಯೂ ಉಳಿದೆರಡು ಲೋಕಗಳನ್ನೂ ಆಕ್ರಮಿಸಿತು ಎಂಬ ಅಭಿಪ್ರಾಯವು **ಯಜ್ಞರೂಪಿಯಾದ ವಿಷ್ಣುವು** ವೇದಿರೂಪದಲ್ಲಿ ಪೃಥ್ವಿಯನ್ನೂ ಸಮಸ್ತ ಲೋಕವನ್ನೂ **ಅಗ್ನ್ಯಾಕಾರದಿಂದ** ಆಕ್ರಮಿಸಿದನು ಎಂದು ಮೇಲೆ ಹೇಳಿರುವ ಶತಪಥ ಬ್ರಾಹ್ಮಣದ ವರ್ಣನೆಗೆ ಅನುರೂಪವಾಗಿದೆ.

### ವ್ಯಾಕರಣಪ್ರಕ್ರಿಯಾ

ವಾಸ್ತೂನಿ--ವಸ ನಿವಾಸೇ ಧಾತು. ಇದಕ್ಕೆ ಣಿಜಂತದ ಮೇಲೆ ಔಣಾದಿಕ ತುನ್ ಪ್ರತ್ಯಯ. ಣಿಚ್ ನಿಮಿತ್ತವಾಗಿ ಉಪಧಾವೃದ್ಧಿ.

**ಉಶ್ಮಸಿ**—ವಶ ಕಾಂತೌ ಧಾತು. ಲಟ್ ಉತ್ತಮಪುರುಷಏಕವಚನದಲ್ಲಿ ಮಸ್ ಪ್ರತ್ಯಯ. **ಇದಂತೋ ಮಸಿ** (ಪಾ. ಸೂ ೭-೧-೪೬) ಎಂಬುದರಿಂದ ಅದಕ್ಕೆ ಇಕಾಗಮ. **ಅದಿಪ್ರಭೃತಿಭ್ಯಃ ಶಪಃ** ಎಂಬುದರಿಂದ ಶಪಿಗೆ ಲುಕ್. **ಸಾರ್ವಧಾತುಕಮಪಿತ್** ಎಂಬುದರಿಂದ ಪ್ರತ್ಯಯಕ್ಕೆ ಙಿತ್ವವಿರುವುದರಿಂದ **ಗ್ರಹಿಜ್ಯಾವಯಿ-ವ್ಯಧಿ**—(ಪಾ. ಸೂ. ೬-೧-೧೬) ಎಂಬುದರಿಂದ ಧಾತುವಿಗೆ ಸಂಪ್ರಸಾರಣ. ಪೂರ್ವರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಗಮಧ್ಯೈ**—ಗಮ್ಲೃ ಗತೌ ಧಾತು. ತುಮುನರ್ಥದಲ್ಲಿರುವಾಗ **ತುಮರ್ಥೇಸೇಸೇನಸೇ**-(ಪಾ. ಸೂ. ೩-೪-೯) ಎಂಬುದರಿಂದ ಅಧ್ಯೈನ್ ಪ್ರತ್ಯಯ. **ಞ್ನಿತ್ಯಾದಿರ್ನಿತ್ಯಮ್** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಭೂರಿಶೃಂಗಾಃ**—ಭೂರೀಣಿ ಶೃಂಗಾಣಿ ಯಾಸಾಂ ತಾಃ ಭೂರಿಶೃಂಗಾಃ **ಬಹುವ್ರೀಹೌ ಪ್ರಕೃತ್ಯಾ-ಪೂರ್ವಪದಮ್** ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಅಯಾಸಃ**—ಅಯ ಗತೌ ಧಾತು. ಪಚಾದಿ ಆಕೃತಿಗಣವಾದುದರಿಂದ **ನಂದಿಗ್ರಹಪಚಾದಿಭ್ಯೋ-**(ಪಾ. ಸೂ. ೩-೧-೧೩೪) ಎಂಬುದರಿಂದ ಅಚ್ ಪ್ರತ್ಯಯ. ಚಿತ್ತಾದುದರಿಂದ ಅಂತೋದಾತ್ತವಾಗುತ್ತದೆ. ಜಸ್ ಪರವಾದಾಗ **ಆಜ್ಜಸೇರಸುಕ್** (ಪಾ. ಸೂ. ೭-೧-೫೦) ಎಂಬುದರಿಂದ ಅದಕ್ಕೆ ಅಸುಕಾಗಮ. ಸಕಾರಕ್ಕೆ ರುತ್ವ ವಿಸರ್ಗ.

**ಭಾತಿ**—ಭಾ ದೀಪ್ತೌ ಧಾತು. ಲಟ್ ಪ್ರಥಮಪುರುಷಏಕವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೬ ॥

ಇಲ್ಲಿಗೆ ೧೫೪ನೇ ಸೂಕ್ತವು ಮುಗಿದುದು.

———— :c: ————

## ನೂರ ಐವತ್ತೈದನೆಯ ಸೂಕ್ತವು

**ಪ್ರ ವಃ ಪಾಂತಮಿತಿ ಷಡೃಚಂ ಷೋಡಶಂ ಸೂಕ್ತಂ ದೈರ್ಘತಮಸಂ ಜಾಗತಂ । ಪೂರ್ವತ್ರ ವೈಷ್ಣವಂ ಹೀತ್ಯುಕ್ತತ್ವಾದ್ವೈಷ್ಣವಂ । ಆದ್ಯಸ್ತೃಚ ಇಂದ್ರದೇವತಾಕಶ್ಚ । ಪ್ರ ವೋ ಜಾಗತಂ ತ್ವೈಂದ್ರ-ಶ್ಚಾದ್ಯಸ್ತೃಚ ಇತ್ಯನುಕ್ರಮಣಿಕಾ ॥ ಆಭಿಪ್ಲವಿಕೇಷೂಕ್ಥ್ಯೇಷು ಸ್ತೋಮಾತಿಶಂಸನ ಉಕ್ತೋ ವಿನಿ-ಯೋಗಃ ॥**

ಅನುವಾದವು—**ಪ್ರ ವಃ ಪಾಂತಂ** ಎಂಬ ಈ ಸೂಕ್ತವು ಇಪ್ಪತ್ತೊಂದನೆಯ ಅನುವಾಕದಲ್ಲಿ ಹದಿನಾರನೆಯ ಸೂಕ್ತವು. ಇದರಲ್ಲಿ ಆರು ಋಕ್ಕುಗಳಿರುವುವು. ಈ ಸೂಕ್ತಕ್ಕೆ ದೀರ್ಘತಮಾ ಔಚಥ್ಯಃ ಎಂಬುವನು ಋಷಿಯು ಜಗತೀಛಂಸ್ಸು. ಹಿಂದೆ ಹೇಳಿದಂತೆ ಈ ಸೂಕ್ತಕ್ಕೆ ವಿಷ್ಣುವೇ ದೇವತೆಯು. ಮೊದಲನೆಯ ಮೂರು ಋಕ್ಕುಗಳ. ಇಂದ್ರದೇವತಾಕವೂ ಹೌದು. ಅನುಕ್ರಮಣಿಕೆಯಲ್ಲಿ—**ಪ್ರ ವೋ ಜಾಗತಂ ತ್ವೈಂದ್ರಶ್ಚಾದ್ಯಸ್ತೃಚಃ** ಎಂದು ಹೇಳಿರುವುದು. ಅಭಿಪ್ಲವಷಡಹ ಮತ್ತು ಉಕ್ಥ್ಯ ಎಂಬ ಯಾಗವಿಶೇಷಗಳಲ್ಲಿ ಸ್ತೋಮಾತಿಶಂಸನಕ್ಕಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಹೇಳಲ್ಪಟ್ಟಿರುವುದು.

॥ ಓಂ ॥

## ಸೂಕ್ತ—೧೫೪

॥ ಮಂಡಲ—೧ ॥ ಅನುವಾಕ—೨೧ ॥ ಸೂಕ್ತ—೧೫೪ ॥

॥ ಅಷ್ಟಕ— ೨ ॥ ಅಧ್ಯಾಯ— ೨ ॥ ವರ್ಗ— ೨೪ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ-೬ ॥

॥ ಋಷಿಃ—ದೀರ್ಘತಮಾ ಔಚಥ್ಯಃ ॥

॥ ದೇವತಾ—೧-೩. ವಿಷ್ಣುರಿಂದ್ರಶ್ಚ । ೪-೬. ವಿಷ್ಣುಃ ॥

॥ ಛಂದಃ—ಜಗತೀ ॥

### ಸಂಹಿತಾಪಾಠಃ

ಪ್ರ ವಃ ಪಾಂತಮಂಧಸೋ ಧಿಯಾಯತೇ ಮಹೇ ಶೂರಾಯ ವಿಷ್ಣವೇ ಚಾರ್ಚತ ।
ಯಾ ಸಾನುನಿ ಪರ್ವತಾನಾಮದಾಭ್ಯಾ ಮಹಸ್ತಸ್ಥತುರರ್ವತೇವ ಸಾಧುನಾ ॥ ೧ ॥

### ಪದಪಾಠಃ

ಪ್ರ । ವಃ । ಪಾಂತಂ । ಅಂಧಸಃ । ಧಿಯಾಽಯತೇ । ಮಹೇ । ಶೂರಾಯ । ವಿಷ್ಣವೇ । ಚ । ಅರ್ಚತ ।
ಯಾ । ಸಾನುನಿ । ಪರ್ವತಾನಾಂ । ಅದಾಭ್ಯಾ । ಮಹಃ । ತಸ್ಥತುಃ । ಅರ್ವತಾಽಇವ । ಸಾಧುನಾ ॥ ೧ ॥

### ಸಾಯಣಭಾಷ್ಯಂ

ಹೇ ಅಧ್ವರ್ಯ್ವಾದಯಃ ವೋ ಯುಷ್ಮಾಕಂ ಸಂಬಂಧಿ ಪಾಂತಂ ಪಾಲನಸ್ವಭಾವಂ ಪಾತವ್ಯಂ ವಾಂಧಸೋಽಂಧಃ ಸೋಮರೂಪಮನ್ನಂ ಪ್ರಾರ್ಚತ । ಪ್ರಕರ್ಷೇಣ ಸಂಪಾದಯತ । ಕಸ್ಮೈ । ಧಿಯಾಯತೇ ಸ್ತುತೀರಿಚ್ಛತೇ ಮಹೇ ಮಹತೇ ಶೂರಾಯ ವಿಕ್ರಾಂತಾಯೇಂದ್ರಾಯ ವಿಷ್ಣವೇ ವ್ಯಾಪಕಾಯೈತನ್ನಾಮಕಾಯ ದೇವಾಯ ಚ । ಕಸ್ತಯೋರತಿಶಯ ಇತಿ ಉಚ್ಯತೇ । ಯಾ ಯಾವಿಂದ್ರಾವಿಷ್ಣೂ ಪರ್ವತಾನಾಂ ಪ್ರೀಣನವತಾಂ ಪೂರಣವತಾಂ ವಾ ಪರ್ವತಶಬ್ದೋ ಯಾಸ್ಕೇನೈವಂ ನಿರುಕ್ತಃ । ಪರ್ವವಾನ್ ಪರ್ವತಃ ಪರ್ವ ಪುನಃ ಪೃಣಾತೇಃ ಪ್ರೀಣಾತೇರ್ವೇತಿ । ಉಕ್ತಲಕ್ಷಣಾನಾಂ ಲೋಕಾನಾಂ ಸಾನುನಿ

**ಸಮುಚ್ಛ್ರಿತಪ್ರದೇಶೇ । ಸರ್ವಲೋಕ ಇತ್ಯರ್ಥಃ । ಅಥವಾ ಮೇಘಾನಾಂ ಸಮುಚ್ಛ್ರಿತಪ್ರದೇಶೇ । ಪರ್ವತಶಬ್ದೋ ಮೇಘನಾಮಸೂಕ್ತತ್ವಾತ್ । ತತ್ರ ತಸ್ಥತುಃ । ತಿಷ್ಠತಃ । ಕೀದೃಶೌ ತೌ । ಅದಾಭ್ಯಾ-ದಂಭನೀಯೌ ಪರೈರನಭಿಭಾವ್ಯೌ ಅತ ಏವ ಮಹೋ ಮಹಾಂತೌ । ಯದ್ವಾ । ಮಹೋ ಮಹಸಿ ಸ್ವತೇಜಸಿ ಸಾನುನೀತ್ಯನೇನ ಸಂಬಂಧಃ । ತತ್ರ ದೃಷ್ಟಾಂತಃ । ಸಾಧುನಾಭಿಮತದೇಶಪ್ರಾಪಣಸಮರ್ಥೇ-ನಾರ್ವತಾ ವೇಗವತಾಶ್ವೇನೇವ । ತೇನ ಯಥಾತ್ಯುಚ್ಛ್ರಿತಂ ಪ್ರದೇಶಮಾರೋಹತಿ ತದ್ವದುಚ್ಚಂ ಪದಮಾ-ರೂಢೌ । ತಸ್ಮಾತ್ತಾಭ್ಯಾಮರ್ಚತ ॥**

। ಪ್ರತಿಪದಾರ್ಥ ।

(ಎಲೈ ಅಧ್ವರ್ಯ್ವಾದಿಗಳೇ) । **ಅದಾಭ್ಯಾ**—ಅಪ್ರತಿಹತರಾದವರೂ । **ಮಹಃ**—ಮಹಾತ್ಮರೂ ಆದ । **ಯಾ**—ಯಾವ ಇಂದ್ರಾವಿಷ್ಣುಗಳಿಬ್ಬರೂ । **ಪರ್ವತಾನಾಂ** - ಪರ್ವತಗಳ । **ಸಾಮನಿ**—ಶಿಖರಗಳಲ್ಲಿ । [ಅಥವಾ **ಪರ್ವತಾನಾಂ**—ಪರ್ವತಗಳಂತಿರುವ ಮೇಘಗಳ । **ಸಾನುನಿ**—(ಇಷ್ಟಪಟ್ಟ ಸ್ಥಳಗಳಿಗೆ) ಹೋಗಲು ಸಮರ್ಥವಾದ (ಪಳಗಿದ) ] । **ಅರ್ವತಾ ಇವ**—ಕುದುರೆಗಳನ್ನು ಹತ್ತಿಕೊಂಡು ಎತ್ತರವಾದ ಪ್ರದೇಶಗಳಿಗೆ ಹತ್ತುತ್ತಿರುವಂತೆ । **ತಸ್ಥತುಃ**—(ವೈಭವದಿಂದ) ನಿಂತಿರುವರೋ । ಅಂತಹ **ಧಿಯಾಯತೇ**—ಸ್ತುತಿಯನ್ನು ಅಪೇಕ್ಷಿಸುವವನೂ । **ಮಹೇ**—ಪ್ರಭಾವಶಾಲಿಯೂ । **ಶೂರಾಯ**—ಪರಾಕ್ರಮಿಯೂ ಆದ ಇಂದ್ರನಿಗೂ । **ಚ**—ಮತ್ತು । **ವಿಷ್ಣವೇ**—ವಿಷ್ಣುವಿಗೂ ಸಹ । **ವಃ**—ನಿಮ್ಮ । **ಪಾಂತಂ**—ಪೋಷಕವಾದ ಅಥವಾ ಪೋಷ್ಯವಾದ । **ಅಂಧಸಃ**—ಸೋಮರೂಪವಾದ ಅನ್ನವನ್ನು । **ಪ್ರಾರ್ಚತ**—ಅರ್ಪಿಸಿರಿ.

॥ ಭಾವಾರ್ಥ ॥

ಎಲೈ ಅಧ್ವರ್ಯ್ವಾದಿಗಳೇ, ಅಪ್ರತಿಹತರಾದವರೂ ಮಹಾತ್ಮರೂ ಆದ ಇಂದ್ರ ಮತ್ತು ವಿಷ್ಣುಗಳಿಬ್ಬರೂ ಸಹ ಶಿಖರಗಳಂತಿರುವ ಮೇಘಗಳ ಉನ್ನತವಾದ ಪ್ರದೇಶಗಳಲ್ಲಿ ಪಳಗಿದ ಕುದುರೆಗಳನ್ನು ಹತ್ತಿಕೊಂಡು ಎತ್ತರವಾದ ಪ್ರದೇಸಗಳಿಗೆ ಹತ್ತುತ್ತಿರುವಂತೆ ವೈಭವದಿಂದ ನಿಂತಿರುತ್ತಾರೆ. ಸ್ತುತಿಯನ್ನು ಅಪೇಕ್ಷಿಸುವವನೂ ಪ್ರಭಾವಶಾಲಿಯೂ ಪರಾಕ್ರಮಶಾಲಿಯೂ ಆದ ಇಂದ್ರನಿಗೂ ಮತ್ತು ವಿಷ್ಣುವಿಗೂ ಸಹ ನಿಮ್ಮ ಪೋಷಕವಾದ ಸೋಮರೂಪವಾದ ಅನ್ನವನ್ನು ಅರ್ಪಿಸಿರಿ.

English Tranlation

Offer your nutritious viands to the great hero, (Indra), who is pleased by praise, and to Vishnu, the two invincible deities who ride upon the radiant summit of the clouds, as upon a well-trained steed·

ವಿಶೇಷವಿಷಯಗಳು

**ಅದಾಭ್ಯಾ**—ಅದಂಭನೀಯೌ ಪರೈರನಭಿಭಾವ್ಯೌ । ಶತ್ರುಗಳಿಂದ ಹಿಂಸಿತರಾಗದಿರುವವರು ಮತ್ತು ಅಪ್ರತಿಹತರಾದವರು. ಹಿಂಸಿಸು, ನಾಶಮಾಡು ಎಂಬರ್ಥವನ್ನು ಕೊಡುವ **ದಭ್** ಧಾತುವಿನ ನಿಷೇಧಾರ್ಥಕರೂಪದಲ್ಲಿ **ಅದಾಭ್ಯಾ** ಎಂದು ನಿಷ್ಪನ್ನವಾಗಿ ಇಂದ್ರಾವಿಷ್ಣುಗಳಿಗೆ ವಿಶೇಷಣವಾಗಿದೆ.

**ಪರ್ವತಾನಾಂ—ಪರ್ವವಾನ್ ಪರ್ವತಃ । ಪರ್ವ ಪುನಃ ಪೃಣಾತೇಃ ಪ್ರೀಣಾತೇರ್ವಾ ।** ತುಂಬು ಎಂಬರ್ಥವನ್ನು ಕೊಡುವ **ಪೃ** ಧಾತುವಿನಿಂದಾಗಲಿ ಅಥವಾ ತೃಪ್ತಿಪಡಿಸು ಎಂಬರ್ಥವನ್ನು ಕೊಡುವ **ಪ್ರೀ** ಧಾತುವಿನಿಂದಾಗಲಿ ಪರ್ವ ಶಬ್ದವು ನಿಷ್ಪನ್ನವಾಗಿದೆ. ಅಂತಹ ಪರ್ವಗಳುಳ್ಳದ್ದು ಪರ್ವತವು.

**ಸಾನುನಿ—ಸಾನು ಸಮುಚ್ಛ್ರಿತಂ ಭವತಿ । ಸಮುನ್ನುನ್ನಮಿತಿ ವಾ । (ಊರ್ಧ್ವಂ ನುನ್ನಂ ಪ್ರೇರಿತಂ ಭವತಿ),** ಊರ್ಧ್ವಮುಖವಾಗಿ ಏಳುತ್ತದೆ ಅಥವಾ ಉನ್ನತವಾಗಿ ಪ್ರಸರಿಸಿದೆ. ಆದುದರಿಂದ ಸಾನುವೆಂದು ಹೆಸರು.

ಇಲ್ಲ ಸಾಯಣರು **ಪರ್ವತಾನಾಂ ಸಾನುನಿ** ಎಂಬುದಕ್ಕೆ ಎರಡು ವಿಧವಾಗಿ ಅರ್ಥಮಾಡಿದ್ದಾರೆ. ಮೊದಲನೆಯದಾಗಿ ಪರ್ವತಶಬ್ದಕ್ಕೆ **ಪೂರಣವತಾಂ ಪ್ರೀಣನವತಾಂ ವಾ ಲೋಕಾನಾಂ ಸಮುಚ್ಛ್ರಿತಪ್ರದೇಶೇ ।** ಪೂರ್ಣಕಾರಕಗಳಾದ ಅಥವಾ ಪ್ರೀತಿಜನಕಗಳಾದ ಲೋಕಗಳ ಉನ್ನತ ಪ್ರದೇಶವಾದ **ಸತ್ಯಲೋಕದಲ್ಲಿ** ಎಂದೂ, ಎರಡನೆಯದಾಗಿ **ಅಥವಾ ಮೇಘಾನಾಂ ಸಮುಚ್ಛ್ರಿತಪ್ರದೇಶೇ । ಪರ್ವತಶಬ್ದಃ ಮೇಘನಾಮಸು ಉಕ್ತತ್ವಾತ್ ।** ಪರ್ವತಶಬ್ದವು ಮೇಘನಾಮಗಳಲ್ಲಿ ಪಠಿತವಾಗಿರುವುದರಿಂದ **ಮೇಘಗಳಿರುವ** ಊರ್ಧ್ವಪ್ರದೇಶದಲ್ಲಿ ಎಂದೂ ಅರ್ಥಮಾಡಿದ್ದಾರೆ

ಸಾಧಾರಣವಾಗಿ **ಪರ್ವತಶಬ್ದವು ಇಂದ್ರ** ಸೂಕ್ತಗಳಲ್ಲೂ **ಮರುತ್ಸೂಕ್ತ**ಗಳಲ್ಲೂ ಅಧಿಕವಾಗಿ ಪ್ರಯೋಗಿಸಲ್ಪಟ್ಟಿದೆ. ಅನೇಕ ಕಡೆಗಳಲ್ಲಿ ಈ ಪದಕ್ಕೆ ಮೇಘವೆಂದೇ ಅರ್ಥಮಾಡಿದ್ದಾರೆ. ಮೇಘವೆಂದರ್ಥಮಾಡಿದರೂ ಸಹ **ಯಾಸ್ಕರ** ನಿರ್ವಚನವನ್ನು ಅನುಸರಿಸಿದಂತಾಗುತ್ತದೆ ಪೃ ಧಾತುವಿನಿಂದ ಪರ್ವತಶಬ್ದವು ನಿಷ್ಪನ್ನವಾದರೆ ಆಗ ಅಂತರಿಕ್ಷದ ಶೂನ್ಯಪ್ರದೇಶಗಳನ್ನು ತುಂಬುವುದೆಂದಾಗುತ್ತದೆ. **ಪ್ರೀ** ಧಾತುವಿನಿಂದ ನಿಷ್ಪನ್ನವಾದರೆ ಆಗ ವೃಷ್ಟ್ಯುತ್ಸರ್ಗದಿಂದ ಲೋಕಕ್ಕೆಲ್ಲಾ ತೃಪ್ತಿಯನ್ನುಂಟುಮಾಡತಕ್ಕದ್ದೆಂದರ್ಥವಾಗುತ್ತದೆ.

ಕೆಲವು ಸಂದರ್ಭಗಳಲ್ಲಿ ಸಾಕ್ಷಾನ್ಮೇಘವೆಂದಾಗದೆ ಮೇಘರೂಪದಲ್ಲಿರುವುದೂ ಘನೀಭೂತವಾದದ್ದೂ ಆದ ತಮಸ್ಸಿನ ಸಾಂದ್ರತೆಯೆಂದೂ ಅರ್ಥವಾಗಬಹುದು. ಉದಾಹರಣೆಗೆ—

**ಸಮು ತ್ಯೇ ಮಹತೀರಪಃ ಸಂ ಕ್ಷೋಣೀ ಸಮು ಸೂರ್ಯಂ । ಸಂ ವಜ್ರಂ ಪರ್ವಶೋ ದಧುಃ ॥**
(ಋ. ಸಂ. ೮-೭-೨೨)

**ವಿ ವೃತ್ರಂ ಪರ್ವಶೋ ಯಯುರ್ವಿ ಪರ್ವತಾँ ಅರಾಜಿನಃ । ಚಕ್ರಾಣಾ ವೃಷ್ಣಿ ಪೌಂಸ್ಯಂ ॥**
(ಋ. ಸಂ. ೮-೭-೨೩)

ಎಂಬ ಋಕ್ಕುಗಳಲ್ಲಿ ಪ್ರಯೋಗಿಸಿರುವ **ವಜ್ರ**ಶಬ್ದವನ್ನೂ, **ಪರ್ವತ**ಶಬ್ದವನ್ನೂ ಪರಿಶೀಲಿಸಿದರೆ, ಈ ಉದಾಹೃತಗಳಾದ ಋಕ್ಕುಗಳನ್ನೊಳಗೊಂಡಿರುವ ಸೂಕ್ತವು **ಮರುತ್ತು**ಗಳನ್ನುದ್ದೇಶಿಸಿರುವುದು. ಇಲ್ಲಿ **ವಜ್ರಾ**ಯುಧದ ಪ್ರಯೋಗವಿರುವುದರಿಂದಲೂ ಸಾಧಾರಣವಾಗಿ ವಜ್ರಾಯುಧವು ಇಂದ್ರನ ಆಯುಧವಾಗಿರುವುದೆಂದು ಪರಿಗಣಿತವಾಗಿರುವುದರಿಂದಲೂ ಸಹ, ಇಲ್ಲಿ **ವಜ್ರ**ಶಬ್ದಕ್ಕೆ **ತೇಜೋರಾಶಿ**ರೂಪವಾದ ಆಯುಧವೆಂದೂ, **ಪರ್ವತ**ಶಬ್ದಕ್ಕೆ ಘನೀಭೂತವಾದ **ತಮೋರಾಶಿ**ಯೆಂದೂ ಅರ್ಥಮಾಡಿದರೆ ಆಗ **ವಜ್ರ** ಪ್ರಯೋಗದಿಂದ **ಪರ್ವತ**ವನ್ನು ಸೀಳಿದರು ಎಂಬರ್ಥವು ಹೊಂದಿಕೊಳ್ಳುತ್ತದೆ. ಆದುದರಿಂದ **ಪರ್ವತ**ವೆಂಬುದು ಇಲ್ಲಿ ರೂಪಕವಾಗಿದೆ. ಪರ್ವತಾಕಾರದಲ್ಲಿರುವ ತಮೋರಾಶಿಯೆಂದರ್ಥವಾಗಬಹುದು.

ಅನೇಕ ಸಂದರ್ಭಗಳಲ್ಲಿ ಇಂದ್ರಾದಿದೇವತೆಗಳೊಡನೆ ಪರ್ವತವನ್ನೂ ಆಹ್ವಾನಿಸಿ ಸ್ತುತಿಸುವುದುಂಟು. ಉದಾಹರಣೆಗೆ—

**ಇಂದ್ರಾಪರ್ವತಾ ಬೃಹತಾ ರಥೇನ ವಾಮೀರಿಷ ಆ ವಹತಂ ಸುವೀರಾಃ ।**
**ವೀತಂ ಹವ್ಯಾನ್ಯಧ್ವರೇಷು ದೇವಾ ವರ್ಧೇಥಾಂ ಗೀರ್ಭಿರಿಳಯಾ ಮದಂತಾ ॥**

(ಋ. ಸಂ. ૩-೫૩-೧)

ಎಂಬ ಋಕ್ಕಿನಲ್ಲಿ **ಇಂದ್ರಶ್ಚ ಪರ್ವತಶ್ಚ ಹೇ ಇಂದ್ರಾಪರ್ವತೌ** । ಎಂದು ಇಂದ್ರನೊಂದಿಗೂ,

**ಸಜೋಷಸ ಆದಿತ್ಯೈರ್ಮಾದಯಧ್ವಂ ಸಜೋಷಸ ಋಭವಃ ಪರ್ವತೇಭಿಃ ।**
**ಸಜೋಷಸೋ ದೈವ್ಯೇನಾ ಸವಿತ್ರಾ ಸಜೋಷಸಃ ಸಿಂಧುಭೀ ರತ್ನಧೇಭಿಃ ॥**

(ಋ. ಸಂ. ೪-೩೪-೮)

ಎಂಬಲ್ಲಿ **ಪರ್ವವದ್ಭಿಃ ಪರ್ವಣ್ಯರ್ಚನಮಾನೈರ್ದೇವವಿಶೇಷೈಃ** ಎಂದೂ ಆದಿತ್ಯಾದಿದೇವತೆಗಳೊಂದಿಗೂ ಸಹ ಆಹ್ವಾನವಿದೆ. ಅಂತಹ ಸಂದರ್ಭಗಳಲ್ಲಿ **ಪರ್ವತ** ಶಬ್ದಕ್ಕೆ ನಿಷ್ಕೃಷ್ಟವಾದ ಅರ್ಥವೇನು ಎಂಬುದನ್ನು ಹೇಳಲು ಸುಲಭವಲ್ಲ.

ಪ್ರಕೃತವಾದ **ಋಕ್ಕಿನಲ್ಲಿ ಪರ್ವತಶಬ್ದಕ್ಕೆ** ಮೇಘವೆಂದರ್ಥ ಮಾಡಿರುವುದು ಉಚಿತವಾಗಿರುವಂತಿದೆ. **ಇಂದ್ರನ** ವ್ಯವಹಾರಗಳೆಲ್ಲವೂ ಬಹಳವಾಗಿ **ಮೇಘದ** ಪ್ರಾಂತದಲ್ಲಿಯೇ ನೆರವೇರುವುದರಿಂದಲೂ ಇಲ್ಲಿ **ಇಂದ್ರಾವಿಷ್ಣುಗಳ** ಮಹತ್ಕಾರ್ಯವನ್ನು ಸ್ತುತಿಸುವುದರಿಂದಲೂ ಈ ಅರ್ಥವು ಹೊಂದಿಕೊಳ್ಳುತ್ತದೆ.

**ಅರ್ವತಾ ಇವ—ವೇಗವತಾ ಅಶ್ವೇನ ಇವ** । ಅತ್ಯಂತ ವೇಗದಿಂದ ಕೂಡಿದ ಸಂಚಾರವುಳ್ಳ ಅಶ್ವದಂತೆ ಎಂದು ಹೋಲಿಸಿದೆ. **ಅರ್ವನ್** ಶಬ್ದದ ರೂಪನಿಷ್ಪತ್ತಿಯನ್ನೂ, ಅದರ ಅರ್ಥವೈಶಿಷ್ಟ್ಯವನ್ನೂ ಸಹ ಹಿಂದೆ ವಿಶದವಾಗಿ ತಿಳಿಸಿದೆ.

**ಸಾಧುನಾ—ಅಭಿಮತದೇಶಪ್ರಾಪಣಸಮರ್ಥೇನ** । ತಮಗೆ ಅಭೀಷ್ಟವಾದ ಪ್ರದೇಶಕ್ಕೆ ಸೇರುವ ಸಾಮರ್ಥ್ಯದಿಂದ ಎಂದು **ಸಾಧು** ಶಬ್ದಕ್ಕೆ ಸಾಮರ್ಥ್ಯವೆಂದರ್ಥಮಾಡಿದೆ. ನಿರುಕ್ತಕಾರರು,

**ತುವಿಕ್ಷಂ ತೇ ಸುಕೃತಂ ಸೂಮಯಂ ಧನುಃ ಸಾಧುರ್ಬುಂದೋ ಹಿರಣ್ಯಯಃ ।**
**ಉಭಾ ತೇ ಬಾಹೂ ರಣ್ಯಾ ಸುಸಂಸ್ಕೃತ ಋದೂಪೇ ಚಿದೃದೂವೃಧಾ ॥**

(ಋ. ಸಂ. ೮-೭೭-೧೧)

ಎಂಬ ಋಕ್ಕನ್ನು ವಿವರಿಸುವಾಗ **ಸಾಧುಃ ಸಾಧಯಿತಾ** ಕಾರ್ಯವನ್ನು ನಿರ್ವಹಿಸುವ ಸಾಮರ್ಥ್ಯವುಳ್ಳದ್ದೆಂದು (ಧನುಸ್ಸಿಗೆ ವಿಶೇಷಣವಾಗಿದೆ) ಅರ್ಥ ಮಾಡಿರುವಂತೆ ಇಲ್ಲಿಯೂ ಸಹ **ಸಾಮರ್ಥ್ಯವುಳ್ಳ ಅರ್ವಾ** ಎಂದರ್ಥವಾಗುತ್ತದೆ.

### ವ್ಯಾಕರಣಪ್ರಕ್ರಿಯಾ

**ಪಾಂತಮ್**—ಪಾ ಪಾನೇ ಅಥವಾ ಪಾ ರಕ್ಷಣೇ ಧಾತು. ಇದಕ್ಕೆ ಶತೃ ಪ್ರತ್ಯಯ. ಅಥವಾ ಔಣಾದಿಕ ಝ ಪ್ರತ್ಯಯ. **ಝೋಽಂತಃ** (ಪಾ. ಸೂ. ೭-೧-೩) ಎಂಬುದರಿಂದ ಅಂತಾದೇಶ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

**ಅಂಧಸಃ**—ಅದ ಭಕ್ಷಣೇ ಧಾತು. **ಅದೇರ್ನುಮ್‌ಧೌ ಚ** (ಉ. ಸೂ. ೪-೭೫೫) ಎಂಬುದರಿಂದ ಅನ್ನ ರೂಪಾರ್ಥತೋರುವಾಗ ಅಸುನ್ ಪ್ರತ್ಯಯ ಧಾತುವಿಗೆ ನುಮಾಗಮ. ದಕಾರಕ್ಕೆ ಧಕಾರಾದೇಶ. ಪ್ರತ್ಯಯನಿತ್ತ್ವದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಧಿಯಾಯತೇ**—ಧಿಯಂ ಆತ್ಮನಃ ಇಚ್ಛತಿ ಧಿಯಾಯತಿ. ಧಿಯಾಯತಿ ಇತಿ ಧಿಯಾಯನ್ ಕ್ಯಜಂತದ ಮೇಲೆ ಲಡರ್ಥದಲ್ಲಿ ಶತೃಪ್ರತ್ಯಯ. ಚತುರ್ಥೀಏಕವಚನಾಂತರೂಪ ನುಮ್ ರಹಿತವಾದ ಶತೃವಿನ ಪರದಲ್ಲಿ ವಿಭಕ್ತಿ ಬಂದುದರಿಂದ **ಶತುರನುಮೋ ನದ್ಯಜಾದೀ** (ಪಾ. ಸೂ. ೬-೧-೧೭೩) ಎಂಬುದರಿಂದ ಅದಕ್ಕೆ ಉದಾತ್ತ ಸ್ವರ ಬರುತ್ತದೆ.

**ಮಹೇ**—ಮಹ ಪೂಜಾಯಾಂ ಧಾತು **ಕ್ವಿಪ್ ಚ** ಎಂಬುದರಿಂದ ಕ್ವಿಪ್ ಪ್ರತ್ಯಯ. **ಸಾವೇಕಾಚಸ್ತೃತೀಯಾದಿಃ** (ಪಾ. ಸೂ. ೬-೧.೧೬೮) ಎಂಬುದರಿಂದ ಚತುರ್ಥಿಗೆ ಉದಾತ್ತಸ್ವರ ಬರುತ್ತದೆ.

**ಶೂರಾಯ**—ಶು ಗತೌ ಧಾತು. (ಸೌತ್ರ) **ಶುಸಿಚಿಮೀನಾಂ ದೀರ್ಘಶ್ಚ** (ಉ ಸೂ. ೨-೧೮೩) ಎಂಬುದರಿಂದ ಕ್ರನ್ ಪ್ರತ್ಯಯ. ನಿತ್ತ್ವಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಅರ್ಚತ**—ಅರ್ಚ ಪೂಜಾಯಾಂ ಧಾತು ಲೋಟ್ ಮಧ್ಯಮಪುರುಷಬಹುವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ.

**ಪರ್ವತಾನಾಮ್**—ಪರ್ವ ಪೂರಣೇ ಧಾತು **ಭೃಮೃದೃಶಿಯಜಿ**—(ಉ. ಸೂ. ೩-೩೯೦) ಎಂಬುದರಿಂದ ಅತಚ್ ಪ್ರತ್ಯಯ ಬರುತ್ತದೆ. ಷಷ್ಠೀಬಹುವಚನಾಂತರೂಪ-

**ಅದಾಭ್ಯಾ**— ನ ದಾಭ್ಯೌ ಅದಾಭ್ಯೌ ದಭಿ ಧಾತುವು ವಾರ್ತಿಕಸಹಿತವಾಗಿದೆ **ಋಹಲೋರ್ಣ್ಯತ್** -(ಪಾ, ಸೂ. ೩-೧-೧೨೪) ಎಂಬುದರಿಂದ ಣ್ಯತ್ ಪ್ರತ್ಯಯ. ಣಿತ್ತ್ವಾದುದರಿಂದ **ಅತ ಉಪಧಾಯಾಃ** (ಪಾ ಸೂ ೭-೨-೧೧೬) ಎಂಬುದರಿಂದ ಧಾತುವಿನ ಉಪಧೆಗೆ ವೃದ್ಧಿ. ನಞ್‌ಸಮಾಸವಾದಾಗ **ತತ್ಪುರುಷೇ ತುಲ್ಯಾರ್ಥ**— (ಪಾ. ಸೂ. ೬-೨-೨) ಎಂಬುದರಿಂದ ನಞ್ ಪೂರ್ವಪದಪ್ರಕೃತಿಸ್ವರ ಬರುತ್ತದೆ. ಇದಕ್ಕೆ ದ್ವಿವಚನ (ಔ) ಪರವಾದಾಗ **ಸುಪಾಂ ಸುಲುಕ್** -(ಪಾ. ಸೂ. ೭-೧-೩೯) ಎಂಬುದರಿಂದ ಅದಕ್ಕೆ ಆಕಾರಾದೇಶ.

**ತಸ್ಥತುಃ**—ಷ್ಠಾ ಗತಿನಿವೃತ್ತೌ ಧಾತು. ಲಿಟ್ ಪ್ರಥಮಪುರುಷದ್ವಿವಚನಾಂತರೂಪ. ಯದ್ಯೋಗವಿರುವುದರಿಂದ ತಿಙಂತನಿಘಾತಸ್ವರ ಬರುವುದಿಲ್ಲ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

**ಅರ್ವತಾ ಇವ**—ಋ ಗತೌ ಧಾತು **ಅನ್ಯೇಭ್ಯೋಽಪಿ ದೃಶ್ಯಂತೇ** (ಪಾ. ಸೂ. ೩-೨-೭೫) ಎಂಬುದರಿಂದ ವನಿಪ್ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿಗೆ ಗುಣ. ರ ಪರವಾಗಿ ಬರುತ್ತದೆ. ತೃತೀಯಾಏಕವಚನ ಪರವಾದಾಗ **ಅರ್ವಣಸ್ತ್ರಸಾವನಞಃ** ಎಂಬುದರಿಂದ ತೃ ಅಂತಾದೇಶವಾಗಿ ಬರುತ್ತದೆ.

**ಸಾಧುನಾ**—ಸಾಧ ಸಂಸಿದ್ಧೌ ಧಾತು. **ಕೃವಾಪಾಜಿ**—(ಉ.ಸೂ. ೧-೧) ಎಂಬುದರಿಂದ ಉಣ್ ಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ತೃತೀಯಾಏಕವಚನಾಂತರೂಪ. ॥ ೧ ॥



ಸಂಹಿತಾಪಾಠಃ

ತ್ವೇಷಮಿತ್ಥಾ ಸಮರಣಂ ಶಿಮೀವತೋರಿಂದ್ರಾವಿಷ್ಣೂ ಸುತಪಾ ವಾಮುರುಷ್ಯತಿ ।
ಯಾ ಮರ್ತ್ಯಾಯ ಪ್ರತಿಧೀಯಮಾನಮಿತ್ಕೃಶಾನೋರಸ್ತುರಸನಾಮುರುಷ್ಯಥಃ ॥ ೨ ॥

ಪದಪಾಠಃ

ತ್ವೇಷಂ । ಇತ್ಥಾ । ಸಂಽಅರಣಂ । ಶಿಮೀಽವತೋಃ । ಇಂದ್ರಾವಿಷ್ಣೂ ಇತಿ । ಸುತಽಪಾಃ । ವಾಂ । ಉರುಷ್ಯತಿ ।
ಯಾ । ಮರ್ತ್ಯಾಯ । ಪ್ರತಿಽಧೀಯಮಾನಂ । ಇತ್ । ಕೃಶಾನೋಃ । ಅಸ್ತುಃ । ಅಸನಾಂ । ಉರುಷ್ಯಥಃ ॥ ೨ ॥

ಸಾಯಣಭಾಷ್ಯಂ

ಸೋಮಾತಿರೇಕೇ ತೃತೀಯಸವನ ಏಷಾ ವೈಕಲ್ಪಿಕೀ ಯಾಜ್ಯಾ । ತಥಾ ಚ ಸೂತ್ರಿತಂ । ತ್ವೇಷಮಿತ್ಥಾ ಸಮರಣಂ ಶಿಮೀವತೋರಿತಿ ವಾ ಯಾಜ್ಯಾ । ಆ. ೬-೭ । ಇತಿ ॥

ಹೇ ಇಂದ್ರಾವಿಷ್ಣೂ ಶಿಮೀವತೋರಿಷ್ಟಪ್ರದಾನಾದಿಕರ್ಮವತೋರ್ವಾಂ ಯುವಯೋರಿತ್ಥೇತ್ಥಂ ತ್ವೇಷಂ ಪ್ರದೀಪ್ತಂ ಸಮರಣಂ ಸಮ್ಯಗ್ಯಾಗದೇಶಗಮನಂ ಸುತಪಾ ಹುತಶಿಷ್ಟಸೋಮಪೀತಯಜಮಾನ ಉರುಷ್ಯತಿ । ರಕ್ಷತಿ । ಯಾಗೇನ ಪೂಜಯತಿ । ಯದ್ವಾ । ಶಿಮೀವತೋಃ ಪ್ರಹರಣಾದಿಕರ್ಮವತೋರ್ವಾಂ ಯುವಯೋಸ್ತ್ವೇಷಂ ದೀಪ್ತಂ ಶೌರ್ಯೋಪೇತಂ ಸಮರಣಂ ಸಮ್ಯಕ್ಪರಸ್ಪರಗಮನೋಪೇತಂ ವೃಷ್ಟಿಪ್ರದಾನಾಯ ಮೇಘವಿದಾರಣರೂಪಂ ಯಜಮಾನ ಉರುಷ್ಯತಿ । ರಕ್ಷತಿ । ಸ್ತೌತೀತ್ಯರ್ಥಃ । ಕಸ್ತಯೋರತಿಶಯ ಇತಿ ಉಚ್ಯತೇ । ಯಾ ಯಾವಿಂದ್ರಾವಿಷ್ಣೂ ಮರ್ತ್ಯಾಯ ಮನುಷ್ಯಾಯ ಹವಿರ್ದಾತ್ರೇ ಯಜಮಾನಾಯ ಪ್ರತಿಧೀಯಮಾನಮಿತ್ ಪ್ರತಿಧಾತವ್ಯಂ ಫಲರೂಪಮಸನಾಮಸನಂ ಚಲನಶೀಲಂ ಪ್ರದಾನಶೀಲಮನ್ನಾದಿಕಮಸ್ತುರಭಿಮತಕ್ಷೇಪ್ತುರ್ನಿರಸಿತುರ್ವಾ ಶತ್ರೋಃ ಕೃಶಾನೋರಗ್ನೇಃ ಸಕಾಶಾದುರುಷ್ಯಥಃ । ಅವಿಚ್ಛೇದೇನ ಪ್ರವರ್ತಯಥಃ । ವಹ್ನೌ ಹುತಂ ಹವಿಃ ಸ್ವೀಕೃತ್ಯ ತನ್ಮುಖಾದೇವ ಫಲಮಪಿ ದಾಸ್ಯಥ ಇತ್ಯರ್ಥಃ ॥

### ಪ್ರತಿಪದಾರ್ಥ

**ಇಂದ್ರಾವಿಷ್ಣೂ**—ಎಲೈ ಇಂದ್ರಾವಿಷ್ಣುಗಳೇ, | **ಯಾ**—ಯಾವ ನೀವು | **ಮರ್ತ್ಯಾಯ**—ಮಾನವನಾದ ಯಜಮಾನನಿಗೆ | **ಪ್ರತಿಧೀಯಮಾನಮಿತ್**—(ಯಜ್ಞಫಲದ ರೂಪದಲ್ಲಿ) ಸ್ವೀಕರಿಸಲೇಬೇಕಾದ | **ಅಸನಾಂ**—ಅನ್ನಾದಿಗಳನ್ನು | **ಅಸ್ತುಃ**—(ಇಷ್ಟಾರ್ಥಗಳನ್ನು) ಹಂಚುವ ಅಥವಾ ಶತ್ರುಗಳನ್ನು ಓಡಿಸುವ | **ಕೃಶಾನೋಃ**—ಅಗ್ನಿಯ ಮೂಲಕ | **ಉರುಷ್ಯಥಃ**—(ಸತತವಾಗಿ) ಒದಗಿಸಿಕೊಡುತ್ತೀರೋ, ಅಂತಹ | **ಶಿಪಿವಿಷ್ಟವತೋಃ**—ಇಷ್ಟಾರ್ಥಪ್ರದಾನಾದಿಕರ್ಮಗಳುಳ್ಳ ಅಥವಾ ಪ್ರಹರಣಾದಿ ಕರ್ಮಗಳುಳ್ಳ | **ವಾಂ**—ನಿಮ್ಮಿಬ್ಬರ | **ತ್ವೇಷಂ**—ಪ್ರಕಾಶಮಾನವಾದ ಅಥವಾ ಶೌರ್ಯದಿಂದ ಕೂಡಿದ | **ಸಮರಣಂ**—ಒಡಗೂಡಿದ ಆಗಮನವನ್ನು | **ಸುತಪಾಃ**—(ಹುತಶಿಷ್ಟವಾದ) ಸೋಮರಸವನ್ನು ಕುಡಿದ ಯಜಮಾನನು | **ಇತ್ಥಾ**—ಈ ರೀತಿಯಲ್ಲಿ | **ಉರುಷ್ಯತಿ**—ಪೂಜಿಸುತ್ತಾನೆ.

### ಭಾವಾರ್ಥ

ಎಲೈ ಇಂದ್ರಾವಿಷ್ಣುಗಳೇ, ನೀವು ಮಾನವನಾದ ಯಜಮಾನನಿಗೆ ಯಜ್ಞಫಲದರೂಪದಲ್ಲಿ ಸ್ವೀಕರಿಸಬೇಕಾದ ಅನ್ನಾದಿಗಳನ್ನು ಇಷ್ಟಾರ್ಥಗಳನ್ನು ಹಂಚುವ ಅಗ್ನಿಯ ಮೂಲಕವಾಗಿ ಯಾವಾಗಲೂ ಒದಗಿಸಿಕೊಡುತ್ತೀರಿ. ಈ ರೀತಿ ಇಷ್ಟಾರ್ಥಪ್ರದಾನಾದಿ ಕರ್ಮಗಳುಳ್ಳ ನಿಮ್ಮಿಬ್ಬರ ಪ್ರಕಾಶಮಾನವಾದುದೂ, ಒಡಗೂಡಿದುದೂ ಆದ ಆಗಮನವನ್ನು ಹುತಶಿಷ್ಟವಾದ ಸೋಮರಸವನ್ನು ಕುಡಿದ ಯಜಮಾನನು ಪೂಜಿಸುತ್ತಾನೆ. (ಗೌರವಿಸುತ್ತಾನೆ)

## English Translation

Indra and Vishnu, the devout worshipper glorifies the radiant approach of you two, who are the granters of desires, and who bestow upon the mortal who worships you an immediately-receivable (reward), through the distribution of that fire which is the scatterer (of desired blessings).

### ವಿಶೇಷವಿಷಯಗಳು

ತೃತೀಯಸವನದಲ್ಲಿ ಸೋಮಾತಿರೇಕವೆಂಬ ಹೋಮಮಾಡುವಾಗ ಈ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ (ವಿಕಲ್ಪವಾಗಿ) ಬೇಕಾದರೂ ಉಪಯೋಗಿಸಬಹುದೆಂದು ಆಶ್ವಲಾಯನಶ್ರೌತಸೂತ್ರದ—**ತ್ವೇಷಮಿತ್ಥಾ ಸಮರಣಂ ಶಿಮೀವತೋರಿತಿ ವಾ ಯಾಜ್ಯಾ** ಎಂಬ ಸೂತ್ರದಿಂದ ವಿಸ್ತೃತವಾಗಿರುವುದು. (ಆ. ೬-೬)

**ಕೃಶಾನೋಃ**—ಅಗ್ನೇಃ | **ಅಗ್ನಿಯ** ಮೂಲಕವಾಗಿ ಎಂದು **ಕೃಶಾನು**ಶಬ್ದಕ್ಕೆ ಅಗ್ನಿಯೆಂದರ್ಥಮಾಡಿದೆ. ಈ ಪದವು ಅಗ್ನಿಪರ್ಯಾಯವಾಗಿ ಋಕ್ಸಂಹಿತೆಯಲ್ಲಿ ಇದೊಂದು ಋಕ್ಕಿನಲ್ಲಿ ಮಾತ್ರ ಪ್ರಯೋಗಿಸಲ್ಪಟ್ಟಿದೆ. ಇದಲ್ಲದೇ ಋಕ್ಸಂಹಿತೆಯಲ್ಲಿ ಈ ಹೆಸರು ಇನ್ನೂ ನಾಲ್ಕು ಕಡೆಗಳಲ್ಲಿ ಉಪಯೋಗಿಸಲ್ಪಟ್ಟಿದ್ದರೂ ಸಹ ಅಲ್ಲಿ ಅಗ್ನಿಯೆಂದರ್ಥವಾಗುವುದಕ್ಕೆ ಕಾರಣವಿಲ್ಲ. ಅಲ್ಲೆಲ್ಲಾ **ಕೃಶಾನು**ವೆಂಬ ಒಬ್ಬ ವ್ಯಕ್ತಿಯ ಹೆಸರಾಗಿದೆ **ವಾಜಸನೇಯ ಸಂಹಿತೆ**ಯಲ್ಲಿ ಒಂದು ಪ್ರಕರಣವನ್ನು (೫-೩೨) ಬಿಟ್ಟರೆ ಉಳಿದ ಯಾವ ಶ್ರುತಿವಾಕ್ಯಗಳಲ್ಲೂ **ಕೃಶಾನು** ಎಂಬ ಪದವು ಅಗ್ನಿಪರ್ಯಾಯವಾಗಿ ಉಪಯೋಗಿಸಿದಂತೆ ಕಾಣುವುದಿಲ್ಲ. ಮತ್ತು ಆ ಹೆಸರು ಸಂಹಿತೆಗಳಲ್ಲೂ ಬ್ರಾಹ್ಮಣಾದಿಗಳಲ್ಲೂ ಸಹ ಬಹಳ ಪ್ರಸಿದ್ಧವೂ ಆಗಿದೆ.

ಧನ್ವಿಗಳಲ್ಲೆಲ್ಲಾ ಶ್ರೇಷ್ಠನಾದ **ಕೃಶಾನುವು ಸೋಮಪಾಲಕ**ನೆಂದು ಪ್ರಸಿದ್ಧನಾಗಿದ್ದಾನೆ. ಸೋಮವನ್ನಪಹರಿಸಿಕೊಂಡು ಹೋಗುತ್ತಿದ್ದ ಶ್ಯೇನವನ್ನು ಹಿಂಬಾಲಿಸಿ ಅದರ ಪುಕ್ಕವನ್ನು ಛೇದಿಸಿದ ಕಥೆಯು ಋಕ್ಸಂಹಿತೆಯಲ್ಲಿ ಈರೀತಿ ಉಕ್ತವಾಗಿದೆ.

**ಅವ ಯಚ್ಛ್ಯೇನೋ ಅಸ್ವನೀದಧ ದ್ಯೋರ್ವಿ ಯದ್ಯದಿ ವಾತ ಊಹುಃ ಪುರಂಧಿಂ ।**
**ಸೃಜದ್ಯದಸ್ಮಾ ಅವ ಹ ಕ್ಷಿಪಜ್ಜ್ಯಾಂ ಕೃಶಾನುರಸ್ತಾ ಮನಸಾ ಭುರಣ್ಯನ್ ॥**

(ಋ. ಸಂ. ೪-೨೭-೩)

ದ್ಯುಲೋಕದಿಂದ ಸೋಮಾಪಹರಣಕ್ಕೆ ಬಂದ ಶ್ಯೇನವನ್ನು ಸೋಮಪಾಲಕರೆಲ್ಲರೂ ಪ್ರತಿಭಟಿಸುವ ಕಾಲದಲ್ಲಿ **ಕೃಶಾನುವು** ಮನೋವೇಗದಿಂದ ಅದನ್ನು ಸಮೀಪಿಸಿ ಅದರ ಮೇಲೆ ತನ್ನ ಬಾಣವನ್ನು ಬಿಟ್ಟು ಅದರ ಪುಕ್ಕವನ್ನು ಛೇದಿಸಿದನು ಎಂಬ ಕಥೆಯು ಸೂಚಿಸಲ್ಪಟ್ಟಿದೆ. ಇದರಂತೆಯೇ,

**ಸ ಪೂರ್ವ್ಯಃ ಪವತೇ ಯಂ ದಿವಸ್ಪರಿ ಶ್ಯೇನೋ ಮಥಾಯದಿಷಿತಸ್ತಿರೋ ರಜಃ ।**
**ಸ ಮಧ್ವ ಆ ಯುವತೇ ವೇವಿಜಾನ ಇತ್ಕೃಶಾನೋರಸ್ತುರ್ಮನಸಾಹ ಬಿಭ್ಯುಷಾ ॥**

(ಋ. ಸಂ. ೯-೭೭-೨)

ಎಂಬ ಋಕ್ಕಿನಲ್ಲಿಯೂ ಇದೇ ಸನ್ನಿವೇಶವನ್ನು ಸೂಚಿಸಿದೆ. ಐತರೇಯಬ್ರಾಹ್ಮಣದಲ್ಲಿ ಈ ಕಥೆಯು ಇನ್ನೂ ಕೊಂಚ ವಿಸ್ತಾರವಾಗಿದ್ದು **ಕೃಶಾನುವಿನ** ಅಸಾಧಾರಣವಾದ ಶಕ್ತಿಯನ್ನು ತೋರಿಸುತ್ತದೆ.

**ತೇ ದೇವಾ ಅಬ್ರುವನ್ಗಾಯತ್ರೀಂ ತ್ವಂ ನ ಇಮಂ ಸೋಮಂ ರಾಜಾನಮಾಹರೇತಿ ಸಾ ತಥೇತ್ಯಬ್ರವೀತ್ತಾಂ ವೈ ಮಾ ಸರ್ವೇಣ ಸ್ವಸ್ತ್ಯಯನೇನಾನುಮಂತ್ರಯಧ್ವಮಿತಿ ತಥೇತಿ ಸೋದಪತತ್ತಾಂ ದೇವಾಃ ಸರ್ವೇಣ ಸ್ವಸ್ತ್ಯಯನೇನಾನ್ವಮಂತ್ರಯಂತ ಪ್ರೇತಿ ಚೇತಿ ಚೇತ್ಯೇತದ್ವೈ ಸರ್ವಂ ಸ್ವಸ್ತ್ಯಯನಂ ಯತ್ಪ್ರೇತಿ ಚೇತಿ ತದ್ಯೋಽಸ್ಯ ಪ್ರಿಯಃ ಸ್ಯಾತ್ತಮೇತೇನಾನುಮಂತ್ರಯೇತ ಪ್ರೇತಿ ಚೇತಿ ಚೇತಿ ಸ್ವಸ್ತ್ಯೇವ ಗಚ್ಛತಿ ಸ್ವಸ್ತ್ಯೈ ಪುನರಾಗಚ್ಛತಿ ।**

**ಸಾ ಪತಿತ್ವಾ ಸೋಮಪಾಲಾನ್ಭೀಷಯಿತ್ವಾ ಪದ್ಭ್ಯಾಂ ಚ ಮುಖೇನ ಚ ಸೋಮಂ ರಾಜಾನಂ ಸಮಗೃಭ್ಣಾದ್ಯಾನಿ ಚೇತರೇ ಛಂದಸೀ ಅಕ್ಷರಾಣ್ಯಜಹಿತಾಂ ತಾನಿ ಚೋಪಸಮಗೃಭ್ಣಾತ್ ।**

**ತಸ್ಯಾ ಅನು ವಿಸೃಜ್ಯ ಕೃಶಾನುಃ ಸೋಮಪಾಲಃ ಸವ್ಯಸ್ಯ ಪದೋ ನಖಮಚ್ಛಿದತ್ತಚ್ಛಲ್ಯಕೋಽಭವತ್ತಸ್ಮಾತ್ಸನಖಮಿವ ಯದ್ವಶಮಸ್ರವತ್ಸಾ ವಶಾಭವತ್ ।**

(ಐ. ಬ್ರಾ. ೩-೨೬)

ದೇವತೆಗಳು ಸೋಮರಾಜನನ್ನಪಹರಿಸಿಕೊಂಡು ಬರಬೇಕೆಂದು ಗಾಯತ್ರಿಗೆ ತಿಳಿಸಿ ಅವಳಿಗೆ ಸ್ವಸ್ತ್ಯಯನವನ್ನು ಹೇಳಿ ಶೀಘ್ರವಾಗಿ ವಾಪಸ್ಸು ಬರಬೇಕೆಂದಾಶಿಸಿ ಕಳುಹಿದಾಗ ಶ್ಯೇನರೂಪದ ಗಾಯತ್ರಿಯು ಪೃಥ್ವಿಗೆ ಇಳಿದು ಸೋಮಪಾಲರನ್ನು ಬೆದರಿಸಿದಾಗ **ಕೃಶಾನುವು** ತನ್ನ ಬಾಣದಿಂದ ಅದರ ನಖವನ್ನು ಕತ್ತರಿಸಿದನೆಂದು ವಿವರಿಸಿದೆ.

ಇವೆಲ್ಲಾ ಕಡೆಗಳಲ್ಲಿಯೂ **ಕೃಶಾನು** ಪದವು ಅಂಕಿತನಾಮವಾಗಿದ್ದು ಪ್ರಕೃತವಾದ ಋಕ್ಕಿನಲ್ಲಿ ಮಾತ್ರ ಅಗ್ನಿಪರ್ಯಾಯವಾಗಿರುವುದು ಅಷ್ಟೇನೂ ಅಸ್ವಾಭಾವಿಕವಲ್ಲವೆಂಬುದನ್ನು ಇತರ ಶ್ರುತಿವಾಕ್ಯಗಳ ಆಧಾರದಿಂದ ತಿಳಿಯ

ಬಹುದು. ತೈತ್ತಿರೀಯಸಂಹಿತೆಯಲ್ಲಿ ಅಗ್ನಿಯೇ ಕೃಶಾನುವೆಂಬ ತಾದಾತ್ಮ್ಯಬೋಧಕವಾದ ವಾಕ್ಯವನ್ನು ಗಮನಿಸ ಬಹುದು. ಶತಪಥಬ್ರಾಹ್ಮಣದಲ್ಲಿ,

ಅಥ ಸೋಮಕ್ರಯಣಾನನುದಿಶತಿ । ಸ್ವಾನ ಭ್ರಾಜಾಂಘಾರೇ ಬಂಭಾರೇ ಹಸ್ತ ಸುಹಸ್ತ ಕೃಶಾನವೇತೇ ವಃ ಸೋಮಕ್ರಯಣಾಸ್ತಾನ್ರಕ್ಷಧ್ವಂ ಮಾ ವೋ ದಭನ್ನಿತಿ ಧಿಷ್ಣ್ಯಾನಾಂ ವಾ ಏತೇ ಭಾಜನೇನೈತಾನಿ ನೈ ಧಿಷ್ಣ್ಯಾನಾಂ ನಾಮಾನಿ ತಾನ್ಯೇವೈಭ್ಯ ಏದನ್ವದಿಕ್ಷತ್ ।

(ಶ. ಬ್ರಾ, ೩-೨-೬-೧)

ಎಂಬ ವಾಕ್ಯದಲ್ಲಿ **ಸ್ವಾನ, ಭ್ರಾಜ, ಅಂಘಾರಿ, ಬಂಭಾರಿ, ಹಸ್ತ, ಸುಹಸ್ತ, ಕೃಶಾನು** ಎಂಬುವರು ಸೋಮ ಪಾಲಕರೆಂಬುದನ್ನು ನಿರ್ದೇಶಿಸಿದೆ. ತೈತ್ತಿರೀಯಸಂಹಿತೆಯಲ್ಲಿಯೂ ಸಹ,

…. …. …ಜ್ಯೋತಿಸ್ಸೋಮವಿಕ್ರಯಿಣಿ ತಮೋಮಿತ್ರೋನ ಏಹಿ ಸುಮಿತ್ರಧಾ ಇಂದ್ರಸ್ಯೋರುಮಾ ವಿಶ ದಕ್ಷಿಣಮುಶನ್ನುಶಂತಗ್ಂ ಸ್ಯೋನಸ್ಸ್ಯೋನಗ್ಂ ಸ್ವಾನಭ್ರಾಜಾಂಘಾರೇ ಬಂಭಾರೇ ಹಸ್ತ ಸುಹಸ್ತ ಕೃಶಾನವೇತೇ ವಸ್ಸೋಮಕ್ರಯಣಾಸ್ತಾನ್ರಕ್ಷಧ್ವಂ ಮಾ ವೋ ದಭನ್ ।

(ತೈ. ಸಂ. ೧-೨-೭)

ಎಂಬ ವಾಕ್ಯಗಳಲ್ಲಿ ಮೇಲೆ ಹೇಳಿದ **ಸ್ವಾನ, ಭ್ರಾಜ, ಅಂಘಾರಿ, ಬಂಭಾರಿ, ಹಸ್ತ, ಸುಹಸ್ತ, ಕೃಶಾನು** ಎಂಬುವರೇ ಜಾಗರೂಕರಾದ ಸೋಮರಕ್ಷಕರೆಂದು ಹೇಳಿ ಅನಂತರ,

ವಿಭೂರಸಿ ಪ್ರವಾಹಣೋ ವಹ್ನಿರಸಿ ಹವ್ಯವಾಹನಶ್ಶ್ವಾತ್ರೋಽಸಿ ಪ್ರಚೇತಾಸ್ತುಥೋಽಸಿ ವಿಶ್ವವೇದಾ ಉಶಿಗಸಿ ಕವಿರಂಘಾರಿರಸಿ ಬಂಭಾರಿರವಸ್ಯುರಸಿ ದುವಸ್ವಾಞ್ಛುನ್ಧ್ಯೂರಸಿ ಮಾರ್ಜಾಲೀಯ- ಸ್ಸಮ್ರಾಡಸಿ ಕೃಶಾನುಃ ಪರಿಷದ್ಯೋಽಸಿ ಪವಮಾನಃ ಪ್ರತಕ್ವಾಸಿ ನಭಸ್ವಾನಸಂಮೃಷ್ಟೋಽಸಿ ಹವ್ಯಸೂದ ಋತಧಾಮಾಸಿ ಸುವರ್ಜ್ಯೋತಿರ್ಬ್ರಹ್ಮಜ್ಯೋತಿರಸಿ ಸುವರ್ಧಾಮಾಜೋಽಸ್ಯೇಕ- ಪಾದಹಿರಸಿ ಬುಧ್ನಿಯೋ ರೌದ್ರೇಣಾನೀಕೇನ ಪಾಹಿ ಮಾಗ್ನೇ ಪಿಪೃಹಿ ಮಾ ಮಾ ಮಾ ಹಿಗ್ಂಸೀಃ ॥

(ತೈ. ಸಂ. ೧-೩-೩)

ಎಂಬಲ್ಲಿ **ಅಂಘಾರಿ, ಬಂಭಾರಿ, ಕೃಶಾನು** ಇತ್ಯಾದಿ ಸಕಲರೂ ನೀನೇ ಆಗಿರುವೆಯೆಂದು ಅಗ್ನಿಯನ್ನು ಸಂಬೋಧಿಸಿ ಪ್ರಾರ್ಥಿಸಿದೆ. ಅದೂ ಅಲ್ಲದೆ, **ಕೃಶಾನುವೇ** ಮುಂತಾದ ಸೋಮಪಾಲಕರು **ಧಿಷ್ಣ್ಯಾನಾಂ ನಾಮಾನಿ** ಅಗ್ನಿವೇದಿಗಳ ಹೆಸರುಗಳು ಎಂದು ಮೇಲೆ ಉದಹರಿಸಿರುವ ಶತಪಥಬ್ರಾಹ್ಮಣವಾಕ್ಯದಲ್ಲಿ ತಿಳಿಸಿದೆ. (ಶ. ಬ್ರಾ -೩-೩-೩-೧) ಆದುದರಿಂದ ಕೃಶಾನುವಿಗೂ ಅಗ್ನಿಗೂ ತಾದಾತ್ಮ್ಯವಿದೆಯೆಂದು ಕೆಲವುವಾಕ್ಯಗಳ ಆಧಾರದಿಂದ ತಿಳಿಯುತ್ತದೆ

ಋಕ್ಸಂಹಿತೆಯಲ್ಲಿಯೂ ಸಹ ಪ್ರಕೃತವಾದ ಋಕ್ಕಿನಲ್ಲಿ **ಕೃಶಾನುಶಬ್ದದೊಡನೆ** ಸಂಬಂಧಿಸಿದ ವಿಶೇಷಣಗಳೇ ಈ ಹೆಸರು ಬರತಕ್ಕ ಉಳಿದ ಋಕ್ಕುಗಳಲ್ಲಿಯೂ ಉಪಯೋಗಿಸಲ್ಪಟ್ಟಿರುವುದನ್ನೂ ಗಮನಿಸಬಹುದು. ಉದಾಹರಣೆಗೆ—

**ತ್ರಿಃ ಸಪ್ತ ಸಸ್ರಾ ನದ್ಯೋ ಮಹೀರಪೋ ವನಸ್ಪತೀನ್ ಪರ್ವತಾಁ ಅಗ್ನಿಮೂತಯೇ ।**
**ಕೃಶಾನುಮಸ್ತೄನ್ ತಿಷ್ಯಂ ಸಧಸ್ಥ ಆ ರುದ್ರಂ ರುದ್ರೇಷು ರುದ್ರಿಯಂ ಹವಾಮಹೇ ॥**
(ಋ. ಸಂ. ೧೦-೬೪-೮)

ಎಂಬ ಋಕ್ಕಿನಲ್ಲಿ **ಕೃಶಾನು ಮತ್ತು ಅಗ್ನಿ** ಎಂಬ ಪದಗಳು ವಿಶೇಷ್ಯವಿಶೇಷಣಗಳಾಗಿವೆ. ಮತ್ತು ಮೇಲೆ ಉದಹರಿಸಿರುವ ೯-೭೭-೨ನೇ ಋಕ್ಕಿನಲ್ಲಿ **ಅಸ್ತುಃ ಕೃಶಾನೋಃ** ಎಂದೂ, ೪-೨೭-೩ನೇ ಋಕ್ಕಿನಲ್ಲಿ **ಅಸ್ತಾ ಕೃಶಾನುಃ** ಎಂದೂ ಪ್ರಯೋಗವಿರುವಂತೆ ಪ್ರಕೃತವಾದ ಋಕ್ಕಿನಲ್ಲಿಯೂ ಸಹ **ಅಸ್ತುಃ ಕೃಶಾನೋಃ** ಎಂಬ ವಿಶೇಷಣ ವಿಶೇಷ್ಯಗಳಿವೆ. ಉದಹರಿಸಿರುವ ಋಕ್ಕುಗಳಲ್ಲಿ **ಅಸ್ತು** ಎಂಬ ಪದಕ್ಕೆ ಬಾಣವನ್ನು ಎಸೆದು ಶತ್ರುವನ್ನು ಹಿಂಸಿಸುವ ಎಂದು ತಾತ್ಪರ್ಯವಾಗುವಂತೆ ಪ್ರಕೃತವಾದ ಋಕ್ಕಿನಲ್ಲಿಯೂ **ಅಸ್ತುಃ** ಎಂದರೆ **ನಿರಸಿತುಃ ಶತ್ರೂಣಾಂ** । ಶತ್ರುಹಿಂಸಕನೆಂದೇ ಅರ್ಥವಾಗಿದೆ.

**ಅಸನಾಂ—ಅಸನಂ ಚಲನಶೀಲಂ ಪ್ರದಾನಶೀಲಮನ್ನಾದಿಕಂ ।** ದಾತೃವಿನಿಂದ ಚಲಿಸಿ ಪ್ರತಿಗೃಹೀತೃವಿನಲ್ಲಿಗೆ ಹೋಗುವ ಸ್ವಭಾವವಿರುವುದರಿಂದ **ಅನ್ನಾದಿ**ಗಳಿಗೆ **ಅಸನ**ವೆಂದು ಹೆಸರೆಂದು ಸಾಯಣರು ವಿವರಿಸಿದ್ದಾರೆ.

**ಪುರೂಣಿ ದಸ್ಮೋ ನಿ ರಿಣಾತಿ ಜಂಭೈರಾದ್ರೋಚತೇ ವನ ಆ ವಿಭಾವಾ ।**
**ಆದಸ್ಯ ವಾತೋ ಅನು ವಾತಿ ಶೋಚಿರಸ್ತುರ್ನ ಶರ್ಯಾಮಸನಾಮನು ದ್ಯೂನ್ ॥**
(ಋ. ಸಂ. ೧-೧೪೮-೪)

ಎಂಬ ಋಕ್ಕಿನಲ್ಲಿ ಚಲಿಸತಕ್ಕ **ಬಾಣಕ್ಕೆ** ವಿಶೇಷಣವಾಗಿದೆ.

**ಉರುಷ್ಯತಿ—ಉರುಷ್ಯತೀ ರಕ್ಷಾಕರ್ಮ** (ನಿ. ೫-೨೩) ರಕ್ಷಿಸುತ್ತಾನೆಂದರ್ಥ. ನಿರುಕ್ತಕಾರರು—

**ಸ ನೋ ಬೋಧಿ ಶ್ರುಧೀ ಹವಮುರುಷ್ಯಾ ಣೋ ಅಘಾಯತಃ ಸಮಸ್ಮಾತ್ ।**
(ಋ. ಸಂ. ೫-೨೪-೩)

ಎಂಬ **ಋಕ್ಕ**ನ್ನುದಹರಿಸಿ ನಮ್ಮ ವಿಷಯದಲ್ಲಿ ಕೇಡನ್ನು ಬಯಸುವ ಸಮಸ್ತರಿಂದಲೂ **ನಃ** ನಮ್ಮನ್ನು **ಉರುಷ್ಯ** ರಕ್ಷಿಸು ಎಂಬರ್ಥವನ್ನು ತೋರಿಸಿದ್ದಾರೆ. ಆದರೆ ಪ್ರಕೃತವಾದ **ಋಕ್ಕಿ**ನಲ್ಲಿ ಈ ಪದವು ಎರಡು ಸಲ ಬಂದಿದೆ. ಮೊದಲನೆಯದಕ್ಕೆ **ಉರುಷ್ಯತಿ—ರಕ್ಷತಿ । ಯಾಗೇನ ಪೂಜಯತಿ** ಅಥವಾ **ಸ್ತೌತಿ ।** ಯಾಗದಿಂದ ಪೂಜಿಸುತ್ತಾನೆ ಅಥವಾ ಸ್ತುತಿಸುತ್ತಾನೆ ಎಂಬರ್ಥವೆಂದೂ, ಎರಡನೆಯ ಪದಕ್ಕೆ **ಉರುಷ್ಯಥಃ ಪ್ರೇರಯಥಃ** ನಮಗೆ ಅವಿಚ್ಛಿನ್ನವಾಗಿ ಅನ್ನವನ್ನು ಒದಗಿಸುತ್ತಾ ರಕ್ಷಿಸಿ ಎಂಬರ್ಥವೆಂದೂ ಸಾಯಣರು ವಿವರಿಸಿದ್ದಾರೆ.

**ಶಿಮೀವತಃ—ಶಿಮೀತಿ ಕರ್ಮನಾಮ । ಶಮಯತೇರ್ವಾ ಶಕ್ನೋತೇರ್ವಾ ।** (ನಿ. ೫-೧೨). ಪ್ರಯಾಸಪಡು ಅಥವಾ ಶ್ರಮಪಡು ಎಂಬರ್ಥವನ್ನು ಕೊಡುವ **ಶಮ್** ಧಾತುವಿನಿಂದಾಗಲಿ ಅಥವಾ **ಶಕ್ಯ**ವೆಂಬರ್ಥವನ್ನು ಕೊಡುವ **ಶಕ್** ಧಾತುವಿನಿಂದಾಗಲಿ ಈ ಪದವು ನಿಷ್ಪನ್ನವಾಗಿ **ಕರ್ಮ**ವೆಂದರ್ಥವಾಗುತ್ತದೆ.

**ಆಪಾಂತಮನ್ಯುಸ್ತೃಪಲಪ್ರಭರ್ಮಾ ಧುನಿಃ ಶಿಮೀವಾಞ್ಛರುಮಾಁ ಋಜೀಷೀ ।**
**ಸೋಮೋ ವಿಶ್ವಾನ್ಯತಸಾ ವನಾನಿ ನಾರ್ವಾಗಿಂದ್ರಂ ಪ್ರತಿಮಾನಾನಿ ದೇಭುಃ ॥**
(ಋ. ಸಂ. ೧೦-೮೯-೫)

ಇತ್ಯಾದಿ ಸೂಕ್ತಗಳಲ್ಲಿ ಶಮೀವಾನ್ ಎಂಬುದಕ್ಕೆ ಕರ್ಮಯುಕ್ತನಾದ ಎಂಬರ್ಥವಾಗುವಂತೆ ಪ್ರಕೃತವಾದ ಸೂಕ್ತದಲ್ಲಿಯೂ ಸಹ ಅದೇ ಅರ್ಥವನ್ನು ಹೇಳಬೇಕು. ಇಂದ್ರಾವಿಷ್ಣುಗಳು ಸರ್ವದಾ ಲೋಕರಕ್ಷಣಾದಿ ಕಾರ್ಯಯುಕ್ತರೆಂದರ್ಥವು.

॥ ವ್ಯಾಕರಣಪ್ರಕ್ರಿಯಾ ॥

**ತ್ವೇಷಮ್**—ತ್ವಿಷ ದೀಪ್ತೌ ಧಾತು **ನಂದಿಗ್ರಹಿಪಚಾ**—(ಪಾ. ಸೂ. ೩-೧-೧೩೪) ಎಂಬುದರಿಂದ ಅಚ್ ಪ್ರತ್ಯಯ. ಚಿತ್ತ್ವಾದುದರಿಂದ ಅಂತೋದಾತ್ತಸ್ವರ ಬರುತ್ತದೆ. ಪ್ರತ್ಯಯನಿಮಿತ್ತವಾಗಿ ಲಘೂಪಧಗುಣ.

**ಸಮರಣಮ್**—ಋ ಗತೌ ಧಾತು. ಲ್ಯುಟ್ ಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿಗೆ ಗುಣ. ರಪರ ವಾಗಿ ಬರುತ್ತದೆ. ಲಿತಿ (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ. ಪ್ರಾದಿಸಮಾಸವಾದಾಗ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

ಇಂದ್ರಾವಿಷ್ಣೂ—ಇಂದ್ರಶ್ಚ ವಿಷ್ಣುಶ್ಚ ಇಂದ್ರಾವಿಷ್ಣೂ **ದೇವತಾದ್ವಂದ್ವೇ ಚ** (ಪಾ.ಸೂ. ೬-೩-೨೬) ಎಂಬುದರಿಂದ ಪೂರ್ವಪದಕ್ಕೆ ಆನಙ್ **ದೇವತಾದ್ವಂದ್ವೇ ಚ** (ಪಾ. ಸೂ. ೬-೨-೧೪೧) ಎಂಬುದರಿಂದ ಉಭಯಪದ ಪ್ರಕೃತಿಸ್ವರ ಬರುತ್ತದೆ.

**ಸುತಪಾಃ**—ಷುಞ್ ಅಭಿಷವೇ ಧಾತು. ಕ್ತ ಪ್ರತ್ಯಯ ಸುತಂ ಪಿಬತಿ ಇತಿ **ಸುತಪಾಃ.** ಪಾ ಪಾನೇ. ಧಾತು. ಕ್ವಿಪ್ ಪ್ರತ್ಯಯ. ಕೃದುತ್ತರಪದ ಪ್ರಕೃತಿ ಸ್ವರ ಬರುತ್ತದೆ.

**ಉರುಷ್ಯತಿ**—ಉರುಷ್ಯ ಧಾತುವು ರಕ್ಷಣಾರ್ಥದಲ್ಲಿ ಪ್ರಯುಕ್ತವಾಗಿದೆ. ಲಟ್ ಪ್ರಥಮಪುರುಷಏಕ ವಚನಾಂತರೂಪ ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಪ್ರತಿಧೀಯಮಾನಮ್**— ಡುಧಾಞ್ ಧಾರಣಪೋಷಣಯೋಃ ಧಾತು. ಕರ್ಮಣಿಯಲ್ಲಿ ಲಟಿಗೆ ಶಾನಚಾದೇಶ. **ಸಾರ್ವಧಾತುಕೇ ಯಕ್** (ಪಾ. ಸೂ. ೩-೧-೬೭) ಎಂಬುದರಿಂದ **ಯಕ್. ಘುಮಾಸ್ಥಾಗಾಪಾಜ**—(ಪಾ. ಸೂ. ೬-೪-೬೬) ಎಂಬುದರಿಂದ ಧಾತುವಿಗೆ ಈತ್ವ. **ಆನೇಮುಕ್** (ಪಾ. ಸೂ. ೭-೨-೮೨) ಎಂಬುದರಿಂದ ಮುಕಾಗಮ. **ತಾಸ್ಯನುದಾತ್ತೇತ್**—(ಪಾ. ಸೂ ೬-೧-೧೮೬) ಎಂಬುದರಿಂದ ಲಸಾರ್ವಧಾತುಕ ಅನುದಾತ್ತವಾಗುವುದರಿಂದ ಯಕ್ ಸ್ವರ ಉಳಿಯುತ್ತದೆ. ಪ್ರಾದಿಸಮಾಸದಲ್ಲಿ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

**ಕೃಶಾನೋಃ**—ಕೃಶ ತನೂಕರಣೇ ಧಾತು. **ಋನ್ಯಞ್ಜಿವನ್ಯ**—(ಉ. ಸೂ. ೪.೪೪೨, ಎಂಬುದರಿಂದ ಆನುಕ್ ಪ್ರತ್ಯಯ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

ಅಸ್ತುಃ—ಅಸು ಕ್ಷೇಪಣೇ. ಧಾತು. ಕರ್ತರಿಯಲ್ಲಿ ತೃನ್ ಪ್ರತ್ಯಯ. ನಿತ್ತ್ವಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಪಂಚಮೀಏಕವಚನಾಂತರೂಪ.

ಅಸನಾಮ್— ಪೂರ್ವೋಕ್ತಧಾತುವಿಗೆ ಯುಚ್ ಪ್ರತ್ಯಯ. **ಯುವೋರನಾಕೌ** (ಪಾ. ಸೂ. ೭-೧-೧) ಎಂಬುದರಿಂದ ಅನಾದೇಶ **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

ಉರುಷ್ಯಥಃ—ಲಟ್ ಮಧ್ಯಮಪುರುಷ .ದ್ವಿವಚನಾಂತರೂಪ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಧಾತುಸ್ವರ ಉಳಿಯುತ್ತದೆ ॥ ೨ ॥

———:o:———

ಸಂಹಿತಾಪಾಠಃ

ತಾ ಈಂ ವರ್ಧಂತಿ ಮಹ್ಯಸ್ಯ ಪೌಂಸ್ಯಂ ನಿ ಮಾತರಾ ನಯತಿ ರೇತಸೇ ಭುಜೇ ।
ದಧಾತಿ ಪುತ್ರೋಽವರಂ ಪರಂ ಪಿತುರ್ನಾಮ ತೃತೀಯಮಧಿ ರೋಚನೇ ದಿವಃ ॥ ೩ ॥

। ಪದಪಾಠಃ ।

ತಾಃ । ಈಂ । ವರ್ಧಂತಿ । ಮಹಿ । ಅಸ್ಯ । ಪೌಂಸ್ಯಂ । ನಿ । ಮಾತರಾ । ನಯತಿ । ರೇತಸೇ । ಭುಜೇ ।
ದಧಾತಿ । ಪುತ್ರಃ । ಅವರಂ । ಪರಂ । ಪಿತುಃ । ನಾಮ । ತೃತೀಯಂ । ಅಧಿ । ರೋಚನೇ । ದಿವಃ ॥ ೩ ॥

ಸಾಯಣಭಾಷ್ಯಂ

ತಾಃ ಸೋಮರೂಪಾಃ ಪ್ರಸಿದ್ಧಾ ಆಹುತಯೋ ಯಜಮಾನೇನ ಹುತಾ ಈಮೇತದಸ್ಯೇಂದ್ರಸ್ಯ ಮಹಿ ಮಹತ್ಪೌಂಸ್ಯಂ ಪುಂಸಃ ಕರ್ಮ ವಕ್ಷ್ಯಮಾಣರೂಪಂ ಬಲಂ ವರ್ಧಂತಿ । ವರ್ಧಯಂತಿ । ಈಮಿತ್ಯನರ್ಥಕೋ ವಾ । ಸ ಚೇಂದ್ರಃ ಸೋಮಪಾನಜನಿತಂ ಸಾಮರ್ಥ್ಯಂ ಮಾತರಾ ದ್ಯಾವಾಪೃಥಿವ್ಯೌ ನಿ ನಯತಿ । ನಿತರಾಂ ಪ್ರಾಪಯತಿ । ಕಿಮರ್ಥಂ । ರೇತಸೇ ಪ್ರಾಣಿನಾಂ ಪುತ್ರಾದ್ಯುತ್ಪಾದನಸಾಮರ್ಥ್ಯಾಯ ಭುಜೇ ತೇಷಾಂ ಭೋಗಾಯ ರಕ್ಷಣಾಯ ವಾ। ಕುತ್ರೇತಿ ತದುಚ್ಯತೇ । ದಿವೋ ದ್ಯೋತಮಾನಸ್ಯಾದಿತ್ಯಸ್ಯಾಧ್ಯಧಿಕಂ ರೋಚನೇ ರೋಚಮಾನೇ ಮಂಡಲೇ । ನಾಮ ನಮನಂ ದ್ಯಾವಾಪೃಥಿವ್ಯೋಃ ಸ್ಥಾಪಿತಂ ಸಾಮರ್ಥ್ಯಂ ಪುತ್ರಃ ಪುರುತ್ರಾತಾ ಸರ್ವೋ ಜನಃ ಪಿತುಃ ಪಾಲಕಾದ್ವಿಷ್ಣೋರನುಗ್ರಹಾತ್ । ಯದ್ವಾ । ಪಿತುಃ ಸ್ವೋತ್ಪಾದಕತ್ವಾತ್ಸ್ವಯಮುತ್ಪನ್ನಂ ಸತ್ ಅವರಂ ನಿಕೃಷ್ಟಂ ನಾಮ ಪೌತ್ರಸಂಜ್ಞಂ ಪರಂ ತಮುತ್ಕೃಷ್ಟಂ ಪುತ್ರ ಇತಿ ನಾಮ ತದುಭಯಾಪೇಕ್ಷಯಾ ತೃತೀಯಂ ಪಿತೇತಿ ನಾಮ ಧಧಾತಿ । ಧಾರಯತಿ । ತ್ರೀಣಿ ನಾಮ ರೇತಾಂಸಿ ಪಿತಾ ಪುತ್ರಃ ಪೌತ್ರಃ ॥ ತೈ· ಸಂ. ೫-೬-೮-೪. । ಇತಿ ಶ್ರುತೇಃ । ಅಸ್ಯಾಯಮರ್ಥಃ । ಅಗ್ನೌ ಹುತಾಃ ಸೋಮಾಹುತಯ ಆದಿತ್ಯಮಂಡಲಂ ಪ್ರಾಪ್ಯ ದ್ವಾದಶಾತ್ಮನಃ ಸವಿತುರ್ಮೂರ್ತ್ಯಂತರಾವಿಂದ್ರಾವಿಷ್ಣೂ ಪೋಷಯಂತಿ । ತುಷ್ಟೌ ತೌ ಮೇಘದ್ವಾರಾ ವರ್ಷತಃ । ತಯಾ

ನ್ಯಸ್ಯಾ, ಸಸ್ಯಾದಿದ್ವಾರಾ ಪ್ರಜಾಃ ಪುತ್ರಪೌತ್ರಾದಿರೂಪೇಣ ವರ್ಧಯತಃ ಇತ್ಯೇನಂ ಮಹಾನುಭಾವಾ- ಮಿಂದ್ರಾವಿಷ್ಣೂ ಇತಿ ||

ಪ್ರತಿಪದಾರ್ಥ

**ತಾಃ**—ಸೋಮರೂಪವಾದ ಆಹುತಿಗಳು | **ಅಸ್ಯ**—ಇಂದ್ರನ | **ಮಹಿ**—ಮಹತ್ತಾದ | (ಈಂ) **ಪೌಂಸ್ಯಂ**—ಪುರುಷಶಕ್ತಿಯನ್ನು | **ವರ್ಧಂತಿ**—ವೃದ್ಧಿಯಾಗುವಂತೆ ಮಾಡುತ್ತವೆ. (ಅದೇ ಇಂದ್ರನು) **ರೇತಸೇ**. (ಪ್ರಾಣಿಗಳಿಗೆ) ಸಂತಾನೋತ್ಪತ್ತಿಯ ಸಾಮರ್ಥ್ಯವನ್ನುಂಟುಮಾಡುವುದಕ್ಕಾಗಿಯೂ | **ಭುಜೇ**—ಭೋಗಗಳನ್ನು ಅನುಭವಿಸುವುದಕ್ಕಾಗಿಯೂ ಅಥವಾ ರಕ್ಷಣಾರ್ಥವಾಗಿಯೂ | **ಮಾತರಾ**—ದ್ಯಾವಾಪೃಥಿವಿಗಳಿಗೆ | **ನಿ ನಯತಿ**—(ಈ ಶಕ್ತಿಯು) ಹೋಗಿ ಸೇರುವಂತೆ ಮಾಡುತ್ತಾನೆ | **ದಿವಃ**—ಪ್ರಕಾಶಮಾನನಾದ ಆದಿತ್ಯನ | **ಅಧಿ ರೋಚನೇ**—ಅತ್ಯಧಿಕವಾಗಿ ಬೆಳಗುವ ಮಂಡಲದಲ್ಲಿ | **ನಾಮ**—ಸ್ಥಾಪಿತವಾದ ಈ ಉತ್ಪಾದನ ಶಕ್ತಿಯನ್ನು | **ಪುತ್ರಃ**—ಪುತ್ರ ರೂಪನಾದ ಸಕಲಮಾನವನೂ | **ಪಿತುಃ**—ಪಾಲಕನಾದ ವಿಷ್ಣುವಿನ ಅನುಗ್ರಹದಿಂದ (ಅಥವಾ ಉತ್ಪಾದಿತನಾದ ತನ್ನಿಂದಲೇ | **ಅವರಂ**—ಕನಿಷ್ಠವಾದ ಪೌತ್ರ ಸಂಜ್ಞೆಯುಳ್ಳದ್ದನ್ನಾಗಿಯೂ | **ಪರಂ**—(ಅದಕ್ಕಿಂತಲೂ) ಉತ್ಕೃಷ್ಟ ವಾದ ಪುತ್ರ ಸಂಜ್ಞೆಯುಳ್ಳದ್ದನ್ನಾಗಿಯೂ | **ತೃತೀಯಂ**—ಇವೆರಡಕ್ಕಿಂತಲೂ ಬೇರೆಯಾದ ಪಿತಾ ಎಂಬ ಹೆಸರುಳ್ಳ ದ್ದನ್ನಾಗಿಯೂ | **ದಧಾತಿ**—ಹೊಂದುತ್ತಾನೆ.

ಭಾವಾರ್ಥ

ಯಜಮಾನನಿಂದ ಅರ್ಪಿತವಾದ ಸೋಮರೂಪವಾದ ಆಹುತಿಗಳು ಇಂದ್ರನ ಮಹತ್ತಾದ ಪುರುಷಶಕ್ತಿ ಯನ್ನು ವೃದ್ಧಿಯಾಗುವಂತೆ ಮಾಡುತ್ತವೆ. ಅದೇ ಇಂದ್ರನು ಪ್ರಾಣಿಗಳಿಗೆ ಸಂತಾನೋತ್ಪತ್ತಿಯ ಸಾಮರ್ಥ್ಯ ವನ್ನುಂಟುಮಾಡುವುದಕ್ಕಾಗಿಯೂ ಭೋಗಗಳನ್ನು ಅನುಭವಿಸುವುದಕ್ಕಾಗಿಯೂ ಸಹ ಈ ಶಕ್ತಿಯನ್ನು ದ್ಯಾವಾ ಪೃಥಿವಿಗಳಿಗೆ ಹೋಗಿ ಸೇರುವಂತೆ ಮಾಡುತ್ತಾನೆ. ಅತ್ಯಧಿಕವಾಗಿ ಬೆಳಗುವ ಆದಿತ್ಯನ ಮಂಡಲದಲ್ಲಿ ಸ್ಥಾಪಿತವಾದ ಈ ಶಕ್ತಿಯನ್ನು ವಿಷ್ಣುವಿನ ಅನುಗ್ರಹದಿಂದ ಸಕಲ ಮಾನವನೂ ಸಹ ಪೌತ್ರ ಸಂಜ್ಞೆಯುಳ್ಳದ್ದನ್ನಾಗಿಯೂ ಪುತ್ರ ಸಂಜ್ಞೆಯುಳ್ಳದ್ದನ್ನಾಗಿಯೂ ಮತ್ತು ಪಿತಾ ಎಂಬ ಹೆಸರುಳ್ಳದ್ದನ್ನಾಗಿಯೂ ಹೊಂದುತ್ತಾನೆ.

## English Translation

These (oblations) augment his, (Indra,s), mighty manhood, by which he fits the parents (of all creatures, heaven and earth), for generation and enjoyment; where-by, in the upper region of the sky· the son has an inferior and superior appellation, and a third (name) of father·

|| ವಿಶೇಷವಿಷಯಗಳು ||

ಈ ಋಕ್ಕಿನಲ್ಲಿ ಸೋಮಾಹುತಿಯ ಸೇವನೆಯಿಂದ ಇಂದ್ರನ ಪುಂಸ್ತ್ವಶಕ್ತಿಯು ವೃದ್ಧಿಯಾಗುವುದನ್ನೂ, ಅದೇ ಇಂದ್ರನು ದ್ಯಾವಾಪೃಥಿವಿಗಳಿಗೆ ತನ್ನ ಶಕ್ತಿಯನ್ನು ಯೋಜಿಸಿ ಸಕಲ ಭೂತಗಳ ಭೋಗಕ್ಕೂ ವೃದ್ಧಿಗೂ ಕಾರಣನಾಗುವುದನ್ನೂ ಮತ್ತು ಪುತ್ರಪೌತ್ರಾದಿರೂಪವಾದ ಬೆಳವಣಿಗೆಗೆ ಇಂದ್ರನು ಹೇತುವಾಗಿ ಲೋಕಕ್ಕೆ ವಿಷ್ಣುವಿನ ಅನುಗ್ರಹವನ್ನು ಒದಗಿಸುವುದನ್ನೂ ವರ್ಣಿಸಿದೆ. ಮೊದಲು,

ತಾಃ ಅಸ್ಯ ಮಹಿ ಪೌಂಸ್ಯಂ ವರ್ಧಂತಿ—ಯಜಮಾನೇನ ಸುತಾಃ ಸೋಮರೂಪಾಃ ಪ್ರಸಿದ್ಧಾ ಆಹುತಯಃ ಇಂದ್ರಸ್ಯ ವಕ್ಷ್ಯಮಾಣಂ ರೂಪಂ ಬಲಂ ವರ್ಧಯಂತಿ । ಯಜ್ಞಕರ್ತನಿಂದ ಅರ್ಪಿತಗಳಾದ ಸೋಮಾಹುತಿಗಳು ಇಂದ್ರನ ಮಹದ್ಬಲವನ್ನು ವೃದ್ಧಿಯಾಗುವಂತೆ ಮಾಡುತ್ತವೆ. ಈ **ಪೌಂಸ್ಯವು** ಇಂದ್ರನಿಗೆ ಮಾತ್ರ ಉಪಕಾರವಾಗದೆ ಯಜ್ಞಕರ್ತನ ವೃದ್ಧಿಗೂ ಕಾರಣವಾಗುತ್ತದೆ.

**ವಯೋ ನ ವೃಕ್ಷಂ ಸುಪಲಾಶಮಾಸದನ್ತ್ಸೋಮಾಸ ಇಂದ್ರಂ ಮಂದಿನಶ್ಚಮೂಷದಃ ।**
**ಪ್ರೈಷಾಮನೀಕಂ ಶವಸಾ ದವಿದ್ಯುತದ್ವಿದತ್ಸ್ವರ್ಮನವೇ ಜ್ಯೋತಿರಾರ್ಯಂ ॥**
(ಋ. ಸಂ ೧೦-೪೩-೪)

ಎಂಬ ಋಕ್ಕಿನಲ್ಲಿ ಈ ಅಂಶವನ್ನು ವಿಶದವಾಗಿ ವರ್ಣಿಸಿದೆ ಇಲ್ಲಿ ಚಮಸಪಾತ್ರೆಗಳಿಂದ ಅರ್ಪಿತಗಳಾದ ಸೋಮಾಹುತಿಗಳನ್ನು ಪಕ್ಷಿಗಳಿಗೂ, ಇಂದ್ರನನ್ನು ವೃಕ್ಷಕ್ಕೂ ಹೋಲಿಸಿದೆ. ಪಕ್ಷಿಗಳು ವೃಕ್ಷಗಳಲ್ಲಿ ಕುಳಿತು ವೃಕ್ಷಕ್ಕೆ ಒಂದು ವಿಧವಾದ ತೇಜಸ್ಸನ್ನೂ ಸೌಂದರ್ಯವನ್ನೂ ಕೊಡುವಂತೆ **ಸೋಮಾಹುತಿಗಳೂ** ಸಹ ಇಂದ್ರನಲ್ಲಿ ಸ್ಥಾಪಿತವಾಗಿ ತಮ್ಮ ಪ್ರಭಾವದಿಂದ ಇಂದ್ರನ ಶಕ್ತಿಯನ್ನು ಬೆಳಿಸಿ ಅವನನ್ನು ತೇಜೋಯುತನಾಗುವಂತೆ ಮಾಡುತ್ತವೆ, ಎಂದು ಸೋಮಾಹುತಿಯ ಪ್ರಭಾವವನ್ನು ತಿಳಿಸಿ ಅದರಿಂದ ಜನ್ಯವಾದ ಇಂದ್ರನ ಶಕ್ತಿಯೂ ತೇಜಸ್ಸೂ ಯಜ್ಞಕರ್ತನಾದ ಮಾನವನಿಗೂ ಉಪಕಾರವಾಗಲಿ ಎಂದು ಪ್ರಾರ್ಥಿಸಿದೆ.

**ವಾಯೋಃ ಪೂತಃ ಪವಿತ್ರೇಣ । ಪ್ರತ್ಯಙ್‌ಸೋಮೋಽತಿದ್ರುತ ಇತಿ ಸೋಮಾತಿಪೂತಸ್ಯ ಪುನಾತಿ ಯಥಾರೂಪಮೇವೈನಂ ಪುನಾತೀಂದ್ರಸ್ಯ ಯುಜ್ಯಃ ಸಖೇತಿ ಯದೇವಾಸ್ಯ ತೇನೇಂದ್ರಿಯಂ ವೀರ್ಯಮತಿಕ್ರಾಂತಂ ಭವತಿ ತದಸ್ಮಿನ್ಪುನರ್ದಧಾತಿ ॥**
(ಶ. ಬ್ರಾ ೧೨-೭-೩-೯)

ಇತ್ಯಾದಿ ಬ್ರಾಹ್ಮಣ ವಾಕ್ಯಗಳಲ್ಲೂ ಸಹ ವಾಯ್ವಾದಿಗಳಿಂದ ಪೂತವಾದುದೂ, ಆಹುತಿರೂಪದಲ್ಲಿ ಅರ್ಪಿಸಿದುದೂ ಆದ **ಸೋಮವು** ಇಂದ್ರನಿಗೆ ಯೋಗ್ಯವಾದ ಸಖನಾಗಿದ್ದು ಅವನ ವೀರ್ಯವನ್ನು ವೃದ್ಧಿಪಡಿಸುತ್ತದೆ. ಆದುದರಿಂದಲೇ ಯಜ್ಞಕರ್ತನಿಗೂ ವೀರ್ಯದಾಯಕವಾಗಿ ನಿರ್ವೀರ್ಯನಾದವನಿಗೂ ಅವನ ವೀರ್ಯವನ್ನು ಪುನಃ ಸ್ಥಾಪಿಸುತ್ತದೆ ಎಂದು ಸೋಮಾಹುತಿಯ ಮಹತ್ತ್ವವನ್ನು ಉಳಿದೆಲ್ಲಾ ಕಡೆಗಳಲ್ಲಿಯೂ ವರ್ಣಿಸಿರುವಂತೆ ಇಲ್ಲಿಯೂ ವರ್ಣಿಸಿದೆ.

**ಪೌಂಸ್ಯಂ—ಪುಂಸಃ ಕರ್ಮ ।** ಪುರುಷನ ಶಕ್ತಿಯೆಂದು ತಾತ್ಪರ್ಯ. ಈ ಪದವು **ಬಲನಾಮಗಳಲ್ಲೂ** (ನಿ. ೩-೯), **ಸಂಗ್ರಾಮನಾಮಗಳಲ್ಲೂ** (ನಿ. ೩-೯) ಪಠಿತವಾಗಿದೆ. ಪ್ರಕೃತವಾದ ಋಕ್ಕಿನಲ್ಲಿ ಶಕ್ತಿಯೆಂದೇ ಅರ್ಥ ಮಾಡಬೇಕಾಗುತ್ತದೆ. ಒಂದು ವೇಳೆ **ಸಂಗ್ರಾಮವೆಂದು** ಅರ್ಥಮಾಡಿದರೂ ಸಹ ಸೋಮರಸವು ಇಂದ್ರನ ಸಂಗ್ರಾಮಕ್ಕೆ ಒಂದು ಹೊಸದಾದ ವೀರ್ಯವನ್ನು ತುಂಬಿ ಇಂದ್ರನಿಗೆ ಜಯವನ್ನು ತರುತ್ತದೆ ಎಂದು ತಾತ್ಪರ್ಯವಾಗುತ್ತದೆ. ೨ನೇ ಮಂಡಲದ ೧೫ನೇ ಸೂಕ್ತದಲ್ಲಿ ಸೋಮಪಾನದಿಂದ ತೃಪ್ತನೂ ಬಲಿಷ್ಠನೂ ಆದ ಇಂದ್ರನು ನೆರವೇರಿಸಿದ ಸಾಹಸಕೃತ್ಯಗಳನ್ನು ವರ್ಣಿಸುವಾಗ

**ಪ್ರ ಘಾ ನ್ವಸ್ಯ ಮಹತೋ ಮಹಾನಿ ಸತ್ಯಾ ಸತ್ಯಸ್ಯ ಕರಣಾನಿ ವೋಚಂ ।**
**ತ್ರಿಕದ್ರುಕೇಷ್ವಪಿಬತ್ಸುತಸ್ಯಾಸ್ಯ ಮದೇ ಅಹಿಮಿಂದ್ರೋ ಜಘಾನ ॥**
(ಋ. ಸಂ. ೨-೧೫-೧)

ಎಂಬ ಮೊದಲನೇ ಋಕ್ಕಿನಲ್ಲಿ ತ್ರಿಕದ್ರುಕವೆಂಬ ಕರ್ಮಕಾಲದಲ್ಲಿ ಅರ್ಪಿಸಲ್ಪಟ್ಟ ಸೋಮಾಹುತಿಯಿಂದ ಮತ್ತನಾದ ಇಂದ್ರನ ಮಹತ್ತ್ವದುದೂ ಸತ್ಯಾತ್ಮಕವಾದುದೂ ಅಹಿವಧಾದಿರೂಪವಾದುದೂ ಆದ ಕರ್ಮಗಳನ್ನು ಸ್ತುತಿಸುತ್ತೇನೆಂದು ಪ್ರತಿಜ್ಞೆಮಾಡಿ-

> **ಅವಂಶೇ ದ್ಯಾಮಸ್ತಭಾಯದ್ಬೃಹಂತಮಾ ರೋದಸೀ ಅಪೃಣದಂತರಿಕ್ಷಂ ।**
> **ಸ ಧಾರಯತ್ಪೃಥಿವೀಂ ಪಪ್ರಥಚ್ಚ ಸೋಮಸ್ಯ ತಾ ಮದ ಇಂದ್ರಶ್ಚಕಾರ ॥**

(ಋ. ಸಂ. ೨-೧೫-೨)

ಇತ್ಯಾದಿಋಕ್ಕುಗಳಲ್ಲಿ ಇಂದ್ರನು **ಸೋಮಪಾನದಿಂದ** ಮತ್ತನಾಗಿ ಪೃಥಿವ್ಯಾದಿಲೋಕಗಳನ್ನು ತನ್ನ ತೇಜಸ್ಸಿನಿಂದ ತುಂಬುವ ಶಕ್ತಿಯನ್ನೂ **ಭಿನದ್ವಲಮಂಗಿರೋಭಿರ್ಗೃಣಾನೋ** (೨-೧೫-೮) ಇತ್ಯಾದಿವಾಕ್ಯಗಳಿಂದ ವಲಾದ್ಯಸುರರನ್ನು ನಿಗ್ರಹಿಸಿದುದನ್ನೂ ವರ್ಣಿಸಿದೆ- ಈ ಮಹತ್ಕಾರ್ಯಗಳೆಲ್ಲವೂ ಸಹ **ಸೋಮಸ್ಯ ತಾ ಮದ ಇಂದ್ರಶ್ಚಕಾರ ।** **ಆಭಿಪ್ಲವಿಕವಾದ** ಅಹಸ್ಸುಗಳಲ್ಲಿ ಅರ್ಪಿಸಿದ ಸೋಮಾಹುತಿಗಳ ಪ್ರಭಾವವೆಂದೂ ಸ್ತುತಿಸಿದೆ.

**ಮಾತರಾ**—ವಿಶ್ವದ ಉತ್ಪತ್ತಿಗೆ ಕಾರಣರಾದ **ದ್ಯಾವಾಪೃಥಿವಿಗಳಿಗೆ** ಪರ್ಯಾಯಪದವಾಗಿದೆ. **ದ್ಯಾವಾಪೃಥಿವಿಗಳಿಗೆ** ಕೆಲವು ಸಂದರ್ಭಗಳಲ್ಲಿ ಪಿತರಾ ಎಂದೂ (೧-೧೫೯-೨ ; ೩-೩-೧೧ ; ೭-೫೩-೨: ೧೦-೬೫-೮), ಕೆಲವು ವೇಳೆ **ಮಾತರಾ** ಎಂದೂ (೯-೮೫-೧೨ ; ೧೦-೧-೭ ; ೧೦-೩೫-೩) ಸಂಬೋಧಿಸಿದೆ.

> **ಯ ಇಮೇ ದ್ಯಾವಾಪೃಥಿವೀ ಜನಿತ್ರೀ ರೂಪೈರಪಿಂಶದ್ಭುವನಾನಿ ವಿಶ್ವಾ ।**
> **ತಮದ್ಯ ಹೋತರಿಷಿತೋ ಯಜೀಯಾನ್ ದೇವಂ ತ್ವಷ್ಟಾರಮಿಹ ಯಕ್ಷಿ ವಿದ್ವಾನ್ ॥**

(ಋ. ಸಂ. ೧೦-೧೧೦-೯)

ಎಂಬಲ್ಲಿ **ಜನಿತ್ರೀ** ಎಂದೂ ಸಂಬೋಧಿಸಿದೆ ಇನ್ನು ಕೆಲವು ವೇಳೆ ದ್ಯುಲೋಕಕ್ಕೆ ಪಿತೃವೆಂದೂ, ಪೃಥ್ವಿಗೆ **ಮಾತೃ**ವೆಂದೂ ಸಂಬೋಧನೆಯಿದೆ. (೧-೮೯-೪ ; ೧-೯೦-೭ ; ೧-೧೬೦-೨ ಇತ್ಯಾದಿ), ಐತರೇಯ ಬ್ರಾಹ್ಮಣದಲ್ಲಿ ದ್ಯಾವಾಪೃಥಿವಿಗಳ ದಾಂಪತ್ಯದ ವಿಚಾರವಾದ ಒಂದು ಸನ್ನಿವೇಶವು ಕಥಾರೂಪದಲ್ಲಿ ಈ ರೀತಿ ಉಕ್ತವಾಗಿದೆ.

> **ಇಮೌ ವೈ ಲೋಕೌ ಸಹಾಸ್ತಾಂ ತೌ ವ್ಯೈತಾಂ ನಾವರ್ಷನ್ನ ಸಮತಪತ್ತೇ ಪಂಚಜನಾ ನ ಸಮಜಾನತ ತೌ ದೇವಾಃ ಸಮನಯಂಸ್ತೌ ಸಂಯಂತಾವೇತಂ ದೇವವಿವಾಹಂ ವ್ಯವಹೇತಾಂ ರಥಂತರೇಣೈವೇಯಮಮೂಂ ಜಿನ್ವತಿ ಬೃಹತಾಽಸಾವಿಮಾಂ ।** .... .... .... .... **ಅಸೌ ವೈ ಲೋಕ ಇಮಂ ಲೋಕಮಭಿಪರ್ಯಾವರ್ತತ । ತತೋ ವೈ ದ್ಯಾವಾಪೃಥಿವೀ ಅಭವತಾಂ ನ ದ್ಯಾವಾಂತರಿಕ್ಷಾನ್ನಾಂತರಿಕ್ಷಾದ್ಭೂಮಿಃ ॥**

(ಐ. ಬ್ರಾ. ೪-೨೭)

ದ್ಯಾವಾಪೃಥಿವಿಗಳು ಪೂರ್ವದಲ್ಲಿ ಒಂದಾಗಿ ಸೇರಿದ್ದು ಕೆಲವುಕಾಲ ಬೇರೆಬೇರೆಯಾದವು. ಅವು ಬೇರೆಯಾದೊಡನೆಯೇ ಸೂರ್ಯನ ಪ್ರಕಾಶವೂ ವೃಷ್ಟಿಪತನವೂ ಪೂರ್ಣವಾಗಿ ನಿಂತುಹೋದವು. ಪಂಚಜನರೂ (ಇವರು ಯಾರೆಂಬುದನ್ನು ಹಿಂದೆ ತಿಳಿಸಿದೆ) ಪರಸ್ಪರವಾದ ಸೌಹಾರ್ದವನ್ನು ಶಾಂತಿಯುತ ಜೀವನವನ್ನೂ ಬೆಳೆಸಲಾಗಲಿಲ್ಲ. ಆಗ ದೇವತೆಗಳು ದ್ಯಾವಾಪೃಥಿವಿಗಳನ್ನು ಸಮೀಪಿಸಿ ಅವರನ್ನು ಒಂದಾಗಬೇಕೆಂದು

ಪ್ರಾರ್ಥಿಸಿಕೊಂಡರು. ಆಗ ಅವರಿಬ್ಬರಿಗೂ ವಿಧ್ಯುಕ್ತವಾದ ವಿವಾಹವು ನೆರವೇರಿತು. ಅಂದಿನಿಂದ ದ್ಯಾವಾಪೃಥಿವಿಗಳು ಅಭಿನ್ನವಾದ ಸಂಬಂಧವನ್ನು ಪಡೆದಿವೆ. ತೈತ್ತಿರೀಯಾರಣ್ಯಕದಲ್ಲೂ ಸಹ,

**ಜಾಯಾ ಭೂಮಿಃ ಪತಿರ್ವ್ಯೋಮ ।** ( ತೈ. ಆ. ೧-೧೦-೧ )

ಎಂದು ದ್ಯಾವಾಭೂಮಿಗಳ ದಾಂಪತ್ಯಸಂಬಂಧವನ್ನು ತಿಳಿಸಿದೆ.

**ಪ್ರ ದ್ಯಾವಾ ಯಜ್ಞೈಃ ಪೃಥಿವೀ ನಮೋಭಿಃ ಸಬಾಧ ಈಳೇ ಬೃಹತೀ ಯಜತ್ರೇ ।**
**ತೇ ಚಿದ್ಧಿ ಪೂರ್ವೇ ಕವಯೋ ಗೃಣಂತಃ ಪುರೋ ಮಹೀ ದಧಿರೇ ದೇವಪುತ್ರೇ ॥**
(ಋ. ಸಂ. ೭-೫೩-೧)

ಇತ್ಯಾದಿಋಕ್ಕುಗಳಲ್ಲಿ ದ್ಯಾವಾಪೃಥಿವಿಗಳು ಮಾನವರ ಮಾತಾಪಿತೃಗಳಲ್ಲದೆ ದೇವತೆಗಳಿಗೂ ಮಾತಾಪಿತೃಗಳೆಂದು **ದೇವಪುತ್ರೇ** ಎಂಬ ವಿಶೇಷಣದಿಂದ ತಿಳಿಸಿದೆ.

**ದಿವಃ ಅಧಿರೋಚನೇ—ದ್ಯೋತಮಾನಸ್ಯ ಆದಿತ್ಯಸ್ಯ ರೋಚಮಾನೇ ಮಂಡಲೇ ।** ಪ್ರಕಾಶಮಾನವಾದ ಆದಿತ್ಯನ ತೇಜೋಮಂಡಲದಲ್ಲಿ. **ಪರಂ ಅವರಂ ತೃತೀಯಂ ದಧಾತಿ ।** ಪುತ್ರಪೌತ್ರಾದಿರೂಪವಾದ ನಾಮಗಳನ್ನು (ಯಜ್ಞಕರ್ತನು) ಹೊಂದುತ್ತಾನೆ. ಇಲ್ಲಿ ಇಂದ್ರಾವಿಷ್ಣುಗಳಿಗೂ ಆದಿತ್ಯನಿಗೂ ತಾದಾತ್ಮ್ಯವನ್ನು ಹೇಳಿದೆ. ಅವರ ಅನುಗ್ರಹದಿಂದ ಯಜ್ಞಕರ್ತನ ಶ್ರೇಯಸ್ಸೆಂದೂ ಹೇಳಿದೆ. ಪುತ್ರಾದಿಸಂಪತ್ತಿಗೂ ಇಂದ್ರಾವಿಷ್ಣುಗಳ ಅನುಗ್ರಹಕ್ಕೂ ಇರುವ ಕಾರ್ಯಕಾರಣಭಾವವನ್ನು ಸಾಯಣರು ಈರೀತಿ ವಿವರಿಸಿದ್ದಾರೆ.

**ಅಗ್ನೌ ಹುತಾಃ ಸೋಮಾಹುತಯಃ ಆದಿತ್ಯಮಂಡಲಂ ಪ್ರಾಪ್ಯ ದ್ವಾದಶಾತ್ಮನಃ ಸವಿತುರ್ಮೂರ್ತ್ಯಂತರೌ ಇಂದ್ರಾವಿಷ್ಣೂ ಪೋಷಯಂತಿ । ತುಷ್ಟೌ ತೌ ಮೇಘದ್ವಾರಾ ವರ್ಷತಃ । ತಯಾ ವೃಷ್ಟ್ಯಾ ಸಸ್ಯಾದಿದ್ವಾರಾ ಪ್ರಜಾಃ ಪುತ್ರಪೌತ್ರಾದಿರೂಪೇಣ ವರ್ಧಯತ ಇತ್ಯೇವಂ ಮಹಾನುಭಾವೌ ಇಂದ್ರಾವಿಷ್ಣೂ ಇತಿ ।**

ಅಗ್ನಿಯಲ್ಲಿ ಅರ್ಪಿಸಿದ ಸೋಮಾಹುತಿಗಳು ಆದಿತ್ಯಮಂಡಲವನ್ನು ಸೇರಿ ಸವಿತೃವಿನ ರೂಪಾಂತರಗಳಾದ ಇಂದ್ರಾವಿಷ್ಣುಗಳನ್ನು ಪೋಷಿಸುತ್ತವೆ. ಅದರಿಂದ ತುಷ್ಟರಾದ ಅವರು ಮೇಘದ ಮೂಲಕ ಮಳೆಯನ್ನು ಸುರಿಸುತ್ತಾರೆ. ಆ ವೃಷ್ಟಿಯಿಂದ ಸಸ್ಯಾದಿಗಳು ಉತ್ಪನ್ನವಾಗಿ ಅದು ಅನ್ನರೂಪವಾಗಿ ಪರಿಣಮಿಸಿ ಪುತ್ರಪೌತ್ರಾದಿಗಳ ಬೆಳವಣಿಗೆಗೆ ಕಾರಣವಾಗುವುದೆಂದು ಈ ವಾಕ್ಯದ ತಾತ್ಪರ್ಯವೆಂದು ಹೇಳಿದ್ದಾರೆ. ಈ ವಾಕ್ಯದಲ್ಲಿ **ಯಜ್ಞ, ಇಂದ್ರ, ವಿಷ್ಣು** ಮತ್ತು **ಆದಿತ್ಯ** ಇವರಿಗೆ ಇರತಕ್ಕ ನಿಕಟವಾದ ಸಂಬಂಧವನ್ನು ತಿಳಿಸಿ ವಿಶ್ವದಲ್ಲಿ ಸಂತಾನಾಭಿವೃದ್ಧಿಗೆ ಇವರು ಯಾವ ರೀತಿ ಹೇತುವೆಂಬುದನ್ನೂ ತಿಳಿಸಿದೆ. ಈ ವಿವರಣೆಯು ಸರಿಯಾಗಿರುವುದೆಂದು ಹೇಳುವುದಕ್ಕೆ ಶ್ರುತಿವಾಕ್ಯಗಳ ಆಧಾರವೂ ಬಹಳವಾಗಿದೆ.

**ಸ ಉ ಏವ ಮಖಃ ಸ ವಿಷ್ಣುಃ । ತತ ಇಂದ್ರೋ ಮಖವಾನಭವನ್ಮಖವಾನ್ಹ ವೈ ತಂ ಮಘವಾನಿತ್ಯಾಚಕ್ಷತೇ ಪರೋಕ್ಷಂ ಪರೋಕ್ಷಕಾಮಾ ಹಿ ದೇವಾಃ॥**
(ಶ. ಬ್ರಾ. ೧೪-೧-೧-೧೩)

ಎಂಬ ವಾಕ್ಯದಲ್ಲಿ **ಮಖಕ್ಕೂ** (ಯಜ್ಞ), ವಿಷ್ಣುವಿಗೂ ತಾದಾತ್ಮ್ಯವನ್ನು ಹೇಳಿ ಇಂದ್ರನು ಮಖವನ್ನುಳ್ಳವನಾದ್ದರಿಂದ ಅವನಿಗೆ **ಮಖ(ಘ)ವಾನ್** ಎಂಬ ಹೆಸರು ಪ್ರಸಿದ್ಧವಾಗಿದೆಯೆಂದು ತಿಳಿಸಿದೆ.

**ಅಥ ಯೋಸ್ಮದ್ದೇವಾಃ । ಜುಷ್ಟಾಸ್ತನೂಃ ಪ್ರಿಯಾಣಿ ಧಾಮಾನಿ ಸಾರ್ಧಗ್ಂ ಸಮವದದಿರೇ ತದಿಂದ್ರೇ ಸಂನ್ಯದಧತ್ಯೈಷ ವಾ ಇಂದ್ರೋ ಯ ಏಷ ತಪತಿ ನ ಹ ವಾ ಏಷೋಽಗ್ರೇ ತತಾಪ ಯಥಾ ಹೈವೇದಮನ್ಯತ್ಕೃಷ್ಣಮೇವಂ ಹೈವಾಸ ತೇನೈವೈತದ್ವೀರ್ಯೇಣ ತಪತಿ ತಸ್ಮಾದ್ಯದಿ ಬಹವೋ ದೀಕ್ಷೇರನ್ ಗೃಹಪತಯ ಏವ ವ್ರತಮಭ್ಯುತ್ಸಿಚ್ಯ ಪ್ರಯಚ್ಛೇಯುಃ ಸ ಹಿ ತೇಷಾಮಿಂದ್ರಭಾಜನಂ ಭವತಿ ।**

(ಶ. ಬ್ರಾ. ೩-೪-೨-೧೫)

ಎಂಬ ವಾಕ್ಯಗಳಲ್ಲಿ ಏಷ ವಾ ಇಂದ್ರೋ ಯ ಏಷ ತಪತಿ ಅಂತರಿಕ್ಷದಲ್ಲಿ ಬೆಳಗುತ್ತಿರುವ ಆದಿತ್ಯನೇ ಇಂದ್ರನೆಂದೂ, ದೀಕ್ಷಿತರ ವಿಧ್ಯುಕ್ತವಾದ ಆಹುತ್ಯರ್ಪಣವೇ ಆದಿತ್ಯನ ಪ್ರಕಾಶಕ್ಕೆ ಹೇತುವೆಂದೂ ಆದಿತ್ಯನ ಪ್ರಕಾಶವೂ ಶಕ್ತಿಯೂ ಇಲ್ಲದಿದ್ದರೆ ವೃಷ್ಟಿಪತನಾದಿಗಳಿಗೆ ಅವಕಾಶವಿಲ್ಲದುದರಿಂದ ಯಜ್ಞವೂ ಸಹ ಮಾನವರ ಅಭಿವೃದ್ಧಿಗೆ ಕಾರಣವೆಂದೂ ತಿಳಿಸುವುದಕ್ಕಾಗಿ ಆದಿತ್ಯರೂಪನಾದ ಇಂದ್ರನು ಯಜ್ಞದಿಂದಲೇ ತೇಜಸ್ವಿಯಾಗುವನೆಂದೂ ಸಹ ತಿಳಿಸಿದೆ.

ಪ್ರಕೃತವಾದ ಋಕ್ಕಿನಲ್ಲಿ ಪಿತುಃ ಎಂಬ ಪದಕ್ಕೆ **ಪಾಲಕಾದ್ವಿಷ್ಣೋರನುಗ್ರಹಾತ್ ।** ಪಾಲಕನಾದ ವಿಷ್ಣುವಿನ ಅನುಗ್ರಹದಿಂದ ಪುತ್ರಾದಿಸಂಪತ್ತುಗಳೆಂದು ಹೇಳಿದೆ. ಎಂದರೆ ಯಜ್ಞಕ್ಕೂ ವಿಷ್ಣುವಿಗೂ ನಿಕಟವಾದ ಸಂಬಂಧವಿರುವುದರಿಂದಲೂ ಇಂದ್ರನಿಗೂ ವಿಷ್ಣುವಿಗೂ ಸಹ ಸಹಜವಾದುದೂ ಯಾಜ್ಞಿಕವಾದ ಸಂಬಂಧವಿರುವುದರಿಂದಲೂ ಸಹ ಈ ಅಂಶವನ್ನು ಸೂಚಿಸಿದೆ. ಈ ವಿಧವಾದ ಪರಸ್ಪರಸಂಬಂಧದ ವಿವರಣೆಯನ್ನು ಶತಪಥಬ್ರಾಹ್ಮಣದಲ್ಲಿ ಈರೀತಿ ವಿವರಿಸಿದೆ.

**ಅಥೈವಮಭಿಪದ್ಯ ವಾಚಯತಿ । ವಿಷ್ಣೋಃ ಕರ್ಮಾಣಿ ಪಶ್ಯತ ಯತೋ ವ್ರತಾನಿ ಪಸ್ಪಶೇ ಇಂದ್ರಸ್ಯ ಯುಜ್ಯಃ ಸಖೇತಿ ವಜ್ರಂ ವಾ ಏಷ ಪ್ರಾಹಾರ್ಷೀದ್ಯೋ ಯೂಪಮುದಶಿಶ್ರಿಯದ್ವಿಷ್ಣೋರ್ವಿಜಿತಿಂ ಪಶ್ಯತೇತ್ಯೇವೈತದಾಹ .... .... .... .... ಇಂದ್ರೋವೈ ಯಜ್ಞಸ್ಯ ದೇವತಾ ವೈಷ್ಣವೋ ಯೂಪಸ್ತಗ್ಂ ಸೇಂದ್ರಂ ಕರೋತಿ ತಸ್ಮಾದಾಹೇಂದ್ರಸ್ಯ ಯುಜ್ಯಃ ಸಖೇತಿ ॥**

(ಶ. ಬ್ರಾ. ೩-೭-೧-೧೭)

ಎಂಬಲ್ಲಿ ಇಂದ್ರನಿಗೂ ವಿಷ್ಣುವಿಗೂ ಸಹ ಪ್ರಾಕೃತವಾದ ಸಖ್ಯವಿದೆಯೆಂದೂ ವೈಷ್ಣವವಾದ ಯಜ್ಞಭಾಗವು ಇಂದ್ರನಿಗೂ ಸೇರತಕ್ಕದ್ದೆಂದೂ ಆದುದರಿಂದ ಯಜ್ಞಫಲಕ್ಕೆ ಇಬ್ಬರೂ ಭಾಗಿಗಳೆಂದೂ ತಿಳಿಸಿದೆ.

**ಅಥ ಚಷಾಲಮುದೀಕ್ಷತೇ । ತದ್ವಿಷ್ಣೋಃ ಪರಮಂ ಪದಗ್ಂ ಸದಾ ಪಶ್ಯಂತಿ ಸೂರಯಃ। ದಿವೀವ ಚಕ್ಷುರಾತತಂ ।**

(ಶ. ಬ್ರಾ. ೩-೭-೧-೧೮)

ಎಂಬಲ್ಲಿ ವಿಷ್ಣುವಿನ ಪರಮಪದವು ದ್ಯುಲೋಕದಲ್ಲಿ ಬೆಳಗುವ ಆದಿತ್ಯಮಂಡಲವೆಂದು ಹೇಳಿದೆ.

ಈ ರೀತಿಯಾಗಿ ಇಂದ್ರ, ವಿಷ್ಣು, ಯಜ್ಞ, ಆದಿತ್ಯಮಂಡಲ ಇವುಗಳಿಗೆಲ್ಲಾ ಇರತಕ್ಕ ಪರಸ್ಪರ ಸಂಬಂಧದ ಸಲುವಾಗಿ ಯಜ್ಞಕರ್ತರಿಗೆ ಇಂದ್ರಾವಿಷ್ಣುಗಳ ಅನುಗ್ರಹದಿಂದ ಪುತ್ರಪೌತ್ರಾದಿಸಂತತಿಗಳ ವೃದ್ಧಿಯೆಂದು ಪ್ರಕೃತವಾದ ಋಕ್ಕಿನಲ್ಲಿ ತಿಳಿಸಿದೆ.

ರೇತಸೇ—ಪುತ್ರಾದ್ಯುತ್ಪಾದನಸಾಮರ್ಥ್ಯಾಯ । ಸಂತಾನೋತ್ಪತ್ತಿಯ ಸಾಮರ್ಥ್ಯಕ್ಕಾಗಿ ಎಂದರ್ಥ ಮಾಡಿದೆ. ಮತ್ತು ಸಾಯಣರು,

**ತ್ರೀಣಿ ವಾವ ರೇತಾಂಸಿ ಪಿತಾ ಪುತ್ರಃ ಪೌತ್ರಃ ।**

(ತೈ. ಸಂ. ೫-೬-೧೪))

ಎಂಬ ಸಂಹಿತಾವಾಕ್ಯವನ್ನುದಹರಿಸಿ ರೇತಸ್ಸು—ಪಿತಾ, ಪುತ್ರ, ಮತ್ತು ಪೌತ್ರ ಎಂದು ಮೂರುಬಗೆಯ ರೂಪಗಳನ್ನು ಹೊಂದುವುದೆಂದು ತಿಳಿಸಿದ್ದಾರೆ. ಅದನ್ನೇ ಪ್ರಕೃತವಾದ ಋಕ್ಕಿನಲ್ಲಿ ತೃತೀಯಂ, ಪರಂ ಮತ್ತು, ಅಪರಂ ಎಂಬ ಪದಗಳಿಂದ ತಿಳಿಸಿದೆ. ರೇತಸ್ ಎಂಬ ಪದಕ್ಕೆ ಪುರುಷನ ಸಂತಾನಜನಕವಾದ ವೀರ್ಯವೆಂಬೇ ಅರ್ಥವಲ್ಲದೆ ಇತರ ಅರ್ಥಗಳೂ ಉಂಟು.

ನಿರುಕ್ತಕಾರರು ಈ ಪದವನ್ನು ಅರ್ಣಃ, ಕ್ಷೋದಃ, ಕ್ಷದ್ಮ ಇತ್ಯಾದ್ಯುದಕನಾಮಗಳಲ್ಲಿ ಸೇರಿಸಿದ್ದಾರೆ (ನಿ. ೨-೨೭)

**ದಿವೋ ನ ಯಸ್ಯ ರೇತಸೋ ದುಘಾನಾಃ ಪಂಥಾಸೋ ಯಂತಿ ಶವಸಾಪರೀತಾಃ ।**
**ತರದ್ದ್ವೇಷಾಃ ಸಾಸಹಿಃ ಪೌಂಸ್ಯೇಭಿರ್ಮರುತ್ವಾನ್ನೋ ಭವತ್ವಿಂದ್ರ ಊತೀ ॥**

(ಋ. ಸಂ. ೧-೧೦೦-೩)

ಇತ್ಯಾದಿ ಋಕ್ಕುಗಳಲ್ಲಿ **ವೃಷ್ಟ್ಯುದಕಗಳಿಂದರ್ಥವಾಗುತ್ತದೆ.** ಮತ್ತು,

ಕಥಾ ಮಹೇ ಪುಷ್ಟಿಂಭರಾಯ ಪೂಷ್ಣೇ ಕದ್ರುದ್ರಾಯ ಸುಮಖಾಯ ಹವಿರ್ದೇ ।
**ಕದ್ವಿಷ್ಣವ ಉರುಗಾಯಾಯ ರೇತೋ ಬ್ರವಃ ಕದಗ್ನೇ ಶರವೇ ಬೃಹತ್ಯೈ ॥**

(ಋ. ಸಂ. ೪-೩-೭)

ಎಂಬಲ್ಲಿ **ರೇತಸ್**ಶಬ್ದಕ್ಕೆ ಸಾಯಣರು **ಕ್ಷಯಹೇತುವಾದ ಪಾಪವೆಂದರ್ಥ**ಮಾಡಿದ್ದಾರೆ. ಸಂತಾನಜನಕವಾದ ವೀರ್ಯವೆಂಬರ್ಥದಲ್ಲಿ ಈ ಪದದ ಪ್ರಯೋಗವನ್ನೂ, ರೇತಸ್ಸಿಗಿರತಕ್ಕ ಅತಿಶಯವಾದ ಶಕ್ತಿಯ ವಿವರಣೆಯನ್ನೂ ತೈತ್ತಿರೀಯ ಸಂಹಿತೆಯಲ್ಲಿ (೫-೬-೮) ವಿಸ್ತೃತವಾಗಿ ತಿಳಿಸಿದೆ.

**ಭುರಣ್ಯತಿ—ಗಚ್ಛತಿ ಭಜತೇ ಚ ।** ತಿಳಿಯುತ್ತಾನೆಂಬುದರಲ್ಲಿ ತಾತ್ಪರ್ಯವೆಂದು ಭಾಷ್ಯಕಾರರು ಹೇಳಿದ್ದಾರೆ. ಈ ಪದವನ್ನು ನಿರುಕ್ತಕಾರರು ಗತಿಕರ್ಮನಾಮಗಳಲ್ಲಿ ಸೇರಿಸಿದ್ದಾರೆ. (ನಿ. ೩-೯) ಆ ಗತಿಯಲ್ಲೂ ಕ್ಷಿಪ್ರವಾದ ಚಲನವನ್ನು ಸೂಚಿಸುವುದಾದ್ದರಿಂದ ಪಕ್ಷ್ಯಾದಿಗಳಿಗೂ ಸಹ **ಭುರಣ್ಯು**ವೆಂಬ ಹೆಸರೆಂದು ತಿಳಿಸಿದ್ದಾರೆ.

**ಭುರಣ್ಯುರಿತಿ ಕ್ಷಿಪ್ರನಾಮ । ಭುರಣ್ಯುಃ ಶಕುನಿರ್ಭೂರಿಮಧ್ವಾನಂ ನಯತಿ ಸ್ವರ್ಗಸ್ಯ ಲೋಕಸ್ಯಾಪಿ ವೋಳ್ಹಾ ತತ್ಸಂಪಾತೀ ಭುರಣ್ಯುರನೇನ ಪಾವಕಖ್ಯಾತೇನ ।**

(ನಿ. ೧೨-೨೨)

ಬಹುದೂರಕ್ಕೆ ಹಾರಿ ಹೋಗುವುದರಿಂದ ಪಕ್ಷಿಗೆ **ಭುರಣ್ಯು**ವೆಂದು ಹೆಸರು. ಸ್ವರ್ಗಕ್ಕಾದರೂ ಸಹ ಯಾರನ್ನಾದರೂ ಒಯ್ಯಬಲ್ಲುದು. ಪಕ್ಷಿಯೊಂದಿಗೆ ಕ್ಷಿಪ್ರವಾಗಿ (ಸ್ವರ್ಗಾಭಿಮುಖವಾಗಿ) ಚಲಿಸತಕ್ಕ ಯಜ್ಞಕರ್ತನಾದ ಯಜಮಾನನಿಗೂ ಇದೇ ಹೆಸರು. ಈ ಸಂದರ್ಭದಲ್ಲಿ ನಿರುಕ್ತಕಾರರು

**ಯೇನಾ ಪಾವಕ ಚಕ್ಷಸಾ ಭುರಣ್ಯಂತಂ ಜನಾಁ ಅನು । ತ್ವಂ ವರುಣ ಪಶ್ಯಸಿ ॥**
(ಋ. ಸಂ. ೧-೫೦-೬)

ಎಂಬ ಋಕ್ಕನ್ನು ಪಠಿಸಿದ್ದಾರೆ. ಮತ್ತು **ಭುರಣ್ಯು** ಶಬ್ದಕ್ಕೆ ಮೇಲ್ಕಂಡಂತೆ ನಿರ್ವಚನವನ್ನು ತಿಳಿಸಿದ್ದಾರೆ. ಆದುದರಿಂದ ಈ ಉದಾಹೃತವಾದ ಋಕ್ಕಿನಲ್ಲಿಯೂ ಸಹ **ಭುರಣ್ಯಂತಂ** ಎಂಬ ಪದಕ್ಕೆ **ಗತ್ಯರ್ಥ**ವೇ ಇರುವುದು ಸಹಜವಾಗಿದೆ. ದುರ್ಗಾಚಾರ್ಯರು ತಮ್ಮ ವ್ಯಾಖ್ಯೆಯಲ್ಲಿ **ಪುಣ್ಯಕೃತೋ ಜನಾನನುಭುರಣ್ಯಂತಂ ಪೂರ್ವೇಷಾಂ ಪುಣ್ಯಕೃತಾಂ ಮಾರ್ಗೇಣ ದೇವಯಾನೇನ ಕ್ಷಿಪ್ರಂ ಗಚ್ಛಂತಮನುಪಶ್ಯಸಿ** ಎಂದು ಈ ಪದಕ್ಕೆ **ಕ್ಷಿಪ್ರಂ ಗಚ್ಛಂತಂ** ಎಂದೇ ಅರ್ಥವನ್ನು ವಿವರಿಸಿದ್ದಾರೆ. ಇದು ನಿರುಕ್ತಕಾರರ ಮತವನ್ನನುಸರಿಸಿದೆ. ಆದರೆ ಸಾಯಣರು ಇದೇ ಋಕ್ಕಿನ ಭಾಷ್ಯದಲ್ಲಿ **ಭುರಣ್ಯಂತಂ ಧಾರಯಂತಂ ಪೋಷಯಂತಂ ವಾ ಇಮಂ ಲೋಕಂ** ಎಂದು ಈ ಪದಕ್ಕೆ **ಧಾರಣ** ಅಥವಾ **ಪೋಷಣ** ಎಂಬರ್ಥವನ್ನು ಮಾಡಿದ್ದಾರೆ. ಈ ಅರ್ಥವು ಈ ಸಂದರ್ಭಕ್ಕೆ ಅಷ್ಟು ಉಚಿತವಾಗಿ ತೋರುವುದಿಲ್ಲ

ಈ ಪದವು ಧಾರಣಾರ್ಥಕವೂ, ಪೋಷಣಾರ್ಥಕವೂ ಆದ **ಭುರಣ** (ಧಾರಣಪೋಷಣಯೋಃ) ಎಂಬ ಧಾತುವಿನಿಂದಲೂ ನಿಷ್ಪನ್ನವಾಗಬಹುದಾದುದರಿಂದ ಈ ಅರ್ಥಗಳಲ್ಲಿಯೂ ಈ ಪದದ ಪ್ರಯೋಗವಿದೆ. ಉದಾಹರಣೆಗೆ,

**ಯನ್ನಾಸತ್ಯಾ ಭುರಣ್ಯಥೋ ಯದ್ವಾ ದೇವ ಭಿಷಜ್ಯಥಃ ।**
**ಅಯಂ ವಾಂ ವತ್ಸೋ ಮತಿಭಿರ್ನ ವಿಂಧತೇ ಹವಿಷ್ಮಂತಂ ಹಿ ಗಚ್ಛಥಃ ॥**
(ಋ. ಸಂ. ೮-೯-೬)

ಇಲ್ಲಿ **ಭುರಣ್ಯಥಃ ಸರ್ವಂ ಜಗತ್ಪೋಷಯಥಃ** ನೀವು ಸಕಲ ಜಗತ್ತನ್ನೂ ಪೋಷಿಸುತ್ತೀರಿ ಎಂದು ಅಶ್ವಿನೀ ದೇವತೆಗಳನ್ನು ನಿರ್ದೇಶಿಸಿದೆ

**ಯುವೋರತ್ರಿಶ್ಚಿಕೇತತಿ ನರಾ ಸುಮ್ನೇನ ಚೇತಸಾ ।**
**ಘರ್ಮಂ ಯದ್ವಾಮರೇಪಸಂ ನಾಸತ್ಯಾಸ್ನಾ ಭುರಣ್ಯತಿ ॥**
(ಋ. ಸಂ. ೫-೭೩-೬)

ಇತ್ಯಾದಿ ಋಕ್ಕುಗಳಲ್ಲಿ **ಪ್ರಾಪ್ತವಾನ್** ಎಂದು **ಗತ್ಯರ್ಥಕ**ವಾಗಿಯೇ ಇದೆ. ಪ್ರಕೃತವಾದ ಋಕ್ಕಿನಲ್ಲಿಯೂ **ಗತ್ಯರ್ಥ**ವಾಗಿಯೇ ಇದ್ದು ಪರ್ಯವಸಾನದಲ್ಲಿ **ಮರ್ತ್ಯಃ ಉಭೇ ಕ್ರಮಣೇ ಜಾನಾತಿ** ವಿಷ್ಣುವಿನ ಎರಡು ಪಾದವಿಕ್ಷೇಪಗಳನ್ನೂ (ಭೂಮ್ಯಂತರಿಕ್ಷಗಳ ವಿಕ್ರಮಣಗಳನ್ನು ಮಾತ್ರ) ತಿಳಿಯುತ್ತಾನೆ ಎಂದು ತಾತ್ಪರ್ಯವನ್ನು ಕೊಡುತ್ತದೆ.

ಅಭಿಖ್ಯಾಯ— ಅಭಿಖ್ಯಾ ಶಬ್ದವನ್ನು ನಿರುಕ್ತಕಾರರು **ಪ್ರಜ್ಞಾನಾಮ**ಗಳಲ್ಲಿ ಸೇರಿಸಿದ್ದಾರೆ. (ನಿ. ೩-೧೩) (ಸ್ತುತ್ಯಾದಿನಾ) ಪ್ರಖ್ಯಾಪ್ಯ ಪ್ರಸಿದ್ಧಗೊಳಿಸಿ ಎಂದರೆ ಸ್ತುತ್ಯಾದಿಗಳಿಂದ ಲೋಕತಿಳುವಳಿಕೆಗೆ ಬರುವಂತೆ ಪ್ರಕಟಿಸಿ ಎಂದರ್ಥ. **ವಿಷ್ಣು**ವಿನ ಮಹಿಮೆಯನ್ನು ಪ್ರಸಿದ್ಧಪಡಿಸುತ್ತಾರೆ ಎಂದು ತಾತ್ಪರ್ಯ.

ಅಭಿಖ್ಯಾ ನೋ ಮಘವನ್ನಾಧಮಾನಾನ್ತ್ಸಖೇ ಬೋಧಿ ವಸುಪತೇ ಸಖೀನಾಂ ।
ರಣಂ ಕೃಧಿ ರಣಕೃತ್ಸತ್ಯಶುಷ್ಮಾಭಕ್ತೇ ಚಿದಾ ಭಜಾ ರಾಯೇ ಅಸ್ಮಾನ್ ॥

(ಋ ಸಂ. ೧೦-೧೧೨-೧೦)

ಇತ್ಯಾದಿಋಕ್ಕುಗಳಲ್ಲಿ ಅಭಿಖ್ಯಾ ಅಭಿಖ್ಯಾಪನೇನ ಪ್ರಸಿದ್ಧಾನ್ ಕುರು ನಮ್ಮ ಭಕ್ತ್ಯಾದಿಗಳನ್ನು ಲೋಕಕ್ಕೆಲ್ಲಾ ಪ್ರಕಟವಾಗುವಂತೆ ಪ್ರಶಂಸಾ ವಾಕ್ಯಗಳಿಂದ ಹೇಳಿ ನಮ್ಮ ಹೆಸರನ್ನು ಪ್ರಸಿದ್ಧಪಡಿಸು ಎಂದು ತಾತ್ಪರ್ಯವನ್ನು ಕೊಡುವಂತೆ ಪ್ರಕೃತವಾದ ಋಕ್ಕಿನಲ್ಲಿಯೂ ಪ್ರಕಾಶಪಡಿಸುವುದೆಂದರ್ಥವಾಗುತ್ತದೆ.

**ವಯಶ್ಚನ**—**ಗಂತೃತ್ವಾತ್ ಪಕ್ಷಿಸಾದೃಶ್ಯಾದ್ವಾ ಮರುತೋಽತ್ರ ವಯ ಉಚ್ಯಂತೇ ।** ಯಾವಾಗಲೂ ಸಂಚರಿಸುವ ಸ್ವಭಾವವಿರುವುದರಿಂದಲೂ ಪಕ್ಷಿಸಾದೃಶ್ಯವಿರುವುದರಿಂದಲೂ **ವಯಃ** ಎಂದರೆ ಇಲ್ಲಿ ಮರುತ್ತುಗಳೆಂದರ್ಥಮಾಡಿದೆ. ಈ ಪದಕ್ಕೆ **ಅನ್ನ, ಶಕ್ತಿ, ಆಯಸ್ಸು, ರಶ್ಮಿ** ಇತ್ಯಾದ್ಯನೇಕವಾದ ಅರ್ಥಗಳಿರುವುವೆಂಬುದನ್ನು ಉದಾಹರಣೆಗಳೊಂದಿಗೆ ಹಿಂದೆ ತಿಳಿಸಿದೆ.

### ವ್ಯಾಕರಣಪ್ರಕ್ರಿಯಾ

**ವರ್ಧಂತಿ**—ವೃಧು ವೃದ್ಧೌ. ಧಾತು. **ಹೇತುಮತಿ ಚ** ಎಂಬುದರಿಂದ ಣಿಚ್. ಅದನ್ನು ನಿಮಿತ್ತೀಕರಿಸಿ ಧಾತುವಿನ ಲಘೂಪಧೆಗೆ ಗುಣ. **ಣಿಜಂತ**ದ ಮೇಲೆ ಲಟ್ ಪ್ರಥಮಪುರುಷ ಬಹುವಚನದಲ್ಲಿ ಝ ಪ್ರತ್ಯಯ. ಅದಕ್ಕೆ ಅಂತಾದೇಶ ಶಪ್ ವಿಕರಣ. **ಛಂದಸ್ಯುಭಯಥಾ** (ಪಾ. ಸೂ. ೩-೪-೧೧೭) ಎಂಬುದರಿಂದ ಅದಕ್ಕೆ ಆರ್ಧಧಾತುಕಸಂಜ್ಞೆ ಇರುವುದರಿಂದ **ಣೇರನಿಟಿ** (ಪಾ ಸೂ. ೬-೪-೫೧) ಎಂಬುದರಿಂದ ಣಿಚಿಗೆ ಲೋಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಮಹಿ**—ಮಹ ಪೂಜಾಯಾಂ ಧಾತು. **ಇನ್ ಸರ್ವಧಾತುಭ್ಯಃ** ಎಂಬುದರಿಂದ ಇನ್ ಪ್ರತ್ಯಯ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಪೌಂಸ್ಯಮ್**—ಪುಂಸಃ ಕರ್ಮ ಪೌಂಸ್ಯಮ್. ಷ್ಯಞ್ ಪ್ರತ್ಯಯ. **ತದ್ಧಿತೇಷ್ವಚಾಮಾದೇಃ** ಎಂಬುದರಿಂದ ಆದಿವೃದ್ಧಿ. **ಞ್ನಿತ್ಯಾದಿರ್ನಿತ್ಯಮ್** ಎಂಬುದರಿಂದ ಞಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಮಾತರಾ**—ಮಾನ ಪೂಜಾಯಾಂ ಧಾತು. **ನಪ್ತೃನೇಷ್ಟೃ**—(ಉ. ಸೂ. ೨-೫೨) ಎಂಬುದರಿಂದ ತೃಜಂತವಾಗಿ ನಿಪಾತಿತವಾಗಿದೆ. ಇದಕ್ಕೆ ದ್ವಿವಚನ ಪರವಾದಾಗ **ಸುಪಾಂ ಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಅದಕ್ಕೆ ಆಕಾರಾದೇಶ. **ಋತೋ ಙಿ ಸರ್ವ**—ಎಂಬುದರಿಂದ ಗುಣ. **ಅಪ್‌ತೃನ್‌ತೃಚ್**—ಸೂತ್ರದಲ್ಲಿ ನಿಯಮವಾದಿರುವುದರಿಂದ ಉಪಧಾದೀರ್ಘ ಬರುವುದಿಲ್ಲ ಚಿತ್ತಾದುದರಿಂದ ಅಂತೋದಾತ್ತಸ್ವರ ಬರುತ್ತದೆ.

**ನಯತಿ**—ಣೀಞ್ ಪ್ರಾಪಣೇ. ಧಾತು ಲಟ್ ಪ್ರಥಮಪುರುಷ ಏಕವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ.

**ಭುಜೇ**—ಭುಜ ಪಾಲನಾಭ್ಯವಹಾರಯೋಃ ಧಾತು. ಕ್ವಿಪ್ ಚ ಎಂಬುದರಿಂದ ಕ್ವಿಪ್ ಪ್ರತ್ಯಯ. ಚತುರ್ಥೀ ಏಕವಚನಾಂತರೂಪ. **ಸಾವೇಕಾಚಸ್ತೃತೀಯಾದಿಃ** (ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ

**ದಧಾತಿ**—ಡುಧಾಞ್ ಧಾರಣಪೋಷಣಯೋಃ ಧಾತು. ಲಟ್ ಪ್ರಥಮಪುರುಷ ಏಕವಚನಾಂತರೂಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. **ಅಭ್ಯಸ್ತಾನಾಮಾದಿಃ** (ಪಾ. ಸೂ. ೬-೧-೧೮೯) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಪುತ್ರಃ**—ಪೂಞ್ ಪವನೇ ಧಾತು. **ಪುವೋಹ್ರಸ್ವಶ್ಚ** (ಉ. ಸೂ. ೪-೯೦೪) ಎಂಬುದರಿಂದ ಕ್ತ್ರ ಪ್ರತ್ಯಯ. ಕಿತ್ತಾದುದರಿಂದ ಗುಣ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ತೃತೀಯಮ್**—**ತ್ರೇಃ ಸಂಪ್ರಸಾರಣಂ ಚ** (ಪಾ. ಸೂ. ೫-೨-೫೫) ಎಂಬುದರಿಂದ ತೀಯ ಪ್ರತ್ಯಯ ಸಂಪ್ರಸಾರಣ ಋಕಾರ ಬರುತ್ತದೆ. ಪ್ರತ್ಯಯದ ಆದ್ಯುದಾತ್ತಸ್ವರದಿಂದ ಈಕಾರ ಉದಾತ್ತವಾಗುತ್ತದೆ.

**ರೋಚನೇ**—ರುಚ ದೀಪ್ತೌ ಧಾತು. ಇದಕ್ಕೆ ಯುಚ್ ಪ್ರತ್ಯಯ ಬಂದಾಗ **ಯುವೋರನಾಕೌ** (ಪಾ. ಸೂ. ೭-೧-೧) ಎಂಬುದರಿಂದ ಅದಕ್ಕೆ ಅನಾದೇಶ. ಚಿತ್ತಾದುದರಿಂದ **ಚಿತಃ** ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ದಿವಃ**—**ಊಡಿದಂ ಪದಾದಿ**—(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ ॥ ೩ ॥

———:೦:———

**ಸಂಹಿತಾಪಾಠಃ**

ತತ್ತದಿದಸ್ಯ ಪೌಂಸ್ಯಂ ಗೃಣೀಮಸೀನಸ್ಯ ತ್ರಾತುರವೃಕಸ್ಯ ಮೀಳ್ಹುಷಃ ।
ಯಃ ಪಾರ್ಥಿವಾನಿ ತ್ರಿಭಿರಿದ್ವಿಗಾಮಭಿರುರು ಕ್ರಮಿಷ್ಟೋರುಗಾಯಾಯ
ಜೀವಸೇ ॥ ೪ ॥

**ಪದಪಾಠಃ**

ತತ್ಽತತ್ । ಇತ್ । ಅಸ್ಯ । ಪೌಂಸ್ಯಂ । ಗೃಣೀಮಸಿ । ಇನಸ್ಯ । ತ್ರಾತುಃ । ಅವೃಕಸ್ಯ । ಮೀಳ್ಹುಷಃ ।
ಯಃ । ಪಾರ್ಥಿವಾನಿ । ತ್ರಿಽಭಿಃ । ಇತ್ । ವಿಗಾಮಽಭಿಃ । ಉರು । ಕ್ರಮಿಷ್ಟ । ಉರುಽಗಾಯಾಯ ।
ಜೀವಸೇ ॥ ೪ ॥

### ಸಾಯಣಭಾಷ್ಯಂ

ಅಸ್ಯ ಮಹಾನುಭಾವಸ್ಯ ತತ್ತತ್ಪೌಂಸ್ಯಂ ಪುಂಸ್ತ್ವಂ ಪರಾಕ್ರಮಾತಿಶಯಂ ಗೃಣೀಮಸಿ। ಗೃಣೀಮಃ। ಸ್ತುಮಃ। ಕೀದೃಶಸ್ಯಾಸ್ಯ। ಇನಸ್ಯ ಸರ್ವಸ್ಯ ಸ್ವಾಮಿನಃ ತ್ರಾತುಃ ಪಾಲಕಸ್ಯ ಅವೃಕಸ್ಯ। ವೃಕೋ ಹಿಂಸಕಃ ಶತ್ರ್ವಾದಿಃ। ತದ್ರಹಿತಸ್ಯ ಮೀಳ್ಹುಷಃ ಸೇಕ್ತುರ್ನಿತ್ಯತರುಣಸ್ಯ। ಸ್ತುತ್ಯೇಷು ಪರಾಕ್ರಮೇಷು ಮಧ್ಯ ಏಕಮುದಾಹರತಿ। ಯೋ ವಿಷ್ಣುಃ ಪಾರ್ಥಿವಾನಿ ಪೃಥಿವ್ಯಾದೀನಿ ಪ್ರಥನವಂತಿ ವಾ। ಸಾಮರ್ಥ್ಯಾತ್ ರಜಾಂಸೀತಿ ಗಮ್ಯತೇ। ಲೋಕತ್ರಯಸ್ಯಾಪಿ ಪೃಥಿವೀಶಬ್ದವಾಚ್ಯತ್ವಂ ಪೂರ್ವ ಮುದಾಹೃತಂ। ತಾನಿ। ತ್ರಿಭಿರಿದ್ವಿಗಾಮಭಿಸ್ತ್ರಿಭಿರೇವ ವಿವಿಧಗಮನೈರುರು ವಿಸ್ತೀರ್ಣಂ ಯಥಾ ಭವತಿ ತಥಾ ಕ್ರಮಿಷ್ಟ ಕ್ರಾಂತವಾನ್। ವಿಚಕ್ರಮ ಇತ್ಯರ್ಥಃ। ಉರುಗಾಯಾಯೋರುಗಾತವ್ಯಾಯ ಜೀವಸೇ ಲೋಕತ್ರಯರಕ್ಷಣಾಯ। ಯದ್ವಾ। ಉರುಗಾಯಾಯ॥ ಷಷ್ಠ್ಯರ್ಥೇ ಚತುರ್ಥೀ॥ ಉರುಗಾಯಸ್ಯ ವಿಷ್ಣೋರೀದೃಶಂ ಪರಾಕ್ರಮಂ। ಗೃಣೀಮಸಿ। ಕಿಮರ್ಥಂ। ಜೀವಸೇ ಜೀವನಾಯ ರಕ್ಷಣಾಯ॥

### ॥ ಪ್ರತಿಪದಾರ್ಥ ॥

**ಇನಸ್ಯ**—(ವಿಶ್ವಕ್ಕೆಲ್ಲಾ) ಸ್ವಾಮಿಯೂ। **ತ್ರಾತುಃ**—ಪಾಲಕನೂ। **ಅವೃಕಸ್ಯ**—ಅಹಿಂಸಕನೂ। **ಮೀಳ್ಹುಷಃ**—(ಇಷ್ಟಾರ್ಥಗಳನ್ನು) ಸುರಿಸಲು ಅತ್ಯಂತ ಸತ್ತ್ವವುಳ್ಳವನೂ। (ಮತ್ತು) **ಯಃ**—ಯಾರು। **ಪಾರ್ಥಿವಾನಿ**— ಪೃಥಿವ್ಯಾದಿಮೂರುಲೋಕಗಳನ್ನೂ। **ತ್ರಿಭಿರಿದ್ವಿಗಾಮಭಿಃ**— ವಿಧವಿಧವಾಗಿ ಸಂಚರಿಸುವ ಮೂರೇ ಮೂರುಸಲ (ಮೂರು ಪಾದಗಳಿಂದ) ಮಾಡಿದ ಸಂಚಾರದಿಂದ। **ಉರು**—ಅತ್ಯಂತ ವಿಸ್ತಾರವಾಗುವಂತೆ। **ಕ್ರಮಿಷ್ಟ**—ಆಕ್ರಮಿಸಿದನೋ ಅವನೂ। **ಉರುಗಾಯಾಯ**—ಅನೇಕರಿಂದ ಸ್ತುತಿಸಲ್ಪಟ್ಟವನೂ ಆದ। **ಅಸ್ಯ**—ಮಹಾನುಭಾವನಾದ ವಿಷ್ಣುವಿನ। **ತತ್ತದಿತ್ ಪೌಂಸ್ಯಂ**—ಪುರುಷರೂಪದ ಆಯಾ ಪರಾಕ್ರಮಗಳನ್ನೇ। (**ಉರುಗಾಯಾಯ**—ಅನೇಕ ವಿಧದಲ್ಲಿ ಸ್ತುತಿಸಲ್ಪಡುವ)। **ಜೀವಸೇ**—(ಲೋಕತ್ರಯದ) ರಕ್ಷಣೆಗಾಗಿ। **ಗೃಣೀಮಸಿ**—ಸ್ತುತಿಸುತ್ತೇವೆ.

### ॥ ಭಾವಾರ್ಥ ॥

ವಿಶ್ವಕ್ಕೆಲ್ಲಾ ಸ್ವಾಮಿಯೂ, ಪಾಲಕನೂ, ಅಹಿಂಸಕನೂ, ಅತ್ಯಂತ ಸತ್ತ್ವವುಳ್ಳ ತರುಣನೂ, ಪೃಥಿವ್ಯಾದಿ ಮೂರು ಲೋಕಗಳನ್ನೂ ಮೂರೇ ಮೂರು ಪಾದಗಳಿಂದ ಸಂಚರಿಸಿ ಅತ್ಯಂತ ವಿಸ್ತಾರವಾಗುವಂತೆ ಆಕ್ರಮಿಸಿದವನೂ ಅನೇಕರಿಂದ ಸ್ತುತಿಸಲ್ಪಟ್ಟವನೂ ಆದ ವಿಷ್ಣುವಿನ ಪುರುಷರೂಪದ ಆಯಾಯ ಪರಾಕ್ರಮದ ಕಾರ್ಯಗಳನ್ನು ಲೋಕತ್ರಯದ ರಕ್ಷಣೆಗಾಗಿ ಸ್ತುತಿಸುತ್ತೇವೆ.

## English Tranlation

Therefore, verily, we celebrate the manhood of that lord (of all), the preserver, the innocuous, the vigorous, who traversed the three regions with three wide steps, in different directions, f r the many-praised (preservation of) existence.

**ವಿಶೇಷವಿಷಯಗಳು**

ಇನಸ್ಯ—ನಿಯುತ್ವಾನ್, ಇನಃ ಎಂದು ಈಶ್ವರನಾಮುಗಳಲ್ಲಿ ಸೇರಿಸಿ, **ಇನ ಇತ್ಯೇತತ್ ಸನಿತ ಐಶ್ವರ್ಯೇಣೇತಿ ವಾ ಸನಿತಮನೇನೈಶ್ವರ್ಯಮಿತಿ ವಾ ।** (ನಿ. ೩-೧೧) ಐಶ್ವರ್ಯದಿಂದ ತುಂಬಿದವನು ಅಥವಾ ಇತರರನ್ನು ಐಶ್ವರ್ಯದಿಂದ ತುಂಬಿಸುವವನು ; ಆದುದರಿಂದ ಈಶ್ವರನಿಗೆ (ಒಡೆಯನಿಗೆ) ಇನಃ ಎಂಬ ಹೆಸರೆಂದು ನಿರುಕ್ತಕಾರರು ಈ ಪದಕ್ಕೆ ನಿರ್ವಚನವನ್ನು ಹೇಳಿದ್ದಾರೆ. ವಿಶ್ವವನ್ನೆಲ್ಲಾ ತನ್ನ ವ್ಯಾಪಕವಾದ ರೂಪದಿಂದ ಆಕ್ರಮಿಸಿ ಎಲ್ಲಕ್ಕೂ ತಾನು ಒಡೆಯನಾಗಿರುವುದರಿಂದಲೂ, ವಿಶ್ವದ ಸಂಪದ್ವೃದ್ಧಿಗೆ ತಾನೇ ಕಾರಣನಾದುದರಿಂದಲೂ ಸಹ **ವಿಷ್ಣು**ವಿಗೆ ಈ ವಿಶೇಷಣವು ಉಚಿತವಾಗಿದೆ.

**ಅವೃಕಸ್ಯ—ವೃಕಃ ಹಿಂಸಕಃ ಶತ್ರ್ವಾದಿಃ । ತದ್ರಹಿತಸ್ಯ ।** ಅಹಿಂಸಕವಾದ ಅಮಿತ್ರನಲ್ಲದ ಎಂದರ್ಥ ಮಾಡಿದೆ. ನಿರುಕ್ತಕಾರರು

**ಉದೀರತಾಮವರ ಉತ್ಪರಾಸ ಉನ್ಮಧ್ಯಮಾಃ ಪಿತರಃ ಸೋಮ್ಯಾಸಃ ।**
**ಅಸುಂ ಯ ಈಯುರವೃಕಾ ಋತಜ್ಞಾಸ್ತೇ ನೋಽವಂತು ಪಿತರೋ ಹವೇಷು ॥**

(ಋ. ಸಂ. ೧೦-೧೫-೧)

ಎಂಬ ಋಕ್ಕನ್ನುದಹರಿಸಿ ಅಲ್ಲಿ **ಅವೃಕ**ಶಬ್ದಕ್ಕೆ **ಅನಮಿತ್ರಾಃ** ಶತ್ರುಗಳಲ್ಲದವರು ಎಂದರ್ಥಮಾಡಿರುವಂತೆಯೇ ಸಾಯಣರೂ ಸಹ **ಅವೃಕ**ಶಬ್ದವಿರುವ ಕಡೆಗಳಲ್ಲೆಲ್ಲಾ **ಅನಮಿತ್ರಃ, ಅಹಿಂಸಕಃ** ಎಂದರ್ಥಮಾಡಿದ್ದಾರೆ. ಇದರಲ್ಲಿ ರಕ್ಷಕನೆಂದು ಭಾವರೂಪಾರ್ಥವೂ ಹಿಂಸಕನಲ್ಲದವನೆಂದು ನಿಷೇಧರೂಪವಾದ ಅರ್ಥವೂ ಇರುತ್ತದೆ

**ಮೀಳ್ಹುಷಃ**—ಸೇಚನಾರ್ಥಕವಾದ **ಮಿಹ್** ಧಾತುವಿನಿಂದ ಈ ಪದವು ನಿಷ್ಪನ್ನವಾಗಿದೆ. **ಯನ್ಮೇಹತಿ ತದ್ವರ್ಷತಿ** (ಬೃ. ಉ. ೧-೧-೧) ಎಂಬ ವಾಕ್ಯದಲ್ಲಿ ಇದರ ಮೂಲರೂಪದ ಅರ್ಥವನ್ನು ನೋಡಬಹುದು.

**ವಾಜಯನ್ನಿವ ನೂ ರಥಾನ್ಯೋಗಾँ ಅಗ್ನೇರುಪ ಸ್ತುಹಿ । ಯಶಸ್ತಮಸ್ಯ ಮೀಳ್ಹುಷಃ ॥**

(ಋ. ಸಂ. ೨-೮-೧)

ಇತ್ಯಾದಿ ಋಕ್ಕುಗಳಲ್ಲೆಲ್ಲಾ **ಫಲಸ್ಯ ಸೇಕ್ತುಃ** ಇಷ್ಟಾರ್ಥಗಳನ್ನು ಸುರಿಸಿಕೊಡತಕ್ಕ ಎಂದರ್ಥವಾಗುತ್ತದೆ. ಪ್ರಕೃತವಾದ ಋಕ್ಕಿನಲ್ಲಿ ಸರ್ವದಾ (ರೇತಃ) ಸೇಚನಸಾಮರ್ಥ್ಯವುಳ್ಳವನೆಂದರ್ಥಮಾಡಿದೆ. **ಸೇಕ್ತುಃ ನಿತ್ಯತರುಣಸ್ಯ।** ಸರ್ವದಾ ತಾರುಣ್ಯವನ್ನು ಹೊಂದಿರುವವನು ಎಂದು ತಾತ್ಪರ್ಯ. ಅತ್ಯಂತ ಉದಾರವಾದ ಸ್ವಭಾವವುಳ್ಳವನೆಂದು ಅಗ್ನ್ಯಾದಿ ದೇವತೆಗಳಿಗೂ ವಿಶೇಷಣವಾಗಿ ಅನೇಕಕಡೆ ಈ ಪದದ ಪ್ರಯೋಗವಿದೆ. ಈ ಮೂಲಧಾತುವಿನಿಂದಲೇ ನಿಷ್ಪನ್ನವಾದ ಮೀಳ್ಹಂ ಎಂಬ ಪದವನ್ನು **ಧನನಾಮ**ಗಳಲ್ಲಿಯೂ (ನಿ. ೩-೯), ಮೀಳ್ಹೇ ಎಂಬ ಪದವನ್ನು **ಸಂಗ್ರಾಮ**ನಾಮಗಳಲ್ಲಿಯೂ ( ನಿ. ೩-೯ ) ಸೇರಿಸಿದ್ದಾರೆ. ಅವುಗಳ ವಿಶೇಷಾರ್ಥಗಳನ್ನು ಆಯಾ ಸಂದರ್ಭಗಳಲ್ಲಿ ವಿವರಿಸಲಾಗುತ್ತದೆ.

**ಪಾರ್ಥಿವಾನಿ—ಪೃಥಿವ್ಯಾದೀನಿ ಪ್ರಥನವಂತಿ ವಾ ।** ಅತ್ಯಂತ ವಿಸ್ತೃತವಾಗಿ ವ್ಯಾಪಿಸಿರತಕ್ಕ ಪೃಥಿವ್ಯಾದಿ ಮೂರು ಲೋಕಗಳನ್ನೂ ಎಂದರ್ಥ. **ಲೋಕತ್ರಯಸ್ಯಾಪಿ ಪೃಥಿವೀಶಬ್ದವಾಚ್ಯತ್ವಂ ಪೂರ್ವ-**

**ಮುದಾಹೃತಂ** । ಮೂರು ಲೋಕಗಳಿಗೂ ಪೃಥಿವೀಶಬ್ದವಾಚ್ಯತ್ವವಿರುವುದನ್ನು ಹಿಂದೆಯೇ (ಇದೇ ಭಾಗದಲ್ಲಿ ಋ. ಸಂ. ೧-೧೫೪-೧ನೇ ಋಕ್ಕಿನ ವಿಶೇಷ ವಿಷಯಗಳಲ್ಲಿ) ಉದಾಹರಣೆಗಳೊಂದಿಗೆ ತಿಳಿಸಿದೆ. ಇಂತಹ ಮೂರು ಲೋಕಗಳನ್ನೂ ಸಹ,

**ತ್ರಿಭಿರಿದ್ವಿಗಾಮಭಿಃ ಉರು ಕ್ರಮಿಷ್ಟ**—ತನ್ನ ಬೇರೆ ಬೇರೆ ರೂಪಗಳಾದ ಗಮನಗಳಿಂದ ಇನ್ನೂ ಅತ್ಯಂತ ವಿಸ್ತಾರವಾಗುವಂತೆ ಮಾಡಿದನು. ಮತ್ತು ತಾನು ಅವನ್ನೆಲ್ಲಾ ವ್ಯಾಪಿಸಿ ಆಕ್ರಮಿಸಿದನು **ಉರು ವಿಸ್ತೀರ್ಣಂ ಭವತಿ ಯಥಾ ತಥಾ ಕ್ರಾಂತವಾನ್** । ಅಂತರಿಕ್ಷಾದಿಗಳು ಅಧಿಕವಾಗಿ ವಿಸ್ತೃತಗಳಾಗುವಂತೆ ವಿಷ್ಣುವು ತನ್ನ ವ್ಯಾಪನಶಕ್ತಿಯಿಂದ ಮಾಡಿದನು ಎಂಬುದಕ್ಕೆ ಬೃಹದ್ದೇವತಾಕಾರರು ಋಕ್ಸಂಹಿತೆಯ ಆಧಾರದಮೇಲೆ ಒಂದು ಕಥೆಯನ್ನು ಹೇಳಿದ್ದಾರೆ.

**ಸಖೇ ವಿಷ್ಣೋ ವಿತರಂ ವಿ ಕ್ರಮಸ್ವ ದ್ಯೌರ್ದೇಹಿ ಲೋಕಂ ವಜ್ರಾಯ ವಿಷ್ಕಭೇ ।**
**ಹನಾವ ವೃತ್ರಂ ರಿಣಚಾವ ಸಿಂಧೂನಿಂದ್ರಸ್ಯ ಯಂತು ಪ್ರಸವೇ ವಿಸೃಷ್ಟಾಃ ॥**
(ಋ. ಸಂ. ೮-೧೦೦-೧೨)

ಎಂಬ ಋಕ್ಕಿನಲ್ಲಿ **ವೃತ್ರಾಸುರನ** ಹನನಕಾಲದಲ್ಲಿ **ವೃತ್ರನು** ಅತ್ಯಂತ ವಿಸ್ತೃತವಾಗಿ ಬೆಳೆದು ಅವನ ಮೇಲೆ **ವಜ್ರಾ** ಯುಧವನ್ನು ಪ್ರಯೋಗಿಸಲು **ಇಂದ್ರನ** ಸಾಮರ್ಥ್ಯವು ಸಾಲದಿದ್ದಾಗ **ಇಂದ್ರನು ವಿಷ್ಣುವನ್ನೂ ಅಂತರಿಕ್ಷವನ್ನೂ** ವಿಸ್ತೃತವಾಗಿ ಬೆಳೆದು ತನಗೆ ವೃತ್ರಾಸುರನ ಹನನಕ್ಕೆ ಸಹಾಯಮಾಡಬೇಕೆಂದು ಪ್ರಾರ್ಥಿಸುತ್ತಾನೆ. ಈ ಋಕ್ಕಿನ ಆಧಾರದ ಮೇಲೆ **ಬೃಹದ್ದೇವತೆಯ** ಕಥೆಯು ಕೆಳಗೆ ಹೇಳಿರುವಂತಿದೆ.

**ತ್ರೀನ್ ಲೋಕಾನಭಿತಪ್ಯೇಮಾನ್ ವೃತ್ರಸ್ತಸ್ಥೌ ಸ್ವಯಾ ತ್ವಿಷಾ ।**
**ತಂ ನಾಶಕದ್ಧಂತುಮಿಂದ್ರೋ ವಿಷ್ಣುಮಭ್ಯೇತ್ಯ ಸೋಽಬ್ರವೀತ್ ॥**
**ವೃತ್ರಂ ಹನಿಷ್ಯೇ ತಿಷ್ಠಸ್ವ ವಿಕ್ರಮ್ಯಾದ್ಯ ಮಮಾಂತಿಕೇ ।**
**ಉದ್ಯತಸ್ಯೈವ ವಜ್ರಸ್ಯ ದ್ಯೌರ್ದದಾತು ಮಮಾಂತರಂ ॥**
**ತಥೇತಿ ವಿಷ್ಣುಸ್ತಚ್ಚಕ್ರೇ ದ್ಯೌಶ್ಚಾಸ್ಯ ವಿವರಂ ದದೌ ॥**
(ಬೃ. ದೇ. ೬-೧೨೧ರಿಂದ ೧೨೪)

ಮೂರು ಲೋಕಕ್ಕೂ ಹಿಂಸಕನಾದ ವೃತ್ರನು ತನ್ನ ವಿಕಾರವಾದುದೂ ಹಿಂಸಕವಾದುದೂ ಆದ ವ್ಯಾಪನೆಯಿಂದ ಬೆಳೆದು ನಿಂತನು. ಇಂದ್ರನು ಅವನನ್ನು ನಿರೋಧಿಸಲಾಗಲಿಲ್ಲ. ಆಗ ವಿಷ್ಣುವನ್ನು ಇಂದ್ರನು ಸಮೀಪಿಸಿ ತನ್ನ ಸ್ಥಿತಿಯನ್ನು ವಿವರಿಸಿ "ನಾನು ವೃತ್ರನನ್ನು ಸಂಹರಿಸಬೇಕಾಗಿದೆ ನೀನು ವಿಸ್ತೃತನಾಗಿ ಬೆಳೆದು ನನಗೆ ಆ ಕಾರ್ಯದಲ್ಲಿ ಸಹಾಯ ಮಾಡು. ಅಂತರಿಕ್ಷವೂ ಸಹ ಬೆಳೆದು ನನ್ನ ವಜ್ರಾಯುಧದ ಪ್ರಯೋಗಕ್ಕೆ ಅನುಕೂಲವಾಗಲಿ" ಎಂದು ಪ್ರಾರ್ಥಿಸಿದಾಗ ವಿಷ್ಣುವು ಒಪ್ಪಿಕೊಂಡು ಅದರಂತೆಯೇ ಬೆಳೆದನು. ಅಂತರಿಕ್ಷವೂ ಇಂದ್ರನಿಗೆ ಬೇಕಾದ **ವಿವರವನ್ನು** ಮಾಡಿಕೊಟ್ಟಿತು. ಇದೇ ಅಂಶವನ್ನು, ಋಕ್ಸಂಹಿತೆಯಲ್ಲಿ ಬೇರೊಂದು ಕಡೆಯಲ್ಲಿಯೂ ಸೂಚಿಸಿದೆ.

**ಉತ ಮಾತಾ ಮಹಿಷಮನ್ವವೇನದಮೀ ತ್ವಾ ಜಹತಿ ಪುತ್ರ ದೇವಾಃ ।**
**ಅಥಾಬ್ರವೀದ್ವೃತ್ರಮಿಂದ್ರೋ ಹನಿಷ್ಯನ್ಸಖೇ ವಿಷ್ಣೋ ವಿತರಂ ವಿ ಕ್ರಮಸ್ವ ॥**
(ಋ. ಸಂ. ೪-೧೮-೧೧)

ನಂಬ ಋಕ್ಕಿನಲ್ಲಿ ಇಂದ್ರನಾತೆಯು ಅಪ್ರತಿಹತವಾದ ವೃತ್ರನ ಬೆಳವಣಿಗೆಯನ್ನು ನೋಡಿ ಕಾತುರಳಾದಾಗ ಇಂದ್ರನು ವಿಷ್ಣುವನ್ನು ಕುರಿತು ಮೇಲೆ ವಿವರಿಸಿದ ರೀತಿಯಲ್ಲಿ ಪ್ರಾರ್ಥಿಸುತ್ತಾನೆ. ಮೇಲೆ ಉದಹರಿಸಿದ ಎರಡು ಸನ್ನಿವೇಶಗಳಲ್ಲೂ ಸಹ ವಿಷ್ಣುವಿನ ವಿಸ್ತೃತವಾದ ಬೆಳವಣಿಗೆಯು ವಿಷಯವಿದೆ. ಮತ್ತು ಇದೇ ಸನ್ನಿವೇಶವನ್ನು ತೈತ್ತಿರೀಯಸಂಹಿತೆಯಲ್ಲಿ ವಿವರಿಸಿ ತ್ರಿಭಿರಿದ್ವಿಗಾಮಭಿಃ ಎಂಬವರ್ಣನೆಯಲ್ಲಿರುವ ಮೂರು ಲೋಕಗಳಲ್ಲೂ ಆದ ಮೂರು ವಿಧವಾದ ವಿಸ್ತೃತಿಯನ್ನೂ ವಿವರಿಸಿದೆ.

ಅಸೀದ್ಯದಿ ವಾ ತಾವದಧ್ಯಗ್ನೇರಾಸೀತ್ಸ ಸಂಭವನ್ನಗ್ನೀಷೋಮಾವಭಿ ಸಮಭವತ್ಸ ಇಷುಮಾತ್ರಮಿಷುಮಾತ್ರಂ ವಿಷ್ವಙ್ಙವರ್ಧತ ಸ ಇಮಾನ್ ಲೋಕಾನಾವೃಣೋದ್ಯದಿಮಾನ್ ಲೋಕಾನವೃಣೋತ್ತದ್ವೃತ್ರಸ್ಯ ವೃತ್ರತ್ವಂ ತಸ್ಮಾದಿಂದ್ರೋಽಬಿಭೇದಪಿ ತ್ವಷ್ಟಾ ತಸ್ಮೈ ತ್ವಷ್ಟಾ-ವಜ್ರಮಸಿಂಚತ್ತಪೋ ವೈ ಸ ವಜ್ರ ಆಸೀತ್ತಮುದ್ಯಂತುಂ ನಾಶಕ್ನೋದಥ ವೈ ತರ್ಹಿ ವಿಷ್ಣು-ರನ್ಯಾ ದೇವತಾಽಸೀತ್ಸೋಽಬ್ರವೀದ್ವಿಷ್ಣವೇಹೀದಮಾ ಹರಿಷ್ಯಾವೋ ಯೇನಾಯಮಿದಮಿತಿ ಸ ವಿಷ್ಣುಸ್ತ್ರೇಧಾತ್ಮಾನಂ ವಿ ನ್ಯಧತ್ತ ಪೃಥಿವ್ಯಾಂ ತೃತೀಯಮಂತರಿಕ್ಷೇ ತೃತೀಯಂ ದಿವಿ ತೃತೀಯಮಭಿಪರ್ಯಾವರ್ತಾದ್ಧ್ಯಬಿಭೇದ್ಯತ್ಪೃಥಿವ್ಯಾಂ ತೃತೀಯಮಾಸೀತ್ತೇನೇಂದ್ರೋ ವಜ್ರಮುದಯಚ್ಛದ್ವಿಷ್ಣ್ವನುಸ್ಥಿತಸ್ಸೋಽಬ್ರವೀನ್ಮಾಮೇ ಪ್ರ ಹಾರಸ್ತಿ ವಾ ಇದಂ ಮಯಿ ವೀರ್ಯಂ ತತ್ತೇ ಪ್ರ ದಾಸ್ಯಾಮೀತಿ ತದಸ್ಮೈ ಪ್ರಾಯಚ್ಛತ್ತತ್ಪ್ರತ್ಯಗೃಹ್ಣಾದಧಾ ಮೇತಿ ತದ್ವಿ-ಷ್ಣವೇತಿ ಪ್ರಾಯಚ್ಛತ್ತದ್ವಿಷ್ಣುಃ ಪ್ರತ್ಯಗೃಹ್ಣಾದಸ್ಮಾಸ್ವಿಂದ್ರ ಇಂದ್ರಿಯಂ ದಧಾತ್ವಿತಿ ಯದಂತ-ರಿಕ್ಷೇ ತೃತೀಯಮಾಸೀತ್ತೇನೇಂದ್ರೋ ವಜ್ರಮುದಯಚ್ಛದ್ವಿಷ್ಣ್ವನುಸ್ಥಿತಸ್ಸೋಽಬ್ರವೀನ್ಮಾ ಮೇ ಪ್ರ ಹಾರಸ್ತಿ ವಾ ಇದಂ ಮಯಿ ವೀರ್ಯಂ ತತ್ತೇ ಪ್ರ ದಾಸ್ಯಾಮೀತಿ ತದಸ್ಮೈ ಪ್ರಾಯಚ್ಛತ್ತತ್ಪ್ರತ್ಯಗೃಹ್ಣಾದ್ದ್ವಿರ್ಮಾಧಾ ಇತಿ ತದ್ವಿಷ್ಣವೇಽತಿ ಪ್ರಾಯಚ್ಛತ್ತದ್ವಿಷ್ಣುಃ ಪ್ರತ್ಯ-ಗೃಹ್ಣಾದಸ್ಮಾಸ್ವಿಂದ್ರ ಇಂದ್ರಿಯಂ ದಧಾತ್ವಿತಿ ಯದ್ದಿವಿ ತೃತೀಯಮಾಸೀತ್ತೇನೇಂದ್ರೋ ವಜ್ರ-ಮುದಯಚ್ಛದ್ವಿಷ್ಣ್ವನುಸ್ಥಿತಸ್ಸೋಽಬ್ರವೀನ್ಮಾ ಮೇ ಪ್ರ ಹಾರ್ಯೇನಾಹಮಿದಮಸ್ಮಿ ತತ್ತೇ ಪ್ರದಾಸ್ಯಾಮೀತಿ ॥

(ತೈ. ಸಂ. ೨-೪-೧೨-೨)

ಹಿಂದೆ ಯಜ್ಞಾಗ್ನಿಯಿಂದ ಉತ್ಪನ್ನನಾದ ವೃತ್ರನು ಬಹು ಬೇಗನೆ ಲೋಕಗಳೆಲ್ಲವನ್ನೂ ವ್ಯಾಪಿಸುತ್ತಾ ಬಿಲ್ಲಿನಿಂದ ಬಾಣವು ಹೋಗುವಷ್ಟು ವೇಗವಾಗಿಯೂ ಮತ್ತು ವಿಸ್ತೃತವಾದ ಪ್ರಮಾಣವುಳ್ಳವನಾಗಿಯೂ ಬೆಳೆದನು ಆದುದರಿಂದಲೇ ಅವನಿಗೆ ವೃತ್ರನೆಂದು ಹೆಸರು ಬಂದಿತು. ಇವನ್ನು ಕಂಡು ಇಂದ್ರನಿಗೆ ಹೆದರಿಕೆಯುಂಟಾಯಿತು ಆಗ ತ್ವಷ್ಟೃವು ವಜ್ರಾಯುಧವನ್ನು ನಿರ್ಮಾಣಮಾಡಿ ಅದರಿಂದ ವೃತ್ರನನ್ನು ಹೊಡೆಯುವಂತೆ ಹೇಳಿ ಇಂದ್ರನಿಗೆ ಕೊಟ್ಟನು. ತಪೋಮಹಿಮೆಯಿಂದ ಉತ್ಪನ್ನವಾದ ವಜ್ರಾಯುಧವನ್ನು ಎತ್ತಲು ಕೂಡ ಇಂದ್ರನಿಂದಾಗಲಿಲ್ಲ ಆಗ ಪಕ್ಕದಲ್ಲೇ ವಿಷ್ಣುವು ನಿಂತಿದ್ದನು. ಆಗ ಇಂದ್ರನು ವೃತ್ರಹನನಕ್ಕಾಗಿ ತನಗೆ ಸಹಾಯಮಾಡಬೇಕೆಂದು ವಿಷ್ಣುವನ್ನು ಪ್ರಾರ್ಥಿಸಲು ವಿಷ್ಣುವು ಒಪ್ಪಿ ತನ್ನ ದೇಹವನ್ನು ಮೂರು ಭಾಗಗಳನ್ನಾಗಿ ಮಾಡಿ ಪೃಥಿವಿಯಲ್ಲಿ ಒಂದು ಭಾಗವನ್ನೂ, ಅಂತರಿಕ್ಷದಲ್ಲಿ ಒಂದು ಭಾಗವನ್ನೂ ಉಳಿದ ಮೂರನೇ ಒಂದು ಭಾಗವನ್ನು ದ್ಯುಲೋಕದಲ್ಲಿಯೂ ಸ್ಥಾಪಿಸಿದನು. ಪೃಥ್ವಿಯ ಮೇಲಿದ್ದ ವಿಷ್ಣುಶರೀರದ ಸಹಾಯದಿಂದ ಇಂದ್ರನು ವಜ್ರಾಯುಧವನ್ನೆತ್ತಿಕೊಂಡನು

ಆಗ ವೃತ್ರನು ಹೆದರಿ ತನ್ನನ್ನು ಹೊಡೆಯಕೂಡದೆಂದೂ, ಪೃಥ್ವಿಯಲ್ಲಿರುವ ತನ್ನ ವೀರ್ಯವನ್ನು ಬಿಟ್ಟುಕೊಡುವೆನೆಂದೂ ಇಂದ್ರನಿಗೆ ಹೇಳಿ ಅದೇ ರೀತಿ ನಡೆಸಿಕೊಡಲು ಇಂದ್ರನು ಅದನ್ನು ವಿಷ್ಣುವಿಗೆ ಒಪ್ಪಿಸಿದನು. ಇದೇ ರೀತಿಯಲ್ಲಿ ಅಂತರಿಕ್ಷದಲ್ಲೂ ದ್ಯುಲೋಕದಲ್ಲೂ ಇರುವ ವೃತ್ರನ ವೀರ್ಯವನ್ನೂ ಕಸಿದುಕೊಂಡು ವಿಷ್ಣುವಿಗೊಪ್ಪಿಸಿದನು. ಈ ರೀತಿ ವಿಷ್ಣುವಿನಿಂದ ಮೂರು ಸಲ ಸಹಾಯವನ್ನು ಪಡೆದು ಅದಕ್ಕೆ ಪ್ರತಿಯಾಗಿ ಮೂರು ಸಲ ಅವನಿಗೆ ತನ್ನ ಶಕ್ತಿಯನ್ನರ್ಪಿಸಿದುದಕ್ಕಾಗಿ ಈ ಸನ್ನಿವೇಶದ ಅಂಗವಾಗಿ ನೆರವೇರಿಸತಕ್ಕ ಆಹುತಿಗೆ **ತ್ರಿಧಾತು**ವೆಂಬ ಹೆಸರು ಪ್ರಸಿದ್ಧವಾಗಿದೆಯೆಂದು ಹಿಂದೆ ತಿಳಿಸಿದೆ. ಈ ವಿಧವಾಗಿ ಮೂರು ಲೋಕಗಳಲ್ಲೂ ವ್ಯಾಪಿಸಿ ನಿಂತು ಮೂರು ಲೋಕಗಳನ್ನೂ ವಿಸ್ತೃತವಾಗಿ ಬೆಳೆಯುವಂತೆ ಮಾಡಿದ ವಿಷ್ಣುವಿನ ಮಹಿಮೆಯನ್ನು **ತ್ರಿಭಿರಿದ್ವಿಗಾಮಭಿಃ ಉರು ಕ್ರಮಿಷ್ಟ** ಎಂದು ಸ್ತುತಿಸಿದೆ.

### ವ್ಯಾಕರಣಪ್ರಕ್ರಿಯಾ

**ತತ್ತ್ರತ್—ನಿತ್ಯವೀಪ್ಸಯೋಃ** (ಪಾ. ಸೂ. ೮-೧-೪) ಎಂಬುದರಿಂದ ದ್ವಿರ್ವಚನ ಬರುತ್ತದೆ. ಪರಕ್ಕೆ ಆಮ್ರೇಡಿತಸಂಜ್ಞೆ ಬಂದಾಗ **ಅನುದಾತ್ತಂ ಚ** (ಪಾ. ಸೂ. ೮-೧-೩) ಎಂಬುದರಿಂದ ಅದು ಅನುದಾತ್ತವಾಗುತ್ತದೆ.

**ಗೃಣೀಮಸಿ**—ಗೄ ಶಬ್ದೇ ಧಾತು. ಕ್ರ್ಯಾದಿ. ಲಟ್ ಉತ್ತಮಪುರುಷ ಬಹುವಚನದಲ್ಲಿ ಮಸ್ ಪ್ರತ್ಯಯ. **ಇದಂತೋಮಸಿಃ** (ಪಾ. ಸೂ. ೭-೧-೪೬) ಎಂಬುದರಿಂದ ಅದಕ್ಕೆ ಇಕಾಗಮ. **ಕ್ರ್ಯಾದಿಭ್ಯಃ ಶ್ನಾ** (ಪಾ. ಸೂ. ೩-೧-೮೧) ಎಂಬುದರಿಂದ ಶ್ನಾ ವಿಕರಣ. **ಪ್ವಾದೀನಾಂ ಹ್ರಸ್ವಃ** (ಪಾ. ಸೂ. ೭-೩-೮೦) ಎಂಬುದರಿಂದ ಧಾತುವಿಗೆ ಹ್ರಸ್ವ ಬರುತ್ತದೆ. ಹಲಾದಿ ಙಿತ್ ಪ್ರತ್ಯಯ ಪರವಾದುದರಿಂದ **ಈ ಹಲ್ಯಘೋಃ** (ಪಾ. ಸೂ. ೬-೪-೧೧೩) ಎಂಬುದರಿಂದ ವಿಕರಣಕ್ಕೆ ಈತ್ವ. ಋಕಾರದ ಪರದಲ್ಲಿರುವುದರಿಂದ ಣತ್ವ. ತಿಙಂತನಿಘಾತಸ್ವರ ಬರುತ್ತದೆ.

**ಇನಸ್ಯ**—ಇಣ್ ಗತೌ ಧಾತು. **ಇಣ್‌ಸಿಂಜಿ**—(ಉ. ಸೂ. ೨-೨೮೨) ಎಂಬುದರಿಂದ ನಕ್ ಪ್ರತ್ಯಯ. ಕಿತ್ತಾದುದರಿಂದ ಗುಣ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಷಷ್ಠೀಏಕವಚನಾಂತ ರೂಪ.

**ತ್ರಾತುಃ**—ತ್ರೈಙ್ ಪಾಲನೇ. ಕರ್ತರಿಯಲ್ಲಿ ತೃಚ್ ಪ್ರತ್ಯಯ. ಆದೇಚ **ಉಪದೇಶೇಽಶಿತಿ** (ಪಾ. ಸೂ. ೬-೧-೪೫) ಎಂಬುದರಿಂದ ಧಾತುವಿಗೆ ಆತ್ವ. ಚಿತ್ತಾದುದರಿಂದ ಅಂತೋದಾತ್ತಸ್ವರ ಬರುತ್ತದೆ. ಷಷ್ಠೀ ಏಕವಚನಪರವಾದಾಗ **ಋತ ಉತ್** ಎಂಬುದರಿಂದ ಉತ್ವವು ರಪರವಾಗಿ ಬಂದಾಗ **ರಾತ್‌ಸಸ್ಯ** ಎಂಬುದರಿಂದ ಸಕಾರಕ್ಕೆ ಲೋಪ. ರೇಫಕ್ಕೆ ವಿಸರ್ಗ.

**ಅವೃಕಸ್ಯ**—ನ ವಿದ್ಯತೇ ವೃಕಃ ಯಸ್ಯ ಅವೃಕಃ ತಸ್ಯ-**ನಞ್‌ಸುಭ್ಯಾಮ್** (ಪಾ. ಸೂ. ೬-೧-೧೩೨) ಎಂಬುದರಿಂದ ಉತ್ತರಪದ ಅಂತೋದಾತ್ತಸ್ವರ ಬರುತ್ತದೆ.

**ಮೀಢುಷಃ**—ಮಿಹ ಸೇಚನೇ ಧಾತು. **ದಾಶ್ವಾನ್ ಸ್ವಾಹಾನ್ ಮೀಢ್ವಾಂಶ್ಚ** (ಪಾ. ಸೂ. ೬-೧-೧೨) ಎಂಬುದರಿಂದ ಕ್ವಸುಪ್ರತ್ಯಯಾಂತವಾಗಿ ನಿಪಾತಿತವಾಗಿದೆ. ಷಷ್ಠಿಯಲ್ಲಿ ಭಸಂಜ್ಞಾ ಇರುವುದರಿಂದ **ವಸೋಃ-ಸಂಪ್ರಸಾರಣಮ್** ಎಂಬುದರಿಂದ ಸಂಪ್ರಸಾರಣ. ಪೂರ್ವರೂಪ. **ಶಾಸಿವಸಿಘಸೀನಾಂ ಚ** ಎಂಬುದರಿಂದ ಸಕಾರಕ್ಕೆ ಷತ್ವ. ವಸುವಿನ ಸ್ವರ ಬರುತ್ತದೆ.

ಕ್ರಮಿಷ್ಟ—ಕ್ರಮು ಪಾದವಿಕ್ಷೇಪೇ ಧಾತು. ಲುಙ್ ಪ್ರಥಮಪುರುಷವಿಕವಚನದಲ್ಲಿ ತ ಪ್ರತ್ಯಯ. ಚ್ಲಿಗೆ ಸಿಚಾದೇಶ. ಆರ್ಧಧಾತುಕಸ್ಯೇಡ್ವಲಾದೇಃ ಎಂಬುದರಿಂದ ಅದಕ್ಕೆ ಇಡಾಗಮ. ಆದೇಶಪ್ರತ್ಯಯಯೋಃ ಎಂಬುದರಿಂದ ಸಿಚಿನ ಸಕಾರಕ್ಕೆ ಷತ್ವ. ಅದನ್ನು ನಿಮಿತ್ತೀಕರಿಸಿ ಪ್ರತ್ಯಯಕ್ಕೆ ಷ್ಟುತ್ವ. ಬಹುಲಂ ಛಂದಸ್ಯ-ಮಾಙ್ಯೋಗೇಽಪಿ ಎಂಬುದರಿಂದ ಅಡಾಗಮ ಬರುವುದಿಲ್ಲ. ಯಚ್ಛಬ್ದಸಂಬಂಧವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಧಾತುಸ್ವರ ಉಳಿಯುತ್ತದೆ.

ಜೀವಸೇ—ಜೀವ ಪ್ರಾಣಧಾರಣೇ ಧಾತು, ತುಮನರ್ಥ ತೋರುವಾಗ ತುಮರ್ಥೇ ಸೇಸೇನಸೇ—(ಪಾ. ಸೂ ೩-೪-೯) ಎಂಬುದರಿಂದ ಅಸೇ ಪ್ರತ್ಯಯ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ. ಏಜಂತವಾದುದರಿಂದ ಕೃನ್ಮೇಜಂತಃ ಎಂಬುದರಿಂದ ಅವ್ಯಯಸಂಜ್ಞಾ ಬರುತ್ತದೆ. ॥ ೪ ॥

———— :o: ————

ಸಂಹಿತಾಪಾಠಃ

ದ್ವೇ ಇದಸ್ಯ ಕ್ರಮಣೇ ಸ್ವರ್ದೃಶೋಽಭಿಖ್ಯಾಯ ಮರ್ತ್ಯೋ ಭುರಣ್ಯತಿ ।
ತೃತೀಯಮಸ್ಯ ನಕಿರಾ ದಧರ್ಷತಿ ವಯಶ್ಚನ ಪತಯಂತಃ ಪತತ್ರಿಣಃ ॥೫॥

ಪದಪಾಠಃ

ದ್ವೇ ಇತಿ । ಇತ್ । ಅಸ್ಯ । ಕ್ರಮಣೇ ಇತಿ । ಸ್ವಃಽದೃಶಃ । ಅಭಿಽಖ್ಯಾಯ । ಮರ್ತ್ಯಃ । ಭುರಣ್ಯತಿ ।
ತೃತೀಯಂ । ಅಸ್ಯ । ನಕಿಃ । ಆ । ದಧರ್ಷತಿ । ವಯಃ । ಚನ । ಪತಯಂತಃ । ಪತತ್ರಿಣಃ ॥ ೫ ॥

ಸಾಯಣಭಾಷ್ಯಂ

ಅಸ್ಯ ಸ್ವರ್ದೃಶಃ ಸ್ವರ್ಗಸ್ಯ ಸರ್ವಸ್ಯ ವಾ ದ್ರಷ್ಟುರ್ವಿಷ್ಣೋರ್ದ್ವೇ ಇತ್ ಕ್ರಮಣೇ ದ್ವೇ ಏವ ಪದೇ ಮರ್ತ್ಯೋ ಮನುಷ್ಯೋಽಭಿಖ್ಯಾಯ ಸರ್ವಭೂತ್ಯಾದಿನಾ ಪ್ರಖ್ಯಾಯ ಭುರಣ್ಯತಿ । ಗಚ್ಛತಿ । ಭಜತೇ। ಭುರಣ್ಯತಿಃ ಕಣ್ಡ್ವಾದಿರ್ಗತಿಕರ್ಮಾ ಭುರಣ್ಯತಿ ಶವತೀತಿ ತತ್ಕರ್ಮಸು ಪಾಠಾತ್ । ಪ್ರಸಿದ್ಧತ್ವಾದ್ಭೂ-ಲೋಕಂ ವೃಷ್ಟ್ಯಾಗಮನಾದಂತರಿಕ್ಷಂ ಚೇತ್ಯುಭೇ ಕ್ರಮಣೇ ಜಾನಾತಿ । ಅಸ್ಯ ವಿಷ್ಣೋಸ್ತೃತೀಯಂ ಕ್ರಮಣಂ ದ್ಯುಲೋಕಾಖ್ಯಂ ಕೋಽಪಿ ಮರ್ತ್ಯೋ ನಕಿರ್ನೈವಾ ದಧರ್ಷತಿ । ಬುದ್ಧ್ಯಾ ನಾಭಿಭವತಿ । ಜ್ಞಾತುಂ ನ ಶಕ್ನೋತೀತ್ಯರ್ಥಃ। ನ ಕೇವಲಂ ಮನುಷ್ಯ ಏವ ಅಪಿ ತು ವಯಶ್ಚನ ವೇತಾರೋ ಮರು-ತೋಽಪಿ । ವೇರ್ಮರುತ್ಸು ಶ್ರುತೇಃ । ಪತಯಂತಃ ಸರ್ವತ್ರ ಗಮನಸಮರ್ಥಾಃ ತಥಾ ಪತತ್ರಿಣಃ ಪತನಶೀಲಾ ಗರುಡಾದಯೋ ವಾಯವೋ ವಾ ನಕಿರಾ ದಧರ್ಷತಿ । ನೈವ ಶಕ್ನುವಂತಿ ॥ ಧೃಷೇರ್ಲೇಟ್ಯಡಾಗಮಃ ॥ ಸತ್ಯಲೋಕಸ್ಯಾತ್ಯಂತವಿಪ್ರಕೃಷ್ಟತ್ವೇನ ಸರ್ವೇಷಾಮವಿಷಯತ್ವಾದಿತಿ ಭಾವಃ ॥

### ಪ್ರತಿಪದಾರ್ಥ

**ಸ್ವರ್ದೃಶಃ**—ಸಕಲವನ್ನೂ ಅಥವಾ ಸ್ವರ್ಗಲೋಕವನ್ನು ವೀಕ್ಷಿಸುವ | **ಅಸ್ಯ**—ಈ ವಿಷ್ಣುವಿನ | **ದ್ವೇ ಇತ್ ಕ್ರಮಣೇ**—ಎರಡು ಪಾದಗಳನ್ನು ಮಾತ್ರ (ಎರಡು ಪಾದಗಳಿಡುವ ಭೂಲೋಕ ಮತ್ತು ಅಂತರಿಕ್ಷಲೋಕಗಳನ್ನು ಮಾತ್ರ) | **ಮರ್ತ್ಯಃ**—ಮಾನವನು | **ಅಭಿಖ್ಯಾಯ**—ಸ್ತುತಿಸಿ | **ಭುರಣ್ಯತಿ**—(ಸಂಚರಿಸುತ್ತಾನೆ) ತಿಳಿದು ಕೊಳ್ಳುತ್ತಾನೆ | **ಅಸ್ಯ**—ಈ ವಿಷ್ಣುವಿನ | **ತೃತೀಯಂ**—ಮೂರನೆಯ ಪಾದವನ್ನಿಡುವ ದ್ಯುಲೋಕವನ್ನು | **ನಕಿಃ ಆ ದಧರ್ಷತಿ**—(ಯಾವ ಮಾನವನೂ) ತಿಳಿದುಕೊಳ್ಳಲು ಸಾಧ್ಯವೇ ಇಲ್ಲ | **ಪತಯಂತಃ**–(ಸಕಲ ಪ್ರದೇಶಗಳಲ್ಲಿಯೂ) ಸಂಚರಿಸಲು ಸಾಮರ್ಥ್ಯವುಳ್ಳ | **ವಯಶ್ಚನ**—ಮರುತ್ತುಗಳೂ ¡ ಕೂಡ (ಅದರಂತೆಯೇ) | **ಪತತ್ರಿಣಃ**—ಪಕ್ಷಿಗಳೂ ಸಹ (ತಿಳಿಯಲಾರವು).

### ಭಾವಾರ್ಥ

ಸ್ವರ್ಗಲೋಕವನ್ನು ವೀಕ್ಷಿಸುವ ವಿಷ್ಣುವಿನ ಎರಡು ಪಾದಗಳನ್ನಿಡುವ ಭೂಲೋಕ ಮತ್ತು ಅಂತರಿಕ್ಷ ಲೋಕಗಳನ್ನು ಮಾತ್ರ ಮಾನವನು ಸ್ತುತಿಮಾಡಿ ತಿಳಿದುಕೊಳ್ಳುತ್ತಾನೆ. ಈ ವಿಷ್ಣುವಿನ ಮೂರನೆಯ ಪಾದವನ್ನಿಡುವ ದ್ಯುಲೋಕವನ್ನು ಯಾವ ಮಾನವನೂ ತಿಳಿದುಕೊಳ್ಳಲು ಸಾಧ್ಯವೇ ಇಲ್ಲ. ಸಕಲ ಪ್ರದೇಶಗಳಲ್ಲಿಯೂ ಸಂಚರಿಸಲು ಸಾಮರ್ಥ್ಯವುಳ್ಳ ಮರುತ್ತುಗಳೂ ಅದರಂತೆಯೇ ಪಕ್ಷಿಗಳೂ ಸಹ ಇದನ್ನು ತಿಳಿಯಲಾರವು.

### English Translation

Man, glorifying (Vishnu), tracks two steps of that heaven-beholding (deity), but he apprehends not the third ; nor can the soıring-winged birds (pursue it).

### ವಿಶೇಷವಿಷಯಗಳು

**ಸ್ವರ್ದೃಶಃ—ಸ್ವರ್ಗಸ್ಯ ಸರ್ವಸ್ಯ ವಾ ದ್ರಷ್ಟಃ** | ಸ್ವರ್ಗವನ್ನು ವೀಕ್ಷಿಸುವ ಅಥವಾ ಸಕಲವನ್ನೂ ತಿಳಿಯುವ ಎಂದು ವಿಷ್ಣುವಿಗೆ ವಿಶೇಷಣವಾಗಿದೆ. ಈ ಎರಡರ್ಥಗಳಲ್ಲಿಯೂ ಈ ಪದದ ಪ್ರಯೋಗವಿದೆ; ಆದರೆ ಮೊದಲು **ಸ್ವರ್** ಶಬ್ದದ ನಿಷ್ಪತ್ತಿಯನ್ನೂ ಬೇರೆ ಬೇರೆ ಅರ್ಥಗಳಲ್ಲಿ ಅದರ ಪ್ರಯೋಗಗಳನ್ನೂ ಪರಿಶೀಲಿಸಿ ಅನಂತರ **ಸ್ವರ್ದೃಶಃ** ಎಂಬ ಸಮಸ್ತಪದದ ಸ್ವರೂಪವನ್ನು ತಿಳಿಯಬಹುದು

**ಸ್ವಃ, ಪೃಶ್ನಿಃ, ನಾಕಃ** ಇತ್ಯಾದಿ ಸಾಧಾರಣ ನಾಮಗಳಲ್ಲಿ ಈ ಪದವು ಪಠಿತವಾಗಿದೆ. **ಸಾಧಾರಣಾನ್ಯುತ್ತರಾಣಿ ಷಡ್ದಿವಶ್ಚಾದಿತ್ಯಸ್ಯ ಚ** | (ನಿ. ೨-೧೩) **ಸ್ವಃ, ಪೃಶ್ನಿಃ, ನಾಕಃ, ಗೌಃ,** (ವಿಷ್ಟಪ್) **ವಿಷ್ಟಪಂ ನಭಃ** ಎಂಬ ಆರು ಪದಗಳೂ ಸಹ **ದ್ಯುಲೋಕ**ಪರ್ಯಾಯವಾಗಿಯೂ **ಆದಿತ್ಯ**ಪರ್ಯಾಯವಾಗಿಯೂ ಸಾಧಾರಣವಾಚಕಗಳಾಗಿವೆಯೆಂದು ನಿರುಕ್ತಕಾರರು ತಿಳಿಸಿದ್ದಾರೆ. ಅನಂತರ **ಆದಿತ್ಯ**ಪರ್ಯಾಯವಾಗಿ ಉಪಯೋಗಿಸುವಾಗ **ಸ್ವರ್** ಎಂಬುದರ ಮೂಲಧಾತುವೇನು ಮತ್ತು ಈ ಪದದ ನಿಷ್ಪತ್ತಿಯೇನು ಎಂಬುದನ್ನು ವಿವರಿಸುತ್ತಾ,

> **ಸ್ವರಾದಿತ್ಯೋ ಭವತಿ ಸು ಅರಣಃ, ಸು ಈರಣಃ, ಸ್ವೃತೋ ರಸಾನ್, ಸ್ವೃತೋ ಭಾಸಂ ಜ್ಯೋತಿಷಾಂ | ಸ್ವೃತೋ ಭಾಸೇತಿ ವಾ |**
>
> (ನಿ. ೨-೧೪)

ಬಹಳ ದೂರವರ್ತಿಯಾಗಿರುವುದರಿಂದಾಗಲಿ, (ತಮಸ್ಸನ್ನು) ಪೂರ್ಣವಾಗಿ ಚದುರಿಸಿ ನಾಶಮಾಡುವುದರಿಂದಾಗಲಿ, ರಸದೊಳಗೆ ಒಳಹೊಕ್ಕು ಪ್ರವೇಶಿಸಿ ಅದರೊಂದಿಗೆ ಅಂತರ್ಗತವಾಗುವುದರಿಂದಾಗಲಿ. ತೇಜೋಮಂಡಲದಲ್ಲಿ ತನ್ನ ಪ್ರಕಾಶವನ್ನೂ ಪ್ರಸರಿಸಿ ಐಕ್ಯವಾಗುವುದರಿಂದಾಗಲಿ, ಅಥವಾ ಪ್ರಭೆಯ ರೂಪದಲ್ಲಿ ವಿಶ್ವವ್ಯಾಪಿಯಾಗುವುದರಿಂದಾಗಲಿ ಆದಿತ್ಯನಿಗೆ ಈ ಹೆಸರು ಮತ್ತು ಏತೇನ ದ್ಯೌರ್ವ್ಯಾಖ್ಯಾತಾ ಈ ಕಾರಣದಿಂದಲೇ **ದ್ಯುಲೋಕಕ್ಕೂ** ಈ ಹೆಸರು ಎಂದು ನಿರುಕ್ತಕಾರರು ವಿವರಿಸಿದ್ದಾರೆ.

**ಸ್ವರಾದಿತ್ಯೋ ಭವತಿ ಸ ಏನಾನಿ ಸಾರಯತಿ ।**

(ನಿ. ೫-೪).

ಅದಸ್ಸುಗಳನ್ನು ಚಲಿಸುವಂತೆ ಮಾಡುವುದರಿಂದಲೂ ಸಹ **ಆದಿತ್ಯನಿಗೆ ಸ್ವಃ** ಎಂಬ ಹೆಸರು. ಋಕ್ಸಂಹಿತೆಯಲ್ಲಿ,

**ಪ್ರತ್ಯಙ್ ದೇವಾನಾಂ ವಿಶಃ ಪ್ರತ್ಯಙ್ಙುದೇಷಿ ಮಾನುಷಾನ್ । ಪ್ರತ್ಯಙ್ವಿಶ್ವಂ ಸ್ವರ್ದೃಶೇ ॥**

(ಋ. ಸಂ. ೧-೫೦-೫).

ಇತ್ಯಾದಿ ಋಕ್ಕುಗಳಲ್ಲಿ **ಸ್ವರ್ಲೋಕವೆಂದೂ,**

**ತ್ಮನಾ ವಹಂತೋ ದುರೋ ವ್ಯೃಣ್ವನ್ನವಂತ ವಿಶ್ವೇ ಸ್ವರ್ದೃಶೀಕೇ ।**

(ಋ. ಸಂ. ೧-೬೯-೧೦)

ಇತ್ಯಾದಿ ಕಡೆಗಳಲ್ಲಿ **ಸ್ವಃ–ನಭಸಿ ।** ಅಂತರಿಕ್ಷದಲ್ಲಿ ಎಂದೂ, ಮತ್ತು

**ದಾ ನೋ ಅಗ್ನೇ ಬೃಹತೋ ದಾಃ ಸಹಸ್ರಿಣೋ ದುರೋ ನ ವಾಜಂ ಶ್ರುತ್ಯಾ ಅಪಾ ವೃಧಿ ।**
**ಪ್ರಾಚೀ ದ್ಯಾವಾಪೃಥಿವೀ ಬ್ರಹ್ಮಣಾ ಕೃಧಿ ಸ್ವರ್ಣ ಶುಕ್ರಮುಷಸೋ ವಿ ದಿದ್ಯುತಃ ॥**

(ಋ. ಸಂ. ೨-೨-೭)

ಇತ್ಯಾದಿಋಕ್ಕುಗಳಲ್ಲಿ **ಆದಿತ್ಯನೆಂದೂ** ಅರ್ಥಮಾಡಿದ್ದಾರೆ.

**ಸ್ವರ್ದೃಶಃ** ಎಂಬ ಸಮಸ್ತಪದಕ್ಕೆ ಮೇಲೆ ಹೇಳಿದಂತೆ ಸ್ವರ್ಗವನ್ನು ವೀಕ್ಷಿಸುವ ಅಥವಾ ಸಕಲವನ್ನೂ ವೀಕ್ಷಿಸುವ ಎಂದರ್ಥಮಾಡಿದೆ. ಇಷ್ಟೇ ಅಲ್ಲದೇ ಆಯಾ ಸಂದರ್ಭಗಳಿಗನುಸಾರವಾಗಿ ಬೇರೆ ವಿಧವಾದ **ವ್ಯುತ್ಪತ್ತಿ**ಯನ್ನೂ ತೋರಿಸಿ ಅರ್ಥಮಾಡಿದೆ. ಕೆಲವು ಉದಾಹರಣೆಗಳನ್ನು ತೆಗೆದುಕೊಂಡರೆ,

**ಸಮ್ರಾಜಾವಸ್ಯ ಭುವನಸ್ಯ ರಾಜಥೋ ಮಿತ್ರಾವರುಣಾ ವಿದಥೇ ಸ್ವರ್ದೃಶಾ ।**
**ವೃಷ್ಟಿಂ ವಾಂ ರಾಧೋ ಅಮೃತತ್ವಮೀಮಹೇ ದ್ಯಾವಾಪೃಥಿವೀ ವಿ ಚರಂತಿ ತನ್ಯವಃ ॥**

(ಋ. ಸಂ. ೫-೬೩-೨)

ಎಂಬ ಋಕ್ಕಿನಲ್ಲಿ **ಸ್ವರ್ದೃಶಾ** ಎಂಬ ಪದವು ಮಿತ್ರಾವರುಣರಿಗೆ ವಿಶೇಷಣವಾಗಿದೆ. ಎರಡುವಿಧವಾಗಿ ಅರ್ಥಮಾಡ ಬಹುದು ಮೊದಲನೆಯದಾಗಿ, **ಸ್ವರ್** ಎನ್ನುವುದಕ್ಕೆ ಆದಿತ್ಯನೆಂದರ್ಥಮಾಡಿ, **ಸ್ವರ್ದೃಶಾ** ಎಂದರೆ ತಾದೃಶಃ ಪಾದ್ಯರಃ ಎಂಬ ಪದಗಳಂತೆ **ಸೂರ್ಯನಂತೆ** ಎಂದರೆ, ಸೂರ್ಯನಿಗೆ ಸದೃಶರಾಗಿ ಎಂದೂ, ಅಥವಾ ಆದಿತ್ಯನ ತೇಜಸ್ಸಿನೊಡನೆ ಪ್ರಕಾಶಿಸುವವರಾಗಿ ಎಂದೂ ಅರ್ಥಮಾಡಬಹುದು. ಈ ಪದಕ್ಕೆ Peterson ಎಂಬ ಪಂಡಿತನು ಅರ್ಥವನ್ನು ವಿವರಿಸುತ್ತಾ Oldenberg ಇತ್ಯಾದಿ ಇತರ ಪಂಡಿತರ ಅಭಿಪ್ರಾಯಗಳನ್ನು ಈ ರೀತಿ ತಿಳಿಸಿದ್ದಾನೆ

I) ಸ್ವರ್ದೃಶ appearing (dazzling) like the Sun (used of the Gods, ) ii) looking on the Sun, i. e. alive or (Geldner) seeing with Sun's light (used of men in four places). Geldner thinks that the latter Interpretation will do in all cases. ವಿದಥೇ ಸ್ವರ್ದೃಶಾ is probably to be understood as "appearing dazzling at the sacrifice".

( Hymns from the Rig-Veda—II Series. P. 318 )

ಈ ಅಭಿಪ್ರಾಯದ ಸಾರಾಂಶವನ್ನು ಮೇಲೆ ತಿಳಿಸಿದೆ. ಇದಲ್ಲದೆ

**ಅಶ್ಮಾಸ್ಯಮವತಂ ಬ್ರಹ್ಮಣಸ್ಪತಿರ್ಮಧುಧಾರಮಭಿ ಯಮೋಜಸಾತೃಣತ್ ।**
**ತಮೇವ ವಿಶ್ವೇ ಪಪಿರೇ ಸ್ವರ್ದೃಶೋ ಬಹು ಸಾಕಂ ಸಿಸಿಚುರುತ್ಸಮುದ್ರಿಣಂ ॥**
(ಋ. ಸಂ. ೨-೨೪-೪)

ಎಂಬ ಋಕ್ಕಿನಲ್ಲಿ **ಸ್ವರ್ದೃಶಃ** ಎಂಬ ಪದಕ್ಕೆ **ಸ್ವಃ ಆದಿತ್ಯಃ ತಸ್ಯ ಸಂಬಂಧಿನೋ ದ್ರಷ್ಟಾರೋ ರಶ್ಮಯಃ ।** ಆದಿತ್ಯನ ರಶ್ಮಿಗಳು ಎಂದೂ,

**ಶುಚಿಂ ನ ಯಾಮನ್ನಿಷಿರಂ ಸ್ವರ್ದೃಶಂ ಕೇತುಂ ದಿವೋ ರೋಚನಸ್ಥಾಮುಷರ್ಬುಧಂ ।**
**ಅಗ್ನಿಂ ಮೂರ್ಧಾನಂ ದಿವೋ ಅಪ್ರತಿಷ್ಕುತಂ ತಮೀಮಹೇ ನಮಸಾ ವಾಜಿನಂ ಬೃಹತ್ ॥**
(ಋ. ಸಂ ೩-೨-೧೪)

ಎಂಬಲ್ಲಿ **ಸ್ವರ್ದೃಶಂ** ಎಂಬ ಪದವು ಅಗ್ನಿಂ ಎಂಬುದಕ್ಕೆ ವಿಶೇಷಣವಾಗಿದ್ದು **ಸರ್ವದೃಶಂ ಸರ್ವಪದಾರ್ಥವಿಜ್ಞಾನಯುಕ್ತಂ ।** ಸಕಲವನ್ನೂ ತಿಳಿಯುವ ವಿಶೇಷಜ್ಞಾನದಿಂದ ಕೂಡಿದ ಅಗ್ನಿಯನ್ನು ಎಂದು ಪ್ರಕೃತವಾದ ಋಕ್ಕಿನಲ್ಲಿ ಸಾಯಣರು ಹೇಳಿರುವಂತೆ ಅರ್ಥಮಾಡಿದೆ.

**ಜನೂಶ್ಚಿದ್ವೋ ಮರುತಸ್ತ್ವೇಷ್ಯೇಣ ಭೀಮಾಸಸ್ತುವಿಮನ್ಯವೋಽಯಾಸಃ ।**
**ಪ್ರ ಯೇ ಮಹೋಭಿರೋಜಸೋತ ಸಂತಿ ವಿಶ್ವೋ ವೋ ಯಾಮನ್ ಭಯತೇ ಸ್ವರ್ದೃಕ್ ॥**
(ಋ. ಸಂ ೭-೫೮-೨)

ಎಂಬ ಋಕ್ಕಿನಲ್ಲಿ **ಸೂರ್ಯಸ್ಯ ದ್ರಷ್ಟಾ ಸರ್ವೋ ಜೀವಸಮೂಹಃ ।** ಸೂರ್ಯನನ್ನು ವೀಕ್ಷಿಸತಕ್ಕ ಸಕಲ ಜೀವಸಮೂಹ ಅಥವಾ **ಸ್ವರಂತರಿಕ್ಷಂ । ತತ್ಪಶ್ಯತೀತಿ ವೃಕ್ಷಃ ಸ್ವರ್ದೃಕ್ ಸರ್ವದೋತ್ತಿಷ್ಠನ್ನಿತ್ಯರ್ಥಃ । ಸ್ವರ್** ಎಂಬ ಶಬ್ದಕ್ಕೆ ಅಂತರಿಕ್ಷವೆಂದೂ **ವೃಕ್ಷವು** ಯಾವಾಗಲೂ ಊರ್ಧ್ವಮುಖವಾಗಿದ್ದು ಅಂತರಿಕ್ಷವನ್ನೇ ನೋಡುತ್ತಿರುವುದರಿಂದ ಅದಕ್ಕೆ **ಸ್ವರ್ದೃಕ್** ಎಂಬ ಹೆಸರೆಂದೂ ಅರ್ಥಮಾಡಿದ್ದಾರೆ.

**ಯತ್ರಾ ನರಃ ಸಮಯಂತೇ ಕೃತಧ್ವಜೋ ಯಸ್ಮಿನ್ನಾಜಾ ಭವತಿ ಕಿಂ ಚನ ಪ್ರಿಯಂ ।**
**ಯತ್ರಾ ಭಯಂತೇ ಭುವನಾ ಸ್ವರ್ದೃಶಸ್ತತ್ರಾ ನ ಇಂದ್ರಾವರುಣಾಧಿ ವೋಚತಂ ॥**
(ಋ. ಸಂ. ೭-೮೩-೨)

ಎಂಬಲ್ಲಿ ಸ್ವರ್ಗೋನ್ಮುಖರಾದ ವೀರರಿಗೆ ವಿಶೇಷಣವಾಗಿದೆ. ಹೀಗೆ ಸಂದರ್ಭಾನುಸಾರವಾದ ಅರ್ಥಗಳು ಸಾಧ್ಯವಿರುವುವೆಂದು ತಿಳಿಸಿ ಪ್ರಕೃತವಾದ ಋಕ್ಕಿನಲ್ಲಿ **ಸ್ವರ್ಗಸ್ಯ ದ್ರಷ್ಟುಃ ಅಥವಾ ಸರ್ವಸ್ಯ ದ್ರಷ್ಟುಃ ವಿಷ್ಣೋಃ** ಎಂದು

ಅರ್ಥಮಾಡಿದೆ. ವಿಷ್ಣುವಿನ ಪರಮಪದವು ಆದಿತ್ಯಾಭಿಮುಖವಾಗಿರುವುದರಿಂದ ಸ್ವಃಶಬ್ದಕ್ಕೆ ಇಲ್ಲಿ ಆದಿತ್ಯನೆಂದೂ ಅರ್ಥಮಾಡಿದರೆ ತಪ್ಪಾಗಲಾರದು.

ತೃತೀಯಂ ನಕಿಃ ಆ ದಧರ್ಷತಿ—ತೃತೀಯಂ ಕ್ರಮಣಂ ದ್ಯುಲೋಕಾಖ್ಯಂ ಬುದ್ಧ್ವಾ ಜ್ಞಾತುಂ ನ ಕೋಽಪಿ ಮರ್ತ್ಯಃ ಶಕ್ನೋತೀತ್ಯರ್ಥಃ । ವಿಷ್ಣುವಿನ ಮೂರನೇ ಪಾದವಿಕ್ರಮಣವಿರುವ ದ್ಯುಲೋಕವನ್ನು ತಿಳಿಯಲು ಯಾವ ಮಾನವನಿಂದಲೂ, ಗರುಡಾದಿ ಅಂತರಿಕ್ಷಚಾರಿಗಳಾದ ಪಕ್ಷಿಗಳಿಂದಲೂ ಕೊನೆಗೆ ಮರುತ್ತು ಗಳಿಂದಲೂ ಸಹ ತಿಳಿಯಲು ಸಾಧ್ಯವಿಲ್ಲವೆಂದು ತಾತ್ಪರ್ಯ.

ನಕಿಃ—ಈ ಪದವು ಸರ್ವಪದ ಸಮಾಮ್ನಾಯಾರ್ಥಕವಾದ ಪದಗಳೊಡನೆ ಪಠಿತವಾಗಿದೆ. ಈ ಋಕ್ಕಿನಲ್ಲಿ ಈ ಪದಕ್ಕೆ ನಿಷೇಧಾರ್ಥವಿದ್ದು ವಿಷ್ಣುವಿನ ಮೂರನೇ ಪಾದವನ್ನರಿಯಲು ಯಾರಿಂದಲೂ ಸಾಧ್ಯವೇ ಇಲ್ಲ ಎಂದು ಒತ್ತಿ ಹೇಳಿದೆ.

ವ್ಯಾಕರಣಪ್ರಕ್ರಿಯಾ

**ಕ್ರಮಣೇ**—ಕ್ರಮು ಪಾದವಿಕ್ಷೇಪೇ ಧಾತು. ಭಾವಾರ್ಥದಲ್ಲಿ ಲ್ಯುಟ್ ಪ್ರತ್ಯಯ. **ಯುವೋರ-ನಾಕೌ** ಎಂಬುದರಿಂದ ಅದಕ್ಕೆ ಅನಾದೇಶ. **ಅಟ್‌ಕುಪ್ವಾಙ್**-ಸೂತ್ರದಿಂದ ನಕಾರಕ್ಕೆ ಣತ್ವ. **ಲಿತಿ** (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ.

**ಸ್ವರ್ದೃಶಃ**—ದೃಶಿರ್ ಪ್ರೇಕ್ಷಣೇ ಧಾತು. ಕ್ವಿಪ್ ಪ್ರತ್ಯಯ. **ಗತಿಕಾರಕೋಪಪದಾತ್‌ಕೃತ್** ಎಂಬುದ ರಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. ಷಷ್ಠೀಏಕವಚನಾಂತರೂಪ.

**ಅಭಿಖ್ಯಾಯ**—ಖ್ಯಾ ಪ್ರಕಥನೇ ಧಾತು. ಇದಕ್ಕೆ ಕ್ತ್ವಾ ಪ್ರತ್ಯಯ ಬಂದಾಗ **ಸಮಾಸೇನಞ್-ಪೂರ್ವೇ**—(ಪಾ. ಸೂ. ೭-೧-೩೭) ಎಂಬುದರಿಂದ ಅದಕ್ಕೆ ಲ್ಯಬಾದೇಶ. ಪಿತ್ತಾದುದರಿಂದ ಅದು ಅನುದಾತ್ತ ವಾಗುತ್ತದೆ.

**ಭುರಣ್ಯತಿ**—ಭುರಣ್ಯ ಗತೌ ಧಾತು. ಕಂಡ್ವಾದಿ. **ಭುರಣ್ಯತಿ ಶವತಿ** (ನಿರು. ೧೪-೧೬) ಎಂದು ಗತಿ ಕರ್ಮಕಧಾತುಗಳ ಮಧ್ಯೆ ಪಠಿತವಾಗಿದೆ. ಲಟ್ ಪ್ರಥಮಪುರುಷಏಕವಚನಾಂತರೂಪ. ಅತಿಙಂತದ ಪರದಲ್ಲಿರುವುದ ರಿಂದ ನಿಘಾತಸ್ವರ ಬರುತ್ತದೆ.

**ದಧರ್ಷತಿ**—ಧೃಷಿ ಶಸೀ ಪ್ರಯಾತ್ಯೇ. ಧಾತು. ಞಿಧೃಷಾ ಪ್ರಾಗಲ್ಭ್ಯೇ ಧಾತು. ಲಟ್ ಪ್ರಥಮ ಪುರುಷಏಕವಚನದಲ್ಲಿ ತಿಪ್ ಪ್ರತ್ಯಯ. **ಬಹುಲಂ ಛಂದಸಿ** ಎಂಬುದರಿಂದ ಶಪಿಗೆ ಶ್ಲು ಆದೇಶ **ಲೇಟೋಽಡಾಟೌ** (ಪಾ. ಸೂ. ೩-೪-೯೪) ಎಂಬುದರಿಂದ ಪ್ರತ್ಯಯಕ್ಕೆ ಅಡಾಗಮ. ಧಾತುವಿಗೆ ದ್ವಿತ್ವಾದಿ. ಪ್ರತ್ಯಯನಿಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ವಯಃ**—ವಾ ಗತಿಗಂಧನಯೋಃ ಧಾತು. **ವಾತೇರ್ಡಿಚ್ಚ** (ಉ. ಸೂ. ೪-೫೭೩) ಎಂಬುದರಿಂದ ಇಣ್ ಪ್ರತ್ಯಯ. ಅದಕ್ಕೆ ಡಿತ್ತವಿಧಾನಮಾಡಿರುವುದರಿಂದ ಧಾತುವಿನ ಟಿಗೆ (ಆ) ಲೋಪ, ವಿ ಶಬ್ದವಾಗುತ್ತದೆ. ಪ್ರಥಮಾ ಬಹುವಚನಾಂತರೂಪ.

ಪತಯಂತಃ—ಪತ್ಲೃ ಗತೌ ಧಾತು. ಇದಕ್ಕೆ ಣ್ಯಂತವ ಮೇಲೆ ಶತೃಪ್ರತ್ಯಯ. ಶಪ್ ವಿಕರಣ. ಣಿಚಿ ನಿಮಿತ್ತವಾಗಿ ಧಾತುವಿನ ಅಕಾರಕ್ಕೆ ಲೋಪ. ಇದಕ್ಕೆ ಸ್ಥಾನಿವಧ್ಭಾವ ಬರುವುದರಿಂದ ಉಪಧಾವೃದ್ಧಿ ಬರುವುದಿಲ್ಲ. ಶಪ್ ನಿಮಿತ್ತವಾಗಿ ಣಿಚಿಗೆ ಗುಣ. ಅಯಾದೇಶ. ತಾಸ್ಯನುದಾತ್ತೇತ್ ಸೂತ್ರದಿಂದ ಲಸಾರ್ವಧಾತುಕ ಅನುದಾತ್ತ ವಾಗುವುದರಿಂದ ಣಿಚ್ ಸ್ವರ ಉಳಿಯುತ್ತದೆ

ಪತತ್ರಿಣಃ—ಪತ್ಲೃ ಗತೌ ಧಾತು ಅಮಿನಕ್ಷಿಯಜಿ—( ಉ. ಸೂ- ೩-೩೮೫ ) ಎಂಬುದರಿಂದ ಅತ್ರನ್ ಪ್ರತ್ಯಯ. ಪತತ್ರಂ ಅಸ್ಯ ಅಸ್ತಿ ಇತಿ ಪತತ್ರೀ. ಅತ ಇನಿಠನೌ ಎಂಬುದರಿಂದ ಮತ್ವರ್ಥದಲ್ಲಿ ಇನಿಪ್ರತ್ಯಯ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ. ಪ್ರಥಮಾಬಹುವಚನಾಂತರೂಪ. ॥ ೫ ॥



ಸಂಹಿತಾಪಾಠಃ

ಚತುರ್ಭಿಃ ಸಾಕಂ ನವತಿಂ ಚ ನಾಮಭಿಶ್ಚಕ್ರಂ ನ ವೃತ್ತಂ ವ್ಯತೀಁರವೀವಿಪತ್ ।
ಬೃಹಚ್ಛರೀರೋ ವಿಮಿಮಾನ ಋಕ್ವಭಿರ್ಯುವಾಕುಮಾರಃ ಪ್ರತ್ಯೇತ್ಯಾಹವಂ ॥ ೬ ॥

ಪದಪಾಠಃ

ಚತುರ್ಭಿಃ । ಸಾಕಂ । ನವತಿಂ । ಚ । ನಾಮಽಭಿಃ । ಚಕ್ರಂ । ನ । ವೃತ್ತಂ । ವ್ಯತೀನ್ । ಅವೀವಿಪತ್ ।
ಬೃಹತ್ಽಶರೀರಃ । ವಿಽಮಿಮಾನಃ । ಋಕ್ವಽಭಿಃ । ಯುವಾ । ಅಕುಮಾರಃ । ಪ್ರತಿ । ಏತಿ । ಆಽಹವಂ ॥ ೬ ॥

ಸಾಯಣಭಾಷ್ಯಂ

ಅಯಮಾದಿತ್ಯಾತ್ಮಾ ವಿಷ್ಣುಶ್ಚತುರ್ಭಿಃ ಸಾಕಂ ಸಹಿತಾಂ ನವತಿಂ ಚ । ಚತುರ್ನವತಿಮಿತ್ಯರ್ಥಃ । ಏತತ್ಸಂಖ್ಯಾಕಾನ್ಕಾಲಾವಯವಾನ್ ನಾಮಭಿಃ ಸ್ವಕೀಯನಮನಪ್ರಕಾರೈಃ ಪ್ರೇರಣವಿಶೇಷೈರ್ವೃತ್ತಂ ಯಥಾ ಭವತಿ ತಥಾ ವ್ಯತೀನ್ ವಿವಿಧಾತನಸ್ವಭಾವಾನ್ ವೃತ್ತಂ ಚಕ್ರಂ ನ ಬಹ್ವರೋಪೇತಂ ಚಕ್ರಮಿವ ತಂ ಯಥಾ ಶತ್ರೋರುಪರಿ ಪ್ರಕ್ಷೇಪೇಣ ಭ್ರಮಯತಿ ತದ್ವದುಕ್ತಸಂಖ್ಯಾಕಾನ್ಕಾಲಾವಯವಾನವೀವಿಪತ್ । ಕಂಪಯತಿ । ಭ್ರಮಯತಿ ॥ ಟುವೇಪೃ ಕಂಪನೇ ॥ ಣ್ಯಂತಾಲ್ಲುಙಿ ಚಙಿ ರೂಪಂ ॥ ಕೇ ಪುನಸ್ತೇ ಉಚ್ಯಂತೇ । ಸಂವತ್ಸರ ಏಕಃ । ಅಯನೇ ದ್ವೇ । ಪಂಚರ್ತವಃ । ದ್ವಾದಶ ಮಾಸಾಃ । ಚತುರ್ವಿಂಶತ್ಯರ್ಧಮಾಸಾಃ । ತ್ರಿಂಶದಹೋರಾತ್ರಾಃ । ಅಷ್ಟೌ ಯಾಮಾಃ । ಏಕಸ್ಮಿನ್ದಿನೇ ಪರ್ಯಾವರ್ತಮಾನಾನಿ ಮೇಷಾ-

ದೀನಿ ದ್ವಾದಶ ಲಗ್ನಾನೀತಿ ಮಿಲಿತ್ವಾ ಚತುರಧಿಕನವತಿಸಂಖ್ಯಾಕಾನವೀವಿಶತ್ । ನನ್ವಾದಿತ್ಯಃ ಸ್ವಯಮಪೀತರವತ್ಪರಿಭ್ರಮತಿ ಕಥಂ ಭ್ರಮಯತೀತ್ಯುಚ್ಯತೇ । ನೈಷ ದೋಷಃ । ಏತೇಷಾಂ ಭ್ರಾಮಕಸ್ಯ ಧ್ರುವಸ್ಯ ವಿಷ್ಣೋರ್ಮೂರ್ತ್ಯಂತರತ್ವಾತ್ । ಅಥವಾ ಸ್ವಭ್ರಮಣಾಧೀನತ್ವಾದಿತರೇಷಾಂ ಪರಿಭ್ರಮಣಸ್ಯ । ಅತಃ ಸ್ವಯಂ ಭ್ರಮಯತೀತ್ಯುಚ್ಯತೇ । ಏವಂ ಕಾಲಾತ್ಮಕೋ ವಿಷ್ಣುರ್ಬೃಹಚ್ಛರೀರೋ ವಿರಾಡಾತ್ಮನಾ ಸರ್ವದೇವಮನುಷ್ಯಾದಿಶರೀರಾಣಾಂ ಸ್ವಶರೀರತ್ವಾತ್ । ಬೃಹಚ್ಛರೀರತ್ವೇನೋಪಪಾದಯತಿ । ವಿಮಿಮಾನೋ ವಿವಿಧಮಾತ್ಮಾನಂ ಮಿಮಾನೋ ದೇವತಿರ್ಯಗಾತ್ಮನಾ ವಿಭಜ್ಯ ಸ್ಥಾಪಯನ್ । ಯದ್ವಾ । ಋಕ್ವಭಿಃ ಸ್ತುತಿಮದ್ಭಿರ್ಮಂತ್ರವದ್ಭಿರ್ವಾ ವಿಮಿಮಾನಃ । ಯದ್ಯಪಿ ವಿಭುಸ್ತಥಾಪಿ ಭಕ್ತ್ಯಧೀನತ್ವಾತ್ ಸ್ತುತ್ಯಾ ಮೀಯತೇ । ಯುವಾ ಸರ್ವತ್ರ ಮಿಶ್ರಣಶೀಲೋ ನಿತ್ಯತರುಣೋ ವಾ ಅತ ಏವಾಕುಮಾರೋಽಲ್ಪಃ ಏವಂಭೂತೋ ಮಹಾವಿಷ್ಣುರಾಹವಮಾಹ್ವಾನಂ ಪ್ರತ್ಯೇತಿ । ಗಚ್ಛತಿ ಯಜ್ಞದೇಶಂ ॥

### ಪ್ರತಿಪದಾರ್ಥ

(ಆದಿತ್ಯಾತ್ಮಕನಾದ ವಿಷ್ಣುವು) **ನಾಮಭಿಃ**—ತನ್ನ ಭ್ರಮಣಪ್ರಕಾರಗಳಿಂದ । **ಚತುರ್ಭಿಸ್ಸಾಕಂ ನವತಿಂ ಚ**—ತೊಂಭತ್ತುನಾಲ್ಕು ಸಂಖ್ಯೆಗಳುಳ್ಳವೂ । **ವ್ಯತೀನ್**—ಬೇರೆ ಬೇರೆಯಾಗಿ ವಿಭಾಗಗಳಾಗಿರುವುವೂ ಆದ ಕಾಲದ ಅವಯವಗಳನ್ನು । **ಚಕ್ರಂ ನ**—ಅರಗಳ ಸುತ್ತಲೂ ಸುತ್ತುವ ಚಕ್ರದಂತೆ । **ವೃತ್ತಂ**—ವಲಯಾಕಾರವಾಗಿ ಸುತ್ತುವಂತೆ । **ಅವೀವಿಪತ್**—ಭ್ರಮಣವನ್ನು ಮಾಡಿಸುತ್ತಾನೆ । **ಬೃಹಚ್ಛರೀರಃ**—ವಿರಾಡ್ರೂಪದ ಶರೀರವುಳ್ಳವನೂ । **ಋಕ್ವಭಿಃ**—ಮಂತ್ರರೂಪವಾದ ಸ್ತುತಿಗಳಿಂದ । **ವಿಮಿಮಾನಃ**—(ತನ್ನ ಸ್ವರೂಪವನ್ನು) ದೇವತಿರ್ಯಗಾದಿ ನಾನಾ ರೂಪಗಳಲ್ಲಿ ವಿಭಾಗಿಸಿ ಪರಿಣಮಿಸುವವನೂ । **ಯುವಾ**—ಸರ್ವತ್ರ ಸೇರಿಕೊಳ್ಳುವವನೂ ಅಥವಾ ನಿತ್ಯತರುಣನೂ । **ಅಕುಮಾರಃ**—(ಆದರೆ) ಶಿಶುರೂಪನಲ್ಲದವನೂ ಆದ ಮಹಾವಿಷ್ಣುವು । **ಆಹವಂ**—ನಮ್ಮ ಆಹ್ವಾನವನ್ನು ಲಕ್ಷಿಸಿ । **ಪ್ರತ್ಯೇತಿ**—(ಯಜ್ಞಭೂಮಿಗೆ) ಬರುತ್ತಾನೆ.

### ಭಾವಾರ್ಥ

ಆದಿತ್ಯಾತ್ಮಕನಾದ ವಿಷ್ಣುವು ತನ್ನ ಭ್ರಮಣಪ್ರಕಾರಗಳಿಂದ ತೊಂಭತ್ತುನಾಲ್ಕು ಸಂಖ್ಯೆಗಳುಳ್ಳವೂ, ಬೇರೆ ಬೇರೆಯಾಗಿ ವಿಭಾಗಗಳಾಗಿರುವುವೂ ಆದ ಸಂವತ್ಸರಾದಿಕಾಲದ ಅವಯವಗಳನ್ನು ಅರಗಳ ಸುತ್ತಲೂ ಸುತ್ತುವ ಚಕ್ರದಂತೆ ವಲಯಾಕಾರವಾಗಿ ಸುತ್ತುವಂತೆ ಭ್ರಮಣಮಾಡಿಸುತ್ತಾನೆ. ವಿರಾಡ್ರೂಪದ ಶರೀರವುಳ್ಳವನೂ, ಮಂತ್ರರೂಪವಾದ ಸ್ತುತಿಗಳಿಂದ ತನ್ನ ಸ್ವರೂಪವನ್ನು ದೇವತಿರ್ಯಗಾದಿನಾನಾರೂಪಗಳಲ್ಲಿ ವಿಭಾಗಿಸಿ ಪರಿಣಮಿಸುವವನೂ, ನಿತ್ಯತರುಣನೂ ಆದರೆ ಶಿಶುರೂಪನಲ್ಲದವನೂ ಆದ ಮಹಾವಿಷ್ಣುವು ನಮ್ಮ ಆಹ್ವಾನವನ್ನು ಲಕ್ಷಿಸಿ ಯಜ್ಞಭೂಮಿಗೆ ಬರುತ್ತಾನೆ.

## English Translation

He causes, by his gyrations, ninety and four periodical revolutions, like a circular wheel, vast of body, and evolving in many forms, through the praises (addressed to him); ever young, though not infantine, he comes at our invocations.

। ವಿಶೇಷವಿಷಯಗಳು ।

ಇಲ್ಲಿ ಆದಿತ್ಯಾತ್ಮಕನಾದ ವಿಷ್ಣುವಿನ ಮಹಿಮೆಯನ್ನು ಸ್ತುತಿಸಿದೆ. ನಿರುಕ್ತಕಾರರು **ಸ್ವಸರಾಣಿ** ಎಂಬ ಪದದ ನಿರ್ವಚನವನ್ನು ತೋರಿಸುವಾಗ,

**ಸ್ವರಾದಿತ್ಯೋ ಭವತಿ ಸ ಏನಾನಿ ಸಾರಯತಿ ।**

(ನಿ. ೫-೪)

ಅಹಸ್ಸುಗಳನ್ನು ಚಲಿಸುವಂತೆ ಮಾಡುವುದರಿಂದ ಆದಿತ್ಯನಿಗೆ ಸ್ವಃ ಎಂದು ಹೆಸರೆಂದು ತಿಳಿಸಿದ್ದಾರೆ. ಈ ಋಕ್ಕಿನಲ್ಲಿ **ಆದಿತ್ಯಾತ್ಮಕನಾದ** ವಿಷ್ಣುವಿನ ಭ್ರಮಣರೂಪವಾದ ಶಕ್ತಿಯನ್ನೂ ಕಾಲಾದಿ ತತ್ತ್ವಗಳನ್ನೆಲ್ಲಾ ಚಲಿಸುವಂತೆ ಮಾಡುವುದೂ ಆದ ಅಂಶವನ್ನೂ ವರ್ಣಿಸಿದೆ.

**ಚತುರ್ಭಿಸ್ಸಾಕಂ ನವತಿಂ ಚ—ಏತತ್ಸಂಖ್ಯಾಕಾನ್ ಕಾಲಾವಯವಾನ್** । ಎಂದು ಕಾಲದ ಅವಯವಗಳನ್ನು ತೊಂಭತ್ತುನಾಲ್ಕು ಭಾಗಗಳನ್ನಾಗಿ ವಿಂಗಡಿಸಿದೆ. ಅವು ಯಾವವೆಂದರೆ—

| | | |
|---|---|---|
| ಸಂವತ್ಸರಃ ಏಕಃ | ವರ್ಷ | ೧ |
| ಅಯನೇ ದ್ವೇ | ಅಯನಗಳು | ೨ |
| ಪಂಚರ್ತವಃ | ಋತುಗಳು | ೫ |
| ಮಾಸಾಃ ದ್ವಾದಶ | ಮಾಸಗಳು | ೧೨ |
| ಚತುರ್ವಿಂಶತ್ಯರ್ಧಮಾಸಾಃ | ಅರ್ಧಮಾಸಗಳು | ೨೪ |
| ತ್ರಿಂಶದಹೋರಾತ್ರಾಃ | ಅಹೋರಾತ್ರಗಳು | ೩೦ |
| ಅಷ್ಟೌ ಯಾಮಾಃ | ಯಾಮಗಳು | ೮ |
| (ಏಕಸ್ಮಿನ್ದಿನೇ ಪರ್ಯಾವರ್ತಮಾನಾನಿ ಮೇಷಾದೀನಿ) | ಮೇಷಾದಿ ಲಗ್ನಗಳು | ೧೨ |
| **ದ್ವಾದಶ ಲಗ್ನಾನಿ** | | — |
| ಮಿಲಿತ್ವಾ ಚತುರಧಿಕನವತಿಸಂಖ್ಯಾಕಾಃ | ಒಟ್ಟು | ೯೪ |

ಈರೀತಿ ಕಾಲದ ಅವಯವಗಳು ಒಟ್ಟು ತ್ತೊಂಭತ್ತುನಾಲ್ಕು.

**ವ್ಯತೀನ್—ವಿವಿಧಾತನಸ್ವಭಾವಾನ್।** ಬೇರೆ ಬೇರೆ ರೂಪಗಳಿಂದಿರುವ ಈ ಎಲ್ಲಾ ಕಾಲಾವಯವಗಳನ್ನೂ ಚಲಿಸುವಂತೆ ಮಾಡುತ್ತಾನೆಂದು ವರ್ಣಿಸಿದೆ.

ಇಲ್ಲಿ ಇನ್ನೊಂದು ಆಕಾಂಕ್ಷೆಗೆ ಅವಕಾಶವಿದೆಯೆಂದು ಭಾಷ್ಯಕಾರರು ತೋರಿಸುತ್ತಾ ಅದಕ್ಕೆ ತಕ್ಕ ಸಮಾಧಾನವನ್ನೂ ಹೇಳಿದ್ದಾರೆ.

**ನನ್ವಾದಿತ್ಯಃ ಸ್ವಯಮಪಿ ಇತರವತ್ಪರಿಭ್ರಮತಿ ಕಥಂ ಭ್ರಮಯತಿ ಇತ್ಯುಚ್ಯತೇ । ನೈಷ ದೋಷಃ। ಏತೇಷಾಂ ಭ್ರಾಮಕಸ್ಯ ಧ್ರುವಸ್ಯ ವಿಷ್ಣೋಃ ಮೂರ್ತ್ಯಂತರತ್ವಾತ್ । ಅಥವಾ ಸ್ವಭ್ರಮಣಾಧೀನತ್ವಾದಿತರೇಷಾಂ ಪರಿಭ್ರಮಣಸ್ಯ ಅತಃ ಸ್ವಯಂ ಭ್ರಮಯತಿ ಇತ್ಯುಚ್ಯತೇ ।**

ಆದಿತ್ಯನೂ ಕೂಡ ಇತರ ಗ್ರಹಾದಿಗಳಂತೆ ಭ್ರಮಣಸ್ವರೂಪವನ್ನು ತಾನೇ ಹೊಂದಿರುವುದರಿಂದ ಇತರ ವಸ್ತುಗಳನ್ನು ಅವನು ಚಲಿಸುವಂತೆ ಹೇಗೆ ಮಾಡಬಲ್ಲನು ಎಂದು ಪ್ರಶ್ನೆಯನ್ನು ಆಶಂಕಿಸಿ, ಲೋಕದಲ್ಲಿರತಕ್ಕ ಇತರ ಸಕಲ ವಸ್ತುಗಳೂ ಸಹ ವಿಷ್ಣುವಿನ ರೂಪಾಂತರಗಳೇ ಆಗಿರುವುದರಿಂದಲೂ, ಮತ್ತು ಅವುಗಳ ಚಲನವಲನಗಳೆಲ್ಲಾ ಆದಿತ್ಯಾತ್ಮಕನಾದ ವಿಷ್ಣುವಿನ ಭ್ರಮಣವನ್ನೇ ಆಶ್ರಯಿಸಿರುವುದರಿಂದಲೂ ಇದರಲ್ಲಿ ಅಸ್ವಾಭಾವಿಕವಾದ ವರ್ಣನೆಯೇನೂ ಇಲ್ಲ ಎಂದು ಸಮಾಧಾನವನ್ನು ಹೇಳಿದ್ದಾರೆ.

ಈ ಆಕ್ಷೇಪಕ್ಕೆ ಸಮಾಧಾನವನ್ನು ಹೇಳುವುದರಲ್ಲಿ ಸಾಯಣರು **ಕಾಲಾತ್ಮಕವಾದ** ವಿಶ್ವತತ್ತ್ವವನ್ನು ಸಂಗ್ರಹರೂಪವಾಗಿ ತಿಳಿಸಿದ್ದಾರೆ. **ಕಾಲಾತ್ಮಕಃ ವಿಷ್ಣುಃ** ಎನ್ನುವುದರಿಂದಲೂ, **ವಿರಾಡಾತ್ಮನಾ ಸರ್ವದೇವ-ಮನುಷ್ಯಾದಿಶರೀರಾಣಾಂ ಸ್ವಶರೀರತ್ವಾತ್** ಎನ್ನುವುದರಿಂದಲೂ ವಿಷ್ಣುವಿಗೂ ವಿಶ್ವಕ್ಕೂ ತಾದಾತ್ಮ್ಯವನ್ನು ಹೇಳಿ ವಿಶ್ವದ ವ್ಯವಹಾರವೆಲ್ಲವೂ ವಿಷ್ಣುವಿನ ವ್ಯಾಪಾರವನ್ನವಲಂಬಿಸಿದೆಯೆಂದು ಹೇಳಿದೆ. **ವಿಮಿಮಾನಃ** ಎಂಬ ವಿಶೇಷಣದಿಂದ ಸೃಷ್ಟಿಸ್ಥಿತ್ಯಾದಿಗಳಿಗೂ ಸಹ (ಪ್ರಜಾಪತಿಯೆಂದು ಬೇರೆ ರೂಪದಿಂದ ವರ್ಣಿಸಲ್ಪಡುವ) ವಿಷ್ಣುವೇ ಹೇತುವೆಂದೂ ಹೇಳಲ್ಪಟ್ಟಿದೆ ಆದಿತ್ಯಾತ್ಮಕನಾದ ವಿಷ್ಣುವಿನ ಚತುರಧಿಕನವತಿ (೯೪) ಸಂಖ್ಯಾಕವಾದುದೂ ಚಕ್ರರೂಪವಾದುದೂ ಆದ ಕಾಲಾವಯವಗಳನ್ನು ಒಂದೊಂದು ಕಡೆ ಒಂದೊಂದು ವಿಧವಾಗಿ ವರ್ಣಿಸಿ ವಿಶ್ವಕ್ಕೆ ಹೇತುವಾದ ಪ್ರಜಾಪತಿಯ ತತ್ತ್ವಗಳೇ ಇವು ಎಂಬುದನ್ನು ತೋರಿಸಿದೆ.

**ದ್ವಾದಶಾರಂ ನಹಿ ತಜ್ಜರಾಯ ವರ್ವರ್ತಿ ಚಕ್ರಂ ಪರಿ ದ್ಯಾಮೃತಸ್ಯ ।**
**ಆ ಪುತ್ರಾ ಅಗ್ನೇ ಮಿಥುನಾಸೋ ಅತ್ರ ಸಪ್ತ ಶತಾನಿ ವಿಂಶತಿಶ್ಚ ತಸ್ಥುಃ ।**

(ಋ. ಸಂ. ೧-೧೬೪-೧೧)

**ಸತ್ಯಾತ್ಮಕಸ್ಯಾದಿತ್ಯಸ್ಯ ಚಕ್ರಂ ಪುನಃಪುನಃ ಕ್ರಮಣಶೀಲಂ ಮಂಡಲಾಖ್ಯಂ ರಥಚಕ್ರಂ ವಾ ವರ್ವರ್ತಿ ।**

**ಪಂಚಪಾದಂ ಪಿತರಂ ದ್ವಾದಶಾಕೃತಿಂ ದಿವ ಆಹುಃ ಪರೇ ಅರ್ಧೇ ಪುರೀಷಿಣಂ ।**
**ಅಥೇಮೇ ಅನ್ಯ ಉಪರೇ ವಿಚಕ್ಷಣಂ ಸಪ್ತಚಕ್ರೇ ಷಳರ ಆಹುರರ್ಪಿತಂ ॥**

(ಋ. ಸಂ. ೧-೧೬೪-೧೨)

**ಪಂಚಾರೇ ಚಕ್ರೇ ಪರಿವರ್ತಮಾನೇ ತಸ್ಮಿನ್ನಾ ತಸ್ಥುರ್ಭುವನಾನಿ ವಿಶ್ವಾ ।**
**ತಸ್ಯ ನಾಕ್ಷಸ್ತಪ್ಯತೇ ಭೂರಿಭಾರಃ ಸನಾದೇವ ನ ಶೀರ್ಯತೇ ಸನಾಭಿಃ ॥**

(ಋ ಸಂ- ೧-೧೬೪-೧೩)

ಹನ್ನೆರಡು ಅರಗಳುಳ್ಳ (ಮಾಸ) ಆದಿತ್ಯನ ಚಕ್ರವು ಅಂತರಿಕ್ಷದಲ್ಲಿ ಆವೃತ್ತಿರೂಪವಾದ ಪರಿಭ್ರಮಣವನ್ನು ಹೊಂದಿರುತ್ತದೆ. ಅದು ಕ್ಷಯವನ್ನು ಹೊಂದದೆ ಶಾಶ್ವತವಾದ ಭ್ರಮಣವುಳ್ಳದ್ದು. ಮಿಥುನರೂಪದಲ್ಲಿರುವುದೂ ಏಳನೂರ ಇಪ್ಪತ್ತು ಸಂಖ್ಯೆಗಳುಳ್ಳದ್ದೂ, ಆದಿತ್ಯನಿಗೆ ಶಿಶುರೂಪದ್ದೂ ಆದ ಅಹೋರಾತ್ರಗಳ ದ್ವಯವು ಈ ಕಾಲಚಕ್ರದಲ್ಲಿ ಅಂತರ್ಗತವಾಗಿದೆ. ಅಯನಾದ್ಯವಯವಗಳಿಂದ ಕೂಡಿದ ಈ ಕಾಲಚಕ್ರವು ಸತತವಾಗಿ ತನ್ನ ಭ್ರಮಣವನ್ನು ಮುಂದುವರಿಸುತ್ತದೆ. ಇದೇ ವಿಶ್ವತತ್ತ್ವವು. ಈ ತತ್ತ್ವವು ಸೃಷ್ಟಿಕರ್ತನಾದ ಪ್ರಜಾಪತಿಯಲ್ಲಿ ಅಂತರ್ಗತವಾಗಿಯೂ, ಅವನ ಬಾಹ್ಯತತ್ತ್ವಗಳನ್ನು ಪ್ರತಿಬಿಂಬಿಸುತ್ತಲೂ ಇವೆ ಈ ಕಾಲತತ್ತ್ವವನ್ನು ಸಂಹಿತೆ, ಬ್ರಾಹ್ಮಣ ಮತ್ತು ಉಪನಿಷತ್ತು

ಗಳಲ್ಲೆಲ್ಲಾ ಬೇರೆ ಬೇರೆ ವಿಧಗಳಲ್ಲಿ ವರ್ಣಿಸಿದೆ. ಈ ಕಾಲತತ್ತ್ವಕ್ಕೂ ಯಜ್ಞತತ್ತ್ವಕ್ಕೂ ತಾದಾತ್ಮ್ಯವನ್ನು ತೋರಿಸಿ ಈ ಎರಡು ತತ್ತ್ವಗಳಿಗೂ ಸಹ ಪ್ರಜಾಪತಿಯು ಆಧಾರನೆಂದು ತೈತ್ತಿರೀಯಸಂಹಿತೆಯಲ್ಲಿ ಈ ರೀತಿ ವರ್ಣಿಸಿದೆ.

> **ಪ್ರಜಾಪತಿರಗ್ನಿಮಚಿನುತರ್ತುಭಿಸ್ಸಂವತ್ಸರಂ ವಸಂತೇನೈವಾಸ್ಯ ಪೂರ್ವಾರ್ಧಮಚಿನುತ ಗ್ರೀಷ್ಮೇಣ ದಕ್ಷಿಣಂ ಪಕ್ಷಂ ವರ್ಷಾಭಿಃ ಪುಚ್ಛಗ್‍ಂ ಶರದೋತ್ತರಂ ಪಕ್ಷಗ್‍ಂ ಹೇಮಂತೇನ ಮಧ್ಯಂ ಬ್ರಹ್ಮಣಾ ವಾ ಅಸ್ಯ ತತ್ಪೂರ್ವಾರ್ಧ ಮಚಿನುತ ಕ್ಷತ್ರೇಣ ದಕ್ಷಿಣಂ ಪಕ್ಷಂ ಪಶುಭಿಃ ಪುಚ್ಛಂ ವಿಶೋತ್ತರಂ ಪಕ್ಷಮಾಶಯಾ ಮಧ್ಯಂ ಯ ಏವಂ ವಿದ್ವಾನಗ್ನಿಂ ಚಿನುತ ಋತುಭಿರೇವೈನಂ ಚಿನುತೇಽಥೋ ಏತದೇವ ಸರ್ವಮವ ||**
>
> (ತೈ. ಸಂ. ೫-೬-೧೦-೧)

ವಸಂತಾದಿ ಋತುಗಳಿಂದ ಸಂವತ್ಸರವನ್ನು ನಿರ್ಮಿಸುವಂತೆ ಯಜ್ಞವೇದಿಕೆಯ ಪೂರ್ವಾದಿ ಸಕಲ ಭಾಗಗಳನ್ನೂ ನಿರ್ಮಿಸಿದನು, ಎಂದಿದೆ. ಮತ್ತು ಶತಪಥಬ್ರಾಹ್ಮಣದಲ್ಲಿ, ಪ್ರಜಾಪತಿರೂಪವಾದ ಯಜ್ಞಾಶ್ವಕ್ಕೂ ಕಾಲಾವಯವಗಳಿಗೂ ತಾದಾತ್ಮ್ಯವನ್ನು ತೋರಿಸುತ್ತಾ,

> **ಉಷಾ ವಾ ಅಶ್ವಸ್ಯ ಮೇಧ್ಯಸ್ಯ ಶಿರಃ । ಸೂರ್ಯಶ್ಚಕ್ಷುರ್ವಾತಃ ಪ್ರಾಣೋ ವ್ಯಾತ್ತಮಗ್ನಿರ್ವೈಶ್ವಾನರಃ ಸಂವತ್ಸರ ಆತ್ಮಾಶ್ವಸ್ಯ ಮೇಧ್ಯಸ್ಯ ದ್ಯೌಃ ಪೃಷ್ಠಮಂತರಿಕ್ಷಮುದರಂ ಪೃಥಿವೀ ಪಾಜಸ್ಯಂ ದಿಶಃ ಪಾರ್ಶ್ವೇಽವಾಂತರದಿಶಃ ಪರ್ಶವ ಋತವೋಽಂಗಾನಿ ಮಾಸಾಶ್ಚಾರ್ಧಮಾಸಾಶ್ಚ ಪರ್ವಾಣ್ಯಹೋರಾತ್ರಾಣಿ ಪ್ರತಿಷ್ಠಾ ನಕ್ಷತ್ರಾಣ್ಯಸ್ಥೀನಿ ನಭೋ ಮಾಗ್‍ಂಸಾನ್ಯೂವಧ್ಯಗ್‍ಂ ಸಿಕತಾಃ ಸಿಂಧವೋ .... .... .... .... ವಾಗೇವಾಸ್ಯ ವಾಗಹರ್ವಾ ಅಶ್ವಂ ಪುರಸ್ತಾನ್ಮಹಿಮಾನ್ವಜಾಯತ ತಸ್ಯ ಪೂರ್ವೇ ಸಮುದ್ರೇ ಯೋನೀ ರಾತ್ರಿರೇನಂ ಪಶ್ಚಾನ್ಮಹಿಮಾನ್ವಜಾಯತ ................ ||**
>
> (ಶ. ಬ್ರಾ ೧೦-೬-೪-೧)

ಪ್ರಜಾಪತಿರೂಪಿಯಾದ ಯಜ್ಞಾಶ್ವಕ್ಕೆ ಅಥವಾ ಯಜ್ಞಾಶ್ವರೂಪಿಯಾದ **ಪ್ರಜಾಪತಿಗೆ** ಉಷಸ್ಸೇ ಶಿರವು, ಸೂರ್ಯನೇ ಚಕ್ಷುಸ್ಸು, ವಾಯುವೇ ಪ್ರಾಣವು, ಅಗ್ನಿವೈಶ್ವಾನರನೇ ಮುಖವು, ಸಂವತ್ಸರವು ದೇಹವು, .... .... .... ಋತುಗಳೇ ಅಂಗಗಳು, ಮಾಸಾರ್ಧಮಾಸಗಳೇ ಪರ್ವಗಳು, ಅಹೋರಾತ್ರಗಳೇ ಆಧಾರಸ್ತಂಭಗಳು, ಇತ್ಯಾದಿಕ್ರಮಗಳಿಂದ ವರ್ಣಿಸಿದೆ. ಈ ವರ್ಣನೆಯು ಪ್ರಕೃತವಾದ (೧-೧೫೫-೬) ಋಕ್ಕಿನ ಭಾಷ್ಯದಲ್ಲಿ **ಕಾಲಾತ್ಮಕೋ ವಿಷ್ಣುಃ,।ವಿವಿಧಮಾತ್ಮಾನಂ ವಿಮಾನಃ ದೇವತಿರ್ಯಗಾತ್ಮನಾ ವಿಭಜ್ಯ ಸ್ಥಾಪಯನ್** ಎಂದು ವಿವರಿಸಿರುವಂತೆ ವಿಶ್ವತತ್ತ್ವವನ್ನೊಳಗೊಂಡ ಆದಿತ್ಯಾತ್ಮಕನಾದ ಪ್ರಜಾಪತಿಯ ವರ್ಣನೆಯಾಗಿದೆ. ಈ ತತ್ತ್ವಪ್ರತಿಪಾದನೆಯೇ ಮುಂದೆ ಉಪನಿಷದಾದಿಗಳಲ್ಲಿ ವಿವರಿಸುವ **ಭೌತಿಕ** ಮತ್ತು ಆಧ್ಯಾತ್ಮಿಕ ತತ್ತ್ವಗಳಿಗೆ ಆಧಾರವಾದುದೆಂದು ಪಾಶ್ಚಾತ್ಯ ಪಂಡಿತರು ಈ ಪ್ರತಿಪಾದನೆಯನ್ನು ಶ್ಲಾಘಿಸಿ ಈರೀತಿ ತಮ್ಮ ಅಭಿಪ್ರಾಯವನ್ನು ಹೇಳಿರುವರು.

In the elaborate rite of the piling of the fire-altars lies the most philosophic content of the Samhita, for in it finds expression the chief doctrine of the sacrificial ritual, the sacrifice as a cosmic power of the highest potency. The first expression of it is preserved

in the litarature of the Purusha hymn of the Rig-Veda ( X-90 ) where the creation of the universe is figured as the sacrifice of a Primeval Purusha, who is all that is and that shall be. This creation cannot be regarded as ever proceeding, and the year, the symbol of time, takes its part in that the three seasons, spring, summer, and autums form the ghee, the kindling sticks and the oblation, undoubtedly an attempt to recognise and explain time in its relation to the Universe.

(A. B. Keith :—The Taittiriya Samhika—I. Introduction : Harvard Oriental Series Vol. 18-P. CXXVI )

The Satapatha Brahmana in the tenth book ( X. 6.4 ), which deals with the secret of the fire, develops the theme more philosophically. Prajapathi is the year, for he is essentially, as the creator, time, and the year is at once the symbol of time, and the period in which the working of nature completes a round and commences again.

( A. B. Keith. The Religion and Philosophy of the Veda—Vol. II P. 466. )

ಯಾವ ರೀತಿಯಲ್ಲಿ ಸಂವತ್ಸರವು ತನ್ನ ಆದಿಯನ್ನೂ ಅಂತ್ಯವನ್ನೂ ಅಯನಾದ್ಯವಯವಗಳಿಂದ ಕೂಡಿಕೊಂಡು ಪುನಃ ಪುನರಾವೃತ್ತಿಗಳಿಂದ ಅನುಸ್ಯೂತವಾಗಿಯೂ ಅನಂತವಾಗಿಯೂ ನೆರವೇರಿಸುತ್ತಿರುವುದೋ ಅದೇ ರೀತಿಯಲ್ಲಿ ವಿಶ್ವ ಜೀವನವೂ ಸಹ ವೈಯಕ್ತಿಕವಾದ ಆದ್ಯಂತಗಳಿಂದ ಕೂಡಿರುದಾಗಿಯೂ ಒಟ್ಟಿನಲ್ಲಿ ಅನಾದ್ಯನಂತವಾದ ಭ್ರಮಣ ಪ್ರವಾಹವುಳ್ಳದ್ದಾಗಿಯೂ ಅನುಸ್ಯೂತವಾಗಿ ನಡೆಯುತ್ತದೆ ಎಂಬ ವಿವರಣೆಯಲ್ಲಿ ಒಂದು ಗಾಢವಾದ ವಿಶ್ವತತ್ತ್ವವು ಅಡಗಿದೆಯೆಂದು ಮೇಲಿನ ಅಭಿಪ್ರಾಯದ ಸಾರಾಂಶವಾಗಿದೆ.

ಆದಿತ್ಯಾತ್ಮಕನಾದ ವಿಷ್ಣುವಿನಲ್ಲಿ ವಿಶ್ವತತ್ತ್ವವೆಲ್ಲವೂ ಅವನ ದೇಹದ ರೂಪದಲ್ಲಿ ಅಂತರ್ಗತವಾಗಿರುವುದೆಂದು ಪ್ರಕೃತವಾದ ಋಕ್ಕಿನಲ್ಲಿ ವರ್ಣಿಸಿರುವಂತೆ ಆದಿತ್ಯಾತ್ಮನಾದ ಪ್ರಜಾಪತಿಯಲ್ಲಿ ಕಾಲಾತ್ಮಕವಾದ ಸಕಲ ತತ್ತ್ವಗಳೂ ಅಡಗಿವೆಯೆಂದೂ, ಮತ್ತು, ಅಗ್ನಿ, ವಿಷ್ಣು, ಆದಿತ್ಯ, ಪ್ರಜಾಪತಿ ಇವರೆಲ್ಲರೂ ಒಂದೇ ವಿಶ್ವತತ್ತ್ವವನ್ನು ಪ್ರತಿಬಿಂಬಿಸುವರೆಂದೂ, ವಿಶ್ವದ ವ್ಯವಹಾರಗಳಿಗೆಲ್ಲಾ ಕಾಲವೇ ಆಧಾರವೆಂದೂ, ಆ ಕಾಲವು ಪ್ರಜಾಪತಿರೂಪಿಯಾದ ವಿಷ್ಣುವಿನ ಅಂಶವೆಂದೂ ಉಪನಿಷದಾದಿಗಳಲ್ಲಿ ವರ್ಣಿಸಿದೆ.

ವಿಶ್ವರೂಪಂ ಹರಿಣಂ ಜಾತವೇದಸಂ ಪರಾಯಣಂ ಜ್ಯೋತಿರೇಕಂ ತಪಂತಂ ।
ಸಹಸ್ರರಶ್ಮಿಃ ಶತಧಾ ವರ್ತಮಾನಃ ಪ್ರಾಣಃ ಪ್ರಜಾನಾಮುದಯತ್ಯೇಷ ಸೂರ್ಯಃ ॥

(ಪ್ರಶ್ನೋಪನಿಷತ್, ೧-೮)

ಎಂಬ ವಾಕ್ಯದಲ್ಲಿ ಸಕಲಭೂತಗಳಿಗೂ ಪ್ರಾಣರೂಪನಾದ ಆದಿತ್ಯನು ವಿಶ್ವರೂಪಿಯೂ ಸರ್ವಜ್ಞನೂ, ಪರಾಯಣನೂ (The final goal). ವಿಶ್ವಕ್ಕೆಲ್ಲಾ ಏಕಜ್ಯೋತಿಯೂ, ಸಹಸ್ರಾರು ರೂಪಗಳಲ್ಲಿರತಕ್ಕವನೂ ಆಗಿದ್ದಾನೆ ಎಂದು ವಿಶ್ವಾತ್ಮಕನಾದ ಆದಿತ್ಯನನ್ನು ವರ್ಣಿಸಿ ಅನಂತರ,

**ಸಂವತ್ಸರೋ ವೈ ಪ್ರಜಾಪತಿಸ್ತಸ್ಯಾಯನೇ ದಕ್ಷಿಣಂ ಚೋತ್ತರಂ ಚ ।**
.... .... .... .... .... .... .... .... ॥

**ಪಂಚಪಾದಂ ಪಿತರಂ ದ್ವಾದಶಾಕೃತಿಂ ದಿವ ಆಹುಃ ಪರೇ ಅರ್ಧೇ ಪುರೀಷಿಣಂ ।**
**ಅಥೇಮೇ ಅನ್ಯ ಉಪರೇ ವಿಚಕ್ಷಣಂ ಸಪ್ತಚಕ್ರೇ ಷಳರ ಆಹುರರ್ಪಿತಂ ॥**
( Repetition of R. V. 1-164-12 )

**ಮಾಸೋ ವೈ ಪ್ರಜಾಪತಿಸ್ತಸ್ಯ ಕೃಷ್ಣಪಕ್ಷ ಏವ ರಯಿಃ ಶುಕ್ಲಃ ಪ್ರಾಣಃ ।**
**ಅಹೋರಾತ್ರೋ ವೈ ಪ್ರಜಾಪತಿಸ್ತಸ್ಯಾಹರೇವ ಪ್ರಾಣೋ ರಾತ್ರಿರೇವ ರಯಿಃ ।**
( ಪ್ರಶ್ನೋಽಪನಿಷತ್ ೧-೯ರಿಂದ ೧೩ )

ಎಂಬ ವಾಕ್ಯಗಳಲ್ಲಿ ಅಹೋರಾತ್ರಗಳಿಗೂ, ಮಾಸಕ್ಕೂ, ಪಕ್ಷಗಳಿಗೂ, ಪ್ರಜಾಪತಿಗೂ ತಾದಾತ್ಮ್ಯವನ್ನು ಹೇಳಿ ಕಾಲದ ಸಕಲ ಅವಯುವಗಳೂ ಪ್ರಜಾಪತಿಯ ಅಂಶಗಳೆಂದೇ ಹೇಳಿದೆ.

ಹೀಗೆ ಮೇಲೆ ಉದಹರಿಸಿರುವ ಶ್ರುತಿವಾಕ್ಯಗಳಲ್ಲೆಲ್ಲಾ **ಕಾಲಕ್ಕೂ ಪ್ರಜಾಪತಿಗೂ** ಅವಯುವಾವಯುವಿ ಸಂಬಂಧವನ್ನು ಹೇಳಿದೆ ಮತ್ತು ಪ್ರಕೃತವಾದ ಋಕ್ಕಿನಲ್ಲಿ **ಕಾಲಕ್ಕೂ ವಿಷ್ಣುವಿಗೂ** ಅವಯುವಾವಯುವಿಸಂಬಂಧ ವನ್ನು ಹೇಳಿದೆಯೆಂದು ಆಶಂಕೆಯುಂಟಾಗುವುದಾದರೆ **ಪ್ರಜಾಪತಿಯೂ ಆದಿತ್ಯಾತ್ಮನು ; ವಿಷ್ಣುವೂ ಆದಿತ್ಯಾತ್ಮನು** ಎಂದು ಅಭೇದಬೋಧಕಗಳಾದ ವಾಕ್ಯಗಳನ್ನು ನೋಡಬಹುದು.

**ಏಷ ಬ್ರಹ್ಮೈಷ ಇಂದ್ರ ಏಷ ಪ್ರಜಾಪತಿರೇತೇ ಸರ್ವೇ ದೇವಾ ಇಮಾನಿ ಚ ಪಂಚ ಮಹಾಭೂತಾನಿ ಪೃಥಿವೀ ವಾಯುರಾಕಾಶ ಆಪೋ ಜ್ಯೋತೀಂಷೀತ್ಯೇತಾನೀಮಾನಿ ಚ ಕ್ಷುದ್ರಮಿಶ್ರಾಣೀವ ॥**
( ಐತರೇಯೋಪನಿಷತ್ ೩-೩ )

**ದೇವೋ ವರುಣಃ ಪ್ರಜಾಪತಿಃ ಸವಿತಾ ।**
( ಛಾ. ಉ. ೧-೧೨-೫ )

ಇತ್ಯಾದಿವಾಕ್ಯಗಳಲ್ಲಿ ಪ್ರಜಾಪತಿಯು ಸರ್ವಾತ್ಮನೆಂದು ವರ್ಣಿಸಿದೆ. ಸಾಯಣರು ಆದಿತ್ಯಾತ್ಮನಾದ ವಿಷ್ಣುವನ್ನು ಸರ್ವಾತ್ಮನೆಂದು ಹೇಳುವಂತೆ ಈ ವಾಕ್ಯಗಳಲ್ಲಿ ಆದಿತ್ಯಾತ್ಮನಾದ ಪ್ರಜಾಪತಿಯನ್ನು ಸರ್ವಾತ್ಮನೆಂದು ಹೇಳಿದೆ. ಆದಿತ್ಯನೇ ಕಾಲಾತ್ಮಕನು-ಕಾಲಾಧಾರನು ಮತ್ತು ಕಾಲಿಕವಾದ ವ್ಯವಹಾರಗಳಿಗೆ ಪ್ರೇರಕನು. ಆದುದರಿಂದ ಆದಿತ್ಯಾತ್ಮಕನಾದ ವಿಷ್ಣುವು ತನ್ನ ಭ್ರಮಣವನ್ನೂ ಕಾಲಗಳ ಭ್ರಮಣಗಳನ್ನೂ ಅಭೇದರೂಪದಿಂದ ನಡೆಸುತ್ತಿರುವನೆಂದು ಸಾಯಣರ ಸಮಾಧಾನವು, **ಅಥವಾ ಸ್ವಭ್ರಮಣಾಧೀನತ್ವಾದಿತರೇಷಾಂ ಪರಿಭ್ರಮಣಸ್ಯ । ಅತಃ ಸ್ವಯಂ ಭ್ರಮತೀತ್ಯುಚ್ಯತೇ ।** ಎಂಬ ವಾಕ್ಯದಿಂದ ಸಮರ್ಥಕವಾಗಿರುತ್ತದೆ.

**ವಿಮಿಮಾನಃ—ವಿವಿಧಮಾತ್ಮನಂ ಮಿಮಾನಃ ದೇವತಿರ್ಯಗಾತ್ಮನಾ ವಿಭಜ್ಯ ಸ್ಥಾಪಯನ್ ।** ಸೂಕ್ಷ್ಮವಾದ ತನ್ನ ಆತ್ಮತತ್ತ್ವವನ್ನು ದೇವತಿರ್ಯಗಾದಿರೂಪಗಳಲ್ಲಿ ವಿಕಾಸಗೊಳಿಸಿ ಬೇರೆಬೇರೆ ರೂಪಗಳಲ್ಲಿ ಸ್ಥಾಪಿಸುತ್ತಾ ಎಂದರ್ಥಮಾಡಿದೆ. ತಾನೇ ವಿಧವಿಧವಾದ ಪರಿಣಾಮಗಳನ್ನು ಹೊಂದಿ ಮೂಲದಲ್ಲಿ ಐಕ್ಯವಿದ್ದರೂ ಕಾರ್ಯರೂಪದಲ್ಲಿ ಅವಸ್ಥಾಂತರಗಳನ್ನೂ, ರೂಪಾಂತರಗಳನ್ನೂ ಹೊಂದುತ್ತಾ ಎಂದು ತಾತ್ಪರ್ಯ.

॥ ವ್ಯಾಕರಣಪ್ರಕ್ರಿಯಾ ॥

**ಚತುರ್ಭಿಃ**—**ಝಲ್ಯುಪೋತ್ತಮಮ್** (ಪಾ. ಸೂ. ೬೬-೧-೧೮೦) ಎಂಬುದರಿಂದ ಝಲಾದಿವಿಭಕ್ತ್ಯಂತವಾದುದರಿಂದ ಉಪೋತ್ತಮವು ಉದಾತ್ತವಾಗುತ್ತದೆ.

**ವ್ಯತೀನ್**—ವಿ ಉಪಸರ್ಗ. ಅತ ಸಾತತ್ಯಗಮನೇ ಧಾತು. **ಇನ್ ಸಾರ್ವಧಾತುಭ್ಯಃ** ಎಂಬುದರಿಂದ ಇನ್ ಪ್ರತ್ಯಯ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಪ್ರಥಮಾ ಬಹುವಚನಾಂತರೂಪ.

**ವೃತ್ತಮ್**—ವೃತು ವರ್ತನೇ ಧಾತು. ಇದಕ್ಕೆ ನಿಷ್ಠಾ ಕ್ತ ಪ್ರತ್ಯಯ. ಕಿತ್ತಾದುದರಿಂದ ಲಘೂಪಧಗುಣ ಬರುವುದಿಲ್ಲ. ಪ್ರತ್ಯಯಸ್ವರ ಬರುತ್ತದೆ.

**ಅವೀವಿಪತ್**—ಟುವೇಪೃ ಕಂಪನೇ ಧಾತು. **ಹೇತುಮತಿ ಚ** (ಪಾ. ಸೂ. ೩-೧-೨೬) ಎಂಬುದರಿಂದ ಣಿಚ್ ಣಿಜಂತದ ಮೇಲೆ ಲುಙ್. ಪ್ರಥಮಪುರುಷಏಕವಚನದಲ್ಲಿ ತಿ ಪ್ರತ್ಯಯ. **ಇತಶ್ಚ** ಎಂಬುದರಿಂದ ಇಕಾರ ಲೋಪ. **ಣಿಶ್ರಿದ್ರುಸ್ರುಭ್ಯಃ**—(ಪಾ. ಸೂ. ೩-೧-೪೮) ಎಂಬುದರಿಂದ ಕರ್ತರಿಯಲ್ಲಿ ಚಙ್. **ಣೌ ಚಙ್ಯುಪಧಾಯಾಃ ಹ್ರಸ್ವಃ** (ಪಾ ಸೂ. ೭-೪-೧) ಎಂಬುದರಿಂದ ಧಾತುವಿನ ಉಪಧೆಗೆ ಹ್ರಸ್ವ. **ಏಚ ಇಗ್ ಹ್ರಸ್ವಾದೇಶೇ** ಎಂಬುದರಿಂದ ಇಕಾರ ಬರುತ್ತದೆ. **ಚಙಿ** (ಪಾ. ಸೂ. ೬-೧-೧೧) ಎಂಬುದರಿಂದ ದ್ವಿತ್ವ. **ಸನ್ವಲ್ಲಘುನಿ ಚಙ್**—(ಪಾ ಸೂ. ೭-೪-೯೩) ಎಂಬುದರಿಂದ ಸನ್ವದ್ಭಾವ ಬರುವುದರಿಂದ **ದೀರ್ಘೋ ಲಘೋಃ** (ಪಾ ಸೂ ೭-೪-೯೪) ಎಂಬುದರಿಂದ ಅಭ್ಯಾಸಕ್ಕೆ ದೀರ್ಘ. **ಣೇರನಿಟಿ** (ಪಾ. ಸೂ. ೬-೪-೫೧) ಎಂಬುದರಿಂದ ಣಿಚಿಗೆ ಲೋಪ. ಅಂಗಕ್ಕೆ ಅಡಾಗಮ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಬೃಹಚ್ಛರೀರಃ**—ಬೃಹತ್ ಶರೀರಃ ಯಸ್ಯ ಸಃ. **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್** (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ವಿಮಿಮಾನಃ**—ಮಾಙ್ ಮಾನೇ ಧಾತು. ಜುಹೋತ್ಯಾದಿ. ಲಡರ್ಥದಲ್ಲಿ ಶಾನಚ್ ಪ್ರತ್ಯಯ. **ಶ್ಲೌ** ಎಂಬುದರಿಂದ ಧಾತುವಿಗೆ ದ್ವಿತ್ವ. **ಭೃಞಾಮಿತ್** (ಪಾ. ಸೂ. ೭-೪-೭೬) ಎಂಬುದರಿಂದ ಅಭ್ಯಾಸಕ್ಕೆ ಇತ್ವ. **ಅಭ್ಯಸ್ತಾನಾಮಾದಿಃ** (ಪಾ. ಸೂ. ೬-೧-೧೮೯) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಪ್ರಾದಿಸಮಾಸವಾದಾಗ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

**ಋಕ್ವಭಿಃ**—ಋಚ ಸ್ತುತೌ ಧಾತು. **ಅನ್ಯೇಭ್ಯೋಽಪಿದೃಶ್ಯಂತೇ** (ಪಾ. ಸೂ. ೩-೨-೭೫) ಎಂಬುದರಿಂದ ಕ್ವನಿಪ್ ಪ್ರತ್ಯಯ. ವ್ಯತ್ಯಯದಿಂದ ಕುತ್ವ ಬರುತ್ತದೆ. ಪ್ರತ್ಯಯ ಪಿತ್ತಾದುದರಿಂದ ಅನುದಾತ್ತವಾಗುತ್ತದೆ

**ಅಕುಮಾರಃ**—ನ ಕುಮಾರಃ ಅಕುಮಾರಃ. **ತತ್ಪುರುಷೇಕುತುಲ್ಯಾ**-(ಪಾ. ಸೂ. ೬-೨-೨) ಎಂಬುದರಿಂದ ನಞ್‌ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಆಹವಮ್**—ಆಙ್ ಉಪಸರ್ಗೇ ಧಾತು. ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ ಧಾತು. ವ್ಯತ್ಯಯದಿಂದ ಭಾವಾರ್ಥದಲ್ಲಿ ಅಚ್ ಪ್ರತ್ಯಯ. ಬಹುಲಂ ಛಂದಸಿ ಎಂಬುದರಿಂದ ಸಂಪ್ರಸಾರಣ. ಪೂರ್ವರೂಪ. ಉಕಾರಕ್ಕೆ ಗುಣ,

ಆವಾದೇಶ. ಸಮಾಸದಲ್ಲಿ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. ಅಥವಾ **ಆಜ್ಜಸೇರಸುಕ್** (ಪಾ. ಸೂ. ೬-೩-೭೩) ಎಂಬುದರಿಂದ ಬರುವ ಆಪ್ ಪ್ರತ್ಯಯವು ವ್ಯತ್ಯಯದಿಂದ ಇಲ್ಲಿಯೂ ಬರುತ್ತದೆ. ||೬ ||

ಇಲ್ಲಿಗೆ ೧೫೫ನೇ ಸೂಕ್ತವು ಮುಗಿದುದು.



## ನೂರ ಐವತ್ತಾನೆರಯ ಸೂಕ್ತವು

**ಭವಾ ಮಿತ್ರ ಇತಿ ಪಂಚರ್ಚಂ ಸಪ್ತದಶಂ ಸೂಕ್ತಂ ದೈರ್ಘತಮಸಂ। ಜಾಗತಂತ್ರಿತ್ಯುಕ್ತತ್ವಾದಿದಮಪಿ ಜಾಗತಂ। ವೈಷ್ಣವಂ ಹೀತ್ಯುಕ್ತತ್ವಾದ್ವೈಷ್ಣವಂ । ಭವ ಪಂಚೇತ್ಯನುಕ್ರಾಂತಂ ॥ ಉಕ್ಥ್ಯೇ ತೃತೀಯಸವನೇಽಚ್ಛಾವಾಕಶಸ್ತ್ರ ಏತತ್ಸೂಕ್ತಂ ವಿನಿಯುಕ್ತಂ। ಉಕ್ಥ್ಯೇ ತು ಹೋತ್ರಕಾಣಾಮಿತಿ ಖಂಡೇ ಸೂತ್ರಿತಂ। ಭವಾ ಮಿತ್ರಃ ಸಂ ವಾಂ ಕರ್ಮಣಾ । ಆ. ೬-೧॥ ಇತಿ ॥ ಸೌಮ್ಯಚರೋರುಭಯತೋ ಘೃತೇನ ಯಷ್ಟವ್ಯಂ ತತ್ರೋಪರಿತನೇ ಘೃತಯಾಗ ಉರು ವಿಷ್ಣೋ ವಿ ಕ್ರಮಸ್ವೇತಿ ಪ್ರಾಕೃತಾ ಯಾಜ್ಯಾ। ದಶಮೇಽಹನಿ ತು ತಸ್ಯಾಃ ಸ್ಥಾನೇ ಭವಾ ಮಿತ್ರ ಇತ್ಯೇಷಾ ಪ್ರಯೋಕ್ತವ್ಯಾ। ದಶಮೇಽಹನೀತಿ ಖಂಡೇ ಸೂತ್ರಿತಂ। ಉರು ವಿಷ್ಣೋ ವಿ ಕ್ರಮಸ್ವೇತಿ ಘೃತಯಾಜ್ಯಾಸ್ಥಾನೇ ಭವಾ ಮಿತ್ರಃ। ಆ. ೮-೧೨। ಇತಿ॥**

ಅನುವಾದವು—**ಭವಾ ಮಿತ್ರ** ಎಂಬ ಈ ಸೂಕ್ತವು ಇಪ್ಪತ್ತೊಂದನೆಯ ಅನುವಾಕದಲ್ಲಿ ಹದಿನೇಳನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಉಚಥ್ಯಪುತ್ರನಾದ ದೀರ್ಘತಮಸ್ ಎಂಬುವನು ಋಷಿಯು- ವಿಷ್ಣುವು ದೇವತೆಯು. ಜಗತೀಛಂದಸ್ಸು. ಅನುಕ್ರಮಣಿಕೆಯಲ್ಲಿ **ಭವ ಪಂಚ** ಎಂದು ಹೇಳಿರುವುದು. ಉಕ್ಥ್ಯವೆಂಬ ಯಾಗದಲ್ಲಿ ತೃತೀಯಸವನಕಾಲದಲ್ಲಿ ಅಚ್ಛಾವಾಕನೆಂಬ ಋತ್ವಿಜನು ಈ ಸೂಕ್ತವನ್ನು ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಉಕ್ಥ್ಯೇ ತು ಹೋತ್ರಕಾಣಾಂ** ಎಂಬ ಖಂಡದ **ಭವಾ ಮಿತ್ರಃ ಸಂ ವಾಂ ಕರ್ಮಣಾ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೬-೧) ಸೋಮಸಂಬಂಧವಾಗಿ ಮಾಡಬೇಕಾದ ಎರಡು ಚರುಹೋಮಗಳಲ್ಲಿಯೂ ತುಪ್ಪವನ್ನು ಉಪಯೋಗಿಸಿ ಹೋಮಮಾಡಬೇಕು. ಈ ಘೃತಯಾಗದಲ್ಲಿ **ಉರು ವಿಷ್ಣೋ ವಿಕ್ರಮಸ್ವ** ಎಂಬ ಋಕ್ಕನ್ನು ಪ್ರಾಕೃತಯಾಜ್ಯಾಮಂತ್ರವನ್ನಾಗಿ ಉಪಯೋಗಿಸಬೇಕೆಂದೂ ಆದರೆ ಹತ್ತನೆಯ ದಿವಸ ಹಿಂದೆ ಹೇಳಿದ **ಉರು ವಿಷ್ಣೋ ವಿಕ್ರಮಸ್ವ** ಎಂಬ ಋಕ್ಕಿಗೆ ಬದಲಾಗಿ **ಭವಾಮಿತ್ರ** ಎಂಬ ಋಕ್ಕನ್ನು ಉಪಯೋಗಿಸಬೇಕೆಂದೂ ಆಶ್ವಲಾಯನಶ್ರೌತಸೂತ್ರದ **ದಶಮೇಽಹನಿ** ಎಂಬ ಖಂಡದ **ಉರು ವಿಷ್ಣೋ ವಿಕ್ರಮಸ್ವೇತಿ ಘೃತಯಾಜ್ಯಾಸ್ಥಾನೇ ಭವಾ ಮಿತ್ರಃ** ಎಂಬ ಸೂತ್ರವು ನಿರ್ದೇಶಿಸುವುದು. (ಆ. ೮-೧೨)

---

॥ ಓಂ ॥

## ಸೂಕ್ತ—೧೫೬

॥ ಮಂಡಲ—೧ ॥ ಅನುವಾಕ—೨೧ ॥ ಸೂಕ್ತ—೧೫೬ ॥
॥ ಅಷ್ಟಕ— ೨ ॥ ಅಧ್ಯಾಯ— ೨ ॥ ವರ್ಗ— ೨೬ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ-೫ ॥
॥ ಋಷಿಃ—ದೀರ್ಘತಮಾ ಔಚಥ್ಯಃ ॥
॥ ದೇವತಾ—ವಿಷ್ಣುಃ ॥
॥ ಛಂದಃ— ಜಗತೀ ॥

ಸಂಹಿತಾಪಾಠಃ

ಭವಾ ಮಿತ್ರೋ ನ ಶೇವ್ಯೋ ಘೃತಾಸುತಿರ್ವಿಭೂತದ್ಯುಮ್ನ ಏವಯಾ ಉ ಸಪ್ರಥಾಃ ।
ಅಧಾ ತೇ ವಿಷ್ಣೋ ವಿದುಷಾ ಚಿದರ್ಧ್ಯಃ ಸ್ತೋಮೋ ಯಜ್ಞಶ್ಚ ರಾಧ್ಯೋ ಹವಿಷ್ಮತಾ ॥ ೧ ॥

ಪದಪಾಠಃ

ಭವ । ಮಿತ್ರಃ । ನ । ಶೇವ್ಯಃ । ಘೃತಽಆಸುತಿಃ । ವಿಭೂತಽದ್ಯುಮ್ನಃ । ಏವಽಯಾಃ । ಊಂ ಇತಿ । ಸಽಪ್ರಥಾಃ ।
ಅಧ । ತೇ । ವಿಷ್ಣೋ ಇತಿ । ವಿದುಷಾ । ಚಿತ್ । ಅರ್ಧ್ಯಃ । ಸ್ತೋಮಃ । ಯಜ್ಞಃ । ಚ । ರಾಧ್ಯಃ । ಹವಿಷ್ಮತಾ ॥ ೧ ॥

॥ ಸಾಯಣಭಾಷ್ಯಂ ॥

ಹೇ ವಿಷ್ಣೋ ಮಿತ್ರೋ ನ । ಮಿತೇರ್ದುಃಖಾತ್ ತ್ರಾತಾ ಸಖಾ ಆದಿತ್ಯೋ ವಾ ಮಿತ್ರಃ । ಪ್ರಮೀತೇಸ್ತ್ರಾಯತ ಇತಿ ನಿರುಕ್ತಂ । ೧೦-೨೧ । ತದ್ವತ್ ಶೇವ್ಯಃ ಸುಖೇ ಸಾಧುಃ ಸುಖಕರ್ತಾ ಘೃತಾಸುತಿಃ

ಘೃತಮುದಕಮಾಸೂಯತೇ ಯೇನ ಸ ತಾದೃಶಃ । ಯದ್ವಾ । ಘೃತಮಾಜ್ಯಮಾಭಿಮುಖ್ಯೇನ ನೀಯತೇ ಯಸ್ಮೈ ಸ ತಾದೃಶಃ । ವಿಭೂತದ್ಯುಮ್ನಃ ಪ್ರಭೂತಯಶಾಃ ಪ್ರಭೂತಾನ್ನೋ ವಾ । ಏವಯಾ ರಕ್ಷಣಸ್ಯ ಮಿಶ್ರಯಿತಾ ಪ್ರಾಪಯಿತಾ । ಸಪ್ರಥಾಃ ಸರ್ವತಃ ಪೃಥುಃ । ಪ್ರತಿವಿಶೇಷಣಂ ನೋ ಭವೇತಿ ಸಂಬಂಧಃ ॥ ದ್ವ್ಯಚೋಽತಸ್ತಿಙ ಇತಿ ದೀರ್ಘಃ । ಉ ಇತಿ ಪಾದಪೂರಣಃ ॥ ಹೇ ವಿಷ್ಣೋ ತ್ವಂ ಯಸ್ಮಾದೀದೃಶೋ ಭವಸಿ ಅಧಾಸ್ಮಾತ್ತೇ ತವ ಸ್ತೋಮಃ ಸ್ತೋತ್ರವಿಶೇಷೋ ವಿದುಷಾ ತ್ವನ್ಮಾಹಾತ್ಮ್ಯವೇದಿತ್ರಾ ಯಜಮಾನೇನಾರ್ಧ್ಯಃ ಪುನಃ ಪುನಃ ಪ್ರವರ್ಧನಾರ್ಹಃ । ಏಕವಾರಕರಣೇ ನ ಸಂಪೂರ್ಯತ ಇತ್ಯರ್ಥಃ । ತಥಾ ತೇ ಯಜ್ಞಶ್ಚ ಹವಿಷ್ಮತಾ ತೇನ ಯಜಮಾನೇನ ರಾಧ್ಯಃ ಸಮಾರಾಧನೀಯಃ । ಯದ್ವಾ । ವಿದುಷಾ ಹೋತ್ರಾ ಸ್ತೋಮೋ ರಾಧ್ಯೋ ಹವಿಷ್ಮತಾ ಯಜ್ಞಶ್ಚ ರಾಧ್ಯಃ ॥

ಪ್ರತಿಪದಾರ್ಥ

(ಎಲೈ ವಿಷ್ಣುವೇ) **ಮಿತ್ರೋ ನ**—ಸ್ನೇಹಿತನಂತೆ ಅಥವಾ ಮಿತ್ರರೂಪನಾದ ಆದಿತ್ಯನಂತೆ । **ಶೇವ್ಯಃ**—ಸುಖವನ್ನುಂಟುಮಾಡುವವನಾಗಿಯೂ । **ಘೃತಾಸುತಿಃ**—ಆಜ್ಯಾಹುತಿಯನ್ನು ಸ್ವೀಕರಿಸುವವನಾಗಿಯೂ । **ವಿಭೂತದ್ಯುಮ್ನಃ**—ಪ್ರಭೂತವಾದ ಯಶಸ್ಸುಳ್ಳವನಾಗಿಯೂ ಅಥವಾ ಪ್ರಭೂತವಾದ ಅನ್ನವುಳ್ಳವನಾಗಿಯೂ । **ಏವಯಾಃ**-ರಕ್ಷಣೆಯನ್ನು ಕೊಡುವವನಾಗಿಯೂ । **ಸಪ್ರಥಾಃ**—ಸುತ್ತಲೂ ಸುಗಮ್ಯನಾಗಿಯೂ । **ಭವ**—(ನಮ್ಮ ವಿಷಯದಲ್ಲಿ) ಆಗಿರು । **ವಿಷ್ಣೋ**—ಎಲೈ ವಿಷ್ಣುವೇ । **ಅಧ**—ನೀನು ಈ ಗುಣಗಳಿಂದ ಪೂರಿತನಾಗಿರುವುದರಿಂದಲೇ । **ತೇ**—ನಿನ್ನ। **ಸ್ತೋಮಃ**—ವಿಶೇಷವಾದ ಸ್ತೋತ್ರವು । **ವಿದುಷಾ**—(ನಿನ್ನ ಮಾಹಾತ್ಮ್ಯವನ್ನು) ತಿಳಿದಿರುವ ಯಜಮಾನನಿಂದ । **ಅರ್ಧ್ಯಃ**—ಪುನಃ ಪುನಃ ಪಠಿತವಾಗತಕ್ಕದ್ದಾಗಿದೆ । **ಯಜ್ಞಶ್ಚ**—(ನಿನ್ನನ್ನು ಉದ್ದೇಶಿಸಿದ) ಯಾಗವೂ ಕೂಡ । **ಹವಿಷ್ಮತಾ**—ಹವಿಸ್ಸನ್ನು ಹೊಂದಿರುವ ಯಜಮಾನನಿಂದ। **ರಾಧ್ಯಃ**—ನೆರವೇರಿಸಲ್ಪಡತಕ್ಕದ್ದಾಗಿದೆ.

ಭಾವಾರ್ಥ

ಎಲೈ ವಿಷ್ಣುವೇ, ನಮಗೆ ನೀನು ಸ್ನೇಹಿತನಂತೆ ಸುಖವನ್ನುಂಟುಮಾಡುವವನಾಗಿಯೂ, ಆಜ್ಯಾಹುತಿಯನ್ನು ಸ್ವೀಕರಿಸುವವನಾಗಿಯೂ, ಪ್ರಭೂತವಾದ ಯಶಸ್ಸುಳ್ಳವನಾಗಿಯೂ, ರಕ್ಷಣೆಯನ್ನು ಕೊಡುವವನಾಗಿಯೂ, ಸುತ್ತಲೂ ಸುಗಮ್ಯನಾಗಿಯೂ ಆಗಿರು ಎಲೈ ವಿಷ್ಣುವೇ, ನೀನು ಈ ಗುಣಗಳಿಂದ ಪೂರಿತನಾಗಿರುವುದರಿಂದಲೇ ನಿನ್ನ ವಿಶೇಷವಾದ ಸ್ತೋತ್ರವು ನಿನ್ನ ಮಾಹಾತ್ಮ್ಯವನ್ನು ತಿಳಿದಿರುವ ಯಜಮಾನನಿಂದ ಪುನಃ ಪುನಃ ಪಠಿತವಾಗತಕ್ಕದ್ದಾಗಿದೆ. ಮತ್ತು ನಿನ್ನನ್ನು ಉದ್ದೇಶಿಸಿದ ಯಾಗವೂ ಕೂಡ ಹವಿಸ್ಸನ್ನು ಹೊಂದಿರುವ ಯಜಮಾನನಿಂದ ನೆರವೇರಿಸಲ್ಪಡತಕ್ಕದ್ದಾಗಿದೆ.

English Translation

Be (to us), Vishnu, like a friend, the giver of happiness, the accepter of oblations, abounding with food, the granter of protection, and every way accessible; on which account your praise is to be repeatedly recited by the wise, and your worship to be celebrated by the offerer of oblations.

### ವಿಶೇಷವಿಷಯಗಳು

ಈ ಋಕ್ಕಿನಲ್ಲಿ ವಿಷ್ಣುವನ್ನು ಮಿತ್ರನಿಗೆ ಹೋಲಿಸಿದೆ. ಮಿತ್ರಶಬ್ದಕ್ಕೆ ಇಲ್ಲಿ ಎರಡು ವಿಧವಾದ ಅರ್ಥವನ್ನು ಮಾಡಿದೆ. ಲೌಕಿಕವಾದ ಸಖನೆಂದಾಗಲಿ ಅಥವಾ ಆ ಸಖನ ಗುಣಗಳಿರತಕ್ಕ ಆದಿತ್ಯರೂಪನಾದ ಮಿತ್ರನೆಂದಾಗಲಿ ಅರ್ಥವಾಗಬಹುದು. ಸಖನಿಂದ ಸುಖಸಂತೋಷಾದಿಗಳು ಯಾವ ರೀತಿ ಲಭಿಸುವುವೋ ಆದಿತ್ಯರೂಪನಾದ ಮಿತ್ರನಿಂದಲೂ ಅದೇ ಉಪಕಾರಗಳು ಲೋಕಕ್ಕೆ ಲಭಿಸುವುವು ಎಂದು ತೋರಿಸುವಂತೆ ನಿರುಕ್ತಕಾರರು ಈ ಶಬ್ದಕ್ಕೆ ನಿರ್ವಚನವನ್ನು ತೋರಿಸಿದ್ದಾರೆ—

**ಮಿತ್ರಃ-ಮಿತ್ರಃ ಪ್ರಮೀತೇಸ್ತ್ರಾಯತೇ । ಸಂಮಿನ್ವಾನೋ ದ್ರವತೀತಿ ವಾ । ಮೇದಯತೇರ್ವಾ ।** ನಾಶದಿಂದ ರಕ್ಷಿಸುವುದರಿಂದಾಗಲಿ, ತತ್ತ್ವಗಳನ್ನೆಲ್ಲಾ ಅಳೆಯುತ್ತಾ (ಪರಿಶೀಲಿಸುತ್ತಾ) ಚಲಿಸುವುದರಿಂದಾಗಲಿ ಅಥವಾ ಜಗತ್ತಿಗೆ ಆಹಾರಾದಿಗಳನ್ನು ಕೊಟ್ಟು ಪೋಷಿಸಿ ಜಗತ್ತನ್ನು ಪುಷ್ಟವಾದುದನ್ನಾಗಿ ಮಾಡುವುದರಿಂದಾಗಲಿ ಮಿತ್ರನೆಂಬ ಹೆಸರೆಂದು ಯಾಸ್ಕರು ವಿವರಿಸಿದ್ದಾರೆ. (ನಿ. ೧೦-೨೧) ಮತ್ತು,

**ಮಿತ್ರೋ ಜನಾನ್ಯಾತಯತಿ ಬ್ರುವಾಣೋ ಮಿತ್ರೋ ದಾಧಾರ ಪೃಥಿವೀಮುತ ದ್ಯಾಂ ।**
**ಮಿತ್ರಃ ಕೃಷ್ಟೀರನಿಮಿಷಾಭಿ ಚಷ್ಟೇ ಮಿತ್ರಾಯ ಹವ್ಯಂ ಘೃತವಜ್ಜುಹೋತ ॥**

(ಋ. ಸಂ. ೩-೫೯-೧)

ಎಂಬ ಋಕ್ಕನ್ನುದಹರಿಸಿ ಮಿತ್ರನ ಹಿತಕರವಾದ ಮಾರ್ಗದರ್ಶಿತ್ವವನ್ನೂ, ದ್ಯಾವಾಪೃಥಿವಿಗಳ ಧಾರಣಕ್ರಮವನ್ನೂ, ಯಾವಾಗಲೂ ಜಾಗರೂಕನಾಗಿ ತನಗೆ ಸೇರಿದ ಪ್ರಜೆಗಳನ್ನು ರಕ್ಷಿಸುವುದನ್ನೂ ತಿಳಿಸಿ ಮಿತ್ರನಲ್ಲಿರುವ ಆಪ್ತಮಿತ್ರನ ಗುಣಗಳನ್ನು ವಿವರಿಸಿದೆ. ಮತ್ತು ಪ್ರಕೃತವಾದ ಋಕ್ಕಿನಲ್ಲಿಯೂ ಸಹ **ಶೇವ್ಯಃ** ಇತ್ಯಾದಿವಿಶೇಷಣಗಳಿಂದ ಮಿತ್ರನ ಸ್ವರೂಪವನ್ನು ವರ್ಣಿಸಿದೆ.

**ಶೇವ್ಯಃ—ಸಾಧುಃ ಸುಖಕರ್ತಾ ।** ಸುಖಕಾರಿಯು. ಶೇವವೆಂದರೆ ಸುಖವೆಂದರ್ಥ. ಯಜ್ಞಫಲವಾದ ಸುಖವನ್ನು ನಿರ್ದೇಶಿಸುವ ಕಾಲದಲ್ಲಿ ಸಾಧಾರಣವಾಗಿ ಈ ಪದದ ಪ್ರಯೋಗವಿದೆ.

**ಯಜ್ಞಸಾಹಂ ದುವ ಇಷೇಽಗ್ನಿಂ ಪೂರ್ವಸ್ಯ ಶೇವಸ್ಯ । ಅದ್ರೇಃ ಸೂನುಮಾಯುಮಾಹುಃ ॥**

(ಋ. ಸಂ. ೧೦-೨೦-೭)

ಎಂಬಲ್ಲಿ ಉತ್ಕೃಷ್ಟವಾದುದೂ ಯಜ್ಞಫಲರೂಪವಾದುದೂ ಆದ **ಸುಖ**ಪರ್ಯಾಯವಾಗಿ ಶೇವಪದವನ್ನುಪಯೋಗಿಸಿದೆ. ಪ್ರಕೃತವಾದ ಋಕ್ಕಿನಲ್ಲಿ ಮಿತ್ರನ ಸ್ವರೂಪದ ವರ್ಣನೆಯನ್ನು ಮಾಡುವಾಗ ಮಿತ್ರನು ಇಷ್ಟು ಉತ್ತಮವಾದ ಸುಖವನ್ನುಂಟುಮಾಡುವವನೆಂದು ಹೇಳಿದೆ. ಮತ್ತು ವಿಷ್ಣುವನ್ನೂ ಇಂತಹ ಮಿತ್ರನಾಗಬೇಕೆಂದು ಪ್ರಾರ್ಥಿಸಿದೆ.

**ಘೃತಾಸುತಿಂ**—ಘೃತರೂಪವಾದ ಆಸುತಿಯೆಂದರ್ಥ. ಆಸುತಿಯೆಂದರೆ ರಸರೂಪವಾದ ಅನ್ನವೆಂದಾಗುತ್ತದೆ. ಕ್ಷೀರಾದಿಗಳೂ, ಆಹುತಿರೂಪವಾದ ಸೋಮರಸವೂ ಅಥವಾ ಘೃತರೂಪವಾದ ಆಹುತಿಯೂ ಆಸುತಿಶಬ್ದದಿಂದ ನಿರ್ದೇಶಿಸಲ್ಪಡುತ್ತದೆ

**ತ್ವೇ ಅಗ್ನೇ ವಿಶ್ವೇ ಅಮೃತಾಸೋ ಅದ್ರುಹ ಆಸಾ ದೇವಾ ಹವಿರದಂತ್ಯಾಹುತಿಂ ।**
**ತ್ವಯಾ ಮರ್ತಾಸಃ ಸ್ವದಂತ ಆಸುತಿಂ ತ್ವಂ ಗರ್ಭೋ ವೀರುಧಾಂ ಜಜ್ಞಿಷೇ ಶುಚಿಃ ॥**
(ಋ. ಸಂ. ೨-೧-೧೪)

ಎಂಬಲ್ಲಿ ಅಗ್ನಿಯು ಅನುಗ್ರಹದಿಂದ ಮಾನವರು ರಸರೂಪವಾದ ಕ್ಷೀರಾದ್ಯನ್ನಗಳನ್ನು ಭೋಗಿಸುತ್ತಾರೆ ಎಂದು ಹೇಳುವಾಗ ಕ್ಷೀರಾದಿಗಳ ಪರ್ಯಾಯವಾಗಿ **ಆಸುತಿ** ಶಬ್ದವನ್ನು ಹೇಳಿದೆ. ಪ್ರಕೃತವಾದ ಋಕ್ಕಿನಲ್ಲಿ **ಘೃತರೂಪವಾದ ಆಸುತಿ**ಯೆಂದರ್ಥ.

**ವಿಭೂತದ್ಯುಮ್ನಃ—ಪ್ರಭೂತಯಶಾಃ ಪ್ರಭೂತಾನ್ನೋ ವಾ ।** ಪ್ರಭೂತವಾದ ಯಶಸ್ಸುಳ್ಳವನು ಅಥವಾ ಪ್ರಭೂತವಾದ ಅನ್ನವುಳ್ಳವನೆಂದರ್ಥ. **ದ್ಯುಮ್ನ**ಶಬ್ದವನ್ನು ನಿರುಕ್ತಕಾರರು **ಧನನಾಮ**ಗಳಲ್ಲಿ ಸೇರಿಸಿದ್ದಾರೆ. (ನಿ. ೩-೯). ಅಲ್ಲದೇ ಪುನಃ ಈ ಪದಕ್ಕೆ ನಿರ್ವಚನವನ್ನು ಹೇಳುತ್ತಾ, **ದ್ಯುಮ್ನಂ ದ್ಯೋತತೇರ್ಯಶೋ ವಾ ಅನ್ನಂ ವಾ** (ನಿ ೫-೫) ಪ್ರಕಾಶಮಾನವಾಗು ಎಂಬರ್ಥವನ್ನು ಕೊಡುವ ದ್ಯುತ್ ಧಾತುವಿನಿಂದ ನಿಷ್ಪನ್ನವಾಗಿ **ಯಶಸ್ಸೆಂ**ದಾಗಲಿ ಅಥವಾ **ಅನ್ನ**ವೆಂದಾಗಲಿ ಅರ್ಥವಾಗುತ್ತದೆಂದು ತಿಳಿಸಿ,

**ಶತಂ ತೇ ಶಿಪ್ರಿನ್ನೂತಯಃ ಸುದಾಸೇ ಸಹಸ್ರಂ ಶಂಸಾ ಉತ ರಾತಿರಸ್ತು ।**
**ಜಹಿ ವಧರ್ವನುಷೋ ಮರ್ತ್ಯಸ್ಯಾಸ್ಮೇ ದ್ಯುಮ್ನಮಧಿ ರತ್ನಂ ಚ ಧೇಹಿ ॥**
(ಋ. ಸಂ, ೭-೨೫-೩)

ಎಂಬ ಋಕ್ಕನ್ನುದಹರಿಸಿ ನಮಗೆ **ದ್ಯುಮ್ನ**ವನ್ನೂ ರತ್ನವನ್ನೂ ಕೊಡು ಎಂದು ಪ್ರಾರ್ಥಿಸುವಾಗ **ರತ್ನ**ಶಬ್ದದಿಂದ ಧನವು ಸೂಚಿತವಾಗಿ ದ್ಯುಮ್ನನೆಂದರೆ ಯಶಸ್ಸು ಅಥವಾ ಅನ್ನವೆಂದರ್ಥವಾಗುತ್ತದೆಂದು ತೋರಿಸಿದ್ದಾರೆ. (ನಿ. ೫-೫) ಅದರಂತೆಯೇ ಪ್ರಕೃತವಾದ ಋಕ್ಕಿನಲ್ಲಿಯೂ ಪ್ರಭೂತವಾದ ಯಶಸ್ಸುಳ್ಳವನು ಅಥವಾ ಅನ್ನವುಳ್ಳವನೆಂದರ್ಥ.

**ಏವಯಾಃ**—ಈ ಪದವು ಸಾಧಾರಣವಾಗಿ ಮರುತ್ತುಗಳಿಗೆ ವಿಶೇಷಣವಾಗಿರುತ್ತದೆ- **ಏವೈಃ ಸಖಿಭಿಃ—ಗಮನಶೀಲೈರ್ಮಿತ್ರಭೂತೈರ್ಮರುದ್ಭಿಃ** ಎಂದು ಅನೇಕಕಡೆಗಳಲ್ಲಿ ಮರುತ್ತುಗಳ ಸಂಚಾರಸ್ವಭಾವವನ್ನೂ ಯಾವಾಗಲೂ ಒಡಗೂಡಿ ಇರುವುದನ್ನೂ ತಿಳಿಸುತ್ತದೆ- ಮೂಲಧಾತುವಿಗೆ ಸಂಚಾರಾರ್ಥವಿದ್ದರೂ ಪ್ರಕೃತವಾದ ಋಕ್ಕಿನಲ್ಲಿ **ಋಶ್ರಯಿತಾ** ಯೋಜಿಸತಕ್ಕವನು ಎಂದರೆ ರಕ್ಷಣೆಯನ್ನು ಒದಗಿಸಿಕೊಡುವವನು ಎಂದು ತಾತ್ಪರ್ಯವಾಗುತ್ತದೆ.

**ಸಪ್ರಥಾಃ—ಸರ್ವತಃ ಪೃಥುಃ ।** ಸುತ್ತಲೂ ವಿಸ್ತೃತವಾಗಿ ಹರಡಿರುವುದು ಎಂದು ನಿರುಕ್ತಕಾರರು ಈ ಪದದ ಮೂಲಾರ್ಥವನ್ನು ವಿವರಿಸಿ (ನಿ. ೬-೮).

**ತ್ವಮಗ್ನೇ ಸಪ್ರಥಾ ಅಸಿ ಜುಷ್ಟೋ ಹೋತಾ ವರೇಣ್ಯಃ । ತ್ವಯಾ ಯಜ್ಞಂ ವಿ ತನ್ವತೇ ॥**
(ಋ. ಸಂ. ೫-೧೩-೪)

ಎಂಬ ಋಕ್ಕನ್ನುದಹರಿಸಿ ಅಲ್ಲಿ ಈ ಪದಕ್ಕೆ ಉಚಿತವಾದ ಅರ್ಥವನ್ನು ಮೇಲೆ ಹೇಳಿದಂತೆ ತೋರಿಸಿದ್ದಾರೆ. ಆದರೆ ಪ್ರಕೃತವಾದ ಋಕ್ಕಿನಲ್ಲಿ ಆ ಅರ್ಥವು ಕೊಂಚ ವಿಸ್ತೃತವಾಗಿದೆ. ನಮ್ಮ ಸುತ್ತಲೂ ಬೃಹಚ್ಛರೀರನಾಗಿರು ಎಂಬುದರಲ್ಲಿ ತಾತ್ಪರ್ಯವೆಂದು ಭಾಷ್ಯಕಾರರು ವಿವರಿಸಿದ್ದಾರೆ.

**ಅರ್ಧ್ಯಃ**—ಪುನಃ ಪುನಃ ಪ್ರವರ್ಧನಾರ್ಹಃ। ಏಕವಾರಕರಣೇ ನ ಸಂಪೂರ್ಯತ ಇತ್ಯರ್ಥಃ। ನಿನ್ನನ್ನು ಸ್ತುತಿಸತಕ್ಕ ಸ್ತೋಮರೂಪವಾದ ಸ್ತೋತ್ರವು ಪದೇ ಪದೇ ಪಠಿಸಿ ನಿನ್ನ ಗುಣಗಾನವನ್ನು ಮಾಡತಕ್ಕದ್ದಾಗಿದೆ. ಏಕವಾರ ಪಠಿಸಿ ಮುಗಿಸತಕ್ಕದ್ದಲ್ಲ ಎಂದರ್ಥ.

ರಾಧ್ಯಃ—**ಸಮಾರಾಧನೀಯಃ**। ವೈಭವದಿಂದ ನೆರವೇರಿಸಲ್ಪಡತಕ್ಕದ್ದು.

### ವ್ಯಾಕರಣಪ್ರಕ್ರಿಯಾ

**ಭವ**—ಭೂ ಸತ್ತಾಯಾಂ ಧಾತು. ಲೋಟ್ ಮಧ್ಯಮಪುರುಷಏಕವಚನಾಂತರೂಪ. **ದ್ವ್ಯಚೋತಸ್ತಿಙಃ** (ಪಾ. ಸೂ. ೬-೩-೧೩೫) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ. ಪಾದಾದಿಯಲ್ಲಿರುವುದರಿಂದ ನಿಘಾತ ಸ್ವರ ಬರುವುದಿಲ್ಲ. ಶಪ್ ಪಿತ್ತಾದುದರಿಂದ ಧಾತುಸ್ವರ ಉಳಿಯುತ್ತದೆ.

ಮಿತ್ರಃ—ಞಿಮಿದಾ ಸ್ನೇಹನೇ ಧಾತು. **ಅಮಿಚಿಮಿ**—(ಉ. ಸೂ. ೪-೬೦-೩) ಎಂಬುದರಿಂದ ಕ್ತ್ರ ಪ್ರತ್ಯಯ. ಕಿತ್ತಾದುದರಿಂದ ಲಘೂಪಧಗುಣ ಬರುವುದಿಲ್ಲ ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಶೇವ್ಯಃ**—ಶೇವೇ ಸಾಧುಃ ಶೇವ್ಯಃ. ಸಾಧ್ವರ್ಥದಲ್ಲಿ ಯತ್ ಪ್ರತ್ಯಯ. **ಯತೋಽನಾವಃ** (ಪಾ. ಸೂ. ೬-೧-೨೧೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಘೃತಾಸುತಿಃ**—ಘೃತಂ ಆಸುತಿಃ ಯೇನ ಸಃ ಘೃತಾಸುತಿಃ ಬಹುವ್ರೀಹಿಯಲ್ಲಿ ಪೂರ್ವಪದಪ್ರಕೃತಿಸ್ವರ ಬರುತ್ತದೆ. ವಿಭೂತದ್ಯುಮ್ನಃ ಎಂಬಲ್ಲಿಯೂ ಬಹುವ್ರೀಹಿಸಮಾಸವಾದುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಸಪ್ರಥಾಃ**—ಪ್ರಥ ಪ್ರಖ್ಯಾನೇ ಧಾತು. **ಸರ್ವಧಾತುಭ್ಯಃ ಅಸುನ್** ಎಂಬುದರಿಂದ ಅಸುನ್ ಪ್ರತ್ಯಯ. ಪ್ರಥಸಾ ಸಹ ವರ್ತತೇ ಇತಿ ಸಪ್ರಥಾಃ **ತೇನ ಸಹೇತಿ ತುಲ್ಯಯೋಗೇ** (ಪಾ. ಸೂ. ೨-೨-೨೮) ಎಂಬುದರಿಂದ ಸಮಾಸ. **ವೋಪಸರ್ಜನಸ್ಯ** (ಪಾ. ಸೂ. ೬-೨-೮೨) ಎಂಬುದರಿಂದ ಸಹ ಎಂಬುದಕ್ಕೆ ಸಮಾಸದಲ್ಲಿ ಸ ಭಾವ.

**ಅಧಾ**—ಅಧ ಎಂಬಲ್ಲಿ ಛಾಂದಸವಾಗಿ ವರ್ಣವಿಕಾರ ಬಂದಿದೆ. **ನಿಪಾತಸ್ಯ ಚ** (ಪಾ ಸೂ. ೬-೩-೧೩೬) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

**ವಿದುಷಾ**—ವಿದ ಜ್ಞಾನೇ ಧಾತು. ಇದಕ್ಕೆ ಲಟ್ ಬಂದಾಗ ಅದಕ್ಕೆ ಶತ್ರಾದೇಶ. **ವಿದೇಃ ಶತುರ್ವಸುಃ** (ಪಾ. ಸೂ. ೭-೧-೩೬) ಎಂಬುದರಿಂದ ಶತೃವಿಗೆ ವಸು ಆದೇಶ. ತೃತೀಯಾಏಕವಚನ ಪರವಾದಾಗ **ವಸೋಃ ಸಂಪ್ರಸಾರಣಮ್** ಎಂಬುದರಿಂದ ಸಂಪ್ರಸಾರಣ ಪೂರ್ವರೂಪ.

ಅರ್ಧ್ಯಃ—ಋಧು ವೃದ್ಧೌ ಧಾತು. ಇದಕ್ಕೆ ಅರ್ಹಾರ್ಥದಲ್ಲಿ ಯತ್ ಬಂದಾಗ ಧಾತುವಿನ ಲಘೂಪಧೆಗೆ ಗುಣ. ಆದ್ಯುದಾತ್ತಸ್ವರ ಬರುತ್ತದೆ. ಹೀಗೆಯೇ ರಾಧ ಸಂಸಿದ್ಧೌ ಧಾತು ಇದಕ್ಕೂ ಯತ್ ಬಂದಾಗ ಆದ್ಯುದಾತ್ತಸ್ವರ ಬರುತ್ತದೆ. ॥ ೧ ॥

——— :O: ———

ಸಂಹಿತಾಪಾಠಃ

ಯಃ ಪೂರ್ವ್ಯಾಯ ವೇಧಸೇ ನವೀಯಸೇ ಸುಮಜ್ಜಾನಯೇ ವಿಷ್ಣವೇ ದದಾಶತಿ ।

ಯೋ ಜಾತಮಸ್ಯ ಮಹತೋ ಮಹಿ ಬ್ರವತ್ಸೇದು ಶ್ರವೋಭಿರ್ಯುಜ್ಯಂ ಚಿದಭ್ಯಸತ್ ॥ ೨ ॥

। ಪದಪಾಠಃ ।

ಯಃ । ಪೂರ್ವ್ಯಾಯ । ವೇಧಸೇ । ನವೀಯಸೇ । ಸುಮತ್ಽಜಾನಯೇ । ವಿಷ್ಣವೇ । ದದಾಶತಿ ।
ಯಃ । ಜಾತಂ । ಅಸ್ಯ । ಮಹತಃ । ಮಹಿ । ಬ್ರವತ್ । ಸಃ । ಇತ್ । ಊಂ ಇತಿ । ಶ್ರವಃಽಭಿಃ ।
ಯುಜ್ಯಂ । ಚಿತ್ । ಅಭಿ । ಅಸತ್ ॥ ೨ ॥

ಸಾಯಣಭಾಷ್ಯಂ

ಯಃ ಯೋ ಮರ್ತ್ಯಃ ಪೂರ್ವ್ಯಾಯ ಪೂರ್ವಕಾಲೀನಾಯ । ನಿತ್ಯಾಯೇತ್ಯರ್ಥಃ । ವೇಧಸೇ ವಿವಿಧಜಗತ್ಕರ್ತ್ರೇ ನವೀಯಸೇ ನಿತ್ಯನೂತನಾಯ । ಅತ್ಯಂತರಮಣೀಯಾಯೇತ್ಯರ್ಥಃ । ಸ್ತುತ್ಯಾಯ ವಾ ಸುಮಜ್ಜಾನಯೇ ಸ್ವಯಮೇವೋತ್ಪನ್ನಾಯ ॥ ಜನೇರೌಣಾದಿಕ ಇಣ್ ॥ ಸುಮತ್ಸ್ವಯಮಿತ್ಯರ್ಥಃ । ನಿ. ೬-೨೨ । ಇತಿ ಯಾಸ್ಕಃ । ಯದ್ವಾ । ಸುತರಾಂ ಮಾದಯತೀತಿ ಸುಮತ್ । ತಾದೃಶೀ ಜಾಯಾ ಯಸ್ಯ ಸ ತಥೋಕ್ತಃ। ತಸ್ಮೈ ಸರ್ವಜಗನ್ಮಾದನಶೀಲಶ್ರೀಪತಯ ಇತ್ಯರ್ಥಃ ॥ ಬಹುವ್ರೀಹೌ ಜಾಯಾಯಾ ನಿಙ್॥ ಪಾ. ೫-೪-೧೩೪. ॥ ಇತಿ ನಿಙಾದೇಶಃ ಸಮಾಸಾಂತಃ । ವಲಿ ಲೋಪಃ ॥ ಉಕ್ತಗುಣಕಾಯ ವಿಷ್ಣವೇ ವ್ಯಾಪಕಾಯ ದದಾಶತಿ ಹವಿರಾದಿಕಂ ದದಾತಿ । ಕಿಂಚಾಸ್ಯ ವಿಷ್ಣೋರ್ಮಹತೋ ಮಹಾನುಭಾವಸ್ಯ ಮಹಿ ಮಹತ್ ಪೂಜ್ಯಂ ಜಾತಂ ಜನ್ಮೋತ್ಪತ್ತಿಂ ಹಿರಣ್ಯಗರ್ಭಾದಿರೂಪಂ ಜನ್ಮ ಬ್ರವತ್ ಬ್ರೂಯಾತ್ ॥ ಬ್ರವೀತೇರ್ಲೇಟ್ಯಡಾಗಮಃ ॥ ಸಂಕೀರ್ತಯೇತ್ । ಸೇದು । ಉಶಬ್ದೋಽಪಿಶಬ್ದಾರ್ಥಃ । ಸೋಽಪಿ ದಾತಾ ಸ್ತೋತಾ ಚ ಶ್ರವೋಭಿರನ್ನೈಃ ಕೀರ್ತಿಭಿರ್ವಾ ಯುಕ್ತಃ ಸನ್ ಯುಜ್ಯಂ ಚಿತ್ ಸರ್ವೈರ್ಗಂತವ್ಯಮೇವ ತತ್ಪದಮಭ್ಯಾಭಿಮುಖ್ಯೇನಾಸತ್ । ಗಚ್ಛತಿ । ಪ್ರಾಪ್ನೋತಿ ॥

ಪ್ರತಿಪದಾರ್ಥ

ಯಃ—ಯಾವ ಮಾನವನು । ಪೂರ್ವ್ಯಾಯ—ಪ್ರಾಚೀನನಾಗಿಯೂ ಎಂದರೆ ನಿತ್ಯನಾಗಿಯೂ । ವೇಧಸೇ—ಜಗತ್ತನ್ನು ಸೃಷ್ಟಿಸುವವನಾಗಿಯೂ । ನವೀಯಸೇ—ನೂತನನಾಗಿರುವುದರಿಂದ ರಮಣೀಯನಾಗಿಯೂ।

**ಸುಮಜ್ಜಾನಯೇ**—ತಾನಾಗಿಯೇ ಉತ್ಪನ್ನನಾಗಿಯೂ ಅಥವಾ ಸಕಲಜಗತ್ತಿಗೂ ಸಂತೋಷವನ್ನುಂಟುಮಾಡುವ ಲಕ್ಷ್ಮಿಗೆ ಪತಿಯಾಗಿಯೂ ಇರುವ । **ವಿಷ್ಣವೇ**—ಸರ್ವವ್ಯಾಪಕನಾದ ವಿಷ್ಣುವಿಗೆ । **ದದಾಶತಿ**—(ಹವಿರಾದಿಗಳನ್ನು) ಅರ್ಪಿಸುತ್ತಾನೆಯೋ । (ಮತ್ತು) **ಮಹತಃ ಅಸ್ಯ**—ಮಹಾತ್ಮನಾದ ಈ ವಿಷ್ಣುವಿನ । **ಮಹಿ**—ಅದ್ಭುತವಾದ ಮತ್ತು ಪೂಜ್ಯವಾದ । **ಜಾತಂ**—ಹಿರಣ್ಯಗರ್ಭಾದಿರೂಪವಾದ ಜನ್ಮವನ್ನು । **ಬ್ರವತ್**—ಹೊಗಳುತ್ತಾನೆಯೋ । **ಸೇದು**—(ಹೀಗೆ ದಾತೃವೂ ಸ್ತೋತೃವೂ ಆಗಿರುವ) ಅವನೂ ಕೂಡ । **ಶ್ರವೋಭಿಃ**—ಅನ್ನಗಳಿಂದ ಅಥವಾ ಕೀರ್ತಿಗಳಿಂದ ಕೂಡಿಕೊಂಡು । **ಯುಜ್ಯಂಚಿತ್**—(ಎಲ್ಲರೂ) ಹೋಗಿಸೇರಬೇಕಾದ ಆ ವಿಷ್ಣುವಿನ ಸಾನ್ನಿಧ್ಯವನ್ನು । **ಅಭಿ**—ಉಪಲಕ್ಷಿಸಿ । **ಅಸತ್**—ಹೋಗಿ ಸೇರಿಕೊಳ್ಳುತ್ತಾನೆ.

ಭಾವಾರ್ಥಃ

ಯಾವ ಮಾನವನು ನಿತ್ಯನಾಗಿಯೂ, ಜಗತ್ತನ್ನು ಸೃಷ್ಟಿಸುವವನಾಗಿಯೂ, ರಮಣೀಯನಾಗಿಯೂ, ತಾನಾಗಿಯೇ ಉತ್ಪನ್ನನಾಗಿಯೂ ಇರುವ ಸರ್ವವ್ಯಾಪಕನಾದ ವಿಷ್ಣುವಿಗೆ ಹವಿರಾದಿಗಳನ್ನು ಅರ್ಪಿಸುತ್ತಾನೆಯೋ, ಮತ್ತು ಮಹಾತ್ಮನಾದ ಈ ವಿಷ್ಣುವಿನ ಅದ್ಭುತವಾದ ಹಿರಣ್ಯಗರ್ಭಾದಿ ರೂಪವಾದ ಜನ್ಮವನ್ನು ಹೊಗಳುತ್ತಾನೆಯೋ ಹೀಗೆ ದಾತೃವೂ ಸ್ತೋತೃವೂ ಆಗಿರುವ ಅವನೂ ಕೂಡ ಕೀರ್ತಿಗಳಿಂದ ಕೂಡಿಕೊಂಡು ಎಲ್ಲರೂ ಹೋಗಿ ಸೇರಬೇಕಾದ ಆ ವಿಷ್ಣುವಿನ ಸಾನ್ನಿಧ್ಯಕ್ಕೆ ಹೋಗಿ ಸೇರಿಕೊಳ್ಳುತ್ತಾನೆ.

## English Translation

He who presents (offerings) to Vishnu, the ancient, the creator, the recent, the self-born ; he who celebrates the great birth of that mighty one ; he verily possessed of abundance, attains (the station) that is to be sought (by all).

ವಿಶೇಷವಿಷಯಗಳು

**ಸುಮಜ್ಜಾನಯೇ**—ಈ ಪದಕ್ಕೆ ಎರಡು ವಿಧವಾಗಿ ಅರ್ಥಮಾಡಿದ್ದಾರೆ. ಮೊದಲನೆಯದಾಗಿ, **ಸ್ವಯಮೇವೋತ್ಪನ್ನಾಯ**—ಸ್ವಯಂ ಉತ್ಪನ್ನನಾದ (ವಿಷ್ಣುವೇ) ಎಂದೂ, ಎರಡನೆಯದಾಗಿ **ಸುತರಾಂ ಮಾದಯತೀತಿ ಸುಮತ್ । ತಾದೃಶೀ ಜಾಯಾ ಯಸ್ಯ ಸ ತಥೋಕ್ತಃ । ಸರ್ವಜಗನ್ಮಾದನಶೀಲಶ್ರೀಪತಯೇ । ಸುಮತ್** ಶಬ್ದಕ್ಕೆ ಹರ್ಷಕಾರಕವೆಂದರ್ಥಮಾಡಿ ಅಂತಹ ಹರ್ಷದಾಯಕವಾದ ಗುಣವುಳ್ಳವಳೂ ಸರ್ವಲೋಕಕ್ಕೂ ಸಂತೋಷವನ್ನುಂಟುಮಾಡುವವಳೂ ಆದ ಲಕ್ಷ್ಮೀದೇವಿಗೆ ಪತಿಯೆಂದೂ ಅರ್ಥವಿವರಣೆಯನ್ನು ಮಾಡಿದೆ.

**ಸುಮತ್ಸ್ವಯಮಿತ್ಯರ್ಥಃ ।** (ನಿ. ೬-೨೨) ಸುಮತ್ ಎಂದರೆ **ಸ್ವಯಂ** ತಾನಾಗಿಯೇ ಎಂದರ್ಥವೆಂದು ಹೇಳಿ,

**ಉಪ ಪ್ರಾಗಾತ್ಸುಮನ್ಮೇಽಧಾಯಿ ಮನ್ಮ ದೇವಾನಾಮಾಶಾ ಉಪ ವೀತಪೃಷ್ಠಃ ।**
**ಅನ್ವೇನಂ ವಿಪ್ರಾ ಋಷಯೋ ಮದಂತಿ ದೇವಾನಾಂ ಪುಷ್ಟೇ ಚಕೃಮಾ ಸುಬಂಧುಂ ॥**
(ಋ. ಸಂ. ೧-೧೬೨-೭)

ಎಂಬ ಋಕ್ಕನ್ನುದಹರಿಸಿ **ಉಪಪ್ರೈತು ಮಾಂ ಸ್ವಯಂ** । ನಾನು ಇಚ್ಛಿಸಿದ ಅರ್ಥವು **ತಾನಾಗಿಯೇ** ನನ್ನನ್ನು ಸಮೀಪಿಸಲಿ ಎಂಬ ಪ್ರಾರ್ಥನೆಯನ್ನು ವಿವರಿಸಿ **ಸುಮತ್** ಶಬ್ದಕ್ಕೆ ಇರತಕ್ಕ ಅರ್ಥವನ್ನು ತಿಳಿಸಿದ್ದಾರೆ. ಈ ಆಧಾರದ ಮೇಲೆ **ಸ್ವಯಂ ಉತ್ಪನ್ನಾಯ** ಎಂಬರ್ಥವು ಉಚಿತವಾಗಿದೆಯೆಂದು ಹೇಳಬಹುದು. ಅಲ್ಲದೆ, ಇದೇ ಋಕ್ಕಿನಲ್ಲಿ **ಜಾತಂ** ಎಂಬ ಪದಕ್ಕೆ **ಜನ್ಮ ಉತ್ಪತ್ತಿಂ ಹಿರಣ್ಯಗರ್ಭಾದಿರೂಪಂ—ಹಿರಣ್ಯಗರ್ಭಾದಿರೂಪವಾದ ಉತ್ಪತ್ತಿ**ಯ ವಿಷಯವನ್ನೂ ಹೇಳಿರುವುದರಿಂದ ಈ ಅರ್ಥಕ್ಕೆ ಇನ್ನೂ ಹೆಚ್ಚು ಸಮರ್ಥನೆಯಿದೆ. ಅಥವಾ, **ಸುಮತ್** ಶಬ್ದವು ಅನೇಕ ಕಡೆಗಳಲ್ಲಿ **ಕಲ್ಯಾಣ, ಶೋಭನ** ಅಥವಾ **ಭದ್ರ** ಎಂಬ ಪದಗಳ ಪರ್ಯಾಯಪದವಾಗಿ ಉಪಯೋಗಿಸಲ್ಪಟ್ಟಿರುವುದರಿಂದ ಎರಡನೆಯ ಅರ್ಥವನ್ನು ಹೇಳಿದರೂ ತಪ್ಪಾಗಲಾರದು. **ಸುಮಜ್ಜಾನಿಃ** ಎಂದಿರುವಂತೆ **ಸುಮದ್ಗಣಃ, ಸುಮದಂಶು, ಸುಮದ್ರಥಃ** ಎಂದಿರುವ ಕಡೆಗಳಲ್ಲೆಲ್ಲಾ **ಸುಮತ್** ಶಬ್ದಕ್ಕೆ ಶೋಭನ ಅಥವಾ ಕಲ್ಯಾಣ ಎಂಬರ್ಥವನ್ನೇ ಮಾಡಿದೆಯೆಂದು ಇದೇ ಭಾಗದ ೧-೧೪೨-೭ ನೇ ಋಕ್ಕಿನ ವಿಶೇಷವಿಷಯಗಳಲ್ಲಿ (ಪೇಜು 254) ಉದಾಹರಣೆಗಳೊಂದಿಗೆ ತಿಳಿಸಿದೆ. (೧-೧೪೨-೭ ನೇ ಋಕ್ಕಿನಲ್ಲಿರುವ ಪದಕ್ಕೆ ಸ್ವಯಂ ಎಂದೇ ಅರ್ಥವಾಗುತ್ತದೆ). ಆದರೆ **ವಿಷ್ಣುವಿಗೆ ಶ್ರೀಪತಿಯೆಂಬ** ವಿಶೇಷಣವು ಋಕ್ಸಂಹಿತೆಯಲ್ಲಿರುವಂತೆ ಕಾಣುವುದಿಲ್ಲ. **ಶ್ರೀಃ** ಎಂಬ ಪದಕ್ಕೆ ಐಶ್ವರ್ಯ, ಕಾಂತಿ ಎಂಬರ್ಥಗಳಿವೆಯೇ ಹೊರತು **ಲಕ್ಷ್ಮಿಯೆಂಬ** ರೂಢವಾದ ಹೆಸರಿಲ್ಲ. ಆದುದರಿಂದ ಮೊದಲನೆಯ ಅರ್ಥವು ಹೆಚ್ಚು ಉಚಿತವಾಗಿರುತ್ತದೆ.

**ಜಾತಂ—ಹಿರಣ್ಯಗರ್ಭಾದಿರೂಪಂ ಜನ್ಮ** । ಜಗತ್ತಿನ ಸೃಷ್ಟಿಯನ್ನು ಆಶಿಸಿ ತತ್ಪೂರ್ವಭಾವಿಯಾಗಿ ಈಶ್ವರತತ್ತ್ವವು ಹಿರಣ್ಯಗರ್ಭಾದಿರೂಪಗಳಲ್ಲಿ ಸ್ವಯಂ ಉತ್ಪನ್ನವಾಗಿ ಅನಂತರ ಜಗತ್ತನ್ನು ಸೃಷ್ಟಿಸಿದುದು ಋಕ್ಸಂಹಿತೆಯಲ್ಲಿಯೇ ವರ್ಣಿತವಾಗಿದೆ.

**ಹಿರಣ್ಯಗರ್ಭಃ ಸಮವರ್ತತಾಗ್ರೇ ಭೂತಸ್ಯ ಜಾತಃ ಪತಿರೇಕ ಆಸೀತ್ ।**
**ಸ ದಾಧಾರ ಪೃಥಿವೀಂ ದ್ಯಾಮುತೇಮಾಂ ಕಸ್ಮೈ ದೇವಾಯ ಹವಿಷಾ ವಿಧೇಮ ॥**
(ಋ. ಸಂ. ೧೦-೧೨೧-೧)

ಇತ್ಯಾದಿಋಕ್ಕುಗಳಲ್ಲಿ **ಹಿರಣ್ಯಗರ್ಭಃ ಜಾತಮಾತ್ರ ಏವ ಜಗತಃ ಈಶ್ವರಃ ಆಸೀತ್** ಎಂದು ಹೇಳಿರುವ ಅಂಶವನ್ನು ಇಲ್ಲಿಯೂ ಹೇಳಿ **ವಿಷ್ಣು**ವಿನ ಅನಾದಿಸ್ವರೂಪವನ್ನೂ ಮಹತ್ತ್ವವನ್ನೂ ಸ್ತುತಿಸಿದೆ.

**ವೇಧಸೇ—ವಿವಿಧಜಗತ್ಕರ್ತ್ರೇ** । ನಾನಾರೂಪವಾದ ಜಗತ್ತನ್ನು ಸೃಷ್ಟಿಸಿದ ಎಂದರ್ಥ. **ವೇಧಸ್** ಶಬ್ದವು ನಿರುಕ್ತದಲ್ಲಿ **ಮೇಧಾವಿನಾಮ**ಗಳಲ್ಲಿ ಪಠಿತವಾಗಿದೆ. (ನಿ. ೩-೧೫). ಮೇಧಾವಿಯಾದ ಯಜಮಾನನಿಗೆ ಸಾಧಾರಣವಾಗಿ ಈ ಪದವು ವಿಶೇಷಣವಾಗಿರುತ್ತದೆ. ಒಂದೊಂದು ಕಡೆಗಳಲ್ಲಿ ಉತ್ಪಾದಕನು ಎಂಬರ್ಥವಿದ್ದರೂ ಸಹ ಯಜ್ಞಫಲಕ್ಕೆ ಉತ್ಪಾದಕನು ಎಂದಾಗಬಹುದೇ ಹೊರತು ಸೃಷ್ಟಿಕರ್ತನ ಪರವಾಗಿ ಈ ಪದದ ಪ್ರಯೋಗವು ಇರುವಂತೆ ಕಾಣುವುದಿಲ್ಲ. ಆದರೆ ಪ್ರಕೃತವಾದ ಋಕ್ಕಿನಲ್ಲಿ **ಸುಮಜ್ಜಾನಯೇ, ಜಾತಂ** ಇತ್ಯಾದಿ ಪದಗಳು ಜಗತ್ಕರ್ತನ ಸ್ವರೂಪವನ್ನು ವರ್ಣಿಸುವುದರಿಂದ ಈ ಪದವು ಸನ್ನಿವೇಶಕ್ಕನುಗುಣವಾಗಿ ಸಾಯಣರು ಹೇಳಿರುವ ಅರ್ಥಕ್ಕೆ ಹೊಂದಿಕೊಳ್ಳಬಹುದು.

**ಪೂರ್ವ್ಯಾಯ ನವೀಯಸೇ**— ಎಂಬ ವಿಶೇಷಣಗಳು ವಿಷ್ಣುವಿನ ಅನಾದಿತ್ವವನ್ನೂ ಶಾಶ್ವತವಾದ ನೂತನತ್ವವನ್ನೂ ಆದುದರಿಂದಲೇ ಅನಂತತ್ವವನ್ನೂ ಏಕಕಾಲದಲ್ಲಿ ಹೇಳಿದೆ. **ನವೀಯಸೇ** ಎಂಬ ಪದಕ್ಕೆ ಸಾಯಣರು

**ನಿತ್ಯನೂತನಾಯ ಅತ್ಯಂತರಮಣೀಯಾಯ |** ನಿತ್ಯನೂತನನಾಗಿರುವುದರಿಂದ ಅತ್ಯಂತ ರಮಣೀಯನೆಂದರ್ಥ ಮಾಡಿದ್ದಾರೆ.

ಇದೇ ಆನುಪೂರ್ವಿಯಿಂದ ವಿಷ್ಣುವಿನ ವರ್ಣನೆಯು ತೈತ್ತಿರೀಯ ಬ್ರಾಹ್ಮಣದಲ್ಲೂ (೩-೪-೩-೯) ಹೇಳಿದೆ. ಅಲ್ಲಿ ಸಾಯಣರು **ಪೂರ್ವ್ಯಾಯ** ಎಂಬ ಪದಕ್ಕೆ **ಜಗತಃ ಪೂರ್ವಮೇವ ಭವಾಯ** ಜಗತ್ಸೃಷ್ಟಿಗಿಂತಲೂ ಪೂರ್ವ ಭಾವಿಯಾಗಿಯೇ ಇದ್ದ ಎಂತಲೂ, **ನವೀಯಸೇ** ಎಂಬ ಪದಕ್ಕೆ **ರಾಮಕೃಷ್ಣಾದ್ಯವತಾರೈರತ್ಯಂತಂ ನೂತನಾಯ** ರಾಮಕೃಷ್ಣಾದ್ಯವತಾರರೂಪಗಳಿಂದ ಶಾಶ್ವತವಾಗಿ ನೂತನನಾಗಿರುವ ಎಂದು ಅರ್ಥಮಾಡಿದ್ದಾರೆ.

**ಶ್ರವೋಭಿರ್ಯುಜ್ಯಂಚಿದಭ್ಯಸತ್**— ಈ ಭಾಗಕ್ಕೆ ಋಕ್ಸಂಹಿತೆಯಲ್ಲಿ ಒಂದು ವಿಧವಾಗಿಯೂ ತೈತ್ತಿರೀಯ ಬ್ರಾಹ್ಮಣದಲ್ಲಿ (೨-೪-೩-೯) ಇನ್ನೊಂದು ವಿಧವಾಗಿಯೂ ಸಾಯಣರು ಅರ್ಥಮಾಡಿದ್ದಾರೆ. **ಸಂಹಿತೆಯಲ್ಲಿ**—

**ಶ್ರವೋಭಿಃ—ಅನ್ನೈಃ ಕೀರ್ತಿಭಿರ್ವಾ ಯುಕ್ತಃಸನ್, ಯುಜ್ಯಂ ಚಿತ್ — ಸರ್ವೈರ್ಗಂತವ್ಯಮೇವ ತತ್ಪದಂ, ಅಭ್ಯಸತ್**—ಆಭಿಮುಖ್ಯೇನ ಗಚ್ಛತಿ ಪ್ರಾಪ್ನೋತಿ | ಅನ್ನಗಳಿಂದಾಗಲಿ, ಕೀರ್ತಿಗಳಿಂದಾಗಲಿ ಕೂಡಿದವನಾಗಿ ಸಕಲರಿಂದಲೂ ಸೇರಲ್ಪಡಬೇಕಾದ ಪರಮಪದವನ್ನು ಅಭಿಮುಖವಾಗಿಟ್ಟುಕೊಂಡು ಹೋಗಿ ಸೇರುತ್ತಾನೆ ಎಂದೂ, **ಬ್ರಾಹ್ಮಣದಲ್ಲಿ**—

**ಶ್ರವೋಭಿಃ—ಶ್ರವಣೀಯೈರ್ಹವಿರ್ದಾನಮಂತ್ರೈಃ ಸ್ತೋತ್ರವಿಶೇಷೈಶ್ಚ ಯುಜ್ಯಂಚಿತ್ ಸರ್ವದಾ ಸ್ವೇನ ಯುಕ್ತಮಪಿ ಕಾಮಕ್ರೋಧಲೋಭರೂಪಂ ಶತ್ರುಂ ಅಭ್ಯಸತ್—ಅಭಿತಃ ನಿರಸ್ಯತಿ ||**

ಹವಿರಾದಿಗಳನ್ನು ಅರ್ಪಿಸುವಾಗ ಶ್ರವಣೀಯವಾಗಿ ಪಠಿಸುವ ಮಂತ್ರಗಳಿಂದಲೂ ಸ್ತೋತ್ರಗಳಿಂದಲೂ ಸದಾ ತನ್ನಲ್ಲೇ ಅಂಟಿಕೊಂಡಿರತಕ್ಕ ಕಾಮಕ್ರೋಧಾದಿರೂಪವಾದ ಶತ್ರುವನ್ನು ದೂರವಾಗಿ ಅಟ್ಟುತ್ತಾನೆ ಎಂದು ಅರ್ಥಮಾಡಿದ್ದಾರೆ. ಮತ್ತು **ತ್ರಿವಿಧಂ ನರಕಸ್ಯೇದಂ** (ಭಂಗೀ) ಎಂಬ ಶ್ಲೋಕವನ್ನು ಉದಹರಿಸಿ ಅಲ್ಲಿ ವಿವರಿಸಿರುವ ಮೂರು ವಿಧವಾದ ಶತ್ರುಗಳನ್ನೂ ನಿರಸ್ಯತಿ ಹೊರಗೆ ಅಟ್ಟುತ್ತಾನೆಂದೂ, ಬ್ರಾಹ್ಮಣದಲ್ಲಿರುವ ಮಂತ್ರಕ್ಕೆ ತಾತ್ಪರ್ಯವನ್ನು ಹೇಳಿದ್ದಾರೆ. **ಶ್ರವಸ್** ಶಬ್ದಕ್ಕೆ **ಅನ್ನ, ಬಲ, ಸ್ತೋತ್ರ** ಇತ್ಯಾದ್ಯರ್ಥಗಳೆಲ್ಲಾ ಇರುವುದರಿಂದ ಈ ಎರಡರಲ್ಲಿ ಯಾವ ಅರ್ಥವನ್ನಾದರೂ ಹೇಳಬಹುದು. ಆದರೆ **ಚಿತ್** ಎಂಬ ನಿಪಾತಕ್ಕೆ ಅರ್ಥಾಂತರಗಳಲ್ಲಿ ಪ್ರಯೋಗವಿರುವುದೆಂದೂ ತಿಳಿಸಿದೆ. ಸಂಹಿತಾವಾಕ್ಯಕ್ಕೆ ಅರ್ಥಮಾಡುವಾಗ **ಯುಜ್ಯಂಚಿತ್** ಎಂಬುದಕ್ಕೆ **ಸರ್ವೈರ್ಗಂತವ್ಯಮೇವ** ಎಲ್ಲರೂ ಪಡೆಯಲೇಬೇಕಾದ ಎಂಬ ಪ್ರಾಶಸ್ತ್ಯಾರ್ಥವನ್ನು ಒತ್ತಿ ಹೇಳುತ್ತದೆ. ಬ್ರಾಹ್ಮಣವಾಕ್ಯದಲ್ಲಿ **ಸ್ವೇನ ಯುಕ್ತಮಪಿ** | ತನ್ನಲ್ಲೇ ಅಂಟಿದ್ದರೂ ಕೂಡ ಎಂಬ ಒಂದು ತಿರಸ್ಕರಣೀಯವಾದ ಅಭಿಪ್ರಾಯವನ್ನು ಕೊಡುತ್ತದೆ.

**ಚಿದಿತ್ಯೇಷೋಽನೇಕಕರ್ಮಾ** ಎಂಬ ನಿರುಕ್ತವಚನವಿರುವುದರಿಂದ (೧-೪) ಈ ನಿಪಾತಕ್ಕೆ ಸಂದರ್ಭಾನುಸಾರವಾಗಿ ಅರ್ಥಮಾಡಬಹುದಾಗಿದೆ. ಉದಾಹರಣೆಗೆ—**ಆಚಾರ್ಯಶ್ಚಿದಿದಂ ಬ್ರೂಯಾತ್** ಇತಿ ಪೂಜಾಯಾಂ ಇದನ್ನು ಆಚಾರ್ಯರೇ ಹೇಳಬೇಕು (ಇತರರಿಂದ ಸಾಧ್ಯವಿಲ್ಲ) ಎಂಬ ವಾಕ್ಯದಲ್ಲಿ ಈ ನಿಪಾತವು ಪೂಜಾರ್ಥದಲ್ಲಿಯೂ, **ದಧಿಚಿದಿತ್ಯುಪಮಾರ್ಥೇ** | ದಧಿಯಂತೆ ಎಂಬ ವಾಕ್ಯದಲ್ಲಿ ಉಪಮಾವಾಚಕವಾಗಿಯೂ, **ಕುಲ್ಮಾಷಾಶ್ಚಿದಾಹರ** ಹುಳಿಗಂಜಿಯನ್ನಾದರೂ ತೆಗೆದುಕೊಂಡು ಬಾ ಎನ್ನುವಾಗ ತಿರಸ್ಕೃತವಾದ ಅರ್ಥವೂ ಸಾಧ್ಯವಾಗುವುದೆಂದು ನಿರುಕ್ತ

ದಲ್ಲಿ ವಿವರಿಸಿದೆ. ಪ್ರಕೃತವಾದ ಮಂತ್ರದಲ್ಲಿ ಸಾಯಣರು ಈ ನಿಪಾತಕ್ಕೆ ಸಂಹಿತೆಯಲ್ಲಿ ಪೂಜ್ಯಾರ್ಥವನ್ನೂ ಬ್ರಾಹ್ಮಣದಲ್ಲಿ ತಿರಸ್ಕಾರಾರ್ಥವನ್ನೂ ಹೇಳಿದ್ದಾರೆ.

**ಅಭ್ಯಸತ್—ಅಭಿಮುಖ್ಯೇನ ಗಚ್ಛತಿ ।** ಪರಮಪದದ ಅಭಿಮುಖವಾಗಿ ಹೋಗುತ್ತಾನೆಂದು ಸಂಹಿತೆಯಲ್ಲಿಯೂ, ಎಸೆಯುಬಿಡು ಎಂಬರ್ಥವನ್ನು ಕೊಡುವ **ಅಸ್** ಧಾತುವಿನೊಡನೆ **ಅಭಿ** ಎಂಬ ಉಪಸರ್ಗವು ಸೇರಿ ನಾಶ ಮಾಡುತ್ತಾನೆಂದು ಬ್ರಾಹ್ಮಣದಲ್ಲಿಯೂ ಅರ್ಥಮಾಡಿದ್ದಾರೆ.

ವ್ಯಾಕರಣಪ್ರಕ್ರಿಯಾ

**ವೇಧಸೇ**—ವಿ ಉಪಸರ್ಗ ಡುಧಾಞ್ ಧಾರಣಪೋಷಣಯೋಃ ಧಾತು. **ವಿಧಾಞೋ ವೇಧಚ** (ಉ. ಸೂ. ೪-೬೬೪) ಎಂಬುದರಿಂದ ಅಸಿ ಪ್ರತ್ಯಯ. ಉಪಸರ್ಗವಿಶಿಷ್ಟಧಾತುವಿಗೆ ವೇಧಾದೇಶ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ. **ಚತುರ್ಥೀ**ಏಕವಚನಾಂತರೂಪ

**ನವೀಯಸೇ**—ಅತಿಶಯೇನ ನವಃ ನವೀಯಾನ್. ಅತಿಶಯಾರ್ಥ ತೋರುವಾಗ ಈಯಸುನ್ ಪ್ರತ್ಯಯ. **ಞ್ನಿತ್ಯಾದಿರ್ನಿತ್ಯಮ್** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಸುಮಜ್ಜಾನಯೇ**—ಸುಮತ್ ಸ್ವಯಂ ಜಾನಿಃ ಉತ್ಪತ್ತಿಃ ಯಸ್ಯ. ಸುಮತ್ಸ್ವಯಮಿತ್ಯರ್ಥಃ (ನಿರು. ೬-೨೨) ಎಂದು ಯಾಸ್ಕರು ಹೇಳಿರುತ್ತಾರೆ. ಜನೀ ಪ್ರಾದುರ್ಭಾವೇ ಧಾತು. ಇದಕ್ಕೆ ಔಣಾದಿಕ ಇಣ್ ಪ್ರತ್ಯಯ. **ಅತಉಪಧಾಯಾಃ** (ಪಾ. ಸೂ. ೭-೨-೧೧೬) ಎಂಬುದರಿಂದ ಉಪಧಾವೃದ್ಧಿ. ಸುಮಜ್ಜಾನಿ ಎಂದು ರೂಪವಾಗುತ್ತದೆ. ಅಥವಾ ಸುತರಾಂ ಮಾದಯತಿ ಇತಿ ಸುಮತ್. ಸು ಉಪಪದವಾಗಿರುವಾಗ ಅಂತರ್ಭಾವಿತಣ್ಯರ್ಥಕವಾದ ಮದ ಧಾತುವಿಗೆ ಕ್ವಿಪ್ ಪ್ರತ್ಯಯ. ಸುಮತ್ ಜಾಯಾ ಯಸ್ಯ ಸಃ ಸುಮಜ್ಜಾನಿಃ **ಜಾಯಾಯಾ ನಿಙ್** (ಪಾ. ಸೂ. ೫-೪-೧೩೪) ಎಂಬುದರಿಂದ ಸಮಾಸಾಂತವಾಗಿ ನಿಙಾದೇಶ. ಬರುತ್ತದೆ. **ಲೋಪೋವ್ಯೋರ್ವಲಿ** ಎಂಬುದರಿಂದ ಯಕಾರಲೋಪ **ಬಹುವ್ರಿಹೌ ಪ್ರಕೃತ್ಯಾ ಪೂರ್ವಪದಮ್** (ಪಾ ಸೂ. ೬-೨-೨) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ದದಾಶತಿ**—ದಾಶೃ ದಾನೇ ಧಾತು. ಛಾಂದಸ ಲಟ್ ಪ್ರಥಮಪುರುಷಏಕವಚನ ಪರವಾದಾಗ **ಬಹುಲಂ ಛಂದಸಿ** ಎಂಬುದರಿಂದ ಶಪಿಗೆ ಶ್ಲು ಆದೇಶ **ಶ್ಲೌ** ಎಂಬುದರಿಂದ ಧಾತುವಿಗೆ ದ್ವಿತ್ವ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. **ಅಭ್ಯಸ್ತಾನಾಮಾದಿಃ** (ಪಾ ಸೂ. ೬-೧-೧೮೯) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಮಹತಃ—ಬೃಹನ್ಮಹತೋರುಪಸಂಖ್ಯಾನಮ್** ಎಂಬ ವಚನದಿಂದ ಷಷ್ಠೀವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

ಮಹಿ—ಮಹ ಪೂಜಾಯಾಂ ಧಾತು. **ಸರ್ವಧಾತುಭ್ಯ ಇನ್** ಎಂಬುದರಿಂದ ಇನ್ ಪ್ರತ್ಯಯ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

ಬ್ರವತ್—ಬ್ರೂಞ್ ವ್ಯಕ್ತಾಯಾಂ ವಾಚಿ ಧಾತು. ಲೇಟ್ ಪ್ರಥಮಪುರುಷಏಕವಚನದಲ್ಲಿ ತಿಪ್ ಪ್ರತ್ಯಯ. **ಇತಶ್ಚಲೋಪಃ ಪರಸ್ಮೈಪದೇಷು** (ಪಾ. ಸೂ. ೩-೪-೯೭) ಎಂಬುದರಿಂದ ಇಕಾರಲೋಪ. **ಲೇಟೋಽಡಾಟೌ**

(ಪಾ. ಸೂ. ೩-೪-೯೪) ಎಂಬುದರಿಂದ ಅದಕ್ಕೆ ಅಡಾಗಮ. ಅದಿಪ್ರಭೃತಿಭ್ಯಃ ಶಪಃ (ಪಾ. ಸೂ. ೨-೪-೭೨) ಎಂಬುದರಿಂದ ಶಪಿಗೆ ಲುಕ್. ಪ್ರತ್ಯಯನಿಮಿತ್ತವಾಗಿ ಧಾತುವಿನ ಇಕಿಗೆ ಗುಣ, ಅವಾದೇಶ. ಯಚ್ಛಬ್ದಸಂಬಂಧ ವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ತಿಪ್ ಪಿತ್ತಾದುದರಿಂದ ಆಗಮವೂ ಅನುದಾತ್ತವಾಗುವುದರಿಂದ ಧಾತು ಸ್ವರ ಉಳಿಯುತ್ತದೆ.

ಶ್ರವೋಭಿಃ—ಶ್ರು ಶ್ರವಣೇ ಧಾತು. ಇದಕ್ಕೆ ಔಣಾದಿಕ ಅಸುನ್ ಪ್ರತ್ಯಯ. ನಿತ್ತಾದುದರಿಂದ ಆದ್ಯು ದಾತ್ತಸ್ವರ ಬರುತ್ತದೆ. ತೃತೀಯಾಏಕವಚನಾಂತರೂಪ.

**ಯುಜ್ಯಮ್**—ಯುಜಿರ್ ಯೋಗೇ ಧಾತು. ಇದಕ್ಕೆ ಯತ್ ಪ್ರತ್ಯಯ. **ಯತೋಽನಾವಃ** (ಪಾ. ಸೂ. ೬-೧-೨೧೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಅಸತ್**—ಅಸ ಭುವಿ ಧಾತು. ಲಜ್ ಪ್ರಥಮಪುರುಷಏಕವಚನದಲ್ಲಿ ತಿಪ್. ಇತಶ್ಚ ಎಂಬುದರಿಂದ ಇಕಾರ ಲೋಪ. **ಬಹುಲಂ ಛಂದಸಿ** ಎಂಬುದರಿಂದ ಶಪಿಗೆ ಲುಕ್ ಬರುವುದಿಲ್ಲ. ತಿಙಂತನಿಘಾತಸ್ವರ ಬರುತ್ತದೆ. ॥ ೨ ॥

———:o:———

ಸಂಹಿತಾಪಾಠಃ

ತಮು ಸ್ತೋತಾರಃ ಪೂರ್ವ್ಯಂ ಯಥಾ ವಿದ ಋತಸ್ಯ ಗರ್ಭಂ ಜನುಷಾ ಪಿಪರ್ತನ ।
ಆಸ್ಯ ಜಾನಂತೋ ನಾಮ ಚಿದ್ವಿವಕ್ತನ ಮಹಸ್ತೇ ವಿಷ್ಣೋ ಸುಮತಿಂ ಭಜಾಮಹೇ ॥ ೩ ॥

ಪದಪಾಠ

ತಂ । ಊಂ ಇತಿ । ಸ್ತೋತಾರಃ । ಪೂರ್ವ್ಯಂ । ಯಥಾ । ವಿದ । ಋತಸ್ಯ । ಗರ್ಭಂ । ಜನುಷಾ । ಪಿಪರ್ತನ ।
ಆ । ಅಸ್ಯ । ಜಾನಂತಃ । ನಾಮ । ಚಿತ್ । ವಿವಕ್ತನ । ಮಹಃ । ತೇ । ವಿಷ್ಣೋ ಇತಿ । ಸುಽಮತಿಂ । ಭಜಾಮಹೇ ॥ ೩ ॥

ಸಾಯಣಭಾಷ್ಯಂ

ಹೇ ಸ್ತೋತಾರಃ ತಮು ತಮೇವ ವಿಷ್ಣುಂ ಪೂರ್ವ್ಯಂ ಪೂರ್ವಾರ್ಹಮನಾದಿಸಂಸಿದ್ಧಮೃತಸ್ಯ ಗರ್ಭಂ ಯಜ್ಞಸ್ಯ ಗರ್ಭಭೂತಂ । ಯಜ್ಞಾತ್ಮನೋತ್ಪನ್ನಮಿತ್ಯರ್ಥಃ । ಯಜ್ಞೋ ವೈ ವಿಷ್ಣುಃ । ಇತಿ.

೧-೧-೨-೧೩ । ಇತಿ ಶ್ರುತೇಃ । ಯದ್ವಾ । ಋತಸ್ಯೋದಕಸ್ಯ ಗರ್ಭಂ ಗರ್ಭಕಾರಣಂ । ಉದಕೋತ್ಪಾದಕಮಿತ್ಯರ್ಥಃ ॥ ಅಪ ಏವ ಸಸರ್ಜಾದೌ । ಮನು ೧-೮ । ಇತಿ ಸ್ಮೃತೇಃ । ಏವಂಭೂತಂ ವಿಷ್ಣುಂ ಯಥಾ ವಿದ ಜಾನೀಥ ತಥಾ ಜನುಷಾ ಜನ್ಮನಾ ಸ್ವತ ಏವ ನ ಕೇನಚಿದ್ವರಲಾಭಾದಿನಾ ಪಿಪರ್ತನ । ಸ್ತೋತ್ರಾದಿನಾ ಪ್ರೀಣಯತ । ಯಾವದಸ್ಯ ಮಾಹಾತ್ಮ್ಯಂ ಜಾನೀಥ ತಾವದಿತ್ಯರ್ಥಃ ॥ ವಿದೇರ್ಲಟಿ ಮಧ್ಯಮಬಹುವಚನಂ । ವಿದ ಋತಸ್ಯೇತ್ಯತ್ರ ಸಂಹಿತಾಯಾಮನ್ಯತ್ಯಕ ಇತಿ ಪ್ರಕೃತಿಭಾವಃ ॥ ಕಿಂಚಾಸ್ಯ ಮಹಾನುಭಾವಸ್ಯ ವಿಷ್ಣೋರ್ನಾಮ ಚಿತ್ ಸರ್ವೈರ್ನಮನೀಯಮಭಿಧಾನಂ ಸಾರ್ವಾತ್ಮ್ಯಪ್ರತಿಪಾದಕಂ ವಿಷ್ಣುರಿತ್ಯೇತನ್ನಾಮ ಜಾನಂತಃ ಪುರುಷಾರ್ಥಪ್ರದಮಿತ್ಯಧಿಗಚ್ಛಂತ ಆ ಸಮಂತಾದ್ವಿವಕ್ತನ । ವದತ । ಸಂಕೀರ್ತಯತ । ಯದ್ವಾ । ನಾಮ ಯಜ್ಞಾತ್ಮನಾ ನಮನಂ ವಿಷ್ಣೋರೇವ ಸರ್ವೇಷಾಂ ಸ್ವರ್ಗಾಪವರ್ಗಸಾಧನಾಯೇಷ್ಟ್ಯಾದ್ಯಾತ್ಮನಾ ದ್ರವ್ಯದೇವತಾತ್ಮನಾ ವಾ ಪರಿಣಾಮಮಾ ಜಾನಂತೋ ಯೂಯಂ ವಿವಕ್ತನ । ಬ್ರೂತ । ಸ್ತುತ ॥ ವಚೇರ್ಲೋಟಿ ಛಾಂದಸಃ ಶಪಃ ಶ್ಲುಃ । ಬಹುಲಂ ಛಂದಸೀತ್ಯಭ್ಯಾಸಸ್ಯೇತ್ವಂ । ಪೂರ್ವವತ್ತನಾದೇಶಃ ॥ ಇದಾನೀಂ ಸಾಕ್ಷಾತ್ಕೃತ್ಯಾಹ । ಹೇ ವಿಷ್ಣೋ ಸರ್ವಾತ್ಮಕ ದೇವ ಮಹೋ ಮಹತಸ್ತೇ ತವ ಸುಮತಿಂ ಸುಷ್ಟುತಿಂ ಶೋಭಾತ್ಮಿಕಾಂ ಬುದ್ಧಿಂ ವಾ ಭಜಾಮಹೇ । ಸೇವಾಮಹೇ ವಯಂ ಯಜಮಾನಾಃ ॥

॥ ಪ್ರತಿಪದಾರ್ಥ ॥

**ಸ್ತೋತಾರಃ**—ಎಲೈ ಸ್ತೋತೃಗಳೇ । **ಪೂರ್ವ್ಯಂ**—ಅನಾದಿಸಂಸಿದ್ಧನೂ । **ಋತಸ್ಯ ಗರ್ಭಂ**—ಯಜ್ಞಕ್ಕೆ ಗರ್ಭಭೂತನಾಗಿ ಯಜ್ಞಾತ್ಮಕನಾಗಿ ಉತ್ಪನ್ನನಾದವನೂ ಅಥವಾ ಉದಕೋತ್ಪಾದಕನಾದವನೂ ಆದ । **ತಮು**—ಆ ವಿಷ್ಣುವನ್ನೇ । **ಯಥಾ ವಿದ**—ಯಾವ ಬಗೆಯಲ್ಲಿ ನೀವು ತಿಳಿಯುತ್ತೀರೋ ಹಾಗೆ (ಫಲಾಪೇಕ್ಷೆಯ)। **ಜನುಷಾ**—(ನಿರ್ಬಂಧವಿಲ್ಲದೇ) ನೀವಾಗಿಯೇ । **ಪಿಪರ್ತನ**—ಸ್ತೋತ್ರಾದಿಗಳಿಂದ ತೃಪ್ತಿಪಡಿಸಿರಿ । **ಅಸ್ಯ**—ಮಹಾನುಭಾವನಾದ ಈ ವಿಷ್ಣುವಿನ । **ನಾಮ ಚಿತ್**—ಎಲ್ಲರೂ ಧ್ಯಾನಿಸಬೇಕಾದ "ವಿಷ್ಣು" ಎಂಬ ಹೆಸರನ್ನು । **ಜಾನಂತಃ**—(ಪುರುಷಾರ್ಥಪ್ರದವೆಂದು) ತಿಳಿದವರಾಗಿ ಅಥವಾ (ಯಜ್ಞಾತ್ಮನಾಗಿರುವುದರಿಂದ ಅವನಿಗೇ ಸರ್ವವೂ ಅರ್ಪಿತವು) ಎಂದು ತಿಳಿದವರಾಗಿ । **ಆ ವಿವಕ್ತನ**—(ಅವನ ಮಹಿಮೆಯನ್ನು) ಕೀರ್ತನಮಾಡಿರಿ । **ವಿಷ್ಣೋ**—ಎಲೈ ವಿಷ್ಣುವೇ । **ಮಹಃ**—ಮಹಾತ್ಮನಾದ । **ತೇ**—ನಿನ್ನ । **ಸುಮತಿಂ**—ಶೋಭನಾತ್ಮಿಕವಾದ ಬುದ್ಧಿಯನ್ನು । **ಭಜಾಮಹೇ**—ಸೇವಿಸುತ್ತೇವೆ । (ಅಥವಾ) ನಾವು ನಿನ್ನ ಅನುಗ್ರಹವನ್ನು ಪಡೆದು ಸುಖವಾಗಿರುವಂತಾಗಲಿ ।

॥ ಭಾವಾರ್ಥ ॥

ಎಲೈ ಸ್ತೋತೃಗಳೇ, ಅನಾದಿಸಂಸಿದ್ಧನೂ, ಯಜ್ಞಕ್ಕೆ ಗರ್ಭಭೂತನಾಗಿ ಯಜ್ಞಾತ್ಮನಾಗಿ ಉತ್ಪನ್ನನಾದವನೂ, ಆದ ಆ ವಿಷ್ಣುವನ್ನೇ ನೀವು ಯಾವ ಬಗೆಯಲ್ಲಿ ತಿಳಿಯುತ್ತೀರೋ ಹಾಗೆ ನೀವು ಯಾವ ಪ್ರತಿಫಲವನ್ನೂ ಅಪೇಕ್ಷಿಸದೆ ಸ್ತೋತ್ರಗಳಿಂದ ತೃಪ್ತಿಪಡಿಸಿರಿ. ಮಹಾನುಭಾವನಾದ ಈ ವಿಷ್ಣುವಿನ ಎಲ್ಲರೂ ಧ್ಯಾನಿಸಬೇಕಾದ ನಾಮವನ್ನು ಪುರುಷಾರ್ಥಪ್ರದವೆಂದು ತಿಳಿದವರಾಗಿ ಅವನ ಮಹಿಮೆಯನ್ನು ಕೀರ್ತನಮಾಡಿರಿ. ಎಲೈ ವಿಷ್ಣುವೇ ಮಹಾತ್ಮನಾದ ನಿನ್ನ ಅನುಗ್ರಹವನ್ನು ನಾವೂ ಅನುಭವಿಸುವಂತಾಗಲಿ.

## English Tranlation

Hymners, propitiate of your own accord that ancient Vishnu, since you know him as the germ of sacrifice ; cognizant of his greatness, celebrate his name : may we, Vishnu, enjoy your favour.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ವರ್ಣಿತವಾಗಿರುವ ವಿಷ್ಣುವಿನ ಗುಣಗಳೂ ಸಹ ತೈತ್ತಿರೀಯ ಬ್ರಾಹ್ಮಣದಲ್ಲಿ (ತೈ. ಬ್ರಾ. ೨-೪-೩-೯) ಇದೇ ಆನುಪೂರ್ವಿಯಿಂದ ವರ್ಣಿತವಾಗಿವೆ. ಆದರೆ ಈ ಋಕ್ಕಿನಲ್ಲಿ **ಜನುಷಾ ಪಿಪರ್ತನ** ಎಂಬುದಕ್ಕೆ ಬದಲಾಗಿ **ಹವಿಷಾ ಪಿಪರ್ತನ** ಎಂದೂ, **ಮಹಸ್ತೇ ವಿಷ್ಣೋ** ಎಂಬುದಕ್ಕೆ ಬದಲಾಗಿ **ಬೃಹತ್ತೇ ವಿಷ್ಣೋ** ಎಂದೂ ಸಹ ಬ್ರಾಹ್ಮಣದಲ್ಲಿ ಕೊಂಚ ಬದಲಾಯಿಸಿದೆ.

**ಋತಸ್ಯ ಗರ್ಭಂ**—ಇದಕ್ಕೆ ಎರಡು ವಿಧವಾಗಿ ಅರ್ಥವನ್ನು ಹೇಳಿದ್ದಾರೆ. ಮೊದಲನೆಯದಾಗಿ **ಯಜ್ಞಸ್ಯ ಗರ್ಭಭೂತಂ । ಯಜ್ಞಾತ್ಮನೋತ್ಪನ್ನಮಿತ್ಯರ್ಥಃ । ಯಜ್ಞೋ ವೈ ವಿಷ್ಣುರಿತಿ ಶ್ರುತೇಃ ।** ಯಜ್ಞವೇ ವಿಷ್ಣುವೆಂದು ಶ್ರುತಿಯಿರುವುದರಿಂದ ಅಂತಹ ಯಜ್ಞರೂಪವಾದ ಋತಕ್ಕೆ ಗರ್ಭಭೂತನೆಂದು ಒಂದರ್ಥವನ್ನೂ, ಎರಡನೆಯದಾಗಿ, **ಋತಸ್ಯ ಉದಕಸ್ಯ ಗರ್ಭಂ ಗರ್ಭಕಾರಣಂ । ಉದಕೋತ್ಪಾದಕಮಿತ್ಯರ್ಥಃ । ಅಪ ಏವ ಸಸರ್ಜಾದಾವಿತಿ ಸ್ಮೃತೇಃ ।** ಋತಶಬ್ದಕ್ಕೆ **ಉದಕ**ವೆಂದೂ ಅರ್ಥವಿರುವುದರಿಂದ **ಉದಕ**ಕ್ಕೆ ಗರ್ಭಕಾರಣನೆಂದು ಇನ್ನೊಂದು ಅರ್ಥವನ್ನೂ ಹೇಳಿದ್ದಾರೆ. ಋತಶಬ್ದಕ್ಕೆ ಈ ಎರಡರ್ಥಗಳೂ ಇರುವುದರಿಂದಲೂ, ಈ ಎರಡು ಅಭಿಪ್ರಾಯಗಳಿಗೂ ಸಹ ಶ್ರುತಿವಾಕ್ಯಗಳ ಸಮರ್ಥನೆಗಳಿರುವುದರಿಂದಲೂ ಸಹ ಈ ಎರಡರಲ್ಲಿ ಯಾವ ಅರ್ಥವನ್ನು ಹೇಳಿದರೂ ಹೊಂದಿಕೊಳ್ಳುತ್ತದೆ.

> **ತದ್ವಿಷ್ಣುಃ ಪ್ರಥಮಃ ಪ್ರಾಪ । ಸ ದೇವಾನಾಗ್ಂ ಶ್ರೇಷ್ಠೋಽಭವತ್ತಸ್ಮಾದಾಹುರ್ವಿಷ್ಣುರ್ದೇವಾನಾಗ್ಂ ಶ್ರೇಷ್ಠ ಇತಿ । ಸ ಯಃ ಸ ವಿಷ್ಣುರ್ಯಜ್ಞಃ ಸಃ । ಸ ಯಃ ಸ ಯಜ್ಞೋಽಸೌ ಸ ಆದಿತ್ಯಃ ।**

(ಶ. ಬ್ರಾ ೧೪-೧-೧-೪ ರಿಂದ ೫)

> **ಯಜ್ಞೋ ವಿಷ್ಣುಃ ಪ್ರಜಾಪತಿಃ ।**

(ವೈ. ತ್ರೀ. ೬-೧೬)

> **ತ್ವಂ ಯಜ್ಞಸ್ತ್ವಂ ವಿಷ್ಣುಸ್ತ್ವಂ ವಷಟ್ಕಾರಃ ।**

(ತೈ. ಉ. ೪-೧೫-೬)

ಇತ್ಯಾದಿ ವಾಕ್ಯಗಳಲ್ಲಿ ಯಜ್ಞವೇ ವಿಷ್ಣುವೆಂದು ಯಜ್ಞಕ್ಕೂ ವಿಷ್ಣುವಿಗೂ ತಾದಾತ್ಮ್ಯವನ್ನು ಹೇಳಿದೆ. ಇದರಿಂದ ಮೊದಲನೆಯ ಅರ್ಥವು ಸಮರ್ಥಿಸಲ್ಪಡುತ್ತದೆ. ಮತ್ತು

> ಆಪೋ ಹ ವಾ ಇದಮಗ್ರೇ ಸಲಿಲಮೇವಾಸ ತಾ ಅಕಾಮಯಂತ ಕಥಂ ನು ಪ್ರಜಾಯೇಮಹೀತಿ ತಾ ಅಶ್ರಾಮ್ಯಂಸ್ತಾಸ್ತಪೋಽತಪ್ಯಂತ ತಾಸು ತಪಸ್ತಪ್ಯಮಾನಾಸು ಹಿರಣ್ಮಯಮಾಂಡಗ್ಂ

**ಸಂಬಭೂವಾಜಾತೋ ಹ ತರ್ಹಿ ಸಂವತ್ಸರ ಆಸ ತದಿದಗ್ಂ ಹಿರಣ್ಮಯಮಾಂಡಂ ಯಾವತ್ಸಂವತ್ಸರಸ್ಯ ವೇಲಾ ತಾವತ್ಪರ್ಯಪ್ಲವತ । ತತಃ ಸಂವತ್ಸರೇ ಪುರುಷಃ ಸಮಭವತ್ ।**

(ತ. ಬ್ರಾ. ೧೧-೧.೬-೧)

ಇತ್ಯಾದಿವಾಕ್ಯಗಳಲ್ಲಿ ಉದಕವೇ ಸೃಷ್ಟಿಗೆ ಆದಿಯಾಗಿದ್ದಿತೆಂದೂ ಹಿರಣ್ಯಗರ್ಭರೂಪಿಯಾದ ವಿಷ್ಣುವು ಇದಕ್ಕೆ ಆಧಾರವಾಗಿದ್ದನೆಂದೂ ಹೇಳಿರುವುದರಿಂದಲೂ ಸಹ ಎರಡನೆಯ ಅರ್ಥವು ಸಮರ್ಥಿಸಲ್ಪಡುತ್ತದೆ.

**ಪಿಪರ್ತನ—ಪಿಪರ್ತಿ ಪಪುರಿರಿತಿ ಪ್ರಿಣಾತಿನಿಗಮೌ ವಾ ಪ್ರೀಣಾತಿ ನಿಗಮೌ ವಾ ।** ತುಂಬು ಎಂಬರ್ಥವನ್ನು ಕೊಡುವ **ಪೄ** ಧಾತುವಿನಿಂದಾಗಲಿ ಅಥವಾ ತೃಪ್ತಿಪಡಿಸು ಎಂಬರ್ಥವನ್ನು ಕೊಡುವ **ಪ್ರೀ** ಧಾತುವಿನಿಂದಾಗಲಿ ನಿಷ್ಪನ್ನವಾಗಿದೆಯೆಂದು ಹಿಂದೆ ತಿಳಿಸಿದೆ. (ನಿ. ೫-೨೪) ಪ್ರಕೃತವಾದ ಋಕ್ಕಿನಲ್ಲಿ ಸ್ತೋತ್ರಾದಿಗಳಿಂದ **ವಿಷ್ಣುವನ್ನು** ತೃಪ್ತಿಪಡಿಸಿ ಎಂದರ್ಥ.

**ಜನುಷಾ**—ಈ ಪದಕ್ಕೆ **ಜನ್ಮಮಾತ್ರೇಣ**—ಹುಟ್ಟಿದಾಗಿನಿಂದಲೇ ಎಂದರ್ಥವಾಗುತ್ತದೆ. ಈ ಅರ್ಥವೇ ವಿಸ್ತೃತವಾಗಿ, ಸಹಜವಾಗಿ, ಅಥವಾ ಸ್ವಾಭಾವಿಕವಾಗಿ ಎಂದು ತಾತ್ಪರ್ಯವಾಗುತ್ತದೆ. ಪ್ರಕೃತವಾದ ಋಕ್ಕಿನಲ್ಲಿ **ಜನ್ಮನಾ ಸ್ವತ ಏವ ನ ಕೇನಚಿದ್ವರಲಾಭಾದಿನಾ ।** ಯಾವ ವಿಧವಾದ ಪ್ರತಿಫಲದ ಅಪೇಕ್ಷೆಯೂ ಇಲ್ಲದೆ, ಸಹಜವಾದುದೂ ನಿರ್ಮಲವಾದುದೂ ಆದ ಸ್ತುತಿಗಳಿಂದ **ಪಿಪರ್ತನ** ತೃಪ್ತಿಪಡಿಸಿ ಎಂದು ಆದೇಶರೂಪವಾದ ಪ್ರಾರ್ಥನೆ.

**ನಾಮ ಚಿತ್—ಸರ್ವೈರ್ನಮನೀಯಮಭಿಧಾನಂ ಸಾರ್ವಾತ್ಮ್ಯಪ್ರತಿಪಾದಕಂ ವಿಷ್ಣುರಿತ್ಯೇತನ್ನಾಮ ।** ಸಕಲರಿಂದಲೂ ವಂದಿಸಲ್ಪಡತಕ್ಕದ್ದೂ, ಸರ್ವವ್ಯಾಪಿಯಾಗಿ ವಿಶ್ವವನ್ನೆಲ್ಲಾ ಅಂತರ್ಗತವನ್ನಾಗಿ ಮಾಡಿಕೊಳ್ಳುವ ಶಕ್ತಿಯುಳ್ಳದ್ದೂ ಆದವಿಷ್ಣು ಎಂಬ ಹೆಸರನ್ನು ಎಂದು ಒಂದು ವಿಧವಾಗಿಯೂ **ಯದ್ವಾ ನಾಮಯಜ್ಞಾತ್ಮನಾ ನಮನಂ ವಿಷ್ಣೋರೇವ ಸರ್ವೇಷಾಂ ಸ್ವರ್ಗಾಪವರ್ಗಸಾಧನಾಯೇಷ್ಟ್ಯಾದ್ಯಾತ್ಮನಾ ದ್ರವ್ಯದೇವತಾತ್ಮನಾ ವಾ ಪರಿಣಾಮಮಾ ಜಾನಂತೋ ವಾ ।** ವಿಷ್ಣುವೇ ಯಜ್ಞರೂಪಿಯಾದುದರಿಂದ ಸ್ವರ್ಗಕ್ಕೂ ಅಪವರ್ಗಕ್ಕೂ ಸಾಧನಗಳಾದ ಇಷ್ಟ್ಯಾದಿಗಳೂ ಅವುಗಳ ಅಂಗಗಳಾದ ದ್ರವ್ಯಗಳೂ ಯಾಗೋದ್ದಿಷ್ಟಗಳಾದ ದೇವತೆಗಳೂ ಸಕಲವೂ ವಿಷ್ಣುವಿನ ರೂಪಾಂತರವೇ ಆಗಿರುವುದರಿಂದ ಅವೆಲ್ಲವೂ ವಿಷ್ಣುವಿನ ಅಂಶಗಳೇ ಎಂದು ತಿಳಿದು ಅವುಗಳ ಮೂಲಕ ವಿಷ್ಣುವನ್ನು ಪೂಜಿಸಿ ತೃಪ್ತಿಪಡಿಸಿ ಎಂದು ಇನ್ನೊಂದು ವಿಧವಾಗಿಯೂ ವಿವರಿಸಿದೆ.

### ವ್ಯಾಕರಣಪ್ರಕ್ರಿಯಾ

**ಸ್ತೋತಾರಃ**—ಷ್ಟುಞ್ ಸ್ತುತೌ ಧಾತು. ಕರ್ತರಿಯಲ್ಲಿ ತೃಚ್ ಪ್ರತ್ಯಯ. ಸಂಬೋಧನಾಬಹುವಚನದಲ್ಲಿ ಗುಣ ಬಂದಾಗ **ಅಪ್ತೃನ್ತೃಚ್** ಎಂಬುದರಿಂದ ಉಪಧಾದೀರ್ಘ. **ಆಮಂತ್ರಿತಸ್ಯ ಚ** ಎಂಬುದರಿಂದ ನಿಘಾತ ಸ್ವರ ಬರುತ್ತದೆ.

ವಿದ—ವಿದ ಜ್ಞಾನೇ ಧಾತು. ಅದಾದಿ. ಲಟ್ ಮಧ್ಯಮಪುರುಷಬಹುವಚನದಲ್ಲಿ ಥ ಪ್ರತ್ಯಯ. **ವಿದೋಲಟೋ ವಾ** (ಪಾ. ಸೂ. ೩.೪-೮೩) ಎಂಬುದರಿಂದ ಅದಕ್ಕೆ ಅ ಆದೇಶ. **ಸಾರ್ವಧಾತುಕಮಪಿತ್** ಎಂಬುದರಿಂದ ಇದಕ್ಕೆ ಙಿತ್ವ ಬರುವುದರಿಂದ ಲಘೂಪಧಗುಣ ಬರುವುದಿಲ್ಲ. ಯಥಾ ಎಂಬುದು ಹಿಂದೆ ಇರುವುದರಿಂದ

ನಿಘಾತಸ್ವರ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ವಿದ+ಋತಸ್ಯ ಎಂದಿರುವಾಗ ಸಂಹಿತಾದಲ್ಲಿ **ಋತ್ಯಕಃ** ಎಂಬುದರಿಂದ ಪ್ರಕೃತಿಭಾವ ಬರುತ್ತದೆ.

**ಜನುಷಾ**—ಜನೀ ಪ್ರಾದುರ್ಭಾವೇ ಧಾತು. **ಜನೇರುಸಿಃ** ಎಂಬುದರಿಂತ ಉಸ್ ಪ್ರತ್ಯಯ. ಪ್ರತ್ಯಯಸ್ವರದಿಂದ ಉಕಾರ ಉದಾತ್ತವಾಗುತ್ತದೆ. ತೃತೀಯಾ ಏಕವಚನಾಂತರೂಪ

**ಪಿಪರ್ತನ**—ಪ್ೃ ಪಾಲನಪೂರಣಯೋಃ ಪೃ ಇತ್ಯೇಕೇ ಧಾತು. ಜುಹೋತ್ಯಾದಿ. ಲೋಟ್ ಮಧ್ಯಮಪುರುಷಬಹುವಚನದಲ್ಲಿ **ತಪ್ತನಪ್ತನಥನಾಶ್ಚ** (ಪಾ ಸೂ. ೭-೧-೪೫) ಎಂಬುದರಿಂದ ಅದಕ್ಕೆ ತನಪಾದೇಶ. **ಶ್ಲೌ** ಎಂಬುದರಿಂದ ಧಾತುವಿಗೆ ದ್ವಿತ್ವ. **ಅರ್ತಿಪಿಪರ್ತ್ಯೋಶ್ಚ** (ಪಾ. ಸೂ. ೭-೪-೭೭) ಎಂಬುದರಿಂದ ಅಭ್ಯಾಸಕ್ಕೆ ಇತ್ವ. ಪ್ರತ್ಯಯ ಪಿತ್ತಾದುದರಿಂದ ಙಿತ್ವ ಬಾರದಿರುವುದರಿಂದ ಧಾತುವಿನ ಇಕಿಗೆ ಗುಣ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಜಾನಂತಃ**—ಜ್ಞಾ ಅವಬೋಧನೇ ಧಾತು ಇದಕ್ಕೆ ಬಂದ ಲಟಿಗೆ ಶತ್ರಾದೇಶ. ಶ್ನಾವಿಕರಣ **ಜ್ಞಾಜನೋರ್ಜಾ** (ಪಾ. ಸೂ ೭-೩-೭೯) ಎಂಬುದರಿಂದ ಧಾತುವಿಗೆ ಜಾದೇಶ. **ಶ್ನಾಭ್ಯಸ್ತಯೋರಾತಃ** (ಪಾ. ಸೂ. ೬-೪-೧೧೨) ಎಂಬುದರಿಂದ ವಿಕರಣದ ಆಕಾರಕ್ಕೆ ಲೋಪ. ಪ್ರಥಮಾಬಹುವಚನಾಂತರೂಪ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

**ವಿವಕ್ತನ**—ವಚ ಪರಿಭಾಷಣೇ ಧಾತು. **ಲೋಟ್** ಮಧ್ಯಮಪುರುಷಬಹುವಚನದಲ್ಲಿ ಹಿಂದಿನಂತೆ ತನಬಾದೇಶ. **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಶ್ಲು ಆದೇಶ. **ಶ್ಲೌ** ಎಂಬುದರಿಂದ ಧಾತುವಿಗೆ ದ್ವಿತ್ವ ಬಂದಾಗ **ಬಹುಲಂ ಛಂದಸಿ** ಎಂಬುದರಿಂದ ಅಭ್ಯಾಸಕ್ಕೆ ಇತ್ವ. **ಚೋಃಕುಃ** ಎಂಬುದರಿಂದ ಧಾತು ಚಕಾರಕ್ಕೆ ಕುತ್ವ. ತಿಙಂತನಿಘಾತಸ್ವರ ಬರುತ್ತದೆ.

**ಸುಮತಿಮ್**—ಮನ ಜ್ಞಾನೇ ಧಾತು. ಕ್ತಿನ್ ಪ್ರತ್ಯಯ. **ಮಂತ್ರೇವೃಷೇಷಪಚ**—(ಪಾ. ಸೂ. ೩-೩-೯೬) ಎಂಬುದರಿಂದ ಕ್ತಿನ್ ಉದಾತ್ತವಾಗುತ್ತದೆ. ಪ್ರಾದಿಸಮಾಸವಾದಾಗ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಭಜಾಮಹೇ**—ಭಜ ಸೇವಾಯಾಂ ಧಾತು. ಲಟ್ ಉತ್ತಮಪುರುಷಬಹುವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ. ॥ ೩ ॥



ಸಂಹಿತಾಪಾಠಃ

ತಮಸ್ಯ ರಾಜಾ ವರುಣಸ್ತಮಶ್ವಿನಾ ಕ್ರತುಂ ಸಚಂತ ಮಾರುತಸ್ಯ ವೇಧಸಃ।
ದಾಧಾರ ದಕ್ಷಮುತ್ತಮಮಹರ್ವಿದಂ ವ್ರಜಂ ಚ ವಿಷ್ಣುಃ ಸಖಿವಾ
ಅಪೋರ್ಣುತೇ ॥ ೪ ॥

ಪದಪಾಠಃ

ತಂ । ಅಸ್ಯ । ರಾಜಾ । ವರುಣಃ । ತಂ । ಅಶ್ವಿನಾ । ಕ್ರತುಂ । ಸಚಂತ । ಮಾರುತಸ್ಯ । ವೇಧಸಃ ।

ದಾಧಾರ । ದಕ್ಷಂ । ಉತ್ಽತಮಂ । ಅಹಃಽವಿದಂ । ವ್ರಜಂ । ಚ । ವಿಷ್ಣುಃ । ಸಖಿಽವಾನ್ । ಅಪಽಊರ್ಣುತೇ ॥ ೪ ॥

ಸಾಯಣಭಾಷ್ಯಂ

ಅಗ್ನೀಷೋಮಪ್ರಣಯನೇ ತಮಸ್ಯ ರಾಜೇತ್ಯೇಷಾ ಪ್ರಯೋಕ್ತವ್ಯಾ । ಅಗ್ನೀಷೋಮೌ ಪ್ರಣೇಷ್ಯತ್ಸ್ವಿತಿ ಖಂಡೇ ಸೂತ್ರಿತಂ । ತಮಸ್ಯ ರಾಜಾ ವರುಣಸ್ತಮಶ್ವಿನೇತ್ಯರ್ಧರ್ಚ ಆರಮೇತ್ । ಆ. ೪-೧೦ । ಇತಿ ॥

ಮಾರುತಸ್ಯ ಮರುತಾಮೃತ್ವಿಜಾಂ ಸಂಘಾತೋ ಮಾರುತಂ। ತದ್ವತಃ ॥ ಮತ್ವರ್ಥೀಯೋ ಲುಪ್ಯತೇ ॥ ಮರುತಾಂ ದೇವಾನಾಂ ಸಂಬಂಧಿನೋ ವಾ ವೇಧಸೋ ಮೇಧಾವಿನೋಽಸ್ಯ ಯಜಮಾನಸ್ಯ ತಂ ಪ್ರಸಿದ್ಧಂ ಕ್ರತುಂ ಯಾಗಂ ಯಜ್ಞಾತ್ಮಕಂ ವಿಷ್ಣುಂ । ಯಜ್ಞೋ ವೈ ವಿಷ್ಣುರಿತಿ ಶ್ರುತೇಃ । ರಾಜಾ ರಾಜಮಾನೋ ವರುಣಃ ಸಚಂತ । ಸೇವತೇ । ತಮೇವ ಕ್ರತುಂ ಯಾಗಮಶ್ವಿನಾಶ್ವಿನೌ ಸಚೇತೇ । ಅನ್ಯೇಽಪಿ ದೇವಾಃ ಸಚಂತೇ। ಸೇವಂತೇ । ಕಿಂಚ ವಿಷ್ಣುಃ ಸವನತ್ರಯಾತ್ಮನಾ ವ್ಯಾಪ್ತೋ ವಿಷ್ಣುಃ ಸಖಿವಾನ್ ಯಜಮಾನಾದಿಸಖಿಭಿರ್ಯುಕ್ತಃ ಸನ್ನುತ್ತಮಮುತ್ಕೃಷ್ಟತಮಮಹರ್ವಿದಮಹರ್ವೇತ್ತಾರಂ। ಸ್ವರ್ಗೋತ್ಪಾದಕಮಿತ್ಯರ್ಥಃ। ದಕ್ಷಂ ಬಲಂ ಫಲಪ್ರದಾನಸಾಮರ್ಥ್ಯರೂಪಂ ದಾಧಾರ । ಧೃತವಾನ್ । ಕಿಂಚ ವ್ರಜಂ ಚ ಮೇಘಂ ಚ । ವ್ರಜ ಇತಿ ಮೇಘನಾಮ ವ್ರಜಶ್ಚರುರಿತಿ ತನ್ನಾಮಸು ಪಾಠಾತ್ । ತಂ ವೃಷ್ಟ್ಯುದಕಾಯಾಪೋರ್ಣುತೇ । ಅಪಗತಾವರಣಂ ಕರೋತಿ । ಆಹುತಿದ್ವಾರಾ ಯಜ್ಞಸ್ಯೈವ ವೃಷ್ಟ್ಯುತ್ಪಾದಕತ್ವಾತ್ । ಯದ್ವಾ । ಮಾರುತಸ್ಯ ಮರುತ್ಸಂಘಾತಸ್ಯ ದೇವಗಣಸ್ಯ ವೇಧಸೋ ವಿಧಾತುಃ ಸ್ರಷ್ಟುರ್ವಿಷ್ಣೋಃ ಕ್ರತುಂ ಕರ್ಮ ಪಾಲನಾದಿರೂಪಂ ವರುಣಾದಯಃ ಸಚಂತೇ । ತದಧೀನತ್ವಾತ್ಪಾಲನಸ್ಯ । ಸ ಚ ಸಖಿವಾನಿಂದ್ರಮರುದಾದಿಸಹಾಯೋಪೇತಃ ಸನ್ನುಕ್ತಲಕ್ಷಣಂ ದಕ್ಷಂ ವೃಷ್ಟ್ಯುತ್ಪಾದನಾದಿಸಾಮರ್ಥ್ಯರೂಪಂ ಬಲಂ ದಾಧಾರ । ತಥಾ ವ್ರಜಂ ಚಾಪೋರ್ಣುತೇ ॥

ಪ್ರತಿಪದಾರ್ಥ

**ಮಾರುತಸ್ಯ**—ಋತ್ವಿಕ್ಕುಗಳ ಗುಂಪಿನೊಡನೆ ಕೂಡಿದವನೂ । **ವೇಧಸಃ**—ಮೇಧಾವಿಯೂ ಆದ । **ಅಸ್ಯ**—ಯಜಮಾನನ । **ತಂ**—ಪ್ರಸಿದ್ಧವಾದ । **ಕ್ರತುಂ**—ಯಾಗವನ್ನು ಅಥವಾ ಯಜ್ಞಾತ್ಮಕನಾದ ವಿಷ್ಣುವನ್ನು। **ರಾಜಾ**—ಪ್ರಕಾಶಮಾನನಾದ । **ವರುಣಃ**—ವರುಣನು । **ಸಚಂತ**—ಸೇವಿಸುತ್ತಾನೆ । **ತಂ**—ಅದನ್ನೇ ಅಥವಾ ಆ ವಿಷ್ಣುವನ್ನೇ । **ಅಶ್ವಿನಾ**—ಅಶ್ವಿನೀದೇವತೆಗಳೂ (ಸೇವಿಸುತ್ತಾರೆ) । **ವಿಷ್ಣುಃ**—ಸವನತ್ರಯರೂಪದಲ್ಲೂ ವ್ಯಾಪಿಸಿರುವ ವಿಷ್ಣುವು। **ಸಖಿವಾನ್**—ಯಜಮಾನಾದಿ ಮಿತ್ರರೊಡಗೂಡಿ ಅಥವಾ ಸ್ನೇಹಿತನಾದ ಇಂದ್ರನೊಗೂಡಿ। **ಉತ್ತಮಂ**—ಉತ್ಕೃಷ್ಟವಾದುದೂ । **ಅಹರ್ವಿದಂ**—ಸ್ವರ್ಗೋತ್ಪಾದಕವಾದುದೂ ಆದ । **ದಕ್ಷಂ**—ಶಕ್ತಿಯನ್ನು ।

ದಾಧಾರ—ಹೊಂದಿದ್ದಾನೆ । ವ್ರಜಂ ಚ—ಮೇಘವನ್ನೂ ಸಹ । ಅಪೋರ್ಣುತೇ—(ವೃಷ್ಟ್ಯರ್ಥವಾಗಿ) ಆವರಣ ವಿಲ್ಲದಿರುವಂತೆ ಮಾಡುತ್ತಾನೆ ॥

ಭಾವಾರ್ಥ

ಋತ್ವಿಕ್ಕುಗಳ ಗುಂಪಿನೊಡನೆ ಕೂಡಿದವನೂ, ಮೇಧಾವಿಯೂ ಆದ ಯಜಮಾನನ ಪ್ರಸಿದ್ಧವಾದ ಯಾಗವನ್ನು ಪ್ರಕಾಶಮಾನನಾದ ವರುಣನು ಸೇವಿಸುತ್ತಾನೆ. ಅದನ್ನೇ ಅಶ್ವಿನೀದೇವತೆಗಳೂ ಸಹ ಸೇವಿಸುತ್ತಾರೆ. ಸವನತ್ರಯ ರೂಪದಲ್ಲೂ ವ್ಯಾಪಿಸಿರುವ ವಿಷ್ಣುವು ಯಜಮಾನಾದಿ ಮಿತ್ರರೊಡಗೂಡಿ ಉತ್ಕೃಷ್ಟವಾದದೂ ಮತ್ತು ಸ್ವರ್ಗೋತ್ಪಾದಕವಾದುದೂ ಆದ ಶಕ್ತಿಯನ್ನು ಹೊಂದಿದ್ದಾನೆ ಮತ್ತು ಮೇಘವನ್ನೂ ಸಹ ವೃಷ್ಟ್ಯರ್ಥವಾಗಿ ಆವರಣವಿಲ್ಲದಿರುವಂತೆ ಮಾಡುತ್ತಾನೆ.

English Translation

The royal Varuna associates (himself) with the sacrifice of the pious worshipper, assisted by the company of the priests: the Aswins (unite with it): Vishnu, with his friend (Indra), possesses supreme heaven-conferring power, and sits upon the clouds.

॥ ವಿಶೇಷವಿಷಯಗಳು ॥

ಅಗ್ನಿಷ್ಟೋಮಪ್ರಣಯನಕರ್ಮದಲ್ಲಿ **ತಮಸ್ಯ ರಾಜಾ** ಎಂಬ ಈ ಋಕ್ಕನ್ನು ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ—**ಅಗ್ನೀಷೋಮೌ ಪ್ರಣೇಷ್ಯತ್ಸು** ಎಂಬ ಖಂಡದ **ತಮಸ್ಯ ರಾಜಾ ವರುಣಸ್ತಮಶ್ವಿನೇತ್ಯರ್ಧರ್ಚ ಆರಮೇತ್** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೪-೧೦).

ಈ ಋಕ್ಕಿನಲ್ಲಿ ಯಜ್ಞಾತ್ಮಕನಾದ ವಿಷ್ಣುವಿಗೂ **ವರುಣನಿಗೂ** ಮತ್ತು ವಿಷ್ಣುವಿಗೂ ಅಶ್ವಿನೀದೇವತೆಗಳಿಗೂ ಇರತಕ್ಕ ಸಂಬಂಧವನ್ನು ತಿಳಿಸಿ ವಿಷ್ಣುವಿನಲ್ಲಿರತಕ್ಕ ಸ್ವರ್ಗೋತ್ಪಾದಕಾದಿ ಶಕ್ತಿಯನ್ನು ಸ್ತುತಿಸಿದೆ.

**ರಾಜಾ ವರುಣಃ ಸಚಂತೆ**—ಪ್ರಕಾಶಮಾನನಾದ ವರುಣನು ಸೇವಿಸುತ್ತಾನೆಂದು ಯಜ್ಞಕ್ರಿಯೆಯಲ್ಲಿ ವರುಣನ ಸ್ಥಾನವನ್ನು ಹೇಳಿದೆ. ಕಾಮ್ಯರೂಪವಾದ ಪಶುಯಾಗದಲ್ಲಿ ವರುಣನಿಗೆ ಒಂದು ಮುಖ್ಯವಾದ ಸ್ಥಾನವಿದೆ. ಆ ಕಾಲಗಳಲ್ಲಿ ವರುಣನು ವಿಷ್ಣುವಿಗೆ ಸಹಾಯಕನಾಗಿರುವುದಲ್ಲದೆ, ಯಜ್ಞವನ್ನು ಸಾಂಗಗೊಳಿಸಿ ತಾನೂ ಸಹ ಯಜ್ಞಾಹುತಿಯಲ್ಲಿ ಭಾಗವನ್ನು ಪಡೆಯುತ್ತಾನೆಂದು ಸಂಹಿತೆಗಳಲ್ಲಿಯೂ ಬ್ರಾಹ್ಮಣಗಳಲ್ಲಿಯೂ ಅನೇಕ ಕಡೆಗಳಲ್ಲಿ ತಿಳಿಸಿದೆ. ಉದಾಹರಣೆಗೆ—

…. …. …. …. **ದೇವಾಶ್ಚ ವೈ ಯಮಶ್ಚಾಸ್ಮಿನ್ಲೋಕೇಽಸ್ಪರ್ಧಂತ ಸ ಯಮೋ ದೇವಾನಾ-
ಮಿಂದ್ರಿಯಂ ವೀರ್ಯಮಯುವತ ತದ್ಯಮಸ್ಯ ಯಮತ್ವಂ ತೇ ದೇವಾ ಅಮನ್ಯಂತ ಯಮೋ
ವಾ ಇದಮಭೂದ್ಯದ್ವಯಗ್ಂ ಸ್ಮ ಇತಿ ತೇ ಪ್ರಜಾಪತಿಮುಪಾಧಾವನ್ತ್ಸ ಏತೌ ಪ್ರಜಾಪತಿರಾ-
ತ್ಮನ ಉಕ್ಷವಶೌ ನಿರಮಿಮೀತ ತೇ ದೇವಾ ವೈಷ್ಣಾವರುಣೀಂ ವಶಾಮಾಲಭಂತೈಂದ್ರಮುಕ್ಷಾಣಂ**

**ತಂ ವರುಣೇನೈವ ಗ್ರಾಹಯಿತ್ವಾ ವಿಷ್ಣುನಾ ಯಜ್ಞೇನ ಪ್ರಾಣುದಂತೈಂದ್ರೇಣೈವಾಸ್ಯೇಂದ್ರಿಯ-ಮವೃಂಜತ ಯೋ ಭ್ರಾತೃವ್ಯವಾನ್ತ್ಸ್ಯಾತ್ಸ ಸ್ಪರ್ಧಮಾನೋ ವೈಷ್ಣಾವರುಣೀಂ ॥**

(ತೈ. ಸಂ. ೨-೧-೪-೪)

ಒಂದು ಸಲ ಈ ಲೋಕದ ಪ್ರಭುತ್ವವನ್ನು ಸಂಪಾದಿಸಲು **ದೇವತೆಗಳಿಗೂ ಯಮುನಿಗೂ** ಸ್ಪರ್ಧೆಯುಂಟಾದಾಗ **ಯಮುನು** ದೇವತೆಗಳ ಶಕ್ತಿಯನ್ನೆಲ್ಲಾ ತನ್ನ ವಶಪಡಿಸಿಕೊಂಡನು. ಆದುದರಿಂದ್ಲೇ ಅವನಿಗೆ **ಯಮು**ನೆಂಬ ಹೆಸರು. ಆಗ ದೇವತೆಗಳು ಬಹುವಾಗಿ ಚಿಂತಿಸಿ ಪ್ರಜಾಪತಿಯಲ್ಲಿಗೆ ಹೋಗಿ ಅವನ ಸಹಾಯವನ್ನಪೇಕ್ಷಿಸಿದಾಗ ಅವನು ತನ್ನ ಶರೀರದಿಂದ ಒಂದು ಗೋವನ್ನೂ ಒಂದು ವೃಷಭವನ್ನೂ ನಿರ್ಮಿಸಿದನು. ದೇವತೆಗಳ ಆ ಪಶುವನ್ನು ವಿಷ್ಣುವಿಗೂ ಮತ್ತು ವರುಣನಿಗೂ ಯಾಗರೂಪದಲ್ಲರ್ಪಿಸಿದರು. (ವೃಷಭವನ್ನು ಇಂದ್ರನಿಗರ್ಪಿಸಿದರು). ಆಗ ಯಜ್ಞರೂಪಿಯಾದ ವಿಷ್ಣುವೂ ವರುಣನೂ ಯಮುನ ಗತಿಯನ್ನು ಬಂಧಿಸಿ ಅವನನ್ನು ಅಟ್ಟಿಬಿಟ್ಟರು. ಆದುದರಿಂದ ವಿರೋಧಿಗಳೊಡನೆ ಹೋರಾಟಮಾಡುವ ಕಾಲದಲ್ಲಿ ವಿಷ್ಣುವಿಗೂ ವರುಣನಿಗೂ ಪಶುರೂಪದ ಆಹುತಿಯನ್ನರ್ಪಿಸಬೇಕು. ಆಗ ಶತ್ರುನಿರೋಧವಾಗುತ್ತದೆಂದು ತೈತ್ತಿರೀಯಸಂಹಿತೆಯಲ್ಲಿ ಹೇಳಿದೆ.

ಇದೇ ರೀತಿ ಬೇರೊಂದು ಸಂದರ್ಭದಲ್ಲಿ **ವಿಷ್ಣು** ಮತ್ತು **ವರುಣರು** ಯಜ್ಞದ ಬೇರೆಬೇರೆ ಭಾಗಗಳ ರಕ್ಷಕರಾಗಿ ಯಜ್ಞಭಾಗಾರ್ಹರಾದರು ಎಂಬುದಾಗಿ ಐತರೇಯ ಬ್ರಾಹ್ಮಣದಲ್ಲಿ ಹೇಳಿದೆ.

**ಯಯೋರೋಜಸಾ ಸ್ಕಭಿತಾ ರಜಾಂಸೀತಿ ವೈಷ್ಣುವಾರುಣೀಮೃಚಂ ಶಂಸತಿ ವಿಷ್ಣುರ್ವೈ ಯಜ್ಞಸ್ಯ ದುರಿಷ್ಟಂ ಪಾತಿ ವರುಣಃ ಸ್ವಿಷ್ಟಂ ತಯೋರುಭಯೋರೇವ ಶಾಂತ್ಯೈ ।**

( ಐ. ಬ್ರಾ. ೩-೩೮ )

**" ಯಯೋರೋಜಸಾ ಸ್ಕಭಿತಾ ರಜಾಂಸಿ "** ಎಂಬ **ವಿಷ್ಣುವನ್ನೂ ವರುಣನನ್ನೂ** ಒಟ್ಟಿಗೆ ಉದ್ದೇಶಿಸಿರುವ ಮಂತ್ರವನ್ನು ವೈಶ್ವ**ದೇವ**ಯಾಗಕಾಲದಲ್ಲಿ ಪಠಿಸತಕ್ಕದ್ದು ಎಂದು ಆಶ್ವಲಾಯನ ಶ್ರೌತಸೂತ್ರದಲ್ಲಿ ನಿರ್ದೇಶಿಸಿದೆ. ಆಶ್ವಲಾಯನ ಸೂತ್ರದಲ್ಲಿಯೂ ಮತ್ತು ತೈತ್ತಿರೀಯ ಬ್ರಾಹ್ಮಣದಲ್ಲಿಯೂ ಈ ಮಂತ್ರದ ಕ್ರಮವು ಈರೀತಿಯಿದೆ.

**ಯಯೋರೋಜಸಾ ಸ್ಕಭಿತಾ ರಜಾಂಸಿ ವೀರ್ಯೇಭಿರ್ವೀರತಮಾ ಶವಿಷ್ಠಾ ಯಾ ಪತ್ಯೇತೇ ಅಪ್ರತೀತಾ ಸಹೋಭಿರ್ವಿಷ್ಣೂ ಅಗನ್ವರುಣಾ ಪೂರ್ವಹೂತೌ ॥**

(ತೈ- ಬ್ರಾ. ೨-೮-೪-೫)

ಯಾವ ಎರಡುದೇವತೆಗಳ ಸಾಮರ್ಥ್ಯದಿಂದ ಅಂತರಿಕ್ಷವು ಸೃಷ್ಟವಾಯಿತೋ, ಯಾರು ಅತ್ಯಂತ ಓಜಸ್ವಿಗಳೂ ತೇಜಸ್ವಿಗಳೂ ಆಗಿರುವರೋ, ಆ **ವಿಷ್ಣು** ಮತ್ತು **ವರುಣ** ದೇವತೆಗಳು ಒಟ್ಟಿಗೆ ಸೇರಿಕೊಂಡು ಮೊದಲು ಬರಲಿ ಎಂಬುದು ಈ ಮಂತ್ರದ ಅರ್ಥ. ಆದರೆ ಈ ಮಂತ್ರವು ಋಕ್ಸಂಹಿತೆಯಲ್ಲಿರುವುದಿಲ್ಲ. ತೈ. ಬ್ರಾ. ದಲ್ಲಿದೆ. ಮತ್ತು ಅಥರ್ವ ಸಂಹಿತೆಯಲ್ಲಿ ಮಾತ್ರ (೭-೧೫-೧) ಕೊಂಚ ವ್ಯತ್ಯಾಸವಾಗಿ ಉಕ್ತವಾಗಿದೆ.

ಯಜ್ಞಕಾಲಗಳಲ್ಲಿ ದುಷ್ಟವಾದ ಫಲಗಳಿಗೆ ಹೇತುಗಳಾದ ಯಾವ ದೋಷಗಳಿದ್ದರೂ **ವಿಷ್ಣುವು** ಪರಿಹರಿಸುವುದರಿಂದಲೂ, ಮತ್ತು ಉತ್ತಮವಾದ ಕರ್ಮಾಚರಣೆಯಿಂದ ಲಭಿಸತಕ್ಕ ಯಜ್ಞಫಲವನ್ನು **ವರುಣನು** ರಕ್ಷಿಸುವುದರಿಂದಲೂ ಸಹ ಈ ಇಬ್ಬರು ದೇವತೆಗಳನ್ನೂ ಉದ್ದೇಶಿಸಿ ಆಹುತ್ಯರ್ಪಣವನ್ನು ಮಾಡಬೇಕು ಎಂದು ವಿಧಿಸಿದೆ. (ಆ. ಶ್ರೌ. ೫-೨೦).

ಈ ರೀತಿ ವಿಷ್ಣುವಿಗೂ ವರುಣನಿಗೂ ಇರತಕ್ಕ ಯೌಜ್ಞಿಕವಾದ ಸಂಬಂಧವನ್ನೂ, ವಿಷ್ಣುವಿನ ಜೊತೆಯಲ್ಲಿ ವರುಣನ ಸ್ಥಾನವನ್ನೂ, ಎರಡು ದೇವತೆಗಳಿಗೂ ಸಮಾನವಾದ ಯಜ್ಞಭಾಗವನ್ನೂ ತೋರಿಸತಕ್ಕ ಅಂಶವನ್ನು ರಾಜಾ ವರುಣಃ ಸಚಂತ ಎಂಬ ವರ್ಣನೆಯಿಂದ ತಿಳಿಸಿದೆ.

ತಂ ಅಶ್ವಿನಾ—ತಮೇವ ಕ್ರತುಂ ಯಾಗಮಶ್ವಿನೌ ಸೇವಂತೇ । ಇದೇ ಯಾಗಾತ್ಮಕನಾದ ವಿಷ್ಣುವನ್ನು ಅಶ್ವಿನೀದೇವತೆಗಳೂ ಸೇವಿಸುತ್ತಾರೆಂದು ಯಾಗಕಾಲದಲ್ಲಿ ಅವರವರ ಪರಸ್ಪರವಾದ ಸಂಬಂಧವನ್ನು ತಿಳಿಸಿದೆ. ಯಜ್ಞಕಾಲದಲ್ಲಿ ಯಜ್ಞಾತ್ಮಕನಾದ ವಿಷ್ಣುವಿನ ಶಿರಚ್ಛೇದವಾದುದನ್ನೂ ಅದನ್ನು ಅಶ್ವಿನೀದೇವತೆಗಳು ಸರಿಪಡಿಸಿದುದನ್ನೂ ಆದುದರಿಂದ ಅವರೂ ಸಹ ಯಜ್ಞಭಾಗಿಗಳಾದುದನ್ನೂ ಶತಪಥಾದಿಗಳಲ್ಲಿ ವರ್ಣಿಸಿದೆ.

ದೇವಾ ಹ ವೈ ಸತ್ರಂ ನಿಷೇದುಃ । ಅಗ್ನಿರಿಂದ್ರಃ ಸೋಮೋ ಮಖೋ ವಿಷ್ಣುರ್ವಿಶ್ವೇದೇವಾ ಅನ್ಯತ್ರೈವಾಶ್ವಿಭ್ಯಾಂ । ತೇಷಾಂ ಕುರುಕ್ಷೇತ್ರಂ ದೇವಯಜನಮಾಸ । ತಸ್ಮಾದಾಹುಃ ಕುರುಕ್ಷೇತ್ರಂ ದೇವಾನಾಂ ದೇವಯಜನಮಿತಿ ತಸ್ಮಾದ್ಯತ್ರ ಕ್ವ ಚ ಕುರುಕ್ಷೇತ್ರಸ್ಯ ನಿಗಚ್ಛತಿ ತದೇವ ಮನ್ಯತ ಇದಂ ದೇವಯಜನಮಿತಿ ತದ್ಧಿ ದೇವಾನಾಂ ದೇವಯಜನಂ । ತ ಆಸತ । ಶ್ರಿಯಂ ಗಚ್ಛೇಮ ಯಶಃ ಸ್ಯಾಮಾನ್ನಾದಾಃ ಸ್ಯಾಮೇತಿ ತಥೋ ಏವೇಮೇ ಸತ್ರಮಾಸತೇ ಶ್ರಿಯಂ ಗಚ್ಛೇಮ ಯಶಃ ಸ್ಯಾಮಾನ್ನಾದಾಃ ಸ್ಯಾಮೇತಿ । ತೇ ಹೋಚುಃ । ಯೋ ನಃ ಶ್ರಮೇಣ ತಪಸಾ ಶ್ರದ್ಧಯಾ ಯಜ್ಞೇನಾಹುತಿಭಿರ್ಯಜ್ಞಸ್ಯೋದೃಚಂ ಪೂರ್ವೋಽವಗಚ್ಛಾತ್ಸ ನಃ ಶ್ರೇಷ್ಠೋಽಸತ್ತದು ನಃ ಸರ್ವೇಷಾಗ್ಂ ಸಹೇತಿ ತಥೇತಿ । ತದ್ವಿಷ್ಣುಃ ಪ್ರಥಮಃ ಪ್ರಾಪ । ಸ ದೇವಾನಾಗ್ಂ ಶ್ರೇಷ್ಠೋಽಭವತ್ತಸ್ಮಾದಾಹುರ್ವಿಷ್ಣುರ್ದೇವಾನಾಗ್ಂ ಶ್ರೇಷ್ಠ ಇತಿ । ಸ ಯಃ ಸ ವಿಷ್ಣುರ್ಯಜ್ಞಃ ಸ ಸ ಯಃ ಸ ಯಜ್ಞೋಽಸೌ ಸ ಆದಿತ್ಯಸ್ತದ್ಧೇದಂ ಯಶೋ ವಿಷ್ಣುರ್ನ ಶಶಾಕ ಸಂಯಂತುಂ ತದಿದಮಪ್ಯೇತರ್ಹಿ ನೈವ ಸರ್ವ ಇವ ಯಶಃ ಶಕ್ನೋತಿ ಸಂಯಂತುಂ । ಸ ತಿಸೃಧನ್ವಮಾದಾಯಾಪಚಕ್ರಾಮ । ಸ ಧನುರಾರ್ತ್ನ್ಯಾ ಶಿರ ಉಪಸ್ತಭ್ಯ ತಸ್ಥೌ ತಂ ದೇವಾ ಅನಭಿಧೃಷ್ಣುವಂತಃ ಸಮಂತಂ ಪರಿಣ್ಯವಿಶಂತ । ತಾ ಹ ವಮ್ರ್ಯ ಊಚುಃ । ಇಮಾ ವೈ ವಮ್ರ್ಯೋ ಯದುಪದೀಕಾ ಯೋಽಸ್ಯ ಜ್ಯಾಮಪ್ಯದ್ಯಾತ್ಕಿಮಸ್ಮೈ ಪ್ರಯಚ್ಛೇತೇತ್ಯನ್ನಾದ್ಯಮಸ್ಮೈ ಪ್ರಯಚ್ಛೇಮಾಪಿ ಧನ್ವನ್ನಪೋಽಧಿಗಚ್ಛೇತ್ತಥಾಸ್ಮೈ ಸರ್ವಮನ್ನಾದ್ಯಂ ಪ್ರಯಚ್ಛೇಮೇತಿ ತಥೇತಿ । ತಸ್ಯೋಪಪರಾಸೃತ್ಯ । ಜ್ಯಾಮಪಿಜಕ್ಷುಸ್ತಸ್ಯಾಂ ಛಿನ್ನಾಯಾಂ ಧನುರಾರ್ತ್ನ್ಯೌ ವಿಷ್ಫುರಂತ್ಯೌ ವಿಷ್ಣೋಃ ಶಿರಃ ಪ್ರಚಿಚ್ಛಿದತುಃ ॥

(ಶ. ಬ್ರಾ. ೧೪-೧-೧ ೧ರಿಂದ ೯)

ಹಿಂದೆ ಅಶ್ವಿನೀದೇವತೆಗಳನ್ನು ಮಾತ್ರ ಬಿಟ್ಟು ಉಳಿದ ಇಂದ್ರ ವಿಷ್ಣು ಸೋಮ ಇತ್ಯಾದಿ ದೇವತೆಗಳೆಲ್ಲರೂ ಸೇರಿ ದೇವಯಜನಪ್ರದೇಶವಾದ ಕುರುಕ್ಷೇತ್ರಪ್ರದೇಶದಲ್ಲಿ ಒಂದು ಸತ್ರವನ್ನಾರಂಭಿಸಿದರು. ಅನಂತರ ಅವರು ಯಶಸ್ವಿಗಳೂ ಅನ್ನವಂತರೂ ಆಗಬೇಕೆಂದಾಶಿಸಿದರು. ಆಗ ತಮ್ಮಲ್ಲಿ ಯಾರು ಶ್ರಮದಿಂದಲೂ, ಶ್ರದ್ಧೆಯಿಂದಲೂ, ಆಹುತಿಗಳಿಂದಲೂ, ಮೊದಲು ಯಜ್ಞವನ್ನು ಸಾಂಗವಾಗಿ ಪೂರ್ಣಮಾಡುವರೋ ಅವರೇ ಅತ್ಯಂತ ಶ್ರೇಷ್ಠರೆಂದು ಪರಿಗಣಿತರಾಗುವರು ಎಂದು ತೀರ್ಮಾನಿಸಿದಾಗ ವಿಷ್ಣುವು ಮೊದಲು ಆ ಶ್ರೇಷ್ಠವಾದ ಪದವಿಯನ್ನು

ಪಡೆದನು. ಇಂತಹ ಉತ್ತಮವಾದ ಪದವಿಯನ್ನು ಪಡೆದ ವಿಷ್ಣುವೇ ಯಜ್ಞಾತ್ಮನಾದನು. ಆಗ ಅವನ ಶ್ಲಾಘಾಭಿಮಾನವು ತಡೆಯಲಾರದಾಯಿತು. ತನ್ನ ಮೂರುಬಾಣಗಳೊಂದಿಗೆ ಕೂಡಿದ ಧನುಸ್ಸನ್ನು ತೆಗೆದುಕೊಂಡು ಹೊರಟಾಗ ದೇವತೆಗಳಾರೂ ಅವನನ್ನು ಪ್ರತಿಭಟಿಸಲು ಧೈರ್ಯವಿಲ್ಲದೆ ಸ್ತಬ್ಧರಾಗಿ ಕುಳಿತರು ಆಗ **ವಮ್ರಿ**ಯೆಂಬ ಜಾತಿಗೆ ಸೇರಿದ ಇರುವೆಗಳು ಬಂದು ಆ ಧನುಸ್ಸಿನ ಹೆದೆಯನ್ನು ಹಿಡಿದೆಳೆದು ಬಗ್ಗಿಸಿದರೆ ಪ್ರತಿಫಲವಾಗಿ ಏನನ್ನು ಕೊಡುವೆಯೆಂದು ವಿಷ್ಣುವನ್ನು ಕೇಳಿದವು. ಅಂತಹ ಸಾಮರ್ಥ್ಯವಿರುವವನು ಪೂರ್ಣವಾದ ಅನ್ನಸಂಪತ್ತನ್ನನುಭವಿಸುವನು ಮತ್ತು ಮರಳುಗಾಡಿನಲ್ಲೂ ಜಲಸಮೃದ್ಧಿಯನ್ನು ಹೊಂದುವನು ಎಂಬ ಭರವಸೆಯನ್ನು ಕೊಟ್ಟನು. ಆಗ ಅವು ಅದರ ಹೆದೆಯನ್ನು ಕಡಿದುಹಾಕಿದವು. ಒಡನೆಯೇ ಬಗ್ಗಿದ್ದ ಧನುಸ್ಸಿನ ತುದಿಯು ಇದ್ದಕ್ಕಿದ್ದಂತೆಯೇ ನೆಟ್ಟಗೆ ಮೇಲಕ್ಕೆ ಚಾಚಿ ಬಗ್ಗಿದ್ದ ಧನುಸ್ಸಿನಮೇಲೆ ತಲೆಯನ್ನಿಟ್ಟಿದ್ದ ವಿಷ್ಣುವಿನ ಶಿರಸ್ಸನ್ನು ಕತ್ತರಿಸಿಕೊಂಡು ಹೋಯಿತು. ಎಂಬುದು ಶತಪಥಬ್ರಾಹ್ಮಣದ ಕಥೆ. ತೈ ೀ. ೧-೫-೨ರಲ್ಲಿ ಇಂದ್ರನೇ ವಮ್ರಿರೂಪದಿಂದ ಹೆದೆಯನ್ನು ಕತ್ತರಿಸಿದನೆಂದು ಹೇಳಿದೆ. ಯಜ್ಞಾತ್ಮನಾದ ವಿಷ್ಣುವಿನ ಶಿರಚ್ಛೇದನವಾದಾಗ ಯಜ್ಞಕ್ಕೇ ನ್ಯೂನವಾಯಿತೆಂದು ತಿಳಿದ ದೇವತೆಗಳು ಚಿಂತಿಸುತ್ತಿದ್ದಾಗ **ಅಶ್ವಿನೀ**ದೇವತೆಗಳು ಛಿನ್ನವಾದ ವಿಷ್ಣುವಿನ ಶಿರಸ್ಸನ್ನು ಸರಿಪಡಿಸಿದರು ಎಂಬ ವಿಷಯವನ್ನು ತೈತ್ತಿರೀಯಾರಣ್ಯಕದಲ್ಲಿ ಈ ರೀತಿ ಹೇಳಿದೆ.

**ದೇವಾ ವೈ ಸತ್ರಮಾಸತ । ಋದ್ಧಿಪರಿಮಿತಂ ಯಶಸ್ಕಾಮಾಃ। ತೇಽಬ್ರುವನ್। ಯನ್ನಃ ಪ್ರಥಮಂ ಯಶಃ ಋಚ್ಛಾತ್ । ಸರ್ವೇಷಾಂ ನ ಸ್ತತ್ಸಹಾಸದಿತಿ। .... .... .... .... .... । ತೇಷಾಂ ಮಖಂ ವೈಷ್ಣವಂ ಯಶ ಆರ್ಛತ್। ...........ತಸ್ಯ ಸಿಷ್ಮಿಯಾಣಸ್ಯ ತೇಜೋಽಪಾಕ್ರಾಮತ್.... .... .... ವಾರೇವೃತಗ್ಂ ಹ್ಯಾಸಾಂ । ತಸ್ಯ ಜ್ಯಾಮಪ್ಯಾದನ್ । ತಸ್ಯ ಧನುರ್ವಿಪ್ರವಮಾಣಗ್ಂ ಶಿರ ಉದ-ವರ್ತಯತ್ । ತದ್ದ್ಯಾವಾಪೃಥಿವೀ ಅನು ಪ್ರಾವರ್ತತ । ಯತ್ಪ್ರಾವರ್ತತ । ತತ್ ಪ್ರವರ್ಗ್ಯಸ್ಯ ಪ್ರವರ್ಗ್ಯತ್ವಂ। ಯದ್‌ಘ್ರಾಂ ಇ ಇತ್ಯಪತತ್ । ತದ್ಘರ್ಮಸ್ಯ ಘರ್ಮತ್ವಂ। ಮಹತೋ ವೀರ್ಯಮಪಪ್ತದಿತಿ। ತನ್ಮಹಾವೀರಸ್ಯ ಮಹಾವೀರತ್ವಂ। ಯದಸ್ಯಾಃ ಸಮಭ-ರನ್ತತ್ಸಮ್ರಾಜಃ ಸಂಮ್ರಾಟ್ತ್ವಂ। ತಗ್ಂ ಸ್ತೃತಂ ದೇವತಾಸ್ತ್ರೇಧಾ ವ್ಯಗೃಹ್ಣತ। ಅಗ್ನಿಃ ಪ್ರಾತಃ ಸವನಂ। ಇಂದ್ರೋ ಮಾಧ್ಯಂದಿನಗ್ಂ ಸವನಂ। ವಿಶ್ವೇದೇವಾಸ್ತೃತೀಯಸವನಂ। ತೇನಾಪಶೀರ್ಷ್ಣಾ ಯಜ್ಞೇನ ಯಜಮಾನಾಃ । ನಾಶಿಷೋಽವಾರುಂಧತ । ನ ಸುವರ್ಗಂ ಲೋಕಭ್ಯಜಯನ್ । ತೇ ದೇವಾ ಅಶ್ವಿನಾವಬ್ರುವನ್ । ಭಿಷಜೌ ವೈ ಸ್ಥಃ। ಇದಂ ಯಜ್ಞಸ್ಯ ಶಿರಃ ಪ್ರತಿಧತ್ತಮಿತಿ। ತಾವಬ್ರೂತಾಂ ವರಂ ವೃಣಾವಹೈ। ಗ್ರಹ ಏವ ನಾವತ್ರಾಪಿ ಗೃಹ್ಯ-ತಾಮಿತಿ । ತಾಭ್ಯಾಮೇತಮಾಶ್ವಿನಮಗೃಹ್ಣನ್ । ತಾವೇತದ್ಯಜ್ಞಸ್ಯ ಶಿರಃ ಪ್ರತ್ಯಧತ್ತಾಂ। ಯತ್ಪ್ರವರ್ಗ್ಯಃ। ತೇನ ಸಶೀರ್ಷ್ಣಾ ಯಜ್ಞೇನ ಯಜಮಾನಾಃ। ಅವಾಶಿಷೋಽರು-ನ್ಧತ। .... .... .... .... ಅಭಿ ಸುವರ್ಗಂ ಲೋಕಂ ಜಯತಿ। ತಸ್ಮಾದೇಷ ಆಶ್ವಿನ ಪ್ರವಯಾ ಇವ। ಯತ್ಪ್ರವರ್ಗ್ಯಃ ॥** (ತೈ. ಆ. ೫-೧-೧ರಿಂದ ೭)

ಶತಪಥಬ್ರಾಹ್ಮಣದಲ್ಲಿ ಮೇಲೆ ಉದಹರಿಸಿದ ಕಥೆಯಂತೆ ಯಜ್ಞಾತ್ಮನಾದ ವಿಷ್ಣುವಿನ ಶಿರಚ್ಛೇದನವಾದನಂತರ ಉಳಿದ ಯಜ್ಞದೇಹವನ್ನು ಮೂರು ಭಾಗಗಳನ್ನಾಗಿ ಮಾಡಿದರು. ಆಗ ಅಗ್ನಿಯು ಪ್ರಾತಃಸವನವನ್ನೂ, ಇಂದ್ರನು ಮಾಧ್ಯಂದಿನಸವನವನ್ನೂ ವಿಶ್ವೇದೇವತೆಗಳು ತೃತೀಯಸವನವನ್ನೂ ಹಂಚಿಕೊಂಡರು. ಆದರೆ ತಲೆಯೇ ಇಲ್ಲದ

ಯಜ್ಞದಿಂದ ಅವರಿಗೆ, ಶ್ರೇಯಸ್ಸಾಗಲಿ ಅಥವಾ ಸ್ವರ್ಗವಾಗಲಿ ಲಭಿಸಲಿಲ್ಲ. ಆಗ ಅವರು ಅಶ್ವಿನೀ ದೇವತೆಗಳನ್ನು ಕುರಿತು "ನೀವು ದೇವವೈದ್ಯರಾಗಿದ್ದೀರಿ। ಈ ಛಿನ್ನವಾದ ಯಜ್ಞಶಿರಸ್ಸನ್ನು ಪುನಃ ಒಂದಾಗಿ ಸೇರಿಸಿ" ಎಂದು ಪ್ರಾರ್ಥಿಸಿದಾಗ ಅವರು "ಇಲ್ಲಿಯೂ ಸಹ ನಮಗೆ ಸೋಮಾಹುತಿಯು ಲಭಿಸುವಂತಾದರೆ ನಾವು ಶಿರಸ್ಸನ್ನು ದೇಹದೊಂದಿಗೆ ಸೇರಿಸುವೆವು" ಎಂದು ಹೇಳಿದರು. ದೇವತೆಗಳು ಅದಕ್ಕೆ ಸಮ್ಮತಿಸಲು ಯಜ್ಞರೂಪಿಯಾದ ವಿಷ್ಣುವಿನ ಛಿನ್ನವಾದ ಶಿರಸ್ಸನ್ನು ಅವರು ಸೇರಿಸಿ ಯಜ್ಞಭಾಗಾರ್ಹರಾದರು, ಎಂದಿದೆ.

ಹೀಗೆ ಅಶ್ವಿನೀದೇವತೆಗಳು ಒಂದು ದೃಷ್ಟಿಯಿಂದ ಯಜ್ಞರಕ್ಷಕರೇ ಆದುದರಿಂದ ಋಕ್ಕಿನಲ್ಲಿ ಅಶ್ವಿನಾ **ಕ್ರತುಂ ಸಚಂತೆ** ಈ ಯಾಗವನ್ನು ಅಶ್ವಿನೀದೇವತೆಗಳೂ ಸೇವಿಸುತ್ತಾರೆ ಅಥವಾ ಸೇವಿಸಿದರು ಎಂಬ ವಿಷಯವನ್ನು ತಿಳಿಸಿದೆ.

**ಮಾರುತಸ್ಯ ವೇಧಸಃ—ಮರುತಾಂ ಋತ್ವಿಜಾಂ ಸಂಬಂಧಿನಃ ಅಥವಾ ಮರುತಾಂ ದೇವಾನಾಂ ಸಂಬಂಧಿನಃ ಯಜಮಾನಸ್ಯ ।** ಋತ್ವಿಕ್ಕುಗಳಿಗೆ ಬಂಧುವಾದ ಅಥವಾ ದೇವತೆಗಳಿಗೆ ಬಂಧುವಾದ ಯಜಮಾನನ ಎಂದು **ಮಾರುತಸ್ಯ** ಎಂಬ ಪದಕ್ಕೆ ಎರಡುವಿಧವಾದ ಅರ್ಥವನ್ನು ಹೇಳಿದ್ದಾರೆ. **ಮರುಚ್ಛಬ್ದ**ವನ್ನು ನಿರುಕ್ತಕಾರರು **ಋತ್ವಿಜ್**ನಾಮಗಳಲ್ಲೂ (೩-೧೮), **ಹಿರಣ್ಯ**ನಾಮಗಳಲ್ಲೂ (೨-೧೦) ಪಠಿಸಿದ್ದಾರೆ. ಆದರೆ **ಮರುದ್ದೇವತೆ**ಗಳೆಂದು ಪ್ರಸಿದ್ಧವಾದ ಹೆಸರು **ಋತ್ವಿಕ್ಕೆಂ**ದೂ **ಹಿರಣ್ಯ**ವೆಂದೂ ಕೆಲವೆಡೆಗಳಲ್ಲಿ (ಸಾಧಾರಣವಾಗಿ) ದೇವತೆಗಳೆಂದೂ ಅರ್ಥವನ್ನು ಕೊಡುವುದಾದರೆ ಈ ಪದದ ಮೂಲಧಾತುವಾವುದು, ಅದರ ನಿಷ್ಪತ್ತಿಯು ಯಾವ ಯಾವ ರೀತಿಯಲ್ಲಿ ಸಾಧ್ಯ, **ಮರುದ್ದೇವತೆ**ಗಳೆಂದು ತಿಳಿಸುವಾಗ ಈ ಪದದ ವ್ಯುತ್ಪತ್ತಿಯೇನು ಎಂದು ತಿಳಿಯುವುದೂ ಕೊಂಚ ಶ್ರಮಸಾಧ್ಯವೇ ಆಗಿದೆ. **ಮರುದ್ದೇವತೆ**ಗಳ ಪರವಾಗಿ ಉಪಯೋಗಿಸಲ್ಪಡುವ ಈ ಪದಕ್ಕೆ ನಿರುಕ್ತಕಾರರು ಈ ವಿಧವಾಗಿ ನಿರ್ವಚನವನ್ನು ಹೇಳಿದ್ದಾರೆ.

**ಮರುತೋ ಮಿತರಾವಿಣೋ ವಾ ಮಿತರೋಚಿನೋ ವಾ ಮಹದ್ದ್ರವಂತೀತಿ ವಾ ।**

( ನಿ. ೧೧-೧೪ )

ನಿಯಮಿತವಾದ ಶಬ್ದವುಳ್ಳವರಾದ್ದರಿಂದಾಗಲಿ, ನಿಯಮಿತವಾದ ತೇಜಸನ್ನುಳ್ಳವರಾದ್ದರಿಂದಾಗಲಿ, ಅಥವಾ ವೇಗವಾಗಿ ಓಡುವವರಾದ್ದರಿಂದಾಗಲಿ ಈ ಹೆಸರು ಎಂದು ೧-೫೮ನೇ ಋಕ್ಕನ್ನುದಹರಿಸಿ **ಮರುತ್ತು**ಗಳ ಸ್ವರೂಪವನ್ನು ತಿಳಿಸಿದ್ದಾರೆ.

ಈ ರೀತಿ ನಾನಾರ್ಥಗಳುಳ್ಳ ಈ ಪದಕ್ಕೆ ಸರಿಯಾದ ನಿರ್ವಚನವನ್ನು ಹೇಳುವುದು ಶ್ರಮವೆಂದು Max Muller ಎಂಬ ಪಂಡಿತನು ಚರ್ಚಿಸುತ್ತಾ,

"Marut or Maruta in Orninary Sanskrit mean wind, and more particularly a strong wind, differing by its violent character from Vayu or Vata. Nor do the hymns themselves leave us in any doubt as to the natural phenomena with which the Maruts are identified. Storms which root up the trees of the forest, lightning, thunder and showers of rain are the background from which the Maruts in their personal and dramatic character rise

before our eyes. In most of the later native dictionaries, in the ಮೇದಿನೀ, ವಿಶ್ವ, ಹೇಮಚಂದ್ರ ಅಮರ, ಅನೇಕಾರ್ಥಧ್ವನಿಮಂಜರೀ, Marut is given as a synonym of Deva, or God in general, and so is Maru in Pali.

But, while the hymns addressed to the Maruts enable us to watch the successive stages in the development of so called deities more clearly than any other hymns, there is no doubt one drawback, namely, the uncertainly of the etymology of Marut .... .... .... .... .... .... ....

.... .... .... .... .... ....

No better etymology having been proposed, I still maintain that the derivation of Marut from ಮೃ to pound, to smash, is free from any objection and that the original conception of the Maruts was that of crushing, smashing, striking, tearing, destroying storms ".

( The Vedic Hymns. Screrd Books of the East.
Vol. XXXII.—P. XXIV ).

Kuhn, ಮೊದಲಾದ ಪಾಶ್ಚಾತ್ಯಪಂಡಿತರ ಅಭಿಪ್ರಾಯಗಳನ್ನೂ ತಿಳಿಸಿ [ಮರುದ್ದೇವತಾಪರವಾದ ಸೂಕ್ತದಲ್ಲಿ ಈ ಅಭಿಪ್ರಾಯಗಳನ್ನು ವಿಶದವಾಗಿ ಚರ್ಚಿಸಲಾಗುತ್ತದೆ.] ಕೊನೆಗೆ ಅವುಗಳಲ್ಲಿ ದೋಷಗಳನ್ನು ತಿಳಿಸಿ ಹಿಂಸಾರ್ಥಕವಾದ **ಮೃ**ಧಾತುವಿನಿಂದ **ಮರುತ್** ಎಂಬ ಪದವು ನಿಷ್ಪನ್ನವಾಗಿ ವೃಕ್ಷಾದಿಗಳನ್ನು ಭೇದಿಸತಕ್ಕ **ಶಕ್ತಿವಿಶೇಷವೆಂದು** ತನ್ನ ಅಭಿಪ್ರಾಯವನ್ನೂ ಮೇಲಿನ ವಾಕ್ಯಗಳಲ್ಲಿ ತಿಳಿಸಿದ್ದಾನೆ ಸೋಮಾದಿಗಳನ್ನು ಹಿಂಡುವುದರಿಂದ ಋತ್ವಿಕ್ಕುಗಳಿಗೂ **ಮರುತ್ತೆಂಬ** ಪ್ರಯೋಗವಿರಬಹುದೆಂದು ತಿಳಿಯುತ್ತದೆ. ನಿರುಕ್ತಕಾರರು **ಮಿತರೋಚಿನೋ ವಾ** ಮಿತವಾದ ದೀಪ್ತಿಯುಳ್ಳವರಾದ್ದರಿಂದ ಈ ಹೆಸರೆಂದು ತಿಳಿಸಿರುವುದರಿಂದಲೂ **ದೇವತೆಗಳಿಗೂ** ಮತ್ತು **ಹಿರಣ್ಯಕ್ಕೂ** ಈ ಗುಣವಿರುವುದರಿಂದಲೂ ಈ ಹೆಸರು ಪ್ರಸಿದ್ಧವಾಗಿರಬಹುದು.

ಪ್ರಕೃತವಾದ ಋಕ್ಕಿನಲ್ಲಿ **ಮರುತಾಂ ಋತ್ವಿಜಾಂ ಸಂಘಾತೋ ಮಾರುತಂ ತದ್ವತಃ ।** ಋತ್ವಿಕ್ಕುಗಳ ಸಮೂಹವು ಮಾರುತವು. ಇವರಿಗೆ ಸಂಬಂಧಿಯಾದ ಯಜಮಾನನೆಂದಾಗಲಿ ಅಥವಾ, **ಮರುತಾಂ ದೇವಾನಾಂ ಸಂಬಂಧಿನೋ ವಾ** । ದೇವತೆಗಳ ಸಂಬಂಧಿಯಾದ ಯಜಮಾನನೆಂದಾಗಲಿ ಅರ್ಥವಾಗುತ್ತದೆ. ಯಜಮಾನನ ಪ್ರವೃತ್ತಿಯಿಂದಲೇ ಋತ್ವಿಕ್ಕುಗಳಿಗೆ ಯಜ್ಞಕ್ರಿಯೆಯಲ್ಲಿ ಸ್ಥಾನವು ಲಭಿಸುವುದರಿಂದ ಅವನಿಗೂ ಋತ್ವಿಕ್ಕುಗಳಿಗೂ ಸಂಬಂಧವಿದೆ. ಅಥವಾ ಯಜಮಾನನ ಯಜ್ಞಕ್ರಿಯೆಯಿಂದಲೇ ದೇವತೆಗಳಿಗೆ ಹವಿರಾದಿಗಳು ಲಭಿಸುವುದರಿಂದ ಇವನೇ ದೇವತೆಗಳ ಆಪ್ತಬಂಧುವು. ಆದುದರಿಂದ ಎರಡರಲ್ಲಿ ಯಾವ ಅರ್ಥವನ್ನಾದರೂ ಹೇಳಬಹುದು.

**ವೇಧಸಃ—ಮೇಧಾವಿನಃ ಅಸ್ಯ ಯಜಮಾನಸ್ಯ ।** ಈ ಪದವು **ಮೇಧಾವಿ**ನಾಮಗಳಲ್ಲಿ ಪಠಿತವಾಗಿದೆ. (ನಿ. ೩-೧೫) ಮತ್ತು ಈ ಋಕ್ಕಿನಲ್ಲಿ ಯಜಮಾನನ ಪರ್ಯಾಯಪದವಾಗಿ ಉಪಯೋಗಿಸಲ್ಪಟ್ಟಿದೆ. [ಹಿಂದಿನ ಋಕ್ಕಿನಲ್ಲಿ ೧-೧೫೬-೨. ಸೃಷ್ಟಿಕರ್ತನಾದ ಎಂಬರ್ಥವಾಗುವುದೆಂದೂ ತಿಳಿಸಿದೆ.]

**ವ್ರಜಂ—ವ್ರಜಂತ್ಯಂತರಿಕ್ಷೇ ।** ಅಂತರಿಕ್ಷದಲ್ಲಿ ಚಲಿಸುವುದರಿಂದ ಮೇಘಕ್ಕೆ ಈ ಹೆಸರು. (ನಿ. ೬-೨)

ಅಹರ್ವಿದಂ—ಅಹರ್ವೇತ್ತಾರಂ । **ಸ್ವರ್ಗೋತ್ಪಾದಕಮಿತ್ಯರ್ಥಃ ।** ಸ್ವರ್ಗೋತ್ಪಾದಕವಾದ, ದಕ್ಷಃ— ಎಂದರೆ ಶಕ್ತಿಯನ್ನು ಧರಿಸಿದನು, ಎಂದು ವಿಷ್ಣುವಿನ ಮಹತ್ತ್ವವನ್ನು ಸ್ತುತಿಸಿದೆ.

ಮೇಲೆ ಹೇಳಿದ ಅರ್ಥವಲ್ಲದೆ, ಸಾಯಣರು ಈ ಋಕ್ಕಿಗೆ ಇನ್ನೊಂದು ವಿಧವಾಗಿಯೂ ಅರ್ಥಮಾಡಿದ್ದಾರೆ. ವೇಧಸಃ ಎನ್ನುವುದಕ್ಕೆ ಯಜ್ಞಕರ್ತನೆಂದಲ್ಲದೆ, ವಿಧಾತೃವಾದ ವಿಷ್ಣುವೆಂದೂ ಅರ್ಥವಾಗುವುದೆಂದು ತಿಳಿಸಿ,

> **ಯದ್ವಾ, ಮಾರುತಸ್ಯ ಮರುತ್ಸಂಘಾತಸ್ಯ ದೇವಗಣಸ್ಯ ವೇಧಸೋ ವಿಧಾತುಃ ಸ್ರಷ್ಟುರ್ವಿಷ್ಣೋಃ ಕ್ರತುಂ ಕರ್ಮ ಪಾಲನಾದಿರೂಪಂ ವರುಣಾದಯಃ ಸಚಂತೇ । ತದಧೀನತ್ವಾತ್ಪಾಲನಸ್ಯ । ಸಚ ಸಖಿವಾನ್ ಇಂದ್ರಮರುದಾದಿಸಹಾಯೋಪೇತಃ ಸನ್ ದಕ್ಷಂ ವೃಷ್ಟ್ಯುತ್ಪಾದನಾದಿಸಾಮರ್ಥ್ಯರೂಪಂ ಬಲಂ ದಾಧಾರ ।**

ದೇವಗಣದ ಸಂಬಂಧಿಯಾದವನೂ ಸೃಷ್ಟಿಕರ್ತನೂ ಆದ ವಿಷ್ಣುವಿನ ಜಗತ್ಪಾಲನಾದಿರೂಪವಾದ ಕರ್ಮವನ್ನು ವರುಣಾದಿಗಳು ಸೇವಿಸುತ್ತಾರೆ. ಮತ್ತು ಇಂದ್ರ ಮತ್ತು, ಮರುತ್ತು ಇತ್ಯಾದಿದೇವತೆಗಳ ಸಹಾಯದಿಂದ ಕೂಡಿ ಶಕ್ತಿಯನ್ನು ಸಂಪಾದಿಸಿದ ವಿಷ್ಣುವು ವೃಷ್ಟ್ಯುತ್ಪಾದನವೇ ಮುಂತಾದ ಕಾರ್ಯಗಳಿಗೆ ಸಾಮರ್ಥ್ಯವನ್ನು ಪಡೆದನು ಎಂದರ್ಥವು ಎಂದು ಎರಡನೆಯದಾಗಿ ಋಕ್ಕಿನ ಅರ್ಥವನ್ನು ವಿವರಿಸಿದ್ದಾರೆ.

### ವ್ಯಾಕರಣಪ್ರಕ್ರಿಯಾ

**ರಾಜಾ**—ರಾಜೃ ದೀಪ್ತೌ ಧಾತು. **ಕನಿನ್ಯುವೃಷಿ** (ಉ. ಸೂ. ೧-೧೫೪) ಎಂಬುದರಿಂದ ಕನಿನ್ ಪ್ರತ್ಯಯ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಅಶ್ವಿನಾ—ಸುಪಾಂ ಸುಲುಕ್** (ಪಾ. ಸೂ. ೭-೧-೩೯) ಎಂಬುದರಿಂದ ವಿಭಕ್ತಿಗೆ (ಔ) ಆಕಾರಾದೇಶ ಬರುತ್ತದೆ.

**ಸಚಂತೆ**—ಷಚ ಸಮವಾಯೇ ಧಾತು. **ಧಾತ್ವಾದೇಃಷಃಸಃ** ಎಂಬುದರಿಂದ ಆದಿಗೆ ಸತ್ವ. ಛಾಂದಸವಾಗಿ ವರ್ತಮಾನಾರ್ಥದಲ್ಲಿ ಲಙ್. ಪ್ರಥಮಪುರುಷಬಹುವಚನದಲ್ಲಿ ಝಪ್ರತ್ಯಯಕ್ಕೆ ಅಂತಾದೇಶ. **ಬಹುಲಂ ಛಂದಸ್ಯಮಾಙ್ಯೋಗೇಽಪಿ** ಎಂಬುದರಿಂದ ಅಡಾಗಮ ಬರುವುದಿಲ್ಲ. ತಿಙಂತನಿಘಾತಸ್ವರ ಬರುತ್ತದೆ.

**ಮಾರುತಸ್ಯ**—ಮರುತಾಂ ಸಮೂಹಃ ಮಾರುತಮ್. ಅಞ್ ಪ್ರತ್ಯಯ. ಆದಿವೃದ್ಧಿ. ತದಸ್ಯ ಅಸ್ತಿ. ಎಂದು ಅರ್ಥವಿವಕ್ಷೆಮಾಡಿದಾಗ ಮತುಪ್ ಬಂದಾಗ ಛಾಂದಸವಾಗಿ ಅದಕ್ಕೆ ಲುಕ್.

**ದಾಧಾರ**—ಡುಧಾಞ್ ಧಾರಣಪೋಷಣಯೋಃ. ಧಾತು. ಲಿಟ್ ಪ್ರಥಮಪುರುಷ ಏಕವಚನಾಂತರೂಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಣಲ್ ಲಿತ್ತಾದುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ.

**ಅಹರ್ವಿದಮ್**—ವಿದ ಜ್ಞಾನೇ ಧಾತು. **ಕ್ವಿಪ್ ಚ** ಎಂಬುದರಿಂದ ಕ್ವಿಪ್ ಪ್ರತ್ಯಯ. **ಗತಿಕಾರಕೋಪಪದಾತ್ಕೃತ್** ಎಂಬುದರಿಂದ ಕೃದುತ್ತರ ಪದ ಪ್ರಕೃತಿಸ್ವರ ಬರುತ್ತದೆ. ದ್ವಿತೀಯಾಏಕವಚನಾಂತರೂಪ.

**ಸಖಿವಾನ್**—ಸಖಾ ಅಸ್ಯ ಅಸ್ತಿ ಇತಿ ಸಖಿವಾನ್. **ಛಂದಸೀವನಿಪೌ** ಎಂಬುದರಿಂದ ಮತ್ವರ್ಥದಲ್ಲಿ ವನಿಪ್ ಪ್ರತ್ಯಯ. ಇದು ಪಿತ್ತಾದುದರಿಂದ ಅನುದಾತ್ತವಾಗುತ್ತದೆ. ಇದಕ್ಕೆ ಉಪ ಎಂದು ಅಚ್ ಪರವಾಗಿರುವುದರಿಂದ **ದೀರ್ಘಾದಟಿ ಸಮಾನಪಾದೇ** (ಪಾ. ಸೂ. ೮-೩-೯) ಎಂಬುದರಿಂದ ನಕಾರಕ್ಕೆ ರುತ್ವ. **ಆತೋಟಿ ನಿತ್ಯಮ್** (ಪಾ. ಸೂ. ೮-೩-೩) ಎಂಬುದರಿಂದ ಪೂರ್ವದ ಆಕಾರಕ್ಕೆ ಸಂಹಿತಾದಲ್ಲಿ ನಿತ್ಯವಾಗಿ ಅನುನಾಸಿಕತ್ವ.

**ಅಪ ಊರ್ಣುತೇ**—ಊರ್ಣುಞ್ ಆಚ್ಛಾದನೇ. ಧಾತು. ಅದಾದಿ. ಲಟ್ ಪ್ರಥಮಪುರುಷ ಏಕವಚನಾಂತರೂಪ. ಚ ಎಂಬುದರ ಸಂಬಂಧವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. **ತಿಙಿಚೋದಾತ್ತವತಿ** (ಪಾ. ಸೂ. ೮-೧-೭೧) ಎಂಬುದರಿಂದ ಗತಿಗೆ (ಅಪ) ನಿಘಾತಸ್ವರ ಬರುತ್ತದೆ. ॥ ೪ ॥

---

ಸಂಹಿತಾಪಾಠಃ

ಆ ಯೋ ವಿವಾಯ ಸಚಥಾಯ ದೈವ್ಯ ಇಂದ್ರಾಯ ವಿಷ್ಣುಃ ಸುಕೃತೇ ಸುಕೃತ್ತರಃ ।
ವೇಧಾ ಅಜಿನ್ವತ್ತ್ರಿಷಧಸ್ಥ ಆರ್ಯಮೃತಸ್ಯ ಭಾಗೇ ಯಜಮಾನಮಾಭಜತ್ ॥ ೫ ॥

ಪದಪಾಠಃ

ಆ । ಯಃ । ವಿವಾಯ । ಸಚಥಾಯ । ದೈವ್ಯಃ । ಇಂದ್ರಾಯ । ವಿಷ್ಣುಃ । ಸುಽಕೃತೇ । ಸುಕೃತ್ಽತರಃ ।
ವೇಧಾಃ । ಅಜಿನ್ವತ್ । ತ್ರಿಽಸಧಸ್ಥಃ । ಆರ್ಯಂ । ಋತಸ್ಯ । ಭಾಗೇ । ಯಜಮಾನಂ । ಆ । ಅಭಜತ್ । ॥ ೫ ॥

ಸಾಯಣಭಾಷ್ಯಂ

ಯೋ ವಿಷ್ಣುರ್ದೈವ್ಯೋ ದಿವಿ ಭವಃ ಸುಕೃತ್ತರಃ ಶೋಭನಫಲಪ್ರದಾನಾಂ ಮಧ್ಯೇ ಶ್ರೇಷ್ಠ ಆ ವಿವಾಯ । ಆಗಚ್ಛತಿ ॥ ವೇತೇರ್ಲಿಟಿ ರೂಪಂ ॥ ಕಿಮರ್ಥಂ । ಸಚಥಾಯ ಸಚನಾಯ ಯೋಗಸಹಾಯಕರಣಾಯ । ಕಸ್ಮೈ । ಇಂದ್ರಾಯ । ಇರಾಂ ಹವಿರ್ಲಕ್ಷಣಾನ್ನಂ ದ್ರಾವಯತೀತೀಂದ್ರೋ ಯಜಮಾನಃ । ಇಂದ್ರ ಇರಾಂ ದೃಣಾತೀತಿ ಇದಂಕರಣಾದಿತ್ಯಾಗ್ರಾಯಣ ಇತಿ ಯಾಸ್ಕೇನೋಕ್ತನಿರ್ವಚನಸ್ಯಾತ್ರಾಪಿ ಸದ್ಭಾವಾತ್। ನಿ. ೧೦-೮॥ ತಸ್ಮಾ ಉಕ್ತರೂಪಾಯ ಯಜಮಾನಾಯ ಸುಕೃತೇ ಶೋಭನಸ್ತುತಿಕರ್ತ್ರೇ। ಆಗತ್ಯ ಚ ವೇಧಾ ಅಭಿಮತಫಲವಿಧಾತಾ ತ್ರಿಷಧಸ್ಥಸ್ತ್ರಿಸಂಖ್ಯೋಪೇತಸಹಸ್ಥಾನವಾನ್ । ಸವನತ್ರಯಸ್ಥಾನಃ ಕ್ಷಿತ್ಯಾದಿಸ್ಥಾನತ್ರಯೋ ವಾ ವಿಷ್ಣುಃ । ಆರ್ಯಮಾಗಂತವ್ಯಂ ಯಜಮಾನಮಜಿನ್ವತ್ । ಪ್ರೀಣಯತಿ ॥ ಜಿವಿ ಪ್ರೀ-

**ನಾರ್ಥಃ । ಇದಿತ್ವಾನ್ನುವಮ್ ॥ ತದರ್ಥಮೃತಸ್ಯ ಯಜ್ಞಸ್ಯ ಭಾಗೇ ಹುತಶೇಷರೂಪೇ ತಂ ಯಜಮಾನಮಾಭಜತ್ । ಭಜತಿ । ಸವಿಾಪಯತೀತ್ಯರ್ಥಃ । ಯದ್ವಾ । ಋತಸ್ಯ ಯಜ್ಞಸ್ಯ ಭಾಗೇ ಫಲೇ ಯಜಮಾನಮಾಭಜತ್ । ಸ್ವಾಮಿತ್ವೇನ ಸ್ಥಾಪಯತಿ ॥**

ಪ್ರತಿಪದಾರ್ಥ

**ದೈವ್ಯಃ**—ದೇವತಾತ್ಮನಾದ । **ಯಃ ವಿಷ್ಣುಃ**—ಯಾವ ವಿಷ್ಣುವು । **ಸುಕೃತ್ತರಃ**—ಉತ್ತಮವಾದ ಫಲಗಳನ್ನು ಕೊಡುವವರಲ್ಲಿ ಶ್ರೇಷ್ಠನಾಗಿ । **ಸುಕೃತೇ**—ಶ್ರೇಷ್ಠವಾದ ಕರ್ಮಗಳನ್ನು ನೆರವೇರಿಸುವ । **ಇಂದ್ರಾಯ**—ಹವಿಸ್ಸನ್ನು ಯಜಮಾನನಿಗೆ (ಅರ್ಪಿಸುವ) । **ಸಚೆಥಾಯ**—(ಯಜ್ಞದಲ್ಲಿ ಸಹಾಯವನ್ನು ಮಾಡುವುದಕ್ಕಾಗಿ । **ಆ ವಿವಾಯ**—ಬರುತ್ತಾನೆ. । **ವೇಧಾಃ**—(ಅಭಿಮತವಾದ ಫಲಗಳನ್ನು) ನಿಯಮಿಸುವವನೂ । **ತ್ರಿಷಧಸ್ಥಃ**—(ಸವನತ್ರಯದಲ್ಲಿಯೂ) ಮೂರು ಬೇರೆಬೇರೆ ಸ್ಥಾನಗಳನ್ನು ಅಕ್ರಮಿಸುವವನೂ ಅಥವಾ ಕ್ಷಿತ್ಯಾದಿ ಮೂರು ಸ್ಥಾನಗಳುಳ್ಳವನೂ (ಆದ ವಿಷ್ಣುವು) । **ಆರ್ಯಂ**—ಆರ್ಯನಾದ ಯಜಮಾನನನ್ನು । **ಅಜಿನ್ವತ್**—ಸಂತೋಷಗೊಳಿಸುತ್ತಾನೆ । **ಋತಸ್ಯ**—ಯಜ್ಞದ । **ಭಾಗೇ**—ಭಾಗದಲ್ಲಿ ಅಥವಾ ಯಜ್ಞದ ಫಲವನ್ನು ಅನುಭವಿಸುವುದಕ್ಕೆ । **ಯಜಮಾನಂ**—ಯಜಮಾನನನ್ನು । **ಆ ಅಭಜತ್**—ಸವಿಾಪಿಸುತ್ತಾನೆ. (ಅರ್ಹನನ್ನಾಗಿ ಮಾಡುತ್ತಾನೆ).

ಭಾವಾರ್ಥ

ಉತ್ತಮವಾದ ಫಲಗಳನ್ನು ಕೊಡುವವರಲ್ಲಿ ಶ್ರೇಷ್ಠನೂ, ದೇವತಾತ್ಮನೂ ಆದ ವಿಷ್ಣುವು ಶ್ರೇಷ್ಠವಾದ ಕರ್ಮಗಳನ್ನು ನೆರವೇರಿಸುವವನೂ, ಹವಿಸ್ಸನ್ನು ಅರ್ಪಿಸುವವನೂ ಆದ ಯಜಮಾನನಿಗೆ ಯಜ್ಞದಲ್ಲಿ ಸಹಾಯವನ್ನು ಮಾಡುವುದಕ್ಕಾಗಿ ಬರುತ್ತಾನೆ. ಅಭಿಮತವಾದ ಫಲಗಳನ್ನು ನಿಯಮಿಸುವವನೂ ಸವನತ್ರಯದಲ್ಲಿಯೂ ಮೂರು ಬೇರೆ ಬೇರೆ ಸ್ಥಾನಗಳನ್ನು ಆಕ್ರಮಿಸುವವನೂ ಆದ ವಿಷ್ಣುವು ಆರ್ಯನಾದ ಯಜಮಾನನಿಗೆ ಯಜ್ಞದ ಫಲವನ್ನು ಅನುಭವಿಸುವುದಕ್ಕೆ ಅರ್ಹನನ್ನಾಗಿ ಮಾಡಿ ಅವನ ಸವಿಾಪಕ್ಕೆ ಬಂದು ಅವನನ್ನು ಸಂತೋಷಗೊಳಿಸುತ್ತಾನೆ.

English Translation

The divine Vishnu, the best of the doers of good deeds, who came to the pious institutor of the rite to assist (at its celebration), knowing (the desires of the worshipper), and present at the three connected periods (of worship), shows favour to the Arya, and admits the author of the ceremony to a share of the sacrifice.

ವಿಶೇಷವಿಷಯಗಳು

ವಿಷ್ಣುಃ ಇಂದ್ರಾಯ ಸಚೆಥಾಯ ಆ ವಿವಾಯ ; ಆರ್ಯಂ ಅಜಿನ್ವತ್ ; ಯಜಮಾನಂ ಸ್ವಾಮಿತ್ವೇನ ಸ್ಥಾಪಯತಿ । ವಿಷ್ಣುವು ಯಜಮಾನನಿಗೆ ಸಹಾಯಮಾಡುವುದಕ್ಕಾಗಿ ಬರುತ್ತಾನೆ; ಯಜಮಾನನನ್ನು ಸಂತೋಷಗೊಳಿಸುತ್ತಾನೆ ಮತ್ತು ಯಜಮಾನನನ್ನು ಯಜ್ಞಫಲಕ್ಕೆ ಅರ್ಹನಾದವನನ್ನಾಗಿ ಮಾಡುತ್ತಾನೆ ಎಂದು ಯಜಮಾನನಿಗೂ ವಿಷ್ಣುವಿಗೂ ಇರತಕ್ಕ ಉಪಕಾರ್ಯೋಪಕಾರಕ ಸಂಬಂಧವನ್ನು ತಿಳಿಸಿದೆ.

**ಸುಕೃತೇ ಇಂದ್ರಾಯ— ಶೋಭನಸ್ತುತಿಕರ್ತ್ರೇ ಯಜಮಾನಾಯ ।** ಶ್ರೇಷ್ಠವಾದ ಸ್ತುತಿಯನ್ನು ಮಾಡತಕ್ಕ ಯಜಮಾನನಿಗೆ ಎಂದರ್ಥಮಾಡಿವೆ, ಮತ್ತು ಇಂದ್ರಶಬ್ದಕ್ಕೆ **ಯಜಮಾನನೆಂಬ** ಹೆಸರು ಹೇಗೆ ಬಂದಿರಬಹುದೆಂದು ಆಶಂಕೆಯನ್ನು ತೋರಿಸಿ, **ಇರಾಂ ಹವಿರ್ಲಕ್ಷಣಾನ್ನಂ ದ್ರಾವಯತೀಂದ್ರೋ ಯಜಮಾನಃ । ಇಂದ್ರ ಇರಾಂ ದೃಣಾತೀತಿ; ಇದಂ ಕರಣಾದಿತ್ಯಾಗ್ರಾಯಣ ಇತಿ ಯಾಸ್ಕೇನೋಕ್ತನಿರ್ವಚನಸ್ಯಾತ್ರಾಪಿ ಸದ್ಭಾವಾತ್ ।** ಎಂದು ನಿರುಕ್ತದಲ್ಲಿ ಹೇಳಿರುವ ನಿರ್ವಚನವನ್ನು ತೋರಿಸಿ ದೇವತಾವಿಶೇಷವಾದ **ಇಂದ್ರನಿಗೆ** ಈ ನಾಮವು ಯಾವ ಕಾರಣದಿಂದ ಪ್ರಸಿದ್ಧವಾಗಿದೆಯೋ ಅದೇ ಕಾರಣದಿಂದ ಯಜಮಾನನಿಗೂ ಇಂದ್ರನೆಂಬ ಹೆಸರು ಪ್ರಸಿದ್ಧವಾಗಿದೆಯೆಂದು ತೋರಿಸಿದ್ದಾರೆ. ನಿರುಕ್ತದಲ್ಲಿ **ಇಂದ್ರಶಬ್ದಕ್ಕೆ** ನಾನಾವಿಧವಾದ ವ್ಯುತ್ಪತ್ತಿಯನ್ನು ತೋರಿಸಿದ್ದಾರೆ. (ನಿ. ೧೦-೮).

**ಇಂದ್ರ ಇರಾಂ ದೃಣಾತೀತಿ ವಾ ।** ವಿಭಾಗಮಾಡು ಎಂಬರ್ಥವನ್ನು ಕೊಡುವ **ದೃ** ಧಾತುವಿನಿಂದ ನಿಷ್ಪನ್ನವಾಗಿ, **ಇರಾಂ ಅನ್ನಂ ವ್ರೀಹ್ಯಾದಿ ದೃಣಾತಿ ವಿದಾರಯತಿ । ವರ್ಷಕ್ಲೇದಿತಮಂಕುರಂ ಬೀಜಂ ಭಿನತ್ತಿ ।** ವ್ರೀಹ್ಯಾದಿರೂಪವಾದ ಅನ್ನವನ್ನು ವಿಭಾಗ ಮಾಡುತ್ತಾನೆ ಎಂದರೆ ಮಳೆಯಿಂದ ತೋಯಲ್ಪಟ್ಟ ಬೀಜಾದ್ಯಂಕುರಗಳನ್ನು ಬಿಡಿಸಿ ವೃಕ್ಷವಾಗುವಂತೆ ಮಾಡುತ್ತಾನೆ ಎಂದಾಗುವುದರಿಂದಾಗಲಿ, ಅಥವಾ ;

**ಇರಾಂ ದದಾತೀತಿ ವಾ**—ಕೊಡು ಎಂಬರ್ಥವುಳ್ಳ **ದಾ** ಧಾತುವಿನಿಂದ ನಿಷ್ಪನ್ನವಾಗಿ **ವರ್ಷದ್ವಾರೇಣಾಸೌ ಇರಾಂ ದದಾತಿ**—ವೃಷ್ಟ್ಯುತ್ಪಾದನದ ಮೂಲಕವಾಗಿ ಅನ್ನವನ್ನು ಕೊಡುತ್ತಾನೆಂಬುದರಿಂದಾಗಲಿ,

**ಇರಾಂ ದಧಾತೀತಿ ವಾ**—ಪೋಷಣಾರ್ಥಕವಾದ **ಧಾ** ಧಾತುವಿನಿಂದ ನಿಷ್ಪನ್ನವಾಗಿ ಅನ್ನಾದಿಗಳನ್ನು ವೃಷ್ಟಿದ್ವಾರಾ ಕೊಟ್ಟು ಪೋಷಿಸುವುದರಿಂದಾಗಲಿ,

**ಇರಾಂ ದಾರಯತೆ ಇತಿ ವಾ**—ಸೀಳುವಂತೆ ಮಾಡು ಎಂಬರ್ಥವನ್ನು ಕೊಡುವ **ದ್ಯೂ** ಧಾತುವಿನಿಂದ ನಿಷ್ಪನ್ನವಾಗಿ ಸಸ್ಯಾದಿಗಳಿಗಾಗಿ ಭೂಮಿಯನ್ನು ಉಳುವರೂಪದಲ್ಲಿ ಹದಮಾಡುವುದರಿಂದಾಗಲಿ ;

**ಇಂದವೇ ದ್ರವತೀತಿ ವಾ**—ಓಡು ಎಂಬರ್ಥವನ್ನು ಕೊಡುವ **ದ್ರು**—ಧಾತುವಿನಿಂದ ನಿಷ್ಪನ್ನವಾಗಿ ಸೋಮರಸಕ್ಕಾಗಿ ಆತುರದಿಂದ ಓಡಿ ಬರುವವನು ಎಂಬುದರಿಂದಾಗಲಿ,

**ಇಂದೌ ರಮತೆ ಇತಿ ವಾ—ಸಂತೋಷಪಡು** ಎಂಬರ್ಥವನ್ನು ಕೊಡುವ **ರಮ್** ಧಾತುವಿನಿಂದ ನಿಷ್ಪನ್ನವಾಗಿ **ಸೋಮರಸದ** ಪಾನದಿಂದ ತೃಪ್ತನಾಗುವವನು ಎಂಬುದರಿಂದಾಗಲಿ,

**ಇಂಧೇ ಭೂತಾನೀತಿ ವಾ**—ಪ್ರಕಾಶಿಸು ಎಂಬರ್ಥವನ್ನು ಕೊಡುವ **ಇಂಧ್** ಧಾತುವಿನಿಂದ ನಿಷ್ಪನ್ನವಾಗಿ ಭೂತಗಳನ್ನು ಪ್ರಕಾಶಿಸುವಂತೆ ಮಾಡುವವನು ಎಂಬುದರಿಂದಾಗಲಿ, **ಇಂದ್ರನೆಂಬ** ಹೆಸರು ಪ್ರಸಿದ್ಧವಾಗಿದೆಯೆಂದು ತಮ್ಮ ವೈಯಕ್ತಿಕವಾದ ಅಭಿಪ್ರಾಯವನ್ನು ತಿಳಿಸಿ ಅನಂತರ **ಇತರ** ಆಚಾರ್ಯರ ಅಭಿಪ್ರಾಯಗಳನ್ನು ತಿಳಿಸಿದ್ದಾರೆ ;—

**ಇದಂಕರಣಾದಿತ್ಯಾಗ್ರಯಣಃ**—ವಿಶ್ವಸೃಷ್ಟಿಯಲ್ಲಿ ಎಲ್ಲವನ್ನೂ ಇವನೇ ಮಾಡಿದನು ಎಂಬುದರಿಂದ (ಇದಮಸೌ ಸರ್ವಮಕರೋತ್) **ಇಂದ್ರಶಬ್ದ** ವಾಚ್ಯನಿದೆಯೆಂದು ಆಗ್ರಾಯಣ ಮುನಿಗಳ ಮತವಾಗಿದೆ.

**ಇದಂ ದರ್ಶನಾದಿತ್ಯೌಪಮನ್ಯವಃ**—ಸಕಲವನ್ನೂ ದರ್ಶನಮಾಡತಕ್ಕ ಶಕ್ತಿಯಿರುವುದರಿಂದ ಇಂದ್ರಶಬ್ದ ವಾಚ್ಯನೆಂದು **ಔಪಮನ್ಯವ** ಋಷಿಗಳ ಮತ.

**ಇಂದತೇರ್ವೈಶ್ವರ್ಯಕರ್ಮಣಃ**—ವಿಶ್ವಕ್ಕೆಲ್ಲಾ ಪ್ರಭುವಾಗಿರುವುದರಿಂದಲೂ ಸಹ ಈ ಹೆಸರಿರಬಹುದು.

**ಇಂದಞ್ಛತ್ರೂಣಾಂ ದಾರಯಿತಾ ವಾ ದ್ರಾವಯಿತಾ ವಾ।** ಸರ್ವಶಕ್ತಿಯಿಂದ ಕೂಡಿ ಶತ್ರುಗಳನ್ನು ಸೀಳುವವನು ಅಥವಾ ಓಡಿಸುವವನು ಎಂಬುದರಿಂದಾಗಲಿ ಈ ಪ್ರಸಿದ್ಧವಾದ ಹೆಸರಿದೆ.

**ಆದರಯಿತಾ ಚ ಯಜ್ವನಾಂ**—ಯಜ್ಞಕರ್ತರನ್ನು ಪ್ರೀತಿಸಿ ಆದರಿಸುವದರಿಂದಲೂ ಈ ಹೆಸರು ಎಂಬುದಾಗಿ **ಇಂದ್ರ** ಶಬ್ದಕ್ಕೆ ನಾನಾವಿಧವಾದ ಉತ್ಪತ್ತಿಯನ್ನು ತೋರಿಸಿದ್ದಾರೆ. ಅದೇ ನಿರ್ವಚನವು **ಯಜ್ಞಕರ್ತ**ನ ಪರವಾಗಿರುವ ಇಂದ್ರಶಬ್ದಕ್ಕೂ ಸಹ ಅನ್ವಯಿಸುವುದೆಂದು ಸಾಯಣರು ತಿಳಿಸಿದ್ದಾರೆ. ಯಜ್ಞಯಾಗಾದಿಗಳಿಂದ ವೃಷ್ಟ್ಯುತ್ಪನ್ನವಾಗಿ ಅನಂತರ ಅನ್ನಸಾಧನವಾದ ಬೀಜಾಂಕುರದ ಪ್ರಭವವೂ, ಅನ್ನವಿಭಾಗವೂ ಆಗುವುದರಿಂದಲೂ, ಯಾಗಾದಿಸಾಧನಗಳಿಂದ ಅನ್ನಸಂಪತ್ತನ್ನು ವೃದ್ಧಿಮಾಡಿ ಭೂತಗಳನ್ನು ಪ್ರಕಾಶಿಸುವಂತೆ ಮಾಡುವುದರಿಂದಲೂ, ಲೋಕದ ಕ್ಷೇಮಕ್ಕೆಲ್ಲಾ ಯಜ್ಞಕರ್ತನೇ ಮೂಲವಾಗಿರುವುದರಿಂದಲೂ ಸಹ ದೇವತಾತ್ಮಕವಾದ ಇಂದ್ರಶಬ್ದಕ್ಕೆ ಯಾವ ವ್ಯುತ್ಪತ್ತಿಯೋ ಅದೇ ವ್ಯುತ್ಪತ್ತಿಯು ಯಜ್ಞಕರ್ತನ ಪರವಾದ ಇಂದ್ರಶಬ್ದಕ್ಕೂ ಸಾಧ್ಯವಾಗುತ್ತದೆ.

**ಅಜಿನ್ವತ್ — ಜಿನ್ವತಿಃ ಪ್ರೀತಿಕರ್ಮಾ ।** ತೃಪ್ತಿಪಡಿಸಿ ಸಂತೋಷವನ್ನುಂಟುಮಾಡುವುದೆಂದರ್ಥ. (ನಿ. ೬-೨೨) ಎಂದು ಈ ಪದದ ಅರ್ಥವನ್ನು ತಿಳಿಸಿ ನಿರುಕ್ತಕಾರರು,

**ಸಮಾನಮೇತದುದಕಮುಚ್ಚೈತ್ಯವ ಚಾಹಭಿಃ ।**
**ಭೂಮಿಂ ಪರ್ಜನ್ಯಾ ಜಿನ್ವಂತಿ ದಿವಂ ಜಿನ್ವಂತ್ಯಗ್ನಯಃ ॥**
(ಋ. ಸಂ. ೧-೧೬೪-೫೧)

ಎಂಬ ಋಕ್ಕನ್ನುದಹರಿಸಿ ಪರ್ಜನ್ಯವು ಯಾವರೀತಿ ಪೃಥ್ವಿಗೆ ಅನ್ನಾದಿಗಳನ್ನು ಕೊಟ್ಟು ತೃಪ್ತಿಪಡಿಸಿ ಸಂತೋಷಕಾರಕ ವಾಗುತ್ತದೆಯೋ ಅದೇರೀತಿ **ಅಗ್ನಿಯೂ** ಸಹ ಹವಿಸ್ಸಾದಿಗಳನ್ನು ವಹಿಸುವುದರಿಂದ ದೇವಲೋಕಕ್ಕೆ ತೃಪ್ತಿಯನ್ನೂ ಹರ್ಷವನ್ನೂ ಉಂಟುಮಾಡುತ್ತಾನೆಂದು ತಿಳಿಸುವಾಗ ಜಿನ್ವಂತಿ ಎಂಬ ಪದದ ಪ್ರಯೋಗದ ಸ್ವಾರಸ್ಯವನ್ನು ತಿಳಿಸಿದ್ದಾರೆ. ಅದರಂತೆ ಪ್ರಕೃತವಾದ ಋಕ್ಕಿನಲ್ಲಿಯೂ ಸಹ **ವಿಷ್ಣುವು** ಯಜಮಾನನಿಗೆ ಹರ್ಷಕಾರಕನಾಗಿದ್ದಾನೆಂದರ್ಥ.

॥ ವ್ಯಾಕರಣಪ್ರಕ್ರಿಯಾ ।

**ವಿವಾಯ**—ವೀ ಗತ್ಯಾದಿಷು ಧಾತು. ಅದಾದಿ. ಲಿಟ್ ಪ್ರಥಮಪುರುಷಏಕವಚನದಲ್ಲಿ ಣಲಾದೇಶ ಬಂದಾಗ ದ್ವಿತ್ವ. ಅಭ್ಯಾಸಕ್ಕೆ ಹ್ರಸ್ವ. ಣಿತ್ತಾದುದರಿಂದ **ಅಚೋಞ್ಣಿತಿ** ಎಂಬುದರಿಂದ ವೃದ್ಧಿ. ಆಯಾದೇಶ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಣಲ್ ಲಿತ್ತಾದುದರಿಂದ **ಲಿತಿ** (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ.

**ಸಚಥಾಯ**—ಷಚ ಸಮವಾಯೇ ಧಾತು. ಭಾವಾರ್ಥದಲ್ಲಿ ಲ್ಯುಟ್ ಪ್ರತ್ಯಯ. ಅದಕ್ಕೆ ಅನಾದೇಶ. ವರ್ಣವ್ಯತ್ಯಯ ಬಂದಿದೆ ಅಥವಾ ಬಹುಲಗ್ರಹಣದಿಂದ ಔಣಾದಿಕ ಅಥ ಪ್ರತ್ಯಯ. ಪ್ರತ್ಯಯದ ಆದ್ಯುದಾತ್ತ ಸ್ವರ ಬರುತ್ತದೆ. ಚತುರ್ಥೀಏಕವಚನಾಂತರೂಪ.

**ದೈವ್ಯಃ**—ದಿವಿ ಭವಃ ದೈವ್ಯಃ ಭಾವಾರ್ಥದಲ್ಲಿ ಯಞ್ ಪ್ರತ್ಯಯ. **ತದ್ಧಿತೇಷ್ವಚಾಮಾದೇಃ** ಎಂಬುದರಿಂದ ಆದಿವೃದ್ಧಿ, **ಞ್ನಿತ್ಯಾದಿರ್ನಿತ್ಯಮ್** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಸುಕೃತೇ**— ಶೋಭನಂ ಕರೋತಿ ಇತಿ ಸುಕೃತ್. ಡುಕೃಞ್ ಕರಣೇ ಧಾತು. ಕ್ವಿಪ್ ಪ್ರತ್ಯಯ. **ಹ್ರಸ್ವಸ್ಯ ಪಿತಿ ಕೃತಿ ತುಕ್** (ಪಾ. ಸೂ. ೬-೧-೭೧) ಎಂಬುದರಿಂದ ಧಾತುವಿಗೆ ತುಕಾಗಮ. ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. ಸುಕೃತ್ತರ ಎಂಬಲ್ಲಿ ಅತಿಶಯಾರ್ಥದಲ್ಲಿ ತರಪ್‌ಪ್ರತ್ಯಯ ಬಂದಿದೆ. ಪಿತ್ತಾದುದರಿಂದ ಇದು ಅನುದಾತ್ತವಾಗುತ್ತದೆ.

**ಅಜಿನ್ವತ್**—ಜಿವಿ ಪ್ರೀಣನೇ ಧಾತು. **ಇದಿತೋ ನುಮ್ ಧಾತೋಃ** (ಪಾ. ಸೂ. ೭-೧-೫೮) ಎಂಬುದರಿಂದ ನುಮಾಗಮ. ಛಾಂದಸವಾಗಿ ವರ್ತಮಾನಾರ್ಥದಲ್ಲಿ ಲಙ್. ಪ್ರಥಮಪುರುಷಏಕವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ತ್ರಿಷಧಸ್ಥಃ** ಷ್ಠಾ ಗತಿನಿವೃತ್ತೌ ಧಾತು. **ಸುಪಿ ಸ್ಥಃ** (ಪಾ ಸೂ. ೩-೨-೪) ಎಂಬುದರಿಂದ ಕ ಪ್ರತ್ಯಯ. **ಆತೋ ಲೋಪ ಇಟಿ ಚ** (ಪಾ.ಸೂ. ೬-೪-೬೪) ಎಂಬುದರಿಂದ ಆಕಾರಲೋಪ. ಇದು ಪರವಾದಾಗ ಸಹ ಎಂಬುದಕ್ಕೆ ಸಧಾದೇಶ. ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

**ಅರ್ಯಮ್**—ಋ ಗತೌ ಧಾತು **ಋಹಲೋರ್ಣ್ಯತ್** (ಪಾ. ಸೂ. ೩-೧-೧೨೪) ಎಂಬುದರಿಂದ ಣ್ಯತ್ ಪ್ರತ್ಯಯ. ಣಿತ್ತಾದುದರಿಂದ ಧಾತುವಿಗೆ ವೃದ್ಧಿ. ರ ಪರವಾಗಿ ಬರುತ್ತದೆ.

**ಅಭಜತ್**—ಭಜ ಸೇವಾಯಾಂ ಧಾತು **ಛಂದಸಿಲುಙ್**—(ಪಾ. ಸೂ. ೩-೪-೬) ಎಂಬುದರಿಂದ ವರ್ತಮಾನಾರ್ಥದಲ್ಲಿ ಲಙ್. ಪ್ರಥಮಪುರುಷಏಕವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ ॥ ೫ ॥

ಇಲ್ಲಿಗೆ ೧೫೬ನೇ ಸೂಕ್ತವು ಮುಗಿದುದು.



## ನೂರ ಐವತ್ತೇಳನೆಯ ಸೂಕ್ತವು

---

**ದ್ವಾವಿಂಶೇಽನುವಾಕೇಽಷ್ಟೌ ಸೂಕ್ತಾನಿ । ತತ್ರಾಬೋಧ್ಯಗ್ನಿರ್ಜ್ಮ ಇತಿ ಪ್ರಥಮಂ ಸೂಕ್ತಂ ಷಡೃಚಂ ದೈರ್ಘತಮಸಮಾಶ್ವಿನಂ । ಪೂರ್ವತ್ರ ಜಾಗತಂ ತ್ವಿತಿ ತುಶಬ್ದಾದಿದಮಪಿ ಜಾಗತಂ । ಅಂತ್ಯೇ ದ್ವೇ ತ್ರಿಷ್ಟುಭೌ । ಅಬೋಧಿ ಷಳಾಶ್ವಿನಂ ತ್ವಂತ್ಯೇ ತ್ರಿಷ್ಟುಭಾವಿತ್ಯನುಕ್ರಮಣಿಕಾ ॥ ಪ್ರಾತರನುವಾಕಾಶ್ವಿನ-ಶಸ್ತ್ರಯೋರ್ಜಾಗತೇ ಛಂದಸ್ಯಸ್ಯ ವಿನಿಯೋಗಃ । ಅಥಾಶ್ವಿನ ಇತಿ ಖಂಡೇ ಸೂತ್ರಿತಂ । ಅಬೋಧ್ಯಗ್ನಿರ್ಜ್ಮ ಏಷ ಸ್ಯ ಭಾನುಃ । ಆ. ೪-೧೫ । ಇತಿ ॥**

ಅನುವಾದವು— ಈ ಸೂಕ್ತದಿಂದ ಇಪ್ಪತ್ತೆರಡನೆಯ ಅನುವಾಕವು ಪ್ರಾರಂಭವಾಗುವುದು. ಇದರಲ್ಲಿ ಎಂಟು ಸೂಕ್ತಗಳಿರುವುವು. ಅವುಗಳಲ್ಲಿ **ಅಬೋಧ್ಯಗ್ನಿಃ** ಎಂಬ ಈ ಸೂಕ್ತವು ಮೊದಲನೆಯದು. ಈ ಸೂಕ್ತದಲ್ಲಿ ಆರು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಉಚಥ್ಯಪುತ್ರನಾದ ದೀರ್ಘತಮಸ್ ಎಂಬುವನು ಋಷಿಯು. ಅಶ್ವಿನೀದೇವತೆಗಳು ದೇವತೆಯು. ಹಿಂದೆಯೇ ಹೇಳಿದಂತೆ ಈ ಸೂಕ್ತವೂ ಜಗತೀಛಂದಸ್ಕವು. ಕೊನೆಯ ಎರಡು ಋಕ್ಕುಗಳು ತ್ರಿಷ್ಟುಪ್ ಛಂದಸ್ಸಿನವು. ಅನುಕ್ರಮಣಿಕೆಯಲ್ಲಿ— **ಅಬೋಧಿ ಷಳಾಶ್ವಿನಂ ತ್ವಂತ್ಯೇ ತ್ರಿಷ್ಟುಭೌ** ಎಂದು ಹೇಳಿರುವುದು. ಪ್ರಾತರನುವಾಕಮಂತ್ರಪಠನಕಾಲದಲ್ಲಿ ಆಶ್ವಿನಶಸ್ತ್ರಮಂತ್ರಗಳಲ್ಲಿ ಜಗತೀಛಂದಸ್ಸಿನ ಮಂತ್ರಪಠನಕ್ಕಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ **ಅಥಾಶ್ವಿನ** ಎಂಬ ಖಂಡದ **ಅಬೋಧ್ಯಗ್ನಿರ್ಜ್ಮ ಏಷ ಸ್ಯ ಭಾನುಃ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೪-೧೫)

---

॥ ಓಂ ॥

ಸೂಕ್ತ—೧೫೭

॥ ಮಂಡಲ—೧ ॥ ಅನುವಾಕ—೨೨ ॥ ಸೂಕ್ತ— ೧೫೭ ॥

॥ ಅಷ್ಟಕ—೨ ॥ ಅಧ್ಯಾಯ—೨ ॥ ವರ್ಗ—೨೭ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೬ ॥

॥ ಋಷಿಃ—ದೀರ್ಘತಮಾ ಔಚಥ್ಯಃ ॥

॥ ದೇವತಾ—ಅಶ್ವಿನೌ ।

॥ ಛಂದಃ—೧-೪. ಜಗತೀ । ೫-೬ ತ್ರಿಷ್ಟುಪ್ ॥

---

ಸಂಹಿತಾಪಾಠಃ

ಅಬೋಧ್ಯಗ್ನಿರ್ಜ್ಮ ಉದೇತಿ ಸೂರ್ಯೋ೭ ವ್ಯು೧ಷಾಶ್ಚಂದ್ರಾ ಮಹ್ಯಾವೋ ಅರ್ಚಿಷಾ ।

ಆಯುಕ್ಷಾತಾಮಶ್ವಿನಾ ಯಾತವೇ ರಥಂ ಪ್ರಾಸಾವೀದ್ದೇವಃ ಸವಿತಾ ಜಗತ್ಪೃಥಕ್ ॥ ೧ ॥

### ಪದಪಾಠಃ

ಅಬೋಧಿ । ಅಗ್ನಿಃ । ಜ್ಮಃ । ಉತ್ । ಏತಿ । ಸೂರ್ಯಃ । ವಿ । ಉಷಾಃ । ಚಂದ್ರಾ । ಮಹೀ । ಆವಃ ।
ಅರ್ಚಿಷಾ ।

ಅಯುಕ್ಷಾತಾಂ । ಅಶ್ವಿನಾ । ಯಾತವೇ । ರಥಂ । ಪ್ರ । ಅಸಾವೀತ್ । ದೇವಃ । ಸವಿತಾ । ಜಗತ್ ।
ಪೃಥಕ್ ॥ ೧ ॥

### ಸಾಯಣಭಾಷ್ಯಂ

ಅಯಮಗ್ನಿರ್ನಿಹಿತಃ ಸಞ್ಜ್ಮೋ ಜ್ಮಾಯಾಃ ಪೃಥಿವ್ಯಾ ವೇದಿಲಕ್ಷಣಾಯಾಃ ಸಂಬಂಧೀ ಸನ್ನಬೋಧಿ । ಪ್ರತಿಬೋಧಿತಃ । ಜ್ಮೇತಿ ಪೃಥಿವೀನಾಮ ಗ್ಮಾ ಜ್ಮೇತಿ ತನ್ನಾಮಸೂಕ್ತತ್ವಾತ್ । ಕಿಂಚ ಸೂರ್ಯ ಉದೇತಿ । ಮಹೀ ಮಹತ್ಯುಷಾ ಅರ್ಚಿಷಾ ಪ್ರಕೃಷ್ಟೇನ ತೇಜಸಾ ಚಂದ್ರಾ ಪ್ರಾಣಿನಾಮಾಹ್ಲಾದಿನೀ ಸತೀ ವ್ಯಾವಃ । ತಮಾಂಸಿ ವಿನಾಶಯತಿ ॥ ವಸೇರ್ಲುಙಿ ಛಾಂದಸಶ್ಚ್ಲೇರ್ಲುಕ್ । ಛಂದಸ್ಯಪಿ ದೃಶ್ಯತ ಇತ್ಯಾಡಾಗಮಃ ॥ ಯತ ಇಯಮುಷಾ ಉದೇತಿ ಯತಶ್ಚ ಸೂರ್ಯೋ ಯತಶ್ಚಾಯಮಗ್ನಿಃ ಪ್ರಬುದ್ಧೋ ಭವತಿ ಅತಃ ಕಾರಣಾದ್ಧೇ ಅಶ್ವಿನಾ ಯುಷ್ಮತ್ಸಂಬಂಧಿನಂ ರಥಂ ಯಾತವೇ ದೇವಯಜನಗಮನಾಯ ರಾಸಭಾಭ್ಯಾಮಾಯುಕ್ಷಾತಾಂ । ಆಭಿಮುಖ್ಯೇನ ಯುಂಜಾಥಾಂ । ತಥಾ ಸವಿತಾ ಸರ್ವಕರ್ಮಣೋಽನುಜ್ಞಾತಾ ದೇವೋ ಜಗಜ್ಜಂಗಮಂ ಪ್ರಾಣಿಜಾತಂ ಪೃಥಕ್ ಸ್ವಸ್ವಕರ್ಮಾನುರೋಧೇನ ಪ್ರಾಸಾವೀತ್ । ಪ್ರಸೌತು । ಅನುಜಾನಾತು ॥

### ಪ್ರತಿಪದಾರ್ಥ

**ಅಗ್ನಿಃ**—ಅಗ್ನಿಯು । **ಜ್ಮಃ**—ವೇದಿರೂಪವಾದ ಪೃಥಿವಿಯ ಮೇಲೆ । **ಅಬೋಧಿ**—ಎಚ್ಚರಗೊಂಡಿದ್ದಾನೆ (ಪ್ರಜ್ವಲಿಸುತ್ತಿದ್ದಾನೆ) । **ಸೂರ್ಯಃ**—ಸೂರ್ಯನು । **ಉದೇತಿ**—ಉದಯಿಸುತ್ತಾನೆ । **ಮಹೀ**—ಮಹಾತ್ಮಳಾದ । **ಉಷಾಃ**—ಉಷೋದೇವಿಯು । **ಅರ್ಚಿಷಾ**—ತನ್ನ ಪ್ರಭೆಯೊಡನೆ । **ಚಂದ್ರಾ**—(ಪ್ರಾಣಿಗಳಿಗೆಲ್ಲಾ) ಹರ್ಷವನ್ನುಂಟುಮಾಡುವವಳಾಗಿ । **ವಿ ಆವಃ**—ಕತ್ತಲನ್ನು ಚದುರಿಸುತ್ತಾಳೆ । (ಆದುದರಿಂದ) **ಅಶ್ವಿನಾ**—ಎಲೈ ಅಶ್ವಿನೀ ದೇವತೆಗಳೇ । **ರಥಂ**—ನಿಮ್ಮ ರಥವನ್ನು । **ಯಾತವೇ**—(ಯಜ್ಞಭೂಮಿಗೆ) ಹೋಗುವುದಕ್ಕಾಗಿ । **ಅಯುಕ್ಷಾತಾಂ**—(ಕುದುರೆಗಳೊಡನೆ) ಸೇರಿಸಿಕಟ್ಟಿರಿ (ಹಾಗೆಯೇ) । **ದೇವಃ**—ದೇವತಾತ್ಮನಾದ । **ಸವಿತಾ**—ಸವಿತೃವು । **ಜಗತ್**—ಸಕಲಜಗತ್ತನ್ನೂ । **ಪೃಥಕ್**—(ಸಕಲಪ್ರಾಣಿಗಳಿಗೂ) ಅವುಗಳ ನಿಯತವಾದ ಕರ್ಮಗಳನ್ನು ಮಾಡುವುದಕ್ಕಾಗಿ । **ಪ್ರಾಸಾವೀತ್**—ಚೈತನ್ಯವನ್ನು ಕೊಡಲಿ.

### ಭಾವಾರ್ಥ

ವೇದಿಕೆಯಮೇಲೆ ಅಗ್ನಿಯು ಪ್ರಜ್ವಲಿಸುತ್ತಿದ್ದಾನೆ. ಸೂರ್ಯನೂ ಉದಯಿಸುತ್ತಾನೆ. ಮಹಾತ್ಮಳಾದ ಉಷೋದೇವಿಯು ತನ್ನ ಪ್ರಭೆಯೊಡನೆ ಪ್ರಾಣಿಗಳಿಗೆಲ್ಲಾ ಹರ್ಷವನ್ನುಂಟುಮಾಡುವವಳಾಗಿ ಕತ್ತಲನ್ನು ಚದುರಿಸು

ತ್ತಾಳೆ. ಆದ ಕಾರಣ ಎಲೈ ಅಶ್ವಿನೀದೇವತೆಗಳೇ ಯಜ್ಞಭೂಮಿಗೆ ಹೋಗುವುದಕ್ಕಾಗಿ ನಿಮ್ಮ ರಥವನ್ನು ಕುದುರೆ ಗಳೊಡನೆ ಹೂಡಿಕಟ್ಟಿರಿ. ಹಾಗೆಯೇ ದೇವತಾತ್ಮಕನಾದ ಸವಿತೃವು ಜಗತ್ತಿನ ಸಕಲಪ್ರಾಣಿಗಳಿಗೂ ಅವುಗಳ ನಿಯತವಾದ ಕರ್ಮಗಳನ್ನು ಮಾಡುವುದಕ್ಕಾಗಿ ಚೈತನ್ಯವನ್ನು ಕೊಡಲಿ.

## English Translation

Agni is awakened upon earth: the Sun rises: the spreading dawn, exhilarating (all) by her radiance, has dispersed (the darkness); harness, (therefore), Ashwins, your chariot, to come (to the sacrifice), that the divine Savitri may animate all beings to (the performance of) their several (duties)

### ವಿಶೇಷವಿಷಯಗಳು

**ಪ್ರಾತರನುವಾಕ** ಮಂತ್ರಗಳಲ್ಲಿ ಒಂದಾದ ಈ ಋಕ್ಕಿನಲ್ಲಿ **ಅಶ್ವಿನೀದೇವತೆಗಳನ್ನು**ದ್ದೇಶಿಸಿ ಅವರನ್ನು ಯಜ್ಞಭೂಮಿಗೆ ಹೋಗಲು ಸಿದ್ಧಮಾಡಿಕೊಳ್ಳಬೇಕೆಂದು ಪ್ರಾರ್ಥಿಸಿದೆ ಅವರ ಪ್ರಯಾಣಕ್ಕೆ ಕಾಲವು ಯೋಗ್ಯ ವಾಗಿದೆಯೆಂದು ತಿಳಿಸಲು **ಅಗ್ನಿಯ** ಪ್ರಜ್ವಲನವನ್ನೂ, **ಉಷಸ್ಸಿನ** ಆವಿರ್ಭಾವವನ್ನೂ, **ಸೂರ್ಯನ** ಉದಯವನ್ನೂ ಸೂಚಿಸಿದೆ. ಈ ಎಲ್ಲಾ ಕ್ರಿಯೆಗಳೂ ಸಮಕಾಲೀನವಾದವು ಎಂದು ಇದರಿಂದ ಗೊತ್ತಾಗುತ್ತದೆ. ಇವರನ್ನು **ಪ್ರಾತರ್ಯಾವಾಣಃ ದೇವಾಃ** ಪ್ರಾತಃಕಾಲದಲ್ಲಿ ಯಜ್ಞಭೂಮಿಗೆ ಬರತಕ್ಕ ದೇವತೆಗಳು ಎಂದೇ ಕೆಲವೆಡೆಗಳಲ್ಲಿ ನಿರ್ದೇ ಶಿಸಿದೆ. ಉದಾಹರಣೆಗೆ ಐತರೇಯಬ್ರಾಹ್ಮಣದಲ್ಲಿ—

> **ದೇವೇಭ್ಯಃ ಪ್ರಾತರ್ಯಾವಭ್ಯೋ ಹೋತರನುಬ್ರೂಹೀತ್ಯಾಹಾಧ್ವರ್ಯುಃ। ಏತೇ ವಾವ ದೇವಾಃ ಪ್ರಾತರ್ಯಾವಾಣೋ ಯದಗ್ನಿರುಷಾ ಅಶ್ವಿನೌ ತ ಏತೇ ಸಪ್ತಭಿಃ ಸಪ್ತಭಿಶ್ಛಂದೋಭಿರಾಗಚ್ಛಂತಿ। ಆಽಸ್ಯ ದೇವಾಃ ಪ್ರಾತರ್ಯಾವಾಣೋ ಹವಂ ಗಚ್ಛಂತಿ ಯ ಏವಂ ವೇದ ॥**
> (ಐ. ಬ್ರಾ. ೨-೧೫)

**ಅಗ್ನಿ, ಉಷಸ್ಸು** ಮತ್ತು **ಅಶ್ವಿನೀ** ದೇವತೆಗಳನ್ನು **ಪ್ರಾತರನುವಾಕ** ಮಂತ್ರಗಳಿಂದ ಉಷಃಕಾಲದಲ್ಲಿ ಯಜ್ಞಗೃಹಕ್ಕೆ ಬರಲು ಪ್ರಾರ್ಥಿಸಬೇಕೆಂದು ಅಧ್ವರ್ಯುವು ಹೋತೃವಿಗೆ ಆದೇಶವನ್ನು ಕೊಡುತ್ತಾನೆ ಇವರಲ್ಲಿ ಪ್ರತಿದೇವತೆಯನ್ನೂ ಉದ್ದೇಶಿಸಿದ ಮಂತ್ರಗಳು ಏಳು ಛಂದಸ್ಸುಗಳಿಂದಲೂ ಕೂಡಿರಬೇಕೆಂದು ತಿಳಿಸಲು **ಸಪ್ತಭಿಃ, ಸಪ್ತಭಿಃ ಛಂದೋಭಿಃ** ಎಂದು ವೀಪ್ಸೆಯಿದೆ. (ದ್ವಿರುಕ್ತವಾಗಿದೆ). ಪ್ರಕೃತವಾದ **ಅಬೋಧ್ಯಗ್ನಿರ್ಜ್ಮ** ಎಂಬ ಋಕ್ಕು ಈ **ಪ್ರಾತರನುವಾಕ** ಮಂತ್ರಗಳಲ್ಲಿ ಒಂದಾದುದರಿಂದ ಈ ಮೂರುದೇವತೆಗಳನ್ನೂ ಉದ್ದೇಶಿಸಿ ಪಠಿಸಲ್ಪಡಬೇಕಾದ **ಪ್ರಾತರನುವಾಕ** ಮಂತ್ರಗಳನ್ನು ಆಶ್ವಲಾಯನ ಶ್ರೌತಸೂತ್ರದಲ್ಲಿ **ಆಪೋ ರೇವತೀಃ** (೧೦-೩೦-೧೨) ಮೊದಲಾದ ಸೂತ್ರಗಳಿಂದ ನಿರ್ದಿಷ್ಟಮಾಡಿರುವರು. ಇದರಂತೆ ಆ ಮಂತ್ರಗಳ ವಿವರಣೆಯು ಈರೀತಿ ಇದೆ—

ಉಪ ಪ್ರಯಂತಃ (ಋ. ಸಂ. ೧-೭೪-೧) ಇತ್ಯಾದಿಷು ಛಂದೋ ಗಾಯತ್ರಂ.
ತ್ವಮಗ್ನೇ ವಸೂನ್ ( ,, ೧-೪೫-೧) ಇತ್ಯಾದಿಷ್ವನುಷ್ಟುಪ್ ಛಂದಃ.
ಅಬೋಧ್ಯಗ್ನಿಃ ( ,, ೫-೧-೧) ,, ತ್ರಿಷ್ಟುಪ್ಛಂದಃ

ಏನಾ ವೋ ಅಗ್ನಿಂ (ಋ. ಸಂ. ೭-೧೬-೧) ಇತ್ಯಾದಿಷು ಬೃಹತೀ ಛಂದಃ
ಅಗ್ನೇ ವಾಜಸ್ಯ ( ,, ೧-೭೯-೪) ,, ಉಷ್ಣಿಕ್ ಛಂದಃ
ಜನಸ್ಯ ಗೋಪಾ ( ,, ೫-೧೧-೧) ,, ಜಗತೀ ಛಂದಃ
ಅಗ್ನಿಂ ತಂ ಮನ್ಯೇ ( ,, ೫-೬-೧) ,, ಪಂಕ್ತಿಃ ಛಂದಃ

ತಾನ್ಯೇತಾನಿ ಸಪ್ತಚ್ಛಂದಾಸ್ಯಾಗ್ನೇಯೇ ಕ್ರತೌ ಪ್ರಾತರನುವಾಕೇ ದೃಷ್ಟವ್ಯಾನಿ। ಏಳು ಛಂದಸ್ಸುಗಳಿಂದ ಕೂಡಿದ ಈ ಏಳುಋಕ್ಕುಗಳೂ ಅಗ್ನಿದೇವತೆಯನ್ನುದ್ದೇಶಿಸಿದ ಪ್ರಾತರನುವಾಕದಲ್ಲಿ ಆಗ್ನೇಯಕ್ರತುಸಂಬಂಧವಾದ ಮಂತ್ರಗಳು.

ಪ್ರತಿ ಷ್ಯಾ ಸೂನರೀ (ಋ. ಸಂ ೪-೫೨-೧) ಇತ್ಯಾದಿಷು ಗಾಯತ್ರೀ ಛಂದಃ
ಉಷೋ ಭದ್ರೇಭಿಃ ( ,, ೧-೪೯ -೧) ,, ಅನುಷ್ಟುಪ್ ಛಂದಃ
ಇದಂ ಶ್ರೇಷ್ಠಂ ( ,, ೧-೧೧೩-೧) ,, ತ್ರಿಷ್ಟುಪ್ ಛಂದ
ಪ್ರತ್ಯು ಅದರ್ಶಿ ( ,, ೭ ೮೧ -೧) ,, ಬೃಹತೀ ಛಂದಃ
ಉಷಸ್ತಚ್ಚಿತ್ರಮಾಭರ ( ,, ೧-೯೨-೧೩) ,, ಉಷ್ಣಿಕ್ ಛಂದಃ
ಏತಾ ಉ ತ್ಯಾ ( ,, ೧-೯೨ -೧) ,, ಜಗತೀ ಛಂದಃ
ಮಹೇ ನೋ ಅದ್ಯ ( ,, ೫-೭೯ -೧) ,, ಪಂಕ್ತಿಃ ಛಂಧಃ

ತಾನೇತಾನ್ಯುಷಸಃ ಪ್ರಾತರನುವಾಕೇ ಸಪ್ತಚ್ಛಂದಾಂಸಿ. ಈ ಏಳೂ ಉಷೋ ದೇವತೆಯನ್ನುದ್ದೇಶಿಸಿದ ಪ್ರಾತರನುವಾಕದಲ್ಲಿ ಉಷಸ್ಯಕ್ರತುಸಂಬಂಧವಾದ ಮಂತ್ರಗಳು, ಮತ್ತು,

ಏಷೋ ಉಷಾ (ಋ. ಸಂ ೧-೪೬- ೧ ) ಇತ್ಯಾದಿಷು ಗಾಯತ್ರೀ ಛಂದಃ
ಯದದ್ಯ ( ,, ೫-೭೩ -೧ ) ,, ಅನುಷ್ಟುಪ್ ಛಂಧಃ
ಅಭಾತ್ಯಗ್ನಿಃ ( ,, ೫-೭೬ -೧ ) ,, ತ್ರಿಷ್ಟುಪ್ ಛಂದಃ
ಇಮಾ ಉ ವಾಂ ( ,, ೭-೭೪ -೧ ) ,, ಬೃಹತೀ ಛಂದಃ
ಅಶ್ವಿನಾ ವರ್ತಿಃ ( ,, ೧-೯೨ -೧೬) ,, ಉಷ್ಣಿಕ್ ಛಂದಃ
ಅಬೋಧ್ಯಗ್ನಿರ್ಜ್ಮ ( ,, ೧- ೫೭-೧ ) ,, ಜಗತೀ ಛಂದಃ
ಪ್ರತಿ ಪ್ರಿಯತಮಂ ( ,, ೫-೭೫ -೧ ) ,, ಪಂಕ್ತಿಃ ಛಂದಃ

ತಾನ್ಯೇತಾನ್ಯಾಶ್ವಿನೇ ಪ್ರಾತರನುವಾಕೇ ಸಪ್ತಚ್ಛಂದಾಂಸಿ। ಈ ಏಳೂ ಅಶ್ವಿನೀ ದೇವತೆಗಳನ್ನುದ್ದೇಶಿಸಿದ ಆಶ್ವಿನಕ್ರತುಸಂಬಂಧವಾದ ಪ್ರಾತರನುವಾಕ ಮಂತ್ರಗಳು. ಪ್ರಕೃತವಾದ ಋಕ್ಕು ಇವುಗಳಲ್ಲಿ ಒಂದಾಗಿದೆ. ಉಷಸ್ಸಿನ ಆವಿರ್ಭಾವವನ್ನೂ ಅಗ್ನಿಯ ಪ್ರಾತಃಕಾಲದ ಪ್ರಜ್ವಲನವನ್ನೂ ಪ್ರಕಟಿಸಿ ಅಶ್ವಿನೀದೇವತೆಗಳನ್ನು ಆಹ್ವಾನಿಸುವುದು ಈ ಋಕ್ಕಿನಲ್ಲಿ ವರ್ಣಿತವಾಗಿರುವಂತೆ,

ಅಶೋಚ್ಯಗ್ನಿಃ ಸಮಿಧಾನೋ ಅಸ್ಮೇ ಉಪೋ ಅದೃಶ್ರನ್ತಮಸಶ್ಚಿದಂತಾಃ।
ಅಚೇತಿ ಕೇತುರುಷಸಃ ಪುರಸ್ತಾಚ್ಛ್ರಿಯೇ ದಿವೋ ದುಹಿತುರ್ಜಾಯಮಾನಃ ॥
(ಋ. ಸಂ. ೭-೬೭-೨)

ಎಂಬ ಋಕ್ಕಿನಲ್ಲಿಯೂ ಹೀಗೆಯೇ ೭-೭೨-೪ ಮುಂತಾದ ಮಂತ್ರಗಳಲ್ಲಿಯೂ ಸಹ ಅಗ್ನಿಯ ಪ್ರಜ್ವಲನ, **ಉಷಸ್ಸಿನ ಉದಯ** ಮತ್ತು ಅಶ್ವಿನೀ ದೇವತೆಗಳ ಆಗಮನ ಇವುಗಳಿಗೆ ಸಂಬಂಧವನ್ನು ತೋರಿಸಿದೆ.

**ಜ್ಮಃ—ಜ್ಮೇತಿ ಪೃಥಿವೀನಾಮ ಗ್ಮಾ ಜ್ಮೇತಿ ತನ್ನಾಮಸೂಕ್ತತ್ವಾತ್ ।** ನಿರುಕ್ತದಲ್ಲಿ **ಜ್ಮಾ** ಎಂಬ ಪದವನ್ನು ಪೃಥಿವೀನಾಮಗಳಲ್ಲಿ ಸೇರಿಸಿದೆ. (ನಿ. ೨-೫). ಆದುದರಿಂದ ಇಲ್ಲಿಯೂ ಪೃಥಿವಿಯೆಂದು ಅರ್ಥ. ಆದರೆ **ವೇದಿಲಕ್ಷಣಾಯಾಃ ಪೃಥಿವ್ಯಾಃ । ವೇದಿರೂಪವಾದ ಪೃಥಿವಿಯೆಂದು** ಒಂದು ವಿಶೇಷಾರ್ಥವನ್ನು ಹೇಳಿದೆ.

> **ತಂ ಛಂಧೋಭಿರಭಿತಃ ಪರಿಗೃಹ್ಯ । ಅಗ್ನಿಂ ಪುರಸ್ತಾತ್ಸಮಾಧಾಯ ತೇನಾರ್ಚಂತಃ ಶ್ರಾಮ್ಯಂತಶ್ಚೇರುಸ್ತೇನೇಮಾಗ್‍ಂ ಸರ್ವಾಂ ಪೃಥಿವೀಗ್‍ಂ ಸಮವಿಂದತ ತದ್ಯದೇನೇನೇಮಾಗ್‍ಂ ಸರ್ವಾಗ್‍ಂ ಸಮವಿಂದಂತ ತಸ್ಮಾದ್ವೇದಿರ್ನಾಮ ತಸ್ಮಾದಾಹುರ್ಯಾವತೀ ವೇದಿಸ್ತಾವತೀ ಪೃಥಿವೀ ।**
>
> (ಶ. ಬ್ರಾ. ೧-೨-೫-೭)

> **ಚಂದ್ರಮಾ ಏವ ಪ್ರತ್ಯಕ್ಷಾದಾದಿತ್ಯೋ ಯಜಮಾನಸ್ತಸ್ಯೇಯಮೇವ ಪೃಥಿವೀ ವೇದಿಃ ।**
>
> (ಶ. ಬ್ರಾ. ೧೨-೮-೨-೩೬)

ಇತ್ಯಾದಿ ವಾಕ್ಯಗಳಲ್ಲಿ ಪೃಥ್ವಿಯೆಲ್ಲವೂ ಯಜ್ಞವೇದಿಕೆಯೆಂದೂ, ಯಜ್ಞವೇದಿಕೆಯು ಪೃಥ್ವಿಯಷ್ಟು ವಿಸ್ತಾರವಾಗಿದೆಯೆಂದೂ ವರ್ಣಿಸಿರುವಂತೆ ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಇವೆರಡಕ್ಕೂ ತಾದಾತ್ಮ್ಯವನ್ನು ಹೇಳುವ ಪದವನ್ನು ಪಯೋಗಿಸಿದೆ.

**ಚಂದ್ರಾ—ಚಂದ್ರಶ್ಚಂದತೇಃ ಕಾಂತಿಕರ್ಮಣಃ ।** ಕಾಂತಿಯನ್ನು ಬೀರಿ ಆಹ್ಲಾದವನ್ನುಂಟುಮಾಡವುದು ಎಂಬರ್ಥವನ್ನು ಕೊಡತಕ್ಕ **ಚಂದ್** ಧಾತುವಿನಿಂದ **ಚಂದ್ರ** ಶಬ್ದವು ನಿಷ್ಪನ್ನವಾಗಿದೆ. ಇಲ್ಲಿ ಲೋಕಕ್ಕೆಲ್ಲಾ ಆಹ್ಲಾದವನ್ನುಂಟುಮಾಡುವ **ಉಷಸ್ಸಿಗೆ** ವಿಶೇಷಣವಾಗಿದೆ.

**ಸವಿತಾ ಪ್ರಾಸಾವೀತ್—**ಸಕಲಲೋಕಕ್ಕೂ ಚೈತನ್ಯದಾಯಿಯಾದ ಸವಿತೃವು ಲೋಕಕ್ಕೆ ಆನಂದವನ್ನುಂಟುಮಾಡಲಿ ಎಂಬ ಪ್ರಾರ್ಥನೆಯಲ್ಲಿ ಎರಡು ಅಂಶಗಳು ತಿಳಿಯುತ್ತವೆ. ಮೊದಲು **ಸವಿತಾ** ಎಂಬ ಹೆಸರಿನಿಂದಲೇ,

> **ಸವಿತಾ ಸರ್ವಸ್ಯ ಪ್ರಸವಿತಾ—**ಸಕಲಕ್ಕೂ ಚೈತನ್ಯದಾಯೀ
>
> (ನಿ. ೧೦-೩೧)

ಎಂಬ ನಿರುಕ್ತಕಾರರ ನಿರ್ವಚನದ ಪ್ರಕಾರ ಸವಿತೃವಿನ ಕಾರ್ಯವು ತಿಳಿಯುತ್ತದೆ. ಆ ಕಾರ್ಯದ ವಿವರಣೆಯು ನಿರುಕ್ತಕಾರರು ಉದಹರಿಸಿರುವ

> ಸವಿತಾ ಯಂತ್ರೈಃ ಪೃಥಿವೀಮರಮ್ಣಾದಸ್ಕಂಭನೇ ಸವಿತಾ ದ್ಯಾಮದೃಂಹತ್ ।
> ಅಶ್ವಮಿವಾಧುಕ್ಷದ್ಧುನಿಮಂತರಿಕ್ಷಮತೂರ್ತೇ ಬದ್ಧಂ ಸವಿತಾ ಸಮುದ್ರಂ ॥
>
> (ಋ. ಸಂ. ೧೦-೧೪೯-೧)

ಎಂಬ ಋಕ್ಕಿನಲ್ಲಿ ಸವಿತೃವು ಪೃಥಿವಿಯನ್ನು ಅವಲಂಬನದೊಂದಿಗೆ ಸ್ಥಾಪಿಸಿ, ನಿರಾಲಂಬನವಾದ ಶೂನ್ಯಪ್ರದೇಶದಲ್ಲಿ ಅಂತರಿಕ್ಷವನ್ನು ಸ್ಥಾಪಿಸಿ, ಸಕಲವನ್ನೂ ಅವುಗಳ ನಿಯತವಾದ ಕರ್ತವ್ಯಗಳಲ್ಲಿ ತೊಡಗಿಸುತ್ತಾನೆ ಎಂದು ಹೇಳಿರುವುದನ್ನು ಪ್ರಕೃತವಾದ ಋಕ್ಕಿನಲ್ಲಿ ಜಗತ್ **ಪೃಥಕ್** ಸಕಲ ಜಗತ್ತಿಗೂ ಅವುಗಳ ನಿಯತವಾದ ಕರ್ಮಗಳನ್ನು ಮಾಡುವುದಕ್ಕಾಗಿ ಚೈತನ್ಯವನ್ನು ಕೊಡಲಿ ಎಂದು ಪ್ರಾರ್ಥಿಸಿದೆ. ಎರಡನೆಯದಾಗಿ,

**ತಸ್ಯ ಕಾಲೋ ಯದಾ ದ್ಯೌರಪಹತತಮಸ್ಕಾಕೀರ್ಣರಶ್ಮಿರ್ಭವತಿ ।**

(ನಿ. ೧೨-೧೨)

ಅಂತರಿಕ್ಷವೆಲ್ಲಾ ತಮಸ್ಸಿನಿಂದ ಮುಕ್ತವಾಗಿ ಸೂರ್ಯನ ಜ್ಯೋತಿಯು ಬೆಳಗುವ ಪ್ರಾರಂಭಕಾಲದಿಂದ ಸವಿತೃವಿನ ಲೋಕನಿಯಮನ ಮತ್ತು ರಕ್ಷಣಾಕಾರ್ಯವು ಆರಂಭವಾಗುತ್ತದೆ ಎಂದು ನಿರುಕ್ತಕಾರರು

**ವಿಶ್ವಾ ರೂಪಾಣಿ ಪ್ರತಿ ಮುಂಚತೇ ಕವಿಃ ಪ್ರಾಸಾವೀದ್ಭದ್ರಂ ದ್ವಿಪದೇ ಚತುಷ್ಪದೇ ।**
**ವಿ ನಾಕಮಖ್ಯತ್ಸವಿತಾ ವರೇಣ್ಯೋಽನು ಪ್ರಯಾಣಮುಷಸೋ ವಿ ರಾಜತಿ ॥**

**(ಋ. ಸಂ. ೫-೮೧-೨).**

ಎಂಬ ಋಕ್ಕನ್ನುದಹರಿಸಿ **ಉಷಸ್ಸಿನ** ಆವಿರ್ಭಾವವಾಗಿ ಅವಳು ಲೋಕವನ್ನು ಬೆಳಗಿಸಿ ಪುನಃ ತಿರೋಧಾನವಾದ ನಂತರ ಸವಿತೃವು ತನ್ನ ಕರ್ತವ್ಯಕ್ಕೆ ಪ್ರಾರಂಭಿಸುತ್ತಾನೆ ಎಂದು ಸವಿತೃವಿನ ಕಾಲವನ್ನು ತಿಳಿಸಿದ್ದಾರೆ. ಅದರಂತೆಯೇ ಪ್ರಕೃತವಾದ ಋಕ್ಕಿನಲ್ಲಿಯೂ ಸಹ **ಉಷಸ್ಸಿನ** ಉದಯುವಾಗಿ, ಉಷಃಕಾಲದಲ್ಲಿ ಅಗ್ನಿಯ ಪ್ರಜ್ವಲನವೂ, ಸೂರ್ಯನ ಉದಯವೂ ಆದನಂತರ **ದೇವಃ ಸವಿತಾ ಜಗತ್ಪೃಥಕ್ ಪ್ರಾಸಾವೀತ್** ದೇವತಾತ್ಮನೂ, ಪ್ರಕಾಶಮಾನನೂ ಆದ ಸವಿತೃವು ಈ ಕಾಲದಲ್ಲಿ ಸಕಲಜಗತ್ತಿಗೂ ಚೈತನ್ಯದಾಯಿಯಾಗಿ ಜಗತ್ತಿನ ವೈಯಕ್ತಿಕವಾದ ಕರ್ಮಗಳಿಗೆ ಸಹಾಯಕವಾಗಲಿ ಎಂದು ಪ್ರಾರ್ಥಿಸಿದೆ.

### ವ್ಯಾಕರಣಪ್ರಕ್ರಿಯಾ

**ಅಬೋಧಿ**—ಬುಧ ಅವಗಮನೇ ಧಾತು. ಕರ್ಮಣಿ ಲುಙ್ ಪ್ರಥಮಪುರುಷಏಕವಚನದಲ್ಲಿ ತ ಪ್ರತ್ಯಯ. **ಚಿಣ್ ಭಾವಕರ್ಮಣೋಃ** (ಪಾ ಸೂ. ೩-೧-೬೬) ಎಂಬುದರಿಂದ ಚ್ಲಿಗೆ ಚಿಣಾದೇಶ. ಅದನ್ನು ನಿಮಿತ್ತೀಕರಿಸಿ ಧಾತುವಿನ ಲಘೂಪಧೆಗೆ ಗುಣ. **ಚಿಣೋ ಲುಕ್** (ಪಾ. ಸೂ. ೬-೪-೧೦೪) ಎಂಬುದರಿಂದ ಚಿಣಿನ ಪರದ ತ ಶಬ್ದಕ್ಕೆ ಲುಕ್. ಅಂಗಕ್ಕೆ ಅಡಾಗಮ. ಇದು ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ.

**ಜ್ಮಃ**—ಜ್ಮಾ ಎಂಬುದು ಭೂಮಿವಾಚಕವಾದ ಶಬ್ದ. ಇದಕ್ಕೆ ಷಷ್ಠೀಏಕವಚನ ಪರವಾದಾಗ, **ಆತೋ ಧಾತೋಃ** (ಪಾ. ಸೂ. ೬-೪-೧೪೦) ಎಂಬಲ್ಲಿ ಯೋಗವಿಭಾಗಮಾಡಿಕೊಂಡಿರುವುದರಿಂದ **ಆತಃ** ಎಂಬುದರಿಂದ ಆಕಾರ ಲೋಪ ಬರುತ್ತದೆ. ಉದಾತ್ತನಿವೃತ್ತಿಸ್ವರದಿಂದ ವಿಭಕ್ತಿಯ ಆಕಾರವು ಉದಾತ್ತವಾಗುತ್ತದೆ.

**ಏತಿ**—ಇಣ್ ಗತೌ ಧಾತು. ಲಟ್ ಪ್ರಥಮಪುರುಷಏಕವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ಸೂರ್ಯಃ**—ಷೂ ಪ್ರಸವೇ ಧಾತು. **ರಾಜಸೂಯಸೂರ್ಯ** (ಪಾ. ಸೂ ೩-೧-೧೧೪) ಎಂಬುದರಿಂದ ಕ್ಯಪ್ ಪ್ರತ್ಯಯಾಂತವಾಗಿ ನಿಪಾತಿತವಾಗಿದೆ.

**ಚಂದ್ರಾ**—ಚದಿ ಆಹ್ಲಾದನೇ ಧಾತು. **ಸ್ಫಾಯಿತಂಚಿವಂಚಿ** —(ಉ. ಸೂ. ೨-೧೭೦) ಎಂಬುದರಿಂದ ರಕ್ ಪ್ರತ್ಯಯ. ಬರುತ್ತದೆ. ಧಾತುವು ಇದಿತ್ತಾದುದರಿಂದ ನುಮಾಗಮ ಬರುತ್ತದೆ. ಸ್ತ್ರೀತ್ವದಲ್ಲಿ ಅದಂತವಾದುದರಿಂದ ಟಾಪ್.

**ಮಹೀ**—ಮಹ ಪೂಜಾಯಾಂ ಧಾತು. **ಇನ್ ಸರ್ವಧಾತುಭ್ಯಃ** ಎಂಬ ವಚನದಿಂದ ಇನ್ ಪ್ರತ್ಯಯ ಸ್ತ್ರೀತ್ವದಲ್ಲಿ **ಕೃದಿಕಾರಾದಕ್ತಿನಃ** ಎಂಬ ವಾರ್ತಿಕದಿಂದ ಙೀಷ್ ಬರುತ್ತದೆ.

ಅವಃ ವಸ ನಿವಾಸೇ ಧಾತು. ಅಂತರ್ಭಾವಿತಣ್ಯರ್ಥಕವಾಗಿ ಪ್ರಯುಕ್ತವಾಗಿದೆ. ಛಾಂದಸವಾಗಿ ವರ್ತಮಾನಾರ್ಥದಲ್ಲಿ ಲುಙ್ ಪ್ರಥಮಪುರುಷಏಕವಚನದಲ್ಲಿ ತಿಪ್ ಪ್ರತ್ಯಯ. **ಇತಶ್ಚ** ಎಂಬುದರಿಂದ ಇಕಾರ ಲೋಪ. **ಮಂತ್ರೇಘಸಹ್ವರ**—(ಪಾ. ಸೂ. ೨-೪-೮೦) ಎಂಬುದರಿಂದ ಚ್ಲಿ ಬಂದಾಗ ಅದಕ್ಕೆ ಲುಕ್ **ಹಲ್-ಙ್ಯಾಭ್ಯೋ**—ಸೂತ್ರದಿಂದ ಪ್ರತ್ಯಯಲೋಪ ಬಂದಾಗ ಪದಾಂತಸಕಾರಕ್ಕೆ ರುತ್ವ ವಿಸರ್ಗ. **ಛಂದಸ್ಯಪಿ-ದೃಶ್ಯತೇ** (ಪಾ. ಸೂ. ೬-೪-೭೩) ಎಂಬುದರಿಂದ ಅಂಗಕ್ಕೆ ಆಡಾಗಮ. ತಿಙಂತನಿಘಾತಸ್ವರ ಬರುತ್ತದೆ.

**ಅರ್ಚಿಷಾ**—ಅರ್ಚ ಪೂಜಾಯಾಂ ಧಾತು **ಅರ್ಚಿಶುಚಿ**—(ಉ. ಸೂ. ೨-೨೬೫) ಎಂಬುದರಿಂದ ಇಸಿ ಪ್ರತ್ಯಯ. ಸಾಂತಶಬ್ದವಾಗುತ್ತದೆ. ಪ್ರತ್ಯಯಸ್ವರದಿಂದ ಇಕಾರ ಉದಾತ್ತವಾಗುತ್ತದೆ. ತೃತೀಯಾಂತರೂಪ.

**ಅಯುಕ್ಷಾತಾಮ್**—ಯುಜಿರ್ ಯೋಗೇ ಧಾತು. ಛಾಂದಸವಾಗಿ **ಲುಙ್.** ಪ್ರಥಮಪುರುಷದ್ವಿವಚನದಲ್ಲಿ ಆತಾಮ್ ಪ್ರತ್ಯಯ. ಚ್ಲಿಗೆ ಸಿಚಾದೇಶ ಬಂದಾಗ **ಚೋಃಕುಃ** ಎಂಬುದರಿಂದ ಧಾತು ಜಕಾರಕ್ಕೆ ಕುತ್ವ. ಚರ್ತ್ವ. ಅದನ್ನು ನಿಮಿತ್ತೀಕರಿಸಿ ಸಿಚಿನ ಸಕಾರಕ್ಕೆ ಷತ್ವ. ಅಂಗಕ್ಕೆ ಅಡಾಗಮ. ಛಾಂದಸವಾಗಿ ಸಂಹಿತಾದಲ್ಲಿ ಅದಕ್ಕೆ ದೀರ್ಘ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಆದ್ಯುದಾತ್ತವಾಗುತ್ತದೆ.

**ಯಾತವೇ**—ಯಾ ಪ್ರಾಪಣೇ ಧಾತು. ತುಮುನರ್ಥ ತೋರುವಾಗ **ತುಮರ್ಥೇಸೇಸೇನಸೇ**—(ಪಾ.ಸೂ. ೩-೪-೯) ಎಂಬುದರಿಂದ ತವೇನ್ ಪ್ರತ್ಯಯ. **ಞ್ನಿತ್ಯಾದಿರ್ನಿತ್ಯಮ್** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ ಏಜಂತ ಕೃದಂತವಾದುದರಿಂದ ಅವ್ಯಯಸಂಜ್ಞಾ ಬರುತ್ತದೆ.

**ಅಸಾವೀತ್**—ಷೂ ಪ್ರೇರಣೇ ಧಾತು. ಛಾಂದಸವಾಗಿ ಲೋಡರ್ಥದಲ್ಲಿ ಲುಙ್. ಪ್ರಥಮಪುರುಷಏಕವಚನದಲ್ಲಿ ಅಸಾವೀತ್ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.॥ ೧ ॥

———:O:———

ಸಂಹಿತಾಪಾಠಃ

ಯದ್ಯುಂಜಾಥೇ ವೃಷಣಮಶ್ವಿನಾರಥಂ ಘೃತೇನ ನೋ ಮಧುನಾ ಕ್ಷತ್ರ-ಮುಕ್ಷತಂ ।
ಅಸ್ಮಾಕಂ ಬ್ರಹ್ಮ ಪೃತನಾಸು ಜಿನ್ವತಂ ವಯಂ ಧನಾ ಶೂರಸಾತಾ ಭಜೇ-ಮಹಿ ॥ ೨ ॥

ಪದಪಾಠಃ

ಯತ್ । ಯುಂಜಾಥೇ ಇತಿ । ವೃಷಣಂ । ಅಶ್ವಿನಾ । ರಥಂ । ಘೃತೇನ । ನಃ । ಮಧುನಾ । ಕ್ಷತ್ರಂ ।
ಉಕ್ಷತಂ ।

ಅಸ್ಮಾಕಂ । ಬ್ರಹ್ಮ । ಪೃತನಾಸು । ಜಿನ್ವತಂ । ವಯಂ । ಧನಾ । ಶೂರಽಸಾತಾ । ಭಜೇಮಹಿ ॥ ೨ ॥

ಸಾಯಣಭಾಷ್ಯಂ

ಹೇ ಅಶ್ವಿನಾವಶ್ವಿನೌ ಯದ್ಯದಾ ವೃಷಣಂ ವೃಷ್ಟ್ಯಾದಿವರ್ಷಕಂ ರಥಂ ಯುಂಜಾಥೇ ಯೋಜ-ಯಥಃ ತದಾ ನಃ ಕ್ಷತ್ರಮಸ್ಮದೀಯಂ ಬಲಂ ಕ್ಷತ್ರಿಯಜಾತಂ ವಾ ಘೃತೇನೋದಕೇನ ಮಧುನಾ ಮಧು-ರೇಣೋಕ್ಷತಂ । ಪ್ರವರ್ಧಯತಮಿತ ರ್ಥಃ । ಯದ್ವಾ । ಘೃತೇನ ಕ್ಷರಣರೂಪೇಣ ಮಧುನಾ ಮಧುರೇಣಾ-ಮೃತೇನೋಕ್ಷತಂ । ಯುಷ್ಮದ್ರಥಸ್ಥೇನ.ಮಧುನಾಸ್ಮದೀಯಂ ಬಲಂ ಪ್ರವರ್ಧಯತಮಿತ್ಯರ್ಥಃ । ಅಶ್ವಿನೋ ರಥಸ್ಯ ಮಧುಪೂರ್ಣತ್ವಂ ಮಧುವಾಹನೋ ರಥ ಇತ್ಯಾದಿಷು ಪ್ರಸಿದ್ಧಂ । ಕಿಂಚಾಸ್ಮಾಕಂ ಪೃತನಾಸ್ವಸ್ಮದೀಯಾಸು ಪುತ್ರಭೃತ್ಯಾದಿಮನುಷ್ಯರೂಪಾಸು ಪ್ರಜಾಸು ಬ್ರಹ್ಮ ಬ್ರಾಹ್ಮಂ ತೇಜೋ ಜಿನ್ವಥಂ । ಪೃತನಾ ಇತಿ ಮನುಷ್ಯನಾಮ ಏವಸ್ವಂತಃ ಪೃತನಾ ಇತಿ ತನ್ನಾಮಸೂಕ್ತತ್ವಾತ್ । ಯದ್ವಾ । ಪೃತನಾಸು ಪರಕೀಯಾಸು ಪ್ರಜಾಸು ಬ್ರಹ್ಮ ತಾಸಾಂ ಪರಿವೃಢಮನ್ನಮಸ್ಮಾಕಂ ಜಿನ್ವತಂ । ಪ್ರೀಣಯತಂ। ಬ್ರಹ್ಮೇತ್ಯನ್ನನಾಮ । ಬ್ರಹ್ಮ ವರ್ಚ ಇತಿ ತನ್ನಾಮಸೂಕ್ತತ್ವಾತ್ । ವಯಂ ಚ ಶೂರಸಾತಾ ಶೂರಸಾತೌ ಶೂರಾಣಾಂ ಪ್ರಹಾರಾದಿನಾ ಯುಕ್ತೇ ಸಂಗ್ರಾಮೇ ಧನಾ ತದೀಯಾನಿ ಧನಾನಿ ಬಹುವಿಧಾನಿ ಭಜೇಮಹಿ । ಲಭೇಮಹಿ ॥

ಪ್ರತಿಪದಾರ್ಥ

**ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ, (ನೀವು) । **ಯತ್**—ಯಾವಾಗ । **ವೃಷಣಂ**—ವೃಷ್ಟ್ಯಾದಿಗಳನ್ನು ಸುರಿಸುವ । **ರಥಂ**—ರಥವನ್ನು । **ಯುಂಜಾಥೇ**—ಸೇರಿಸಿ ಕಟ್ಟುತ್ತೀರೋ (ಆಗ) । **ನಃ**—ನಮ್ಮ । **ಕ್ಷತ್ರಂ**—ಬಲವನ್ನು । **ಘೃತೇನ**—ಉದಕದಿಂದಲೂ । **ಮಧುನಾ**—ಮಧುವಿನಿಂದಲೂ । [ಅಥವಾ **ಘೃತೇನ**—ಸ್ರವಿಸುವುದೂ । **ಮಧುನಾ**—ಮಧುರವಾಗಿರುವುದೂ ಆದ ಅಮೃತದಿಂದ । ] **ಉಕ್ಷತಂ**—ವೃದ್ಧಿಯಾಗುವಂತೆ ಮಾಡುತ್ತೀರಿ । (ಮತ್ತು) **ಅಸ್ಮಾಕಂ** ನಮ್ಮ । **ಪೃತನಾಸು**—ಪುತ್ರಭೃತ್ಯಾದಿ ಪ್ರಜೆಗಳಲ್ಲಿ । **ಬ್ರಹ್ಮ**—ಬ್ರಾಹ್ಮ ತೇಜಸ್ಸನ್ನು । **ಜಿನ್ವತಂ**—ಅನುಗ್ರಹಿಸಿಕೊಡಿರಿ । [ಅಥವಾ **ಅಸ್ಮಾಕಂ**—ನಮಗೆ । **ಪೃತನಾಸು**—ಶತ್ರುಪ್ರಜೆಗಳಲ್ಲಿರುವ । **ಬ್ರಹ್ಮ**—ಪ್ರಭೂತವಾದ ಅನ್ನವನ್ನು । **ಜಿನ್ವತಂ**—ತಂದು ಸೇರಿಸಿರಿ । ] **ವಯಂ**—ನಾವೂ (ಕೂಡ) **ಶೂರಸಾತಾ**—ಶೂರರು ಸೇರಿರುವ ಯುದ್ಧದಲ್ಲಿ । **ಧನಾ**—(ವಿಧವಿಧವಾದ) ಧನವನ್ನು । **ಭಜೇಮಹಿ**—ಹೊಂದುವಂತಾಗಲಿ.

॥ ಭಾವಾರ್ಥ ॥

ಎಲೈ ಅಶ್ವಿನಿದೇವತೆಗಳೇ, ವೃಷ್ಟ್ಯಾದಿಗಳನ್ನು ಸುರಿಸುವ ನಿಮ್ಮ ರಥವನ್ನು ನೀವು ಕಟ್ಟಿದ ಕೂಡಲೇ, ಅಮೃತದಂತೆ ಮಧುರವಾಗಿರುವ ಉದಕಗಳಿಂದ ನಮ್ಮ ಬಲವನ್ನು ವೃದ್ಧಿಯಾಗುವಂತೆ ಮಾಡುತ್ತೀರಿ. ನಮ್ಮ ಪುತ್ರ

ಭೃತ್ಯಾದಿಗಳಿಗೂ ಸಹ ಪ್ರಭೂತವಾದ ಅನ್ನವು ಸಿಕ್ಕುವಂತೆ ಮಾಡಿರಿ. ನಾವೂ ಕೂಡ ಶೂರರ ಮಧ್ಯೆ ನಡೆಯತಕ್ಕ ಯುದ್ಧದಲ್ಲಿ ವಿಧವಿಧವಾದ ಧನವನ್ನು ಹೊಂದುವಂತಾಗಲಿ.

## English Translation

When Ashwins, you harness your bounty-shedding chariot, refresh our strength with trickling honey : bestow (abundant) food upon our people : may we acquire riches in the strife of heroes.

॥ ವಿಶೇಷವಿಷಯಗಳು ॥

ಅಶ್ವಿನೀದೇವತೆಗಳು ರಥಾರೂಢರಾದೊಡನೆಯೇ ಯಜ್ಞಕರ್ತರಾದ ಅವರ ಭಕ್ತರಿಗೆ ಕ್ಷಾತ್ರಬಲವು ವೃದ್ಧಿಯಾಗುವುದು ಸಹಜವಾಗಿದೆ. ಆದರೆ ಕ್ಷಾತ್ರಬಲವು ಸರ್ವಸಂಪತ್ತಿಗೂ ಆಧಾರಭೂತವಾದರೂ ಸಹ ಕೇವಲ ಕ್ಷಾತ್ರಬಲದಿಂದಲೇ ಉತ್ತಮವಾದ ಜೀವನಕ್ಕೆ ಪೌಷ್ಕಲ್ಯವು ದೊರೆಯುವುದಿಲ್ಲ. ಆದುದರಿಂದ ಅದರೊಡನೆ ಬ್ರಹ್ಮತೇಜಸ್ಸನ್ನೂ ಮತ್ತು ಬ್ರಹ್ಮ ಸಂಪತ್ತನ್ನೂ ಒದಗಿಸಿಕೊಡಬೇಕೆಂದು ಅಶ್ವಿನೀದೇವತೆಗಳನ್ನು ಪ್ರಾರ್ಥಿಸಿದೆ.

**ಕ್ಷತ್ರಂ—ಅಸ್ಮದೀಯಂ ಬಲಂ ಕ್ಷತ್ರಿಯಜಾತಂ ವಾ ।** ಕ್ಷಾತ್ರಸಂಬಂಧವಾದ ಬಲವೆಂದರ್ಥವಾಗಿದೆ ಸಾಧಾರಣವಾಗಿ ಕ್ಷಾತ್ರತೇಜಸ್ಸಿನ ಪರಿಪೂರ್ಣತೆಯನ್ನು ಸಂಪಾದಿಸಲಾಶಿಸುವವನು **ಕ್ಷತ್ರಧೃತಿ**ಯೆಂಬ **ಸೌತ್ರಾಮಣಿಯ** ಅಂಗವಾದ ಯಾಗವನ್ನು ನೆರವೇರಿಸಿ ಅಶ್ವಿನೀದೇವತೆಗಳನ್ನು ಪೂಜಿಸುವ ಪದ್ಧತಿಯಿದೆ.

**ಶ್ಯೇತ ಆಶ್ವಿನೋ ಭವತಿ । ಶ್ಯೇತಾವಿವ ಹ್ಯಶ್ವಿನೌ ।**

(ಶ. ಬ್ರಾ. ೫-೫-೪-೧).

ಎಂಬ ಮಂತ್ರಪೂರ್ವಕವಾಗಿ ಅಶ್ವಿನೀದೇವತೆಗಳಿಗೆ ಆಹುತ್ಯರ್ಪಣವನ್ನು ಮಾಡಬೇಕು. ಅಂತಹ ಯಜ್ಞಕರ್ತರಿಗೆ ಅಶ್ವಿನೀದೇವತೆಗಳ ಅನುಗ್ರಹದಿಂದ ಕ್ಷಾತ್ರಬಲವು ಸಿದ್ಧವಾಗಿಯೇ ಇದೆಯೆಂದು ಭರವಸೆಯನ್ನು ಪ್ರಕೃತವಾದ ಋಕ್ಕಿನಲ್ಲಿ ತೋರಿಸಿದೆ. ಆದರೆ ಈ ಕ್ಷಾತ್ರಬಲದ ಮಹಿಮೆಯೇನು ಎಂಬುದನ್ನು ಶ್ರುತಿವಾಕ್ಯಗಳು ಅನೇಕ ಕಡೆಗಳಲ್ಲಿ ಪ್ರಶಂಸಿಸುತ್ತವೆ. ಮೊದಲು ಸಾಮಾನ್ಯವಾಗಿ ಬಲದ ಪ್ರಶಂಸೆಯನ್ನು ಮಾಡಿ ಬಲವೇ ವಿಶ್ವದಲ್ಲಿ ಎಲ್ಲಕ್ಕಿಂತಲೂ ಹೆಚ್ಚು ಬೆಲೆಯುಳ್ಳದ್ದು ಎಂದು ತೋರಿಸಿದೆ.

**ತಸ್ಮಾ ಏವ ಶ್ರದ್ದಧಾಮ ತದ್ವೈತತ್ಸತ್ಯಂ ಬಲೇ ಪ್ರತಿಷ್ಠಿತಂ ಪ್ರಾಣೋ ವೈ ಬಲಂ ತತ್ಪ್ರಾಣೇ ಪ್ರತಿಷ್ಠಿತಂ ತಸ್ಮಾದಾಹುರ್ಬಲಂ ಸತ್ಯಾದೋಗೀಯಃ ।**

(ಬೃ. ಉ. ೫-೧೪-೪)

**ಸತ್ಯ**ವು **ಶಕ್ತಿ**ಯಲ್ಲಿ ಪ್ರತಿಷ್ಠಿತವಾಗಿದೆ. ಶಕ್ತಿಯೇ ಪ್ರಾಣವು. ಆದುದರಿಂದ **ಸತ್ಯ**ಕ್ಕಿಂತಲೂ **ಶಕ್ತಿಯೇ** ಅಧಿಕಬಲವುಳ್ಳದ್ದು. ಇಂತಹ ಶಕ್ತಿಗಳಲ್ಲೆಲ್ಲಾ **ಕ್ಷಾತ್ರಶಕ್ತಿಯೇ** ಸರ್ವಶ್ರೇಷ್ಠವಾದುದು.

**ಕ್ಷತ್ರಂ ಪ್ರಾಣೋ ವೈ ಕ್ಷತ್ರಂ ಪ್ರಾಣೋ ಹಿ ವೈ ಕ್ಷತ್ರಂ ತ್ರಾಯತೇ ಹೈನಂ ಪ್ರಾಣಃ ಕ್ಷಣಿತೋಃ ಪ್ರ ಕ್ಷತ್ರಮತ್ರಾಪ್ನೋತಿ ಕ್ಷತ್ರಸ್ಯ ಸಾಯುಜ್ಯಂ ಸಲೋಕತಾಂ ಜಯತಿ ಯ ಏವಂ ವೇದ ।**

ದೇಹರಕ್ಷಕವಾದುದರಿಂದ ಪ್ರಾಣವೇ **ಕ್ಷತ್ರವು**. ಈ ತತ್ವವನ್ನು ತಿಳಿದವನು **ಕ್ಷಾತ್ರದ** ಸಾಯುಜ್ಯವನ್ನೂ ಸಾಲೋಕ್ಯವನ್ನೂ ಪಡೆಯುತ್ತಾನೆ ಮತ್ತು ಈ ಕ್ಷಾತ್ರಬಲವು ಬ್ರಹ್ಮತೇಜಸ್ಸನ್ನೂ ರಕ್ಷಿಸತಕ್ಕದ್ದಾದುದರಿಂದ ಅದಕ್ಕಿಂತಲೂ ಉತ್ತಮವಾದ ಸ್ಥಾನವನ್ನು ಕೆಲವು ಸನ್ನಿವೇಶಗಳಲ್ಲಿ ಹೊಂದುತ್ತದೆ.

> **ಬ್ರಹ್ಮ ವಾ ಇದಮಗ್ರ ಆಸೀದೇಕಮೇವ ತದೇಕಂ ಸನ್ನವ್ಯಭವತ್ । ತಚ್ಛ್ರೇಯೋರೂಪಮತ್ಯಸೃಜತ ಕ್ಷತ್ರಂ ಯಾನ್ಯೇತಾನಿ ದೇವತ್ರಾ ಕ್ಷತ್ರಾಣೀಂದ್ರೋ ವರುಣಃ ಸೋಮೋ ರುದ್ರಃ ಪರ್ಜನ್ಯೋ ಯಮೋ ರುದ್ರಃ ಪರ್ಜನ್ಯೋ ಯಮೋ ಮೃತ್ಯುರೀಶಾನ ಇತಿ । ತಸ್ಮಾತ್ಕ್ಷತ್ರಾತ್ಪರಂ ನಾಸ್ತಿ ತಸ್ಮಾದ್ಬ್ರಾಹ್ಮಣಃ ಕ್ಷತ್ರಿಯಮಧಸ್ತಾದುಪಾಸ್ತೇ ರಾಜಸೂಯೇ ಕ್ಷತ್ರ ಏವ ತದ್ಯಶೋ ದಧಾತಿ ।**

ಪ್ರಾರಂಭದಲ್ಲಿ **ಬ್ರಹ್ಮಸತ್ತ್ವವು** ಮಾತ್ರವಿದ್ದು ಕ್ಷಾತ್ರಸಂಬಂಧವಿಲ್ಲದೆ ಅದರ ಬೆಳೆವಣಿಗೆಗೆ ಅವಕಾಶವೇ ಇರಲಿಲ್ಲ. ಆದುದರಿಂದ ವೃದ್ಧಿಗೆ ಕಾರಣವಾದುದೂ, ಬ್ರಹ್ಮಸತ್ತ್ವಕ್ಕಿಂತಲೂ ಅಧಿಕವಾದ ಮಹಿಮೆಯುಳ್ಳ **ಕ್ಷತ್ರವನ್ನು** ಸೃಷ್ಟಿಸಿತು. ದೇವತೆಗಳಲ್ಲಿ **ಇಂದ್ರಾದಿಗಳು** ಈ ಸತ್ತ್ವದ ಪ್ರತಿನಿಧಿಗಳಾದರು. **ಕ್ಷತ್ರಕ್ಕಿಂತಲೂ** ಅಧಿಕವಾದ ಬೆಲೆಯುಳ್ಳದ್ದಾವುದೂ ಇಲ್ಲ. ಆದುದರಿಂದ ರಾಜಸೂಯದಲ್ಲಿ ಬ್ರಾಹ್ಮಣನಿಗಿಂತಲೂ ಕ್ಷತ್ರಿಯನೇ ಉನ್ನತವಾದ ಪ್ರದೇಶದಲ್ಲಿ ಕುಳಿತುಕೊಳ್ಳುತ್ತಾನೆ. ಅದೂ ಅಲ್ಲದೆ,

> **ಭವತ್ಪುರೋಹಿತಾನಾಮಾಂ ಕ್ಷತ್ರಬಂಧೂಞ್ಞಯೇವಹಿ ।**
> **ಕ್ಷತ್ರಂ ತದಪಿ ವಿಜ್ಞೇಯಂ ಬ್ರಹ್ಮ ಯತ್ಪಾತಿ ಶಾಶ್ವತಂ ।**
>
> (ಬೃಹದ್ದೇವತಾ ೫-೧೨೬)

ಬ್ರಹ್ಮಶಕ್ತಿಯನ್ನು ಶಾಶ್ವತವಾಗಿ ರಕ್ಷಿಸುವುದರಿಂದಲೇ **ಕ್ಷತ್ರವೆಂಬ** ಹೆಸರು ಈ ಶಕ್ತಿಗೆ ಪ್ರಸಿದ್ಧವಾಗಿದೆ. ಅಶ್ವಿನೀ ದೇವತೆಗಳ ಅನುಗ್ರಹದಿಂದ ಈ ಕ್ಷತ್ರರೂಪವಾದ ಶಕ್ತಿಯು ಲಭಿಸುವುದು ಎಂದು ಪ್ರಕೃತವಾದ ಋಕ್ಕಿನಲ್ಲಿ ತಿಳಿಸಿ ಅನಂತರ ಕೇವಲ ಶಕ್ತಿಯಿಂದಲೇ ಜೀವನದ ಪೌಷ್ಕಲ್ಯವು ಲಭಿಸುವುದಿಲ್ಲವೆಂದೂ ಅದರೊಡನೆ **ಬ್ರಹ್ಮ** ಸಂಬಂಧವೂ ಇರಬೇಕೆಂದು **ಬ್ರಹ್ಮವನ್ನೂ** ಅನುಗ್ರಹಿಸಬೇಕೆಂದು ಪ್ರಾರ್ಥಿಸಿದೆ **ಕ್ಷತ್ರವು** ರಕ್ಷಕವಾದರೂ ಸಹ ಅದು ಕೇವಲ ಸಾಧನವಾದುದಾಗಿದೆ. **ಬ್ರಹ್ಮವೇ** ಫಲವು. ಅಂತಹ ಫಲವನ್ನು **ಘೃತೇನಾಸು ಬ್ರಹ್ಮ ಜಿನ್ವತಂ** ಎಂದು ಪ್ರಾರ್ಥಿಸಿದೆ.

ಪ್ರಕೃತವಾದ ಋಕ್ಕಿನಲ್ಲಿ ಬ್ರಹ್ಮ ಶಬ್ದಕ್ಕೆ ಮೊದಲು **ಬ್ರಾಹ್ಮತೇಜಸ್ಸೆಂದೂ** ಎರಡನೆಯದಾಗಿ **ಅನ್ನವೆಂದೂ** ಅರ್ಥಮಾಡಿದೆ. ಮೊದಲು **ಅನ್ನ** ಸಾಧನೆಯು **ಕ್ಷಾತ್ರಶಕ್ತಿಯ** ಧ್ಯೇಯವು. **ಅನ್ನವೇ** ಪ್ರಾಣವಾದುದರಿಂದಲೂ ಒಂದು ದೃಷ್ಟಿಯಿಂದ **ಅನ್ನವೇ ಕ್ಷಾತ್ರ** ಶಕ್ತಿಯ ರಕ್ಷಕ ಮತ್ತು ವರ್ಧಕವಾಗಿರುವುದರಿಂದಲೂ ಸಹ ಅನ್ನದ ಆವಶ್ಯಕತೆಯನ್ನು ತಿಳಿಸಿದೆ. ಅಥವಾ **ಬ್ರಹ್ಮ** ಶಬ್ದಕ್ಕೆ **ಬ್ರಾಹ್ಮ** ತೇಜಸ್ಸೆಂದರ್ಥಮಾಡಿದರೆ ಅದೂ ಸಹ ಅತ್ಯುಚಿತವಾಗಿರುವುದು. **ಬ್ರಾಹ್ಮತೇಜಸ್ಸಿನ** ಸಂಪರ್ಕವಿಲ್ಲದಿದ್ದರೆ **ಕ್ಷತ್ರವು** ಕೇವಲ **ಭೌತಿಕವಾದ** ಶಕ್ತಿಯಾಗಿಯೇ ಉಳಿದು ಆಧ್ಯಾತ್ಮಿಕವಾದ ಸಂಪತ್ತು ನ್ಯೂನವಾಗುತ್ತದೆ. ಆದುದರಿಂದಲೇ ಈ ಎರಡು ತತ್ತ್ವಗಳ ಸಾಮರಸ್ಯದ ಮಹಿಮೆಯನ್ನು ಸ್ತುತಿಸುತ್ತಾ,

**ಪ್ರೇದಂ ಬ್ರಹ್ಮ ಪ್ರೇದಂ ಕ್ಷತ್ರಮಿತ್ಯೇತೇ ಏವ ಸಮಸ್ಯೇದ್ಬ್ರಹ್ಮಕ್ಷತ್ರಯೋಃ ಸಂಶ್ರಿತ್ಯೈ ತಸ್ಮಾದ್ಬ್ರಹ್ಮ ಚ ಕ್ಷತ್ರಂಚ ಸಂಶ್ರಿತೇ ॥**

(ಐ. ಬ್ರಾ. ೩-೧೧]

ಇತ್ಯಾದಿವಾಕ್ಯಗಳಲ್ಲಿ **ಬ್ರಾಹ್ಮಕ್ಷಾತ್ರ** ರೂಪಗಳಾದ ಶಕ್ತಿಗಳ ಸಂಯೋಗವನ್ನೂ ಸಾಮರಸ್ಯವನ್ನೂ ಸ್ತುತಿಸಿದೆ ಅಲ್ಲದೆ,

**ಯಸ್ಯ ಬ್ರಹ್ಮ ಚ ಕ್ಷತ್ರಂ ಚ ಉಭೇ ಭವತ ಓದನಃ ।**

ಇತ್ಯಾದಿ ವಾಕ್ಯಗಳಲ್ಲಿ ಆದಿತತ್ತ್ವವೇ ಈ ಉಭಯವಿಧವಾದ ಶಕ್ತಿಗಳನ್ನೂ ಪ್ರತಿಬಂಬಿಸುತ್ತದೆಯೆಂದೂ ಪ್ರತಿಪಾದಿಸಿದೆ. ಆದುದರಿಂದ ಪ್ರಕೃತವಾದ ಋಕ್ಕಿನಲ್ಲಿರುವ ಈ ಎರಡರ ಸಾಮರಸ್ಯವಿರಬೇಕೆಂದು ಆಶಿಸಿದೆ.

ವ್ಯಾಕರಣಪ್ರಕ್ರಿಯಾ

**ಯುಞ್ಜಾಥೇ**—ಯುಜಿರ್ ಯೋಗೆ ಧಾತು. ರುಧಾದಿ. ಶ್ನಮ್ ವಿಕರಣ ಲಟ್ ಮಧ್ಯಮಪುರುಷ ದ್ವಿವಚನಾಂತರೂಪ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

**ಅಶ್ವಿನಾ**—**ಸುಪಾಂ ಸುಲುಕ್** (ಪಾ. ಸೂ. ೭-೧-೩೯) ಎಂಬುದರಿಂದ ದ್ವಿವಚನಕ್ಕೆ ಆಕಾರಾದೇಶ. **ಆಮಂತ್ರಿತಸ್ಯ ಚ** (ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಘೃತೇನ**—**ಘೃತಾದೀನಾಂ ಚ** (ಫಿ. ಸೂ. ೨೧) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ ತೃತೀಯಾ ಏಕವಚನರೂಪ

**ಕ್ಷತ್ರಮ್**—ಕ್ಷವಿ ಎಂಬುದು ಸೌತ್ರ ಧಾತು. **ಗೃಧ್ಯವೀಪಚಿ**—(ಉ. ಸೂ. ೪-೧೬೭) ಎಂಬುದರಿಂದ ತ್ರ ಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಉಕ್ಷತಮ್**—ಉಕ್ಷ ಸೇಚನೇ ಧಾತು. ಭ್ವಾದಿ. ಲೋಟ್ ಮಧ್ಯಮಪುರುಷದ್ವಿವಚನದಲ್ಲಿ ಲಜ್ವದ್ಭಾವವಿರುವುದರಿಂದ ತಮಾದೇಶ. ಶಪ್ ವಿಕರಣ. ತಿಙಂತನಿಘಾತಸ್ವರ ಬರುತ್ತದೆ.

**ಬ್ರಹ್ಮ**—ಬೃಹಿ ವೃದ್ಧೌ ಧಾತು. ಇದಿತ್ತಾದುದರಿಂದ ನುಮಾಗಮ. **ಬೃಂಹೇರ್ನೋಽಚ್ಚ** (ಉ. ಸೂ. ೪-೧೪೫) ಎಂಬುದರಿಂದ ಮನಿನ್ ಪ್ರತ್ಯಯ. ನುಮಿನ ನಕಾರಕ್ಕೆ ಅಕಾರಾದೇಶ. ಆಗ ಯಣಾದೇಶ. ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಜಿನ್ವತಮ್**—ಜಿವಿ ಪ್ರೀಣನೇ ಧಾತು. **ಇದಿತೋ ನುಮ್ ಧಾತೋಃ** ಎಂಬುದರಿಂದ ನುಮಾಗಮ ಲೋಟ್ ಮಧ್ಯಮಪುರುಷದ್ವಿವಚನಾಂತರೂಪ. ತಿಙಂತನಿಘಾತಸ್ವರ ಬರುತ್ತದೆ.

**ಧನಾ**—ನಪುಂಸಕದಲ್ಲಿ **ಶೇಶ್ಛಂದಸಿ ಬಹುಲಂ** (ಪಾ. ಸೂ. ೬-೧-೭೦) ಎಂಬುದರಿಂದ ಶಿಗೆ ಲೋಪ.

**ಶೂರಸಾತಾ**—ಶೂರಸಾತಿ ಶಬ್ದ. **ಊತಿಯೂತಿ**—(ಪಾ ಸೂ ೩-೩-೯೭) ಎಂಬುದರಿಂದ ಸಾತಿ ಎಂಬುದು ಕ್ತಿನ್ನಂತವಾಗಿ ನಿಪಾತಿತವಾಗಿದೆ. ಸಪ್ತಮೀಏಕವಚನ ಪರವಾದಾಗ **ಸುಪಾಂ ಸುಲುಕ್** (ಪಾ ಸೂ. ೭-೧-೩೯) ಎಂಬುದರಿಂದ ವಿಭಕ್ತಿಗೆ ಡಾದೇಶ. ಡಿತ್ತಾದುದರಿಂದ ಟಿಗೆ (ಇ) ಲೋಪ

ಭಜೇಮಹಿ——ಭಜ ಸೇವಾಯಾಂ ಧಾತು. ಲಙ್ ಉತ್ತಮಪುರುಷಬಹುವಚನಾಂತರೂಪ. ತಿಙಂತ ನಿಘಾತಸ್ವರ ಬರುತ್ತದೆ. ॥ ೨ ॥



ಸಂಹಿತಾಪಾಠಃ

ಅರ್ವಾಙ್ ತ್ರಿಚಕ್ರೋ ಮಧುವಾಹನೋ ರಥೋ ಜೀರಾಶ್ವೋ ಅಶ್ವಿನೋ-
ರ್ಯಾತು ಸುಷ್ಟುತಃ ।
ತ್ರಿವಂಧುರೋ ಮಘವಾ ವಿಶ್ವಸೌಭಗಃ ಶಂ ನ ಆ ವಕ್ಷದ್ದ್ವಿಪದೇ
ಚತುಷ್ಪದೇ ॥ ೩ ॥

। ಪದಪಾಠಃ ।

ಅರ್ವಾಙ್ । ತ್ರಿಽಚಕ್ರಃ । ಮಧುಽವಾಹನಃ । ರಥಃ । ಜೀರಽಅಶ್ವಃ । ಅಶ್ವಿನೋಃ । ಯಾತು ।
ಸುಽಸ್ತುತಃ ।
ತ್ರಿಽವಂಧುರಃ । ಮಘಽವಾ । ವಿಶ್ವ ಽ ಸೌಭಗಃ । ಶಂ । ನಃ । ಆ । ವಕ್ಷತ್ । ದ್ವಿಽಪದೇ । ಚತುಃಽಪದೇ ।
॥ ೩ ॥

। ಸಾಯಣಭಾಷ್ಯಂ ।

ಅಶ್ವಿನೋಃ ರಥೋಽರ್ವಾಙಸ್ಮದಭಿಮುಖೋ ಯಾತು । ಗಚ್ಛತು । ಕೀದೃಶಃ । ತ್ರಿಚಕ್ರಶ್ಚಕ್ರತ್ರಯಯುಕ್ತಃ ಮಧುವಾಹನೋ ಮಧುವೋಢಾ ಜೀರಾಶ್ವಃ ಶೀಘ್ರಗಾಮ್ಯಶ್ವೋಪೇತಃ ಸುಷ್ಟುತೋಽತಿಶಯೇನಾಸ್ಮಾಭಿಃ ಸ್ತೂಯಮಾನಃ ತ್ರಿವಂಧುರೋ ನಿಮ್ನೋನ್ನತಕಾಷ್ಠತ್ರಯೋಪೇತಃ । ಸಾರಥ್ಯಾಶ್ರಯಸ್ಥಾನಂ ವಂಧುರಂ । ಮಘವಾ ಧನವಾನ್ ಅತ ಏವ ವಿಶ್ವಸೌಭಗಃ ಸರ್ವಸೌಭಾಗ್ಯೋಪೇತಃ । ಈದೃಶೋಽಶ್ವಿನೋ ರಥೋ ನೋಽಸ್ಮಾಕಂ ದ್ವಿಪದೇ ಪುತ್ರಾದಿಪ್ರಜಾಯೈ ಚತುಷ್ಪದೇ ಪಶವೇ ಚ ಶಂ ಸುಖಮಾ ವಕ್ಷತ್ । ಆವಹತು ॥ ವಹೇರ್ಲೇಟ್ಯಡಾಗಮಃ । ಸಿಪ್ ॥

ಪ್ರತಿಪದಾರ್ಥ

ಅಶ್ವಿನೋಃ—ಅಶ್ವಿನೀದೇವತೆಗಳ। ತ್ರಿಚಕ್ರಃ—ಮೂರು ಚಕ್ರಗಳಿಂದ ಕೂಡಿರುವುದೂ। ಮಧುವಾಹನಃ—ಮಧುವನ್ನು ಹೊತ್ತುಕೊಂಡು ಬರುವುದೂ । ಜೀರಾಶ್ವಃ—ವೇಗವಾಗಿ ಓಡುವ ಕುದುರೆಗಳಿಂದ ಕೂಡಿರುವುದೂ ।

**ಸುಷ್ಟುತಃ**—ಅತಿಶಯವಾಗಿ ಸ್ತುತಿಸಲ್ಪಡುವುದೂ | **ತ್ರಿವಂಧುರಃ**—(ನಿಮ್ನವಾಗಿಯೂ ಉನ್ನತವಾಗಿಯೂ ಇರುವ ಕಾಷ್ಠತ್ರಯದಿಂದ ಮಾಡಿದ) ಸಾರಥಿಯ ಆಸನಸ್ಥಾನದೊಡನೆ ಕೂಡಿದುದೂ ಆದ | **ಮಘವಾ**—ಧನಯುಕ್ತವಾದುದೂ | **ವಿಶ್ವಸೌಭಗಃ**—(ಆದ್ದರಿಂದಲೇ) ಸಕಲವಾದ ಸೌಭಾಗ್ಯಗಳೊಡನೆ ಕೂಡಿದುದೂ ಆದ | **ರಥಃ**— ರಥವು | **ಅರ್ವಾಙ್**—ನಮಗೆ ಅಭಿಮುಖವಾಗಿ | **ಯಾತು**—ಬರಲಿ | **ನಃ**—ನಮ್ಮ | **ದ್ವಿಪದೇ**—ಪುತ್ರಾದಿ ಪ್ರಜೆಗಳಿಗೂ | **ಚತುಷ್ಪದೇ**—ಪಶ್ವಾದಿಗಳಿಗೂ | **ಶಂ**—ಸುಖವನ್ನು | **ಆ ವಕ್ಷತ್**—ತಂದುಕೊಡಲಿ ||

ಭಾವಾರ್ಥ

ಅಶ್ವಿನೀದೇವತೆಗಳ ಮೂರು ಚಕ್ರಗಳಿಂದ ಕೂಡಿದುದೂ, ಮಧುವನ್ನು ಹೊತ್ತುಕೊಂಡು ಬರುವುದೂ, ವೇಗವಾಗಿ ಓಡುವ ಕುದುರೆಗಳಿಂದ ಕೂಡಿದುದೂ ಅತಿಶಯವಾಗಿ ಸ್ತುತಿಸಲ್ಪಡುವುದೂ, ಮೂರು ಕಾಷ್ಠಗಳಿಂದ ಮಾಡಿದ ಸಾರಥಿಯ ಆಸನಸ್ಥಾನದೊಡನೆ ಕೂಡಿದುದೂ, ಧನಯುಕ್ತವಾದುದೂ ಆದ್ದರಿಂದಲೇ ಸಕಲ ಸೌಭಾಗ್ಯಗಳೊಡನೆ ಕೂಡಿದುದೂ ಆದ ರಥವು ನಮಗೆ ಅಭಿಮುಖವಾಗಿ ಬರಲಿ. ನಮ್ಮ ಪುತ್ರಾದಿ ಪ್ರಜೆಗಳಿಗೂ ಪಶ್ವಾದಿಗಳಿಗೂ ಸಹ ಸುಖವನ್ನುಂಟುಮಾಡಲಿ.

English Translation

May the three-wheeled car of the Aswins, drawn by swift horses, laden with honey, three-canopied, filled with treasure, and every way auspicious, come to our presence, and bring prosperity to our people and our cattle.

| ವಿಶೇಷವಿಷಯಗಳು |

ಇಲ್ಲಿ ಅಶ್ವಿನೀ ದೇವತೆಗಳ ರಥದ ವರ್ಣನೆಯಿದೆ. **ತ್ರಿಚಕ್ರಃ**, **ತ್ರಿವಂಧುರಃ** ಇತ್ಯಾದಿ ವಿಶೇಷಣಗಳು ರಥದ ಸ್ವರೂಪವನ್ನು ತಿಳಿಸುತ್ತವೆ. ಈ ವಿಶೇಷಗಳನ್ನು ಹಿಂದೆ (ಋ. ಸಂ. ೧-೩೪ನೇ ಸೂಕ್ತ) ವಿವರಿಸಿದೆ. ಈ ದೇವತೆಗಳ ರಥಕ್ಕೆ **ತ್ರಿಚಕ್ರಃ ತ್ರಿವಂಧುರಃ** ಎಂಬ ವಿಲಕ್ಷಣವಾದ ಸ್ವರೂಪವಿರಲು ಕಾರಣವೇನಿರಬಹುದು ಎಂಬುದನ್ನು ಕೆಲವು ಆಧಾರಗಳ ಮೇಲೆ ಊಹಿಸಿ Keith ಎಂಬ ಪಂಡಿತನು ತನ್ನ ಅಭಿಪ್ರಾಯವನ್ನು ಈರೀತಿ ತಿಳಿಸಿದ್ದಾನೆ.

The chariot of the Aswins has curious qualities; it is not merely golden, in all its parts, but it is three wheeled, has three fellies, and all its parts triple. One of its wheels is said to have come off when the Aswins went to the wedding of the maiden Surya and it is possible that the three wheels are connected with the fact that, unlike other Gods, the Aswins in their chariot bear with them Surya, for whom, therefore, there must be provided a third seat. Possibly too, the triplication, of which much appears in the myths of the Aswins, owes it being to this simple cause, though it has been traced to the three seasons of the year. The steeds which draw their car are sometimes horses, but more often birds.

swans or eagles and even a single ass. In tha Aitereya Brahmana, they are said to have won a race at the wedding of Soma and Surya with a car drawn by horses.

(A. B. Keith. The Religion and Philosophy of the Veda, Harward Oriental Series). Vol. XXXI—P. 114)

**ಸೂರ್ಯಾ**—ಎಂಬ ದೇವಕನ್ಯೆಯೊಂದಿಗೆ ವಿವಾಹಾರ್ಥವಾಗಿ ಹೋಗುತ್ತಿದ್ದಾಗ ಅಶ್ವಿನೀದೇವತೆಗಳ ರಥದ ಒಂದು ಚಕ್ರವು ಕಳಚಿಕೊಂಡಿತೆಂದು ಕಥೆಯಿದೆ. ತಮ್ಮ ಪತ್ನಿಯಾದ **ಸೂರ್ಯಾ** ಎಂಬುವಳಿಗೂ ಸಹ ತಮ್ಮೊಂದಿಗೆ ಸ್ಥಾನವನ್ನು ಕಲ್ಪಿಸುವುದಕ್ಕಾಗಿ ಒಂದು ಹೊಸ ಆಸನವನ್ನು ನಿರ್ಮಿಸಿದುದಕ್ಕಾಗಿ ಅವರ ರಥಕ್ಕೆ **ತ್ರಿವಂಧುರಃ** ಎಂಬ ವಿಶೇಷಣವಿದೆ. **ತ್ರಿಚಕ್ರಃ, ತ್ರಿವಂಧುರಃ** ಎಂಬ ವಿಶೇಷಣಗಳು ಪ್ರಾಯಶಃ ವರ್ಷದಲ್ಲಿ ಮೂರು ಕಾಲಗಳನ್ನು ಪ್ರತಿಬಿಂಬಿಸುತ್ತವೆಂದೂ ಹೇಳಬಹುದು. ಅವರ ರಥವನ್ನು ಎಳೆಯತಕ್ಕ ವಾಹನಗಳನ್ನು ಒಂದೊಂದು ಕಡೆ ಒಂದೊಂದು ವಿಧವಾಗಿ ವರ್ಣಿಸಿದೆ. ಕೆಲವು ಸಮಯಗಳಲ್ಲಿ ಕುದುರೆಗಳೂ, ಇನ್ನು ಕೆಲವು ಕಡೆಗಳಲ್ಲಿ ಪಕ್ಷಿಗಳೂ ಒಂದೊಂದು ಸಲ ಹೇಸರಕತ್ತೆಯೂ ಇವರ ರಥದ ವಾಹಕಗಳೆಂದು ಹೇಳಲ್ಪಟ್ಟಿದೆ. ಇವರು **ಸೂರ್ಯಾ** ಎಂಬುವಳ ವಿವಾಹಕಾಲದಲ್ಲಿ ಏರ್ಪಡಿಸಿದ್ದ ಸ್ಪರ್ಧೆಯಲ್ಲಿ ಕತ್ತೆಯಿಂದ ಎಳೆಯಲ್ಪಟ್ಟ ರಥದಲ್ಲಿ ಕುಳಿತು ಸ್ಪರ್ಧೆಯನ್ನು ಗೆದ್ದರು ಎಂಬ ವರ್ಣನೆಯು ಐತರೇಯ ಬ್ರಾಹ್ಮಣದಲ್ಲಿ ಉಕ್ತವಾಗಿದೆ (ಐ. ಬ್ರಾ. ೪-೭ರಿಂದ ೯) ಎಂಬುದು ಮೇಲಿನ ಅಭಿಪ್ರಾಯದ ಸಾರಾಂಶವಾಗಿದೆ.

**ಜೀರಾಶ್ವಃ—ಜೀರ** ಶಬ್ದವು ಕ್ಷಿಪ್ರನಾಮಗಳಲ್ಲಿ ಪಠಿತವಾಗಿದೆ. (ನಿ ೩-೯) **ಜೀರಃ, ಜೀರಂ** ಎಂದು ಪ್ರತ್ಯೇಕವಾಗಿಯೂ, **ಜೀರಾಶ್ವಃ, ಜೀರಾಧ್ವರಃ, ಜೀರದಾನುಃ** ಇತ್ಯಾದಿ ಸಮಸ್ತಪದವಾಗಿಯೂ ಅನೇಕಕಡೆಗಳಲ್ಲಿ ಉಪಯೋಗಿಸಲ್ಪಟ್ಟಿದೆ. ಈ ಪದದ ವಿಶೇಷಾರ್ಥವನ್ನು ಇದೇ ಭಾಗದಲ್ಲಿ (ಪೇಜು 213) ಋ. ಸಂ. ೧-೧೪೧-೧೨ನೇ ಋಕ್ಕಿನ ವಿಶೇಷವಿಷಯಗಳಲ್ಲಿ ತಿಳಿಸಿದೆ. ಪ್ರಕೃತವಾದ ಋಕ್ಕಿನಲ್ಲಿ ಶೀಘ್ರವಾಗಿ ಸಂಚರಿಸತಕ್ಕ ಕುದುರೆಗಳೇ ವಾಹನಗಳಾಗಿ ಉಳ್ಳವರೆಂದರ್ಥ.

**ಮಧುವಾಹನಃ—ಅಶ್ವಿನೀದೇವತೆಗಳ** ರಥಕ್ಕೆ ಈ ವಿಶೇಷಣವಿರುವುದೂ ಸಹ ಒಂದು ವಿಶೇಷವಿಷಯ. ಅವರ ರಥವೇ ಅಲ್ಲದೆ ಅವರೇ **ಮಧುವಾಹಕರೆಂದೂ** ಪ್ರಸಿದ್ಧಿಯಿದೆ.

> **ಇದಂ ವೈ ತನ್ಮಧು ದಧ್ಯಙ್ಙಾಥರ್ವಣೋಽಶ್ವಿಭ್ಯಾಮುವಾಚ । ತದೇತದೃಷಿಃ ಪಶ್ಯನ್ನವೋಚತ್ ।**
>
> (ಬೃ. ಉ. ೨-೫-೧೬)

ಎಂದು **ಅಥರ್ವಪುತ್ರನಾದ ದಧೀಚಿಯು ಅಶ್ವಿನೀ** ದೇವತೆಗಳಿಗೆ **ಮಧುವಿದ್ಯೆಯನ್ನು** ಪದೇಶಿಸಿದ ಕಥೆಯು ಪ್ರಸಿದ್ಧವಾಗಿದೆ. ಆಧ್ಯಾತ್ಮಿಕವಾದ ವಿದ್ಯೆಗೆ ತಳಹದಿಯಾದ ಈ ಮಧುವಿದ್ಯೆಗೆ ಅಶ್ವಿನೀದೇವತೆಗಳೇ ಉಪದೇಶಕರಾಗಿದ್ದುದರಿಂದ ಇವರು ತಮ್ಮ ರಥದಲ್ಲಿ ಈ ವಿದ್ಯೆಯನ್ನು ತುಂಬಿಕೊಂಡು ಬರುವರೆಂದು ಆಲಂಕಾರಿಕವಾದ ವರ್ಣನೆಯಿದೆ.

ವ್ಯಾಕರಣಪ್ರಕ್ರಿಯಾ

**ತ್ರಿಚಕ್ರಃ**—ತ್ರೀಣಿ ಚಕ್ರಾಣಿ ಯಸ್ಯ ಸಃ ತ್ರಿಚಕ್ರಃ **ತ್ರಿಚಕ್ರಾದೀನಾಂ ಛಂದಸ್ಯುಪಸಂಖ್ಯಾನಮ್** (ಪಾ. ಸೂ. ೬-೨-೧೯೯-೧) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ ಹೀಗೆಯೇ ತ್ರೀಣಿ ವಂಧುರಾಣಿ ಯಸ್ಯ ಸಃ ತ್ರಿವಂಧುರಃ ಎಂಬಲ್ಲಿಯೂ ಉತ್ತರಪದ ಅಂತೋದಾತ್ತಸ್ವರ ಬರುತ್ತದೆ.

**ಮಧುವಾಹನಃ**—ವಹ ಪ್ರಾಪಣೇ ಧಾತು. ಮಧು ವಾಹ್ಯತೇ ಅನೇನ-ಇತಿ ಮಧುವಾಹನಃ ಕರಣಾರ್ಥ ದಲ್ಲಿ ಣ್ಯಂತದ ಮೇಲೆ ಲ್ಯುಟ್ ಪ್ರತ್ಯಯ. **ಯುವೋರನಾಕೌ** (ಪಾ. ಸೂ. ೭-೧-೧) ಎಂಬುದರಿಂದ ಅದಕ್ಕೆ ಅನಾದೇಶ. **ಣೇರನಿಟಿ** ಎಂಬುದರಿಂದ ಣಿಚಿಗೆ ಲೋಪ. **ಲಿತಿ** (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ. ಸಮಾಸವಾದಾಗ **ಗತಿಕಾರಕೋಪಪದಾತ್ಕೃತ್** ಎಂಬುದರಿಂದ ಕೃದು ತ್ತರಪದಪ್ರಕೃತಿಸ್ವರ ಬರುತ್ತದೆ.

**ಜೀರಾಶ್ವಃ**—ಜೀರಾಃ ಅಶ್ವಾಃ ಯಸ್ಯ ಸಃ ಜೀರಾಶ್ವಃ **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್** ಎಂಬು ದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಯಾತು**—ಯಾ ಪ್ರಾಪಣೇ ಧಾತು. ಲೋಟ್ ಪ್ರಥಮಪುರುಷಏಕವಚನಾಂತರೂಪ. ತಿಙಂತನಿಘಾತ ಸ್ವರ ಬರುತ್ತದೆ.

**ಸುಷ್ಟುತಃ**—ಷ್ಟುಞ್ ಸ್ತುತೌ ಧಾತು. ಕರ್ಮಣಿಯಲ್ಲಿ ಕ್ತ ಪ್ರತ್ಯಯ. **ಗತಿರನಂತರಃ** (ಪಾ. ಸೂ. ೬-೨-೪೯) ಎಂಬುದರಿಂದ ಗತಿಗೆ (ಸು) ಪ್ರಕೃತಿಸ್ವರ ಬರುತ್ತದೆ.

**ಮಘವಾ**—**ಛಂದಸೀ ವನಿಪೌ** ಎಂಬ ವಚನದಿಂದ ಮತ್ವರ್ಥದಲ್ಲಿ ವನಿಪ್ ಪ್ರತ್ಯಯ. ಇದು ಪಿತ್ತಾ ದುದರಿಂದ ಅನುದಾತ್ತವಾಗುತ್ತದೆ.

ವಿಶ್ವಸೌಭಗಃ—ವಿಶ್ವಂ ಸೌಭಗಂ ಯಸ್ಯ ಸಃ ಬಹುವ್ರೀಹಿಸಮಾಸ. ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ವಕ್ಷತ್**—ವಹ ಪ್ರಾಪಣೇ ಧಾತು. ಲೇಟ್ ಪ್ರಥಮಪುರುಷಏಕವಚನದಲ್ಲಿ ತಿಪ್‌ಪ್ರತ್ಯಯ. **ಇತಶ್ಚ ಲೋಪಃ ಪರಸ್ಮೈಪದೇಷು** (ಪಾ. ಸೂ. ೩-೪-೯೭) ಎಂಬುದರಿಂದ ಇಕಾರಲೋಪ. **ಲೇಟೋಡಾಟೌ** (ಪಾ. ಸೂ. ೩-೪-೯೪) ಎಂಬುದರಿಂದ ಅದಕ್ಕೆ ಅಡಾಗಮ. **ಸಿಬ್ಬಹುಲಂ ಲೇಟಿ** (ಪಾ. ಸೂ. ೩-೧-೩೪) ಎಂಬುದರಿಂದ ಸಿಪ್. **ಹೋಢಃ** ಎಂಬುದರಿಂದ ಹಕಾರಕ್ಕೆ ಢತ್ವ. **ಷಢೋಃಕಃಸಿ** ಎಂಬುದರಿಂದ ಅದಕ್ಕೆ ಕಕಾರಾದೇಶ. ಅದನ್ನು ನಿಮಿತ್ತೀಕರಿಸಿ ಸಕಾರಕ್ಕೆ ಷತ್ವ. ವಕ್ಷತ್ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿ ಬಂದುದರಿಂದ ನಿಘಾತಸ್ವರ ಬರುತ್ತದೆ.

ದ್ವಿಪದೇ—ದ್ವೌ ಪಾದೌ ಅಸ್ಯ ಇತಿ ದ್ವಿಪತ್. ಚತುರ್ಥೀಏಕವಚನ ಪರವಾದಾಗ ಭಸಂಜ್ಞಾ ಇರುವುದ ರಿಂದ **ಪಾದಃ ಪತ್** (ಪಾ. ಸೂ. ೬-೪-೧೩೦) ಎಂಬುದರಿಂದ ಪಾದ ಶಬ್ದಕ್ಕೆ ಪದ್‌ಭಾವ. **ದ್ವಿತ್ರಿಭ್ಯಾಂ ಪಾದ್ದನ್ ಮೂರ್ಧಸು ಬಹುವ್ರೀಹೌ** (ಪಾ. ಸೂ. ೬-೨-೧೯೭) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ.

**ಚತುಷ್ಪದೇ**—ಸ್ವರ ವ್ಯತಿರಿಕ್ತವಾದ ಪ್ರಕ್ರಿಯೆಯು ಹಿಂದಿನಂತೇ ಆಗುತ್ತದೆ. ಇಲ್ಲಿ ಬಹುವ್ರೀಹಿನಿಬಂಧನ ವಾದ ಪೂರ್ವಪದಪ್ರಕೃತಿಸ್ವರ ಬರುತ್ತದೆ. ॥ ೩ ॥



ಸಂಹಿತಾಪಾಠಃ

ಆ ನ ಊರ್ಜಂ ವಹತಮಶ್ವಿನಾ ಯುವಂ ಮಧುಮತ್ಯಾ ನಃ ಕಶಯಾ ಮಿಮಿಕ್ಷತಂ ।
ಪ್ರಾಯುಸ್ತಾರಿಷ್ಟಂ ನೀ ರಪಾಂಸಿ ಮೃಕ್ಷತಂ ಸೇಧತಂ ದ್ವೇಷೋ ಭವತಂ ಸಚಾಭುವಾ ॥ ೪ ॥

ಪದಪಾಠಃ

ಆ । ನಃ । ಊರ್ಜಂ । ವಹತಂ । ಅಶ್ವಿನಾ । ಯುವಂ । ಮಧುऽಮತ್ಯಾ । ನಃ । ಕಶಯಾ । ಮಿಮಿಕ್ಷತಂ ।
ಪ್ರ । ಆಯುಃ । ತಾರಿಷ್ಟಂ । ನಿಃ । ರಪಾಂಸಿ । ಮೃಕ್ಷತಂ । ಸೇಧತಂ । ದ್ವೇಷಃ । ಭವತಂ । ಸಚಾऽಭುವಾ ॥ ೪ ॥

ಸಾಯಣಭಾಷ್ಯಂ

ಹೇ ಅಶ್ವಿನಾಶ್ವಿನೌ ಯುವಂ ಯುವಾಂ ನೋಽಸ್ಮಾಕಮೂರ್ಜಂ ಬಲಂ ಪ್ರಾಣನಸಮರ್ಥಮನ್ನಂ ವಾ ವಹತಂ । ಪ್ರಾಪಯತಂ । ಕಿಂಚ ನೋಽಸ್ಮಾನ್ಮಧುಮತ್ಯಾ ಮಾಧುರ್ಯೋಪೇತಯಾ ಕಶಯಾ ವಾಚೇಷ್ಟಪ್ರದಾನರೂಪಯಾ ಮಿಮಿಕ್ಷತಂ । ಸಿಂಚತಂ । ಪ್ರೀಣಯತಂ । ಕಶೇತಿ ವಾಙ್ನಾಮ । ಕಶಾ ಧಿಷಣೇತಿ ತನ್ನಾಮಸೂಕ್ತತ್ವಾತ್ । ಯದ್ವಾ । ಮಧುಮತ್ಯಾ ಮಧುರವೃಷ್ಟಿಮತ್ಯಾ ಮಾಧುರ್ಯೋಪೇತಯಾ ಕಶಯಾಶ್ವತಾಡನ್ಯಾ ನೋಽಸ್ಮಾನ್ಮಿಮಿಕ್ಷತಂ । ಮಧ್ವಿತ್ಯುದಕನಾಮ ಮಧು ಪುರೀಷಮಿತಿ ತನ್ನಾಮಸೂಕ್ತತ್ವಾತ್ । ಕಶಯಾಶ್ವತಾಡನೇನ ಶೀಘ್ರಮಾಗತ್ಯ ವೃಷ್ಟಿರೂಪಂ ಫಲಂ ದಾಸ್ಯತ ಇತಿ ಕಶಾಯಾ ಮಧುಮತ್ತ್ವಂ । ಕಿಂಚಾಯುರಾಯುಷ್ಯಂ ಪ್ರ ತಾರಿಷ್ಟಂ । ಪ್ರವರ್ಧಯತಂ ॥ ಪ್ರಪೂರ್ವಸ್ತಿರತಿರ್ವರ್ಧನಾರ್ಥಃ ॥ ತಥಾ ರಪಾಂಸಿ ಮೃಕ್ಷತಂ । ಪಾಪಾನಿ ನಿಃಶೇಷೇಣ ಶೋಧಯತಂ। ರಪೋ ರಿಪ್ರಮಿತಿ ಪಾಪನಾಮನೀ ಭವತಃ । ನಿ. ೪-೨೧ । ಇತಿ ಯಾಸ್ಕಃ । ಕಿಂಚ ದ್ವೇಷೋ ದ್ವೇಷ್ಯಮಮಿತ್ರಾದಿಕಂ ಸೇಧತಂ । ನಾಶಯತಂ । ಇದಂ ಚ ಭಾವ್ಯಂ । ಸಚಾಭುವಾ ಸಹಭುವಾವಸ್ಮತ್ಕಾರ್ಯೇಷು ಸಹಭವನವಂತೌ ಭವತಂ । ಭವಂತಾವೈಕಮತ್ಯಂ ಭಜತ ಇತ್ಯರ್ಥಃ ॥ ವಾಕ್ಯಭೇದಾದನಿಘಾತಃ ॥

ಪ್ರತಿಪದಾರ್ಥ

ಅಶ್ವಿನಾ—ಎಲೈ ಅಶ್ವಿನೀದೇವತೆಗಳೇ । ಯುವಂ—ನೀವಿಬ್ಬರೂ। ನಃ—ನಮ್ಮ । ಊರ್ಜಂ—ಬಲವನ್ನು ಅಥವಾ ಜೀವಿಸಲುಬೇಕಾಗುವ ಅನ್ನವನ್ನು । ಆ ವಹತಂ—ತಂದೊದಗಿಸಿರಿ । ನಃ—ನಮ್ಮನ್ನು। ಮಧುಮತ್ಯಾ—ಮಾಧುರ್ಯದಿಂದ ಕೂಡಿದ । ಕಶಯಾ—ವಾಕ್ಕಿನಿಂದ। [(ಅಥವಾ) ಮಧುಮತ್ಯಾ—ವೃಷ್ಟಿಯನ್ನು ಸುರಿಸುವುದರಿಂದ

ಮಧುರವಾದ ಶಬ್ದದಿಂದ ಕೂಡಿದ । **ಕಶಯಾ**—ಅಶ್ವತಾಡನದಿಂದ] । **ಮಿಮಿಕ್ಷತಂ**--ಚೈತನ್ಯಯುಕ್ತರನ್ನಾಗಿ ಮಾಡಿರಿ । **ಆಯುಃ**—(ನಮ್ಮ) ಆಯುಸ್ಸನ್ನು । **ಪ್ರ ತಾರಿಷ್ಟಂ**—ವೃದ್ಧಿಮಾಡಿರಿ । **ರಪಾಂಸಿ**—(ನಮ್ಮ) ಪಾಪಗಳನ್ನು। **ಮೃಕ್ಷತಂ**—ತೊಳೆಯಿರಿ । **ದ್ವೇಷಃ**—ಶತ್ರುಗಳನ್ನು। **ಸೇಧತಂ**—ನಾಶಮಾಡಿರಿ । **ಸಚಾಭುವಾ**—ನಮ್ಮ ಒಂದುಗೂಡಿದವರಾಗಿ । **ಭವತಂ**—(ನಮ್ಮ ಕಾರ್ಯಗಳಲ್ಲಿ ಜೊತೆಯಾಗಿ) ಇರಿ.

ಭಾವಾರ್ಥ

ಎಲೈ ಅಶ್ವಿನೀದೇವತೆಗಳೇ, ನೀವಿಬ್ಬರೂ ಸಹ ನಮ್ಮ ಬಲವನ್ನು ಹೆಚ್ಚುಮಾಡುವ ಅನ್ನವನ್ನು ತಂದೊದಗಿಸಿರಿ. ನಮ್ಮನ್ನು ಮಧುರವಾದ ವಾಕ್ಕಿನಿಂದ ಸಂತೋಷಗೊಳಿಸಿ. ನಮ್ಮ ಆಯುಸ್ಸನ್ನು ವೃದ್ಧಿಮಾಡಿ. ನಮ್ಮ ಪಾಪಗಳನ್ನು ತೊಳೆಯಿರಿ. ನಮ್ಮ ಶತ್ರುಗಳನ್ನು ನಾಶಮಾಡಿರಿ. ನಮ್ಮ ಕಾರ್ಯಗಳಲ್ಲಿ ನಮ್ಮ ಒಂದುಗೂಡಿದವರಾಗಿರಿ

English Translation

Bring us Ashwins, vigor : animate us with your honied speech; prolong our existsnce ; wipe away our sins : destroy our foes ; be ever our associates.

ವಿಶೇಷವಿಷಯಗಳು

**ಊರ್ಜಂ**—ಈ ಪದವು **ಅನ್ನ** ನಾಮಗಳಲ್ಲಿ ಪಠಿತವಾಗಿದೆ. (ನಿ. ೩-೯). ಕೆಲವು ಕಡೆಗಳಲ್ಲಿ ಶಕ್ತಿದಾಯಕವಾದ ಅನ್ನವೆಂದು ಶಕ್ತಿಯಲ್ಲಿಯೇ ತಾತ್ಪರ್ಯವಾಗುತ್ತದೆ. ಅದರಂತೆ ಈ ಋಕ್ಕಿನಲ್ಲಿಯೂ ಸಹ **ಊರ್ಜಂ ಬಲಂ ಬಲಪ್ರಾಣನಸಮರ್ಥ ಮನ್ನಂ ।** ಶಕ್ತಿಯನ್ನು ವೃದ್ಧಿಗೊಳಿಸತಕ್ಕ ಅನ್ನವೆಂದರ್ಥಮಾಡಿದ್ದಾರೆ. ನಿರುಕ್ತಕಾರರು,

**ದೇವೀ ಊರ್ಜಾಹುತೀ ಇಷಮೂರ್ಜಮನ್ಯಾವಕ್ಷತ್ ಸಗ್ಧಿಂ ಸಪೀತಿಮನ್ಯಾ ನವೇನ ಪೂರ್ವಂ ದಯಮಾನಾಃಸ್ಯಾಮ ಪುರಾಣೇನ ನವಂ ತಾಮೂರ್ಜಮೂರ್ಜಾಹುತೀ ಊರ್ಜಯಮಾನೇ.**

(ವಾ. ಸಂ ೨೮-೧೬)

ಎಂಬ ವಾಕ್ಯವನ್ನುದಹರಿಸಿ ಇಲ್ಲಿ **ಊರ್ಜ** ಶಬ್ದಕ್ಕೆ ಒಂದುಸಲ **ಅನ್ನ**ವೆಂದೂ ಇನ್ನೊಂದುಸಲ **ಶಕ್ತಿ**ಯೆಂದೂ ಒಂದೇ ವಾಕ್ಯದಲ್ಲಿ ಎರಡು ಅರ್ಥಗಳಿರುವಂತೆ ಪ್ರಯೋಗದಲ್ಲಿರುವುದನ್ನು ತೋರಿಸಿದ್ದಾರೆ.

**ಯೋ ವೈತಾಮಕ್ಷಿತಿಂ ವೇದ ಸೋಽನ್ನಮತ್ತಿ ಪ್ರತೀಕೇನ । ಸ ದೇವಾನಪಿ ಗಚ್ಛತಿ ಸ ಊರ್ಜ-ಮುಪಜೀವತಿ ।**

(ಬೃ. ಉ ೧-೫-೧)

ಎಂಬಲ್ಲಿ **ಅನ್ನ**, **ಊರ್ಜ** ಎಂಬ ಎರಡು ಪದಗಳನ್ನೂ ಉಪಯೋಗಿಸಿರುವುದರಿಂದ ಅಲ್ಲಿ **ಊರ್ಜ**ಶಬ್ದಕ್ಕೆ ಕೇವಲ ಶಕ್ತಿಯೆಂದೇ ಅರ್ಥವಾಗುತ್ತದೆ. ಪ್ರಕೃತವಾದ ಋಕ್ಕಿನಲ್ಲಿ ಶಕ್ತಿಪೋಷಕವಾದ **ಅನ್ನ**ವೆಂದರ್ಥ.

ಕಶಯಾ—**ಕಶಾ** ಶಬ್ದವು ವಾಙ್ನಾಮಗಳಲ್ಲಿ ಪಠಿತವಾಗಿದೆ. (ನಿ. ೨-೨೩). ಇದನ್ನನುಸರಿಸಿ ಮೊದಲು **ಮಾಧುರ್ಯೋಪೇತಯಾ ವಾಚಾ ।** ಮಧುರವಾದ ವಾಕ್ಕಿನಿಂದ ಎಂದು ಸಾಯಣರು ಅರ್ಥಮಾಡಿ ಅನಂತರ

**ಕಶಯಾ ಅಶ್ವತಾಡಿನ್ಯಾ** । ಅಶ್ವತಾಡನದಿಂದ ಅಥವಾ ಅಶ್ವತಾಡನಕ್ಕೆ ಸಾಧನವಾದ ಚಾವಟಿಯಿಂದ ಎಂದು ಎರಡನೆಯಸಲ ವಿವರಿಸುತ್ತಾರೆ. ಈ ಎರಡು ಅರ್ಥಗಳನ್ನೂ ಸಮರ್ಥಿಸುವಂತೆ ಈ ಪದಕ್ಕೆ ನಿರುಕ್ತಕಾರರ ನಿರ್ವಚನವಿದೆ.

> **ಅಶ್ವಾಜನೀಂ ಕಶೇತ್ಯಾಹುಃ । ಕಶಾ ಪ್ರಕಾಶಯತಿ ಭಯಮಶ್ವಾಯ । ಕೃಷ್ಯತೇರ್ವಾಣಾಭಾ-
> ವಾತ್ । ವಾಕ್ಪುನಃ ಪ್ರಕಾಶಯತ್ಯರ್ಥಾನ್ । ಖಶಯಾ । ಕ್ರೋಶತೇರ್ವಾ ॥**
> (ನಿ. ೯-೧೯)

ಅಶ್ವಕ್ಕೆ ಭಯವನ್ನು ಪ್ರಕಾಶಪಡಿಸುವುದರಿಂದ ಚಾವಟಿಗೆ **ಕಶಾ** ಎಂದು ಹೆಸರು. ಮತ್ತು ಮನೋಗತವಾದ ಅರ್ಥವನ್ನು ಪ್ರಕಾಶಪಡಿಸುವುದರಿಂದಾಗಲಿ, ಆಕಾಶಸ್ಥವಾಗಿರುವುದರಿಂದಾಗಲಿ, (**ಖಶಯಾ—ಖೇ ಮುಖಾಕಾಶೇ**) ಅಥವಾ ಶಬ್ದಮಾಡುವುದರಿಂದಾಗಲಿ ವಾಕ್ಕಿಗೆ **ಕಶಾ** ಎಂಬ ಹೆಸರು ಪ್ರಸಿದ್ಧವಾಗಿದೆ.

> **ಅವ ಸ್ವಯುಕ್ತಾ ದಿವ ಆ ವೃಥಾ ಯಯುರಮರ್ತ್ಯಾಃ ಕಶಯಾ ಚೋದತ ತ್ಮನಾ ।
> ಅರೇಣವಸ್ತುವಿಜಾತಾ ಅಚುಚ್ಯವುರ್ದೃಳ್ಹಾನಿ ಚಿನ್ಮರುತೋ ಭ್ರಾಜದೃಷ್ಟಯಃ ॥**
> (ಋ. ಸಂ. ೧-೧೬೮-೪)

ಎಂಬಲ್ಲಿ **ಕಶಯಾ ಸ್ತುತಿರೂಪಯಾ ವಾಚಾ** । ಸ್ತುತಿರೂಪವಾದ ವಾಕ್ಕಿನಿಂದ ಎಂದೂ, ಮತ್ತು,

> **ರಥೀವ ಕಶಯಾಶ್ವಾಁ ಅಭಿಕ್ಷಿಪನ್ನಾವಿರ್ದೂತಾನ್ಕೃಣುತೇ ವರ್ಷ್ಯಾಁ೩ ಅಹ ।
> ದೂರಾತ್ಸಿಂಹಸ್ಯ ಸ್ತನಥಾ ಉದೀರತೇ ಯತ್ಪರ್ಜನ್ಯಃ ಕೃಣುತೇ ವರ್ಷ್ಯಂ೧ ನಭಃ ॥**
> (ಋ. ಸಂ. ೫-೮೩-೩)

ಎಂಬಲ್ಲಿ ಅಶ್ವತಾಡನಸಾಧನವಾದ ಚಾವಟಿಯೆಂದೂ ಸಹ ಅರ್ಥವಾಗುವಂತೆ ಈ ಪದದ ಪ್ರಯೋಗಗಳಿವೆ. ಪ್ರಕೃತವಾದ ಋಕ್ಕಿನಲ್ಲಿ ಎರಡು ವಿಧವಾಗಿಯೂ ಭಾಷ್ಯಕಾರರು ಅರ್ಥಮಾಡಿದ್ದಾರೆ.

**ಮಿಮಿಕ್ಷತಂ—ಸಿಂಚತಂ । ಪ್ರೀಣಯತಂ** । ಸೇಚನಾರ್ಥಕವಾದ **ಮಿಹ್** ಧಾತುವಿನಿಂದ ನಿಷ್ಪನ್ನವಾಗಿ ಇಷ್ಟಾರ್ಥಗಳನ್ನು ಸುರಿಸಿ ತೃಪ್ತಿಪಡಿಸಿ ಎಂದು ಪ್ರಾರ್ಥಿಸಿದೆ.

**ಪ್ರ ತಾರಿಷ್ಟಂ—ಪ್ರಪೂರ್ವಸ್ತಿರತಿರ್ವರ್ಧನಾರ್ಥಃ** । ತೃ ಧಾತುವಿಗೆ ಪ್ರ ಎಂಬ ಉಪಸರ್ಗವು ಸೇರಿದರೆ **ವೃದ್ಧಿಯಾಗು** ಎಂಬರ್ಥವನ್ನು ಕೊಡುತ್ತದೆ. ನಿರುಕ್ತಕಾರರು,

> **ವಾತ ಆ ವಾತು ಭೇಷಜಂ ಶಂಭು ಮಯೋಭು ನೋ ಹೃದೇ । ಪ್ರ ಣ ಆಯೂಂಷಿ ತಾರಿಷತ್ ।**
> (ಋ. ಸಂ. ೧೦-೧೮೬-೧)

ಎಂಬ ಋಕ್ಕನ್ನುದಹರಿಸಿ **ಪ್ರತಾರಿಷತ್** ಎಂಬುದಕ್ಕೆ ಆಯುಸ್ಸನ್ನು ವೃದ್ಧಿಪಡಿಸು ಎಂದರ್ಥವಾಗುವುದೆಂದು ಸಂದರ್ಭಕ್ಕೆ ಉಚಿತವಾದ ಉದಾಹರಣೆಯನ್ನು ಕೊಟ್ಟಿದ್ದಾರೆ. ಅದರಂತೇ ಪ್ರಕೃತವಾದ ಋಕ್ಕಿನಲ್ಲಿಯೂ ನಮ **ಆಯುಃ ಪ್ರ ತಾರಿಷ್ಟಂ** ನಮ್ಮ ಆಯಸ್ಸನ್ನು ವೃದ್ಧಿಪಡಿಸು ಎಂದು ಪ್ರಾರ್ಥಿಸಿದೆ.

**ರಪಾಂಸಿ**—**ರಪೋ ರಿಪ್ರಮಿತಿ ಪಾಪನಾಮನೀ ಭವತಃ** । (ನಿ. ೪-೨೧). **ರಪಃ, ರಿಪ್ರ** ಇವೆರಡೂ ಸಹ **ಪಾಪಕ್ಕೆ** ಪರ್ಯಾಯಪದಗಳೆಂದು ಹೇಳಿದೆ.

ತ್ವಂ ಕುತ್ಸೇನಾಭಿ ಶುಷ್ಣಮಿಂದ್ರಾಶುಷಂ ಯುಧ್ಯ ಕುಯವಂ ಗವಿಷ್ಟೌ ।
ದಶ ಪ್ರಪಿತ್ವೇ ಅಧ ಸೂರ್ಯಸ್ಯ ಮುಷಾಯಶ್ಚಕ್ರಮವಿವೇ ರಪಾಂಸಿ ॥
(ಋ. ೬-೩೧-೩)

ಇತ್ಯಾದಿ ಋಕ್ಕುಗಳಲ್ಲಿ **ರಪಾಂಸಿ** ಎಂಬ ಪದಕ್ಕೆ **ಪಾಪಕಾರೀಣಿ** ರಕ್ಷಃಪ್ರಭೃತೀನಿ । ಪಾಪಕಾರಿಗಳಾದ ರಾಕ್ಷಸಾದಿಗಳು ಎಂಬರ್ಥವಾಗುತ್ತದೆ. ಪ್ರಕೃತವಾದ ಋಕ್ಕಿನಲ್ಲಿ ನಮ್ಮ **ಪಾಪಗಳನ್ನು** (ಮೃಕ್ಷತಂ) ಎಂದರ್ಥ.

**ಸಚಾಭುವಾ**—**ಸಹಭುವಾವಸ್ಮತ್ಕಾರ್ಯೇಷು ಸಹಭವನವಂತೌ ಭವತಂ** । ನಮ್ಮ ಯಾಗಾದಿಕಾರ್ಯಗಳಲ್ಲಿ ನೀವಿಬ್ಬರೂ ಒಟ್ಟಿಗೆ ಸೇರಿಕೊಂಡು ಒಂದುಗೂಡಿದವರಾಗಿರಿ ಎಂದು ಅಶ್ವಿನೀದೇವತೆಗಳನ್ನು ಪ್ರಾರ್ಥಿಸಿದೆ.

### ವ್ಯಾಕರಣಪ್ರಕ್ರಿಯಾ

**ಊರ್ಜಮ್**—ಊರ್ಜ ಬಲಪ್ರಾಣನಯೋಃ ಧಾತು. ಕ್ವಿಪ್ ಪ್ರತ್ಯಯ. ದ್ವಿತೀಯಾಏಕವಚನಾಂತ ರೂಪ.

**ವಹತಮ್**—ವಹ ಪ್ರಾಪಣೇ ಧಾತು. **ಲೋಟ್** ಮಧ್ಯಮಪುರುಷದ್ವಿವಚನಾಂತರೂಪ ತಿಙಂತನಿಘಾತಸ್ವರ ಬರುತ್ತದೆ.

**ಮಧುಮತ್ಯಾ**—ಮಧು ಅಸ್ಯಾ ಅಸ್ತಿ ಇತಿ ಮಧುಮತೀ. ಮತುಪ್ ಬಂದಾಗ ಉಗಿತ್ತಾದುದರಿಂದ **ಉಗಿತಶ್ಚ** (ಪಾ. ಸೂ. ೪-೧-೬) ಎಂಬುದರಿಂದ ಙೀಪ್. ತೃತೀಯಾಏಕವಚನಾಂತರೂಪ.

**ಮಿಮಿಕ್ಷತಮ್** ಮಿಹ ಸೇಚನೇ ಧಾತು. **ಧಾತೋಃಕರ್ಮಣಃ** (ಪಾ. ಸೂ ೩-೧-೭) ಎಂಬುದರಿಂದ ಸನ್. ಸನ್ನಂತದ ಮೇಲೆ **ಲೋಟ್**ಮಧ್ಯಮಪುರುಷದ್ವಿವಚನಾಂತರೂಪ. (ಋ. ಸಂ, ೧-೨೨-೩) ಮಂತ್ರದಲ್ಲಿ ವ್ಯಾಖ್ಯಾತವಾಗಿದೆ ತಿಙಂತನಿಘಾತಸ್ವರ ಬರುತ್ತದೆ.

**ತಾರಿಷ್ಟಮ್**—ತೄ ಪ್ಲವನತರಣಯೋಃ ಧಾತು. ಪ್ರಪೂರ್ವವಾಗಿರುವಾಗ ವರ್ಧನಾರ್ಥ ತೋರುತ್ತದೆ. ಛಾಂದಸವಾಗಿ ಲೋಡರ್ಥದಲ್ಲಿ ಲುಙ್. ಮಧ್ಯಮಪುರುಷದ್ವಿವಚನದಲ್ಲಿ ತಮಾದೇಶ ಚ್ಲಿಗೆ ಸಿಚಾದೇಶ. ಅದಕ್ಕೆ ಇಡಾಗಮ. **ವೃತೋವಾ** (ಪಾ. ಸೂ. ೭-೨-೩೮) ಎಂಬುದರಿಂದ ಇಟಿಗೆ ದೀರ್ಘ ಪ್ರಾಪ್ತವಾದರೆ, **ಸಿಚಿಸಪರಸ್ಮೈಪದೇಷು** (ಪಾ. ಸೂ. ೭-೨-೪೦) ಎಂಬುದರಿಂದ ಪ್ರತಿಷೇಧ ಬರುತ್ತದೆ. **ಬಹುಲಂ ಛಂದಸ್ಯಮಾಙ್ಯೋಗೇऽಪಿ** (ಪಾ. ಸೂ. ೬-೪-೭೫) ಎಂಬುದರಿಂದ ಅಡಾಗಮ ಬರುವುದಿಲ್ಲ. **ಚಾದಿಲೋಪೇ ವಿಭಾಷಾ** (ಪಾ. ಸೂ. ೮-೧-೬೩) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ **ಆದಿಃ ಸಿಚೋऽನ್ಯತರಸ್ಯಾಮ್** (ಪಾ. ಸೂ ೬-೧-೧೮೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಮೃಕ್ಷತಮ್**—ಮೃಶ ಆಮರ್ಶನೇ ಧಾತು. ಹಿಂದಿನಂತೇ ಛಾಂದಸವಾಗಿ ಲುಙ್. **ಶಲ ಇಗುಪಧಾದನಿಟಃ ಕ್ಸಃ** (ಪಾ. ಸೂ. ೩-೧-೪೫) ಎಂಬುದರಿಂದ ಸಿಚಿಗೆ ಕ್ಸಾದೇಶ. ಏಕಾಚಾದುದರಿಂದ ಇಣ್ಣಿಷೇಧ ಬರುತ್ತದೆ. ತಿಙಂತನಿಘಾತಸ್ವರ ಬರುತ್ತದೆ.

**ಸೇಧತಮ್**—ಷಿಧು ಗತ್ಯಾಮ್ ಧಾತು. ಲೋಟ್ ಮಧ್ಯಮಪುರುಷದ್ವಿವಚನಾಂತರೂಪ. ಪಾದಾದಿಯಲ್ಲಿ ರುವುದರಿಂದ ನಿಘಾತಸ್ವರ ಬರುವುದಿಲ್ಲ. ಲಸಾರ್ವಧಾತುಕ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ದ್ವೇಷಃ**—ದ್ವಿಷ ಅಪ್ರೀತೌ ಧಾತು. **ಅನ್ಯೇಭ್ಯೋಽಪಿ ದೃಶ್ಯಂತೇ** (ಪಾ. ಸೂ ೩.೨-೭೫) ಎಂಬುದರಿಂದ ವಿಚ್ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿನ ಲಘೂಪಧೆಗೆ ಗುಣ.

**ಭವತಮ್**— ಭೂ ಸತ್ತಾಯಾಂ ಧಾತು. ಲೋಟ್ ಮಧ್ಯಮಪುರುಷದ್ವಿವಚನಾಂತರೂಪ. ಇದು ವಾಕ್ಯಾಂತರ ಸಂಬಂಧಿಯಾದುದರಿಂದ ಪದದ ಪರದಲ್ಲಿ ಸಮಾನ ವಾಕ್ಯದಲ್ಲಿ ಬಾರದಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಹಿಂದಿನಂತೇ ಧಾತುಸ್ವರ ಉಳಿಯುತ್ತದೆ.

**ಸಚಾಭುವಾ**—(ಋ. ಸಂ. ೧-೩೪-೧೧)ರಲ್ಲಿ ವಿವೃತವಾಗಿದೆ. **ಸುಪಾಂ ಸುಲುಕ್**—(ಪಾ. ಸೂ ೭-೧-೩೯) ಎಂಬುದರಿಂದ ವಿಭಕ್ತಿಗೆ (ಔ) ಆಕಾರಾದೇಶ. ‖ ೪ ‖

———— :o: ————

ಸಂಹಿತಾಪಾಠಃ

ಯುವಂ ಹ ಗರ್ಭಂ ಜಗತೀಷು ಧತ್ಥೋ ಯುವಂ ವಿಶ್ವೇಷು ಭುವನೇ-
ಷ್ವಂತಃ ।
ಯುವಮಗ್ನಿಂ ಚ ವೃಷಣಾವಪಶ್ಚ ವನಸ್ಪತೀಁರಶ್ವಿನಾವೈರಯೇಥಾಂ ‖ ೫ ‖

ಪದಪಾಠಃ

ಯುವಂ । ಹ । ಗರ್ಭಂ । ಜಗತೀಷು । ಧತ್ಥಃ । ಯುವಂ । ವಿಶ್ವೇಷು । ಭುವನೇಷು । ಅಂತರಿತಿ ।
ಯುವಂ । ಅಗ್ನಿಂ । ಚ । ವೃಷಣೌ । ಅಪಃ । ಚ । ವನಸ್ಪತೀನ್ । ಅಶ್ವಿನೌ । ಐರಯೇಥಾಂ ‖ ೫ ‖

ಸಾಯಣಭಾಷ್ಯಂ

ಹೇ ಅಶ್ವಿನೌ ಯುವಂ ಹ ಯುವಾಂ ಖಲು ಜಗತೀಷ್ವಂತರ್ಗಮನಶೀಲಾಸು ಗೋಷು ಮಧ್ಯೇ ಗರ್ಭಂ ಧತ್ಥಃ । ಧಾರಯಥಃ । ನ ಕೇವಲಂ ಗೋಷ್ವೇವ ಅಪಿ ತು ಯುವಂ ಯುವಾಂ ವಿಶ್ವೇಷು ಸರ್ವೇಷು ಭುವನೇಷು ಭೂತಜಾತೇಷ್ವಂತರ್ಮಧ್ಯೇ ಗರ್ಭಂ ಧತ್ಥಃ । ವೃಷ್ಟಿದ್ವಾರಾಮಿಷರೂಪತ್ವೇನ ಗರ್ಭಸ್ಥರೇತಸಃ ಪೋಷಕತ್ವಾತ್ । ಕಿಂಚ ಹೇ ವೃಷಣೌ ಕಾಮಾನಾಂ ವರ್ಷಿತಾರೌ ಯುವಂ ಯುವಾಮಗ್ನಿಂ ಚಾಪಶ್ಚ ವನಸ್ಪತೀಂಶ್ಚೈರಯೇಥಾಂ । ಪ್ರವರ್ತಯೇಥಾಂ । ಆಹುತಿಭೋಗಾಯಾಗ್ನಿಂ ಸ್ವೀಕೃತ್ಯ ಚ ವೃಷ್ಟ್ಯುದಕಾನಿ ಉಪಕೈರೋಷಧಿವನಸ್ಪತ್ಯಾದಿಕಂ ಏತಾಸ್ವಸ್ಮದರ್ಥಂ ಪ್ರೈರಯೇಥಾಂ ‖

### ಪ್ರತಿಪದಾರ್ಥ

ಅಶ್ವಿನಾ—ಎಲೈ ಅಶ್ವಿನೀದೇವತೆಗಳೇ । **ಯುವಂ ಹ**—ನೀವಿಬ್ಬರೇನೇ । **ಜಗತೀಷು**—ಚರಾತ್ಮಕವಾದ ಸಕಲ ಪ್ರಾಣಿಗಳಲ್ಲಿಯೂ । **ಗರ್ಭಂ**—ಗರ್ಭರೂಪವಾದ ಜೀವಾಂಕುರವನ್ನು । **ಧತ್ಥಃ**—ಸ್ಥಾಪಿಸಿ ಧರಿಸಿದ್ದೀರಿ । **ಯುವಂ**— ನೀವಿಬ್ಬರೂ । **ವಿಶ್ವೇಷು**—ಸಮಸ್ತವಾದ । **ಭುವನೇಷು**—ಭೂತಜಾತಗಳಲ್ಲಿಯೂ । **ಅಂತಃ**—ಅಂತಃಸತ್ತ್ವರೂಪದಲ್ಲಿದ್ದೀರಿ । **ವೃಷಣಾ**—ಇಷ್ಟಾರ್ಥಗಳನ್ನು ಸುರಿಸಿಕೊಡುವ । **ಯುವಂ**—ನೀವಿಬ್ಬರೂ । **ಅಗ್ನಿಂ ಚ**—ಅಗ್ನಿಯನ್ನೂ । **ಅಪಶ್ಚ**—ಉದಕಗಳನ್ನೂ । **ವನಸ್ಪತೀನ್**—ವನವೃಕ್ಷಗಳನ್ನೂ । **ಐರಯೇಥಾಂ** (ನಮ್ಮ ಉಪಯೋಗಕ್ಕಾಗಿ) ಒದಗಿಸಿಕೊಡುತ್ತೀರಿ.

### ಭಾವಾರ್ಥ

ಎಲೈ ಅಶ್ವಿನೀದೇವತೆಗಳೇ, ನೀವಿಬ್ಬರೇನೇ, ಸಕಲಭೂತಗಳಲ್ಲಿಯೂ ಅಂತಃಸತ್ತ್ವರೂಪದಲ್ಲಿದ್ದೀರಿ. ಆದ್ದರಿಂದ ಚರಾತ್ಮಕವಾದ ಸಕಲ ಪ್ರಾಣಿಗಳಲ್ಲಿಯೂ ಗರ್ಭರೂಪವಾದ ಜೀವಾಂಕುರವನ್ನು ಸ್ಥಾಪಿಸಿರಿ. ಇಷ್ಟಾರ್ಥಗಳನ್ನು ಸುರಿಸಿಕೊಡುವ ನೀವಿಬ್ಬರೂ ಸಹ ನಮ್ಮ ಉಪಯೋಗಕ್ಕಾಗಿ ಅಗ್ನಿಯನ್ನೂ ಉದಕಗಳನ್ನೂ ವನವೃಕ್ಷಗಳನ್ನೂ ಒದಗಿಸಿಕೊಡುತ್ತೀರಿ.

### English Translation

You, Ashwins, sustain the germ in all moving creatures : you are in the interior of all beings : do you, showerers of benefits, supply (for our own use) fire and water and the trees of the forest.

### ವಿಶೇಷವಿಷಯಗಳು

ಅಶ್ವಿನೀ ದೇವತೆಗಳು ಸಕಲಭೂತಗಳಲ್ಲಿಯೂ ಅಂತಸ್ಸತ್ತ್ವದ ರೂಪದಲ್ಲಿದ್ದು ಗರ್ಭರೂಪವಾದ ಜೀವಾಂಕುರವನ್ನು ನಿಯಮಿಸಿ ಸ್ಥಾಪಿಸಿದ್ದಾರೆಂದು ಅವರ ಸ್ವರೂಪವನ್ನು ತಿಳಿಸಿ ಪ್ರಾಣಿಗಳ ಜೀವನಕ್ಕೆ ಉಪಯುಕ್ತವಾದ ಉದಕಗಳನ್ನೂ ವನವೃಕ್ಷಗಳನ್ನೂ ಒದಗಿಸಿಕೊಡಬೇಕೆಂದು ಪ್ರಾರ್ಥಿಸಿದೆ. ಕೇವಲ ಪೃಥ್ವಿಯ ಮೇಲಿನ ಭೂತಗಳಲ್ಲಿ ವ್ಯಾಪಿಸಿ ಅವುಗಳ ಅಂತಸ್ಸತ್ತ್ವವಾಗಿರುವುದೇ ಅಲ್ಲದೆ ವಿಶ್ವೇಷು ಭುವನೇಷ್ವಂತಃ ಪೃಥಿವ್ಯಂತರಿಕ್ಷಾದಿ ಸಕಲ ಲೋಕಗಳಲ್ಲೂ ಇರತಕ್ಕ ಭೂತಗಳ ಗರ್ಭರೂಪರಾಗಿದ್ದಾರೆಂದೂ ಸ್ತುತಿಸಿದೆ.

> **ಮುಖ್ಯೌ ವಾ ಆವಾಂ ಯಜ್ಞಸ್ಯ ಸ್ವೋ ಯಾವಧ್ವರ್ಯೂ ಇಹ ನಾವಿಮಂ ಪುರಸ್ತಾದ್ಗ್ರಹಂ ಪರ್ಯಾಹರತಾಭಿ ದ್ವಿದೇವತ್ಯಾನಿತಿ ತಾಭ್ಯಾಮೇತಂ ಪುರಸ್ತಾದ್ಗ್ರಹಂ ಪರ್ಯಾಜಹ್ರುರಭಿ ದ್ವಿದೇವತ್ಯಾಂಸ್ತಸ್ಮಾದೇಷ ದಶಮೋ ಗ್ರಹೋ. ಗೃಹ್ಯತೇ ತೃತೀಯ ಏವ ವಷಟ್ಕ್ರಿಯತೇಽಥ ಯದಶ್ವಿನಾವಿತೀಮೇ ಹ ವೈ ದ್ಯಾವಾಪೃಥಿವೀ ಪ್ರತ್ಯಕ್ಷಮಶ್ವಿನಾವಿಮೇ ಹೀದಗ್‍ಂಸರ್ವಮಾಶ್ನುವಾತಾಂ ಪುಷ್ಕರಸ್ರಜಾವಿತ್ಯಗ್ನಿರೇವಾಸ್ಯೈ ಪುಷ್ಕರಮಾದಿತ್ಯೋಽಮುಷ್ಯೈ ॥**
>
> (ಶ. ಬ್ರಾ. ೪-೧-೫-೧೬)

ಸರ್ವಯಜ್ಞಕ್ಕೂ ಮುಖ್ಯರೂ, ನಿಯತವಾದ ಅಧ್ವರ್ಯುಗಳೂ ಆದ ಅಶ್ವಿನೀದೇವತೆಗಳೇ ಪೃಥಿವ್ಯಂತರಿಕ್ಷರೂಪನನ್ನೆರ ಡಕ್ಕವರೆಂದು ಮೇಲಿನ ವಾಕ್ಯಗಳಲ್ಲೂ, ಹೀಗೆಯೇ ಇತರ ಶ್ರುತಿವಾಕ್ಯಗಳಲ್ಲೂ ವರ್ಣಿಸಿರುವುದರಿಂದ ದ್ಯಾವಾಪೃಥಿವಿ ಗಳಲ್ಲಿ ಅಂತರ್ಗತವಾದ ಸಕಲಭೂತಗಳಲ್ಲೂ ಇವರು ವ್ಯಾಪಿಸಿ ಎಲ್ಲದರಲ್ಲಿಯೂ ಏಕತತ್ತ್ವವುಳ್ಳವರಾಗಿರುವರು ಎಂಬ ಅಂಶವನ್ನು ಸ್ತುತಿಸಿದೆ.

**ಅಗ್ನಿಂ ಚ ಅಪಶ್ಚ ಐರಯೇಥಾಃ**— ಈ ಸೂಕ್ತದ ಪ್ರಥಮಋಕ್ಕಿನಲ್ಲಿ **ಅಶ್ವಿನೀದೇವತೆಗಳಿಗೂ ಅಗ್ನಿಗೂ, ಉಷಸ್ಸಿಗೂ** ಇರತಕ್ಕ ಸಂಬಂಧವನ್ನು ತಿಳಿಸಿ ಪ್ರಾತರನುವಾಕಮಂತ್ರಗಳಿಂದ ಈ ಮೂರು ದೇವತೆಗಳಿಗೂ ಒಟ್ಟಿಗೆ ಆಹ್ವಾನವಿರುವುದೆಂದೂ, ಇವರ ಉದಯಾನಂತರವೇ ಲೋಕದಲ್ಲಿ ಪ್ರಕಾಶವೂ, ಸಸ್ಯಾದಿಗಳ ಸಂಪತ್ತೂ ವೃದ್ಧಿ ಯಾಗುವುವೆಂದೂ ತಿಳಿಸಿದೆ. ಈ ಋಕ್ಕಿನಲ್ಲಿಯೂ ಸಹ ಅಗ್ನಿಗೂ ಅಶ್ವಿನೀದೇವತೆಗಳಿಗೂ ಇರತಕ್ಕ ಆ ಸಂಬಂಧ ವನ್ನೇ ತಿಳಿಸಿದೆ.

**ಜುಷ್ಟೋ ಹಿ ದೂತೋ ಅಸಿ ಹವ್ಯವಾಹನೋಽಗ್ನೇ ರಥೀರಧ್ವರಾಣಾಂ ।**
**ಸಜೂರಶ್ವಿಭ್ಯಾಮುಷಸಾ ಸುವೀರ್ಯಮಸ್ಮೇ ಧೇಹಿ ಶ್ರವೋ ಬೃಹತ್ ॥**

**(ಋ. ಸಂ. ೧-೪೪-೨)**

ಎಂಬ ಋಕ್ಕಿನಲ್ಲಿ **ಅಗ್ನಿಯನ್ನುದ್ದೇಶಿಸಿ ಅಶ್ವಿನೀದೇವತೆಗಳೊಂದಿಗೂ ಉಷಸ್ಸಿನೊಂದಿಗೂ** ಸೇರಿಕೊಂಡು ಸಂಪತ್ತ ನ್ನನುಗ್ರಹಿಸಿಕೊಡು ಎಂದು ಪ್ರಾರ್ಥಿಸುವಂತೆ ಪ್ರಕೃತವಾದ ಋಕ್ಕನ್ನು **ಅಶ್ವಿನೀ** ದೇವತೆಗಳನ್ನುದ್ದೇಶಿಸಿ ಅಗ್ನಿಯೊಡನೆ ಸೇರಿ ಸಸ್ಯಾದಿಸಂಪದ್ವೃದ್ಧಿಗೆ ಕಾರಣರಾಗಿರಿ ಎಂದು ಪ್ರಾರ್ಥಿಸಿದೆ.

### ವ್ಯಾಕರಣಪ್ರಕ್ರಿಯಾ

**ಧತ್ತಃ**—ಡುಧಾಞ್ ಧಾರಣಪೋಷಣಯೋಃ ಧಾತು. ಜಹೋತ್ಯಾದಿ. ಪ್ರಥಮಪುರುಷದ್ವಿವಚನದಲ್ಲಿ ಥಸ್ ಪ್ರತ್ಯಯ. ಶ್ಲುವಿಕರಣ. **ಶ್ಲೌ** ಎಂಬುದರಿಂದ ಧಾತುವಿಗೆ ದ್ವಿತ್ವ. **ದಧಸ್ತಥೋಶ್ಚ.** (ಪಾ. ಸೂ. ೮-೨-೩೮) ಎಂಬ ದರಿಂದ ಭಷ್‌ಭಾವ. **ಶ್ನಾಭ್ಯಸ್ತಯೋರಾತಃ** (ಪಾ. ಸೂ. ೬-೪-೧೧೨) ಎಂಬುದರಿಂದ ಬಂದಿರುವ ಆಕಾರಲೋಪಕ್ಕೆ ವಚನ ಸಾಮರ್ಥ್ಯದಿಂದ ಸ್ಥಾನಿವದ್ಭಾವ ಬರುವುದಿಲ್ಲ. ತಿಙಂತನಿಘಾತಸ್ವರ ಬರುತ್ತದೆ.

**ಯುವಮ್—ಪ್ರಥಮಾಯಾಶ್ಚ ದ್ವಿವಚನೇ ಭಾಷಾಯಾಮ್** ಎಂಬಲ್ಲಿ ಲೋಕದಲ್ಲಿ ಮಾತ್ರ ಆತ್ವವಿಧಾನ ಮಾಡಿರುವುದರಿಂದ ಸಂಹಿತಾದಲ್ಲಿ ಆತ್ವ ಬರುವುದಿಲ್ಲ.

**ಅಗ್ನಿಮ್**—ಅಗಿ ಗತೌ. ಧಾತು. **ಅಗೇರ್ನಲೋಪಶ್ಚ** ಎಂಬುದರಿಂದ ನಿಪ್ರತ್ಯಯ. ಸುವಿನ ನಕಾರಕ್ಕೆ ಲೋಪ ಪ್ರತ್ಯಯಸ್ವರದಿಂದ ನಲೋಪವಾಗುತ್ತದೆ.

**ಅಪಃ— ಊಡಿದಂ ಪದಾದಿ**—(ಪಾ ಸೂ.೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ವನಸ್ಪತೀನ್—ಪಾರಸ್ಕರ ಪ್ರಭೃತೀನಿಸಂಜ್ಞಾಯಾಮ್** ಎಂಬುದರಿಂದ ಸಮಾಸದಲ್ಲಿ ಸುಟಾಗಮ. **ಉಭೇವನಸ್ಪತ್ಯಾದಿಷು** (ಪಾ. ಸೂ. ೬-೧-೧೪೦) ಎಂಬುದರಿಂದ ಉಭಯಪದ ಪ್ರಕೃತಿಸ್ವರ ಬರುತ್ತದೆ.

ಐರಯೇಥಾಮ್—ಈರ ಗತೌ ಧಾತು **ಹೇತುಮತಿ ಚ** ಎಂಬುದರಿಂದ ಣಿಚ್. ಣಿಜಂತದಿಂದ ಛಾಂದಸವಾಗಿ ಲಙ್ ಮಧ್ಯಮಪುರುಷ ದ್ವಿವಚನಾಂತರೂಪ. **ಚವಾಯೋಗೇ ಪ್ರಥಮಾ** (ಪಾ. ಸೂ. ೮-೧-೫೯) ಎಂಬುದರಿಂದ ನಿಘಾತಸ್ವರಪ್ರತಿಷೇಧ ಬರುತ್ತದೆ. ಆಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾದ ಪದವಾಗುತ್ತದೆ. ॥ ೫ ॥

—:o:—

ಸಂಹಿತಾಪಾಠಃ

ಯುವಂ ಹ ಸ್ಥೋ ಭಿಷಜಾ ಭೇಷಜೇಭಿರಥೋ ಹ ಸ್ಥೋ ರಥ್ಯಾ೩ ರಾಥ್ಯೇಭಿಃ ।
ಅಥೋ ಹ ಕ್ಷತ್ರಮಧಿ ಧತ್ಥ ಉಗ್ರಾ ಯೋ ವಾಂ ಹವಿಷ್ಮಾನ್ಮನಸಾ ದದಾಶ ॥ ೬ ॥

ಪದಪಾಠಃ

ಯುವಂ । ಹ । ಸ್ಥಃ । ಭಿಷಜಾ । ಭೇಷಜೇಭಿಃ । ಅಥೋ ಇತಿ । ಹ । ಸ್ಥಃ । ರಥ್ಯಾ । ರಥ್ಯೇಭಿರಿತಿ ರಥ್ಯೇಭಿಃ ।
ಅಥೋ ಇತಿ । ಹ । ಕ್ಷತ್ರಂ । ಅಧಿ । ಧತ್ಥಃ । ಉಗ್ರಾ । ಯಃ । ವಾಂ । ಹವಿಷ್ಮಾನ್ । ಮನಸಾ । ದದಾಶ ॥ ೬ ॥

ಸಾಯಣಭಾಷ್ಯಂ

ಹೇ ಅಶ್ವಿನೌ ಯುವಂ ಯುವಾಂ ಹ ಖಲು ಭೇಷಜೇಭಿರ್ಭೇಷಜೈರೌಷಧೈಃ । ಭೇಷಜೌಷಧಭೈಷಜ್ಯಾನ್ಯಗದೋ ಜಾಯುರಗದಂ ತತ್ತ್ರೌಷಧಮಿತಿ ಚಾಭಿಧಾನಾತ್ । ತೈರ್ಭಿಷಜಾ ಭಿಷಜೌ ಸ್ಥಃ । ಹಶಬ್ದೋಽಶ್ವಿನೌ ಹಿ ದೇವಾನಾಂ ಭಿಷಜಾವಿತ್ಯಾದಿಪ್ರಸಿದ್ಧಿದ್ಯೋತನಾರ್ಥಃ । ಅಥೋ ಅಪಿ ಚ ರಥ್ಯೇಭೀ ರಥವೋಢೃಭಿರಶ್ವೈ ರಥ್ಯಾ ರಥವಂತೌ ಸ್ಥಃ । ಆ ವಾಂ ರಥೋ ಅಶ್ವಿನಾ । ಋ. ೧-೧೧೮-೧ । ಇತ್ಯಾದಿಪ್ರಸಿದ್ಧಿದ್ಯೋತನಾರ್ಥೋ ಹಶಬ್ದಃ । ಅನಯೋ ರಥೇನ ವಿಶೇಷಸಂಬಂಧೋ ಯುವೋರ್ಹಿ ಪೂರ್ವಂ ಸವಿತ್ರೋಷಸಾ ರಥವೃತಾಯ ಚಿತ್ರಂ ಘೃತವಂತಮಿಷ್ಯತಿ । ಋ. ೧-೩೪-೧೦ । ಇತ್ಯಾದಿಮಂತ್ರಾಂತರೇಷು ಪ್ರಸಿದ್ಧಃ । ಅಥೋ ಅಪಿ ಚ ಯುವಯೋಃ ಕ್ಷತ್ರಂ ಬಲಮಧಿ ಹ । ಅಧಿಕಂ ಖಲು । ಹಶಬ್ದಃ ಪ್ರಸಿದ್ಧೌ । ಯಸ್ಮಾದೇವಂ ತಸ್ಮಾದ್ಧೇ ಉಗ್ರೋದ್ಗೂರ್ಣಸಾಮರ್ಥ್ಯಾವಶ್ವಿನೌ ವಾಂ ಯುವಾಭ್ಯಾಂ ಯೋ ಹವಿಷ್ಮಾನಾಜ್ಯಪುರೋಡಾಶಾದಿಹವಿರ್ಯುಕ್ತೋ ಯಜಮಾನೋ ಮನಸಾ ಯುಷ್ಮದಾಯುಕ್ತೇನ ಚೇತಸಾ

**ದದಾಶ ದದಾತಿ ಹವಿರಾದಿಕಂ ತಂ ಧತ್ಥಃ। ಧಾರಯಥಃ। ಅತ್ಯಧಿಕಮನುಗೃಹ್ಣೀಥ ಇತ್ಯರ್ಥಃ। ಪ್ರಭೂತಬಲೌ ಯುವಾಂ ರಥಮಾರುಹ್ಯಾಸ್ಮದ್ದೇವಯಜನಮಾಗತ್ಯ ಹವಿಷ್ಪ್ರದಂ ಮಾಂ ಧೃತ್ವಾಸ್ಮದ್ಯಜ್ಞೇಽಸ್ಮಾನ್ನಿಚಿಕಿತ್ಸತಮಿತಿ ತಾತ್ಪರ್ಯಾರ್ಥಃ ॥**

### ಪ್ರತಿಪದಾರ್ಥ

(ಎಲೈ ಅಶ್ವಿನೀ ದೇವತೆಗಳೇ) **ಯುವಂ ಹ**—ನೀವಿಬ್ಬರೂ ಕೂಡ । **ಭೇಷಜೇಭಿಃ**—ಔಷಧಿಗಳ ಮೂಲಿಕೆಗಳೊಡನೆ (ಅವುಗಳ ಸ್ವರೂಪವನ್ನು ತಿಳಿದ) । **ಭಿಷಜಾ ಸ್ಥಃ**—ವೈದ್ಯರಾಗಿದ್ದೀರಿ । **ಅಥೋ**—ಅದೂ ಅಲ್ಲದೇ । **ರಥ್ಯೇಭಿಃ**—ರಥಗಳನ್ನು ಎಳೆಯುವ ಕುದುರೆಗಳೊಡನೆ ಕೂಡಿರುವ । **ರಥ್ಯಾ ಸ್ಥಃ**—ರಥಗಳನ್ನು ಹೊಂದಿದ್ದೀರಿ । **ಅಥೋ**—ಅದೂ ಅಲ್ಲದೆ । **ಕ್ಷತ್ರಂ**—(ನಿಮ್ಮ) ಶಕ್ತಿಯು । **ಅಧಿ ಹ**—ಅತ್ಯಧಿಕವಾಗಿಯೇ ಇದೆ । (ಆದ್ದರಿಂದ) **ಉಗ್ರಾ**—ಪ್ರಬಲವಾದ ಭಯಂಕರವಾದ ಸಾಮರ್ಥ್ಯವುಳ್ಳ ನೀವು । **ವಾಂ**—ನಿಮಗೆ । **ಯಃ**— ಯಾವ । **ಹವಿಷ್ಮಾನ್** — ಪುರೋಡಾಶಾದಿಗಳನ್ನು ಹೊಂದಿರುವ ಯಜಮಾನನು । **ಮನಸಾ** — ಶ್ರದ್ಧಾಪೂರ್ವಕವಾಗಿ । **ದದಾಶ**—(ಹವಿರಾದಿಗಳನ್ನು) ಅರ್ಪಿಸುತ್ತಾನೆಯೋ । **ಧತ್ತಃ**—(ಅವನನ್ನು) ಎತ್ತಿಹಿಡಿಯಿರಿ (ಅಧಿಕವಾಗಿ ಅನುಗ್ರಹಿಸಿರಿ).

### ಭಾವಾರ್ಥ

ಎಲೈ ಅಶ್ವಿನೀದೇವತೆಗಳೇ, ನೀವಿಬ್ಬರೂಕೂಡ ಔಷಧಿಗಳ ಮೂಲಿಕೆಗಳೊಡನೆ ಅವುಗಳ ಸ್ವರೂಪವನ್ನು ತಿಳಿದುಕೊಂಡ ವೈದ್ಯರಾಗಿದ್ದೀರಿ. ಅಲ್ಲದೆ, ರಥಗಳನ್ನು ಎಳೆಯುವ ಕುದುರೆಗಳೊಡನೆ ಕೂಡಿರುವ ರಥಗಳನ್ನು ಹೊಂದಿದ್ದೀರಿ. ಮತ್ತು ನಿಮ್ಮ ಶಕ್ತಿಯು ಅತ್ಯಧಿಕವಾಗಿಯೇ ಇದೆ. ಆದ್ದರಿಂದ ಪ್ರಬಲವಾದ ಸಾಮರ್ಥ್ಯವುಳ್ಳ ನೀವು ನಿಮಗೆ ಹವಿಸ್ಸನ್ನು (ಅರ್ಪಿಸಲು) ಹೊಂದಿರುವ ಯಾವ ಯಜಮಾನನು ಶ್ರದ್ಧಾಪೂರ್ವಕವಾಗಿ ಹವಿರಾದಿಗಳನ್ನು ಅರ್ಪಿಸುತ್ತಾನೆಯೋ ಅವನನ್ನು ಎತ್ತಿಹಿಡಿದು ಉದ್ಧರಿಸಿರಿ.

### English Translation

You two are physician, (conversant) with (all) medicaments : you ride in a chariot (drawn by) well-trained steeds : therefore, mighty (divinities), resolutely uphold (the worshipper), who, with a mind (devoted to you), offers you oblations.

### ವಿಶೇಷವಿಷಯಗಳು

**ಭೆ ಷಜೇಭಿಃ ಭಿಷಜಾ ಸ್ಥಃ**—ಔಷಧಿಗಳ ಸ್ವರೂಪವನ್ನು ತಿಳಿದ ವೈದ್ಯರಾಗಿದ್ದೀರಿ ಎಂದು ಅಶ್ವಿನೀದೇವತೆಗಳ ಶಕ್ತಿಯನ್ನು ತಿಳಿಸಿದೆ. ಅಶ್ವಿನೀದೇವತೆಗಳು ದೇವವೈದ್ಯರಾಗಿರುವುದೂ, ಇಂದ್ರಾದಿ ದೇವತೆಗಳ ವೈಕಲ್ಯವನ್ನು ಸರಿಪಡಿಸಿದುದೂ, ಸುಕನ್ಯಾಪತಿಯ ವಾರ್ಧಕ್ಯವನ್ನು ಹೋಗಲಾಡಿಸಿ ಅವನಿಗೆ ತಾರುಣ್ಯವನ್ನು ಉಂಟುಮಾಡಿದುದೂ ಪ್ರಸಿದ್ಧವಾಗಿದೆ.

ಸ ಏತಮಾಶ್ವಿನಂ ಧೂಮ್ರಮಾಲಭೇತ । ಸಾರಸ್ವತಂ ಮೇಷಮೈಂದ್ರಮೃಷಭಮಶ್ವಿನೌ ವೈ ದೇವಾನಾಂ ಭಿಷಜೌ ತಾಭ್ಯಾಮೇವೈನಂ ಭಿಷಜ್ಯತಿ ಸರಸ್ವತೀ ಭೇಷಜಂ ತಯೈವಾಸ್ಮೈ ಭೇಷಜಂ ಕರೋತೀಂದ್ರ ಇಂದ್ರಿಯಂ ವೀರ್ಯಂ ತೇನೈವಾಸ್ಮಿನ್ನಿಂದ್ರಿಯಂ ವೀರ್ಯಂ ದಧಾತಿ ॥
(ಶ. ಬ್ರಾ. ೧೬-೭-೨-೩)

ಇತ್ಯಾದಿ ವಾಕ್ಯಗಳಲ್ಲಿ ಅಶ್ವಿನೀದೇವತೆಗಳು ದೇವವೈದ್ಯರೆಂದೂ,

ಅಥ ಯದಾಶ್ವಿನೋ ಭವತಿ । ಅಶ್ವಿನೌ ವಾ ಏನಮಭಿಷಜ್ಯತಾಂ ತಥೋ ಏವೈನಮೇಷ ಏತದಶ್ವಿಭ್ಯಾಮೇವ ಭಿಷಜ್ಯತಿ ತಸ್ಮಾದಾಶ್ವಿನೋ ಭವತಿ ॥
(ಶ. ಬ್ರಾ. ೫-೫-೪-೧೫)

ಇತ್ಯಾದಿ ವಾಕ್ಯಗಳಲ್ಲಿ ಅಶ್ವಿನೀ ದೇವತೆಗಳೂ ಇಂದ್ರನ ದೋಷವನ್ನು ನಾಶಮಾಡಿದುದನ್ನೂ ಅವರ ಅನುಗ್ರಹದಿಂದಲೇ ಯಜಮಾನನೂ ಕೂಡ ಅಂತಹ ವ್ಯಾಧಿಗಳನ್ನು ನಾಶಮಾಡಬಹುದೆಂದೂ, ಈ ಶಕ್ತಿಯಿರುವುದರಿಂದಲೇ ಅಶ್ವಿನೀ ದೇವತೆಗಳಿಗೆ ಯಜ್ಞಕಾಲದಲ್ಲಿ ಪ್ರಶಸ್ತ್ಯವಾದ ಪಾತ್ರವಿರುವುದೆಂದೂ ಹೇಳಿದೆ. ತಮ್ಮ ಈ ಶಕ್ತಿಯಿಂದಲೇ ಅವರು ಸುಕನ್ಯೆಯೆಂಬ ಸುಂದರ ಸ್ತ್ರೀಯ ಪತಿಯ ವಾರ್ಧಕ್ಯವನ್ನು ಹೋಗಲಾಡಿಸಿ ಅವನನ್ನು ತರುಣನಾಗುವಂತೆ ಮಾಡಿದ ಕಥೆಯೂ ಸಹ ಈರೀತಿ ಹೇಳಲ್ಪಟ್ಟಿದೆ.

ಅಶ್ವಿನೌ ಹ ವಾ ಇದಂ ಭಿಷಜ್ಯಂತೌ ಚೇರತುಃ । ತೌ ಸುಕನ್ಯಾಮುಪೇಯತುಸ್ತಸ್ಯಾಂ ಮಿಥುನಮೀಷಾತೇ ತನ್ನ ಜಜ್ಞೌ । ತೌ ಹೋಚತುಃ । ಸುಕನ್ಯೇ ಕಮಿಮಂ ಜೀರ್ಣಿಂ ಕೃತ್ಯಾರೂಪಮುಪಶೇಷ ಆವಾಮನುಪ್ರೇಹೀತಿ ಸಾ ಹೋವಾಚ ಯಸ್ಮೈ ಮಾಂ ಪಿತಾದಾನ್ನೈವಾಹಂ ತಂ ಜೀವಂತಗ್‌ಂ ಹಾಸ್ಯಾಮೀತಿ ತದ್ಧಾಯಮೃಷಿರಾಜಜ್ಞೌ । ಸ ಹೋವಾಚ । ಸುಕನ್ಯೇ ಕಿಂ ತ್ವೈತದವೋಚತಾಮಿತಿ ತಸ್ಮಾ ಏತದ್ವ್ಯಾಚಚಕ್ಷೇ ಸ ಹ ವ್ಯಾಖ್ಯಾತ ಉವಾಚ ಯದಿ ತ್ವೈತತ್ಪುನಬ್ರೂರ್ವತಃ ಸಾ ತ್ವಂ ಬ್ರೂತಾನ್ನ ವೈ ಸುಸರ್ವಾವಿವ ಸ್ಥೋ ನ ಸುಸಮೃದ್ಧಾವಿವಾಥ ಮೇ ಪತಿಂ ನಿಂದಥ ಇತಿ ತೌ ಯದಿ ತ್ವಾ ಬ್ರವತಃ ಕೇನಾವಾಮಸರ್ವೌ ಸ್ವಃ ಕೇನಾಸಮೃದ್ಧಾವಿತಿ ಸಾ ತ್ವಂ ಬ್ರೂತಾತ್ಪತಿಂ ನು ಮೇ ಪುನರ್ಯುವಾಣಂ ಕುರುತಮಥ ವಾಂ ವಕ್ಷ್ಯಾಮೀತಿ ತಾಂ ಪುನರುಪೇಯತುಸ್ತಾಗ್‌ಂ ಹೈತದೇವೋಚತುಃ । ಸಾ ಹೋವಾಚ । ನ ವೈ ಸುಸರ್ವಾವಿವ ಸ್ಥೋ ನ ಸುಸಮೃದ್ಧಾವಿವಾಥ ಮೇ ಪತಿಂ ನಿಂದಥ ಇತಿ ತೌ ಹೋಚತುಃ ಕೇನಾವಮಸರ್ವೌ ಸ್ವಃ ಕೇನಾಸಮೃದ್ಧಾವಿತಿ ಸಾ ಹೋವಾಚ ಪತಿಂ ನು ಮೇ ಪುನರ್ಯುವಾಣಂ ಕುರುತಮಥ ವಾಂ ವಕ್ಷ್ಯಾಮೀತಿ । ತೌ ಹೋಚತುಃ । ಏತಗ್‌ಂ ಹ್ರದಮಭ್ಯವಹರ ಸ ಯೇನ ವಯಸಾ ಸ ಯೇನ ವಯಸಾ ಕಮಿಷ್ಯತೇ ತೇನೋದೈಷ್ಯತೀತಿ ತಗ್‌ಂ ಹ್ರದಮಭ್ಯವಜಹಾರ ಸ ಯೇನ ವಯಸಾ ಚಕಮೇ ತೇನೋದೇಯಾಯ ॥
(ಶ. ಬ್ರಾ. ೪-೧ ೫-೮ ರಿಂದ ೧೨)

ಪೃಥ್ವಿಯಮೇಲೆ ವ್ಯಾಧಿಗ್ರಸ್ತರನ್ನು ಗುಣಪಡಿಸುತ್ತಾ ಹೀಗೆಯೇ ಸಂಚರಿಸುತ್ತಿರುವ ಕಾಲದಲ್ಲಿ ಅಶ್ವಿನೀದೇವತೆಗಳು ಸುಕನ್ಯೆಯೆಂಬ ಸುಂದರಸ್ತ್ರೀಯನ್ನು ನೋಡಿ ಮೋಹಿತರಾಗಿ ಅವಳ ಸಾಹಚರ್ಯವನ್ನು ಬಯಸಿದರು ಅವಳು ತನ್ನ

ಪತಿಯು ಜೀವಿಸಿರುವವರೆಗೆ ಪರಪುರುಷನನ್ನು ಕಣ್ಣೆತ್ತಿಯೂ ನೋಡುವುದಿಲ್ಲವೆಂದು ಹೇಳಿಬಿಟ್ಟಳು. ಅಶ್ವಿನೀ ದೇವತೆಗಳು ಹೊರಟುಹೋದಮೇಲೆ ಈ ವಿಷಯವನ್ನೆಲ್ಲಾ ಮರೆಯಿಂದ ಕೇಳಿ ತಿಳಿದುಕೊಂಡ ಅವಳ ಪತಿಯು ಅವಳಿಗೊಂದುಪಾಯವನ್ನು ಹೇಳಿ, "ಪುನಃ ಅವರು ನಿನ್ನನ್ನು ಮೋಹಿಸಿ ನಿನ್ನಲ್ಲಿಗೆ ಬಂದರೆ ನೀವು ಅಸಂಪೂರ್ಣರು, ಅಸಂಸ್ಕೃತರು. ಆದುದರಿಂದ ನಿಮ್ಮನ್ನು ನಾನು ಒಲಿಯುವುದಿಲ್ಲ ಎಂದು ಉತ್ತರಕೊಡಬೇಕೆಂದೂ, ಅವರು ತಾವು ಯಾವ ರೀತಿ ಅಸಂಪೂರ್ಣರು ಮತ್ತು ಅಸಂಸ್ಕೃತರೆಂದು ಕೇಳಿದರೆ ಆಗ ನೀನು ನನ್ನ ವೃದ್ಧಪತಿಯನ್ನು ತರುಣನನ್ನಾಗಿ ಮಾಡಿದರೆ ಆಗ ಅದನ್ನು ಹೇಳುವೆನು ಎಂದು ಉತ್ತರಕೊಡು" ಎಂಬುದಾಗಿ ತಿಳಿಸಿದನು. ಪುನಃ ಅಶ್ವಿನೀ ದೇವತೆಗಳು ಬಂದು ಅವಳನ್ನು ಪ್ರಾರ್ಥಿಸಿದಾಗ ಅವಳು ತನ್ನ ಗಂಡನು ಹೇಳಿದಂತೆಯೇ ನಡೆಸಿದಳು. ಮತ್ತು ಪತಿಯನ್ನು ಪುನಃ ತರುಣನನ್ನಾಗಿ ಮಾಡುವ ಉಪಾಯವನ್ನೂ ಕೇಳಿದಳು. ಅಶ್ವಿನೀ ದೇವತೆಗಳು ಪಕ್ಕದ ಸರಸ್ಸಿನಲ್ಲಿ ಸ್ನಾನಮಾಡಿದರೆ ಅವಳ ಪತಿಯು ಜರೆಯು ಹೋಗುವುದೆಂದು ತಿಳಿಸಿದನಂತರ ಅವಳು ಅವನನ್ನು ಸ್ನಾನಮಾಡಿಸಿದಳು. ಅಶ್ವಿನೀದೇವತೆಗಳ ಅನುಗ್ರಹದಿಂದ ಅವನು ತರುಣನಾದನು ಇತ್ಯಾದಿ ಕಥೆಗಳು. **ಭಿಷಜಾ** ಎಂಬ ವಿಶೇಷಣವನ್ನು ವಿವರಿಸುತ್ತದೆ.

ದೇವವೈದ್ಯರಾಗಿ ಪೃಥ್ವಿಯ ಮೇಲಿರುವ ಮಾನವಾದಿಗಳ ರೋಗಗಳನ್ನು ನಾಶಮಾಡುವುದೇ ಈ ದೇವತೆಗಳ ಒಂದು ನ್ಯೂನತೆಯೆಂದು ಇಂದ್ರಾದಿಗಳು ಇವರನ್ನು ಯಾಗಕ್ಕೇ ಸೇರಿಸಲಿಲ್ಲ.

**ಉಪ ನೌ ಹ್ವಯಧ್ವಮಿತಿ ತೇ ಹ ದೇವಾ ಊಚುರ್ನವಾಮುಪಹ್ವಯಿಷ್ಯಾಮಹೇ ಬಹು ಮನುಷ್ಯೇಷು ಸಗ್ಂಸೃಷ್ಟಮಚಾರಿಷ್ಟಂ ಭಿಷಜ್ಯಂತಾವಿತಿ ॥**

(ಶ. ಬ್ರಾ. ೪-೧-೫-೧೪)

ಮಾನವಾದಿಗಳ ವ್ಯಾಧಿಗಳನ್ನು ನಾಶಪಡಿಸುತ್ತಾ ಅವರೊಡನೆ ಸಂಪರ್ಕವನ್ನಿಟ್ಟುಕೊಂಡಿರುವುದರಿಂದ ನಿಮ್ಮನ್ನು ಯಾಗಕ್ಕೆ ಕರೆಯುವುದಿಲ್ಲವೆಂದಾಗ ಈ ದೇವತೆಗಳು ತಾವೇ ಯಜ್ಞಕ್ಕೆ ಶಿರಸ್ಸೆಂದು ತಿಳಿಸಿ ಯಜ್ಞಭಾಗವನ್ನು ಪಡೆದರು.

**ರಥ್ಯೇಭಿಃ ರಥ್ಯಾ ಸ್ಥಃ**—**ರಥ್ಯೇಭಿಃ** ಎನ್ನುವುದಕ್ಕೆ **ರಥವೋಢೃಭಿರಶ್ವೈಃ**–ರಥವನ್ನು ವಹಿಸತಕ್ಕ ಕುದುರೆಗಳೊಂದಿಗೆ ಎಂದೂ, **ರಥ್ಯಾ** ಎನ್ನುವುದಕ್ಕೆ **ರಥವಂತೌ**–ರಥಿಕರು ಎಂದೂ ಅರ್ಥಮಾಡಿದೆ. ಅಶ್ವಿನೀದೇವತೆಗಳ ರಥಗಳೂ, ಆ ರಥಗಳನ್ನು ವಹಿಸುವ ವಾಹನಗಳೂ ಪ್ರಸಿದ್ಧವಾಗಿವೆ. ಅವುಗಳದೇ ಒಂದು ವೈಶಿಷ್ಟ್ಯವೆಂದು ಅನೇಕ ವರ್ಣನೆಗಳಿಂದ ತಿಳಿಯುತ್ತದೆ. **ಹಿರಣ್ಯಯಾ ವಾಂ ಪವಯಃ** ( ಋ. ಸಂ. ೧-೧೮೦-೧ ); **ಹಿರಣ್ಯಯೇನ ರಥೇನ**( ಋ. ಸಂ. ೪-೪-೪೪); **ರಥಂ ಹಿರಣ್ಯವಂಧುರಂ ಹಿರಣ್ಯಾಭೀಶುಮಶ್ವಿನಾ** (ಋ. ಸಂ ೮-೫-೨೮) ಇತ್ಯಾದ್ಯನೇಕ ಋಕ್ಕುಗಳಲ್ಲಿ ಅಶ್ವಿನೀದೇವತೆಗಳ ರಥವೂ ಅದರ ಅವಯವಗಳೂ ಪೂರ್ಣವಾಗಿ ಹಿರಣ್ಮಯವಾದವೆಂದೂ,

**ತಂ ಯುಂಜಾಥಾಂ ಮನಸೋ ಯೋ ಜವೀಯಾನ್ ತ್ರಿವಂಧುರೋ ವೃಷಣಾ ಯಸ್ತ್ರಿಚಕ್ರಃ ।**
**ಯೇನೋಪಯಾಥಃ ಸುಕೃತೋ ದುರೋಣಂ ತ್ರಿಧಾತುನಾ ಪತಥೋ ವಿರ್ನ ಪರ್ಣೈಃ**

(ಋ. ಸಂ. ೧-೧೮೩-೧)

ಪಕ್ಷಿಗಳ ಪರ್ಣಗಳ ಮೇಲೆ ಕುಳಿತು ಎಷ್ಟು ವೇಗವಾಗಿಯೂ ಪರ್ಯಾಪ್ತಾಂತರಾಗಿಯೂ ಹೋಗುವರೋ ಅದರಂತೆ ತಮ್ಮ ತ್ರಿಸಂಧುರಾತ್ಮಕವಾದ ತಮ್ಮ ರಥದಲ್ಲಿ ಕುಳಿತು ಅಶ್ವಿನೀದೇವತೆಗಳು ಯಜ್ಞಗೃಹಕ್ಕೆ ಹೋಗುವರೆಂದೂ ಅನೇಕ ಕಡೆಗಳಲ್ಲಿ ಅವರ ರಥದ ವೈಶಿಷ್ಟ್ಯವನ್ನು ತಿಳಿಸಿದೆ.

ರಘುವರ್ತನಿಃ (೮-೯-೮) ಹಗುರವಾಗಿ ಓಡಬಲ್ಲುದು ; **ಮನಸೋ ಜವೀಯಾನ್ ರಥಃ** (ಋ.ಸಂ. ೧-೧೧೭-೨ ; ೫-೭೭-೩) ಮನೋವೇಗಕ್ಕಿಂತಲೂ ಹೆಚ್ಚು ವೇಗವುಳ್ಳದ್ದು ; **ನಿಮಿಷಶ್ಚಿಜ್ಜವೀಯಸಾ ರಥೇನ** (ಋ. ಸಂ. ೮-೭೩-೨)ಕಣ್ಣಿನ ರೆಪ್ಪೆಯು ಹೊಡೆಯುವುದಕ್ಕಿಂತಲೂ ವೇಗವುಳ್ಳದ್ದು ಇತ್ಯಾದಿ ವರ್ಣನೆಗಳು ರಥದ ವೇಗಗಮನವನ್ನು ವರ್ಣಿಸುತ್ತವೆ.

ರಥ್ಯೇಭಿಃ—ಎಂಬ ಪದಕ್ಕೆ ರಥದ ವಾಹಕಗಳೆಂದು ಅರ್ಥಮಾಡಬಹುದೇ ಹೊರತು ಅವು ಯಾವುವೆಂದು ನಿಸ್ಪೃಷ್ಟವಾಗಿ ಹೇಳುವುದಕ್ಕಾಗುವುದಿಲ್ಲ. ಅಶ್ವಗಳು, ಹೇಸರಗತ್ತೆ ಇತ್ಯಾದಿ ವಿಧವಿಧವಾದ ವಾಹಕಗಳಿರುವುದಾಗಿ ವರ್ಣಿಸಿದೆ. ಉದಾಹರಣೆಗೆ

**ಯುಂಜಾಥಾಂ ರಾಸಭಂ ರಥೇ ವೀಡ್ವಂಗೇ ವೃಷಣ್ವಸೂ । ಮಧ್ವಃ ಸೋಮಸ್ಯ ಪೀತಯೇ ।**

(ಋ ಸಂ. ೮-೮೫-೭)

ಇತ್ಯಾದಿಗಳಲ್ಲಿ **ರಾಸಭವೆಂದೂ,**

**ಹಂಸಾಸೋ ಯೇ ವಾಂ ಮಧುಮಂತೋ ಅಸ್ರಿಧೋ ಹಿರಣ್ಯಪರ್ಣಾ ಉಹುವ ಉಷರ್ಬುಧಃ ।**
**ಉದಪ್ರುತೋ ಮಂದಿನೋ ಮಂದಿನಿಸ್ಪೃಶೋ ಮಧ್ವೋ ನ ಮಕ್ಷಃ ಸವನಾನಿ ಗಚ್ಛಥಃ ॥**

(ಋ ಸಂ. ೪-೪೫-೪)

ಇತ್ಯಾದಿಗಳಲ್ಲಿ **ಹಂಸವೆಂದೂ,**

**ಆ ನಃ ಸ್ತೋಮಮುಪ ದ್ರವತ್ತೂಯಂ ಶ್ಯೇನೇಭಿರಾಶುಭಿಃ । ಯಾತಮಶ್ವೇಭಿರಶ್ವಿನಾ ॥**

(ಋ. ಸಂ. ೮-೫-೭)

ಇತ್ಯಾದಿಋಕ್ಕುಗಳಲ್ಲಿ ಪ್ರಶಸ್ತವಾದ ಗಮನವುಳ್ಳ ಅಶ್ವಗಳೆಂದೂ ಹೀಗೆಯೇ ನಾನಾವಿಧವಾಗಿ ಅಶ್ವಿನೀದೇವತೆಗಳ ವಾಹನಗಳನ್ನು ವರ್ಣಿಸಿದೆ.

**ಕ್ಷತ್ರಂ—ಕ್ಷತ್ರ**ಶಕ್ತಿಯ ಸ್ವರೂಪವನ್ನೂ ಈ ಶಕ್ತಿಯ ಸಂಪಾದನೆಗಾಗಿ ಅಶ್ವಿನೀದೇವತೆಗಳನ್ನು ಪ್ರಾರ್ಥಿಸುವುದನ್ನೂ ಸಹ ಇದೇ ಸೂಕ್ತದ ೨ನೇ ಋಕ್ಕಿನ ವಿಶೇಷ ವಿಷಯಗಳಲ್ಲಿ ತಿಳಿಸಿದೆ.

**ಮನಸಾ—ಮನೋ ಮನೋತೇಃ** । (ನಿ. ೪-೪) **ಚಿಂತಿಸು, ಧ್ಯಾನಮಾಡು** ಎಂಬರ್ಥವನ್ನು ಕೊಡುವ **ಮನ್** ಧಾತುವಿನಿಂದ ನಿಷ್ಪನ್ನವಾಗಿ ಧ್ಯಾನಪೂರ್ವಕವಾಗಿ, ಶ್ರದ್ಧಾಪೂರ್ವಕವಾಗಿ ಎಂದು ತಾತ್ಪರ್ಯವನ್ನು ಕೊಡುತ್ತದೆ. ಸಾಯಣರು **ಮನಸಾ ಯುಷ್ಮದಾಯತ್ತೇನ ಚೇತಸಾ** ನಿಮ್ಮಲ್ಲೇ ಕೇಂದ್ರೀಕೃತವಾಗಿ ಏಕಾಗ್ರಚಿತ್ತತೆಯಿಂದ ಎಂದರೆ ತದೇಕಧ್ಯಾನದಿಂದ ಎಂದು ವಿವರಿಸಿದ್ದಾರೆ.

**ಆ ವಿಶ್ವತಃ ಪ್ರತ್ಯಂಚಂ ಜಿಘರ್ಮ್ಯರಕ್ಷಸಾ ಮನಸಾ ತಜ್ಜುಷೇತ ।**
**ಮರ್ಯಶ್ರೀಃ ಸ್ಪೃಹಯದ್ವರ್ಣೋ ಅಗ್ನಿರ್ನಾಭಿಮೃಶೇ ತನ್ವಾ ಜರ್ಭುರಾಣಃ ॥**

(ಋ. ಸಂ. ೨-೧೦-೫)

ಇತ್ಯಾದಿಋಕ್ಕುಗಳಲ್ಲಿ **ಮನಸಾ** ಎಂದರೆ **ಸ್ತೋತ್ರೇಣ** ಎಂದೂ ಸಹ ಅರ್ಥಮಾಡಿದ್ದಾರೆ. ಅಲ್ಲೂ ಸಹ ಧ್ಯಾನಾತ್ಮಕವಾದುದೂ, ಭಕ್ತಿಪೂರ್ವಕವಾದುದೂ ಆದ ಸ್ತೋತ್ರವೆಂದರ್ಥವಾಗುತ್ತದೆ.

॥ ವ್ಯಾಕರಣಪ್ರಕ್ರಿಯಾ ॥

**ಸ್ಥಃ**—ಅಸ ಭುವಿ ಧಾತು. ಲಟ್ ಮಧ್ಯಮಪುರುಷದ್ವಿವಚನದಲ್ಲಿ ಥಸ್ ಪ್ರತ್ಯಯ. **ಶ್ನಸೋರಲ್ಲೋಪಃ** (ಪಾ. ಸೂ. ೬-೪-೧೧೧) ಎಂಬುದರಿಂದ ಧಾತುವಿನ ಅಕಾರಕ್ಕೆ ಲೋಪ. ನಿಘಾತಸ್ವರ ಬರುತ್ತದೆ.

**ಭಿಷಜಾ**—ಞಿಭೀ ಭಯೇ ಧಾತು. **ಭಿಯಃಷುಕ್ಹ್ರಸ್ವಶ್ಚ** (ಉ. ಸೂ. ೧-೧೩೪) ಎಂಬುದರಿಂದ ಅಜಿ ಪ್ರತ್ಯಯ ಧಾತುವಿಗೆ ಹ್ರಸ್ವ. ಷುಕಾಗಮ. ಭಿಷಜ್ ಶಬ್ದವಾಗುತ್ತದೆ. ಇದಕ್ಕೆ ದ್ವಿವಚನ ಪರವಾದಾಗ **ಸುಪಾಂ ಸುಲುಕ್** (ಪಾ. ಸೂ. ೭-೧-೩೯) ಎಂಬುದರಿಂದ ಅದಕ್ಕೆ ಆಕಾರಾದೇಶ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

**ಭೇಷಜೇಭಿಃ**—**ಬಹುಲಂ ಛಂದಸಿ** ಎಂಬುದರಿಂದ ಭಿಸಿಗೆ ಐಸ್‌ಭಾವ ವಿಕಲ್ಪವಾದುದರಿಂದ ಇಲ್ಲಿ ಬರುವುದಿಲ್ಲ. ಏತ್ವ.

**ರಥೇಭಿಃ**—ರಥಂ ವಹತಿ ರಥ್ಯಃ **ತದ್ವಹತಿರಥಯುಗಪ್ರಾಸಂಗಮ್** (ಪಾ. ಸೂ. ೪-೪-೭೬) ಎಂಬುದರಿಂದ ಯತ್ ಪ್ರತ್ಯಯ. **ಯಸ್ಯೇತಿ ಚ** ಎಂಬುದರಿಂದ ಅಕಾರಲೋಪ. **ಯತೋಽನಾವಃ** (ಪಾ. ಸೂ. ೬-೧-೨೧೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಹಿಂದಿನಂತೆ ಭಿಸಿಗೆ ಐಸ್ ಭಾವ ಬಾರದಿರುವುದರಿಂದ ಏತ್ವ.

**ಧತ್ಥಃ**—ಡುಧಾಞ್ ಧಾರಣಪೋಷಣಯೋಃ ಧಾತು ಲಟ್‌ಮಧ್ಯಮಪುರುಷದ್ವಿವಚನಾಂತರೂಪ. **ತಿಙಂತ** ನಿಘಾತಸ್ವರ ಬರುತ್ತದೆ.

**ಉಗ್ರಾ**—ಉಚ ಸಮವಾಯೇ ಧಾತು. **ಋಜ್ರೇಂದ್ರಾಗ್ರ**-(ಉ. ಸೂ. ೨-೧೮೬) ಎಂಬುದರಿಂದ ರನ್ನಂತವಾಗಿ ನಿಪಾತಿತವಾಗಿದೆ. ಸಂಬೋಧನಾದ್ವಿವಚನದಲ್ಲಿ **ಆಮಂತ್ರಿತಸ್ಯ ಚ** (ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ. **ಸುಪಾಂ ಸುಲುಕ್** ಸೂತ್ರದಿಂದ ವಿಭಕ್ತಿಗೆ ಆಕಾರಾದೇಶ.

**ದದಾಶ**—ದಾಶೃ ದಾನೇ ಧಾತು. **ಛಂದಸಿ ಲುಙ್‌ಲಙ್‌ಲಿಟಃ** ಎಂಬುದರಿಂದ ವರ್ತಮಾನಾರ್ಥದಲ್ಲಿ ಲಿಟ್ ಪ್ರಥಮಪುರುಷಏಕವಚನದಲ್ಲಿ ದದಾಶ ಎಂದು ರೂಪವಾಗುತ್ತದೆ. **ಯದ್ವೃತ್ತಾನ್ನಿತ್ಯಮ್** (ಪಾ. ಸೂ. ೮-೧-೬೬) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ. ಪ್ರತ್ಯಯ ಲಿತ್ತಾದುದರಿಂದ **ಲಿತಿ** (ಪಾ. ಸೂ ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ. ॥ ೬ ॥

ಇಲ್ಲಿಗೆ ೧೫೭ನೇ ಸೂಕ್ತವು ಮುಗಿದುದು..

೨ನೇ ಅಷ್ಟಕ ೨ನೇ ಅಧ್ಯಾಯ ಸಮಾಪ್ತವು.

——— :೦: ———

ವೇದಾರ್ಥಸ್ಯ ಪ್ರಕಾಶೇನ ತಮೋ ಹಾರ್ದಂ ನಿವಾರಯನ್ ।
ಪುಮರ್ಥಾಂಶ್ಚತುರೋ ದೇಯಾದ್ವಿದ್ಯಾತೀರ್ಥಮಹೇಶ್ವರಃ ॥

ಇತಿ ಶ್ರೀಮದ್ರಾಜಾಧಿರಾಜಪರಮೇಶ್ವರವೈದಿಕಮಾರ್ಗಪ್ರವರ್ತಕಶ್ರೀವೀರಬುಕ್ಕಭೂಪಾಲಸಾಮ್ರಾಜ್ಯಧುರಂಧರೇಣ ಸಾಯಣಾಚಾರ್ಯೇಣ ವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ ಋಕ್ಸಂಹಿತಾಭಾಷ್ಯೇ ದ್ವಿತೀಯಾಷ್ಟಕೇ ದ್ವಿತೀಯೋಽಧ್ಯಾಯಃ

॥ ಸಮಾಪ್ತಃ ॥

ಶ್ರೀಃ

॥ ಓಂ ತತ್ಸತ್ ॥

ಇಲ್ಲಿಗೆ ಶ್ರೀಸಾಯಣಭಾಷ್ಯಸಹಿತವೂ ಕರ್ನಾಟಕಭಾಷಾನುವಾದಯುತವೂ ಆದ
ಋಗ್ವೇದಸಂಹಿತೆಯ ದ್ವಿತೀಯಾಷ್ಟಕದಲ್ಲಿ
ಎರಡನೆಯ ಅಧ್ಯಾಯವು ಸಮಾಪ್ತವಾದುದು.

——:o:——

ಯದಕ್ಷರಪದಭ್ರಷ್ಟಂ ಮಾತ್ರಾಹೀನಂ ತು ಯದ್ಭವೇತ್ ।
ತತ್ಸರ್ವಂ ಕ್ಷಮ್ಯತಾಂ ದೇವ ವಾಗೀಶ್ವರ ನಮೋಽಸ್ತು ತೇ ॥

॥ ಶುಭಂ ಭೂಯಾತ್ ॥

॥ ಮಂಗಳಂ ॥

P. S.